ನೀಲಕಂಠಾಚಾರ್ಯ ವಿರಚಿತ

# ಆರಾಧ್ಯಚಾರಿತ್ರ


ಸಂಪಾದಕ

ಎನ್. ಬಸವಾರಾಧ್ಯ





ಕನ್ನಡ ಅಧ್ಯಯನ ಸಂಸ್ಥೆ

ಮೈಸೂರು ವಿಶ್ವವಿದ್ಯಾನಿಲಯ

1980

ಕನ್ನಡ ಅಧ್ಯಯನ ಸಂಸ್ಥೆಯ ಪ್ರಕಟಣೆ–೩೯೫

ಪ್ರಾಚ್ಯಕಾವ್ಯಮಾಲೆ–೭೫

ಪ್ರಧಾನ ಸಂಪಾದಕ

ಡಾ. ಹಾ. ಮಾ. ನಾಯಕ

ವಿಭಾಗ ಸಂಪಾದಕ

ಎಸ್. ಬಸವಾರಾಧ್ಯ

ನೀಲಕಂಠಾಚಾರ್ಯ ವಿರಚಿತ

# ಆರಾಧ್ಯಚಾರಿತ್ರ

ನೀಲಕಂಠಾಚಾರ್ಯ ವಿರಚಿತ

# ಆರಾಧ್ಯಚಾರಿತ್ರ

ಸಂಪಾದಕ

ಎಸ್. ಬಸವಾರಾಧ್ಯ



ಕನ್ನಡ ಅಧ್ಯಯನ ಸಂಸ್ಥೆ

ಮೈಸೂರು ವಿಶ್ವವಿದ್ಯಾನಿಲಯ

1980

# ಮುನ್ನುಡಿ

ಕನ್ನಡ ಅಧ್ಯಯನಕ್ಕೆ ಸಂಬಂಧಪಟ್ಟ ಚಟುವಟಿಕೆಗಳೆಲ್ಲವನ್ನೂ ಕೇಂದ್ರೀಕರಿಸುವ ದೃಷ್ಟಿಯಿಂದ ೧೯೬೬ರ ಕೊನೆಯಲ್ಲಿ ಪ್ರಾಚ್ಯಸಂಶೋಧನಾಲಯದ ಕನ್ನಡ ವಿಭಾಗವನ್ನು ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ವಿಲೀನಗೊಳಿಸಲಾಯಿತು. ಅಂದಿನಿಂದ ಈ ವಿಭಾಗವನ್ನು ಅಧ್ಯಯನ ಸಂಸ್ಥೆಯ 'ಸಂಪಾದನ ವಿಭಾಗ'ವೆಂದು ಹೆಸರಿಸಲಾಯಿತು. ಕ್ರಿ. ಶ. ೧೩೪೭ರಲ್ಲಿ ಪ್ರತಿಮಾಡಲಾಗಿರುವ ಹಾಗೂ ಅತ್ಯಂತ ಪ್ರಾಚೀನ ಉಪಲಬ್ಧ ಹಸ್ತಪ್ರತಿಯಾಗಿರುವ ರನ್ನನ 'ಗದಾಯುದ್ಧ'ದ ಹಸ್ತಪ್ರತಿಯಿಂದ ಹಿಡಿದು ೧೮೫೦ರಲ್ಲಿ ಲಿಖಿತವಾಗಿರುವ 'ಪ್ರಭಾವತಿ ಪರಿಣಯ'ದ ಹಸ್ತಪ್ರತಿಯವರೆಗೆ ಇಂದು ೫೦೦೦ಕ್ಕೂ ಹೆಚ್ಚು ಹಸ್ತಪ್ರತಿಗಳನ್ನು ಹೊಂದಿರುವ 'ಸಂಪಾದನ ವಿಭಾಗ' ಅಧ್ಯಯನ ಸಂಸ್ಥೆಯ ಒಂದು ಪ್ರಧಾನ ಅಂಗವಾಗಿದೆ. ಕನ್ನಡ ಭಾಷಾ ಸಾಹಿತ್ಯಗಳಿಗೆ ಸಂಬಂಧಿಸಿದ ಅಧ್ಯಯನವನ್ನು ಕೈಗೊಳ್ಳುವವರಿಗೆ ಸಂಶೋಧಕರಿಗೆ ಸ್ನಾತಕ ಮತ್ತು ಸ್ನಾತಕೋತ್ತರ ಕನ್ನಡ ವಿದ್ಯಾರ್ಥಿಗಳಿಗೆ ಇದು ಆಕರಗ್ರಂಥಗಳ ತವರಾಗಿದೆ, ಪ್ರೇರಣೆಯ ಸ್ರೋತವಾಗಿದೆ.

ಮುದ್ರಣಸೌಲಭ್ಯ ಈಗ್ಗೆ ಕೆಲವು ಶತಮಾನಗಳಿಂದೀಚೆಗೆ ಮಾನವ ಜನಾಂಗಕ್ಕೆ ದೊರೆತಿರುವ ವರ. ಈ ಸೌಲಭ್ಯವಿಲ್ಲದಿದ್ದ ಕಾಲದಲ್ಲಿ ಓಲೆಗರಿ ಅಥವಾ ತಾಡಪತ್ರದ ಮೇಲೆ ಕಂಠದಿಂದ ಕೊರೆದು, ಅನನ್ಯಶ್ರದ್ಧೆಯಿಂದ ಆ ಸಾಹಿತ್ಯವನ್ನು ಅಭ್ಯಸಿಸಿ, ಅದನ್ನು ಕಾಯ್ದುಕೊಂಡು ಬಂದ ಹಿರಿಯರಿಂದ ಅಂದಿನ ಅಪೂರ್ವಸಾಹಿತ್ಯ ನಮ್ಮ ಸಂಪತ್ತಾಗಿ ಉಳಿದಿದೆ. ತಮಗೆ ಪ್ರಿಯವೆನಿಸಿದ ಸಾಹಿತ್ಯಕೃತಿಗಳನ್ನು ಪ್ರತಿಮಾಡಿಸಿ ಇಟ್ಟುಕೊಳ್ಳುತ್ತಿದ್ದುದು ಆ ಕಾಲದ ಒಂದು ಬಗೆಯ ಹವ್ಯಾಸವೇ ಆಗಿತ್ತು. ಈ ಕಾರಣದಿಂದಾಗಿಯೇ ಓಲೆಗರಿಯ ಒಂದು ಸಂಪುಟದಲ್ಲಿಯೇ ಅನೇಕ ಗ್ರಂಥಗಳನ್ನು, ಗ್ರಂಥಭಾಗಗಳನ್ನು ಪ್ರತಿಲಿಪೀಕರಿಸಿರುವುದನ್ನು ಕಾಣುತ್ತೇವೆ. ಹಸ್ತಪ್ರತಿಗಳ ಅನೇಕ ಪ್ರತಿಗಳನ್ನು ಸಿದ್ಧಪಡಿಸಿ ಹಂಚುವುದನ್ನು ಪುಣ್ಯಕಾರ್ಯವೆಂದು ಬಗೆದು, ಆ ರೀತಿ ಮಾಡುತ್ತಿದ್ದುದಕ್ಕೂ ಉದಾಹರಣೆಗಳಿವೆ. ಪ್ರತಿಲಿಪೀಕರಣ ಹಲವರಿಗೆ ಜೀವನೋಪಾಯದ ಸಾಧನವಾಗಿಯೂ ಇತ್ತು. ಹಸ್ತಪ್ರತಿಗಳನ್ನು ಸುಂದರ, ಸಂದರ್ಭೋಚಿತ ಚಿತ್ರಗಳಿಂದ ಅಲಂಕರಿಸುವ ವಾಡಿಕೆಯೂ ಇತ್ತು. ಇವು ನಮ್ಮ ಜನಗಳ ಸಾಹಿತ್ಯ-ಶಾಸ್ತ್ರ-ಕಲಾಭಿರುಚಿಯ ಪ್ರತೀಕವಾಗಿವೆ.

ಸಂಸ್ಕೃತಿ, ಇತಿಹಾಸ, ಭಾಷಾಚರಿತ್ರೆ-ಇವುಗಳ ಸಮಗ್ರ ಅರಿವಿಗೆ ಶಾಸ್ತ್ರೀಯವಾಗಿ ಸಂಪಾದಿಸಿದ ಸಾಹಿತ್ಯ ಅತ್ಯಾವಶ್ಯಕ. ಅಷ್ಟೇ ಅಲ್ಲ, ಕೋಶ ಅಥವಾ ನಿಘಂಟುಗಳ ರಚನೆಗೆ, ಅವುಗಳ ಮೂಲಘಟಕಗಳಾದ ಶಬ್ದಗಳ ಅರ್ಥನಿರ್ಧಾರಕ್ಕೆ ಶಾಸ್ತ್ರೀಯವಾಗಿ

ಸಂಪಾದಿಸಿದ ಸಾಹಿತ್ಯಕೃತಿಗಳು ಅನಿವಾರ್ಯವಾಗುತ್ತವೆ. ಸಾಂಸ್ಕೃತಿಕ ಮತ್ತು ಐತಿಹಾಸಿಕ ಪುನರ‍್ರಚನೆಗೆ ಅಗತ್ಯವಾಗಿ ಬೇಕಾಗಿರುವ ಅನೇಕ ಗ್ರಂಥಗಳು ಇಂದಿಗೂ ಅನುಪಲಬ್ಧವಾಗಿವೆ. ಶಾಸನಗಳಲ್ಲಿ ಅನ್ಯಕವಿಗಳ ಕೃತಿಗಳಲ್ಲಿ ಉಕ್ತವಾಗಿರುವುದರಿಂದ ಮಾತ್ರ ಹಲವು ಕವಿಗಳ ಮತ್ತು ಗ್ರಂಥಗಳ ಹೆಸರುಗಳು ತಿಳಿದುಬರುತ್ತವೆ. 'ಕಾವ್ಯ ಪ್ರಯೋಗ ಪರಿಣತಮತಿ'ಗಳಾಗಿದ್ದ ಕನ್ನಡ ಜನತೆಯ ಬಳಿ ಒಂದು ಕಾಲದಲ್ಲಿ ಇವೆಲ್ಲ ಲಭ್ಯವಾಗಿದ್ದಿರಬೇಕು. ನಾಡಿನ ಹಲವೆಡೆಗಳಲ್ಲಿ ಓಲೆಗರಿಯ ಸಾಹಿತ್ಯ ಅನೇಕ ಶತ ಮಾನಗಳವರೆಗೆ ತನ್ನ ವೈಭವವನ್ನು ಮೆರೆದಿತ್ತು. ಕಾವ್ಯಪಾರಾಯಣ ಸಾಂಸ್ಕೃತಿಕ ಜೀವನದ ಅಂಗವಾಗಿ ಪರಿಣಮಿಸಿತ್ತು. ಕಾಲಕ್ರಮದಲ್ಲಿ ದೇಶ ಕಾಲ ಪರಿಸರಗಳ ಪ್ರಭಾವ ದಿಂದ, ಜನತೆಯ ಅಜ್ಞಾನ, ಅಶ್ರದ್ಧೆ ಮತ್ತು ಔದಾಸೀನ್ಯಗಳ ಫಲವಾಗಿ ಅವು ಮೂಲೆ ಗುಂಪಾಗುತ್ತ ಒಂದು ಕೀಟಗಳಿಗೆ ಆಹಾರವಾಗತೊಡಗಿದವು. ಅವುಗಳನ್ನು ಸಂರಕ್ಷಿಸ ಲಾರದೆ ನದಿಯ ಪಾಲೋ, ಬೆಂಕಿಯ ಪಾಲೋ ಮಾಡುತ್ತಿದ್ದ ಉದಾಹರಣೆಗಳೂ ಅಸಂಖ್ಯವಾಗಿವೆ. ಮತ್ತೆ ಕೆಲವೆಡೆಗಳಲ್ಲಿ ನವರಾತ್ರಿಯಂದು ಬೆಳಕುಕಂಡು ಪೂಜಾರ್ಹ ವಾಗಿ, ಹಾಲುಂಡು ಮತ್ತೆ ಕತ್ತಲ ಕೋಣೆಯ ಮೂಲೆ ಸೇರಬೇಕಾದ ದುಃಸ್ಥಿತಿ ಒದಗಿ ಹಲವಾರು ಅಮೂಲ್ಯ ಪ್ರತಿಗಳು ತ್ರುಟಿತವಾಗಿ ಹೋಗಿವೆ. ಇಂಥ ಮೌಢ್ಯವನ್ನು ದೂರ ಮಾಡಿ, ಹಸ್ತಪ್ರತಿಗಳನ್ನು ಹೊರಗೆಳೆದು, ಅವುಗಳನ್ನು ಕೊಂಡು ಇಲ್ಲವೆ ಎರವಲಾಗಿ ಪಡೆದು ಪರಿಷ್ಕರಿಸಿ, ಸಂಪಾದಿಸುವ ಹೊಣೆಯನ್ನು ಹೊತ್ತಿದೆ ಈ ಸಂಸ್ಥೆಯ ಸಂಪಾದನ ವಿಭಾಗ.

ಅನುಪಲಬ್ಧವಾಗಿರುವ ಸಾಹಿತ್ಯರಾಶಿಯನ್ನು ಹೊರತರಲು, ಉಪಲಬ್ಧ ಸಾಹಿತ್ಯಕ್ಕೆ ಪರಿಷ್ಕಾರನೀಡಲು ಹಸ್ತಪ್ರತಿಗಳ ಸಂಗ್ರಹಕಾರ್ಯ ಸತತವಾಗಿ ನಡೆಯಬೇಕಾಗಿದೆ. ಸಾಹಿತ್ಯಿಕ ಚಟುವಟಿಕೆಯ ಕೇಂದ್ರಗಳಾಗಿದ್ದ ಎಡೆಗಳಲ್ಲಿ, ಕವಿಗಳ ಕೀರ್ತಿ ಹರಡಿದ್ದ ಪ್ರದೇಶಗಳಲ್ಲಿ, ಜ್ಞಾನಗಂಗೆಯನ್ನು ಮನೆಮನೆಯ ಬಾಗಿಲಿಗೆ ಕೊಂಡೊಯ್ದ ಶಿವಶರಣರು ಮತ್ತು ದಾಸರುಗಳು ಸಂಚರಿಸುತ್ತಿದ್ದ ಸ್ಥಳಗಳಲ್ಲಿ ಅವರ ನೆನಪಿಗಾಗಿ ಮಠಗಳು, ಸ್ಮಾರಕ ಗಳು ನಿರ್ಮಿತವಾಗಿರುವ ಕಡೆಗಳಲ್ಲಿ, ಅನುಯಾಯಿಗಳ ಮತ್ತು ಭಕ್ತರ ಮನೆಗಳಲ್ಲಿ, ಸಾಹಿತ್ಯೋಪಾಸಕರ ಬಳಿಯಲ್ಲಿ ಹೇಗೋ ಎಂತೋ ಸಂಗ್ರಹಿತವಾಗಿರುವ ಹಸ್ತಪ್ರತಿಗಳನ್ನು ಸಂಗ್ರಹಿಸಿ ರಕ್ಷಿಸಬೇಕಾಗಿದೆ ಈ ಸಂಸ್ಥೆಯ ಹಸ್ತಪ್ರತಿಯ ಭಂಡಾರವನ್ನು ಈ ದೃಷ್ಟಿ ಯಿಂದ ಬೆಳಸಿಕೊಂಡು ಬರುವತ್ತ ಆದ್ಯಗಮನ ಕೊಡಲಾಗಿದೆ.

ಸಂಗ್ರಹಿಸಿದ ಪ್ರತಿಗಳನ್ನು ಎಚ್ಚರಿಕೆಯಿಂದ ಕಾಪಾಡಿಕೊಂಡು ಬರುವುದೂ ಅತ್ಯಂತ ಮುಖ್ಯವಾದ ಹೊಣೆ. ಕೀಟಗಳ ಹಾವಳಿಗೆ ಸಿಕ್ಕಿ ಪ್ರತಿಗಳು ಶಿಥಿಲವಾಗದಂತೆ ನೋಡಿ ಕೊಳ್ಳುವ ದೃಷ್ಟಿಯಿಂದ ಸಾಧ್ಯವಾದಷ್ಟು ಸಲ ಅವುಗಳನ್ನು ಸ್ವಚ್ಛಗೊಳಿಸುವುದು, ಕೀಟ ನಿರೋಧಕತೈಲ ಲೇಪನಮಾಡುವುದು, ವಾಯುನಿಯಂತ್ರಿತ ಕೊಠಡಿಯಲ್ಲಿಟ್ಟು ಪ್ರಧೂ ಮನ ಉಪಚಾರ ನೀಡುವುದು (Fumigation treatment), ತೀರ ತ್ರುಟಿತ ವಾದ ಹಸ್ತಪ್ರತಿಗಳನ್ನು ಮೈಕ್ರೊಫಿಲಂಗಳಲ್ಲಿ ಶಾಶ್ವತಗೊಳಿಸುವುದು ಅಗತ್ಯವಾಗುತ್ತದೆ. ಈ ರೀತಿ ಹಸ್ತಪ್ರತಿಗಳನ್ನು ಕಾಪಾಡಿಕೊಂಡು ಬರುವುದು ವ್ಯಕ್ತಿಗಳಿಗೆ ಶ್ರಮಸಾಧ್ಯವಾದ

ಹಾಗೂ ಆರ್ಥಿಕವಾಗಿ ಸುಲಭಸಾಧ್ಯವಲ್ಲದ ಕಾರ್ಯ. ಕನ್ನಡ ಅಧ್ಯಯನ ಸಂಸ್ಥೆ ಹಸ್ತಪ್ರತಿಗಳ ಸಂರಕ್ಷಣೆಗೆ ಅಗತ್ಯವಾದ ಮೇಲ್ಕಂಡ ಎಲ್ಲ ಕ್ರಮಗಳನ್ನೂ ಕೈಗೊಂಡಿದೆ.

ಗ್ರಂಥಸಂಪಾದನೆ ಶ್ರಮಸಾಧ್ಯವಾದ ಕಾರ್ಯ. ವಿದ್ವತ್ತು, ವ್ಯುತ್ಪತ್ತಿ, ಪ್ರತಿಭೆ ಮೇಳವಿಸಿರುವ ಸಮರ್ಥರು ಕೈಗೊಳ್ಳಬೇಕಾದ ಕಾರ್ಯ. ಈ ಕಾರ್ಯದಲ್ಲಿ ಹಲವಾರು ಭಾಷೆಗಳ, ಶಾಸ್ತ್ರಗಳ ಪರಿಚಯವೂ ಅಗತ್ಯವಾಗುತ್ತದೆ. ಹಸ್ತಪ್ರತಿಗಳೂ ಕಾಲ ದೇಶ ಮತ್ತು ಪರಿಸರಗಳ ಪ್ರಭಾವಕ್ಕೆ ಒಳಗಾಗಿರುತ್ತವೆ. ಸಾಹಿತ್ಯಾಭ್ಯಾಸಿಗಳು ಹಸ್ತಪ್ರತಿಗಳ ಮೇಲೆ ಟಿಪ್ಪಣಿಗಳನ್ನು, ತಮ್ಮ ಅನಿಸಿಕೆಗಳನ್ನು ಬರೆದುಬಿಡುತ್ತಿದ್ದುದೂ ಉಂಟು ಕಾಲ ಕ್ರಮದಲ್ಲಿ ಅವು ಮೂಲದ ಅಂಗವೋ ಎಂಬಂತೆ ಸೇರಿಬಿಡುತ್ತಿದ್ದುದೂ ಸಹಜವೆ. ಪ್ರತಿಭಾವಂತರೂ, ವ್ಯುತ್ಪನ್ನಮತಿಗಳೂ, ಕಾವ್ಯರಚನಾಸಮರ್ಥರೂ, ಮೂಲವನ್ನು ಕೆಲವು ವೇಳೆ ಉತ್ತಮಪಡಿಸಿ, ಕೆಲವು ವೇಳೆ ಕೆಡಿಸಿ, ಅರ್ಥಸೌಲಭ್ಯಕ್ಕಾಗಿ ಅರ್ಥ ವಾಗುವಂತಹ ಪಾಠಾಂತರಗಳನ್ನು ಕಲ್ಪಿಸಿ, ಅಲ್ಲಲ್ಲಿ ಮೂಲಧಾಟಿಗೆ ಭಂಗಬರದಂತೆ ತಮ್ಮ ಸ್ವಂತ ರಚನೆಗಳನ್ನು ಪ್ರಕ್ಷೇಪಿಸಿಬಿಟ್ಟಿರುವುದೂ ಉಂಟು. ಇಂತಹ ಪ್ರಕ್ಷೇಪಗಳು ಕೆಲವೊಮ್ಮೆ ಸನ್ನಿವೇಶದ ಪ್ರಭಾವವನ್ನು ಹೆಚ್ಚಿಸಿರುವುದೂ ಉಂಟು ; (ಒಂದು ವೇಳೆ ವಾಸ್ತವವಾಗಿ ಹಾಗಾಗದಿದ್ದರೂ ಪ್ರಕ್ಷೇಪಕರು ಹಾಗೆ ಭಾವಿಸಿಕೊಂಡದ್ದೂ ತಮ್ಮ ಚಪಲ ವನ್ನು ತೀರಿಸಿಕೊಂಡದ್ದೂ ಸತ್ಯ!) ಒಟ್ಟಿನಲ್ಲಿ ಅನಾವಶ್ಯಕ ವಿಸ್ತರಣಕ್ಕೆ ಕಾರಣವಾಗಿ ಕೃತಿಯ ಗಾತ್ರದ ಹೆಚ್ಚಳಕ್ಕೆ ಮಾತ್ರ ನೆರವಾಗಿರುವುದೂ ಉಂಟು. ಲಿಪಿಕಾರರೂ ಅನೇಕ ವೇಳೆ ತಮಗೆ ಸರಿದೋರಿದಂತೆ ಅಥವಾ ಸೂಕ್ತಕಂಡಂತೆ ಶಬ್ದರೂಪಗಳನ್ನು ಬದಲಾಯಿಸಿ ಅಥವಾ ಬೇರೆ ಶಬ್ದವನ್ನು ತಂದು ಗಿಡಿದು, ತಿಳಿದೋ ತಿಳಿಯದೆಯೋ ಮೂಲಕ್ಕೆ ತಿದ್ದುಪಡಿಗಳನ್ನು ತಂದುಬಿಡುತ್ತಿದ್ದುದುಂಟು. ಇಂತಹ ಅನೇಕ ಕಾರಣ ಗಳಿಂದಾಗಿ ಒಂದೇ ಕೃತಿಯ ಹಲವು ಪ್ರತಿಗಳಲ್ಲಿ ಪಾಠವ್ಯತ್ಯಾಸಗಳು ಕಂಡುಬರುತ್ತವೆ. ಒಂದೊಂದೇ ಪ್ರತಿಗಳು ದೊರಕಿದ್ದು ಅವೂ ತ್ರುಟಿತವಾಗಿರುವಂತಹ ಸಂದರ್ಭಗಳಲ್ಲಿ ಮೂಲಪ್ರತಿಯ ಪಾಠವನ್ನು ಪುನರ್ರಚಿಸಬೇಕಾಗುತ್ತದೆ. ಇದು ನಿಜಕ್ಕೂ ಪ್ರತಿಭೆಯ ಕೆಲಸವಾಗುತ್ತದೆ. ಇಂತಹ ಸಂದರ್ಭಗಳಲ್ಲಿ ಸಂಪಾದಕನ ಪರೀಕ್ಷೆಯೇ ನಡೆದು ಹೋಗುತ್ತದೆ. ವಿದ್ವತ್ತಿನ ಹಿನ್ನೆಲೆಯಲ್ಲಿ ತಾಳ್ಮೆ, ಶ್ರಮಸಹಿಷ್ಣುತೆ ಇಲ್ಲವಾದರೆ ಈ ಕ್ಷೇತ್ರದಲ್ಲಿ ಯಶಸ್ಸು ಪಡೆಯುವುದು ಸಾಧ್ಯವಾಗುವುದಿಲ್ಲ. ಗ್ರಂಥಸಂಪಾದನೆ ಇಂದು ವಿಶಿಷ್ಟಶಾಸ್ತ್ರವಾಗಿಯೇ ಬೆಳೆದಿದೆ.

'ಸಂಪಾದನ ವಿಭಾಗ' ಹಲವಾರು ಸಾಹಿತ್ಯ ಮತ್ತು ಶಾಸ್ತ್ರಗ್ರಂಥಗಳನ್ನು ವೈಜ್ಞಾನಿಕವಾಗಿ ಸಂಪಾದಿಸಿ, ಪಾಠಗಳನ್ನು ನಿರ್ಧರಿಸಿ, ಪಾಠಾಂತರಗಳನ್ನು ಒದಗಿಸಿ, ವಿಸ್ತಾರವಾದ ಪೀಠಿಕೆಗಳನ್ನು ಬರೆದು, ಕವಿಯ ಕಾಲ, ದೇಶ, ಕೃತಿಗಳ ವಿಚಾರವನ್ನು ಚರ್ಚಿಸಿ, ಅವುಗಳ ಸಾಹಿತ್ಯಿಕ ಮೌಲ್ಯವನ್ನು ಪರಿಶೀಲಿಸಿ, ಅಗತ್ಯವಾದಲ್ಲಿ ಟಿಪ್ಪಣಿ ವ್ಯಾಖ್ಯಾನಗಳನ್ನು ನೀಡಿ, ಕೆಲವು ಸಂದರ್ಭಗಳಲ್ಲಿ ಗದ್ಯಾನುವಾದಗಳನ್ನು ಕೊಟ್ಟು ಅರ್ಥ ಕೋಶವನ್ನು ಒದಗಿಸಿ ಬೆಳಕಿಗೆ ತರುತ್ತಿದೆ. ಪ್ರಾಚ್ಯಸಂಶೋಧನಾಲಯದ ಅಂಗವಾಗಿ

ದ್ದಾಗ ಹೊರತಂದಿರುವ ೪೦ ಗ್ರಂಥಗಳ ಜೊತೆಗೆ ಅಧ್ಯಯನ ಸಂಸ್ಥೆಯಲ್ಲಿ ಸೇರ್ಪಡೆಯಾದ ಮೇಲೆ 'ಪ್ರಾಚ್ಯ ಕಾವ್ಯಮಾಲೆ'ಯ ಹೆಸರಿನಲ್ಲಿ ಈಗಾಗಲೇ ೭೪ ಗ್ರಂಥಗಳನ್ನು ಹೊರತರಲಾಗಿದೆ. ಬೆಳಕುಕಾಣಲು ಹಾತೊರೆಯುತ್ತಿರುವ ಗ್ರಂಥಗಳನ್ನೂ ವ್ಯವಸ್ಥಿತ ರೀತಿಯಲ್ಲಿ ಹೊರತರಲು ಸಂಸ್ಥೆ ಸತತವಾಗಿ ಶ್ರಮಿಸುತ್ತಿದೆ. ಇದುವರೆಗೂ ಸಂಪಾದನ ವಿಭಾಗದ ಸಂಶೋಧನ ಸಹಾಯಕರು ಸಿದ್ಧಪಡಿಸಿದ ಕೃತಿಗಳನ್ನು ಮಾತ್ರ ಪ್ರಕಟಿಸಲಾಗುತ್ತಿತ್ತು. ಈಗ ಈ ವಿಭಾಗದಲ್ಲಿ ಸಂಗ್ರಹಿತವಾಗಿರುವ ಹಸ್ತಪ್ರತಿಗಳನ್ನುಪಯೋಗಿಸಿಕೊಂಡು ಹೊರಗಿನವರೂ ಸಂಪಾದಿಸಬಹುದಾದ ಗ್ರಂಥಗಳನ್ನೂ ಪ್ರಕಟಿಸಲು ಯೋಜಿಸಲಾಗಿದೆ. ಇದರಿಂದ ಪ್ರಕಟನೆಯ ಕೆಲಸ ತ್ವರಿತಗೊಳ್ಳುತ್ತದೆ. ಹಸ್ತಪ್ರತಿಗಳಲ್ಲೇ ಉಳಿದು ಸಾಮಾನ್ಯರ ಕೈಗೆಟುಕದ ಗ್ರಂಥಗಳನ್ನು ಸರ್ವರ ಸ್ವತ್ತಾಗಿಸುವ ಉದ್ದೇಶವೂ ತೀವ್ರಗೊಳ್ಳುತ್ತದೆ.

ಸಂಪಾದನ ವಿಭಾಗ ಸಂಕಲಿತ ಗ್ರಂಥಗಳನ್ನು ಹೊರತರುವಲ್ಲಿಯೂ ನಮಗೆ ನೆರವಾಗುತ್ತಿದೆ. ಎರಡು ಸಾವಿರ ವರ್ಷಗಳ ಸುದೀರ್ಘ ಪರಂಪರೆಯನ್ನುಳ್ಳ ಕನ್ನಡ ಸಾಹಿತ್ಯದ ಸಿಂಹಾವಲೋಕನ ಮಾಡಿಸುವಂತಹ ಪ್ರಾತಿನಿಧಿಕ ಸಂಕಲನ ಗ್ರಂಥಗಳನ್ನು ಸಿದ್ಧಪಡಿಸಲಾಗುತ್ತಿದೆ. ವಿಶ್ವವಿದ್ಯಾನಿಲಯದ ವಿವಿಧ ಪರೀಕ್ಷೆಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ರಚಿಸಲಾಗುತ್ತಿರುವ ಈ ಗ್ರಂಥಗಳು ಆಯಾ ವಿದ್ಯಾರ್ಥಿಗಳಿಗೆ ಮಾತ್ರವಲ್ಲದೆ ಕನ್ನಡ ಸಾಹಿತ್ಯದ ಪರಿಚಯವನ್ನು ಬಯಸುವವರಿಗೂ ಉಪಯುಕ್ತವಾಗುತ್ತವೆ. ಇಂಥ ಸಂಕಲನಗಳನ್ನು ಸಿದ್ಧಪಡಿಸುವುದೂ ಸಂಪಾದನ ವಿಭಾಗದ ಒಂದು ಪ್ರಮುಖ ಹೊಣೆಯಾಗಿದೆ.

ಈಗ ಪ್ರಕಟವಾಗುತ್ತಿರುವ 'ಆರಾಧ್ಯಚಾರಿತ್ರ' ಅಧ್ಯಯನ ಸಂಸ್ಥೆಯ ಪ್ರಾಚ್ಯ ಕಾವ್ಯಮಾಲೆಯ ೭೫ನೆಯ ಪ್ರಕಟಣೆಯಾಗಿದೆ. ಈ ಕೃತಿಯನ್ನು ಸಂಪಾದನ ವಿಭಾಗದ ಉಪನಿರ್ದೇಶಕರಾದ ಶ್ರೀ ಎನ್. ಬಸವಾರಾಧ್ಯ ಅವರು ಶಾಸ್ತ್ರೀಯವಾಗಿ ಸಂಪಾದಿಸಿ ಕೊಟ್ಟಿದ್ದಾರೆ. ಅವರಿಗೆ ನಮ್ಮ ವಂದನೆಗಳು.

ಈ ಗ್ರಂಥದ ಸಂಪಾದನ ಕಾರ್ಯಕ್ಕೆ ಅನುಕೂಲಿಸುವಂತೆ ತಮ್ಮಲ್ಲಿದ್ದ ಹಸ್ತಪ್ರತಿಗಳನ್ನು ಉಪಯೋಗಿಸಲು ಕೊಟ್ಟಿರುವ ಮಹನೀಯರಿಗೆ ವಂದನೆಗಳು.

ಕನ್ನಡ ಅಧ್ಯಯನ ಸಂಸ್ಥೆ,
ಮಾನಸಗಂಗೋತ್ರಿ, ಮೈಸೂರು-೬

ಹಾ. ಮಾ. ನಾಯಕ
ಪ್ರಧಾನ ಸಂಪಾದಕ

# ವಿಷಯಾನುಕ್ರಮಣಿಕೆ

## ವಾದ ಪ್ರಕರಣ



## ಮಹಿಮ ಪ್ರಕರಣ

## ಪರ್ವತ ಪ್ರಕರಣ



## ಅನುಬಂಧಗಳು

# ಪೀಠಿಕೆ

## ೧. ಕವಿ-ಕಾಲ-ವಿಚಾರ

ಆರಾಧ್ಯ ಚಾರಿತ್ರದ ಕರ್ತೃ ನೀಲಕಂಠಾಚಾರ್ಯ. ಕರ್ಣಾಟಕ ಕವಿಚರಿತೆ ಕಾರರು ಈತನ ಕಾಲ ಕ್ರಿ.ಶ. ಸು. 1485 ಎಂದಿದ್ದಾರೆ. ಇದಕ್ಕೆ ಅವರು ಕೊಡುವ ಆಧಾರಗಳು ಇಷ್ಟೆ. ಆರಾಧ್ಯ ಚಾರಿತ್ರದ :

ಅರಿರಾಯ ಗರ್ವಪರ್ವತದಳನಭಿದುರನುರು
ತರವಿಪ್ಲಕ್ಷ ಪ್ರಬಲಸೇನಾಬ್ಧಿ ಬಾಡಬಂ
ಪರಭೂಮಿಪಾಲ ಜೀವಪ್ರಭಂಜನಭೋಗಿ ಯಾಚಕಾಮರಭೂಜನು
ಕರವೆಸೆವ ಗಜಬೇಂಟೆಕಾಱನೀಶ್ವರಪಾದ
ಸರಸಿರುಹಸೇವಕಂ ವೀರನಂಜೇಂದ್ರನಿಂ
ಪರಿಪೂಜಿತಂ ನೀಲಕಂಠದೇಶಿಕನುಸಿರ್ದನೀ ಕೃತಿಯನಕ್ತಿಯಿಂದೆ [೧–೪೪]

ಈ ಪದ್ಯದಲ್ಲಿ ನೀಲಕಂಠದೇಶಿಕನು ಗಜಬೇಂಟೆಕಾಱನೀಶ್ವರಪಾದಸರಸಿರುಹಸೇವಕನಾದ ವೀರನಂಜೇಂದ್ರನಿಂದ ಪರಿಪೂಜಿತನಾಗಿದ್ದಂತೆ ಉಕ್ತವಾಗಿದೆ. ಈ ವೀರನಂಜೇಂದ್ರ ಕ್ರಿ.ಶ. 1482 ರಿಂದ 1494ರವರೆಗೆ ಆಳಿದ ಉಮ್ಮತ್ತೂರು ದೊರೆಯಾದ ಮಹಾಮಂಡಳೇಶ್ವರ ಗಜಬೇಂಟೆಕಾಱ ಇಮ್ಮಡಿ ರಾಜಒಡೆಯರ ಕುಮಾರ ವೀರನಂಜರಾಜಒಡೆಯನಾಗಿರ ಬೇಕು. ಕ್ರಿ.ಶ. 1489ರ ಗುಂಡ್ಲುಪೇಟೆಯ ೯ನೆಯ ಶಾಸನದಲ್ಲಿ "ಗಜಬೇಟೆಕಾಱ ಯಿಂಮಡಿ ರಾಯವೊಡೆಯರ ಕೊಮಾರ ಶ್ರೀ ವೀರನಂಜರಾಯವೊಡೆಯರು ಸುಕದಿ ಪ್ರುತ್ತುವೀರಾಜ್ಯಂ ಗೆಉತ್ತಿರಲಾಗಿ" ಎಂದಿಧೆ. ನಂಜನಗೂಡಿನ ೧೧೮ನೆಯ ಶಾಸನದಲ್ಲಿ "ಗಜಬೇಂಟೆಕಾಱ ಪೆಸಾಳಿ ಹನುಮ ಅರಸಂಕ ಸುನೆಗಾಱ ಗೋಣಾಂಕ ಚಕ್ರೇಶ್ವರ ಜವಾದಿ ಕೋಳಾಹಳ ಶ್ರೀಮನ್ಮಹಾಮಂಡಳೇಶ್ವರಂ ಶ್ರೀ ವೀರಯಿಂಮಡಿರಾಯೊಡೇರ ಕುಮಾರ ನಂಜರಾಯವೊಡೆಯರು ಪ್ರಿಥ್ವೀರಾಜ್ಯಂಗೆಯ್ಯುತ್ತಮಿರೆ" ಎಂದು ಹೇಳಿದೆ. ಇದರ ಕಾಲ ಕ್ರಿ.ಶ 1490. ನಂಜನಗೂಡಿನ ಕ್ರಿ.ಶ. 1492ರ ೧೦೩ನೆಯ ಶಾಸನದಲ್ಲಿ "ಶ್ರೀಮನ್ಮಹಾ ಮಂಡಳೇಶ್ವರ ಶ್ರೀವೀರನಂಜರಾಯವೊಡೆಯರ ನಿರುಪದಿಂ" ಎಂದಿದೆ. ತಿರುಮಕೂಡ್ಲು ನರಸೀಪುರದ ಕ್ರಿ.ಶ. 1494ರ ೬೦ನೆಯ ಶಾಸನದಲ್ಲಿ "ಶ್ರೀಮನ್ಮಹಾ(ಹ)ಮಂಡಳೇಶ್ವರ ಶ್ರೀವೀರನಂಜರಾಯವೊಡೆಯರ ಸಿರಪ್ರಧಾನ" ಎಂದು ಬರೆದಿದೆ. ಈ ಮೇಲಿನ ಶಾಸನ ಗಳಲ್ಲಿ ಹೆಸರಿಸಲ್ಪಟ್ಟಿರುವ ವೀರನಂಜರಾಯಒಡೆಯ ಉಮ್ಮತ್ತೂರಿನ ದೊರೆಯಾಗಿದ್ದುದು ಸ್ಪಷ್ಟವಾಗಿದೆ. ಈ ಎಲ್ಲ ಶಾಸನಗಳೂ ಕ್ರಿ.ಶ. 1489 ರಿಂದ 1494ರ ಅವಧಿಯಲ್ಲಿ

ಹುಟ್ಟಿಕೊಂಡುವು. ಆದುದರಿಂದ ಈ ವೀರಸಂಜೇಂದ್ರನಿಂದ ಪರಿಪೂಜಿತನಾದ ನೀಲಕಂಠ ದೇಶಿಕ ಕ್ರಿ.ಶ. ಸು. 1485ರಲ್ಲಿ ಇದ್ದಿರಬೇಕೆಂಬ ಕವಿಚರಿತೆಕಾರರ ಅಭಿಪ್ರಾಯ ಸಮ್ಮತ ವಾಗಿದೆ. ಕವಿಯ ಕಾಲನಿರ್ಧಾರಕ್ಕೆ ಪೋಷಕವಾದ ಮತ್ತಾವ ಅಂಶಗಳೂ ಈತನ ಕಾವ್ಯದಲ್ಲಿ ಕಂಡುಬರುವುದಿಲ್ಲ.

ಆರಾಧ್ಯ ಚಾರಿತ್ರದ ಕರ್ತೃವಿಗೆ ನೀಲಕಂಠಾರ್ಯ (೧-೪೫) ನೀಲಕಂಠಾಚಾರ್ಯ (೧-೪೩) ನೀಲಕಂಠದೇಶಿಕ (೧-೪೪) ಎಂಬ ನಾಮಾಂತರಗಳಿರುವುದು ಕಂಡುಬರುತ್ತದೆ. ಈತನಿಗೆ ಉನ್ನತ ಕಳಾವಿದ ಈಶ್ವರಕ್ರಮುಭುವನಜ ನವಮುಕುಂದಪಾಸಲೋಲುಪಮಧು ವ್ರತಿ ಅತಿವಿಶಾಲಗುಣ (೧-೪೨) ವಿತತಕರ್ಣಾಟಲಕ್ಷಣಕಮಲಭವ ಚತುರವರ (೧-೪೩) ಎಂಬ ಬಿರುದುಗಳೂ ಇವೆ.

ನೀಲಕಂಠಾಚಾರ್ಯ ತನ್ನ ವಂಶಾವಳಿಯನ್ನು ವಿಸ್ತೃತವಾಗಿ ನಿರೂಪಿಸಿದ್ದಾನೆ. ಈ ವಂಶದ ಮೂಲಪುರುಷನಾದ ಸೋಮಶಂಭುದೇಶಿಕನು "ನತಜನ ಕಿರೀಟಮಂಡಿತ ಪಾದನಖರಸಂತತಿಕಾಂತಿವಿಸರಚಂದ್ರಾತಪಂ ಭವತಾಪವಿತತಿಯೊಳ್ ಬೀಡು ಮಮ್ಮಲನೆ ಮಱುಗುವ ಲೋಕಕ್ಕೊಲ್ದು ಮಿಗೆ ತಂಪನೀಯೆ ವಿತತ ದುರ್ಮತ ಕುಮುದ ಚಂಡ ಹರಿದಶ್ವ, ವಿಶ್ವದೊಳ್ ನುತಿವಡೆದು" ಶೋಭಿಸುತ್ತಿದ್ದನು. ಈ ಸೋಮಶಂಭು ದೇಶಿಕನ ತನುಜ ಸಕಲಾಗಮಾಚಾರ್ಯ. ಈತನಾದರೋ "ಕಾಮಿಕಾದ್ಯಖಿಳ ಶಿವ ಕಥಿತತಂತ್ರಾವಲಿಗೆ ಪ್ರೇಮದಿಂ ವೃತ್ತಿದೀಪಿಕೆಗಳಂ ಬಿತ್ತರಿಸಿ ಸೋಮಧರ ಸಮಯಮಂ ಧರಣಿಯೊಳ್ ನಿಱಿಸಿ ಕುಮತಾಬ್ಜರಾತ್ರೀಶನೆನಿಸಿ ಕಾಮಿತಫಲಂಗಳಂ ಛಾತ್ರತತಿಗೀವ ವರಸೋಮಶಂಭು ತನೂಜ" ಎಂದು ಹೇಳಿಕೊಂಡಿದ್ದಾನೆ. ಈ ಸಕಲಾಗಮಾಚಾರ್ಯರ ತನೂಭವ ಶಿವಲೆಂಕಮಂಚಣ್ಣಪಂಡಿತ. ಈತನು "ಶಿವಕುಲಮೆ ಮಿಗಿಲೆಂದು ವಾದ ದೊಳ್ ಭೂದೇವನಿಕರಕ್ಕೆ ಸಾರಿದವನು. ವೇದವನೊನಕೆಪಾಡಾಗಿ ಪಾಡಿದವನು. ಪರಸಮಯಾಟವೀದಾವ" ಎಂದು ಮೆರೆದವನು. ಇಂತಹ ಶಿವಲೆಂಕ ಮಂಚಣ್ಣ ಪಂಡಿತರ ತನೂಭವ ಉರಿಲಿಂಗದೇವ ದೇಶಿಕ. ಇವರ ಕರಕಮಲದಿಂದ ಜನಿಸಿದವನೂ ವಿಶ್ರುತ ಮಾಗಿ ವಿಶ್ವಂಭರಾತಲದೊಳ್ ವಿರಾಜಿಸಿದವನೂ ಪರವಾದಿಗಂಧಸಿಂಧುರದಳನ ಪಂಚಾನ ನನೂ ಭಾಸುರಕೀರ್ತಿವನಿತೆ ಮೂಲೋಕದೊಳ್ ಘನಲೀಲೆಯಿಂದ ನಲಿದಾಡುವಂತೆ ಮಾಡಿದವನೂ ಆದ ಉರಿಲಿಂಗಪೆದ್ದಿ. ಈ ಉರಿಲಿಂಗಪೆದ್ದಿ "ಪರವಾದಿವೃಂದಾರವಿಂದ ಪಾರ್ವಣಚಂದ್ರ, ವಿಪಕ್ಷರಾದ್ಧಾಂತಕುವಲಯಭಾನು, ಪರಸಮಯಚಂಡಹರಿದಶ್ವ ಪೀಡಿತರಾಹು, ಕುಮತಗಿರಿನಿಶಿತಾಶನಿ" ಎನಿಸಿದ್ದನಂತೆ. ಇವರ ಅಂಗೋದ್ಭವ ವಿಶ್ವೇಶ ಪೆದ್ದಣಾರ್ಯ. ಇವರು "ವರಭಸಿತಭಸ್ಮರಕ್ಷಾಕಾರ ಭೂತಿಯೆಂಬುರುತರಾಮಲ ನಾಮ ಪಂಚಕದಿನೊಪ್ಪಿರ್ದವರು". ಸಿರಿವಿಭೂತಿಯ ಮಹಿಮೆಯನ್ನು ಲೋಕದೊಳಗೆ ಪಸರಿಸಿ ದವರು. ಇವರ ಮಗ ವಿಭೂತಿ ಸಿದ್ಧಾಚಾರ್ಯ. ಇವರನ್ನು ಭೂಜನ "ವರವೀರಶೈವ ಪ್ರವರ್ತನಂ ಭಾವಿಸಲ್ ಪರಿಜುವೆತ್ತುಡೊ ಶಾಂತಿದಾಂತ್ಯಾದಿಗಳ್ ನಾಡೆ ಪರಿಕಿಪೊಡೆ ರೂಪುವಡೆದುವೊ" ಎಂದು ಕೀರ್ತಿಸುತ್ತಿತ್ತು. ಈ ವಿಭೂತಿ ಸಿದ್ಧಾಚಾರ್ಯರ

ಗರ್ಭಸಾಗರಚಂದ್ರ ಸೋಮನಾಥಾರ್ಯ. ಇವರ ಅಂಗಭವ ಪೆದ್ದಣದೇಶಿಕ. ಇವರನ್ನು "ಧರಣಿಯೊಳ್ ವೀರಶೈವಾಚಾರಕಲ್ಪಲತೆ ಪರಿದು ಪರ್ಬಲ್ಕಿಟ್ಟ ಸುರಕುಜದಡರ್ಪು ಬಂಧುರಭಕ್ತಕಾಮದುಘೆ" ಎಂದು ಭೂಜನಸಂತತಿ ಕೀರ್ತಿಸುತ್ತಿತ್ತಂತೆ. ಇವರ ವರಸೂನು ವಾರಣಾಸಿಯ ಬಲ್ಲಣಾಚಾರ್ಯ. ಇವರ ವರಸುತ "ಕಾರುಣ್ಯಸಿಂಧುವೂ ಸಜ್ಜನ ಬಂಧುವೂ ವೀರಶೈವೋದ್ಧರಣನೂ" ಆದ ನಾಗನಾಥಾರ್ಯ. "ನಿರತಿಶಯ ಸುಖರೂಪನೂ ಅಪಗತಾಖಿಲಪಾಪನೂ ಉರುತರಾಗಮಕಲ್ಯನಿಕರಮತಹೃಚ್ಛಲ್ಯನೂ ಭಕ್ತಕುಟುಂಬನೀಶ್ವರಪ್ರತಿಬಿಂಬನೂ" ಆದ ನಾಗನಾಥಾರ್ಯರ ಕೀರ್ತಿ ಎಂಟು ದಿಕ್ಕುಗಳಲ್ಲಿಯೂ ಹರಡಿಕೊಂಡಿತ್ತು. ಈತನ ವರಸುತ ನೀಲಕಂಠಾಚಾರ್ಯ. ಈ ನೀಲಕಂಠದೇಶಿಕನ ಉದರಾನೂನಶರಧಿವರ್ಧನಚಂದ್ರ ಎಂತಹವನೆಂದರೆ: "ಮಾನಿತಗುಣ ವಿಶ್ವಜನವಂದ್ಯ ಅಖಿಳಾಗಮಂಗಳಕಳಾಭಿಜ್ಞ ಜ್ಞಾನರೂಪ" ಎನಿಸಿದ ವಿಶ್ವನಾಥಾರ್ಯ. ಇವರ ಸಂತತಿಯೊಳೊಗೆದವನು ಮಧುವೇಶ್ವರ. ಈ ಮಧುವೇಶಗರ್ಭಸಂಭವನು ಆರ್ಯ ವರ್ಯನೂ ಆರಾಧ್ಯಸೀಮಂತಮಣಿಯೂ ಭಕ್ತಜನಚಿಂತಾಮಣಿಯೂ ಭವಲತಾ ಮೂಲಕುದ್ದಾಲನೂ ಉನ್ನತಪರಮಶಿವರೂಪನೂ ಆದ ನೀಲಕಂಠಾಚಾರ್ಯ. ಈತನ ತನೂಭವ "ಪ್ರವಿದಿತ ಷಡಧ್ವ ಸಮ್ಯಜ್ಞನೂ ಆನತಲೋಕನಿನಹಾ ಶಿವಾಂಧ ತಮಸ್ಸಾನೀಕಭಾಸ್ಕರನೂ ಪ್ರವಿಮಲಶಿವೋಕ್ತನೂ ತ್ರೈಲೋಕಕರ್ತಾರನೂ ಪರಮ ಮಂಗಲದೇಹನೂ ಅವಿರಳಜ್ಞಾನಪ್ರದಾತೃವೂ ಸಜ್ಜನಬಂಧುವೂ ಭವತಾರಕನೂ" ಆದ ವಿಶ್ವನಾಥದೇಶಿಕ. ಈ ವಿಶ್ವನಾಥದೇಶಿಕರ ಮಗನೇ ನೀಲಕಂಠಾಚಾರ್ಯ. ಈತನು ಉನ್ನತ ಕಳಾವಿದ; ಈಶ್ವರಕ್ರಮಭುವನಜ ನವಮಕರಂದಪಾನಲೋಲುಪ ಮಧುವ್ರತ; ಅತಿವಿಶಾಲಗುಣ. ಈ ವಿದ್ವದ್ಮನಿತನದಲ್ಲಿ ಜನಿಸಿದ ನೀಲಕಂಠಾಚಾರ್ಯನೇ ಆರಾಧ್ಯ ಚಾರಿತ್ರದ ಕರ್ತೃ. ಈತನ ವಂಶಾವಳಿಯನ್ನು ಹೀಗೆ ತೋರಿಸಬಹುದು.

ಸೋಮಶಂಭುದೇಶಿಕ→ಸಕಲಾಗಮಾಚಾರ್ಯ→ಶಿವಲೆಂಕಮಂಚಣ್ಣ ಪಂಡಿತ →ಉರಿಲಿಂಗದೇವದೇಶಿಕ→ಉರಿಲಿಂಗಪೆದ್ದಿ→ವಿಶ್ವೇಶಪೆದ್ದಣಾರ್ಯ→ ವಿಭೂತಿಸಿದ್ಧಾಚಾರ್ಯ→ಸೋಮನಾಥಾರ್ಯ→ಪೆದ್ದಣದೇಶಿಕ→ವಾರ ಣಾಸಿಯ ಬಲ್ಲಣಾರ್ಯ→ನಾಗನಾಥಾರ್ಯ→ನೀಲಕಂಠಾಚಾರ್ಯ→ವಿಶ್ವ ನಾಥಾರ್ಯ→ಮಧುವೇಶ್ವರ→ನೀಲಕಂಠಾಚಾರ್ಯ→ವಿಶ್ವನಾಥ ದೇಶಿಕ→ ನೀಲಕಂಠಾಚಾರ್ಯ.

ಈತನ ವಿದ್ಯಾಗುರು ಗಂಗಾಧರಾಚಾರ್ಯ. ಈತ ಅವರನ್ನು ಅತ್ಯಂತ ಭಕ್ತಿಯಿಂದ ಸ್ಮರಿಸಿ ಸ್ತುತಿಸಿದ್ದಾನೆ. ಅವರ ಪಾಂಡಿತ್ಯವನ್ನು ಈ ರೀತಿ ಹೊಗಳಿದ್ದಾನೆ:

ಮಿನುಪ ಕರ್ಣಾಟ ಸಂಸ್ಕೃತ ಶಬ್ದಶಾಸ್ತ್ರದಿಂ
ಕನದಮಲಮಾದ ಸವಿನುಡಿ ಪಸರದೆಸಕದಿಂ
ಜನವಿತಾನದ ಕಿವಿಗೆ ಮಾಣಿಕ್ಯಖಚಿತನೂತ್ನಾಭರಣಮಂ ರಚಿಸುತೆ

ಮನಸಿಜಾಂತಕನಾಗಮಂಗಳಂ ಭಕ್ತರ್ಗೆ
ಮನವೊಸೆದು ಬೋಧಿಸುತ್ತೆನಗೆ ಸದ್ವಿದ್ಯೆಯಂ
ವಿನಯದಿಂದಿತ್ತ ಗಂಗಾಧರಾಚಾರ್ಯಂಗೆ ವಂದಿಪೆಂ ಭಕ್ತಿಯಿಂದಂ [೧-೨೩]

ನೀಲಕಂಠಾಚಾರ್ಯ ತನ್ನ ಮತ್ತೊಬ್ಬ ಗುರುವಾದ ದಕ್ಷಿಣಾಮೂರ್ತಿಯನ್ನೂ ವಿಶೇಷವಾಗಿ ಸ್ಮರಿಸಿದ್ದಾನೆ.

ಶ್ರೀಗುರುವೆ ಜಗದೇಕಗುರುವೆ ಮದ್ಗುರುವೆ ಕ
ಲಾಗಮ ಪುರಾಣ ಶ್ರುತಿತತಿಯಱಸಿ ಕಾಣದ ಮ
ಹಾಗುರುವೆ ನಿತ್ಯನಿರ್ಮಲಗುರುವೆ ಪರಮ ಸಮ್ಯಜ್ಞಾನಭರಿತ ಗುರುವೆ
ಆಗುಹೋಗೆಂಬುವಿಲ್ಲದ ಗುರುವೆ ನಿಖಿಲಶರ
ಣಾಗತರ ಪೊರೆವ ಘನಗುರುವೆ ನೀನೆನ್ನ ಹೃದ
ಯಾಗಾರದೊಳ್ ನೆಲಸಿ ಸಲಹುಗೆ ನಮೋ ನಮೋ ದಕ್ಷಿಣಾಮೂರ್ತಿಗುರುವೆ
[೧-೧೩]

ಆರಾಧ್ಯಚಾರಿತ್ರದ ಆದಿಯಲ್ಲಿ ನೀಲಕಂಠಾಚಾರ್ಯ ಶಿವಸ್ತುತಿ, ಗುರುಸ್ತುತಿ, ನಂದೀಶ್ವರಸ್ತುತಿ, ಭೃಂಗೀಶಸ್ತುತಿ, ವೀರಭದ್ರಸ್ತುತಿಯನ್ನು ಮಾಡಿದ ಮೇಲೆ "ಎಲ್ಲಾ ಪುರಾತನರೊಳನುಭವಂಗೆಯ್ಯುತಿರ್ಪಲ್ಲಮಪ್ರಭುವಾರ್ಯವಲ್ಲಭಂ ಕುಡುಗೆಮಗೆ ಸೊಲ್ಲಿಡುವ ಬಲ್ಲತನಮಂ" ಎಂದು ಪ್ರಾರ್ಥಿಸಿಕೊಂಡಿದ್ದಾನೆ. ಅದಾದ ಮೇಲೆ ಶರಣಮಧ್ಯಗನಾದ ಪಂಡಿತಾರಾಧ್ಯರನ್ನೂ ಶಿವಭಕ್ತಿವರ್ಧನಾರ್ಥ ಬಂದು ಕಲ್ಯಾಣದೊಳಗೆಸೆದ ಬಸವೇಶನನ್ನೂ ಸ್ತುತಿಸಿದ್ದಾನೆ. ಆಮೇಲೆ 'ಷಟ್ಸ್ಥಲಾಮಲಮಯೂಖಂಗಳಂ ಭೂವಳಯದೊಳ್ ಸೂಸುವ' ಚನ್ನಬಸವೇಶನನ್ನು ಸ್ಮರಿಸಿದ ಬಳಿಕ ಪಾಲ್ಕುರಿಕೆ ಸೋಮನನ್ನು ವಿಶೇಷವಾಗಿ ಹೊಗಳಿದ್ದಾನೆ:

ಪರಮ ಶೈವಾಚಾರ ವಾರ್ಧಿವರ್ಧನ ಚಂದ್ರ
ನುರುತರ ಪ್ರತಿವಾದಿತರುಪರಶ್ವಧನಮಲ
ವರತಂತ್ರ ವೇದಾದಿ ಶಿವಶಾಸ್ತ್ರ ಪಾರಂಗತಂ ನಿಶ್ಚಲಂ ಸಂತತಂ
ಹರಚರಣ ಸರಸಿರುಹ ಪರಿಸೇವಕಂ ಕಾಮ
ಹರಭಕ್ತಸಂಯುಕ್ತ ಗೋಷ್ಠೀವಿಲಾಸನನ
ವರತಮಂಹೋಹರಂ ಪಾಲ್ಕುಱಿಕೆ ಸೋಮೇಶನೊಸೆದು ರಕ್ಷಿಸುಗೆಮ್ಮನು
[೧-೨೧]

ಪ್ರಾಚೀನ ಕವಿಗಳಲ್ಲಿ ಹಂಪೆಯ ಹರೀಶ್ವರನನ್ನು ಮಾತ್ರ ಸ್ಮರಿಸಿದ್ದಾನೆ:

ಕಂಪಮರ್ದ ಚಂದನದ ಪಂಕದೊಳ್ ಪರಿಮಳಂ
ಪೆಂಪುವಡೆದಂತೆ ರಸಭರಿತ ಪ್ರಬಂಧದೊಳ್
ಸೊಂಪುದೋಱುವ ಶಬ್ದಸಂದರ್ಭಮೊಪ್ಪುತಿರೆ ಪೊಸತಪ್ಪ ಯುಕ್ತಿಯಿಂದಂ

ಇಂಪಾಗಿ ಶಿವಗಣಪ್ರಕರಮಂ ಕೊಂಡಾಡಿ
ಪಂಪೆಯೊಳ್ ಪಂಪಾವಿರೂಪಾಕ್ಷನೊಳಗವಿದ
ಪಂಪೆಯ ಹರೀಶ್ವರನ ಪಾದಪದ್ಮಂಗಳಂ ನೆನೆದೆಸಗುವೆಂ ಕೃತಿಯನು [೧-೨೨]

ನೀಲಕಂಠಾಚಾರ್ಯ ತನ್ನ ವಂಶಾವಳಿಯನ್ನು ವಿಸ್ತಾರವಾಗಿ ಹೇಳಿಕೊಂಡಿದ್ದರೂ ಈತನ ಪೂರ್ವಿಕರು ಯಾವ ಪ್ರಾಂತದವರು ಈತನು ಎಲ್ಲಿಂದ ಬಂದು ನೆಲಸಿ ಕೃತಿರಚನೆಗೈದ ಎಂಬ ವಿವರಗಳು ಪ್ರಸ್ತಾಪಿಸಲ್ಪಟ್ಟಿಲ್ಲ. ಆದರೆ ಇವರ ಹೆಸರುಗಳನ್ನು ಪರಿಶೀಲಿಸಿದಲ್ಲಿ ಇವು ವಿಶೇಷವಾಗಿ ಆಂಧ್ರದಲ್ಲಿ ಪ್ರಚಲಿತವಾಗಿರುವುದು ಸ್ಪಷ್ಟವಾಗುತ್ತದೆ. ವೀರಶೈವಧರ್ಮ ಆಂಧ್ರದಲ್ಲಿ ಪ್ರಚಾರದಲ್ಲಿತ್ತು ಎಂಬುದಕ್ಕೆ ಸಾಕಷ್ಟು ನಿದರ್ಶನಗಳಿವೆ. ನೀಲಕಂಠಾಚಾರ್ಯನೂ ಆಂಧ್ರಪ್ರದೇಶಕ್ಕೆ ಸೇರಿದವನಾಗಿರಬಹುದೇ ಎಂದು ಊಹಿಸಬಹುದಾಗಿದೆ. ಆದರೆ ಈತನು ವೀರನಂಜೇಂದ್ರನಿಂದ ಪರಿಪೂಜಿತನಾಗಿದ್ದಂತೆ ಹೇಳಿಕೊಂಡಿರುವುದರಿಂದ ಕರ್ಣಾಟಕ ಪ್ರಾಂತ್ಯದ ಮೈಸೂರು ಜಿಲ್ಲೆಗೆ ಸೇರಿದವನಾಗಿರಬಹುದು ಎಂದು ತರ್ಕಿಸಲೂ ಅವಕಾಶ ಉಂಟು. ಒಟ್ಟಿನಲ್ಲಿ ನೀಲಕಂಠಾಚಾರ್ಯನ ಪೂರ್ವಿಕರು ಆಂಧ್ರಪ್ರದೇಶದವರಾಗಿದ್ದು ಕಾಲಾಂತರದಲ್ಲಿ ಇವರು ಕರ್ಣಾಟಕಕ್ಕೆ ಬಂದು ನೆಲಸಿ ಇಲ್ಲಿನ ರಾಜಮನೆತನದವರಿಂದ ಪರಿಪೂಜಿತರಾಗಿರಬಹುದೆಂದು ಭಾವಿಸಬಹುದಾಗಿದೆ. ಈ ಬಗೆಗೆ ಮತ್ತಷ್ಟು ಸಾಧನ ಸಾಮಗ್ರಿಗಳು ದೊರಕುವವರೆಗೂ ಖಚಿತವಾಗಿ ಏನನ್ನೂ ಹೇಳಲು ಬರುವಂತಿಲ್ಲ.

ಆರಾಧ್ಯಚಾರಿತ್ರದ ರಚನೆಗೆ ಒದಗಿಬಂದ ಸನ್ನಿವೇಶವನ್ನು ನೀಲಕಂಠಾಚಾರ್ಯ ಈ ರೀತಿ ನಿರೂಪಿಸಿದ್ದಾನೆ:

_____ಧರೆಗೆ ಕೈಲಾಸವೆನಿಸುವ ಶ್ರೀಗಿರಿಯೊಳಿಸೆವುತಿರ್ಪ
ಅಂತಕಾಂತಕ ಭಕ್ತರಳ್ತಿಯಿಂದಣಿಯರಂ
ಮುಂತಿರ್ದ ಪಾಲ್ಕುರಿಕೆ ಸೋಮೇಶನಂ ಕರೆದು
ಕಂತುಹರನಿಭ ಪಂಡಿತಾರಾಧ್ಯ ವೃತ್ತಿಯನೊಱಲ್ದು ಪೇಳೆಂದು ಬೆಸಸೆ [೧-೫೧]

ಸಂತಸದಿ ಪಾಲ್ಕುರಿಕೆ ಸೋಮನಾಥಂ ಮುನ್ನೆ
ಸಂತಸಭೆ ಮೆಚ್ಚುವಂತಾಂಧ್ರಭಾಷೆಯೊಳೊಲ್ದ
ನಂತಯುಕ್ತಿಗಳಿಂದೆ ಪಂಡಿತಾರಾಧ್ಯಚಾರಿತ್ರಮಂ ಪೇಳ್ದನೊಸೆದು
ಚಿಂತಿಸುತ್ತದನೆನ್ನ ಮತಿಗೆಯ್ದಿದಂದದಿಂ
ಕಂತುಹರಭಕ್ತರಱುಂಪತೆ ಕನ್ನಡದಿನ
ತ್ಯಂತ ವಿಶ್ರುತಮಾಗಿ ಪೇಳ್ದಪೆಂ ಕೇಳ್ದರ್ಗೆ ಕನ್ನವುರವಪ್ಪ ತೆಱದೆ [೧-೫೨]

## ೨. ಪಾಲ್ಕುರಿಕೆ ಸೋಮನಾಥ–ಪಂಡಿತಾರಾಧ್ಯ ಚರಿತ್ರ

ಆರಾಧ್ಯಚರಿತೆಗೆ ಆಕರಗ್ರಂಥವಾದ ತೆಲುಗಿನ ಪಂಡಿತಾರಾಧ್ಯ ಚರಿತ್ರೆಯ ಕರ್ತೃ ಪಾಲ್ಕುರಿಕೆ ಸೋಮನಾಥ ತ್ರಿಭಾಷಾಕವಿ ಮಹಾಕವಿ ಎನಿಸಿಕೊಂಡಿದ್ದಾನೆ. ಈತನು

ತೆಲುಗು ಕನ್ನಡ ಸಂಸ್ಕೃತ ಭಾಷೆಗಳಲ್ಲಿ ಕಾವ್ಯಗಳನ್ನು ಬರೆದಿದ್ದಾನೆ. ಈತನ ತೆಲುಗು ಬಸವಪುರಾಣವನ್ನು ಆಧರಿಸಿ ಭೀಮಕವಿ ಕನ್ನಡದಲ್ಲಿ ಬಸವಪುರಾಣವನ್ನು ರಚಿಸಿರುವುದು ಸರ್ವಶ್ರುತವಾಗಿದೆ. ಪಾಲ್ಕುರಿಕೆ ಸೋಮನಾಥ ತೆಲುಗಿನಲ್ಲಿ ಅನುಭವಸಾರ, ಚತುರ್ವೇದಸಾರ, ಚನ್ನಮಲ್ಲು ಸೀಸಗಳು, ವೃಷಾಧಿಪಶತಕ, ಬಸವೋದಾಹರಣ, ಪಂಡಿತಾರಾಧ್ಯ ಚರಿತ್ರೆ, ಬಸವಪುರಾಣ–ಮೊದಲಾದ ಕೃತಿಗಳನ್ನೂ ಸಂಸ್ಕೃತದಲ್ಲಿ ಸೋಮನಾಥಭಾಷ್ಯ, ರುದ್ರಭಾಷ್ಯ, ವೃಷಭಾಷ್ಟಕ, ಪಂಚಕ, ಬಸವೋದಾಹರಣ–ಎಂಬ ಗ್ರಂಥಗಳನ್ನೂ ಕನ್ನಡದಲ್ಲಿ ಗಣಸಹಸ್ರನಾಮ, ಹರಗಣಮಾಲೆ, ಶೀಲಸಂಪಾದನೆ, ದಶವಿಧ ಪಾದೋದಕ ವಿವರ, ಬಸವರಗಳೆ, ಸದ್ಗುರುರಗಳೆ, ಗಂಗೋತ್ಪತ್ತಿರಗಳೆ–ಇವೇ ಮೊದಲಾದ ಕೃತಿಗಳನ್ನೂ ಬರೆದಂತೆ ತಿಳಿದುಬರುತ್ತದೆ. ಪಿಡುಪರ್ತಿ ಸೋಮನಾಥಕವಿ ತನ್ನ ತೆಲುಗು ಬಸವಪುರಾಣವೆಂಬ ಚಂಪೂಕಾವ್ಯದಲ್ಲಿ ಪಾಲ್ಕುರಿಕೆ ಸೋಮನಾಥನ ಕೃತಿಗಳನ್ನು ಹೆಸರಿಸಿದ್ದಾನೆ:

ಬಸವಪುರಾಣಂಬು ಪಂಡಿತಾರಾಧ್ಯುಲಚರಿತಂಬುನನುಭವಸಾರಮೆನು ಜ
ತುರ್ವೇದಸಾರಸೂಕ್ತುಲು ಸೋಮನಾಥಭಾಷ್ಯಮ್ಮು ಶ್ರೀರುದ್ರಭಾಷ್ಯಂಬು ಬಸವ
ರಗಡ ಗಂಗೋತ್ಪತ್ತಿರಗಡ ಶ್ರೀ ಬಸವಾಢ್ಯರಗಡಯು ಸದ್ಗುರುರಗಡ ಚೆನ್ನ
ಮಲ್ಲುಸೀಸಮುಲು ನಮಸ್ಕಾರಗದ್ಯ ವೃಷಾಧಿಪಶತಕಂಬುನಕ್ಷರಾಂಕ

ಗದ್ಯಪದ್ಯಮುಲ್ ಪಂಚಪ್ರಕಾರಗದ್ಯ
ಯಷ್ಟಕಮ್ಮು ಪಂಚಕಮುನುದಾಹರಣಯುಗಮು
ನಾದಿಯಗು ಕೃತುಲ್ ಭಕ್ತಿಹಿತಾರ್ಥಬುದ್ಧಿ
ಜೆಪ್ಪಿನವಿ ಭಕ್ತಸಭಲಲೋ ಜೆಲ್ಲುಚುಂಡು

[ಕನ್ನಡ ಸಾಹಿತ್ಯಚರಿತ್ರೆ IV, ಪುಟ ೧೭೩೭]

ಪಾಲ್ಕುರಿಕೆ ಸೋಮನಾಥನ ಕಾಲದೇಶಗಳ ಬಗೆಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ. ಈತನು ಪಾಲಕುರಿಕೆಯಲ್ಲಿನ ಸೋಮೇಶ್ವರಸ್ವಾಮಿಯ ಅರ್ಚಕವಂಶಕ್ಕೆ ಸೇರಿದವನೆಂದೂ ಶಿವಕುಲೀನನೆಂದೂ ಭೃಂಗಿರಿಟಿ ಗೋತ್ರದವನೆಂದೂ ಭಂಡಾರು ತಮ್ಮಯ್ಯನವರು ಹೇಳಿದ್ದಾರೆ. ಪಾಲ್ಕುರಿಕೆ ಸೋಮನಾಥನ ಅನುಭವಸಾರದಲ್ಲಿ:

ಭೃಂಗಿರಿಟಿ ಗೋತ್ರುಡನು ಗುರು
ಲಿಂಗ ತನೂಜುಂಡ ಶಿವಕುಲೀನುಂಡ ದುರ್ವಾ
ಸಂಗ ವಿವರ್ಜಿತ ಚರಿತುಡ
ಜಂಗಮಲಿಂಗಪ್ರಸಾದ ಸತ್ಪ್ರಾಣುಂಡನ್

ಹೀಗೆ ಹೇಳಿಕೊಂಡಿದ್ದಾನೆ. ಪಿಡುಪರ್ತಿ ಸೋಮನಾಥ ಬಸವಪುರಾಣದಲ್ಲಿ:

ಭೃಂಗಿರಿಟಿ ಗೋತ್ರಸಂಭವ
ಜಂಗಮ ಪಾದಾರ್ಚನಾವಿಶಾರದ ವಿಲಸ

ತ್ಸಂಗೀತಶಾಸ್ತ್ರಪಾರಗ
ಗಂಗೋತ್ಪತ್ತಿಪ್ರಕಾರ ಕಾವ್ಯಧುರೀಣಾ
[ಶರಣಸಾಹಿತ್ಯ : ಸಂಪುಟ ೧೫, ಸಂಚಿಕೆ ೧೨, ಪುಟ ೬೭೯]

ಎಂದು ಪಾಲ್ಕುರಿಕೆ ಸೋಮನಾಥನನ್ನು ಸ್ತುತಿಸಿದ್ದಾನೆ. ಹೀಗೆ ವಿದ್ವಾಂಸರಿಂದ ಸ್ತುತಿಸಲ್ಪಟ್ಟ ಸೋಮನಾಥ ನಿಗಮಾಗಮಗಳಲ್ಲಿ ವೇದಾಂಗಗಳಲ್ಲಿ ಮಾತ್ರವಲ್ಲದೆ ಸ್ಮೃತಿ ಪುರಾಣೇತಿಹಾಸ ಸಮಸ್ತಶಾಸ್ತ್ರ—ಇವುಗಳನ್ನು ಸಾಂಗೋಪಾಂಗವಾಗಿ ಅಧ್ಯಯನ ಮಾಡಿದ ವಿದ್ಯಾವಿಶಾರದನಾಗಿದ್ದನು. ಈತನು ಚತುರ್ವೇದಪಾರಂಗತನಾದರೂ ವೇದ ಜಡನೆನಿಸದೆ ಲೌಕಿಕಪ್ರಜ್ಞಾಧುರೀಣನೂ ಎನಿಸಿದ್ದನು. ಪಾಲ್ಕುರಿಕೆ ಸೋಮನಾಥ ಸಂಸ್ಕೃತದಲ್ಲಿಯೂ ಮಾತೃಭಾಷೆಯಾದ ತೆಲುಗಿನಲ್ಲಿಯೂ ಉದ್ದಾಮಪಂಡಿತ. ಆದರೆ ಇತರ ದೇಶಭಾಷೆಗಳಲ್ಲಿ ಉದಾಸೀನಪ್ರವೃತ್ತಿಯನ್ನು ತಾಳಿದವನಲ್ಲ. ಪಾಲ್ಕುರಿಕೆ ಸೋಮನಾಥನ ಆಂಧ್ರಭಾಷಾನೈಪುಣ್ಯಕ್ಕೆ ಆತನ ಬಸವಪುರಾಣ ಪಂಡಿತಾರಾಧ್ಯ ಚರಿತ್ರೆಗಳು ಜ್ವಲಂತ ನಿದರ್ಶನಗಳಾಗಿವೆ. ಈತನ ಪಂಡಿತಾರಾಧ್ಯಚರಿತೆಯನ್ನು ಆಧರಿಸಿ ನೀಲಕಂಠಾಚಾರ್ಯರು ಕನ್ನಡದಲ್ಲಿ ಆರಾಧ್ಯಚಾರಿತ್ರವನ್ನು ಬರೆದಿದ್ದಾನೆ.

## ೩. ಕಥಾಸಾರ

ಆರಾಧ್ಯಚಾರಿತ್ರದಲ್ಲಿ ದೀಕ್ಷಾಪ್ರಕರಣ, ಪುರಾತನಪ್ರಕರಣ, ವಾದಪ್ರಕರಣ, ಮಹಿಮಪ್ರಕರಣ, ಪರ್ವತಪ್ರಕರಣಗಳೆಂಬ ಐದು ಪ್ರಕರಣಗಳಿವೆ. ದೀಕ್ಷಾಪ್ರಕರಣದಲ್ಲಿ ದೈವಸ್ತುತಿ, ಗುರುಸ್ತುತಿ, ಶರಣರ ಸ್ತುತಿಗಳನ್ನು ಮಾಡಿ ತನ್ನ ವಂಶಾನ್ವಯವನ್ನು ವಿಸ್ತಾರವಾಗಿ ನಿರೂಪಿಸಿದ್ದಾನೆ. ಪ್ರಾಚೀನ ಸಂಪ್ರದಾಯದಂತೆ ದುರ್ಜನ ನಿಂದೆಮಾಡಿ ತನ್ನ ಕಾವ್ಯದ ಮೇಲ್ಮೆಯನ್ನು ಸಾರಿದ್ದಾನೆ. ಅನಂತರ ಕಥೆಯನ್ನು ಪ್ರಾರಂಭಿಸುತ್ತಾನೆ.

### (i) ದೀಕ್ಷಾಪ್ರಕರಣ

ಶಿವನು ಭೂಲೋಕದಲ್ಲಿ ಶಿವಭಕ್ತಿಯನ್ನು ವೃದ್ಧಿಗೊಳಿಸಲು ನಂದೀಶ್ವರನನ್ನು ಬಸವ ನಾಮದಿಂದ ಭೂಲೋಕಕ್ಕೆ ಕಳಿಸಿಕೊಡುವ ಸಮಯದಲ್ಲಿ ನಂದೀಶ್ವರನ ಶಿವಭಕ್ತಿಯನ್ನೂ ದೂರ್ವಾಸನ ಶಾಪಶಕ್ತಿಯನ್ನೂ ಭೃಂಗೀಶ್ವರನ ಶ್ರದ್ಧೆಯನ್ನೂ ಗೌತಮನ ವಾಗ್ವೈಖರಿಯನ್ನೂ ರುದ್ರರು ಮತ್ತು ಪ್ರಮಥರುಗಳ ಪ್ರಸಾದಾಸಕ್ತಿಯನ್ನೂ ಉಪಮನ್ಯುವಿನ ಗುರುತ್ವವನ್ನೂ ಪುರಾತನ ನೂತನರ ಮಾಹಾತ್ಮ್ಯವನ್ನೂ ವೀರಭದ್ರನ ಶೂರತೆಯನ್ನೂ ತೆಗೆದುಕೊಂಡು ಒಂದು ಆಕಾರವನ್ನು ಮಾಡಬೇಕೆಂದು ಯೋಚಿಸಲು, ಸಂಕಲ್ಪಮಾತ್ರದಿಂದಲೇ ಸಿದ್ಧವಾಗಿ ಬಂದು ನಮಸ್ಕರಿಸಿ ನಿಂತಿದ್ದ ಮೂರ್ತಿಯನ್ನು ಶಿವನು ನೋಡಿ ವೇದಾದಿ ರಹಸ್ಯವನ್ನೆಲ್ಲಾ ಅದಕ್ಕೆ ಬೋಧಿಸಿ ಬಸವೇಶನಂತೆ ನೀನೂ ಸಹ ಭಕ್ತಪರಿಪಾಲನವನ್ನು ಮಾಡು ಎಂದು ಆಜ್ಞಾಪಿಸಿದನು. ಆಮೇಲೆ "ನಾನೂ ಸಹ ಲೋಕಪೂಜ್ಯವಾದ ದೇಹವನ್ನು ಧರಿಸಿ ಭೂಲೋಕಕ್ಕೆ ಬಂದು ನಿನ್ನನ್ನು ಶಿಷ್ಯನನ್ನಾಗಿ ಸ್ವೀಕರಿಸಿ ಶಿಕ್ಷೆ ರಕ್ಷೆ

ಗಳನ್ನು ಕೊಟ್ಟು ಶಿಷ್ಯಪ್ರಶಿಷ್ಯರ ಸಮೂಹದಿಂದ ಪ್ರಸಿದ್ಧನಾಗುವಂತೆ ಮಾಡುವೆನು. ನಿನಗೆ ಸ್ವಮತಪರಿಪಾಲನದಲ್ಲಿ ಸ್ಥಿರವಾದ ಪ್ರಭಾವವನ್ನುಳ್ಳ ಜಗದ್ಗುರುತ್ವವನ್ನೂ ಪರವಾದವನ್ನು ಖಂಡಿಸುವಲ್ಲಿ ಮಾನುಷಶಕ್ತಿಗೆ ಮೀರಿದ ಪಾಂಡಿತ್ಯವನ್ನೂ ವೀರಶೈವ ಭಕ್ತಿಸ್ಥಲಾಚರಣನಿಷ್ಠೆಯನ್ನೂ ಶಿವಮಾಹಾತ್ಮ್ಯವನ್ನು ಪ್ರತಿಷ್ಠಾಪನಗೊಳಿಸುವಲ್ಲಿ ಅಪಾರವಾಕ್ಸಿದ್ಧಿಯನ್ನೂ ವೇದ ವೇದಾಂತಾದಿಗಳಿಂದ ಸಾಧಿಸಲ್ಪಟ್ಟ ಅತ್ಯಂತ ಉತ್ಕೃಷ್ಟದಿಂದ ಕೂಡಿದ ನನ್ನ ಪ್ರಸಾದದ ಮಹತ್ವವನ್ನು ವಿಸ್ತರಿಸುವ ಬುದ್ಧಿಯನ್ನೂ ಶಿವಜೀವೈಕ್ಯ ಬೋಧಕ ವಿದ್ಯಾಪಾಂಡಿತ್ಯವನ್ನೂ ಪ್ರತ್ಯಕ್ಷಗೋಚರವಾದ ದಶಪ್ರತ್ಯಯ ರೂಪವಾಹಿಮೆಯನ್ನೂ ಶಿವಯೋಗ ಸಂಪತ್ತನ್ನೂ ಶಾಪಾನುಗ್ರಹ ಸಾಮರ್ಥ್ಯವನ್ನೂ ಸ್ರಕ್ಚಂದನವನಿತಾದಿಗಳಲ್ಲಿ ವೈರಾಗ್ಯವನ್ನೂ ಘೋರಸಂಸಾರಸಾಗರವನ್ನೂ ದಾಟಿಸುವ ಬುದ್ಧಿಯನ್ನೂ ನಿನಗೆ ಅನುಗ್ರಹಿಸುವೆನು. ಭೂಮಂಡಲದಲ್ಲಿ ವೆಂಗಿದೇಶಕ್ಕೆ ರತ್ನಪ್ರಾಯದಂತಿರುವ ದ್ರಾಕ್ಷಾರಾಮವೆಂಬ ಪಟ್ಟಣವಿದೆ. ಅಲ್ಲಿ ಭೀಮೇಶ್ವರನೆಂಬ ದೇವನಿದ್ದಾನೆ. ಆ ದೇವರ ಪುರೋಹಿತ ಭೀಮನಪಂಡಿತನೆಂಬ ವಿಪ್ರ. ಆತನು ಪುತ್ರಾರ್ಥಿಯಾಗಿ ನನ್ನನ್ನು ಪೂಜಿಸುತ್ತಿದ್ದಾನೆ. ನೀನು ಮಲ್ಲಿಕಾರ್ಜುನ ಎಂಬ ಹೆಸರಿನಿಂದ ಆತನಿಗೆ ಮಗನಾಗಿ ಹುಟ್ಟು" ಎಂದು ಹೇಳಿದನು. ಅದರಂತೆ ಆ ಮೂರ್ತಿಯು ಭೀಮನಪಂಡಿತನ ಹೆಂಡತಿ ಗೌರಾಂಬಿಕೆ ಎಂಬ ಪರಮಪತಿಭಕ್ತೆಯ ಗರ್ಭದಲ್ಲಿ ಜನಿಸಿ ಮಲ್ಲಿಕಾರ್ಜುನನೆಂಬ ನಾಮವನ್ನು ತಳೆದು ದ್ರಾಕ್ಷಾರಾಮದಲ್ಲಿ ಪ್ರಕಾಶಿಸುತ್ತ ಕೋಟಿಪಲ್ಯಾರಾಧ್ಯ ದೇಶಿಕರ ಕೃಪೆಯನ್ನು ಪಡೆದನು. ಆ ಗುರುಗಳ ಹಸ್ತಸಂಯೋಗದಿಂದ ಭಾವಶುದ್ಧನಾಗುತ್ತ ಸದಾ ಗುರುಸೇವೆಯನ್ನು ಮಾಡುತ್ತಿದ್ದನು. ಹೀಗಿರಲು ಪಂಡಿತಾರಾಧ್ಯರ ವೀರಶೈವಭಕ್ತಿ ಸ್ಥಲಾಚರಣೆಯನ್ನು ಕಂಡು ಬ್ರಾಹ್ಮಣರು ಮತ್ತು ಇತರರು ಸೈರಿಸಲಾರದೆ ಕೋಪಗೊಂಡರು. ಅವರೆಲ್ಲರೂ ಒಂದುದಿನ ಪಂಡಿತಾರಾಧ್ಯರನ್ನು ಕುರಿತು "ಎಲೈ ಪಂಡಿತಾರಾಧ್ಯನೆ ನೀನಾದರೋ ಸದ್ಬ್ರಾಹ್ಮಣ. ನೀನು ವೇದೋಕ್ತಮಾರ್ಗವನ್ನು ಬಿಟ್ಟು ವಿಭೂತಿ ರುದ್ರಾಕ್ಷಿಗಳನ್ನು ಧರಿಸಿ ಹರಪಾದ ತೀರ್ಥಪ್ರಸಾದಗಳನ್ನು ಕೊಳ್ಳುವುದು ಉಚಿತವೇ" ಎಂದು ಪ್ರಶ್ನಿಸಿದರು. ಅದನ್ನು ಕೇಳಿ ದರಹಸಿತವದನನಾದ ಪಂಡಿತಾರಾಧ್ಯ "ಎಲೈ ವಿಪ್ರರಿರ, ಯಜುಶ್ಶಾಖೆ ಭಸಿತದಿಂದ ತ್ರಿಪುಂಡ್ರವನ್ನು ಮಾಡುತ್ತದೆಂದು ಹೇಳುತ್ತದೆ. ಅಲ್ಲದೆ ಹಣೆಯೊಳಗೆ ವಿಭೂತಿಯನ್ನು ಧರಿಸಿದವನೇ ಬ್ರಾಹ್ಮಣೋತ್ತಮ ಎಂದು ಶ್ರುತಿ ಸಾರಿದೆ. ಅಥರ್ವಣವೇದವಾದರೊ ಅಗ್ನಿರಿತ್ಯಾದಿ ಮಂತ್ರಗಳಿಂದ ವಿಭೂತಿಯನ್ನು ಶುದ್ಧಮಾಡಿ ಯೋಗ್ಯವಾದ ಸ್ಥಾನಗಳಲ್ಲಿ ಧರಿಸಬೇಕೆಂದು ತಿಳಿಸುತ್ತಿದೆ. ಅಗ್ನಿಯಿಂದ ಹುಟ್ಟಿದ ಭೂತಿಯನ್ನು ದೇಹದ ಮೇಲೆಲ್ಲ ಉದ್ಧೂಳಿಸಿಕೊಂಡು ಹಣೆ ಎದೆ ತೋಳುಗಳ ಮೇಲೆ ಧರಿಸಿಕೊಳ್ಳಬೇಕೆಂದು ಮಾನವ ಪುರಾಣ ಸಾರುತ್ತಿದೆ. ಜಮದಗ್ನಿ ಕಶ್ಯಪ ಅಗಸ್ತ್ಯ–ಇವರೇ ಮೊದಲಾದ ದೇವತೆಗಳು ಮುನಿಗಳು ಅಗ್ನಿಯಿಂದ ಹುಟ್ಟಿದ ಭಸ್ಮವನ್ನು ಧರಿಸಿ ತ್ರಿಯಾಯುಷರಾದರು. ಕಾತ್ಯಾಯನಸ್ಮೃತಿ ಸಹ ಇದನ್ನೇ ಸಾರುತ್ತಿದೆ. ಭೀಮಾಗಮವೂ ಭಸಿತೋದ್ಧೂಳನದಿಂದ ಅತ್ಯಧಿಕ ಫಲಪ್ರಾಪ್ತಿಯಾಗುವುದೆಂದು ಹೇಳುತ್ತಿದೆ. ಶಾತಾತಪಸ್ಮೃತಿ ವಿಭೂತಿಯನು

ಧರಿಸಿ ಮೃತ್ಯುವನ್ನು ಗೆಲ್ಲಬಹುದೆಂದು ತಿಳಿಸುತ್ತಿದೆ. ಆದುದರಿಂದ ವಿಬುಧನಾದ ಬ್ರಾಹ್ಮಣ ವಿಭೂತಿಯನ್ನು ಧರಿಸಬೇಕು. "ತ್ರಿಪುಂಡ್ರಂ ಬ್ರಾಹ್ಮಣೋ" ಎಂದು ಕೂರ್ಮಪುರಾಣ ಉಲಿಯುತ್ತಿದೆ. ವಿಭೂತಿಧಾರಣದಿಂದ ಪುನರ್ಜನ್ಮವಿಲ್ಲದಂತಾಗುತ್ತದೆ. ಬ್ರಹ್ಮ ಹಣೆಯಲ್ಲಿ ಬರೆದ ದುರ್ಲಿಪಿಯನ್ನು ಒರೆಸಿ ಮುಕ್ತಿದಾಯಕವಾದ ಭಸಿತವನ್ನು ಧರಿಸುವುದು ಅತ್ಯಂತ ಯೋಗ್ಯ ಎಂದು ಸ್ಕಂದಸೂಕ್ತಿ ಸಾರುತ್ತಿದೆ. ಹಣೆಯಲ್ಲಿ ವಿಭೂತಿಯನ್ನು ಧರಿಸಿದ ಬ್ರಾಹ್ಮಣ ಓದಿದ್ದು, ಕೇಳಿದ್ದು, ಆಚರಿಸಿದ್ದು ಪವಿತ್ರವಾಗುತ್ತದೆ. ಸುರರು, ಬ್ರಾಹ್ಮಣರು, ವೈಶ್ಯರು, ಶೂದ್ರರು—ಎಲ್ಲರೂ ವಿಭೂತಿಧಾರಣೆ ಮಾಡಬೇಕೆಂಬ ಪುರಾಣೋಕ್ತಿ ಇದೆ. ಬ್ರಹ್ಮ ಮಾನವರನ್ನು ಸೃಷ್ಟಿಸುವ ಕಾಲದಲ್ಲಿ ವಿಭೂತಿ ಧಾರಣಕ್ಕಾಗಿಯೇ ಅವರ ಹಣೆಯನ್ನು ಅಗಲವಾಗಿ ಮಾಡಿದನೇ ಹೊರತು ಉದ್ದವಾಗಿ ಮಾಡಿಲ್ಲ. ಕುತ್ತಿಗೆಯಲ್ಲಿ, ಹಣೆಯಲ್ಲಿ, ಶಿರಸ್ಸಿನಲ್ಲಿ ವಿಭೂತಿಯನ್ನು ಧರಿಸಿದವನು ಪಾಪಸಮೂಹಕ್ಕೆ ಅಗ್ನಿಯಂತೆ ಇರುತ್ತಾನೆ ಎಂದು ಜಾಬಾಲೋಪನಿಷತ್ತು ಸಾರುತ್ತಿದೆ. ಅನಂತ ಪಾಪಗಳನ್ನು ಮಾಡಿದವನು ಸಹ ವಿಭೂತಿಯನ್ನು ಧರಿಸಿಕೊಂಡು ವಿಭೂತಿಯ ಹಾಸಿಗೆಯಲ್ಲಿ ಮಲಗಿ ರುದ್ರನನ್ನು ಧ್ಯಾನಮಾಡಿದರೆ ಆತನ ಪಾಪಗಳೆಲ್ಲ ನಾಶವಾಗುತ್ತವೆ. ವಿಭೂತಿಯನ್ನು ಧರಿಸದೆ ಮಾಡಿದ ಬ್ರಾಹ್ಮಣನ ಯಾಗಗಳೆಲ್ಲ ಕೆಟ್ಟುಹೋಗುತ್ತವೆ. ಅವನು ಓದಿದ ವೇದವೆಲ್ಲ ವ್ಯರ್ಥವಾಗುತ್ತದೆ. ಭಸ್ಮಕ್ಕೆ ಬದಲಾಗಿ ಗೋಪೀಮಲಿನವನ್ನು ಧರಿಸಿಕೊಂಡವರು ಅಖಿಳ ನರಕಕ್ಕೆ ಹೋಗುತ್ತಾರೆ. ಮುನಿಗಳೂ ಬ್ರಹ್ಮಾದಿಗಳೂ ಭಸಿತವನ್ನು ಧರಿಸುವುದರಿಂದ ಅಧಿಕಾರ ಫಲಪ್ರಾಪ್ತಿ ಉಂಟೆಂದು ಸೂತಸಂಹಿತೆ ಸಾರುತ್ತಿದೆ. ಭಸ್ಮಧಾರಣದಿಂದ ಸರ್ವಪಾಪ ನಿವಾರಣೆಯಾಗುವುದೆಂದು ಭವಿಷ್ಯತ್ಪುರಾಣ ಹೇಳುತ್ತಿದೆ. ಭಸಿತವನ್ನು ಎಡದ ಕೈಯಲ್ಲಿ ಹಿಡಿದುಕೊಂಡು ಬಲದ ಕೈಯಿಂದ ಧಾರಣೆ ಮಾಡಿಕೊಳ್ಳಬೇಕೆಂದು ಕಾರಣಾಗಮ ನಿರೂಪಿಸುತ್ತಿದೆ. ಆದುದರಿಂದ ವೇದ ಸ್ಮೃತಿ ಪುರಾಣ ಇತಿಹಾಸ ಮನುವಾಕ್ಯ—ಇವೆಲ್ಲಾ ಬ್ರಾಹ್ಮಣರು ವಿಭೂತಿಯನ್ನು ಧರಿಸಲೇಬೇಕೆಂದು ಸಾರಿ ಹೇಳುತ್ತಿವೆ. ಊರ್ಧ್ವಪುಂಡ್ರವನ್ನು ಗುಂಡಾಗಿ ಬಾಲಚಂದ್ರಾಕಾರವಾಗಿ ಶೂಲಾಕೃತಿಯಾಗಿ ಬಟ್ಟೆನಾಕಾರವಾಗಿ ಹಣೆಯಲ್ಲಿ ಧರಿಸಿದವನು ಧರ್ಮಬಾಹಿರನೂ ಪಾಪಿಷ್ಠನೂ ಆಗುವನೆಂದು ಪ್ರಾಚೀನೋಕ್ತಿ ಸಾರುತ್ತಿದೆ. ಊರ್ಧ್ವಪುಂಡ್ರವನ್ನು ಪಾಷಂಡಿಗಳು ಧರಿಸುವರು; ಆದರೆ ಪರಮ ವೈದಿಕನಾದ ಬ್ರಾಹ್ಮಣ ಅದನ್ನು ಧರಿಸಬಾರದೆಂದು ಸೂತಸಂಹಿತೆ ಸಾರುತ್ತಿದೆ. ಮಾನವ ಪುರಾಣವಾದರೋ ಅರ್ಧಚಂದ್ರಾಕೃತಿಯಲ್ಲಿ ತ್ರಿಶೂಲದಾಕಾರದಲ್ಲಿ ಗುಂಡಾಕಾರದಲ್ಲಿ ತಂತ್ರನಿಷ್ಠರಿಂದಲೂ ವೇದಜ್ಞರಿಂದಲೂ ಧರಿಸತಕ್ಕುದಲ್ಲವೆಂದು ಹೇಳುತ್ತಿದೆ. ಊರ್ಧ್ವಪುಂಡ್ರವನ್ನು ಧರಿಸಿದ ಬ್ರಾಹ್ಮಣನ ಮುಖವನ್ನು ನೋಡಿದವನು ಆ ದೋಷನಿವಾರಣಾರ್ಥವಾಗಿ ಚಾಂದ್ರಾಯಣ ಎಂಬ ವ್ರತವನ್ನು ಮಾಡಬೇಕು ಎಂದು ಮನುವಾಕ್ಯ ತಿಳಿಸುತ್ತಿದೆ. ಊರ್ಧ್ವಪುಂಡ್ರವನ್ನು ಧರಿಸಿದ ಶ್ರುತಿಬಾಹ್ಯರಾದ ಪಾಷಂಡ ದರ್ಶನದವರ ಮುಖವನ್ನು ಕಂಡವನಿಗೆ ದೋಷ ಉಂಟಾಗುತ್ತದೆ. ಅದಕ್ಕೆ ಪರಿಹಾರಾರ್ಥವಾಗಿ ಪಂಚಾಕ್ಷರಿ ಮಂತ್ರವನ್ನು ಜಪಿಸುತ್ತ ಭಸಿತವನ್ನು ಧರಿಸಿಕೊಳ್ಳಬೇಕು ಎಂದು ಶ್ರುತಿವಾಕ್ಯ ಹೇಳುತ್ತಿದೆ.

ತನ್ನ ಅಂಗಗಳಲ್ಲಿ ದೇವತಾಯುಧ ಲಾಂಛನಗಳನ್ನು ಮಾಡಿಸಿಕೊಂಡ ಬ್ರಾಹ್ಮಣನು ಪತಿತನಾಗುತ್ತಾನೆ ಎಂದು ಶಾತಾತಪಸ್ಮೃತಿ ಘೋಷಿಸುತ್ತಿದೆ. ಕಾಸಿದ ಲೋಹ ದಿಂದ ದೇಹವನ್ನು ಗುರುತಿಸಬಾರದು ಸುಡಬಾರದು. ಹೀಗೆ ಮಾಡಿಕೊಂಡವನು ಶ್ರೇಷ್ಠ ದ್ವಿಜನ ತೆರದೆ ಶ್ರುತಿಯುಕ್ತವಾದ ಕರ್ಮಗಳಲ್ಲಿ ಯೋಗ್ಯತೆಯನ್ನು ಪಡೆಯುವುದಿಲ್ಲ ಎಂದು ಬೋಧಾಯನ ಸ್ಮೃತಿಯಲ್ಲಿ ಹೇಳಿದೆ. ಇದನ್ನೇ ಗೌತಮಸ್ಮೃತಿಯೂ ತಿಳಿಸು ತ್ತಿದೆ. ವಿಪ್ರನು ದೇವತಾಯುಧ ಮುದ್ರೆಗಳಿಂದ ಸುಡಿಸಿಕೊಳ್ಳಲಾಗದು ಎಂದು ಯಮ ಸ್ಮೃತಿ ಹೇಳುತ್ತಿದೆ. ತನ್ನ ದೇಹದಲ್ಲಾಗಲಿ ಇತರರ ದೇಹದಲ್ಲಾಗಲಿ ಶಂಖಚಕ್ರವೆಂಬ ಮುದ್ರೆಗಳನ್ನು ಹಾಕಿಸಿಕೊಳ್ಳುವವನು ಅತ್ಯಂತ ಪಾತಕಿ ಎಂದು ಸೂತಸಂಹಿತೆಯಲ್ಲಿ ಹೇಳಿದೆ. ಈ ಶಂಖಚಕ್ರಾಂಕಿತರನ್ನು ರಾಜನು ದೇಶದಿಂದ ಹೊರದೂಡಬೇಕೆಂದು ಪಾರಾ ಶರೋಕ್ತಿ ನಿರೂಪಿಸುತ್ತಿದೆ. ದೇವತಾಯುಧ ಲಾಂಛಿತರನ್ನು ಮುಟ್ಟಬಾರದು ನೋಡ ಬಾರದು ನುಡಿಸಬಾರದು. ಅಂಥವರನ್ನು ರಾಜರು ತಮ್ಮ ದೇಶದಿಂದ ಹೊರಗೆ ಕಳಿಸ ಬೇಕು. ಇದು ಯೋಗ್ಯವಾದುದೆಂದು ಮಾನವಪುರಾಣ ಹೇಳಿದೆ. ಸುಡಿಸಿಕೊಂಡ ಚಿಹ್ನೆ ಗಳನ್ನು ಹೊಂದಿರುವ ಮಂದಮತಿಯಾದ ವಿಪ್ರನು ಯಾವ ಕಾರ್ಯಕ್ಕಾಗಲಿ ಅನರ್ಹನೂ ನಿಂದಿತನೂ ಆಗುವನೆಂದು ಯಜ್ಞವೈಭವಕಾಂಡದಲ್ಲಿ ಹೇಳಿದೆ. ಶಂಖಚಕ್ರಮುದ್ರೆ ಊರ್ಧ್ವಪುಂಡ್ರ ಧರಿಸಿದವರನ್ನು ಮುಟ್ಟಬಾರದು ನೋಡಬಾರದು ಎಂದು ಶ್ರುತಿ ಪುರಾಣ ಇತಿಹಾಸಗಳು ಘೋಷಿಸುತ್ತಿವೆ. ಆದುದರಿಂದ ಭಸಿತವನ್ನು ತಾಳಿದವನೇ ಸತ್ಕುಲಜ ಪುಣ್ಯಶಾಲಿ. ಭಸಿತವನ್ನು ತನುವಿನಲ್ಲಿ ಲೇಪನಮಾಡಿಕೊಂಡವನು ಮೋಕ್ಷಹೊಂದುವನು.

ರುದ್ರಾಕ್ಷ ಧಾರಣವು ಈಶ್ವರಾಂಶದವನಿಗೆ ಪ್ರಾಪ್ತವಾಗುತ್ತದೆ. ವೇದಪುರಾಣಗಳಲ್ಲಿ ಇದರ ನಿರೂಪಣೆ ಇಂತಿದೆ. ಬೋಧಾಯನೋಕ್ತಿಯು 'ವೇದಾ ಧಾರಯಂತಿ' ಎಂದು ಸಾರಿದೆ. ಮಾಡಬಾರದ ಕರ್ಮಗಳನ್ನು ಮಾಡಿ ನಿಂದೆಗೆ ಒಳಗಾದವರೂ ರುದ್ರಾಕ್ಷಿಯನ್ನು ಶಿರದಲ್ಲಿ ಯಾವಾಗಲೂ ಧರಿಸಿದ್ದರೆ ಶುದ್ಧಾತ್ಮರಾಗುವರೆಂದು ಲಿಂಗಪುರಾಣ ಸಾರುತ್ತಿದೆ. ತ್ರಿಪುಂಡ್ರ ರುದ್ರಾಕ್ಷಿಗಳನ್ನು ಧರಿಸಿದ ಬ್ರಾಹ್ಮಣ ಶ್ರಾದ್ಧದಲ್ಲಿ ಕುಳಿತರೆ ಅದಕ್ಕೆ ಪುಣ್ಯ ಬರುತ್ತದೆ; ದೇವತೆಗಳಿಂದಲೂ ವಿಪ್ರರಿಂದಲೂ ಅವನು ಪೂಜ್ಯನಾಗುತ್ತಾನೆ ಎಂದು ಮತ್ಸ್ಯಪುರಾಣ ಹೇಳಿದೆ. ಇದೇ ಅಂಶ ಮಾನವ ಪುರಾಣದಲ್ಲೂ ಉಕ್ತವಾಗಿದೆ. ಸ್ನಾನ ಜಪ ದೇವಾರ್ಚನೆ ಮೊದಲಾದ ಸಂದರ್ಭಗಳಲ್ಲಿ ರುದ್ರಾಕ್ಷಿಯನ್ನು ಧರಿಸಿದ ಭೂಸುರ ಕೀರ್ತಿವಂತನಾಗುವನೆಂದು ಕೂರ್ಮಪುರಾಣ ಹೇಳಿದೆ. ಮಣ್ಣಿನಿಂದ ರುದ್ರಾಕ್ಷಿಯನ್ನು ಮಾಡಿ ಅದನ್ನು ಕೊರಳಿನಲ್ಲಿ ಧರಿಸಿದವನು ಪಾಪಕರ್ಮಿಯಾದರೂ ಸದ್ಗತಿಯನ್ನು ಪಡೆಯುತ್ತಾನೆ ಎಂದು ಪುರಾಣದಲ್ಲಿ ಉಕ್ತವಾಗಿದೆ. ಸಂಧ್ಯಾವಂದನೆ ಯಜ್ಞ ಶ್ರಾದ್ಧ ಸುರಪೂಜೆ ಮುಂತಾದ ಕರ್ಮಗಳಲ್ಲಿ ರುದ್ರಾಕ್ಷಿಯನ್ನು ಧರಿಸುವುದು ಬ್ರಾಹ್ಮಣನಿಗೆ ಯೋಗ್ಯವಾದುದು. ಕೊರಳಿನಲ್ಲಿ ರುದ್ರಾಕ್ಷಿಯನ್ನು ಧರಿಸಿದ್ದ ನಾಯಿ ಸತ್ತು ರುದ್ರತ್ವ ವನ್ನು ಪಡೆಯಿತು. ರುದ್ರಾಕ್ಷಿಯನ್ನು ಭಕ್ತಿಯಿಂದ ಧರಿಸಿದವನು ಶಿವನಂತೆ ಪ್ರಕಾಶಿಸು ತ್ತಾನೆ. ಅಗ್ನಿ ಗಾಯತ್ರಿ ಪ್ರಣವ ಅಚ್ಯುತರು ಭಸಿತ ರುದ್ರಾಕ್ಷಿಗಳನ್ನು ಕಾಯದಲ್ಲಿ

ಧರಿಸಿ ಹೇಗೆ ಮೆರೆದರು ಎಂಬುದನ್ನು ವಿಪ್ರರಿಗೆ ತಿಳಿಸಿದನು. ತ್ರಿಪುಂಡ್ರ ರುದ್ರಾಕ್ಷಿಗಳನ್ನು ಧರಿಸಿ ಬಲದ ಕೈಯಲ್ಲಿ ಕಮಂಡಲವನ್ನು ಹಿಡಿದು ಅಗ್ನಿ ಪರಶಿವನ ಪಾದಸೇವೆಯನ್ನು ಮಾಡುತ್ತಿದ್ದಾನೆ ಎಂದು ಶ್ರುತಿ ಸಾರುತ್ತಿದೆ. ಗಾಯತ್ರಿ ರುದ್ರಾಕ್ಷಿ ಜಟಾಮಂಡಲ ಅಕ್ಷಮಾಲೆ ತ್ರಿಪುಂಡ್ರಗಳನ್ನು ಹೊಂದಿ ಋಗ್ ಯಜುಸ್ ಸಾಮರೂಪದಿಂದ ಶಿವನ ಚರಣ ಸೇವೆಯನ್ನು ಮಾಡುತ್ತಿದೆ. ಪ್ರಣವವಾದರೋ ಜಡೆ ರುದ್ರಾಕ್ಷಿ ಭಸಿತ ಕಮಂಡಲ ಕೃಷ್ಣಾಜಿನ ಮತ್ತು ಗದಂಡದಿಂದ ಶೋಭಿಸುತ್ತ ಶಿವನನ್ನು ಓಲೈಸುತ್ತಿದೆ. ಜಡೆಮುಡಿ ಭಸ್ಮತ್ರಿಪುಂಡ್ರ ರುದ್ರಾಕ್ಷಿಮಾಲೆಗಳಿಂದ ವಿಷ್ಣು ಅಭವನನ್ನು ಪೂಜಿಸುತ್ತ ಸುಖದಿಂದಿದ್ದಾನೆ. ವೇದವ್ಯಾಸ, ಸ್ವಾಯಂಭು, ಪರಮೇಷ್ಠಿ, ವಿಷ್ಣು, ದೇವೇಂದ್ರ, ವೇದಪುರುಷ, ಪ್ರಣವ, ವೀತಿಹೋತ್ರ, ವಷಡ್ದೇವತೆಗಳೇ ಮೊದಲಾದವರು ಸದಾ ಸಂತೋಷದಿಂದ ವಿಭೂತಿ ರುದ್ರಾಕ್ಷಿಗಳನ್ನು ಧರಿಸುವರೆಂದು ಶ್ರುತಿಸ್ಮೃತಿ ಪುರಾಣ ಇತಿಹಾಸಗಳು ಸಾರುತ್ತಿವೆ. ಆದುದರಿಂದ ವಿಭೂತಿಯನ್ನು ಯಾವಾಗಲೂ ಧರಿಸಬೇಕು.

ಹರನ ಪಾದೋದಕ ಈಶ್ವರ ಪೂಜೆ ಇವೆರಡೂ ವಿಪ್ರರಿಗೆ ಯೋಗ್ಯವೆಂದು ಪಂಡಿತಾರಾಧ್ಯರು ಬೋಧಿಸಿದರು. ಶಿವನನ್ನು ಶ್ರೀರುದ್ರಮಂತ್ರಗಳಿಂದ ಅಭಿಷೇಕ ಮಾಡಿ ಆ ತೀರ್ಥವನ್ನು ಸ್ವೀಕರಿಸಬೇಕು. ಶಿವಚರಣವನ್ನು ತೊಳೆದ ತೀರ್ಥವನ್ನು ಶಂಖದಲ್ಲಿ ತುಂಬಿಕೊಂಡು ಅದಕ್ಕೆ ಷೋಡಶೋಪಚಾರವನ್ನು ಮಾಡಿ ತೆಗೆದುಕೊಳ್ಳಬೇಕು ಎಂದು ಜಾಬಾಲಶಾಖೆ ಹೇಳುತ್ತಿದೆ. ಯಜುರ್ವೇದವೂ ಇದನ್ನೇ ಸಾರುತ್ತಿದೆ. ಶಿವಪುರಾಣವಾದರೋ ಭವಪಾಶವನ್ನು ನಿರ್ಮೂಲಮಾಡುವ ಮಹಾದೇವನ ಪಾದೋದಕವನ್ನು ಪ್ರಮಥನಾಯಕರು ಪಾಣಿತಳದಿಂದ ತೆಗೆದುಕೊಳ್ಳಬೇಕೆಂದು ಹೇಳುತ್ತಿದೆ. ಈ ಪರಶಿವನ ಪಾದೋದಕ ಅಶುದ್ಧವೆಂದು ಯಾರು ಆಚಮನವನ್ನು ಮಾಡುತ್ತಾರೋ ಅವರು ಬ್ರಹ್ಮಹತ್ಯಾಕಾರಿಗಳೆಂದು ಅದೇ ಶಿವಪುರಾಣ ಸಾರುತ್ತಿದೆ. ಕುರುಕ್ಷೇತ್ರ ನೈಮಿಷಾರಣ್ಯ ನದೀನದ ಪುಣ್ಯತೀರ್ಥಂಗಳೆಲ್ಲ ಶಿವನ ಪಾದತೀರ್ಥಕ್ಕೆ ಸದೃಶವಾಗಲಾರವು ಎಂದು ಬ್ರಹ್ಮಾಂಡಪುರಾಣ ಹೇಳುತ್ತದೆ. ಹರನ ಪಾದೋದಕ ಪಾಪಗಳನ್ನು ನಾಶಮಾಡುತ್ತದೆ, ಸರ್ವರೋಗಗಳನ್ನು ನಿವಾರಿಸುತ್ತದೆ, ದುರ್ವ್ಯಾಪಾರಗಳನ್ನು ತೊಡೆದುಹಾಕುತ್ತದೆ. ಈ ಪಾದೋದಕವನ್ನು ಕೊಂಡವನು ಪುನೀತನಾಗುತ್ತಾನೆ. ಯಾವನು ಶಿವನ ಪಾದಾಂಬುವನ್ನು ಶಿರಸ್ಸಿನಲ್ಲಿ ಧರಿಸುವನೋ ಅವನು ಸರ್ವಶ್ರೇಷ್ಠನಾಗುವನು. ಶಿವನ ಪಾದತೀರ್ಥವನ್ನು ಪಾನಮಾಡಿದವನು ಪಾವನವಾಗುವುದಷ್ಟೇ ಅಲ್ಲದೆ ಅವನ ಇಪ್ಪತ್ತೊಂದು ಕುಲ ಮುಕ್ತಿಯನ್ನು ಪಡೆಯುತ್ತದೆ ಎಂದು ಜಾಬಾಲಶಾಖೆ ಹೇಳುತ್ತಿದೆ. ಶಿವನ ಪಾದಾಂಬುವನ್ನು ಧರಿಸಿದವನು ಸೂತಕ ಪ್ರೇತಕ ಆಶೌಚಗಳಲ್ಲಿ ವರ್ತಿಸುತ್ತಿದ್ದರೂ ಶುದ್ಧಾತ್ಮನಾಗುವನು ಎಂದು ಆರ್ಯೋಕ್ತಿ ಘೋಷಿಸುತ್ತಿದೆ. ಹರನ ಪಾದಾಂಬುವನ್ನು ಧರಿಸುವುದರಿಂದ ಸರ್ವರೋಗಗಳೂ ದುರ್ಗ್ರಹಗಳೂ ಉತ್ಪಾತಗಳೂ ನಾಶವಾಗುತ್ತವೆ. ಇಷ್ಟಾರ್ಥಗಳು ನೆರವೇರುತ್ತವೆ. ಎಲ್ಲಾ ಶ್ರುತಿಸ್ಮೃತಿ ಪುರಾಣ ಇತಿಹಾಸಗಳು ಶಿವನ ಪಾದೋದಕವು ವಿಪ್ರರಿಗೆ ಯೋಗ್ಯವೆಂದು ಸಾರುತ್ತಿವೆ.

ಲಿಂಗಾರ್ಚನಾವಿಧಿಯನ್ನು ಪಂಡಿತಾರಾಧ್ಯರು ವಿಪ್ರರಿಗೆ ಹೀಗೆ ಹೇಳಿದರು. ದಾನ ಅರ್ಚನೆ ಧಾರಣೆಗಳನ್ನು ಶ್ರೌತ ಸ್ಮಾರ್ತಗಳು ಹೇಳುತ್ತಿವೆ. ಹರಿಹರಬ್ರಹ್ಮ ಮನು ಮುನಿಗಳು ಶಿವನನ್ನು ಪೂಜಿಸಿ ಸಂಸಾರಸಾಗರವನ್ನು ದಾಟಿದರು. ದೇವತೆಗಳು ಶಿವ ಲಿಂಗಮೂರ್ತಿಯನ್ನು ಪೂಜಿಸಿ ಸುಖದಿಂದಿರುವರೆಂದು ಯಜುರ್ವೇದ ಸಾರುತ್ತಿದೆ. ವಿಷ್ಣು ಇಂದ್ರನೀಲಮಯಲಿಂಗವನ್ನು ಪೂಜಿಸಿ ವಿಷ್ಣುತ್ವವನ್ನು ಪಡೆದನು. ಯಜು ರ್ವೇದ ಋಗ್ವೇದಗಳು ಶಿವನನ್ನು ಪೂಜಿಸಿ ಮೃತ್ಯುವನ್ನು ಗೆಲ್ಲಬಹುದೆಂದು ಹೇಳುತ್ತಿವೆ. ಯಾರು ವಿಭೂತಿಯನ್ನು ಧರಿಸಿಕೊಂಡು ಶಿವನನ್ನು ಪೂಜಿಸುತ್ತಾರೋ ಅವರು ಭವಸಾಗರವನ್ನು ದಾಟಿದಂತೆಯೇ. ಶಿವನ ಶಿರದಲ್ಲಿ ಒಂದು ಪುಷ್ಪವನ್ನಿಟ್ಟು ಪೂಜಿಸಿದರೆ ಅನಂತ ಫಲಗಳು ಪ್ರಾಪ್ತವಾಗುತ್ತವೆ. ಶಿವಪೂಜಾಸಮಯದಲ್ಲಿ ಹೂವು ಇಲ್ಲದಿರಲು ತನ್ನ ಬೆಳತಿಗೆಗಣ್ಣನ್ನು ಕಿತ್ತು ಶಿವನಿಗೆ ಅರ್ಪಿಸಿದ ವಿಷ್ಣು ಪುಂಡರೀಕಾಕ್ಷನೆನಿಸಿಕೊಂಡನು. ಬ್ರಹ್ಮನಾದರೋ ದ್ರೋಣಪುಷ್ಪಗಳಿಂದ ಬ್ರಹ್ಮೇಶ್ವರನನ್ನು ಪೂಜಿಸಿ ಬ್ರಹ್ಮಪದವಿಯನ್ನು ಪಡೆದನು. ಕೈಯಿಂದ ಜಾರಿಬಿದ್ದ ಪುಷ್ಪವನ್ನು ಶಿವನಿಗೆ ಎಂದ ಮಾತ್ರದಿಂದಲೇ ಶ್ವೇತನಿಗೆ ಇಂದ್ರಪದವಿ ಪ್ರಾಪ್ತವಾಯಿತು. ಅರ್ಕನಾದರೋ ಅರ್ಕಪುಷ್ಪದಿಂದ ಪೂಜಿಸಿ ಅರ್ಕ ಪದವಿಯನ್ನು ಪಡೆದನು. ಲಕ್ಷ್ಮೀದೇವಿ ವೃಕ್ಷಪತ್ರದಿಂದ ಶಂಕರನನ್ನು ಪೂಜಿಸಿ ಸಂವರ ಸ್ತ್ರೀತ್ವವನ್ನು ಪಡೆದಳು. ಶಿವನ ಶಿರದಲ್ಲಿಟ್ಟ ಒಂದು ಕುಸುಮಕ್ಕೆ ಹೇಮಾದ್ರಿಯಷ್ಟು ಧನ ಕೋಟಿಗೋದಾನ ಸಮವಾಗುವುದಿಲ್ಲ ಎಂದು 'ಗಾವಾಂ ಕೋಟಿ ಪ್ರದಾನೇನ' ಎಂಬ ವಾಕ್ಯ ಘೋಷಿಸುತ್ತಿದೆ.

ಪಂಡಿತಾರಾಧ್ಯರು ವಿಪ್ರರಿಗೆ ಶಿವಲಿಂಗಧಾರಣ ವಿಧಾನವನ್ನು ಹೀಗೆ ಹೇಳಿದರು. ಋಗ್ವೇದ ಯಜುರ್ವೇದ ಶ್ರುತಿಪುರಾಣಗಳು ಶ್ರೀರುದ್ರವನ್ನು ಸದಾ ಘೋಷಿಸು ತ್ತಿವೆ. ಈಶ್ವರನ ಮೂರ್ತಿಯನ್ನು ಅಂಗದಲ್ಲಿ ಧರಿಸಿದವನು ಸಂಸಾರ ಸಾಗರವನ್ನು ದಾಟಿ ದವನೂ ಪಾಪಪರಿಹಾರ ಮಾಡಿಕೊಂಡವನೂ ಪುನರ್ಜನ್ಮವನ್ನು ನೀಗಿದವನೂ ಆಗು ತ್ತಾನೆ. ವಿಷ್ಣುತ್ವವನ್ನು ಪಡೆಯುತ್ತಾನೆ. ಬ್ರಹ್ಮ ಶೈಲಮಯಲಿಂಗವನ್ನು ಪೂಜಿಸಿ ಬ್ರಹ್ಮತ್ವವನ್ನೂ ಇಂದ್ರ ರತ್ನನಿರ್ಮಿತಲಿಂಗವನ್ನು ಪೂಜಿಸಿ ದೇವೇಂದ್ರಪದವಿಯನ್ನೂ ಕುಬೇರ ಹೇಮಮಯಲಿಂಗವನ್ನು ಪೂಜಿಸಿ ಧನದತ್ವವನ್ನೂ ವಾಯು ಆರಕೂಟ ಮಯಲಿಂಗವನ್ನು ಪೂಜಿಸಿ ವಾಯುತ್ವವನ್ನೂ ಪಡೆದರು. ವಿಶ್ವೇದೇವತೆಗಳು ರೌಪ್ಯ ಲಿಂಗವನ್ನು ಧರಿಸಿ ದೇವತ್ವವನ್ನೂ ವಸುಗಳು ಕಂಚಿನಲಿಂಗವನ್ನು ಪೂಜಿಸಿ ವಸುಪದವಿ ಯನ್ನೂ ಹೊಂದಿದರು. ಅಶ್ವಿನೀದೇವತೆಗಳು ಮೃತ್ತಿನಿಂದ ಲಿಂಗಾಕೃತಿಯನ್ನು ಮಾಡಿ ಪೂಜಿಸಿ ಆ ಪದವಿಯನ್ನೂ ವರುಣ ಸ್ಫಟಿಕದ ಲಿಂಗವನ್ನು ಪೂಜಿಸಿ ವರುಣಪದವಿಯನ್ನೂ ಗಳಿಸಿದರು. ಅಗ್ನಿ ಅನ್ನಮಯಲಿಂಗವನ್ನು ಮಾಡಿ ಅಗ್ನಿತ್ವವನ್ನೂ ಯಮ ದಾರುವಿನಿಂದ ಲಿಂಗಾಕಾರವನ್ನು ಮಾಡಿ ಪೂಜಿಸಿ ನಿರುತಿಯನ್ನೂ ಪಡೆದರು. ಸೂರ್ಯ ಸದಾ ತಾಮ್ರದ ಲಿಂಗವನ್ನು ಪೂಜಿಸಿ ಸೂರ್ಯತ್ವವನ್ನೂ ಚಂದ್ರ ಮುತ್ತಿನಲಿಂಗವನ್ನು ಪೂಜಿಸಿ ಸೋಮತ್ವವನ್ನೂ ಪಡೆದರು. ನಾಗರು ಹವಳದ ಲಿಂಗವನ್ನು ಪೂಜಿಸಿ

ಪನ್ನಗತ್ವವನ್ನೂ ಅಸುರರು ಕಬ್ಬಿಣದ ಲಿಂಗವನ್ನು ಮಾಡಿ ರಾಕ್ಷಸತ್ವವನ್ನೂ ಹೊಂದಿದರು. ಪಿಶಾಚತತಿ ಸೀಸದ ಲಿಂಗವನ್ನೂ ಗುಹ್ಯಕರು ಲೋಹತ್ರಯದ ಲಿಂಗವನ್ನೂ ವಸುಗಳು ವಜ್ರದಲಿಂಗವನ್ನೂ ಚಾಮುಂಡಿ ಮರಳಿನಲಿಂಗವನ್ನೂ ಸರಸ್ವತಿ ದೂರ್ವಾಂಗ ಲಿಂಗವನ್ನೂ ಮುನಿನಿಕರ ಆಜ್ಯಲಿಂಗವನ್ನೂ ಉಳಿದ ಮುನಿಗಳು ಕುಶಾಗ್ರಸ್ವರೂಪದ ಲಿಂಗವನ್ನೂ ಯಮನು ಮರಕತಲಿಂಗವನ್ನೂ ಗೋವುಗಳು ನವನೀತಲಿಂಗವನ್ನೂ ಕಾಮ ವಸಂತರು ಹೂವಿನ ಲಿಂಗವನ್ನೂ ಪೂಜಿಸಿ ಆಯಾಪದವಿಗಳನ್ನು ಪಡೆದರು. ಹೀಗೆ ಹರಿ ಅಜ ಸುರಪ ನಿರ್ಜರರು ಸುರರು ಕುಬೇರ ಯಕ್ಷ ಕಿನ್ನರ ಗರುಡರೇ ಮೊದಲಾದವರು ಈಶ್ವರನಲ್ಲಿ ಸುಸ್ಥಾನಗಳನ್ನು ಪಡೆದರೆಂದು ಪದ್ಮಪುರಾಣವೇ ಮೊದಲಾದುವು ಸಾರುತ್ತಿವೆ. ಮಹಾಲಕ್ಷ್ಮಿ ಹಣೆಯಲ್ಲಿಯೂ ಬಾಣಾಸುರ ಮೂರ್ಧದಲ್ಲಿಯೂ ರಾಕ್ಷಸರು ಲೋಹ ಪಾತ್ರೆಯಲ್ಲಿಯೂ ಶಿವನನ್ನು ಇಟ್ಟು ಪೂಜಿಸಿ ಕೀರ್ತಿಯನ್ನು ಪಡೆದರು. ಪ್ರಾಣಲಿಂಗವನ್ನು ಯಾವಾಗಲೂ ಹಸ್ತದಲ್ಲಿ ಧರಿಸಬೇಕು. ಶಿವಲಿಂಗವನ್ನು ಶಿರ ಗಳ ಹೊಕ್ಕಳು ಎದೆಗಳಲ್ಲಿ ಧರಿಸಬೇಕು. ಶುಚಿಯಾಗಲಿ ಅಶುಚಿಯಾಗಲಿ ಹಗಲಿರುಳೂ ಲಿಂಗವನ್ನು ಧರಿಸಿರಬೇಕು. ಭಕ್ತನಾದವನು ಸದಾ ಲಿಂಗವನ್ನು ಧರಿಸಿರದಿದ್ದರೆ ಪಾಪವುಂಟಾಗುತ್ತದೆ. ಶಿವಲಿಂಗವನ್ನು ನಿಮಿಷಾರ್ಧವೂ ಅಗಲದಂತೆ ಧರಿಸಿರಬೇಕೆಂದು ವೇದಾಗಮ ಪುರಾಣೇತಿಹಾಸಗಳು ಸಾರುತ್ತಿವೆ.

ಶಿವನ ಪ್ರಸಾದವನ್ನು ಭುಂಜಿಸುವುದು ಕುಲಜನೂ ವೈದಿಕನೂ ಆದ ಬ್ರಾಹ್ಮಣ ನಿಗೆ ಹಿತವಲ್ಲ. ಆದಿಯಲ್ಲಿ ಯಾರಾದರೂ ಆರಾಧ್ಯರು ಶಿವನ ಪ್ರಸಾದವನ್ನು ಸೇವಿಸಿದವರು ಇದ್ದಾರೆಯೆ? ಶಿವನ ನುಡಿಯೇ ಪ್ರಮಾಣವೆಂದು ಅವಿವೇಕದಿಂದ ಜನ ಪ್ರಸಾದವನ್ನು ಸ್ವೀಕರಿಸುವುದು ಅನುಚಿತ. ಶ್ರಾದ್ಧಕರ್ಮಕ್ಕೆ ಯಜ್ಞಾದಿಗಳಿಗೆ ವೈಶ್ಯದೇವಕಾರ್ಯಗಳಿಗೆ ಲಿಂಗಪ್ರಸಾದ ಅರ್ಹವಲ್ಲ. ಅದನ್ನು ಭುಂಜಿಸುವುದು ಸಲ್ಲದು ಎಂದು ಬ್ರಾಹ್ಮಣರು ಆಕ್ಷೇಪಿಸಲು ಪಂಡಿತೇಂದ್ರನು ಪರಶಿವನ ಶುದ್ಧ ಸಿದ್ಧ ಪ್ರಸಿದ್ಧ ಪ್ರಸಾದದ ಮಹತ್ವವನ್ನು ಈ ರೀತಿ ವಿವರಿಸುವನು. ನೈವೇದ್ಯ ಶಬ್ದಕ್ಕೆ ನಾನಾರ್ಥಗಳಿವೆ. ಅವುಗಳಲ್ಲಿ ಇದು ಗೌಣ ಇದು ಮುಖ್ಯ ಎಂದು ತಿಳಿಯದೆ ಕೋಟಲೆಗೊಂಡಿರುವಿರಿ. ಪುರಾಣಾಗಮಗಳ ಆಧಾರದಿಂದ ಪ್ರಸಾದದ ಮಾಹಾತ್ಮ್ಯೆಯನ್ನು ವಿವರಿಸಿ ಯಾರು ಈ ಪ್ರಸಾದವನ್ನು ಸ್ವೀಕರಿಸುವುದಿಲ್ಲವೋ ಅವರನ್ನು ನೋಡಕೂಡದು ನುಡಿಸಕೂಡದು. ಹರಿ ಬ್ರಹ್ಮ ಇಂದ್ರಾದಿದೇವತೆಗಳು ಭೃಗು ವಶಿಷ್ಠ ಗೌತಮ ಮುಖ್ಯಮುನಿಗಳು ಶಂಭುಪ್ರಸಾದ ವನ್ನು ಸೇವಿಸಿ ಮುಕ್ತಿಯನ್ನು ಪಡೆದರೆಂದು ವೇದಸ್ಮೃತಿ ಪುರಾಣಾಗಮ ಇತಿಹಾಸಗಳು ಸಾರುತ್ತಿವೆ ಎಂದು ಅನೇಕ ದೃಷ್ಟಾಂತಗಳನ್ನು ನೀಡುವನು. ಆದುದರಿಂದ ಈಶಪ್ರಸಾದ ವನ್ನು ದ್ವಿಜರು ಯಾವಾಗಲೂ ಭುಂಜಿಸುವುದು ಲೇಸು ಎಂದು ಹೇಳಿ ಅವರನ್ನು ಭಂಗಿಸಿದನು.

ಪಂಡಿತಾರಾಧ್ಯನು ಈಶಪ್ರಸಾದದ ಮಹಿಮೆಯನ್ನು ಮತ್ತೆ ಕೆಲವು ದೃಷ್ಟಾಂತ ಗಳೊಂದಿಗೆ ವಿವರಿಸುವನು. ಘಂಟಾಕರ್ಣನೇ ಮೊದಲಾದ ಮಹಿಮರು ಶಿವಪ್ರಸಾದವನ್ನು

ಸೇವಿಸಿ ಧನ್ಯರಾದುದನ್ನು ಉದಾಹರಿಸಿ ಶಿವಪ್ರಸಾದದ ಮಹತ್ವವನ್ನು ಸ್ಥಾಪಿಸುವನು. ಘಂಟಾಕರ್ಣನೆಂಬ ಪ್ರಮಥನು ಒಂದುದಿನ ಈಶ್ವರನನ್ನು ಪೂಜಿಸಿ ಆ ನಿರ್ಮಾಲ್ಯ ಪುಷ್ಪವನ್ನು ತೆಗೆದಿರಿಸಲು, ಅದರಲ್ಲಿದ್ದ ಮಕರಂದವನ್ನು ಸೂರ್ಯನು ಆಕರ್ಷಿಸಿದನು. ಅದನ್ನು ಕಂಡು ಕೋಪಗೊಂಡ ಘಂಟಾಕರ್ಣ ಶಿವನ ನಿರ್ಮಾಲ್ಯವನ್ನು ಭಕ್ತರಾದವರು ಭಕ್ಷಿಸಬಹುದೇ ಹೊರತು ಉಳಿದವರಲ್ಲ. ಕುಸುಮಾನೀಕರಸವನ್ನು ಆಕರ್ಷಿಸಿದ ಸೂರ್ಯ ಕುಷ್ಠ ಶರೀರಿಯಾಗಲೆಂದು ಶಾಪವನ್ನು ಕೊಟ್ಟನು. ಕೂಡಲೇ ಕುಷ್ಠರೋಗ ಹಿಡಿದ ರವಿ ಘಂಟಾಕರ್ಣನ ಪಾದಕ್ಕೆ ಬಿದ್ದು ಅರಿಯದೆ ತನ್ನಿಂದಾದ ಅಪರಾಧನನ್ನು ಕ್ಷಮಿಸಬೇಕೆಂದು ಕೇಳಿಕೊಂಡನು. ಆಮೇಲೆ ಮನೋಹರನೆಂಬ ಗಣನಾಥನ ಪಾದಾಂಬುವನ್ನು ಸ್ವೀಕರಿಸಿ ತನ್ನ ಕುಷ್ಠರೋಗವನ್ನು ನಿವಾರಿಸಿಕೊಂಡನು.

ಭೀರು ಎಂಬ ಗಣಪುಂಗವನು ಸದಾ ಭಯಭರಿತನಾಗಿರುತ್ತಿದ್ದನು. ಅವನ ತಂದೆ ಅವನನ್ನು ಈಶಪೂಜೆಯಲ್ಲಿ ಉದ್ಯುಕ್ತನನ್ನಾಗಿ ಮಾಡುವುದೊಂದೇ ಮಾರ್ಗವೆಂದು ನಿರ್ಧರಿಸಿ ಅವನಿಗೆ ವೀರಶೈವ ದೀಕ್ಷೆಯನ್ನು ಕೊಟ್ಟನು. ಭೀರು ಪ್ರಾಣಲಿಂಗ ಸಂಬಂಧವನ್ನು ಪಡೆಯಲು ಅವನ ದುಷ್ಕರ್ಮವೆಲ್ಲ ಕಳೆದು ಪ್ರಕಾಶಮಾನವಾಗಿದ್ದನು. ಅವನು ಶಿವನ ನಿರ್ಮಾಲ್ಯವನ್ನೆಲ್ಲ ತನ್ನ ತಲೆಯಲ್ಲಿ ಧರಿಸುತ್ತಿದ್ದನು. ಒಂದುದಿನ ಶಿವನ ನಿರ್ಮಾಲ್ಯತತಿಯೊಳಗೆ ದುಷ್ಟಕೀಟವಿದ್ದುದನ್ನು ಕಂಡು ಶಿವನ ನಿರ್ಮಾಲ್ಯದೊಳಗಿದ್ದುದೆಲ್ಲವೂ ನಿರ್ಮಾಲ್ಯವೇ ಎಂದು ಭಾವಿಸಿ ಕೀಟಸಮೇತವಾದ ನಿರ್ಮಾಲ್ಯವನ್ನು ತಲೆಯಲ್ಲಿ ಧರಿಸಿಕೊಂಡನು. ಆ ಕೀಟ ಭೀರುವಿನ ತಲೆಯ ಕೂದಲನ್ನು ಕಿತ್ತುಹಾಕಿ ತಲೆಯ ಚರ್ಮವನ್ನೆಲ್ಲ ತಿಂದುಬಿಟ್ಟಿತು. ಇಷ್ಟಾದರೂ ಭೀರು ಅದನ್ನು ಲಕ್ಷಿಸದೇ ಇರಲು ಈಶ್ವರನು ಅವನ ಭಕ್ತಿಗೆ ಮೆಚ್ಚಿ ನಿಜಸ್ವರೂಪವನ್ನು ತೋರಿ ಅವನಿಗೆ ಪ್ರಸಾದದ ಮಹಿಮೆಯನ್ನು ವಿವರಿಸಿ ಮೃತ್ಯುತ್ವವನ್ನು ಕೊಟ್ಟನು.

ದೂರ್ವಾಸ ಋಷಿಗಳು ಒಮ್ಮೆ ದ್ವಾರಾವತಿಗೆ ಹೋದರು. ಕೃಷ್ಣ ಅವರನ್ನು ಭಕ್ತಿಭಾವದಿಂದ ಬರಮಾಡಿಕೊಂಡು ಪರಮಾನ್ನವನ್ನರ್ಪಿಸಿದನು. ದೂರ್ವಾಸರು ಅದರಲ್ಲಿ ಸ್ವಲ್ಪ ಸೇವಿಸಿ ಉಳಿದುದನ್ನು ಕೃಷ್ಣನಿಗೆ ಕೊಟ್ಟು ಆ ಪ್ರಸಾದವನ್ನು ತಿಂದು ಮಿಕ್ಕದ್ದನ್ನು ದೇಹಕ್ಕೆ ಲೇಪಿಸಿಕೊಳ್ಳುವಂತೆ ಸೂಚಿಸಿದರು. ಅದರಂತೆ ಕೃಷ್ಣ ಪಾದವನ್ನುಳಿದು ದೇಹಕ್ಕೆಲ್ಲಾ ಲೇಪಿಸಿಕೊಂಡನು. ಅದನ್ನು ಕಂಡ ದೂರ್ವಾಸರು ನೀನು ಲೇಪಿಸಿಕೊಳ್ಳದಿರುವ ಪಾದದ ಭಾಗಕ್ಕೆ ಬೇಡನೊಬ್ಬನ ಬಾಣ ತಗಲಿ ಮರಣ ಪ್ರಾಪ್ತವಾಗುವುದು ಎಂದರು. ಅದರಂತೆ ಕೃಷ್ಣನಿಗೆ ವ್ಯಾಧನಿಂದ ಸಾವು ಸಮನಿಸಿತು.

ಸುಕೇಶನೆಂಬ ಪ್ರಮಥಗಣನಾಥನು ಮುನಿವಂದ್ಯನೂ ಈಶಭಕ್ತನೂ ಶೀಲವಂತನೂ ಸರ್ವಪ್ರಸಾದಪ್ರಸಾದಿಯೂ ಆಗಿದ್ದನು. ಆತನು ಶಿವನಿಗೆ ಅರ್ಪಿಸುವ ಪದಾರ್ಥಗಳ ಬಗೆಗೆ ತರ್ಕಾತರ್ಕ ವಿಚಾರಣೆಯನ್ನು ನಡೆಸುತ್ತಿದ್ದನು. ಬಿಸಿಲು ಬೆಳುದಿಂಗಳು ಶುದ್ಧ ಸೂಕ್ಷ್ಮಪ್ರಸಾದಿಯನ್ನು ಮುಟ್ಟಲು ಯೋಗ್ಯವಾದವುಗಳಲ್ಲವೆಂದು ನಿರ್ಧರಿಸಿದನು. ಅವುಗಳ ಸೋಂಕು ತನಗಿಲ್ಲದಂತೆ ಮಂದರಾಚಲದ ಒಂದು ಗುಹೆಯಲ್ಲಿ ಸೇರಿಕೊಂಡು ಭಕ್ತ

ತತಿಯೊಂದಿಗೆ ಸುಖವಾಗಿದ್ದನು. ನಾರದನು ಒಂದುಸಲ ಅಲ್ಲಿಗೆ ಬಂದು ಒಳಗೆ ಹೋಗಲು ಅನುಮತಿ ದೊರೆಯದೆ ಸೂರ್ಯನಲ್ಲಿಗೆ ಹೋಗಿ, ಸುಕೇಶನು ಅವನನ್ನು ಎಷ್ಟು ಕೀಳಾಗಿ ಕಾಣುತ್ತಿದ್ದಾನೆ ಎಂದು ದೂರು ಹೇಳಿದನು. ಅದನ್ನು ಕೇಳಿ ಕೋಪಗೊಂಡ ಸೂರ್ಯ ಆ ಮಂದರಾಚಲದ ಮೇಲೆ ತನ್ನ ಸಹಸ್ರಕಿರಣಗಳನ್ನು ಪ್ರಸರಿಸಲು ಅದು ಹತ್ತಿ ಕೊಂಡು ಉರಿಯುತ್ತಿದ್ದರೂ ಸುಕೇಶನು ಮಾತ್ರ ಶಿವಧ್ಯಾನ ಮಾಡುತ್ತಲೇ ಇದ್ದನು. ಇದನ್ನು ಕಂಡ ಶಿವನು ಕೋಪದಿಂದ ಸೂರ್ಯನನ್ನು ನಿಟ್ಟಿಸಲು ಅವನು ಭೂಮಿಯ ಮೇಲೆ ಬಿದ್ದು ಉರುಳಾಡಿದನು. ಶಿವನನ್ನು ಕುರಿತು ಪರಿಪರಿಯಾಗಿ ಪ್ರಾರ್ಥಿಸಿಕೊಂಡನು. ಆಗ ಶಿವನು "ಎಲೈ ರವಿಯೆ, ಸುಜ್ಞಾನಪರರೂ ಲಿಂಗಾರ್ಚನಾಸಕ್ತರೂ ನನ್ನ ಭಕ್ತರೂ ಆದವರಿಗೆ ನೀನು ಈರೀತಿ ಅಪರಾಧ ಮಾಡಬಹುದೆ? ಘಂಟಾಕರ್ಣನಿಂದ ನಿನಗೆ ಕುಷ್ಠರೋಗ ಬಂದದ್ದನ್ನೂ ಮನೋಹರನ ಪಾದತೀರ್ಥದಿಂದ ಅದು ನಾಶವಾದದ್ದನ್ನೂ ಮರೆತೆಯಾ? ನಾರದನ ಮಾತನ್ನು ಕೇಳಿ ಈ ಸ್ಥಿತಿಗೆ ಬಂದೆ. ಈಗ ನೀನು ಕೂಡಲೆ ವಾರಣಾಸಿಗೆ ಹೋಗಿ ಅಲ್ಲಿ ಲಿಂಗಪ್ರತಿಷ್ಠೆಯನ್ನು ಮಾಡಿ ಬಾಲಾರ್ಕೇಶ್ವರ ಎಂದು ಅದಕ್ಕೆ ಹೆಸರಿಟ್ಟು ಪೂಜಿಸು. ನಿನಗೆ ಪೂರ್ವಸ್ಥಿತಿ ಉಂಟಾಗುತ್ತದೆ" ಎಂದನು. ಅದರಂತೆ ಸೂರ್ಯನು ಉರುಳಿಕೊಂಡು ಹೋಗಿ ವಾರಣಾಸಿಯಲ್ಲಿ ಬಾಲಾರ್ಕೇಶನನ್ನು ಪ್ರತಿಷ್ಠಾಪಿಸಿ ಪೂಜಿಸಿ ಮುನ್ನಿನ ಪದವಿಯನ್ನು ಪಡೆದನು. ಈ ಕಥೆಯನ್ನು ಕೇಳಿ ಬ್ರಾಹ್ಮಣರು ಪಂಡಿತಾರಾಧ್ಯನನ್ನು ಕೀರ್ತಿಸಿದರು.

ಪೋರಂಡ್ಲವೆಂಬ ಅಗ್ರಹಾರದಲ್ಲಿ ಸೂರಸಾನಾಂಬೆ ಎಂಬ ಶಿವಭಕ್ತೆ ತನ್ನ ಪತಿ ಗತಿಸಿದ ಮೇಲೆ ಜಂಗಮಾರಾಧನೆಯನ್ನು ಮುನ್ನಿನಂತೆಯೇ ಮಾಡಿಕೊಂಡಿದ್ದಳು. ಆಕೆಯನ್ನು ಕಂಡು ಸೈರಿಸಲಾರದೆ ಆ ಊರಿನ ಬ್ರಾಹ್ಮಣರು ರಾಜನಲ್ಲಿಗೆ ಹೋಗಿ "ಸೂರಸಾನಾಂಬೆ ವಿಧವೆಯಾದರೂ ವಿಭೂತಿ ರುದ್ರಾಕ್ಷಿಗಳನ್ನು ಧರಿಸಿಕೊಂಡು ಜಂಗಮರು ಬಂದೊಡನೆಯೇ ಅವರನ್ನು ತನ್ನ ಮನೆಗೆ ಕರೆದುಕೊಂಡು ಹೋಗಿ ಅವರ ಪಾದತೀರ್ಥ ಪ್ರಸಾದಗಳನ್ನು ಸೇವಿಸುವಳು. ಅಂತ್ಯಜರು ಜಂಗಮವೇಷದಿಂದ ಬಂದರೂ ಇದೇರೀತಿ ಮಾಡುವಳು" ಎಂದು ಚಾಡಿ ಹೇಳಿದರು. ಅವರ ಮಾತನ್ನು ಕೇಳಿದ ರಾಜ 'ಆಕೆಯ ಮನೆಯನ್ನು ತೋರಿಸಿ, ಪರೀಕ್ಷಿಸಿ ಶಿಕ್ಷಿಸುತ್ತೇವೆ' ಎಂದನು. ಒಬ್ಬ ಅಂತ್ಯಜ ಶಿವಭಕ್ತನಂತೆ ನಟಿಸುತ್ತ ಭಸ್ಮ ರುದ್ರಾಕ್ಷಿಗಳನ್ನು ಧರಿಸಿಕೊಂಡು ಆಕೆಯ ಮನೆಯನ್ನು ಹೊಗುವಂತೆ ಅವರು ಸಂಚು ಮಾಡಿದರು. ಅದರಂತೆ ಒಬ್ಬ ಅಷ್ಟಾವಕ್ರನಾದ ಅಂತ್ಯಜ ಸೂರಸಾನಾಂಬೆಯ ಮನೆಯನ್ನು ಕೇಳಿಕೊಂಡು ಬೀದಿಯಲ್ಲಿ ಬರುತ್ತಿದ್ದನು. ಆ ಶಿವಭಕ್ತನನ್ನು ಕಂಡಕೂಡಲೆ ಸೂರಸಾನಾಂಬೆ ಅವನನ್ನು ಮನೆಯೊಳಗೆ ಕರೆದುಕೊಂಡು ಹೋಗಿ ಆತನ ಪಾದಗಳನ್ನು ತೊಳೆದು ಪಾದೋದಕವನ್ನು ಸ್ವೀಕರಿಸಿ ಆರೋಗಣೆಗೆ ಅಣಿಮಾಡಿದಳು. ಆ ವೇಳೆಗೆ ಸರಿಯಾಗಿ ಕೆಲವು ಬ್ರಾಹ್ಮಣರು ಅವಳ ಮನೆಗೆ ಬಂದು ಬಾಗಿಲನ್ನು ಬಂಧಿಸಿದರು. ಮತ್ತೆ ಕೆಲವರು ರಾಜನನ್ನು ಕರೆದುಕೊಂಡು ಬರಲು ಹೋದರು. ರಾಜನು ಆ ಬ್ರಾಹ್ಮಣರೊಂದಿಗೆ ಸೂರಸಾನಾಂಬೆಯ ಮನೆಗೆ ಬಂದನು. ಅವರು ಅಂತ್ಯಜನ ಪದಾರ್ಥಗಳನ್ನೆಲ್ಲ

ರಾಜನಿಗೆ ತೋರಿಸಿದರು. ಬ್ರಾಹ್ಮಣರ ಅಗ್ರಹಾರದಲ್ಲಿ ಈರೀತಿ ನಡೆಯುತ್ತಿರುವುದಕ್ಕೆ ಆಕ್ಷೇಪಿಸಿ ಆಕೆಯ ಮನೆಯನ್ನು ಕೆಡಹುವಂತೆಯೂ ಅವರಿಬ್ಬರನ್ನು ಹೊಡೆದು ಎಳೆದು ಕೊಂಡು ಬರುವಂತೆಯೂ ಕೂಗಾಡಿದರು. ಆಕೆಯನ್ನು ಅವರು ನಾನಾವಿಧವಾಗಿ ಹೀಯಾಳಿಸಿದರು. ಅವರ ಭರ್ತ್ಸನೆಯನ್ನು ಕೇಳಿದ ಸೂರಸಾನಾಂಬೆ "ನಿಮ್ಮಂತಹ ಹಿರಿಯ ಹೊಲೆಯರು ಶಿವಭಕ್ತರ ಮನೆಗೆ ಬರಬಹುದೇ! ಶಿವಭಕ್ತರನ್ನು ದೂಷಿಸಿ ನೀವು ನರಕಾಗ್ನಿಯಲ್ಲಿ ಬೀಳುವಿರಿ? ನಮ್ಮ ಮನೆಯಲ್ಲಿ ಶಿವನಿದ್ದಾನೆ. ನೀವು ದುಷ್ಕರ್ಮಿಗಳೂ ಚಾಂಡಾಲರೂ ಆದ್ದರಿಂದ ನಿಮಗೆ ಆತನು ಕಾಣುವುದಿಲ್ಲ. ಈಗ ನೀವೇ ನೋಡಿಕೊಳ್ಳಿ" ಎಂದು ಬಾಗಿಲನ್ನು ತೆರೆದಳು. ಆ ಬ್ರಾಹ್ಮಣರು ಮನೆಯೊಳಕ್ಕೆ ಹೋಗಿ ನೋಡಲು ಜಂಗಮಾಕಾರದ ಅಂತ್ಯಜನು ಕಾಣಲಿಲ್ಲ. ಸೂರಸಾನಾಂಬೆಯೇ ಮೋಸದಿಂದ ಎಲ್ಲಾದರೂ ಅಡಗಿಸಿಟ್ಟಿರಬೇಕೆಂದು ಭರ್ತ್ಸನೆ ಮಾಡಿದರು. ಆದಕ್ಕೆ ಅವಳು ಶಿವನು ಅಂತ್ಯಜರಿಗೆ ಕಾಣುವುದಿಲ್ಲ. ಶಿವನನ್ನು ಅಂತ್ಯಜನೆಂದು ಕೆಟ್ಟ ನುಡಿದಿರಿ ಅದಕ್ಕೆ ಒಂದು ದೃಷ್ಟಾಂತವನ್ನು ಕೇಳಿ ಎಂದಳು.

ಕೆಂಭಾವಿ ಎಂಬ ಅಗ್ರಹಾರದಲ್ಲಿ ಶಿವನು ಚಾಂಡಾಲ ವೇಷವನ್ನು ಧರಿಸಿ ಸತ್ತ ಕರುವನ್ನು ಹೆಗಲಿನಲ್ಲಿ ಹೊತ್ತುಕೊಂಡು ಬರುತ್ತಿದ್ದುದನ್ನು ನೋಡಿದ ಭೋಗಣ್ಣನು ಆತನಿಗೆ ನಮಸ್ಕರಿಸಿ ಮನೆಗೆ ಕರೆದುಕೊಂಡು ಹೋದನು. ಭೋಜನಕ್ಕೆ ಆ ಸತ್ತ ಕರುವನ್ನು ಕೊಯ್ದಿಡ್ಡಕ್ಕಬೇಕೆಂದು ಉಜ್ಜುಗಿಸಿದನು. ಅದನ್ನು ತಿಳಿದ ವಿಪ್ರರು ಆತನ ಮನೆಯನ್ನು ಮುತ್ತಲು ಶಿವನು ಬಯಲಾದನು. ಆದರಿಂದ ಕೋಪಗೊಂಡ ಭೋಗಣ್ಣ ಆ ಗ್ರಾಮವನ್ನು ಬಿಟ್ಟು ಹೊರಡಲು ಅಲ್ಲಿದ್ದ ಶಿವಲಿಂಗಗಳೆಲ್ಲ ಆತನ ಹಿಂದೆಯೇ ಉರುಳಿಕೊಂಡು ಹೋದುವು. ಅದನ್ನು ಕಂಡು ಹೆದರಿದ ವಿಪ್ರರು ಭೋಗಣ್ಣನಿಗೆ ಶರಣಾಗತರಾದರು. ಭೋಗಣ್ಣ ಹಿಂತಿರುಗಲು ಆ ಲಿಂಗಗಳೆಲ್ಲ ಮರಳಿ ಯಥಾಸ್ಥಾನದಲ್ಲಿ ನಿಂತುವು. ಆದುದರಿಂದ ಶಿವನು ಯಾವ ರೂಪಿನಿಂದ ಬರುತ್ತಾನೆಂಬುದನ್ನು ನೀವು ತಿಳಿಯಿರಿ ಎಂದು ಸೂರಾಂಬೆ ವಿಪ್ರರಿಗೆ ಶಿವನ ಮಾಹಾತ್ಮ್ಯವನ್ನು ನಿರೂಪಿಸಿದಳು.

ಪರಶಿವನು ಚಾಂಡಾಲವೇಷವನ್ನು ಧರಿಸಿ ಸತ್ತ ಕರುವೊಂದನ್ನು ಹೊತ್ತುಕೊಂಡು ಸಾಮವೇದಿಯ ಯಜ್ಞಶಾಲೆಯನ್ನು ಪ್ರವೇಶಿಸಿದನು. ಪಾರ್ವತಿಯೂ ವೇಷ ಮರಸಿಕೊಂಡು ಶಿವನ ಜೊತೆಯಲ್ಲಿ ಹೋದಳು. ಪಾರ್ವತೀಸಮೇತನಾಗಿ ಬಂದ ಶಿವನನ್ನು ನೋಡಿದ ಸಾಮವೇದಿಗಳು ಅವರನ್ನು ತಮ್ಮ ಮನೆಗೆ ಕರೆದುಕೊಂಡುಹೋದರು. ಸಾಮವೇದಿಗಳು ಪಾರ್ವತೀಪರಮೇಶ್ವರರ ಪಾದಗಳನ್ನು ತೊಳೆಯುವಾಗ ನೀರಿನಲ್ಲಿ ಹರನ ಮುಕ್ಕಣ್ಣು ಕಾಣಲು ಸಾಮವೇದಿಗಳ ಭಾರ್ಯೆ ಆತನು ಈಶ್ವರನೆಂದು ಹೇಳಿದಳು. ಅದಕ್ಕೆ ಸಾಮವೇದಿಗಳು ಇವರು ನರರೆಂದು ತಿಳಿದಿದ್ದೆಯಾ? ಸಾಕ್ಷಾತ್ ಶಿವಶಂಕರರು ಎಂದರು. ಅವರ ಪಾದಗಳನ್ನು ತೊಳೆದು ತೀರ್ಥವನ್ನು ತೆಗೆದುಕೊಂಡರು. ಶಿವನ ಪ್ರತಿರೂಪ ಆ ತೀರ್ಥದಲ್ಲಿ ಹೊಳೆದುದರಿಂದ ಅದು ಲಿಂಗೋದಕವಾಯಿತು. ಶಿವನನ್ನು ಅಗ್ರಾಸನದಲ್ಲಿ ಕುಳ್ಳಿರಿಸಿ ಪೂಜಿಸುವ ಸಮಯದಲ್ಲಿ ಶಿವನು ಸಾಮವೇದಿಗೆ ಆ ಸತ್ತ

ಕರುವನ್ನು ಅಡಿಗೆಮಾಡಿ ಬಡಿಸುಸಂತೆ ತಿಳಿಸಿದನು. ಅದರಂತೆ ಅಡಿಗೆಮಾಡಿ ಬಡಿಸಲು ಸಂತೃಪ್ತನಾದ ಶಿವ ನಿಜವನ್ನು ತೋರಿ ವರವನ್ನು ಬೇಡುವಂತೆ ಸಾಮವೇದಿಗೆ ತಿಳಿಸಿದನು. ದಾಸಯ್ಯ ಕೊಟ್ಟ ವಸ್ತ್ರವನ್ನು ಹೊದ್ದು ಊಟಮಾಡದೆ ಹೋದುದು, ಚಿರುತೊಂಡನನ್ನು ಕೊಲಿಸಿ ಊಟಮಾಡದೆ ಹೋದುದು-ಇವರೇ ಮೊದಲಾದ ಶರಣರ ಕಥೆಗಳನ್ನು ಸಾಮವೇದಿ ಕೇಳಿ ಏನೇ ಆದರೂ ಊಟಮಾಡದೆ ಹೋಗಲು ಬಿಡುವುದಿಲ್ಲ ಎಂದು ಸತಿಪತಿಗಳಿರ್ವರೂ ಪ್ರಸಾದವನ್ನು ಸ್ವೀಕರಿಸಬೇಕೆಂದು ಸಾಷ್ಟಾಂಗ ನಮಸ್ಕಾರ ಮಾಡಿದರು. ಶಿವನು ಅದನ್ನು ಸೇವಿಸಿ ಸಾಮವೇದಿ ಮತ್ತು ಆತನ ಪತ್ನಿಯನ್ನು ಕೈಲಾಸಕ್ಕೆ ಕರೆದೊಯ್ದನು. ಇದೇ ರೀತಿಯ ಅನೇಕ ಶಿವಶರಣರ ಕಥೆಗಳನ್ನು ಹೇಳಿದನು. ಭಕ್ತರ ಮಹಿಮೆಯನ್ನು ಶಿವನೇ ಬಲ್ಲನೆಂದು ಸೂರಸಾನಾಂಬೆ ವಿಪ್ರರಿಗೆ ಶಿವನ ಮಹತ್ವವನ್ನು ವಿವರಿಸಿ ಅದಕ್ಕೆ ದೃಷ್ಟಾಂತವಾಗಿ ಮುಂದಿನ ಕಥೆಯನ್ನು ಹೇಳುವಳು.

ದ್ರವಿಡದೇಶದಲ್ಲಿ ತಿರುನಾಳ್ಪೋವನೆಂಬ ಚಾಂಡಾಲನು ಒಬ್ಬ ಬ್ರಾಹ್ಮಣನ ಮನೆಯಲ್ಲಿ ಸೇವೆ ಮಾಡಿಕೊಂಡಿದ್ದನು. ಅವನು ಪೆರುಮಟ್ಟ ಪುಲಿಯೂರು ಶ್ರೀಪತೀಶನ ರಥೋತ್ಸವವನ್ನು ನೋಡಬೇಕೆಂಬ ಬಯಕೆಯಿಂದ ಹನ್ನೆರಡು ವರ್ಷಗಳನ್ನು ಕಳೆದನು. ಹೀಗಿರಲು ತಿರುನಾಳ್ಪೋವನ ಯಜಮಾನ ಶ್ರೀಪತೀಶನ ಪುರಕ್ಕೆ ಹೋಗಬೇಕಾಯಿತು. ತನ್ನ ಯಜಮಾನನ ಜೊತೆ ತಿರುನಾಳ್ಪೋವನೂ ಹುಲ್ಲಿನ ಹೊರೆಯನ್ನು ಹೊತ್ತು ಹೊರಟನು. ದಾರಿಯಲ್ಲಿ ಘೋರವಾದ ಮಳೆ ಬಂದಿತು. ಸುತ್ತಲೂ ಕತ್ತಲೆ ಕವಿದುಕೊಂಡಿತು. ಆಗ ಅಲ್ಲಿದ್ದ ಊರಮುಂದಿನ ಒಂದು ಹಾಳುಗೋಡೆಯ ಆಶ್ರಯದಲ್ಲಿ ತಿರುನಾಳ್ಪೋವನು ಹುಲ್ಲಿನ ಹೊರೆಯನ್ನು ಹೊತ್ತುಕೊಂಡೇ ನಿಂತಿದ್ದನು. ಮಳೆ ಮತ್ತಷ್ಟು ಹೆಚ್ಚಾಯಿತು. ಪ್ರವಾಹ ಭೋರಿಡುತ್ತಿದ್ದರೂ ಶ್ರೀಪತೀಶನ ರಥೋತ್ಸವವನ್ನು ಯಾವಾಗನೋಡುವೆನೋ ಎಂದು ಧ್ಯಾನಿಸುತ್ತ ಅವನು ಆ ಪ್ರವಾಹದಲ್ಲೇ ಹುಲ್ಲುಹೊರೆ ಹೊತ್ತು ನಿಂತಿದ್ದನು. ಆಗ ಪರಶಿವನು ಆ ಊರಿನ ಭಕ್ತರಿಗೆ ಸ್ವಪ್ನದಲ್ಲಿ ಕಾಣಿಸಿಕೊಂಡು "ನನ್ನ ಭಕ್ತನೊಬ್ಬನು ಈ ಊರ ಮುಂದಿನ ಹಾಳುಗೋಡೆಯ ಬಳಿ ಮಳೆಯಲ್ಲಿ ನೆನೆಯುತ್ತ ಬಸವಳಿದು ಬಾಡಿ ಹೋಗಿದ್ದಾನೆ. ನೀವೆಲ್ಲರೂ ಅಲ್ಲಿಗೆ ಹೋಗಿ ಅವನನ್ನು ಆನೆಯ ಮೇಲೆ ಕೂರಿಸಿ ಕರೆದುಕೊಂಡು ಬನ್ನಿ" ಎಂದು ನಿರೂಪವನ್ನು ಕೊಟ್ಟನು. ಅದರಂತೆ ಆ ಭಕ್ತರು ತಿರುನಾಳ್ಪೋವನನ್ನು ಗಜಕುಂಭಪೀಠದ ಮೇಲೆ ಕೂರಿಸಿಕೊಂಡು ಶ್ರೀಪತೀಶನಲ್ಲಿಗೆ ಕರೆದುಕೊಂಡು ಬಂದರು. ಆತನು ಶ್ರೀಪತೀಶನಲ್ಲಿ ಐಕ್ಯವಾದನು. ಆದುದರಿಂದ ಎಲೈ ವಿಪ್ರರಿರ ತಿರುನಾಳ್ಪೋವನನ್ನು ಹೊಲೆಯನೆಂದೆನ್ನಬಹುದೆ? ಶಿವನ ಭಕ್ತರಿಗೆ ಕುಲಜಾತಿಗಳೆಂಬ ಭೇದಭಾವಗಳುಂಟೆ? ಇನ್ನು ಕಕ್ಕಯ್ಯನ ಮಹಿಮೆಯನ್ನು ಕೇಳಿ ಎಂದಳು.

ಮಹೇಶ್ವರ ಭಕ್ತನಾದ ಕಕ್ಕಯ್ಯನೆಂಬುವನು ಅನ್ಯದೇವತಾ ಸ್ತುತಿಯನ್ನು ಮಾಡುತ್ತಿದ್ದ ವಿಪ್ರನೊಬ್ಬನನ್ನು ಕೊಂದುಬಿಟ್ಟನು. ಬ್ರಾಹ್ಮಣರೆಲ್ಲ ಕೋಪದಿಂದ ಅವನಲ್ಲಿಗೆ ಬರಲು ಅವನು ತಾನು ಕೊಂದ ಬ್ರಾಹ್ಮಣದೇಹವೆಲ್ಲ ಹುಳುಗಳ ರಾಶಿಯಾಗಿರುವುದನ್ನು ತೋರಿಸಿದನು. ಅವರೆಲ್ಲ ಆಶ್ಚರ್ಯಪಟ್ಟುಹೋದರು. ಮಾದಾರ ಧೂಳಿದೇವಯ್ಯ,

ಗುಡ್ಡವ್ವೆ, ಶಿವನಾಗಮಯ್ಯ, ಶ್ವಪಚಯ್ಯ ಮಾದರ ಚೆನ್ನಯ್ಯ— ಇವರೇ ಮೊದಲಾದವರು ಹೀನಕುಲದವರಾದರೂ ಎಂತಹ ಶಿವಭಕ್ತರಾಗಿದ್ದರೆಂಬುದನ್ನು ಸೂರಾಂಬೆ ಸ್ಪಷ್ಟಪಡಿಸಿದಳು. ಆದ್ದರಿಂದ ಶಿವಭಕ್ತಿರಹಿತನಾದ ದ್ವಿಜನೇ ಅಂತ್ಯಜ, ಶಿವಭಕ್ತಿಯುಕ್ತನಾದ ಅಂತ್ಯಜನೇ ಸದ್ವಿಪ್ರ ಎಂದು ಅವರಿಗೆ ಬೋಧಿಸಿದಳು.

ಸೂರಾಂಬೆ ಬ್ರಾಹ್ಮಣರಿಗೆ ಶಿವಶರಣರ ಕಥೆಗಳನ್ನೂ ಅವುಗಳ ಮಹಿಮೆಯನ್ನೂ ತಿಳಿಯಪಡಿಸಿದ ಮೇಲೆ ದೃಷ್ಟಾಂತವಾಗಿ ಶಿವನು ನಿಮಗೆ ಹೇಗೆ ಗೋಚರಿಸುತ್ತಾನೆ ಬಂದು ನೋಡಿ ಎಂದು ತನ್ನ ಮನೆಗೆ ಕರೆದುಕೊಂಡು ಹೋದಳು. ಶಿವನು ಊಟಮಾಡಿದ ಸ್ಥಳದಲ್ಲಿದ್ದ ಆಸನವನ್ನು ಪಕ್ಕಕ್ಕೆ ತಳ್ಳಿದಳು. ಅಲ್ಲಿ ದಿವ್ಯ ತೇಜಸ್ವರೂಪವಾದ ಸ್ವಯಂಭು ಸಾಕಾರವಾಗಿ ಗೋಚರಿಸಲು ಅವರೆಲ್ಲ ಸೂರಸಾನಾಂಬೆಯ ಭಕ್ತಿಯನ್ನು ಮೆಚ್ಚಿಕೊಂಡರು. ಅದಕ್ಕೆ ಉದಾಹರಣೆಯಾಗಿ ಬಸವೇಶ್ವರ ಬದನೆಕಾಯಿಗಳನ್ನು ಲಿಂಗಗಳನ್ನಾಗಿ ಮಾಡಿದ್ದು, ಬಾಹೂರ ಬೊಮ್ಮಯ್ಯನ ಜೋಳದ ರಾಶಿ ಲಿಂಗಸ್ವರೂಪವಾದದ್ದು, ಚಂಡೇಶ ಮರಳಿನಿಂದ ಲಿಂಗವನ್ನು ಮಾಡಿದ್ದು, ಘಟಸರ್ಪ ಲಿಂಗವಾದದ್ದು, ಸಿಂಧುಮರಾಳನ ಕಳೇವರವೇ ಲಿಂಗವಾದದ್ದು—ಈ ಮೊದಲಾದ ಶರಣರ ಕಥೆಗಳನ್ನೂ ದೃಷ್ಟಾಂತಗಳನ್ನೂ ಹೇಳಿ ಶಿವನ ಮಾಹಾತ್ಮ್ಯವನ್ನು ದ್ವಿಜರಿಗೆ ವರ್ಣಿಸಿದಳು. ಶಿವನ ಮೂರ್ತಿಯನ್ನು ಆ ವಿಪ್ರರಿಗೆಲ್ಲ ತೋರಿಸಿದಳು. ಆ ಬ್ರಾಹ್ಮಣರೆಲ್ಲ ಸೂರಸಾನಾಂಬೆಗೆ ನಮಸ್ಕರಿಸಿ ಆಕೆಯನ್ನು ಪರಿಪರಿಯಾಗಿ ಸ್ತುತಿಸಿದರು. ಅವರೆಲ್ಲರೂ ಶಿವನ ನಾಮಸಂಕೀರ್ತನೆಯಲ್ಲಿ ತೊಡಗಿದರು.

ಪಂಡಿತಾರಾಧ್ಯರು ಲಿಂಗಾರ್ಚನೆ ಮಾಡಿದ ವಿಧಾನ ಅತ್ಯಂತ ವಿವರವಾಗಿ ನಿರೂಪಣೆಗೊಂಡಿದೆ. ಸೂರಾಂಬೆ, ಬೆಲ್ದೇವಿ ವೇಮನಾರಾಧ್ಯರೇ ಮೊದಲಾದ ಜಂಗಮ ಪುಂಗವರೊಡನೆ ಬಂದು ಪಂಡಿತಾರಾಧ್ಯರ ಲಿಂಗಪೂಜೆಯನ್ನು ಕಂಡು ಅತಿಯಾಗಿ ಸಂತೋಷಗೊಂಡಳು.

ಪಂಡಿತಾರಾಧ್ಯರ ಜಂಗಮನಿಷ್ಠೆಯನ್ನೂ ಮಾಹಾತ್ಮ್ಯೆಯನ್ನೂ ವರ್ಣಿಸುವುದು ಅಸಾಧ್ಯವೆಂದು ಸಕಲ ಭಕ್ತರೂ ಹೊಗಳುತ್ತಿರಲಾಗಿ ವೀರಮಾಹೇಶ್ವರಾಚಾರ ವೃಂದಕ್ಕೆ ಕರ್ತೃವಾದ ಬಸವದಂಡೇಶನು ತನ್ನ ಪ್ರಾಣವನ್ನು ಜಂಗಮದಲ್ಲಿ ವಿನಿಯೋಗಿಸಿದ್ದನ್ನು ವಿವರಿಸಿದರು. ನಂದೀಶನ ಅವತಾರವಾದ ಬಸವೇಶನು ಕರ್ನಾಟಕದ ಇಂಗಳೇಶ್ವರ ಬಾಗೇವಾಡಿಯೊಳಗೆ ಮಾದಿರಾಜ ಮಾದಾಂಬೆಯರಿಗೆ ಮಗನಾಗಿ ಹುಟ್ಟಿದನು. ಬಾಲ್ಯವನ್ನು ಕಳೆದು ಯೌವನಕ್ಕೆ ಕಾಲಿಡುತ್ತಲೇ ಸಕಲವಿದ್ಯೆಗಳನ್ನು ಕಲಿತು ಉಪನಯನ ಕರ್ಮವನ್ನು ನಿರಾಕರಿಸಿದನು. ಬಲದೇವ ತನ್ನ ಮಗಳಾದ ಗಂಗಾಂಬೆಯನ್ನು ಬಸವೇಶನಿಗೆ ಮದುವೆ ಮಾಡಿಕೊಡಲಾಗಿ ಆತನು ಹೆಂಡತಿ ಮತ್ತು ಅಕ್ಕನೊಡನೆ ಕೂಡಲಸಂಗಮಕ್ಕೆ ಬಂದು ಸಂಗಮೇಶನನ್ನು ಪೂಜಿಸಿ ನುತಿಸಿ ಹಾಡಿ ಹೊಗಳಿಕೊಂಡಿದ್ದನು. ಹೀಗಿರಲು ಬಲದೇವ ಮಂತ್ರಿ ತೀರಿಕೊಳ್ಳಲು ಬಿಜ್ಜಳ ಬಸವೇಶನನ್ನು ಕರೆಸಿಕೊಂಡು ದಂಡೇಶ ಪದವಿಯನ್ನು ಕೊಟ್ಟನು. ಬಸವೇಶ ರಾಜ್ಯಭಾರವನ್ನೂ ಜಂಗಮಸೇವೆಯನ್ನೂ ನೆರವೇರಿಸುತ್ತಿದ್ದನು. ಚೆನ್ನಬಸವೇಶ ಆತನ ಶಿಷ್ಯನಾಗಿದ್ದನು. ಬಸವಣ್ಣನು ತನುಮನ ಧನಗಳಿಂದ ಜಂಗಮಸೇವೆ

ಸಲ್ಲಿಸುತ್ತಿರುವಾಗ ಒಮ್ಮೆ ಕಳ್ಳರು ಆತನನ್ನು ಸೆರೆಹಿಡಿಯಬೇಕೆಂದು ಬದನೆಯಕಾಯಿ
ಗಳನ್ನು ವಸ್ತ್ರದಲ್ಲಿ ಕಟ್ಟಿಕೊಂಡು ಜಂಗಮರ ಮಧ್ಯೆ ಸೇರಿಕೊಂಡುಬಂದರು. ಬಸವಣ್ಣನ
ಭಾವಸ್ಪರ್ಶದಿಂದಲೇ ಆ ಬದನೆಯಕಾಯಿಗಳೆಲ್ಲ ಲಿಂಗಗಳಾದುವು. ಜಂಗಮನೊಬ್ಬನು
ಬಂದು ತನ್ನ ಶಿವಪೂಜೆಗೆ ಮುತ್ತಿನ ರಂಗವಲ್ಲಿ ಬೇಕೆಂದು ಕೇಳಲು ಜೋಳದ ರಾಶಿಯನ್ನೇ
ಮುತ್ತಿನ ರಾಶಿಯನ್ನಾಗಿ ಮಾಡಿ ಜಂಗಮಕ್ಕಿತ್ತನು. ಜಂಗಮನೊಬ್ಬನು ಹೊನ್ನನ್ನು
ಯಾಚಿಸಲು ಬಿಜ್ಜಳನ ಭಂಡಾರದಲ್ಲಿದ್ದ ಹೊನ್ನನ್ನು ಕೊಟ್ಟು ಕಳುಹಿದನು. ಅದನ್ನು
ತಿಳಿದ ಬಿಜ್ಜಳ ಆಕ್ಷೇಪಿಸಲು ಪೆಟ್ಟಿಗೆಗಳನ್ನು ತೆರೆದು ಹೊನ್ನನ್ನು ತೋರಿಸಿದನು. ಹರನು
ಚರಲಿಂಗ ರೂಪಾಗಿ ಬಸವಣ್ಣನಲ್ಲಿಗೆ ಬಂದು ಒಂದು ಹಣೆಗಣ್ಣನ್ನು ಬೇಡಿದಾಗ ಸಂಗಮೇ
ಶ್ವರನೆ ನಿನಗೆ ಮೊದಲೇ ಹಣೆಗಣ್ಣುಂಟು ಎಂದು ಕನ್ನಡಿಯನ್ನು ತೋರಿಸಿದನು. ಒಮ್ಮೆ
ಬಸವಣ್ಣ ಬಿಜ್ಜಳನ ಸಭೆಯಲ್ಲಿದ್ದನು. ಆಗ ಗುಡುಬೆ ಕಾಳವ್ವೆ ಎಂಬ ಗೊಲ್ಲಿತಿ ಮೊಸರನ್ನು
ಮಾರಿಕೊಂಡು ಬೀದಿಯಲ್ಲಿ ಬರುತ್ತಿದ್ದಳು. ಆ ಸಮಯದಲ್ಲಿ ಆಕೆ ಕಾಲುಜಾರಿ ಕೆಸರಿನೊಳಗೆ
ಬೀಳುವುದರಲ್ಲಿದ್ದಾಗ ಬಸವಾ ಎಂದು ಕೂಗಿಕೊಳ್ಳಲು ಆಕೆಗೆ ನೆರವನ್ನಿತ್ತನು. ಇದನ್ನು ಕೇಳಿದ
ಬಿಜ್ಜಳ ಆಕೆಯನ್ನು ಕರೆಸಿ ಸತ್ಯಸಂಗತಿಯನ್ನು ತಿಳಿದುಕೊಂಡನು. ಶಿವಭಕ್ತರಿದ್ದ ಕಡೆ ಬಸ
ವಣ್ಣನಿರುವನು ಎಂಬುದನ್ನು ತೋರಿಸಿಕೊಟ್ಟಳು. ಸಿದ್ಧರಾಮೇಶ ಬಸವನ ಇರವನ್ನು ತಿಳಿದು
ಕೊಳ್ಳಲು ಶಿವನೆಡೆಗೆ ಹೋಗಲು ಶಿವನು ತನ್ನ ಹೃದಯವನ್ನು ಬಗಿದು ಬಸವಣ್ಣನನ್ನು
ತೋರಿದನು. ಶಿವನು ಬಸವಣ್ಣನನ್ನು ಭೂಲೋಕದಲ್ಲಿ ಭಕ್ತರಾರೆಂದು ಕೇಳಲು ನಾನೊಬ್ಬನೆ
ಭಕ್ತ ಉಳಿದ ಭಕ್ತರೆಲ್ಲ ನಿನ್ನ ಸದೃಶ ಎಂದು ಹೇಳಿದನು. ಬಸವೇಶ್ವರನ ಪತ್ನಿಯ ಕಿವಿಯ
ಓಲೆಗಳನ್ನು ಜಂಗಮನೊಬ್ಬ ಬೇಡಲು ಅವನ್ನು ತೆಗೆಸಿಕೊಟ್ಟನು. ಒಮ್ಮೆ ಬ್ರಾಹ್ಮಣರು
ಶಿವನಾಗಮಯ್ಯನನ್ನು ಹೀನಕುಲಜನೆಂದು ನುಡಿಯಲು ಬಸವಣ್ಣ ಅವನನ್ನು ಬಿಜ್ಜಳನ
ಆಸ್ಥಾನಕ್ಕೆ ಕರೆತಂದು ಆ ಶಿವಭಕ್ತನ ಕರದಿಂದ ದಿವ್ಯಾಮೃತವನ್ನು ಸುರಿಸಿದನು.
ಮತ್ತೊಮ್ಮೆ ವಿಟಜಂಗಮನೊಬ್ಬನು ಬಂದು ಗಂಗಾಂಬಿಕೆ ಉಟ್ಟಿದ್ದ ಹೊಸಸೀರೆಯನ್ನು
ಬೇಡಲು ಬಸವೇಶ್ವರ ಅದನ್ನು ಸೆಳೆದುಕೊಡಲು ಆತನ ಕರಸ್ಪರ್ಶದಿಂದ ಸೀರೆಗಳು ರಾಶಿ
ಯಾಗಿ ಬಿದ್ದುವು. ಮತ್ತೊಂದು ಬಾರಿ ಬೇಡರು ಕೂಡಿ ಶಂಭುಪ್ರಸಾದವು ನಮಗೆ
ಬೇಕು ತಮಗೆ ಬೇಕು ಎಂದು ವಾದ ಮಾಡುತ್ತಿರಲು, ಬಸವಣ್ಣನು ಘೋರವಾದ ವಿಷ
ವನ್ನು ತರಿಸಿ ಅವರಿಗೆ ಕೊಡಲು, ಅವರೆಲ್ಲ ಹೆದರಿ ಹಿಂಜರಿಯಲು, ಅದನ್ನು ತಾನೇ ಸೇವಿಸಿ
ದನು. ಬಸವಣ್ಣನು ಅಷ್ಟಾಂಗಯೋಗ ಸದ್ಭಕ್ತಿಯಿಂದ ಅಂತರ್ಯಾತ್ಮನಲ್ಲಿ ವಿಲೀನವಾ
ದಂತಿದ್ದನು. ಶಿವಲಿಂಗಕ್ಕೆ ಮನವನ್ನೂ ಪ್ರಸಾದಕ್ಕೆ ಕಾಯವನ್ನೂ ಜಂಗಮಕ್ಕೆ ಪ್ರಾಣ
ವನ್ನೂ ಕೊಟ್ಟು ಶಿವಯೋಗ ನಿದ್ರೆಯಲ್ಲಿದ್ದಂತೆ ಇದ್ದನು. ಬಸವೇಶ್ವರನು ಜಂಗಮಪ್ರಾಣಿ
ಯಾದುದರಿಂದ ಜಂಗಮದ ಕೂಡೆ ಸದಾ ಆತನ ಪ್ರಾಣವಿರುತ್ತಿತ್ತು.

ಕಿನ್ನರ ಬ್ರಹ್ಮಯ್ಯ ಬಸವೇಶನ ಸತ್ಪ್ರಾಣವಾಗಿರುವುದನ್ನು ನೋಡಬೇಕೆಂದು ಶಂಭು
ಕಿನ್ನರಬ್ರಹ್ಮಯ್ಯನ ಪ್ರಾಣವನ್ನು ಕೊಂಡನು. ಬಸವಣ್ಣ ಪರಿಪರಿಯಾಗಿ ಪ್ರಲಾಪಿಸಿದನು.
ಪಡಿಹಾರ ಬಾಚಯ್ಯ ಮಡಿವಾಳ ಮಾಚಯ್ಯರಿಗೆ ಈ ವೃತ್ತಾಂತವನ್ನರುಹಿದನು.

ಮಾಚಯ್ಯ ಬಸವಣ್ಣನ ಜಂಗಮ ಪ್ರಾಣಿತ್ವವನ್ನು ಪ್ರಶ್ನಿಸುವನು. ಇದನ್ನು ಕೇಳಿದ ಬಸವಣ್ಣ ಕಿನ್ನರ ಬ್ರಹ್ಮಯ್ಯನ ಪ್ರಾಣದಲ್ಲಿ ತನ್ನ ಪ್ರಾಣವನ್ನು ಕೂಡಿಸಿದನು. ಈ ಸಂಗತಿಯನ್ನು ಕೇಳಿದ ಮಾಚಿದೇವ ಬಸವಣ್ಣನನ್ನು ಸ್ತುತಿಸಿ ಅಲ್ಲಿಗೆ ಬಂದನು. ಕಿನ್ನರಬ್ರಹ್ಮಯ್ಯನನ್ನು ಕುರಿತು "ಎಲೈ ಕಿನ್ನರಬ್ರಹ್ಮಯ್ಯನೆ ನಿನ್ನ ಪ್ರಾಣಮಿತ್ರನನ್ನು ಬಿಟ್ಟುಹೋಗುವುದುಚಿತವೆ? ಬಸವಣ್ಣ ಶಿವನ ಅಪ್ಪಣೆಯನ್ನು ನೆರವೇರಿಸದೆ ನಿನ್ನೊಡನೆ ಕೈಲಾಸಕ್ಕೆ ಹೋಗುವುದು ಉಚಿತವೆ? ಬಸವಣ್ಣನಿರುವವರೆಗೂ ನೀನೂ ಭೂಮಿಯಲ್ಲಿರಬೇಕು" ಎಂದು ಪಾದವನ್ನು ಒತ್ತಿದ ಕೂಡಲೇ ನಿದ್ರೆಯಿಂದ ಎಚ್ಚೆತ್ತವನಂತೆ ಕಿನ್ನರಬ್ರಹ್ಮಯ್ಯ ಎದ್ದು ಕುಳಿತನು. ಕೂಡಲೇ ಬಸವನೂ ಎದ್ದು ಕುಳಿತು ಮಾಚಿದೇವಯ್ಯನಿಗೆ ನಮಸ್ಕರಿಸಿದನು. ಬಳಿಕ ಆ ಮೂವರೂ ಅಲ್ಲಿದ್ದ ಭಕ್ತಸಮೂಹಕ್ಕೆ ವಂದಿಸಿದರು. ಬಸವೇಶ್ವರನು ಜಂಗಮಪ್ರಾಣಿ ಎಂಬುದನ್ನು ಕೇಳಿ ತಿಳಿದುಕೊಂಡಿದ್ದೆವು ಇಂದು ನೋಡಿ ತಿಳಿದುಕೊಂಡೆವು ಎಂದು ವೇಮನಾರಾಧ್ಯರೂ ಸೂರಾಂಬೆಯೂ ಸದ್ಭಕ್ತನಿಕರವೂ ಪಂಡಿತಾರಾಧ್ಯರನ್ನು ಹೊಗಳಿದರು.

### (ii) ಪುರಾತನ ಪ್ರಕರಣ

ಒಂದುದಿನ ಪಂಡಿತಾರಾಧ್ಯರು ಶಿಷ್ಯರೊಡನೆ ಬೆಳಗಿನ ಜಾವದಲ್ಲಿ ಹೂದೋಟಕ್ಕೆ ಹೋಗಿ ಶಿವಲಿಂಗಾರ್ಚನೆಗೆ ವಿವಿಧ ಪುಷ್ಪಗಳನ್ನು ಕೊಯ್ದು ತರುತ್ತಿದ್ದಾಗ ಕಂತು ಹರಭಕ್ತನಾದ ವೆಲ್ಲಕೊಂಡದ ಮಹಾದೇವ ನಿದ್ರೆಯ ಭರದಿಂದ ಬೇಗನೆ ಏಳುವುದನ್ನು ಮರೆತು ಹೂವುಗಳನ್ನು ಯಾರಾದರೂ ತಿರಿದುಕೊಂಡು ಹೋಗಿರುವರೋ ಎಂಬ ಆತುರದಿಂದ ಹೂದೋಟಕ್ಕೆ ಹೊರಡುವಾಗ ಶಿವನ ಪೂಜಾಸಾಮಗ್ರಿಗಳಿಗೆ ಆತನ ಕಾಲು ಸೋಕಿತು. ಕೂಡಲೇ ಆತನು ತನ್ನ ಕಾಲುಗಳೆರಡನ್ನೂ ಕತ್ತರಿಸಿ ಶಿವನ ಮುಂದೆ ಇರಿಸಿಬಿಟ್ಟನು. ಇದನ್ನು ನೋಡಿದ ಪಂಡಿತಾರಾಧ್ಯನು ಮಹಾದೇವಯ್ಯನನ್ನು ಹೊಗಳಿ ಆತನ ಭಕ್ತಿಯ ಭರವನ್ನು ಕೊಂಡಾಡಿದನು. ತುಂಡಾದ ಕಾಲುಗಳೆರಡನ್ನೂ ಪಂಡಿತಾರಾಧ್ಯನು ಬರಸೆಳೆದುಕೊಂಡು ಅವನ್ನು ಕಣ್ಣಿಗೆ ಒತ್ತಿಕೊಂಡನು. ಕತ್ತರಿಸಿಹೋದ ಆತನ ಪಾದಗಳನ್ನು ಮತ್ತೆ ಜೋಡಿಸಿ ತೀರ್ಥಪುಷ್ಪಗಳನ್ನು ಅವುಗಳ ಮೇಲೆ ತಳಿದು ಭಸ್ಮವನ್ನು ಚಿಮುಕಿಸಿ ಅಲ್ಲಿದ್ದ ಭಕ್ತರಿಗೆಲ್ಲ ವಂದಿಸಿದನು. ಆಮೇಲೆ "ಎಲೆ ಮಹಾದೇವ ಭಕ್ತತತಿ ನಿನಗೆ ಚರಣಗಳನ್ನು ದಯಪಾಲಿಸಿತು ಏಳು" ಎನ್ನಲು ಕೂಡಲೆ ಮೇಲೆದ್ದನು. ಅಲ್ಲಿದ್ದ ಶರಣಗಣಕ್ಕೆ ವಂದನೆಯನ್ನು ಮಾಡು ಎಂದು ಪಂಡಿತೇಂದ್ರ ಹೇಳಲು ಅವರಿಗೆಲ್ಲ ಪ್ರದಕ್ಷಿಣ ನಮಸ್ಕಾರವನ್ನು ಮಾಡಿದನು. ಪಾದಗಳನ್ನು ಕತ್ತರಿಸಿಕೊಂಡು ಶಿವನ ಮುಂದೆ ಇರಿಸಿದ ಭಕ್ತರುಂಟೇ ಎಂದು ಅಲ್ಲಿದ್ದ ಭಕ್ತಪ್ರಸರವೆಲ್ಲ ಮಹಾದೇವಯ್ಯನನ್ನು ಕೊಂಡಾಡಿತು. ಅದೇ ರೀತಿ ಮಲ್ಲಿಕಾರ್ಜುನಪಂಡಿತಾರಾಧ್ಯನ ಮಹಿಮೆಯನ್ನು ಹೊಗಳಿತು.

ಅರುವತ್ತುಮೂವರಲ್ಲಿ ಒಬ್ಬನಾದ ಕಲಿಕಂಬಗಣನಾಥನು ಜಂಗಮರು ತನ್ನ ಮನೆಗೆ ಬಂದರೆ ಅವರನ್ನು ಸಾಕ್ಷಾತ್ ಶಿವನೆಂದೇ ಭಾವಿಸಿ ಅವರ ಪಾದತೀರ್ಥವನ್ನು ಕೊಳ್ಳುತ್ತಿದ್ದನು. ಚರಲಿಂಗ ಪಾದೋದಕದ ಮಾಹಾತ್ಮ್ಯವನ್ನು ಮೆರೆಯುತ್ತಿದ್ದನು.

ಇದಕ್ಕೆ ಸಾಟಿ ಜಗತ್ತಿನಲ್ಲಿ ಮತ್ತಾವುದೂ ಇಲ್ಲವೆಂದು ಭಾವಿಸಿ ಅದನ್ನೇ ತನ್ನ ನೇಮ ವಾಗಿಟ್ಟುಕೊಂಡನು. ಹೀಗಿರಲು ಒಂದುದಿನ ಭಕ್ತರು ಆತನ ಮನೆಗೆ ಬಂದರು. ಅವರ ಪಾದಗಳನ್ನು ತೊಳೆಯುವ ವೇಳೆಗೆ ಅವರ ಮನೆಯ ತೊತ್ತಿನ ಮಗನಾದ ಮಲ್ಲಯ್ಯ ನೆಂಬುವನು ತನ್ನ ಪಾದಗಳನ್ನೂ ನೀಡಿದನು. ಪಾದಗಳನ್ನು ತೊಳೆಯಲು ನೀರೆರೆಯುತ್ತಿದ್ದ ಕಲಿಕಂಬನ ಭಾರ್ಯೆ ಅದನ್ನು ನೋಡಿ "ಇವನು ನಮ್ಮ ಮನೆಯ ಮಲ್ಲ. ಶಿವಭಕ್ತನ ವೇಷದಿಂದ ಬಂದಿದ್ದಾನೆ. ಮನೆಯ ಕೆಲಸವನ್ನು ಮಾಡಲಾರದೆ ತಲೆಯನ್ನು ಬೋಳಿಸಿ ಕೊಂಡು ಬಂದಿರುವ ಇವನನ್ನು ಜಂಗಮನೆಂದು ಭಾವಿಸಿ ಪಾದಗಳನ್ನು ತೊಳೆದರೆ ಪಾಪ ದೊರೆಕೊಳ್ಳುತ್ತದೆ. ಇವನ ಪಾದವನ್ನು ತೊಳೆದು ಚೋಳನಂತೆ ಶಿವಪುರವನ್ನು ಸೇರು ವೆಯಾ? ತಿರುನೀಲಕಂಠನಂತೆ ಸತೀಸಮೇತನಾಗಿ ಹೋಗುವೆಯಾ? ಚೇರಮನಂತೆ ಪರಿಜನ ರೊಡನೆ ಕೈಲಾಸಕ್ಕೆ ಹೋಗುವೆಯಾ? ತಲೆಯನ್ನು ಬೋಳಿಸಿಕೊಂಡು ಭಸ್ಮವನ್ನು ಧರಿಸಿ ಕೊಂಡು ಬಂದವರೆಲ್ಲ ಜಂಗಮರಾಗುತ್ತಾರೆಯೆ? ಇವನ ಕಾಲಿಗೆ ನೀರನ್ನು ಎರೆಯುವುದಿಲ್ಲ ನೀವೇ ಬೇಕಾದರೆ ಎರೆದುಕೊಳ್ಳಿ" ಎಂದಳು. ಆಕೆಯ ಮಾತುಗಳನ್ನು ಕೇಳಿದ ಕಲಿಕಂಬ ಶಿವಶಿವಾ ಎಂದು ಕಿವಿಗಳನ್ನು ಮುಚ್ಚಿಕೊಂಡು "ಎಲೇ ಈತನು ಶಿವಮೂರ್ತಿ. ವ್ಯರ್ಥವಾಗಿ ಗಳಹಬೇಡ" ಎಂದನು. ಶಿವಲಾಂಛನ ತಳೆದವರೆಲ್ಲ ಶಿವಭಕ್ತರೆಂಬುದನ್ನು ಅರಿಯದೆ ಮೂಢ ಮತಿಯಾಗಿರುವ ನಿನ್ನನ್ನು ಕೊಂದುಬಿಡುವೆನೆಂದು ಆಕೆಯ ಎರಡು ಕೈಗಳನ್ನು ಕತ್ತರಿಸಿ ಹಾಕಿದನು. ಆಮೇಲೆ ಆಕೆಯ ಮುಂದಲೆಯನ್ನು ಹಿಡಿದೆಳೆದುಕೊಂಡು ಹೋಗಿ ಹಿತ್ತಿಲಲ್ಲಿ ತಳ್ಳಿದನು. ಪತ್ನಿ ಎಂಬ ಮಮಕಾರವನ್ನು ಬಿಟ್ಟು ತನ್ನ ಭಕ್ತಿಯನ್ನು ಮೆರೆದ ಕಲಿಕಂಬ ನನ್ನು ಎಲ್ಲರೂ ಹೊಗಳಿದರು. ಈ ತೆರನ ಮತ್ತೆ ಕೆಲವು ಭಕ್ತರ ಕಥೆಗಳನ್ನು ಹೇಳಿದರು.

ಚಂಡೇಶನೆಂಬುವನು ಮರಳಿನ ಲಿಂಗವನ್ನು ಮಾಡಿ ಅವುಗಳ ಮೇಲೆ ಹಸುಗಳ ಹಾಲನ್ನು ಕರೆದು ಅದಕ್ಕೆ ಅಭಿಷೇಕ ಮಾಡುತ್ತಿರುವಲ್ಲಿ ಆತನ ತಂದೆ ಬಂದು ಆ ಮರಳ ಲಿಂಗನನ್ನು ನೋಡಿ, ಇದಕ್ಕೆ ಹಸುವಿನ ಹಾಲನ್ನು ಕರೆಯುವೆಯಾ ಎಂದು ಆ ಲಿಂಗವನ್ನು ಕಾಲಿನಿಂದ ಒದ್ದನು. ಅದನ್ನು ನೋಡಿದ ಚಂಡೇಶ ಬಹಳ ಕೋಪದಿಂದ ಅವನ ಕಾಲು ಗಳನ್ನು ಕತ್ತರಿಸಿದನು. ಹೀಗೆಯೇ ಆಡಿನ ಹಿಕ್ಕೆಯನ್ನು ಲಿಂಗವೆಂದು ಭಾವಿಸಿ ಅದಕ್ಕೆ ಕ್ಷೀರಾಭಿಷೇಕವನ್ನು ಮಾಡುತ್ತಿದ್ದ ಕಾಟಕೋಟನನ್ನು ನೋಡಿ ಅವನ ತಂದೆ ಆ ಲಿಂಗವನ್ನು ಕಾಲಿನಿಂದ ಒದ್ದನು. ಅದನ್ನು ನೋಡಿದ ಕಾಟಕೂಟ ರೋಷಪರವಶನಾಗಿ ಕೊಡಲಿಯಿಂದ ತಂದೆಯ ತಲೆಯನ್ನೇ ಕಡಿದು ಹಾಕಿದನು. ಇದೇರೀತಿ ನಿಂಬವ್ವೆ ಎಂಬವಳು ಶಿವನಿಗಾಗಿ ಇರಿಸಿದ್ದ ದೋಸೆಯನ್ನು ತನ್ನ ಮಗ ಬಂದು ತಿಳಿಯದೆ ತಿನ್ನಲು ಅವನ ತಲೆಯನ್ನು ಮುಸಲ ದಿಂದ ಹೊಡೆದಳು. ಸದ್ಭಕ್ತರಾದವರು ಲಿಂಗ ಜಂಗಮದ ನಿಂದೆಯನ್ನು ಎಂತು ಕೇಳುವರು ಎಂದು ಭಕ್ತ ಸಮೂಹವೆಲ್ಲವೂ ಕಲಿಕಂಬನನ್ನು ಸ್ತುತಿಸುತ್ತಿರುವಾಗ ವೀರಶೈವೋದ್ಧಾರ ನಿರತನಾದ ಗುರು ಪಿಳ್ಳೆನಾಯ್ನಾರ್ ಬರಲು ಕಲಿಕಂಬ ಅವರನ್ನು ಮನೆಗೆ ಕರೆದುಕೊಂಡು ಹೋಗಿ ಅವರ ಪಾದಪದ್ಮಗಳನ್ನು ತೊಳೆದು ತೀರ್ಥವನ್ನು ಸೇವಿಸಿದನು. ಪಿಳ್ಳೆ ನಾಯ್ನಾರ್ ಭಕ್ತರಿಂದ ಕಲಿಕಂಬನ ಹೆಂಡತಿಯು ಸಂಗತಿಯನ್ನು ಕೇಳಿ ಆಕೆಯನ್ನು ಕರೆಸಿ

ಕತ್ತರಿಸಿಹಾಕಿದ್ದ ಆಕೆಯ ಕೈಗಳನ್ನು ತರಿಸಿ ಅವನ್ನು ಜೋಡಿಸಿ ವಿಭೂತಿಯನ್ನು ಧರಿಸಿ ಭಕ್ತರಿಗೆ ಕೈಯನ್ನು ಮುಗಿಯುವಂತೆ ಹೇಳಲು ಆಕೆ ಹಾಗೆಯೇ ಮಾಡಿದಳು. ಆಕೆಯ ಕೈಗಳು ಮೊದಲಿನಂತಾದುವು. ಎಲ್ಲರೂ ಪಿಳ್ಳೈನಾಯ್ನಾರ ಮಹಿಮೆಯನ್ನು ಹೊಗಳಿದರು.

ಪಿಳ್ಳೈನಾಯ್ನಾರ್ ಮಧುರಾಪುರಿಗೆ ಬಂದಾಗ ಅಲ್ಲಿದ್ದ ಒಬ್ಬ ಕುಡಿಯ ತನ್ನ ಮಗಳನ್ನು ಬೇಡಿಬಂದವನನ್ನು ಮನೆಗೆಲಸಕ್ಕೆ ಇರಿಸಿಕೊಂಡನು. ಮಗಳನ್ನು ಅವನಿಗೆ ಕೊಡದೆ ವ್ಯರ್ಥವಾಗಿ ಅವನಿಂದ ದುಡಿಸಿಕೊಂಡು ಮತ್ತೊಬ್ಬ ಮಗಳನ್ನು ಕೊಡುವುದಾಗಿ ಹೇಳು ತ್ತಿದ್ದನು. ಹೀಗಿರುವಲ್ಲಿ ಆ ಕುಡಿಯನ ಕಿರಿಯ ಮಗಳು ಕೆಲಸದವನಲ್ಲಿಗೆ ಬಂದು "ನನ್ನ ತಂದೆ ವ್ಯರ್ಥವಾಗಿ ನಿನ್ನಿಂದ ಕೆಲಸಮಾಡಿಸಿಕೊಳ್ಳುತ್ತಿದ್ದಾನೆ. ನನ್ನನ್ನೂ ಸಹ ನಿನಗೆ ಮದುವೆ ಮಾಡಿಕೊಡುವುದಿಲ್ಲ. ಆದ್ದರಿಂದ ನನ್ನನ್ನು ಎಲ್ಲಿಗಾದರೂ ಕರೆದುಕೊಂಡು ಹೋಗಿಬಿಡು" ಎಂದಳು. ಅದರಂತೆ ಅವರಿಬ್ಬರೂ ಮನೆಬಿಟ್ಟು ಹೊರಟುಹೋದರು. ಕಾಡಿ ನಲ್ಲಿ ಅವರು ಬರುತ್ತಿದ್ದಾಗ ಹಾವು ಕಚ್ಚಿ ಪ್ರಿಯತಮನು ಮಡಿದನು. ಆಗ ಅವಳ ಪ್ರಲಾಪವನ್ನು ಕೇಳಿದ ಪಿಳ್ಳೈನಾಯ್ನಾರ್ ಸತ್ತುಹೋದವನನ್ನು ಬದುಕಿಸಿಕೊಟ್ಟನು.

ವಾಗೀಶನಾಯ್ನಾರ್ ಎಂಬ ಶಿವಭಕ್ತ ಹರಪ್ರಸಾದದಿಂದ ಮಗಳನ್ನು ಪಡೆದು ಅವಳನ್ನು ಪಿಳ್ಳೈನಾಯ್ನಾರಿಗಲ್ಲದೆ ಮತ್ತಾರಿಗೂ ಕೊಡುವುದಿಲ್ಲ ಎಂದಿರುವಲ್ಲಿ ಅವಳು ಸತ್ತುಹೋದಳು. ತನ್ನ ಭಾಷೆಗೆ ಕುಂದಾಗದಂತೆ ನೋಡಿಕೊಳ್ಳಲು ಆತನು ಆ ಹೆಣ ವನ್ನು ಒಂದು ಮಡಕೆಯಲ್ಲಿ ಇರಿಸಿ ಪಿಳ್ಳೈನಾಯ್ನಾರ ಬರವನ್ನು ನಿರೀಕ್ಷಿಸಿಕೊಂಡಿದ್ದನು. ಪಿಳ್ಳೈನಾಯ್ನಾರ್ ತನ್ನ ಮನೆಗೆ ಬಂದ ಮೇಲೆ ಅವನನ್ನು ಸತ್ಕರಿಸಿ ಘಟದಲ್ಲಿದ್ದ ಶವವನ್ನು ತರಿಸಿ "ಈಕೆಯನ್ನು ನಿನಗೋಸ್ಕರವಾಗಿ ಪಡೆದೆ. ಈಗ ನಿನಗೆ ಒಪ್ಪಿಸಿದ್ದೇನೆ. ನನ್ನ ಭಾಷೆ ನೆರವೇರಿತು, ನಿನ್ನ ಚಿತ್ತಕ್ಕೆ ಬಂದಂತೆ ಮಾಡು" ಎಂದನು. ಭಕ್ತರು ಆ ಘಟವನ್ನು ಮುಟ್ಟಿ ವಿಭೂತಿಯನ್ನು ಅದರ ಮೇಲೆ ಚಿಮುಕಿಸಿದರು. ಕೂಡಲೇ ಅದರಿಂದ ಕನ್ಯಾಮಣಿ ಹೊರಬಂದಳು. ಅದನ್ನು ಕಂಡವರೆಲ್ಲ ಪಿಳ್ಳೈನಾಯ್ನಾರನನ್ನು ಸ್ತುತಿಸಿದರು.

ಅಭವಭಕ್ತನೂ ಜಿತೇಂದ್ರಿಯನೂ ಗುರುಲಿಂಗಜಂಗಮಾರ್ಚನಯುಕ್ತನೂ ಆದ ದಸರಯ್ಯನೆಂಬುವನು ಒಂದುದಿನ ಶಂಭುಪೂಜೆಗೆ ಹೂಗಳನ್ನು ತರಲು ಹೋಗುತ್ತಿದ್ದಾಗ ದಾರಿಯಲ್ಲಿ ದುರ್ಜನರು ಆತನನ್ನು ಪರಿಪರಿಯಾಗಿ ಗೇಲಿಮಾಡಿದರು. ದಸರಯ್ಯನಾದರೊ ಹೂವುಗಳನ್ನು ಕೊಯ್ದರೆ ಗಿಡಕ್ಕೆ ಬಾಧೆಯಾಗುವುದೆಂದು ಗಿಡದ ಕೆಳಗೆಲ್ಲಾ ಸಾರಿಸಿ ಗಾಳಿಗೆ ಉದುರಿದ ಹೂವುಗಳನ್ನೇ ತಂದು ಶಿವಾರ್ಚನೆ ಮಾಡುತ್ತಿದ್ದನು. ಆ ದುಷ್ಟರು ಅದನ್ನೆಲ್ಲಾ ನೋಡಿ ಕಟಕಿಯನ್ನಾಡಿದರು. ಬಳಿಕ ಎರಡೂ ಕೈಗಳಿಲ್ಲದ ಒಬ್ಬ ಭಂಡನಾದ ಮೋಟಮಲ್ಲಯ್ಯನನ್ನು ಕರೆಸಿ ಅವನ ತಲೆಯನ್ನು ಬೋಳಿಸಿ ಅವನಿಗೆ ವಿಭೂತಿ ರುದ್ರಾಕ್ಷಿ ಗಳನ್ನು ಧರಿಸಿ ಜಂಗಮನಂತೆ ಮಾಡಿದರು. ಆಮೇಲೆ ದಸರಯ್ಯನನ್ನು ಅವನಿಗೆ ತೋರಿಸಿ ಅವನ ತಲೆಯನ್ನು ನಿನ್ನ ಮೋಟುಕೈಗಳಿಂದ ಬಡಿ ಎಂದು ಹೇಳಿಕಳಿಸಿದರು. ಅದರಂತೆ ಮಲ್ಲಯ್ಯ ದಸರಯ್ಯನ ಹಿಂದೆಯೇ ಬಂದು ನಾನಾರೀತಿಯಲ್ಲಿ ಮಾತಾಡಿಸಿದರೂ ಸುಮ್ಮನೆ ಹೋಗುತ್ತಿದ್ದ ದಸರಯ್ಯನ ತಲೆಯ ಮೇಲೆ ಚೆನ್ನಾಗಿ ಬಡಿದನು. ಅವನ ತಲೆ ಒಡೆದು

ರಕ್ತ ಸುರಿಯುತ್ತಿದ್ದರೂ ಅದನ್ನು ಲೆಕ್ಕಿಸದ ದಸರಯ್ಯ ಶಿವಲಾಂಛನವುಳ್ಳ ಅವನನ್ನು ಜಂಗಮನೆಂದೇ ಭಾವಿಸಿ "ಎಲೈ ಸ್ವಾಮಿಯೇ ನನ್ನ ತಲೆಯನ್ನು ಹೊಡೆದು ನಿಮ್ಮ ಮೃದುಹಸ್ತಗಳಿಗೆ ನೋವುಂಟಾಯಿತಲ್ಲವೆ? ನಾನು ಅಜ್ಞಾನಿ, ನನ್ನ ಅನಂತ ತಪ್ಪುಗಳನ್ನು ಕ್ಷಮಿಸಬೇಕು" ಎಂದು ಅವನ ಕಾಲಿಗೆ ಬಿದ್ದನು. ತನ್ನ ತಲೆಯ ಮೇಲೆ ಹೊಡೆದುದಕ್ಕಾಗಿ ಕೈಗಳಿಗೆ ನೋವಾಯಿತೆಂದು ಅವನ ಕೈಗಳನ್ನು ಚೆನ್ನಾಗಿ ಒತ್ತಿದನು. ಹೀಗೆ ಕೈಗಳನ್ನು ಒತ್ತುತ್ತಿದ್ದಾಗ ಮೋಟಾದ ಕೈಗಳೆರಡೂ ಚಿಗುರಿ ಮೊದಲಿನಂತಾದುವು. ಮಲ್ಲಯ್ಯ ತಾನು ಮಾಡಿದ ಅಕೃತ್ಯಕ್ಕಾಗಿ ಮರುಗಿ ಹೆಬ್ಬೆರಳಿನಿಂದ ನೆಲವನ್ನು ಗೀಚುತಿದ್ದನು. ದಸರಯ್ಯ ನಾದರೋ ಆ ಮಲ್ಲಯ್ಯನ ಚಿಗುರಿದ ಕೈಗಳಿಂದ ನೆಟಿಕೆ ತೆಗೆದು ಒತ್ತುತ್ತಿದ್ದನು. ಈ ವಾರ್ತೆಯನ್ನು ಭಕ್ತಸಮೂಹವೆಲ್ಲವೂ ಕೇಳಿ ದಸರಯ್ಯನ ಮಹಿಮೆಯನ್ನು ಕೊಂಡಾಡಿತು. ಇದಕ್ಕೆ ದೃಷ್ಟಾಂತವಾಗಿ ಸಾಂಖ್ಯ, ಪಿಟ್ಟವ್ವೆ, ಕಣ್ಣಪ್ಪ, ಚಿರುತೊಂಡ–ಇವರೇ ಮೊದಲಾದ ಶಿವಭಕ್ತರ ಪ್ರಸಂಗಗಳನ್ನು ಹೇಳಿದರು. ದಸರಯ್ಯ ನಿನಗೆ ನಾವು ಮಾಡಿದ ದುಷ್ಕರ್ಮವನ್ನು ನೆನೆಯದೆ ನಿಮ್ಮ ಸದ್ಗುಣವನ್ನು ಪ್ರದರ್ಶಿಸಿ ಮೋಟಯ್ಯನಿಗೆ ಕೈಗಳು ಬರುವಂತೆ ಮಾಡಿದಿರಿ ಎಂದು ಆ ದುಷ್ಟರು ದಸರಯ್ಯನನ್ನು ಹೊಗಳಿದರು. ಆದ್ದರಿಂದ ದುಷ್ಟರ ಸ್ನೇಹಕ್ಕಿಂತ ಸಾಧು ಗಳ ಸ್ನೇಹವೇ ಲೇಸು ಎಂಬುದನ್ನು ನಿನ್ನ ಕಥೆಯಿಂದ ತಿಳಿದುಕೊಂಡೆವು ಎಂದರು.

ಗುರುಭಕ್ತಿಯಲ್ಲಿ ಅತ್ಯಂತ ನಿಷ್ಣಾತನಾಗಿದ್ದ ಗುರುಭಕ್ತನೆಂಬುವನು ತ್ರಿಸಂಧ್ಯಾ ಕಾಲಗಳಲ್ಲಿ ಗುರುಪೂಜೆಯನ್ನೇ ಮಾಡುತ್ತ ಗುರುಪಾದ ತೀರ್ಥಗಳನ್ನು ಸೇವಿಸುತ್ತಿದ್ದನು. ಹೀಗಿರಲು ಒಮ್ಮೆ ಗುರುಪೂಜೆಗೆ ಹೂವುಗಳನ್ನು ತರಲು ಹೊರಡುವ ಸಮಯದಲ್ಲಿ ಗುರು ವಿನ ಪಾದುಕೆಗಳಿಗೆ ಆತನ ಪಾದ ಸೋಕಿತು. ಅದರಿಂದ ಅತಿಯಾಗಿ ಭಯಪಟ್ಟು ಆ ಪಾಪಕ್ಕೆ ಪ್ರಾಯಶ್ಚಿತ್ತವಾಗಿ ತನ್ನ ಕಾಲುಗಳನ್ನು ಕತ್ತರಿಸಿಕೊಂಡನು. ಇದನ್ನು ಕೇಳಿದ ಅಮರಗುಂಡದ ಮಲ್ಲಿಕಾರ್ಜುನರು ಶಿಷ್ಯಸಮೇತರಾಗಿ ಅವನಲ್ಲಿಗೆ ಬಂದರು. ಅವರನ್ನು ಕಂಡಕೂಡಲೇ ಗುರುಭಕ್ತ ಅವರ ಪಾದಗಳಿಗೆ ನಮಸ್ಕರಿಸಿದನು. ಆಕ್ಷಣ ಆತನ ಎರಡು ಕಾಲುಗಳೂ ಮೊದಲಿನಂತಾದುವು. ಗುರುಭಕ್ತನ ಗುರುಭಕ್ತಿಯನ್ನು ಉಳಿದ ಶಿಷ್ಯರಿಗೆ ತೋರಬೇಕೆಂದು ಮಲ್ಲಿಕಾರ್ಜುನರು ಒಂದು ಮಂಚವನ್ನು ತನ್ನ ಇದಿರಿನಲ್ಲಿರಿಸಿ ಅದರ ಮೇಲೆ ಕುಳಿತುಕೊಳ್ಳುವಂತೆ ಒಬ್ಬೊಬ್ಬ ಶಿಷ್ಯನಿಗೂ ಹೇಳಿದರು. ಗುರುವಿನ ಮಾತನ್ನು ಕೇಳಿದ ಶಿಷ್ಯರು ಕಿವಿಗಳನ್ನು ಮುಚ್ಚಿಕೊಂಡು ಗುರುವಿನ ಸಮ್ಮುಖದಲ್ಲಿ ಮಂಚವನ್ನು ಏರ ಬಹುದೆ ಎಂದು ಉಪಹಾಸ ಮಾಡಿದರು. ಆಗ ಗುರುಚರಣಪೂಜಾನುರಕ್ತನಾದ ಗುರು ಭಕ್ತನಿಗೆ ಹೇಳಲಾಗಿ ಗುರುವಾಜ್ಞೆ ಅನುಲ್ಲಂಘನೀಯವೆಂದು ಗುರುಚರಣಕ್ಕೆ ನಮಸ್ಕರಿಸಿ ಮಂಚವನ್ನೇರಿದನು. ಉಳಿದ ಶಿಷ್ಯರೆಲ್ಲರೂ ಗುರುಭಕ್ತನು ಮಾಡಿದ ಕಾರ್ಯಕ್ಕೆ ಆಕ್ರೋಶ ಗೊಂಡು ಅವನನ್ನು ಕೊಲ್ಲಬೇಕೆಂದರು. ಆಗ ಗುರುಭಕ್ತನನ್ನು ಗುರುವು ಕರೆಯಲು ಆತನು ಮಂಚದಿಂದಿಳಿದು ಬಂದು ಗುರುವಿನ ಪಾದಗಳಿಗೆ ಎರಗಿದನು. ಆಮೇಲೆ ಗುರು ಒಂದು ಹರಿತವಾದ ಶೂಲವನ್ನು ತರಿಸಿ ತನ್ನ ಮುಂದೆ ನೆಡಿಸಿ ಅದನ್ನು ಏರುವಂತೆ ಶಿಷ್ಯರಿಗೆ ಹೇಳಿ ದನು. ಅವರು ಯಾರೂ ಮುಂದೆ ಬರಲಿಲ್ಲ. ಅಷ್ಟೇ ಅಲ್ಲ ಮಂಚವನ್ನೇರಿದ ನಿಮ್ಮ ಶಿಷ್ಯ

ಗುರುಭಕ್ತನಿಗೇ ಹೇಳಿ ಎಂದರು. ಅದರಂತೆ ಗುರುಭಕ್ತನಿಗೆ ಶೂಲವನ್ನು ಏರುವಂತೆ ತಿಳಿಸಿದರು. ಆತನು ಹಿಂದುಮುಂದು ನೋಡದೆ ಗುರುವಿಗೆ ನಮಸ್ಕರಿಸಿ ಅವರು ಕೊಟ್ಟ ಪ್ರಸಾದ ತಾಂಬೂಲವನ್ನು ಸೇವಿಸಿ ಉಳಿದುದನ್ನು ಅಂಗಕ್ಕೆ ಲೇಪಿಸಿಕೊಂಡು ಶೂಲವನ್ನೇರಿ ನಿಶ್ಚಲನಾಗಿ ಕುಳಿತು ಗುರುವನ್ನು ಧ್ಯಾನಿಸುತ್ತಿದ್ದನು. ಗುರು ಶಿಷ್ಯರಿಗೆಲ್ಲ ಅದನ್ನು ತೋರಿಸಿ ಅವರನ್ನು ಭಂಗಿಸಿದನು. ಆಮೇಲೆ ಶಿಷ್ಯನಿಗೆ ಶೂಲದಿಂದ ಇಳಿದು ಬರುವಂತೆ ಹೇಳಿದನು. ಗುರುಭಕ್ತ ನಿಶ್ಚಿಂತೆಯಿಂದ ಇಳಿದು ಬಂದು ಗುರುವಿಗೆ ನಮಸ್ಕರಿಸಿದನು. ಆತನ ದೇಹದಲ್ಲಿ ಸ್ವಲ್ಪವೂ ಗಾಯದ ಚಿಹ್ನೆಗಳೇ ತೋರಲಿಲ್ಲ. ಎಲ್ಲರೂ ಗುರುಭಕ್ತನನ್ನು ಸ್ತುತಿಸಿದರು.

ಗುರುಭಕ್ತಿಯೇ ಮೂರ್ತಿವೆತ್ತಂತಿದ್ದ ಗುರುಭಕ್ತಾಂಡಾರಿ ಎಂಬುವನು ಒಂದುದಿನ ಸೂಳೆಗೇರಿಯಲ್ಲಿ ಬರುತ್ತಿದ್ದಾಗ ಪ್ರೌಢಾವತಿ ಎಂಬ ಲಾವಣ್ಯವತಿಯೂ ಶಿವಭಕ್ತೆಯೂ ಆದ ವೇಶ್ಯೆ ತನ್ನ ಮನೆವಾಗಿಲಲ್ಲಿದ್ದುದನ್ನು ನೋಡಿದಕೂಡಲೇ ಕದಡಿದ ಮನಸ್ಸುಳ್ಳವನಾಗಿ ಅವಳನ್ನು ಕೂಡಬೇಕೆಂದು ತನ್ನ ಸ್ನೇಹಿತನೊಂದಿಗೆ ಹಣದ ಗಂಟನ್ನು ಕೊಟ್ಟು ಅವಳಲ್ಲಿಗೆ ಕಳಿಸಿದನು. ಪ್ರೌಢಾವತಿ ಅವನೊಡನೆ "ತಮಗೆಮಗೆ ಸಡಗರದಿನೊಡಮೆರೆವುದಸುಮಲ್ತು" ಎಂದು ಹೇಳಿ ಆ ಗಂಟನ್ನು ಹಿಂದಕ್ಕೆ ಕಳಿಸಿದಳು. ಗುರುಭಕ್ತಾಂಡಾರಿ ಮತ್ತಷ್ಟು ಹಣವನ್ನು ಕೊಟ್ಟು ಪುನಃ ಕಳಿಸಿದನು. ಅದಕ್ಕೆ ಅವಳು ಈ ಹಣವನ್ನೆಲ್ಲಾ ಮಡುವಿನೊಳಗೀಡಾಡು ಎಂದು ಹೇಳಿ ಮತ್ತೆ ಹಿಂದಕ್ಕೆ ಕಳಿಸಿಬಿಟ್ಟಳು. ಆಗ ಗುರುಭಕ್ತಾಂಡಾರಿಯೇ ಅವಳಲ್ಲಿಗೆ ಹೋಗಿ 'ಏಕೆ ತನ್ನನ್ನು ನಿರಾಕರಿಸಿದೆ' ಎಂದು ಪ್ರಶ್ನಿಸಿದನು. ಮತ್ತು ರತಿಶಾಸ್ತ್ರದ ನಾನಾ ವಿದ್ಯೆಗಳನ್ನು ತೋರಿಸುವುದಾಗಿಯೂ ತಿಳಿಸಿದನು. ಅವರಿಬ್ಬರಿಗೂ ದೀರ್ಘವಾದ ಸಂಭಾಷಣೆಯಾಯಿತು. ಪ್ರೌಢಾವತಿ ನಾನಾ ಪರಿಯಾಗಿ ತಿಳಿಯಹೇಳಿದಳು. ಆದರೂ ಗುರುಭಕ್ತಾಂಡಾರಿಯ ಮನಸ್ಸು ಪರಿವರ್ತನೆಯಾಗಲಿಲ್ಲ. ಆಗ ಆಕೆ ಶ್ವೇತನ ಕಥೆಯನ್ನು ದೃಷ್ಟಾಂತವಾಗಿ ನಿರೂಪಿಸಿದಳು.

ರಂಭೆ ತನ್ನ ಮುಂದೆ ಕಾಮವಿಕಾರದಿಂದ ಕುಳಿತಿದ್ದ ಶ್ವೇತನನ್ನು ಕಂಡು ಮನಸ್ಸಿನೊಳಗೆ ಗಹಗಹಿಸಿ ನಕ್ಕಳು. ಅದನ್ನು ಕಂಡು ಶ್ವೇತ ಆ ನಗೆಗೆ ಕಾರಣವನ್ನು ಕೇಳಿದನು. ಆಕೆ "ಎಲೈ ಶ್ವೇತನೇ ನಿನ್ನ ಪೂರ್ವಚರಿತ್ರೆಯನ್ನು ಕೇಳು. ನೀನು ದುಷ್ಟನೂ ದುರಾಚಾರಿಯೂ ಕಾಮುಕನೂ ಆಗಿ ಸದಾ ಜಾರತನದಲ್ಲಿಯೇ ಮುಳುಗಿ ಹೋಗಿದ್ದೆ. ನೀನು ಒಮ್ಮೆ ವಾರನಾರಿಯರಿಗಾಗಿ ಹೂಮಾಲೆಯನ್ನು ತೆಗೆದುಕೊಂಡು ಹೋಗುತ್ತಿದ್ದಾಗ ಒಂದು ಹೂವು ಕೊಳಕುಸ್ಥಳದಲ್ಲಿ ಬಿದ್ದಿತು. ಅದನ್ನು ತೆಗೆದುಕೊಳ್ಳಲು ಒಪ್ಪದ ನೀನು 'ಶಿವಾರ್ಪಣಮಸ್ತು' ಎಂದೆ. ಆ ಮಾತಿನಿಂದ ನಿನಗೆ ಸುರಪತಿಯ ಪದವಿ ಪ್ರಾಪ್ತವಾಗಿ ನನ್ನ ಸಂಗ ಲಭಿಸಿತು. ಇಂದಿನ ರಾತ್ರಿ ಕಳೆದಕೂಡಲೇ ನೀನು ಮತ್ತೆ ನರಕಕೂಪದಲ್ಲಿ ಬೀಳುವುದನ್ನು ನೆನೆದು ನನಗೆ ನಗೆ ಬಂದಿತು" ಎಂದಳು. ಶ್ವೇತ ಅದಕ್ಕೆ "ನೀನೇಕೆ ಚಿಂತೆಮಾಡುವೆ? ಕಾಮಿನಿಯರೆಲ್ಲ ನನ್ನನ್ನು ಕಲಿಯುಗದ ಕಂದರ್ಪನೆಂದು ಕೊಂಡಾಡುತ್ತಿರುವರು. ಈಗ ಸಿಕ್ಕಿರುವ ಇಂದ್ರಪದವಿ ಶಿವ ಕೊಟ್ಟದ್ದು. ನಾಳೆ ಇದೇಕೆ ತಪ್ಪಿಹೋಗುತ್ತದೆ? ಆದ್ದರಿಂದ ನನ್ನ ಸಂಗಡ ಸುಖವನ್ನನುಭವಿಸು ಬಾ" ಎಂದು ಕರೆದನು. ಅದನ್ನು ಕೇಳಿದ ರಂಭೆ ನನ್ನೊಡನೆ ಇಂದು

ಇದ್ದು ನಾಳೆ ನರಕಕ್ಕೆ ಹೋಗುವನಲ್ಲಾ ಎಂದು ಪರಿತಪಿಸಿ ಬುದ್ಧಿವಾದವನ್ನು ಹೇಳಿದಳು. ಅದರಿಂದ ಶ್ವೇತನಿಗೆ ಜ್ಞಾನೋದಯುವಾಯಿತು. ರಂಭೆ ಅವನಿಗೆ ವಿಭೂತಿ ರುದ್ರಾಕ್ಷಿಗಳನ್ನು ಧರಿಸಿ ಶಿವಾಲಯವನ್ನು ತೋರಿದಳು. ಅವನು ಆ ಶಿವಾಲಯವನ್ನು ಗುಡಿಸಿ ಸಾರಿಸಿ ಗಂಗಾಜಲವನ್ನು ತಂದು ಶಿವನಿಗೆ ಅಭಿಷೇಕವನ್ನು ಮಾಡಿದನು. ನಾನಾ ವಿಧವಾದ ಧೂಪ ದೀಪಾರ್ಚನೆಗಳಿಂದ ಇಡೀ ರಾತ್ರಿ ಶಿವನ ಸಂಕೀರ್ತನೆಯಲ್ಲಿ ಕಾಲವನ್ನು ಕಳೆದನು. ಬೆಳ ಗಾಗುತ್ತಲೇ ಯಮಕಿಂಕರರು ಶ್ವೇತನನ್ನು ಹುಡುಕಿಕೊಂಡು ರಂಭೆಯಲ್ಲಿಗೆ ಬಂದು ಶ್ವೇತನು ಎಲ್ಲಿ ಎಂದು ಕೇಳಲು ಶಿವಾಲಯದಲ್ಲಿರುವುದಾಗಿ ತಿಳಿಸಿದಳು. ಯಮದೂತರು ಅಲ್ಲಿಗೆ ಹೋಗಿ ನೋಡಲಾಗಿ ಶ್ವೇತನು ಹರಪೂಜೆಯಲ್ಲಿ ಅನುರಕ್ತನಾಗಿದ್ದನು. ಅವರು ಅವನನ್ನು ಮುಟ್ಟಲು ಅಂಜಿ ಹಿಂತಿರುಗಿ ಯಮನಿಗೆ ಹೇಳಿದರು. ಅವನು ಕೋಪದಿಂದ ಅಲ್ಲಿಗೆ ಬಂದು ನೋಡಲು ಶ್ವೇತನು ತದೇಕಚಿತ್ತದಿಂದ ಶಿವಧ್ಯಾನದಲ್ಲಿ ತೊಡಗಿದ್ದನು. ಅವನ ಭಕ್ತಿಗೆ ಮೆಚ್ಚಿದ ಶಿವ ಯಮನನ್ನು ಸಂಹರಿಸಿ ಶ್ವೇತನಿಗೆ ಪ್ರಮಥಪದವಿಯನ್ನು ಕೊಟ್ಟನು. ರಂಭೆಯ ಉಪದೇಶದಿಂದ ಶ್ವೇತನಿಗೆ ಸದ್ಗತಿ ಲಭಿಸಿತು. ಆದ್ದರಿಂದ ಹಿತವರಾದ ಕಾಂತೆಯರ ಬುದ್ಧಿವಾದವನ್ನು ಕೇಳುವುದು ಲೇಸು ಎಂದು ಪ್ರೌಢಾವತಿ ನುಡಿದಳು.

ಈಶ್ವರಭಕ್ತನೂ ಕವಿರಾಜಶೇಖರನೂ ಆದ ಮಲ್ಹಣನೆಂಬುವನು ಒಬ್ಬ ವೇಶ್ಯೆಯ ಜೊತೆಯಲ್ಲಿ ಅನ್ಯೋನ್ಯದಿಂದಿದ್ದನು. ಹೀಗಿರಲು ಒಮ್ಮೆ ಆ ವೇಶ್ಯೆಯ ತಾಯಿ ವಿಟನಾದ ಮಲ್ಹಣನನ್ನು ಕುರಿತು "ಎಲೈ ಕುವಿಟನೆ, ನನ್ನ ಮಗಳು ಬಾಲ್ಯದಿಂದ ನಿನ್ನಲ್ಲೇ ಅನು ರಕ್ತಳಾಗಿದ್ದಾಳೆ. ನೀನಾದರೋ ನಿನ್ನ ಕವಿತೆಗಳಿಂದಲೇ ಅವಳನ್ನು ಮೆಚ್ಚಿಸಿ ಮೋಹ ಗೊಳಿಸಿರುವೆ. ನಿನ್ನ ಕವಿತ್ವದಿಂದ ನಮಗೇನು ಪ್ರಯೋಜನ? ನೀನು ಹಣವನ್ನು ತಂದು ಕೊಟ್ಟರೆ ನಮ್ಮ ಮನೆಯಲ್ಲಿರು ಇಲ್ಲದಿದ್ದರೆ ಹೊರಟುಹೋಗು" ಎಂದಳು. ಮಲ್ಹಣಿಗಾಗಿ ತನ್ನ ಸಮಸ್ತವನ್ನೂ ಕಳೆದುಕೊಂಡಿದ್ದ ಮಲ್ಹಣನನ್ನು ಅವಳು ಹೊರಗೆ ಹಾಕಿದಳು. ಮಲ್ಹಣಿಯನ್ನು ಬೇರೊಬ್ಬ ವಿಟನಿಗೆ ಒಪ್ಪಿಸಿದಳು. ಮಲ್ಹಣಿಯ ವಿರಹದಿಂದ ಬಹಳವಾಗಿ ಪರಿತಪಿಸಿದ ಮಲ್ಹಣ ಅವಳನ್ನು ಬಿಟ್ಟುಹೋಗಲಾರದೆ ಅವಳ ಮಾತುಗಳನ್ನಾದರೂ ಕೇಳಿಸಿಕೊಳ್ಳಬೇಕೆಂಬ ಹಂಬಲದಿಂದ ಅವಳ ಮನೆಯ ಮುಂದೆ ಇದ್ದ ಒಂದು ಕುಳಿಯಲ್ಲಿ ಕುಳಿತನು. ಇತ್ತ ಮಲ್ಹಣಿ ಮತ್ತೊಬ್ಬ ವಿಟನೊಂದಿಗೆ ಇದ್ದು ರಾತ್ರಿ ಬಾಗಿಲನ್ನು ತೆರೆದು ಕತ್ತಲಲ್ಲಿ ನೀರನ್ನು ಮುಕ್ಕಳಿಸಿ ಉಗುಳಿದಳು. ಕೆಳಗಿದ್ದ ಮಲ್ಹಣನ ಮೇಲೆ ಆ ನೀರು ಬಿದ್ದುದನ್ನು ಮಿಂಚಿನ ಬೆಳಕಿನಲ್ಲಿ ಕಂಡು ಅದಕ್ಕಾಗಿ ಬಹಳವಾಗಿ ನೊಂದು ಅವನನ್ನು ಒಳಗೆಕರೆತಂದು ಉಪಚರಿಸಿದಳು. ಆದರೆ ಮತ್ತೊಬ್ಬ ವಿಟನು ಅವಳಿಗಾಗಿ ಬಂದಿದ್ದನ್ನು ತಿಳಿದ ಮಲ್ಹಣ ಅವಳಾಗಿ ಮೇಲೆ ಬಿದ್ದು ಬಂದರೂ ರತಿಕೇಳಿಗೆ ಒಪ್ಪಲಿಲ್ಲ. ಆಗ ಮಲ್ಹಣಿ ತನ್ನ ಮೇಲೆ ಆತನಿಗಿದ್ದ ಅನುರಾಗವನ್ನು ಅರಿತು 'ಈ ಅನುರಾಗವನ್ನು ಶಿವನ ಮೇಲಿರಿಸು, ಶಿವನು ನನ್ನನ್ನು ನಿನಗೆ ದಕ್ಕುವಂತೆ ಮಾಡುತ್ತಾನೆ' ಎಂದಳು. ಅದಕ್ಕೆ ಅವನು ನೀನು ಬಂದು ನನ್ನನ್ನು ಗಾಢವಾಗಿ ಅಪ್ಪಿಕೊಂಡು ಕುಳಿತರೆ ನಾನು ಒಂದೇ ಪದ್ಯದಿಂದ ಈಶ್ವರ ನನ್ನು ಸ್ತುತಿಸಿ ಮೆಚ್ಚಿಸುತ್ತೇನೆ ಎಂದನು. ಅದಕ್ಕೆ ಅವಳು ಒಪ್ಪಿದಳು. ಮಾರನೆಯದಿನ

ಅವರಿಬ್ಬರೂ ಶಿವಾಲಯಕ್ಕೆ ಹೋಗಿ ಕಾಂತಾಕಚಪ್ರತ್ಯಯ ಎಂಬ ಮೂವತ್ತಾರು ಪದ್ಯ ಗಳಿಂದ ಈಶ್ವರನನ್ನು ಸ್ತುತಿಸಿದರು. ಆ ಸ್ತುತಿಗೆ ಮೆಚ್ಚಿದ ಶಿವನು ಅವರನ್ನು ಕೈಲಾಸಕ್ಕೆ ಕರ ದೊಯ್ದನು. ಆದ್ದರಿಂದ ಹಿತಪರಾದ ಸತಿಯರ ಮಾತನ್ನು ಕೇಳಬೇಕೆಂದು ಪ್ರೌಢಾವತಿ ಗುರುಭಕ್ತಾಂಡಾರಿಗೆ ಹೇಳಿದಳು.

ಕುಮಾರಪಾಲಗೂರ್ಜರನೆಂಬ ಮಲಹರನ ಸದ್ಭಕ್ತನಾದ ರಾಜನು ತನ್ನ ಸತಿ ಯೊಡನೆ ಒಂದುದಿನ ನೆತ್ತವನ್ನಾಡುತ್ತಿದ್ದನು. ಹೀಗೆ ನೆತ್ತವಾಡುತ್ತಿದ್ದಾಗ ಒಮ್ಮೆ ಅವನು ಅನಿರೀಕ್ಷಿತವಾಗಿ ನಕ್ಕನು. ಅದನ್ನು ಕಂಡ ಆತನ ಸತಿ 'ಇಲ್ಲಿ ನಾವಿಬ್ಬರೇ ಇದ್ದೇವೆ. ನಿಮಗೆ ನಿಷ್ಕಾರಣವಾಗಿ ನಗೆ ಏಕೆ ಬಂತು ಇದಕ್ಕೆ ಕಾರಣವೇನು' ಎಂದು ಪ್ರಶ್ನಿಸಿದಳು. ಅದಕ್ಕೆ ಅವನು ಸೌರಾಷ್ಟ್ರ ಸೋಮೇಶ್ವರನ ಭಕ್ತನಾದ ಓಹಿಲನ ಕಥೆಯನ್ನು ಹೇಳಿದನು. ಭಕ್ತವತ್ಸಲನಾದ ಓಹಿಲ ಸೋಮನಾಥಂಗೆ ಪ್ರತಿದಿನ ಸಹಸ್ರಕಲಶಾಭಿಷೇಕವನ್ನು ಮಾಡಿ ಬಿಲ್ವಪತ್ರೆಗಳಿಂದ ಪೂಜಿಸಿ ಮಹಿಷಾಕ್ಷಿ ಗುಗ್ಗುಳದ ಧೂಪವನ್ನು ಸಮರ್ಪಿಸುತ್ತಿ ದ್ದನು. ಈ ಕಾಯಕ ನಡೆಸುತ್ತಿದ್ದ ಓಹಿಲನಿಗೆ ಹಣವೆಲ್ಲ ವ್ಯಯವಾಗಿ ಬಡತನ ಪ್ರಾಪ್ತ ವಾಯಿತು. ಆದರೂ ಓಹಿಲ ತನ್ನ ವ್ರತವನ್ನು ತಪ್ಪದೆ ಪರಿಪಾಲಿಸುತ್ತಿದ್ದನು. ನಿತ್ಯವೂ ಕಾಡಿಗೆ ಹೋಗಿ ಪತ್ರೆ ಗುಗ್ಗುಳವನ್ನು ಸಂಗ್ರಹಿಸಿ ತಂದು ಸೋಮೇಶ್ವರನನ್ನು ಪೂಜಿಸು ತ್ತಿದ್ದನು. ಅವನ ಪೂಜೆಗೆ ಗೌಳತಾಪಸರು ಅಡ್ಡಿಪಡಿಸಿದರು. ಅವನಿಗೆ ಆಹಾರ ಸಿಕ್ಕದಂತೆ ಮಾಡಿದರು. ಆದರೆ ಇದಾವುದನ್ನೂ ಲೆಕ್ಕಿಸದ ಓಹಿಲ ಸೋಮೇಶ್ವರನ ನಿರ್ಮಾಲ್ಯವನ್ನೇ ಆಹಾರವಾಗಿ ಸ್ವೀಕರಿಸಿ ಪೂಜೆಯನ್ನು ತಪ್ಪದೆ ಮಾಡುತ್ತಿದ್ದನು. ಗೌಳತಾಪಸಿಗಳು ಆ ನಿರ್ಮಾಲ್ಯವೂ ಸಿಕ್ಕದಂತೆ ಸುಟ್ಟುಹಾಕಲು ಅದರ ಬೂದಿಯನ್ನೇ ತಿಂದು ತನ್ನ ಪೂಜೆ ಯನ್ನು ನಿರಂತರವಾಗಿ ಮಾಡುತ್ತಲೇ ಇದ್ದನು. ಹೀಗಿರಲು ಓಹಿಲಯ್ಯ ಅರಣ್ಯಕ್ಕೆ ಹೋಗಿ ಶ್ರೀಗಂಧದ ಚೆಕ್ಕೆಗಳನ್ನು ಆಯ್ದುಕೊಂಡು ಪತ್ರೆಯನ್ನು ಕೊಯ್ದು ಕಂಬಿಯಲ್ಲಿ ಹೊತ್ತು ಬರುತ್ತಿದ್ದಾಗ ಹರಿತವಾದ ದಸಿಯೊಂದು ಅವನ ಕಾಲಿಗೆ ನಾಟಿತು. ಆದರೂ ಆತನು ಅದನ್ನು ಲೆಕ್ಕಿಸದೆ ತುದಿಗಾಲಲ್ಲೇ ನಡೆದು ಬರುತ್ತಿದ್ದನು. ಆಗ ಸೋಮೇಶ್ವರ ಶಬರವೇಷದಿಂದ ಬಂದು ಅವನ ಕಾಲಿನಲ್ಲಿ ನಟ್ಟಿದ್ದ ದಸಿಯನ್ನು ಕಿತ್ತು ಆ ಗಾಯವನ್ನು ವಾಸಿಮಾಡಿ ಮಾಯವಾದನು. ಓಹಿಲಯ್ಯ ದೇವಾಲಯಕ್ಕೆ ಬಂದು ಕಂಬಿಯನ್ನು ಅಲ್ಲಿ ಇಳಿಸಿ ಘಂಟೆಯನ್ನು ತರಲು ಹೋದಾಗ ಗೌಳತಾಪಸರು ಆ ಕಂಬಿಯನ್ನು ಮರಸಿಟ್ಟರು. ಆಗ ಓಹಿಲಯ್ಯ ತನ್ನ ಶರೀರವನ್ನೆ ಗುಗ್ಗುಳವಾಗಿ ಅರ್ಪಿಸಿ ಸೋಮೇಶ್ವರನನ್ನು ಸಾಕ್ಷಾತ್ಕರಿಸಿಕೊಂಡು ಕೈಲಾಸಕ್ಕೆ ಹೋದನು. ಇದೇ ರೀತಿ ಕೈಲಾಸಕ್ಕೆ ಹೋದ ಇತರ ಶಿವಶರಣರ ಕಥೆಗಳನ್ನು ಹೇಳಿದನು. ಅವರೆಲ್ಲ ಪರಿಜನ ಪುರಜನ ಸಮೇತ ಹೋದರೆ ಓಹಿಲ ಒಬ್ಬನೇ ಕೈಲಾಸಕ್ಕೆ ಹೋದ ಅದಕ್ಕೆ ನಗೆ ಬಂದಿತು ಎಂದನು. ಆತನ ರಾಣಿ 'ನೀವು ಓಹಿಲಯ್ಯನಂತೆ ಹುನಗರಿಗೆ ಹೋಗಲಾರಿರಿ' ಎಂದು ನಗೆಯಾಡಿದಳು. ಗೂರ್ಜರ ಶಿವಪುರಿಗೆ ಹೋಗುವುದೇನು ಆಶ್ಚರ್ಯವೇ ಎನ್ನಲು, ಅದಕ್ಕೆ ಅವಳು ಯಾವಾಗ ಯಾರೊಡನೆ ಎಂದು ಕೇಳಲು ಇಂದೇ ಈ ಅಸಂಖ್ಯ ಜನರೊಂದಿಗೆ ಎಂದು ಹೇಳಿ ತನ್ನ

ನಾಡಿನವರನ್ನೆಲ್ಲ ಕರೆದುಕೊಂಡು ಕೈಲಾಸಕ್ಕೆ ಹೋದನು. ಆದ್ದರಿಂದ ವನಿತೆಯರ ಮಾತನ್ನು ಕೇಳಿದವರಿಗೆ ಲೇಸಾಗುವುದು ಎಂದು ಪ್ರೌಢಾವತಿ ಗುರುಭಕ್ತಾಂಡಾರಿಗೆ ಹೇಳಿದಳು.

ಪ್ರೌಢಾವತಿ ಭಕ್ತರ ಚರಿತ್ರೆಗಳನ್ನು ಹೇಳಿದರೂ ಕೇಳದ ಗುರುಭಕ್ತಾಂಡಾರಿಗೆ ಆಕೆ 'ನನ್ನ ಮನೆಗೆ ನಿನ್ನ ಗುರುದೇವರು ಬಂದು ಒಂದುರಾತ್ರಿ ನನ್ನೊಡನಿದ್ದು ಹೋದರು' ಎಂದು ನಿಜವನ್ನು ಹೇಳಿದಳು. ಆ ಮಾತನ್ನು ಕೇಳಿದೊಡನೆಯೇ ಗುರುಭಕ್ತಾಂಡಾರಿ ನೆಲದ ಮೇಲೆ ಬಿದ್ದು ಹೊರಳಾಡುತ್ತ ಮೂರ್ಛೆಹೋಗಿ ಮತ್ತೆ ಎಚ್ಚೆತ್ತು ಹಾ ಗುರುವೆ ಕೆಟ್ಟೆನು ಎಂದು ಪ್ರಲಾಪಿಸಿದನು. ಪ್ರೌಢಾವತಿಯು ಕಾಲಿಗೆ ಎರಗಿ ತನ್ನ ಅಪರಾಧವನ್ನು ಕ್ಷಮಿಸ ಬೇಕೆಂದು ಬೇಡಿಕೊಂಡನು. ತಾನು ಮಾಡಿದ ಅಕಾರ್ಯಕ್ಕಾಗಿ ಪರಿತಪಿಸಿ ಅದಕ್ಕೆ ಪ್ರಾಯಶ್ಚಿತ್ತ ಮಾಡಿಕೊಳ್ಳಲು ನಿರ್ಧರಿಸಿದನು. ತನ್ನ ಕಣ್ಣುಗಳನ್ನು ದಸಿಯಿಂದ ಮೀಟಿ ದೇಹವನ್ನು ಕತ್ತರಿಸಿಕೊಳ್ಳುವುದಕ್ಕೆ ಪ್ರಯತ್ನಿಸಿದನು. ಈ ವಾರ್ತೆಯನ್ನು ಕೇಳಿದ ಗುರುಭಕ್ತಾಂಡಾರಿಯ ಅಗ್ರಜನಾದ ಸುವೃತ್ತನು ಬಂದು ಅವನನ್ನು ಸಮಾಧಾನಪಡಿಸಿದನು. ಅವನ ಕಣ್ಣುಗಳಿಂದ ಹರಿಯುತ್ತಿದ್ದ ರಕ್ತವನ್ನು ಒರೆಸಿ ಗುರುಪಾದವನ್ನು ಮನದಲ್ಲಿ ಸ್ಮರಿಸಿದನು. ಅಷ್ಟರಲ್ಲಿ ಗುರುಭಕ್ತಾಂಡಾರಿಯ ಕಣ್ಣುಗಳೆರಡೂ ಮೊದಲಿನಂತಾದುವು.

ಸದ್ಭಕ್ತಿಮತ್ತವಾರಣನೂ ಶೈವಸಮಯೈಕದೇಶಿಕೋತ್ತಮನೂ ಪರಮಪಂಚಾಕ್ಷರೀಮಂತ್ರಸಿದ್ಧನೂ ಆದ ಬೆಲ್ದೇವಿ ವೇಮನಾರಾಧ್ಯನು ಸಕಲ ಜನಕ್ಕೆ ಸಂತೋಷವನ್ನುಂಟುಮಾಡುತ್ತಿದ್ದನು. ಹೀಗಿರಲು ಹೊಸದಾಗಿ ಮದುವೆಯಾದ ರಾಜಕುಮಾರನೊಬ್ಬನು ರಾಣಿಯೊಂದಿಗೆ ಬರುತ್ತಿದ್ದಾಗ ದಾರಿಯಲ್ಲಿ ಹೂಗಳನ್ನು ಕೊಯ್ಯುತ್ತಿದ್ದ ವೇಮನಾರಾಧ್ಯನನ್ನು ಕಂಡನು. ಕೂಡಲೇ ಅವರಿಗೆ ಕೈಯೆತ್ತಿ ನಮಸ್ಕರಿಸಿದನು. ರಥದಲ್ಲಿದ್ದ ಆ ರಾಜಕುಮಾರನನ್ನು ನೋಡಿ ಅವನು ಅಲ್ಪಾಯುಷೆಂದರಿತ ವೇಮನಾರಾಧ್ಯನು ಆತನನ್ನು ಆಶೀರ್ವದಿಸದೆ ಬೇರೆಡೆಗೆ ಹೋದನು. ನಮಸ್ಕಾರ ಮಾಡಿದರೂ ಆಶೀರ್ವದಿಸದೆ ಹೋದದ್ದನ್ನು ಕಂಡು ತನ್ನ ರಾಣಿ ಎಲ್ಲಿ ನಗುವಳೋ ಎಂದು ರಾಜಕುಮಾರನು ಮತ್ತೆ ನಮಸ್ಕರಿಸಿದನು .ಆಗಲೂ ಆಶೀರ್ವದಿಸದೆ ಇರಲು ಕೋಪಗೊಂಡ ರಾಜಕುಮಾರ ಅದಕ್ಕೆ ಕಾರಣವನ್ನು ಕೇಳುವನು. ಅವರೊಡನೆ ಸಾಕಷ್ಟು ವಾಗ್ವಾದ ಮಾಡುವನು. ಕೊನೆಗೆ ವೇಮನಾರಾಧ್ಯನು ಭವಿಷ್ಯವನ್ನರಿಯದ ರಾಜಕುಮಾರನಿಗೆ 'ನಾಳೆ ಮಧ್ಯಾಹ್ನಕ್ಕೆ ನಿನಗೆ ಸಾವು ಸಂಭವಿಸುವುದು, ನೀನು ಅಲ್ಪಾಯುವೆಂದರಿತು ನಿನಗೆ ಆಶೀರ್ವಾದ ಮಾಡಲಿಲ್ಲ' ಎಂದನು. ಅದನ್ನು ಕೇಳಿದ ರಾಜಕುಮಾರನು ಕೊಲ್ಲುವುದಕ್ಕೂ ಕಾಯುವುದಕ್ಕೂ ನೀವು ಸಮರ್ಥರೆ? ಹರ ಹರಿ ಸುರರಿಗೇ ಕೊಲ್ಲುವುದೂ ಶಿಕ್ಷಿಸುವುದೂ ಸಾಧ್ಯವಿಲ್ಲದಿರುವಾಗ ಮನುಜಮಾತ್ರರಿಂದ ಇದು ಸಾಧ್ಯವೆ? ಶಿವಲಾಂಛನಗಳನ್ನು ಕಂಡು ನಾನು ನಮಸ್ಕರಿಸಿದರೆ ನೀವು ನಿಜವಾಗಿಯೂ ಶಿವನಾಗುವಿರಾ? ನಾಳೆ ನನಗೆ ಮೃತಿಸಂಭವಿಸಿದರೆ ನಿಮಗೆ ಯಾರೂ ಸಾಟಿಯಿಲ್ಲ ಎಂದು ಹೇಳಿ ಹೊರಟು ಹೋದನು. ರಾಜಕುಮಾರನು ರಾತ್ರಿ ಪತ್ನಿಯೊಡನೆ ಸುಖದಿಂದಿರುವಾಗ ತೂಗುಮಂಚದ ಸರಪಳಿಯಿಂದ ಒಂದು ಹಾವು ಬಂದು ಅವನ ಕಾಲ

ಬೆರಳನ್ನು ಕಚ್ಚಿತು. ಅದನ್ನು ಕಂಡ ಅವನ ಹೆಂಡತಿ ಹಾವು ಎಂದು ಕೂಗಿಕೊಳ್ಳಲು ರಾಜ ಕುಮಾರನು ನಿದ್ರೆಯಿಂದೆದ್ದು ಮತ್ತೆ ಮೂರ್ಛೆಹೋಗಿ ಪ್ರಾಣಬಿಟ್ಟನು. ವೈದ್ಯರೂ ಮಂತ್ರ ಜ್ಞರೂ ಯಾರು ಬಂದು ನೋಡಿದರೂ ರಾಜಕುಮಾರನನ್ನು ಬದುಕಿಸಲಾಗಲಿಲ್ಲ. ಎಲ್ಲರೂ ಶೋಕಿಸುತ್ತಿರಲು ರಾಣಿ ಹಿಂದಿನ ದಿನ ತಾನು ಕೇಳಿದ್ದ ಮಾತು ನಿಜವಾಯಿತು ಎಂದಳು. ಈ ವೃತ್ತಾಂತವನ್ನು ಬಂಧುಬಾಂಧವರು ಕೇಳಿ ಆ ಶವವನ್ನು ತೆಗೆಸಿಕೊಂಡು ವೇಮ ನಾರಾಧ್ಯರಲ್ಲಿಗೆ ಹೋಗಿ ಪ್ರಾಣದಾನ ಮಾಡುವಂತೆ ಬೇಡಿಕೊಂಡರು. ಆಗ ವೇಮ ನಾರಾಧ್ಯರು ದೃಢಭಕ್ತರನ್ನು ಕರೆಸಿ ಅವರ ಪಾದಾರ್ಚನೆಮಾಡಿ ಆ ಪಾದೋದಕವನ್ನು ಕುಂಭದಲ್ಲಿ ತುಂಬಿ ಆ ಕುಂಭವನ್ನು ಪೂಜೆಮಾಡಿ ರಾಜನ ಶವವನ್ನು ತರಿಸಿ ಅದನ್ನು ತೊಳೆದು ಶುದ್ಧಿಪಡಿಸಿ ವಿಭೂತಿಧಾರಣೆಮಾಡಿ ಪಾದತೀರ್ಥವನ್ನು ಸಂಪ್ರೋಕ್ಷಿಸಿ 'ಭೂಪ ನೇಲಕ್ಕೇಳು' ಎಂದು ಕೈಹಿಡಿದು ಎತ್ತಲು ಆ ರಾಜಕುಮಾರನು ನಿದ್ದೆಯಿಂದೆದ್ದವನಂತೆ ಎದ್ದು ಕುಳಿತನು. ಎಲ್ಲರೂ ವೇಮನಾರಾಧ್ಯರ ಮಹಿಮೆಯನ್ನು ಕೊಂಡಾಡಿದರು.

ಸಕಲೇಶಮಾದರಸನು ಹಗಲಿರುಳೂ ಶಿವನ ತತ್ವಗೋಷ್ಠಿಗಳಲ್ಲೇ ಕಾಲಕಳೆಯು ತ್ತಿದ್ದನು. ಅವನ ಶಿಷ್ಯ ಚಿಕ್ಕಮಾದಣ್ಣನೆಂಬುವನು ಸತಿಸುತ ಸಮೇತನಾಗಿ ಯಾವಾ ಗಲೂ ಭಕ್ತಿಯಿಂದಿರುತ್ತಿದ್ದನು. ಗುರುಪೂಜೆಯೇ ಜೀವನೋಪಾಯಕ್ಕೆ ಮಾರ್ಗ ವೆಂಬಂತಿದ್ದನು. ಹೀಗಿರಲು ಒಂದುದಿನ ಚಿಕ್ಕಮಾದಣ್ಣ ಮೃತನಾಗಲು ಆತನ ಮಡದಿ ಧೃತಿಗುಂದದೆ ಪವಿತ್ರ ಪಾದತೀರ್ಥದಿಂದ ಆತನ ಅಂಗಗಳನ್ನು ತೊಳೆದು ಭಸ್ಮವನ್ನು ಧರಿಸಿ ಆ ಶವವನ್ನು ಒಂದು ಕಂಬಕ್ಕೆ ಒರಗಿಸಿದಳು. ಆಮೇಲೆ ಆಕೆ ಯಾರಿಗೂ ತಿಳಿಯ ದಂತೆ ನೆಲವನ್ನು ಅಗೆಯುತ್ತಿದ್ದಳು. ಆ ಶಬ್ದವನ್ನು ಕೇಳಿದ ಹುಡುಗ ಕೂಡಲೇ ಎದ್ದು "ಎಲೈ ತಾಯಿಯೇ ನೀನು ನೆಲವನ್ನೇಕೆ ಅಗೆಯುತ್ತಿರುವೆ? ತಂದೆಯಾದರೊ ಕಂಬವನ್ನು ಒರಗಿ ಕೊಂಡು ಸುಮ್ಮನೆ ಏಕೆ ಕುಳಿತಿದ್ದಾನೆ? ಗುರುಸೇವೆಗೆ ಇನ್ನೂ ಏಕೆ ಹೋಗಲಿಲ್ಲ" ಎಂದು ಪ್ರಶ್ನಿಸಿದನು. ತಂದೆ ಮಾತನಾಡದೆ ಸುಮ್ಮನೆ ಇರುವುದಕ್ಕೆ ಕಾರಣವೇನು ಎಂದು ಬಗೆ ಬಗೆಯಾಗಿ ಕೇಳತೊಡಗಿದನು. ಅದಕ್ಕೆ ಅವಳು 'ನಿಮ್ಮ ತಂದೆ ಈ ಕುಳಿಯನ್ನು ತೆಗೆಯುವ ವರೆಗೂ ಮುನಿಸನ್ನು ಬಿಡುವುದಿಲ್ಲ. ನೀನು ಸುಮ್ಮನೆ ಹೋಗಿ ಮಲಗಿಕೋ' ಎಂದಳು. ಆಗ ಆ ಹುಡುಗನು ಕತ್ತಲೆಯಲ್ಲಿ ಮನೆಯನ್ನು ಬಿಟ್ಟು ತಮ್ಮ ಗುರುಗಳಾದ ಮಾದಿ ರಾಜರ ಬಳಿಗೆ ಹೋಗಿ ಅವರಿಗೆ ನಮಸ್ಕರಿಸಿ ಮನೆಯಲ್ಲಿನ ಪರಿಸ್ಥಿತಿಯನ್ನು ವಿವರಿಸಿ, ತಮ್ಮ ಮನೆಗೆ ಬರುವಂತೆ ಬೇಡಿಕೊಂಡನು. ಆ ಹುಡುಗನ ಕರೆಗೆ ಓಗೊಟ್ಟು ಸಕಲೇಶಮಾದರಸ ಅವರ ಮನೆಗೆ ಬಂದು "ಎಲೈ ಮಹಾದೇವಿ ಏನು ಮಾಡುತ್ತಿರುವೆ? ನಿನ್ನ ಪತಿ ನಿನ್ನ ಮೇಲೆ ಏತಕ್ಕೆ ಮುಳಿದಿದ್ದಾನೆ? ನಿನ್ನ ಮಗನು ಈ ಕತ್ತಲೆಯಲ್ಲಿ ನಮ್ಮ ಮನೆಗೆ ಏಕೆ ಬಂದ" ಎಂದು ಪ್ರಶ್ನಿಸಿದನು. ಕೂಡಲೆ ಮಹಾದೇವಿ ಗುರುಗಳ ಪಾದಕ್ಕೆ ಸಾಷ್ಟಾಂಗ ನಮಸ್ಕಾರ ಮಾಡಿದಳು. ಆಮೇಲೆ ಅವರು ಚಿಕ್ಕಮಾದಣ್ಣನನ್ನು ನೋಡಿ "ನಾವು ನಿನ್ನ ಮನೆಗೆ ಬಂದಿದ್ದರೂ ನೀನು ಮಾತನಾಡಿಸದೆ ಸುಮ್ಮನೆ ಇರಬಹುದೆ? ನಿನ್ನ ಲಿಂಗಾರ್ಚನೆಗೆ ವೇಳೆಯಾಯಿತು ಏಳು" ಎಂದರು. ಚಿಕ್ಕಮಾದಣ್ಣ ನಿದ್ರೆಯಿಂದೆಚ್ಚತ್ತವನಂತೆ ಎದ್ದು

ಗುರುವಿನ ಪಾದಗಳಿಗೆ ನಮಸ್ಕರಿಸಿದನು. ಎಲ್ಲರೂ ಸಕಲೇಶಮಾದರಸರ ಮಾಹಾತ್ಮ್ಯೆ ವನ್ನು ಕೊಂಡಾಡಿದರು.

ಈಶ್ವರಭಕ್ತಪುಂಗವನಾದ ಕದಿರೆ ರೇಮಯ್ಯನೆಂಬುವನು ಗುರುವನ್ನು ಕಾಣ ಬೇಕೆಂದು ಒಮ್ಮೆ ಬರುತ್ತಿದ್ದನು. ಹೀಗಿರಲು ಲಿಂಗಪೂಜೆಯ ಸಮಯವಾಯಿತು. ಸಮಯಕ್ಕೆ ಸರಿಯಾಗಿ ಪೂಜೆಮಾಡುತ್ತಿದ್ದ ಆತನು ಮಾರ್ಗಮಧ್ಯೆ ಸಿಕ್ಕಿದ ಗ್ರಾಮ ದಲ್ಲಿನ ಶಿವಭಕ್ತನೊಬ್ಬನ ಮನೆಗೆ ಹೋದನು. ಆ ಮನೆಯ ಸದ್ಭಕ್ತನು ಹೆಂಡತಿ ಮಗ ನೊಂದಿಗೆ ರೇಮಯ್ಯನ ಪೂಜೆಗೆ ಅಣಿಮಾಡಿಕೊಟ್ಟು ಆರೋಗಣೆಯನ್ನು ಮಾಡಿಸಿ ಗುರುವಿನ ಪ್ರಸಾದವನ್ನು ತಾವೆಲ್ಲರೂ ಸ್ವೀಕರಿಸಿದರು. ರೇಮಯ್ಯ ಗುರುವನ್ನು ಕಾಣಲು ತನ್ನ ಪ್ರಯಾಣವನ್ನು ಮುಂದುವರಿಸಿದನು. ಇತ್ತ ಆ ಭಕ್ತನ ಹೆಂಡತಿ ಬೆರಣಿಯನ್ನು ಆರಿಸಲು ಹೋದಾಗ ಆಕೆಯ ಹಿಂದೆ ಅವಳ ಮಗನೂ ಹೋದನು. ದಾರಿಯಲ್ಲಿ ಹಾವು ಕಡಿದು ಆ ಬಾಲಕನು ಅಸುನೀಗಿದನು. ಮಗನ ಸಾವನ್ನು ಕಂಡ ಆಕೆ ಎದೆಗುಂದದೆ ಇದೆಲ್ಲಾ ವಿಧಿನಿಯಮ ಎಂದುಕೊಂಡಳು. ತನ್ನ ಮಗ ಪ್ರಮಥ ಪದವಿಯನ್ನು ಪಡೆದ ನೆಂದು ಭಾವಿಸಿದಳು. ಈ ವಿಷಯವನ್ನು ತನ್ನ ಗಂಡನಿಗೆ ತಿಳಿಸಿ ಆ ದಂಪತಿಗಳಿಬ್ಬರೂ ಯಾರಿಗೂ ತಿಳಿಯದಂತೆ ಮಗನನ್ನು ತಮ್ಮ ಮನೆಯಲ್ಲೇ ಸಮಾಧಿ ಮಾಡಿದರು. ಗುರು ದರ್ಶನ ಮಾಡಿಕೊಂಡು ಹಿಂತಿರುಗುತ್ತಿದ್ದ ರೇಮಯ್ಯ ಮತ್ತೆ ಆ ಭಕ್ತನ ಮನೆಗೆ ಬಂದನು. ಹಿಂದಿನಂತೆಯೇ ಅವರು ರೇಮಯ್ಯನ ಪೂಜೆಗೆ ಅಣಿಮಾಡಿ ಆರೋಗಣೆಗೆ ಸಿದ್ಧಪಡಿಸಿದರು. ಆದರೆ ಅವರ ಮಗ ರೇಮಯ್ಯನ ಕಣ್ಣಿಗೆ ಬೀಳಲಿಲ್ಲ. ರೇಮಯ್ಯ ಆ ಬಾಲಕನನ್ನು ಕರೆಯುವಂತೆ ದಂಪತಿಗಳಿಗೆ ಹೇಳಿದನು. ಏನೂ ತೋಚದ ಆ ದಂಪತಿಗಳು ನಮ್ಮ ತನಯ ತಮ್ಮ ಪಾದದಡಿಯಲ್ಲೇ ಇರುವುದಾಗಿ ತಿಳಿಸಿದರು. ಆಗ ರೇಮಯ್ಯನಿಗೆ ಎಲ್ಲವೂ ಅರ್ಥ ವಾಯಿತು. ಕೂಡಲೆ ಅಲ್ಲೆ ಇದ್ದ ಸಮಾಧಿಯನ್ನು ಅಗೆಸಿ ಆ ಹುಡುಗನನ್ನು ಕರೆಯಲು ಅವನು ನಿದ್ರೆಯಿಂದ ಎದ್ದು ಬಂದವನಂತೆ ಕುಳಿತನು. ಅವರೆಲ್ಲರೂ ರೇಮಯ್ಯನ ಪಾದ ಗಳಿಗೆ ನಮಸ್ಕರಿಸಿದರು. ಕದಿರೆ ರೇಮಯ್ಯ ಏಳು ದಿನಗಳ ಹಿಂದೆ ಸತ್ತ ಶಿಶುವಿಗೆ ಪ್ರಾಣ ದಾನ ಮಾಡಿದುದನ್ನು ಭಕ್ತತತಿ ಕೊಂಡಾಡಿತು.

ಈಶ್ವರಭಕ್ತನಾದ ಮೊರನ ವೇಮಯ್ಯನೆಂಬುವನು ಸದಾ ಬಸವಚರಣ ಧ್ಯಾನ ದಲ್ಲೇ ಮಗ್ನನಾಗಿ ಮೊರಗಳನ್ನು ಮಾಡಿಸಿ ಮಾರುವ ಕಾಯಕವನ್ನಿಟ್ಟುಕೊಂಡಿದ್ದನು. ಅದರಿಂದ ಬರುತ್ತಿದ್ದ ಹಣದಿಂದ ಜಂಗಮಸೇವೆಯನ್ನು ಮಾಡುತ್ತ ಶಿವಗೋಷ್ಠಿಗಳನ್ನು ನಡೆಸುತ್ತ ಸಂತೋಷದಿಂದಿದ್ದನು. ಮೊರನ ವೇಮಯ್ಯನ ಚರಿತ್ರೆಯನ್ನು ಕೇಳಿ ನಾನಾ ದೇಶಗಳಿಂದ ಅವನನ್ನು ಕಾಣಲು ಭಕ್ತರು ಬರುತ್ತಿದ್ದರು. ಒಬ್ಬ ರಸಸಿದ್ಧನು ವೇಮಯ್ಯ ಮಾಡುತ್ತಿದ್ದ ಜಂಗಮಸೇವೆಯನ್ನು ಕಂಡು ತನ್ನಲ್ಲಿರುವ ವಿದ್ಯೆಯಿಂದ ಒಂದು ರಸಘುಟಿಕೆ ಯನ್ನು ಮಾಡಿ ವೇಮಯ್ಯನಿಗೆ ಕೊಟ್ಟು 'ಎಲೆ ವೇಮಯ್ಯ ಈ ಘುಟಿಕೆ ಅಪರಿಮಿತ ಧನ ಗಳನ್ನು ಕೊಡುವಂತಹುದು. ಇದರಿಂದ ಯಾವಾಗಲೂ ಲಿಂಗಾರ್ಚನೆಯನ್ನು ಮಾಡು' ಎಂದು ಹೇಳಿ ಹೊರಟುಹೋದನು. ಆದರೆ ವೇಮಯ್ಯ ಅದಾವುದಕ್ಕೂ ಮನಸ್ಸನ್ನು

ಕೊಡಲಿಲ್ಲ. ಆ ಘುಟಿಕೆಯನ್ನು ಗಮನಿಸಲೇ ಇಲ್ಲ. ಎಂದಿನಂತೆ ತನ್ನ ಕಾಯಕವನ್ನು ತಾನು ಮಾಡುತ್ತಿದ್ದನು. ಹೀಗಿರಲು ವೇಮಯ್ಯನಲ್ಲಿ ರಸಘುಟಿಕೆ ಇರುವ ವಿಷಯವನ್ನು ಆತನ ಸಮೀಪದ ಒಬ್ಬ ಶಿವಭಕ್ತನು ಕೇಳಿ ಆತನಲ್ಲಿಗೆ ಬಂದು ಉಪಾಯದಿಂದ ಅದನ್ನು ತೆಗೆದು ಕೊಂಡು ಹೋಗಿ ಅದರಿಂದ ತುಂಬ ಶ್ರೀಮಂತನಾದನು. ಕೆಲಕಾಲದ ಮೇಲೆ ಆ ಸಿದ್ಧ ವೇಮಯ್ಯನನ್ನು ವಿಚಾರಿಸಿಕೊಂಡು ಹೋಗಲು ಬಂದನು. ತಾನು ಕೊಟ್ಟುಹೋಗಿದ್ದ ಘುಟಿಕೆಯಿಂದ ವೇಮಯ್ಯ ಶ್ರೀಮಂತನಾಗಿರಬಹುದೆಂದು ಆತ ಭಾವಿಸಿಕೊಂಡಿದ್ದನು. ಆದರೆ ವೇಮಯ್ಯ ಎಂದಿನಂತೆಯೇ ಇದ್ದುದನ್ನು ಕಂಡು ಆತನು 'ನಮ್ಮ ರಸಘುಟಿಕೆಯಿಂದ ನೀವು ಏನೂ ಲಾಭ ಪಡೆಯಲಿಲ್ಲ. ಆದ್ದರಿಂದ ಅದನ್ನು ನಮಗೆ ಹಿಂದಕ್ಕೆ ಕೊಟ್ಟುಬಿಡಿ' ಎಂದು ಕೇಳಿದನು. ಅದಕ್ಕೆ ವೇಮಯ್ಯ ಆ ರಸಘುಟಿಕೆಯನ್ನು ನೀನು ಎಲ್ಲಿ ಇಟ್ಟಿದ್ದಿಯೋ ಅದನ್ನು ಯಾರು ಕೊಂಡೊಯ್ದರೋ ಎಂಬ ವಿಷಯ ನನಗೆ ಏನೂ ತಿಳಿಯದು ಎಂದು ಬಿಟ್ಟನು. ರಸಸಿದ್ಧನಾದರೋ ಆ ಘುಟಿಕೆಯನ್ನು ಅಲ್ಲಿಯೇ ಇಟ್ಟಿದ್ದಾಗಿಯೂ ಅದನ್ನು ತನಗೆ ಕೊಡಲೇಬೇಕೆಂದು ಒತ್ತಾಯಪಡಿಸಿದನು. ಆಗ ವೇಮಯ್ಯ ತನ್ನ ಹಣೆಯಲ್ಲಿದ್ದ ಭಸಿತವನ್ನು ಬೆವರಿನ ಹನಿಗಳೊಂದಿಗೆ ಸೇರಿಸಿ ಒಂದು ಗುಳಿಗೆಯನ್ನು ಮಾಡಿ ಆತನಿಗೆ ಕೊಟ್ಟನು ಆ ಗುಳಿಗೆ ತಾನು ಕೊಟ್ಟ ಘುಟಿಕೆಗಿಂತ ಮಿಗಿಲಾಗಿದ್ದುದನ್ನು ಕಂಡ ರಸಸಿದ್ಧ ವೇಮಯ್ಯನನ್ನು ಹೊಗಳಿ ಹೊರಟುಹೋದನು. ವೇಮಯ್ಯನ ಔದಾರ್ಯವನ್ನು ಕೇಳಿದ ಹರಭಕ್ತನೊಬ್ಬ ಬಂದು ತಾನು ಒಂದು ದೊಡ್ಡ ಪರ್ವವನ್ನು ಮಾಡಬೇಕೆಂದೂ ಅದಕ್ಕೆ ಅಪಾರ ದ್ರವ್ಯದ ಆವಶ್ಯಕತೆ ಇದೆ ಎಂದೂ ಕೇಳಿಕೊಂಡನು. ತನ್ನ ಈ ಪ್ರಾರ್ಥನೆಯನ್ನು ಸಲ್ಲಿಸದಿದ್ದರೆ ಪ್ರಾಣವನ್ನು ಬಿಡುವುದಾಗಿಯೂ ಆ ಜಂಗಮ ತಿಳಿಸಿದನು. ಅದನ್ನು ಕೇಳಿದ ವೇಮಯ್ಯ ತಾನು ರಸಸಿದ್ಧನಿಗೆ ರಸಗುಳಿಗೆ ಕೊಡುವಾಗ ಉಗುರಿನಲ್ಲಿ ಹತ್ತಿಕೊಂಡಿದ್ದ ತುಸು ಭಸ್ಮವನ್ನು ಕೊಟ್ಟನು. ಅದರಿಂದ ಆತನು ಪರ್ವವನ್ನು ನೆರವೇರಿಸಿದನು.

ಬಸವನ ನಾಮಸ್ಮರಣೆಯನ್ನು ಭಕ್ತಿಯಿಂದ ಮಾಡುತ್ತಿದ್ದ ವೇಮಯ್ಯ ಒಮ್ಮೆ ಬಸವಾ ಬಸವಾ ಎಂದು ಕೂಗಲು ಆ ಹೆಸರಿನ ಒಬ್ಬ ಹುಡುಗ ಓ ಎಂದು ಅಲ್ಲಿಗೆ ಬಂದನು. ವೇಮಯ್ಯ ಆ ಹುಡುಗನಿಗೆ ಸಾಷ್ಟಾಂಗ ನಮಸ್ಕಾರ ಮಾಡಿ ಮತ್ತೆ ಮತ್ತೆ ಅವನ ನಾಮಸ್ಮರಣೆ ಮಾಡುತ್ತ ಕುಣಿದಾಡಿದನು. ಭಕ್ತಿಯ ಭರದಲ್ಲಿ ಆ ಬಾಲಕನ ನಾಮಸ್ಮರಣೆ ಮಾಡುತ್ತಿದ್ದ ವೇಮಯ್ಯನಿಗೆ ಆ ಬಾಲಕನೇ ಬಸವಣ್ಣನ ರೂಪದಲ್ಲಿ ಮೈ ದೋರಿದನು. ಅದನ್ನು ಕಂಡ ಭಕ್ತರೆಲ್ಲರು ವೇಮಯ್ಯನನ್ನು ಕೊಂಡಾಡಿದರು.

ನಂದಿಕೋಲ ಬಲ್ಲಯ್ಯ ಎಂಬುವನು ತನ್ನ ಮಗನ ಜನನ ಕಾಲದಲ್ಲಿ ಅವನನ್ನು ಲಿಂಗಸಂಸ್ಕಾರಿಯನ್ನಾಗಿ ಮಾಡಿ ಆ ಮಗುವನ್ನು ವೇಮಯ್ಯನ ತೊಡೆಯ ಮೇಲಿರಿ ಸಲು ವೇಮಯ್ಯ ಆ ಮಗುವಿನ ಹಣೆಗೆ ಭಸ್ಮವನ್ನು ಧರಿಸಿ 'ಶತಾಯುಷಿಯಾಗು' ಎಂದು ಹರಸಿದನು. ಕೆಲಕಾಲದ ಮೇಲೆ ಆ ಮಗು ತೀರಿಹೋಯಿತು. ಆಗ ವೇಮಯ್ಯ ಅವರ ಮನೆಗೆ ಬಂದನು. ಆ ಬಾಲಕನ ತಂದೆತಾಯಿಗಳು ಅವನನ್ನು ಭಕ್ತಿಯಿಂದ ಬರ ಮಾಡಿಕೊಂಡರು. ಸತ್ತುಹೋಗಿದ್ದ ಮಗುವಿಗೆ ಪೂರ್ತಿಹೊದ್ದಿಸಿ ಮಲಗಿಸಿದ್ದರು.

ವೇಮನಯ್ಯ ಆ ಮಗು ಎಷ್ಟುಹೊತ್ತಾದರೂ ಎಚ್ಚರಗೊಳ್ಳದಿರಲು ಕಾರಣವನ್ನು ಕೇಳಿ ಮಗುವಿಗೆ ಹೊದಿಸಿದ್ದ ಬಟ್ಟೆಯನ್ನು ತಾನೇ ಸರಿಸಿ ಅದು ಸತ್ತಿದ್ದುದನ್ನು ಗಮನಿಸಿ 'ಶಿವನೇ ಈ ಮಗುವಿಗೆ ನಾನು ಶತಾಯುಷಿಯಾಗೆಂದು ಆಶೀರ್ವಾದ ಮಾಡಿದ್ದೆನು. ಈ ರೀತಿ ಇವನನ್ನು ಅಕಾಲ ಮೃತ್ಯುವಿಗೆ ಗುರಿಪಡಿಸಬಹುದೆ' ಎಂದು ಬಸವನನ್ನು ಸ್ಮರಿಸಿ, ಭಸ್ಮ ವನ್ನು ಆ ಬಾಲಕನ ಹಣೆಯಲ್ಲಿ ಧರಿಸಿ ಅವನನ್ನು ಎತ್ತಿಕೊಂಡು ಅವನ ತಾಯಿಗೆ ಕೊಟ್ಟನು. ಕೂಡಲೇ ಆ ಬಾಲಕ ತಾಯಿಯ ಮಡಿಲಲ್ಲಿ ನಲಿದಾಡಿದನು. ಅಲ್ಲಿದ್ದ ಭಕ್ತ ರೆಲ್ಲರೂ ವೇಮನಾರ್ಯನನ್ನು ಕೊಂಡಾಡಿದರು.

## (iii) ವಾದ ಪ್ರಕರಣ

ಮಲ್ಲಿಕಾರ್ಜುನ ಪಂಡಿತಾರಾಧ್ಯರು ಸನದವ್ರೋಲ ಎಂಬ ಪಟ್ಟಣದಲ್ಲಿ ಸಂತೋಷ ದಿಂದಿದ್ದರು. ಇವರ ಪಾಂಡಿತ್ಯವನ್ನೂ ವಾಕ್ಪ್ರೌಢಿಮೆಯನ್ನೂ ವಚಸ್ಸಿದ್ಧಿಯನ್ನೂ ವೆಲ್ನಾಡ ಚೋಳನ ಗುರುವಾದ ಬೌದ್ಧನು ಕೇಳಿ ಮನದಲ್ಲಿ ಸೈರಿಸಲಾರದೆ ರಾಜನಿಗೆ ಈ ರೀತಿ ಹೇಳಿ ದನು. "ನೀನು ಲೋಕಕ್ಕೆ ಅಧಿಪತಿ. ನಾನು ನಿನಗೆ ಗುರು. ಆದುದರಿಂದ ನಾನು ಲೋಕಕ್ಕೆ ಗುರುವಾಗಬೇಕು. ನನಗೇ ಜಗದ್ಗುರುಪಟ್ಟವೂ ಪಂಡಿತತ್ವವೂ ಸಲ್ಲಬೇಕು. ಅದು ಬಿಟ್ಟು ಆ ಪಂಡಿತಾರಾಧ್ಯರಿಗೆ ಇದು ಹೇಗೆ ಸಲ್ಲುತ್ತದೆ? ಶೈವದರ್ಶನದಿಂದಲೇ ಮೋಕ್ಷಪ್ರಾಪ್ತಿ; ರುದ್ರನೇ ಜಗತ್ಪತಿ ಎನ್ನುತ್ತಿರುವ ಅವರಿಗೂ ಬುದ್ಧನೇ ಜಗತ್ಪ್ರಭು; ಬೌದ್ಧಮತವೇ ಮೋಕ್ಷಪ್ರದ ಎನ್ನುತ್ತಿರುವ ನಮಗೂ ವಾದವನ್ನು ಏರ್ಪಡಿಸು" ಎಂದನು. ಅದರಂತೆ ರಾಜನು ಬೌದ್ಧರನ್ನೂ ಜೈನರನ್ನೂ ಚಾರ್ವಾಕರನ್ನೂ ಬ್ರಹ್ಮವಾದಿಗಳನ್ನೂ ವೇದವಾದಿಗಳನ್ನೂ ಅನೇಕಾತ್ಮವಾದಿಗಳನ್ನೂ ಪಾಂಚರಾತ್ರರನ್ನೂ ಶೂನ್ಯವಾದಿಗಳನ್ನೂ ಅಲ್ಪಮತಿಗಳನ್ನೂ ಕಾಲವಾದಿಗಳನ್ನೂ ಕರ್ಮವಾದಿಗಳನ್ನೂ ಪ್ರಕೃತಿವಾದಿಗಳನ್ನೂ ಮಾಯಾವಾದತತ್ಪರರನ್ನೂ ಶಬ್ದಬ್ರಹ್ಮವಾದಿಗಳನ್ನೂ ಆಧ್ಯಾತ್ಮವಾದಿಗಳನ್ನೂ ತ್ರಿಪುರು ಷೈಕವಾದಿಗಳನ್ನೂ ದ್ವಿಪುರುಷೈಕವಾದಿಗಳನ್ನೂ ಅಷ್ಟಮೂರ್ತಿವಾದಿಗಳನ್ನೂ ಸರಳವಾದಿ ಗಳನ್ನೂ ಸ್ಮಾರ್ತರನ್ನೂ ಯೋಗಿಗಳನ್ನೂ ಮಂತ್ರವಾದ ಸಿದ್ಧರುಗಳನ್ನೂ ಷಟ್ತರ್ಕಪ್ರಮಾ ಣಜ್ಞರನ್ನೂ ಧರ್ಮಶಾಸ್ತ್ರಜ್ಞರನ್ನೂ ತಾರ್ಕಿಕರನ್ನೂ ಕೌಟಿಲ್ಯಶಾಸ್ತ್ರ ಪ್ರಬುದ್ಧರನ್ನೂ ನಕ್ಷತ್ರಪಾಠಕರನ್ನೂ ಪರಿಹಾಸಕರನ್ನೂ ಪಾಠಕರನ್ನೂ ಸುಗಡಕಬ್ಬಿಗಳನ್ನೂ ಕಳಾಭಿಜ್ಞ ರನ್ನೂ ಸಭೆಗೆ ಕರೆಸುವಂತೆ ಆಜ್ಞಾಪಿಸಿದನು. ಬಾರದಿದ್ದವರು ತಪ್ಪಿತಸ್ಥರಾಗುವರೆಂದೂ ಸಾರಿಸುವಂತೆ ತಿಳಿಸಿದನು. ಅದರಂತೆ ಎಲ್ಲರೂ ಸಭೆಗೆ ಬಂದರು. ಆಗ ಪಂಡಿತಾರಾಧ್ಯರನ್ನು ವಾದಕ್ಕೆ ಕರೆತರಲು ದೂತರನ್ನು ಅಟ್ಟಿದರು. ದೂತರ ನುಡಿಗೇಳಿದ ಪಂಡಿತಾರಾಧ್ಯರು ಲಿಂಗಾರ್ಚನೆಯನ್ನು ಮಾಡಿ ಸತ್ಪ್ರಮಥರನ್ನು ಧ್ಯಾನಿಸುತ್ತ ಬೇಡಿದವರಿಗೆ ಅವರ ಇಷ್ಟಾ ರ್ಥಗಳನ್ನು ಪೂರೈಸಿ ರಾಜಸಭೆಗೆ ಹೊರಡಲುದ್ಯುಕ್ತರಾದರು. ಆಗ ಅವರ ಪರಮ ಶಿಷ್ಯರಾದ ದೋನಮರಾಜನೇ ಮೊದಲಾದವರು ಪಂಡಿತಾರಾಧ್ಯರಿಗೆ ನಮಸ್ಕರಿಸಿ ಅವರ ಪಾಂಡಿತ್ಯವನ್ನೂ ಶಕ್ತಿಸಾಮರ್ಥ್ಯಗಳನ್ನೂ ಹೊಗಳಿ ಆ 'ಪರವಾದಿಗಳನ್ನು

ಸೋಲಿಸಲು ತಾವೇಕೆ ಹೋಗಬೇಕು? ತಮ್ಮ ಶಿಷ್ಯರಾದ ನಾವೇ ಸಾಲದೆ' ಎನ್ನುತ್ತಿರಲು ಪಂಡಿತಾರಾಧ್ಯರು ವೆಲ್ಲಕೊಂಡದ ಮಹಾದೇವ ಸೂರಸಾನಾಂಬೆ ಮೊದಲಾದ ಎಲ್ಲ ಶಿಷ್ಯ ಸಮೇತರಾಗಿ ಭಕ್ತಸಮೂಹದಿಂದ ಆಸ್ಥಾನವನ್ನು ಪ್ರವೇಶಿಸಿದರು.

ಪಂಡಿತಾರಾಧ್ಯರನ್ನು ಕಂಡು ಸಭೆಯಲ್ಲಿದ್ದವರೆಲ್ಲ ದಿಙ್ಮೂಢರಾದರು. ಅವರು ವೈದಿಕ ನೊಡನೆ ವಾದಕ್ಕೆ ಪ್ರಾರಂಭಿಸಿ ಹಲವಾರು ದೃಷ್ಟಾಂತಗಳನ್ನು ನೀಡಿ ವೈದಿಕ ವಾದವನ್ನು ನಿರಸನ ಮಾಡುವರು. ಆಮೇಲೆ ಅಸಂಖ್ಯಾತ ಪುರಾಣಾಗಮಗಳ ಆಧಾರ ದಿಂದ ಕರ್ಮವಾದಿಗಳನ್ನು ಖಂಡಿಸಿ ಕಂತುಹರನ ಆಜ್ಞೆಯಿಂದಲೇ ಕರ್ಮಿಯೂ ಕರ್ಮವೂ ಉಂಟಾಗುತ್ತದೆ ಎಂಬುದನ್ನು ಸಿದ್ಧಾಂತಪಡಿಸುವರು. ಕರ್ಮಫಲವು ಕಾಲಾಂತರದಲ್ಲಿ ಮನುಷ್ಯನನ್ನು ಹೊಂದುತ್ತದೆ ಎಂದು ಕರ್ಮವಾದಿ ಹೇಳಿದುದರಿಂದ ಕರ್ಮವಾದಿ ಕಾಲ ವಾದಿಯೂ ಆಗುವನು. ಆದರೆ ಸಕಲ ಜಗತ್ತು ಕಾಲಕ್ಕೇ ಅಧೀನವಾಗಿರುವುದು. ಆದ್ದ ರಿಂದ ಕಾಲವೇ ನಿಜತತ್ವವು. ಇದಕ್ಕೆ ದೃಷ್ಟಾಂತವಾಗಿ ಮಾರ್ಕಂಡೇಯ, ಸಕಲೇಶ ಮಾದರಸ, ಮಾದಿರಾಜಯ್ಯ, ಮುಸುಟೆ ಚೌಡಯ್ಯ, ಸೌಂದರನಂಬಿ, ಪಿಳ್ಳೆನೈನಾರಿ, ರಕ್ಕಸಬ್ರಹ್ಮಯ್ಯ-ಇವರೇ ಮೊದಲಾದ ಶರಣರು ಕಾಲಮೃತ್ಯುವನ್ನು ಮೀರಿದ ಸಂಗತಿ ಗಳನ್ನು ತಿಳಿಸುವರು. ಆದುದರಿಂದ ಅಭವನೊರ್ವನೇ ಅಧಿಪ ಎಂದು ಪ್ರತಿಷ್ಠಾಪಿಸುವರು. ಅನಂತರ ಅನೇಕ ದೃಷ್ಟಾಂತಗಳಿಂದ ವೇದಾಂತಿಯ ಧರ್ಮವನ್ನು ನಿರಸನ ಮಾಡಿ 'ಸರ್ವ ಪ್ರಪಂಚಮುಂ ಹರನಾಜ್ಞೆಯಿಂ ವ್ಯಾಪ್ತಂ' ಎಂದು ಸಿದ್ಧಾಂತಪಡಿಸುವರು. ಸತ್ಕ್ರಿಯಾ ಮಾರ್ಗಗಳಿಂದ ಶೋಭಿಸುವ ಸದಮಲಜ್ಞಾನದಿಂದ ಶಿವೋಪಾಸ್ತೆಯನ್ನು ಯಾರು ಸಂತೋಷದಿಂದ ಮಾಡುತ್ತಾರೋ ಅವರಿಗೆ ಮುಕ್ತಿ ಲಭ್ಯವಾಗುತ್ತದೆ. ಈರೀತಿಯಾಗಿ ಸಾಂಖ್ಯವಾದವನ್ನು ನಿರಸನ ಮಾಡುವರು. ಆಮೇಲೆ ಚಾರ್ವಾಕ ವಾದವನ್ನು ಖಂಡಿಸು ವುದಕ್ಕೆ ತೊಡಗುವರು. ಹೀಗೆಯೇ ಪಾಂಚರಾತ್ರ, ಬೌದ್ಧಮತ ಮತ್ತು ಜೈನಮತಗಳನ್ನು ದೀರ್ಘವಾದ ನಿದರ್ಶನಗಳೊಂದಿಗೆ ನಿರಸನ ಮಾಡುವರು.

ಅಭವನು ಆದ್ಯಂತರಹಿತನಾದರೆ ವಿಷ್ಣುವಿನ ದೇಹದಿಂದಲೂ, ಬ್ರಹ್ಮನ ಮನಸ್ಸಿ ನಿಂದಲೂ ಹುಟ್ಟಿದ ಚಂದ್ರನನ್ನೇಕೆ ಧರಿಸಿದನು ಎಂದು ಬೌದ್ಧನು ಪ್ರಶ್ನಿಸಿ ಶಿವನನ್ನು ನಾನಾ ವಿಧವಾಗಿ ಹೀಯಾಳಿಸಿದನು. ಅದಕ್ಕೆ ಪಂಡಿತಾರಾಧ್ಯರು ಬ್ರಹ್ಮಕೈವರ್ತದಲ್ಲಿ ಹೀಗೆ ಹೇಳಿದೆ: ಯಮನ ಓಲಗದಲ್ಲಿದ್ದ ಚಿತ್ರಗುಪ್ತನು ಆಕಾಶದಲ್ಲಿ ಪುಷ್ಪಕವಿಮಾನದಲ್ಲಿ ಹೋಗು ತ್ತಿದ್ದವರನ್ನು ನೋಡಿ ಯಮನೊಡನೆ ನಿನ್ನ ಲೋಕವನ್ನು ಪ್ರವೇಶಿಸದೆ ನಿನಗೆ ನಮಸ್ಕರಿಸದೆ ಹೋಗುತ್ತಿರುವವರು ಇವರು ಯಾರು ಎಂದು ಕೇಳಲು ಯಮ ಈ ರೀತಿ ಹೇಳಿದನು.-ದಕ್ಷ ಬ್ರಹ್ಮನು ತನ್ನ ೨೮ ಜನ ಮಕ್ಕಳನ್ನು ಚಂದ್ರನಿಗೆ ಕೊಟ್ಟು ಎಲ್ಲರನ್ನು ಏಕಪ್ರಕಾರವಾಗಿ ನೋಡಿಕೊಳ್ಳುವಂತೆ ತಿಳಿಸಿದನು. ಹೀಗಿರಲು ಚಂದ್ರನು ರೋಹಿಣಿ ಎಂಬುವಳಲ್ಲಿ ಅತಿ ಯಾದ ಅನುರಾಗ ಹೊಂದಿ ಉಳಿದವರನ್ನು ಅಲಕ್ಷಿಸಿದನು. ಅವರೆಲ್ಲರೂ ದಕ್ಷನಿಗೆ ದೂರಲು ಅವನು ಕೋಪದಿಂದ ನನ್ನ ಮಾತನ್ನು ಮೀರಿದ ನೀನು ಕಲಾಹೀನನಾಗಿ ದಿನದಿನವೂ ಕಳೆಗುಂದಿ ನಾಶವಾಗಿ ಹೋಗು ಎಂದು ಶಾಪವನ್ನು ಕೊಟ್ಟನು. ಆಗ ಚಂದ್ರನ ಎಲ್ಲಾ

ಕಲೆಗಳು ನಷ್ಟವಾದುವು. ಅಮೆ ಎಂಬ ಕಲೆಯೊಂದು ಉಳಿಯಿತು. ಚಂದ್ರನು ಈಶ್ವರನನ್ನು ಪ್ರಾರ್ಥಿಸಲು, ಶಿವನು ಅವನಿಗೆ ಅಭಯವನ್ನು ಕೊಟ್ಟು ಉಳಿದಿದ್ದ ಅಮೆ ಎಂಬ ಕಲೆಯನ್ನು ತನ್ನ ತಲೆಯಲ್ಲಿ ಧರಿಸಿದನು. ಚಂದ್ರನನ್ನು ಕುರಿತು 'ನಿನಗೆ ದಕ್ಷ ಕೊಟ್ಟ ಶಾಪದಿಂದ ನಷ್ಟವಾದ ಕಲೆಗಳೆಲ್ಲ ಒಂದೊಂದೇ ಹೆಚ್ಚುತ್ತಾ ಹೋಗುತ್ತವೆ' ಎಂದು ಶಿವನು ಅಭಯ ನೀಡಿದನು. ಪರಶಿವನು ಅಮೆಯನ್ನು ತಲೆಯಲ್ಲಿ ಧರಿಸಿದ ದಿನ ಅಮಾವಾಸ್ಯೆ ಎಂದು ಪ್ರಸಿದ್ಧವಾಯಿತು. ಈ ತಿಥಿಯಂದು ಯಾರು ತದೇಕಚಿತ್ತದಿಂದ ಶಂಭುವನ್ನು ಪೂಜೆ/ಮಾಡುತ್ತಾರೋ ಅವರು ಊರ್ಧ್ವಲೋಕವನ್ನೈದುವರು. ಪರಶಿವನು ಯಾವ ಚಂದ್ರಕಲೆಯನ್ನು ತಲೆಯಲ್ಲಿ ಧರಿಸಿದನೋ ಅದು ಶಿರೋಭೂಷಣವೆನಿಸಿಕೊಂಡಿತು.

ಬ್ರಹ್ಮನ ಹಣೆಯಿಂದ ಶಿವನು ಹುಟ್ಟಿದನು ಎಂಬ ವಚನಕ್ಕೆ ಉತ್ತರ: ಬ್ರಹ್ಮನು ತಾನೇ ಸೃಷ್ಟಿಕರ್ತನೆಂದೂ ಪರಬ್ರಹ್ಮನೆಂದೂ ಅಜ್ಞಾನದಿಂದ ನುಡಿಯಲು ಅವನ ರಾಜಸಗುಣವೆಲ್ಲ ಅಳಿದುಹೋಯಿತು. ಆಮೇಲೆ ಬ್ರಹ್ಮನು ಅಹಂಕಾರವನ್ನು ಬಿಟ್ಟು ಲಲಾಟದಲ್ಲೇ ದೃಷ್ಟಿಯನ್ನು ನಿಲ್ಲಿಸಿ ತಪಸ್ಸುಮಾಡಿ ಶಿವನನ್ನು ಹಣೆಯಲ್ಲೆ ಪ್ರತ್ಯಕ್ಷಮಾಡಿಕೊಂಡನು. ಅಂದಮಾತ್ರಕ್ಕೆ ಶಿವನು ಬ್ರಹ್ಮನ ಹಣೆಯಲ್ಲಿ ಹುಟ್ಟಿದನೆಂದು ಭಾವಿಸಬಹುದೆ? ಇದಕ್ಕೆ ಅನೇಕ ದೃಷ್ಟಾಂತಗಳನ್ನು ನೀಡಿದರು.

ಈಶ್ವರನು ಅಮಂಗಲವಾದ ಕರಿಚರ್ಮವನ್ನೂ ಕಪಾಲಾಸ್ಥಿಗಳನ್ನೂ ಏಕೆ ಧರಿಸಿದ ಎಂಬುದಕ್ಕೆ ಪಂಡಿತಾರಾಧ್ಯರು ಕಾರಣಗಳನ್ನು ತಿಳಿಸುವರು. ಗಂಗೆಯಲ್ಲಿ ಪರಿಶುದ್ಧವಾದುದರಿಂದ ಈ ಅಸ್ಥಿ ಚರ್ಮಧಾರಣವು ಶಿವನಿಗೆ ಮಹತ್ವ ನಿರ್ದೇಶಕವಾಗುತ್ತದೆಯೇ ಹೊರತು ನಿಂದಾಸ್ಪದವಾಗುವುದಿಲ್ಲ ಎಂದರು.

ದಕ್ಷಬ್ರಹ್ಮನ ಯಾಗದಲ್ಲಿ ಅವಮಾನಿತಳಾದ ಪಾರ್ವತಿ ಅಗ್ನಿಗಾಹುತಿಯಾಗಿ ಆಮೇಲೆ ತಪಸ್ಸನ್ನಾಚರಿಸಿ ಸದಾ ಶಿವನ ಅರ್ಧದೇಹವಾಗಿಯೇ ಇರುವಂತಾದಳು. ಗಂಗೆಯನ್ನು ಶಿವನು ಮುಡಿಯೊಳಗೆ ಏಕೆ ಧರಿಸಿದನೆಂಬುದಕ್ಕೆ ಈ ರೀತಿ ಪಂಡಿತಾರಾಧ್ಯರು ವಿವರಿಸುವರು. ಚಂದ್ರೋದಯದಿಂದ ಹಾಲ್ಗಡಲು ಉಕ್ಕಿ ದೇವಲೋಕದಲ್ಲೆಲ್ಲಾ ಹರಿಯಲು ದೇವತೆಗಳು ಬೆದರಿ ಈಶ್ವರನನ್ನು ಪ್ರಾರ್ಥಿಸಲು ಗಂಗೆಯನ್ನು ಈಶ್ವರ ಮುಡಿಯಲ್ಲಿ ಧರಿಸಿದನು. ಮತ್ತೆ ಈ ಗಂಗೆ ಸ್ವರ್ಗದಿಂದ ಭೂಲೋಕಕ್ಕೆ ಬಂದಳು. ಆಮೇಲೆ ಈ ಗುಗಾನದಿಯ ಉತ್ಪತ್ತಿ ಹೇಗಾಯಿತೆಂಬುದನ್ನು ವಿವರಿಸಿದರು. ಒಮ್ಮೆ ಪಾರ್ವತಿ ಈಶ್ವರನ ಕಣ್ಣುಗಳನ್ನು ವಿನೋದಕ್ಕಾಗಿ ಮುಚ್ಚಲು ಆಗ ಶಿವನು ಮೂರನೆಯ ಕಣ್ಣನ್ನು ತೆರೆದನು. ಈಶ್ವರನ ಕಣ್ಣುಗಳೇ ಚಂದ್ರಸೂರ್ಯರು. ಶಿವನು ಕಣ್ಣುಗಳನ್ನು ಮುಚ್ಚಿದ್ದರಿಂದ ಜಗತ್ತಿಗೆಲ್ಲ ಕತ್ತಲೆ ಆವರಿಸಲು ಬೆಳಕಿಗೋಸ್ಕರ ಮೂರನೆಯ ಕಣ್ಣನ್ನು ತೆರೆದನು. ಕಣ್ಣನ್ನು ಮುಚ್ಚಿದಾಗ ಶಿವನೆ ಆನಂದಧಾರೆ ಪಾರ್ವತಿಯ ಕೈಬೆರಳುಗಳಲ್ಲಿ ಹತ್ತಿಕೊಂಡು ಭೂಮಿಯ ಮೇಲೆ ಬೀಳಲು ಅವು ಹೊಳೆಗಳಾಗಿ ಹರಿದುವು. ಆಮೇಲೆ ವಿಷವನ್ನು ಪಾನಮಾಡಿದ್ದು ವಿಷ್ಣುಪದಿ ಹೇಗೆ ಆಯಿತು ಎಂಬುದನ್ನು ವಿವರಿಸಿದರು. ಹಾಗೆಯೇ ಗಂಗೆಯ ಉತ್ಪತ್ತಿಯೇ ಮೊದಲಾದ ಇತರ ಕಥೆಗಳನ್ನು ವಿವರವಾಗಿ ತಿಳಿಸಿದರು.

ಅನಂತರ ಹರಿಸುರರಿಗೆ ಏಕತ್ವ ಹೇಗೆ ಉಂಟಾಯಿತು ಎಂಬುದನ್ನು ಅಸಂಖ್ಯಾತ ದೃಷ್ಟಾಂತಗಳಿಂದ ವಿವರಿಸಿದರು. ಶಿವನ ಚಿಹ್ನೆಗಳನ್ನು ಪಡೆದು ವಿಷ್ಣು ಗುಹಾಸುರನನ್ನು ಕೊಂದನು. ಜನನವಿಲ್ಲದೆ ಲೋಕಸಂತತಿಯನ್ನು ಹುಟ್ಟಿಸುವ ಶಿವನಿಗೂ ಜನನ ಹೊಂದಿ ಯಾವಾಗಲೂ ಚರಿಸುವ ಹರಿಗೂ ಸರಿಯೆ? ಹಾಗೆಯೇ ತಾನು ಲಯವನ್ನು ಹೊಂದದೆ ಲೋಕವನ್ನು ಲಯಗೊಳಿಸುವ ಹರನಿಗೂ ಈ ಲಯರಹಿತ ಹರನಿಂದ ಲಯವನ್ನು ಹೊಂದುವ ವಿಷ್ಣುವಿಗೂ ಹೇಗೆ ಸಾಟಿಯಾಗುತ್ತದೆ? ಆದ್ದರಿಂದ ಹರಿಹರರಿಗೆ ಅಭೇದವನ್ನು ಹೇಳುವವನು ಪತಿತನಾಗುವನು.

ಪಂಡಿತಾರಾಧ್ಯರು ದಕ್ಷಾಧ್ವರದ ಕಥೆಯನ್ನು ಹೇಳಿ ದಕ್ಷನು ಶಿವರಹಿತ ಯಾಗವನ್ನು ಮಾಡಲು ಶಿವನು ಅವನನ್ನು ಶಿಕ್ಷಿಸಿದ್ದು ಮಹಿಮೆಯೋ ನಿಂದೆಯೋ ಬೌದ್ಧನೆ ನೀನೆ ಹೇಳು ಎಂದರು.

ಶಂಭು ಸರಸಿಜಭವಾಂಡಕೋಟಿಗಳನ್ನು ಸೃಷ್ಟಿಸುತ್ತ ಮತ್ತೆ ನಿರ್ದಯೆಯಿಂದ ಅವನ್ನು ಲಯಗೊಳಿಸುವ ಕಾರ್ಯವನ್ನು ಬೌದ್ಧನಿಗೆ ಪಂಡಿತಾರಾಧ್ಯರು ಹೇಳಿದರು. ಜಗತ್ತಿನ ಜಂಜಾಟದಲ್ಲಿ ತೊಳಲುತಿದ್ದ ಜೀವಕೋಟಿಗಳನ್ನು ಕಂಡು ಕನಿಕರಿಸಿ ಅವುಗಳಿಗೆ ಮುಕ್ತಿಯನ್ನು ಕೊಡುವ ಉದ್ದೇಶದಿಂದ ಪ್ರಳಯವನ್ನುಂಟುಮಾಡುವುದೇ ಮುಂತಾದ ದೀರ್ಘವಾದ ವಿವರಣೆ ನಿರೂಪಿತವಾಗಿದೆ.

ಬ್ರಹ್ಮಾಂಡಗಳನ್ನು ಸುಟ್ಟು ಬೂದಿಮಾಡಿದ ಮೇಲೆ ಆ ಬೂದಿಯನ್ನು ಹರನು ತನ್ನ ಅಂಗಾಂಗಗಳಿಗೆಲ್ಲಾ ಲೇಪಿಸಿಕೊಂಡು ವಿಷ್ಣುವೇ ಮೊದಲಾದವರ ತಲೆಬುರುಡೆಗಳನ್ನು ಧರಿಸಿಕೊಂಡು ಭರತ ನಂದಿ ಮೊದಲಾದವರು ಶಾಸ್ತ್ರೋಕ್ತವಾಗಿ ತಾಳ ಹಾಕುತ್ತಿರಲು ನರ್ತಿಸತೊಡಗಿದನು. ಗುಂಡಯ್ಯನ ತಾಳದ ಗತಿಗೆ ನರ್ತಿಸಿದಂತೆ, ಪಿಟ್ಟವ್ವೆಗೋಸ್ಕರ ಬಿಟ್ಟಿಯನ್ನು ಮಾಡುವುದಕ್ಕಾಗಿ ನರ್ತಿಸಿದಂತೆ ನರ್ತಿಸಲು, ಪಾರ್ವತಿಯು ಅದನ್ನು ನೋಡಿ ಭಯಂಕರವಾದ ಆ ನರ್ತನವನ್ನು ನಿಲ್ಲಿಸಬೇಕೆಂದು ಪ್ರಾರ್ಥಿಸಿಕೊಂಡಳು. ಜಗತ್ಸೃಷ್ಟಿಯನ್ನಾರಂಭಿಸುವಂತೆ ಕೇಳಿಕೊಂಡಳು. ಎಲ್ಲರೂ ಪರಶಿವನನ್ನು ನಾನಾವಿಧವಾಗಿ ಸ್ತೋತ್ರ ಮಾಡಲು ಮಲ್ಲಿಕಾರ್ಜುನ ಪಂಡಿತಾರಾಧ್ಯರು ಶಿವನ ಮಹಿಮೆಯನ್ನು ವಿಸ್ತರಿಸಿ ತಿಳಿಸಿದರು.

### (iv) ಮಹಿಮ ಪ್ರಕರಣ

ಪಂಡಿತಾರಾಧ್ಯರಿಗೆ ಉತ್ತರವನ್ನು ಕೊಡಲಾರದೆ ಹೋದ ಆ ಬೌದ್ಧಗುರು ಅತ್ಯಂತ ಕೋಪಗೊಂಡು ಅವರೆಲ್ಲರನ್ನೂ ಬಾಯಿಗೆ ಬಂದಂತೆ ನಿಂದಿಸಿ ಸಭೆಯಿಂದ ಹೊರಟು ಹೋದನು. ಅಲ್ಲಿದ್ದ ವಿದ್ವಾಂಸರು ಬೌದ್ಧನು ಮಾಡಿದ ವಿತಂಡವಾದವನ್ನು ತೆಗಳಲಾರಂಭಿಸಿದರು. ಆಮೇಲೆ ಆ ಬೌದ್ಧನು ಶ್ರೀಕಪುಕುಲದ ಚನ್ನಮಲ್ಲೇಶನ ದೇವಾಲಯದ ದೀಪಸ್ತಂಭವನ್ನು ಕೀಳಿಸಿ ತನ್ನ ಸಭಾಮಂಟಪವನ್ನು ಕಟ್ಟಿಸಿಕೊಂಡನು. ಇದನ್ನು ರೇವಯ್ಯ ದೇವಯ್ಯ ಎಂಬುವರು ಕೇಳಿ ಈ ಘೋರಪಾತಕವನ್ನೆಸಗಿದ ಬೌದ್ಧನನ್ನು ಕೊಲ್ಲದಿದ್ದರೆ ನಾವು ಪಾತಕಿಗಳಾಗುವೆವೆಂದು ಭಾವಿಸಿ ಶಪಥವನ್ನು ಮಾಡಿದರು. ಅವರು

ಅವನನ್ನು ಕೊಲ್ಲುವ ಉಪಾಯವನ್ನು ಯಾರಿಗೂ ತಿಳಿಯದಂತೆ ನೆರವೇರಿಸಿದರು. ಬೌದ್ಧನು ಸಮುದ್ರ ಮಧ್ಯದಲ್ಲಿದ್ದ ಜಿನಮಂದಿರಕ್ಕೆ ದಿನವೂ ಹೋಗಿಬರುತ್ತಿದ್ದುದನ್ನು ತಿಳಿದುಕೊಂಡು ಮಾರನೆಯದಿನ ಶಿವಪೂಜಾಕಾರ್ಯಗಳನ್ನು ಮುಗಿಸಿಕೊಂಡು ಆ ಬೌದ್ಧನು ಬರುವ ಮೊದಲೇ ಜಿನಮಂದಿರದೊಳಕ್ಕೆ ಹೋಗಿ ಸೇರಿಕೊಂಡರು. ಬೌದ್ಧನು ಜಿನಮಂದಿರಕ್ಕೆ ಬಂದು ನಮಸ್ಕರಿಸುತ್ತಿದ್ದಾಗ ಅವನ ಮೇಲೆ ಬಿದ್ದು ಅವನ ಹೊಟ್ಟೆಯನ್ನು ಸೀಳಿ ಕರುಳನ್ನು ಕಿತ್ತು ಕೊಂದುಹಾಕಿದರು.

ಬೌದ್ಧಗುರು ಜಿನಮಂದಿರದಿಂದ ಹಿಂತಿರುಗದಿದ್ದುದನ್ನು ಕಂಡು ಅವರ ಶಿಷ್ಯರು ಜಿನ ಮಂದಿರಕ್ಕೆ ಹೋದರು. ಅಲ್ಲಿ ಕೊಲೆಗೀಡಾಗಿದ್ದ ತಮ್ಮ ಗುರುವನ್ನು ಕಂಡು ರಾಜನಿಗೆ ವಿಷಯವನ್ನು ತಿಳಿಸಿದರು. ರಾಜನೂ ಅಲ್ಲಿಗೆ ಬಂದು ಆ ಹೆಣದ ಹೊಟ್ಟೆಯ ಮೇಲಿದ್ದ ಪತ್ರವನ್ನು ಓದಿಕೊಂಡನು. ಶವಸಂಸ್ಕಾರವನ್ನು ಮಾಡಿ ಆಮೇಲೆ ಪಂಡಿತಾರಾಧ್ಯರನ್ನು ಆಸ್ಥಾನಕ್ಕೆ ಕರೆಸಿದನು. ಅತ್ಯಂತ ಕೋಪದಿಂದ ಪಂಡಿತಾರಾಧ್ಯರನ್ನು ಬೈದು ಹೆಣದ ಮೇಲಿದ್ದ ಪತ್ರವನ್ನು ಓದಿಕೊಳ್ಳುವಂತೆ ಹೇಳಿ ಕೊಟ್ಟನು. ಶಿವದ್ರೋಹಿಯನ್ನು ಕೊಂದುದಾಗಿ ಬರೆದಿದ್ದುದನ್ನು ಓದಿ ಭಕ್ತಿಯಿಂದ ಅದನ್ನು ಕಣ್ಣಿಗೆ ಒತ್ತಿಕೊಂಡನು. ತನಗೆ ಈ ವಿಷಯವೇನೂ ತಿಳಿಯದೆಂದು ಹೇಳಿದನು. ಆದರೂ ಇದಕ್ಕೆ ಪರೋಕ್ಷವಾಗಿ ತಾವೂ ಕಾರಣರೆಂದು ಒಪ್ಪಿಕೊಂಡರು. ಕೊಂದವರನ್ನು ಕೊಲ್ಲುವುದೇ ಧರ್ಮ ಎಂಬಂತೆ ನನಗೆ ಸೂಕ್ತವಾದ ದಂಡನೆಯನ್ನು ಕೊಡು ಎಂದರು. ಬೌದ್ಧಗುರುವನ್ನು ಕೊಲಿಸಿದವನ ಎರಡೂ ಕಣ್ಣುಗಳನ್ನು ಕೀಳಿಸುವಂತೆ ರಾಜನು ಆಜ್ಞೆಮಾಡಿದನು. ಪಂಡಿತಾರಾಧ್ಯರು ರಾಜನ ಬೌದ್ಧಧರ್ಮದ ನಿಷ್ಠೆಯನ್ನು ಅಲ್ಲಗಳೆಯುತ್ತ, ಶಿವಾಲಯಕ್ಕೆ ನಡೆತಂದು ಅಲ್ಲಿದ್ದ ಭಕ್ತರಿಗೆಲ್ಲ ನಮಸ್ಕರಿಸಿ, ಲಿಂಗೋದ್ಭವ ಗದ್ಯದಿಂದ ಶಿವನನ್ನು ಸ್ತುತಿಸಿ ಆರಾಧಿಸಿ ತನ್ನ ಪ್ರತಿಜ್ಞೆಯನ್ನು ಈ ರೀತಿ ಮಾಡಿದರು. 'ಈ ರಾಜನು ಕೋಪದಿಂದ ನನ್ನ ಕಣ್ಣುಗಳನ್ನು ಕೀಳಿಸಿದರೆ ಅವು ಮತ್ತೆ ಬಾರದಿದ್ದಲ್ಲಿ ನಾನು ಶಿವಪೂಜೆ ಮಾಡಿದವನಲ್ಲ. ಇದು ನನ್ನ ಭಾಷೆ'. ಪಂಡಿತಾರಾಧ್ಯರು ಪದ್ಮಾಸನರಾಗಿ ಶಿವನನ್ನು ಧ್ಯಾನಿಸುತ್ತ ಕುಳಿತರು. ದೂತರು ಸಙಸಂಜಿನಿಯಿಂದ ಅವರ ಕಣ್ಣುಗಳನ್ನು ಮೀಟಿ ಕಿತ್ತು ಅವನ್ನು ಚಿನ್ನದ ತಟ್ಟೆಯಲ್ಲಿಟ್ಟು ರಾಜನಲ್ಲಿಗೆ ಕೊಂಡೊಯ್ದರು. ರಾಜನು ಅವನ್ನು ಮುಟ್ಟಿನೋಡಿ ಬೆರಳಿನ ರಕ್ತವನ್ನು ಹಣೆಗೆ ಹಚ್ಚಿಕೊಂಡನು. ಇತ್ತ ಪಂಡಿತಾರಾಧ್ಯರಿಗೆ ಮತ್ತೆ ಕಣ್ಣುಗಳು ಮೂಡಿದುವು. ಅದನ್ನು ಕಂಡು ಭಕ್ತಸಮೂಹವೆಲ್ಲ ಕುಣಿದಾಡಿತು. ಎಲ್ಲರೂ ಅವರನ್ನು ಕೊಂಡಾಡಿದರು. ಪಂಡಿತಾರಾಧ್ಯರು ಅಲ್ಲಿದ್ದ ಜನರನ್ನು ಕಂಡು ಸಂತೋಷಭರಿತರಾಗಿ ರಾಜನಿಗೆ ಮತ್ತೆ ಹೀಗೆ ಹೇಳಿದರು: "ಎಲೈ ರಾಜನೆ ನೀವು ಕೀಳಿಸಿದ ಕಣ್ಣುಗಳನ್ನೂ ಈಶ್ವರನು ದಯ ಪಾಲಿಸಿದ ಕಣ್ಣುಗಳನ್ನೂ ನೋಡು. ನನ್ನ ಭಾಷೆಯೇ ನಿಜವಾಯಿತು. ಮತ್ತೊಂದು ಭಾಷೆಯನ್ನು ಕೇಳು. ಒಂದು ಕಣ್ಣನ್ನು ಕಿತ್ತು ಇನ್ನೊಂದು ಕಣ್ಣನ್ನು ಕೀಳುವಷ್ಟರಲ್ಲಿ ಮೊದಲು ಕಿತ್ತ ಕಣ್ಣು ಪುನಃ ಬಾರದಿದ್ದರೆ ನನ್ನ ಭಾಷೆಗೆ ಭಂಗ ಬಂದಂತೆ" ಎಂದು ಹೇಳಿದರು. ಇದಕ್ಕೆ ದೃಷ್ಟಾಂತವಾಗಿ ಹಲವಾರು ಶಿವಶರಣರ ಕಥೆಗಳನ್ನು ನಿರೂಪಿಸಿ

ದರು. ಪಂಡಿತಾರಾಧ್ಯರು ಹೇಳಿದಂತೆ ರಾಜಭಟರು ಒಂದು ಕಣ್ಣನ್ನು ಕಿತ್ತು ಇನ್ನೊಂದನ್ನು ಕೀಳುವಷ್ಟರಲ್ಲಿ ಮೊದಲು ಕಿತ್ತ ಕಣ್ಣು ಮತ್ತೆ ಬಂದಿತು. ಈ ಸೋಜಿಗವನ್ನು ಕಂಡ ರಾಜ ಪಂಡಿತಾರಾಧ್ಯರ ಬಳಿಗೆ ಬಂದು ಒಂದು ಕಣ್ಣನ್ನು ಕೀಳಿಸಿದ ಕೂಡಲೇ ಆ ತೂತಿಗೆ ಮರಳನ್ನು ತುಂಬಿ ಇನ್ನೊಂದು ಕಣ್ಣಿಗೆ ಎಕ್ಕೆಯ ಹಾಲನ್ನು ಸುರಿಸಿದನು. ಅಲ್ಲಿದ್ದ ಜನಸಮೂಹವೆಲ್ಲ ಅದನ್ನು ನೋಡಿ ರಾಜನನ್ನು ತೆಗಳಿದರು. ಇದು ರಾಜ್ಯಕ್ಕೆ ಕೇಡನ್ನುಂಟುಮಾಡುವುದು ಎಂದರು.

ಪಂಡಿತಾರಾಧ್ಯರು ಆ ಸಭೆಯಲ್ಲಿ ಈ ರೀತಿ ಪ್ರತಿಜ್ಞೆಮಾಡಿದರು. "ನನ್ನ ಕಣ್ಣುಗಳನ್ನು ಕೀಳಿಸಿದ ಈ ರಾಜನೂ ಅವನ ವಂಶವೂ ಸಂಪೂರ್ಣವಾಗಿ ನಾಶವಾಗುವವರೆಗೂ ಮತ್ತೆ ನನಗೆ ಕಣ್ಣುಗಳನ್ನು ಕೊಡಬೇಡ. ಇವನ ವಂಶ ನಿರ್ನಾಮವಾದಮೇಲೆ ನನಗೆ ಅಮರಾರಾಮದಲ್ಲಿ ಎರಡು ಕಣ್ಣುಗಳನ್ನೂ ಒಂದು ಊರ್ಧ್ವನಯನವನ್ನು ದಯಪಾಲಿಸು" ಎಂದು ಶಿವನನ್ನು ಪ್ರಾರ್ಥಿಸಿ ಆ ರಾಜನಿಗೆ ಶಾಪವನ್ನು ಕೊಟ್ಟನು. ಬಳಿಕ ಭಕ್ತಸಮೂಹದೊಡನೆ ಆ ಚೋಳನ ರಾಜ್ಯವನ್ನು ಬಿಟ್ಟು ಅಮರಾರಾಮನಗರಿಗೆ ಹೊರಟನು. ಪಂಡಿತಾರಾಧ್ಯರು ನಿರ್ಗಮಿಸಿದ ನಂತರ ಆ ಊರು ಹಾಳುಬಿದ್ದಂತಾಯಿತು. ರಾಜನಿಗೆ ನಾನಾ ವಿಧವಾದ ಕೆಟ್ಟ ಕನಸುಗಳು ಬಿದ್ದುವು, ಅಪಶಕುನಗಳಾದುವು. ಆ ಊರಿನಲ್ಲಿ ಆಗುತ್ತಿದ್ದ ಉತ್ಪಾತಗಳನ್ನು ಕಂಡು ಹೆದರಿದ ಜನ ಊರನ್ನು ಬಿಟ್ಟು ಹೋಗಲು ಪ್ರಾರಂಭಿಸಿದರು. ಹೀಗಿರಲು ರಾಜನಿಗೆ ಒಂದು ದಿನ ಕನಸು ಬಿತ್ತು. ಅದರಲ್ಲಿ ಒಬ್ಬ ಕಾಪಾಲಿ ರುಂಡಮಾಲಾಧರನಾಗಿ ಬಂದು ತನ್ನ ಎದೆಯನ್ನು ಮೆಟ್ಟಿ ತ್ರಿಶೂಲದಿಂದ ಇರಿದಂತಾಯಿತು. ಗಾಬರಿಯಿಂದ ಎಚ್ಚೆತ್ತು ಚೇತರಿಸಿಕೊಳ್ಳುವಷ್ಟರಲ್ಲಿ ಅವನ ಎದೆಯ ಮೇಲೆ ಮೂರು ಹುಣ್ಣುಗಳು ಕಾಣಿಸಿಕೊಂಡುವು. ರಾಜನು ಬೌದ್ಧ ಜೈನ ಮಂತ್ರವಾದಿಗಳನ್ನು ಕರೆಸಿ ಚಿಕಿತ್ಸೆ ಮಾಡಿಸಿದರೂ ಏನೂ ಪ್ರಯೋಜನವಾಗಲಿಲ್ಲ. ಆಗ ಅವರು ಪಂಡಿತಾರಾಧ್ಯರನ್ನೂ ಶಿವಭಕ್ತರನ್ನೂ ಹಿಂಸಿಸಿದುದಕ್ಕೆ ಹೀಗಾಗಿದೆಯೆಂದೂ ಮತ್ತೆ ಅವರನ್ನು ಕರೆಸಿ ಅವರನ್ನು ಮರೆಹೊಕ್ಕರೆ ವ್ಯಾಧಿ ಶಮನವಾಗುವುದೆಂದು ಸೂಚಿಸಿದರು. ಅದರಂತೆ ರಾಜ ಪಂಡಿತಾರಾಧ್ಯರನ್ನು ಕರೆತರುವಂತೆ ಭಟರನ್ನು ಅಟ್ಟಿದನು. ತಾನು ಅವರ ಶಿಷ್ಯನಾಗುವುದಾಗಿಯೂ ತನ್ನ ದೇಶಕೋಶಗಳನ್ನು ಅವರಿಗೆ ಸಮರ್ಪಿಸುವುದಾಗಿಯೂ ಹೇಳಿಕಳಿಸಿದನು. ಆ ಭಟರು ಪಂಡಿತಾರಾಧ್ಯರನ್ನು ಕಂಡು ಎಲ್ಲ ವಿಷಯವನ್ನೂ ತಿಳಿಸಿ ಪ್ರಾರ್ಥಿಸಿಕೊಂಡರು. ಆದರೆ "ಶಿವದ್ರೋಹಿಯಾದ ಚೋಳರಾಜನ ಪುರವನ್ನು ಪ್ರವೇಶಿಸಬಹುದೆ? ಪರಮೇಶ್ವರನಲ್ಲದೆ ಬೇರೆ ರಾಜರೆಂಬುವರುಂಟೇ" ಎಂದು ಹೇಳಿ ಪಂಡಿತಾರಾಧ್ಯರು ಭಟರನ್ನು ಹಿಂದಕ್ಕೆ ಕಳಿಸಿಬಿಟ್ಟರು. ಇತ್ತ ದಿನೇ ದಿನೇ ಹುಣ್ಣಿನಿಂದ ಕೀವು ರಕ್ತ ಸುರಿದು ಹುಳುಬಿದ್ದು ರಾಜ ಸತ್ತುಹೋದನು. ಅವನ ಬಂಧುಗಳು ರಾಜ್ಯಕ್ಕಾಗಿ ಪರಸ್ಪರ ಹೊಡೆದಾಡಿ ಎಲ್ಲರೂ ನಿರ್ನಾಮವಾದರು. ಆ ಪಟ್ಟಣವೆಲ್ಲ ಸುಟ್ಟು ಭಸ್ಮವಾಗಿ ಹೋಯಿತು.

ಪಂಡಿತಾರಾಧ್ಯರು ಪರಸಮಯಿಯಾದ ಆ ದುಷ್ಟಬೌದ್ಧನನ್ನು ತಾವೇ ಕೊಲ್ಲದೇ ಹೋದುದು ಶಿವದೂಷಣೆಯನ್ನು ಕೇಳಿದುದು ಚೋಳನೊಡನೆ ಮಾತನಾಡಿದುದು ಈ ಎಲ್ಲಾ ತಪ್ಪುಗಳಿಗೂ ಶಿವಶರಣರ ನಾಮಸಂಕೀರ್ತನೆ ಮಾಡುವುದೊಂದೇ ಪರಿಹಾರವೆಂದು ಭಾವಿಸಿ ಸಹಸ್ರಗಣನಾಮವನ್ನು ಕೀರ್ತಿಸಿದರು. ಆಮೇಲೆ ಪಂಡಿತಾರಾಧ್ಯರು ಅಮರಾರಾಮನಗರಕ್ಕೆ ಹೋಗಿ ಅಲ್ಲಿದ್ದ ಅಮರೇಶ್ವರನನ್ನು ಅಮರೇಶಾಷ್ಟಕದಿಂದ ಹೊಗಳಿದರು. ಅಲ್ಲಿದ್ದ ಹೊಳೆಯೊಳಕ್ಕೆ ಭಕ್ತಸಮೂಹದೊಡನೆ ಇಳಿದು ಅವರಿಗೆ ಈ ರೀತಿ ಹೇಳಿದರು: "ಈ ನದಿಯ ತೆಂಕಣದಿಕ್ಕಿಗಿರುವ ಭೂಮಿ ಚೋಳರಾಜನದು. ಉತ್ತರಕ್ಕಿರುವುದು ಬೇರೆ ರಾಜನದು. ವೆಲ್ನಾಡ ಸೀಮೆಯನ್ನು ದಾಟಿಬಂದಿರುವುದರಿಂದ ಇನ್ನು ನನ್ನ ಕಣ್ಣುಗಳನ್ನು ಪಡೆದುಕೊಳ್ಳುವೆನು. ಚೋಳನು ಯಮಪುರಿಯನ್ನೈದಿದ ಸಂಗತಿಯನ್ನು ಈಗ ತಾನೆ ಕೇಳಿದ್ದೇನೆ. ಇನ್ನು ನನ್ನ ಕಣ್ಣುಗಳಿಗೆ ಕಟ್ಟಿದ್ದ ಕಟ್ಟನ್ನು ಬಿಚ್ಚುವೆನು" ಎಂದನು. ಆ ಕೂಡಲೇ ಕಣ್ಣುಗಳು ಮಾಣಿಕ್ಯಯುಗಳದಂತೆ ಶೋಭಿಸಿದುವು. ಅಲ್ಲಿದ್ದ ಭಕ್ತಸಮೂಹವೆಲ್ಲ ಅವರನ್ನು ಕೊಂಡಾಡಿತು.

ಹರನ ಕರುಣದಿಂದ ನಯನಗಳನ್ನು ಪಡೆದವರು ಹಲವರುಂಟು. ಆದರೆ ಪಂಡಿತಾರಾಧ್ಯರಂತೆ ಊರ್ಧ್ವನಯನ ಪಡೆದವರನ್ನು ಧರಣಿಯಲ್ಲಿ ಯಾರನ್ನು ಕಾಣೆವು ಎಂದು ಜಲಂಧರಾಸುರನ ಕಥೆಯನ್ನು ಹೇಳತೊಡಗಿದರು. ಪೂರ್ವದಲ್ಲಿ ವಿಷ್ಣು ಕೋಪದಿಂದ ಜಲಂಧರನೆಂಬ ದೈತ್ಯನಮೇಲೆ ಯುದ್ಧಕ್ಕೆ ಹೋದನು. ಜಲಂಧರ ವಿಷ್ಣುವಿನ ಅಹಂಕಾರವನ್ನು ಭಂಗಿಸಿ ಆಕಾಶಕ್ಕೆ ಎಸೆದುಬಿಟ್ಟನು. ವಿಷ್ಣು ಅಲ್ಲಿಯೇ ಸಿಕ್ಕಿಕೊಂಡು ಹದಿನಾರು ಸಾವಿರ ವರ್ಷಗಳವರೆಗೆ ಮೊರೆಯಿಡುತ್ತಿದ್ದನು. ಆ ಮೊರೆಯನ್ನು ನಂದಿಕೇಶ್ವರನಿಂದ ಈಶ್ವರನು ತಿಳಿದು ಆ ದೈತ್ಯನಿದ್ದಲ್ಲಿಗೆ ಬಂದು "ಎಲೈ ಜಲಂಧರನೆ ಆಯುಧವನ್ನು ತೆಗೆದುಕೊಂಡು ನನ್ನೊಡನೆ ಯುದ್ಧಮಾಡು" ಎಂದನು. ಅದನ್ನು ಕೇಳಿ ಅತಿಯಾಗಿ ಕೋಪಗೊಂಡ ಜಲಂಧರನು ವೃದ್ಧತಾಪಸರ ಸಂಗಡ ಯುದ್ಧಮಾಡುವುದಕ್ಕೆ ಆಯುಧವೇಕೆ, ಬರಿಗೈಯಲ್ಲೇ ಯುದ್ಧಮಾಡುವುದಾಗಿ ತಿಳಿಸಿದನು. ಹರನು ನಿರಾಯುಧರೊಡನೆ ಯುದ್ಧಮಾಡುವುದು ತರವಲ್ಲವೆಂದು ಸಮುದ್ರದೊಳಗೆ ತನ್ನ ಎಡಗಾಲ ಬೆರಳನ್ನು ವೇಗವಾಗಿ ತಿರುಗಿಸಿದನು. ಅದರಿಂದುಂಟಾದ ಸುಳಿಯು ಚಕ್ರಾಕಾರದಿಂದ ಹೊಳೆಯುತ್ತಿತ್ತು. ಆಗ ಶಿವನು ಜಲಂಧರನಿಗೆ ಆ ಚಕ್ರಾಯುಧವನ್ನು ತೆಗೆದುಕೊಂಡು ಯುದ್ಧಮಾಡುವಂತೆ ಹೇಳಿದನು. ಅದರಂತೆ ಜಲಂಧರನು ಅತ್ಯಂತ ಪ್ರಯಾಸದಿಂದ ಅದನ್ನು ಕೊರಳಿನವರೆಗೂ ಎತ್ತುವಷ್ಟರಲ್ಲಿ ಅದು ಅವನ ಕೊರಳನ್ನು ಕತ್ತರಿಸಿಬಿಟ್ಟಿತು. ಬಳಿಕ ವಿಷ್ಣುವು ಈಶ್ವರನನ್ನು ಸ್ತುತಿಸಿ ಆ ಚಕ್ರವನ್ನು ತಾನು ಪಡೆದುಕೊಂಡು ದೈತ್ಯಸಂಹಾರ ಮಾಡುತ್ತಿದ್ದನು. ಹೀಗಿರಲು ಒಮ್ಮೆ ವಿಷ್ಣು ದಧೀಚಿಯ ಮೇಲೆ ಯುದ್ಧಮಾಡುವಾಗ ಆ ಚಕ್ರವನ್ನು ಪ್ರಯೋಗಿಸಿದನು. ದಧೀಚಿ ಆ ಚಕ್ರವನ್ನು ಮುರಿದುಹಾಕಿದನು. ಮತ್ತೆ ದೈತ್ಯರು ಉಪದ್ರವ ಕೊಡಲು ವಿಷ್ಣು ಚಕ್ರವನ್ನು ಮರಳಿ ಪಡೆಯಲು ಈಶ್ವರನನ್ನು ಭಜಿಸಿದನು. ಪ್ರತಿದಿನವೂ ಒಂದು ಸಾವಿರ ಕಮಲಗಳಿಂದ ಹರನ ಸಹಸ್ರನಾಮಗಳನ್ನು ಪಠಿಸುತ್ತ ಪೂಜಿಸುತ್ತಿದ್ದನು.

ಹೀಗೆ ಪೂಜಿಸುತ್ತಿರುವರಲ್ಲಿ ಒಮ್ಮೆ ಸಹಸ್ರಕಮಲಗಳಲ್ಲಿ ಒಂದು ಕಮಲ ಕಡಮೆಯಾಗಲು ತನ್ನ ಕಣ್ಣನ್ನೇ ಕಿತ್ತು ಸಮರ್ಪಿಸುವನು. ಇದರಿಂದ ವಿಷ್ಣು ಕಳೆದುಹೋದ ಕಣ್ಣು ಮತ್ತು ಚಕ್ರಗಳೆರಡನ್ನೂ ಪಡೆದುಕೊಳ್ಳುವನು.

ಕಾಳಿದಾಸನು ಈ ವಿಷಯವನ್ನು ಕೇಳಿ ವಿಷ್ಣುವಾದರೋ ಉಗ್ರತಪಸ್ಸನ್ನು ಮಾಡಿ ಶಿವನಿಂದ ಒಂದು ಕಣ್ಣನ್ನು ಮಾತ್ರ ಪಡೆದುಕೊಂಡನು. ನಾನಾದರೋ ಕಣ್ಣು ಗಳ ರಾಶಿಯನ್ನೇ ಪಡೆದುಕೊಳ್ಳುವೆನು ಎಂದು ತನ್ನ ಕಣ್ಣುಗಳನ್ನು ಕಿತ್ತು ಶಿವನ ಪಾದ ಗಳಲ್ಲಿರಿಸಿ ಪೂಜಿಸಿ ಕಣ್ಣುಗಳ ರಾಶಿಯನ್ನೇ ಪಡೆದುಕೊಂಡನು. ಆ ಪ್ರಕರಣ ಇಂತಿದೆ: ಭಲ್ಲಟ, ಭೋಜ, ಗೋಪಾಲಿ, ವೀರಕರ್ಪೂರ, ಭಾನು, ಭಾರವಿ, ಭರತ, ಶಂಕರ, ಶಾಕ ಟಾಯನ, ಭವಭೂತಿ, ರುದ್ರಭಟ್ಟ, ಮಾಘ, ಜಯಕೀರ್ತಿ ಇವರು ಮುಖ್ಯಕವಿವರರು. ಬಾಣ ಕಾಳಿದಾಸ ಮಯೂರ ಇವರು ತುಂಬ ಪ್ರಸಿದ್ಧರಾದವರು. ಇವರು ಕವಿತ್ವದ ಆಧಿಕ್ಯತೆಗಾಗಿ ಒಬ್ಬರೊಡನೆ ಒಬ್ಬರು ನಿತ್ಯವೂ ಸ್ಪರ್ಧೆನಡೆಸುತ್ತಿದ್ದರು. ಮಯೂರನು ಜಯಾಕಾಂಕ್ಷೆಯಿಂದ ವಿದ್ವಾಂಸರ ಸಮಕ್ಷದಲ್ಲಿ ಸೂರ್ಯಶತಕವನ್ನು ಹೇಳಿದನು. ಅದರಿಂದ ಪ್ರತ್ಯಕ್ಷನಾದ ಸೂರ್ಯನು "ನಿನ್ನ ದೇಹದ ಹೊರಗೆ ಕಾಣುವ ಕುಷ್ಠವನ್ನು ನನ್ನ ಕಿರಣಗಳಿಂದ ಆಚ್ಛಾದಿಸುತ್ತೇನೆ. ಆದರೆ ದೇಹದ ಒಳಗಡೆ ಇರುವ ಕುಷ್ಠ ಈಶ್ವರ ನಿಂದಲ್ಲದೆ ಮತ್ತಾರಿಂದಲೂ ನಿವಾರಿಸಲು ಸಾಧ್ಯವಿಲ್ಲ. ನನಗೆ ಬಂದಿದ್ದ ಕುಷ್ಠವನ್ನೂ ನಾನು ಈಶ್ವರನಿಂದಲೇ ಪರಿಹರಿಸಿಕೊಂಡೆ. ಆದುದರಿಂದ ನೀನು ಶಿವನನ್ನು ಮರೆಹೊಕ್ಕರೆ ನಿನ್ನ ಕುಷ್ಠ ನಾಶವಾಗುತ್ತದೆ" ಎಂದು ಹೇಳಿದನು. ಅದರಂತೆ ಮಯೂರನು ಮಯೂರ ಸ್ತೋತ್ರದಿಂದ ಈಶ್ವರನನ್ನು ಸ್ತುತಿಸಿ ಅಂತಃಕುಷ್ಠವನ್ನು ನೀಗಿಕೊಂಡನು.

ಮಯೂರನ ಪ್ರಸಂಗವನ್ನು ನೋಡಿದ ಭಟ್ಟಬಾಣನೆಂಬುವನು ತನ್ನ ಕೈಗಳನ್ನು ಕತ್ತರಿಸಿಕೊಂಡು ಶಿವನ ಮುಂದೆ ಇರಿಸಿ ಬಾಣಗದ್ಯವನ್ನು ಹೇಳಿ ಕೈಗಳನ್ನು ಮೊದಲಿನಂತೆ ಹೊಂದಿದನು. ಪುರಜನವೆಲ್ಲ ಇದನ್ನು ಆಶ್ಚರ್ಯದಿಂದ ನೋಡುತ್ತಿತ್ತು.

ಕಾಳಿದಾಸ ಕವಿಯು ತನ್ನ ಎರಡು ಕಣ್ಣುಗಳನ್ನೂ ಕಿತ್ತು ಶಿವನ ಪಾದಗಳಿಗೆ ಅರ್ಪಿಸಿ ಅತ್ಯಂತ ಭಕ್ತಿಯಿಂದ ಕಾಳಿದಾಸಗದ್ಯವನ್ನು ಹೇಳಿದನು. ಅದನ್ನು ಮೆಚ್ಚಿದ ಪರಮೇಶ್ವರನು ಆತನ ಕಣ್ಣುಗಳನ್ನು ಮರಳಿ ಕೊಟ್ಟನು. ಆಗ ಕಾಳಿದಾಸ, ಕೊಟ್ಟ ಕಣ್ಣುಗಳೆರಡನ್ನೇ ಮತ್ತೆ ಕೊಡುವುದರಲ್ಲಿ ಆಶ್ಚರ್ಯವೇನಿದೆ? ಕಣ್ಣುಗಳ ರಾಶಿಯನ್ನೇ ಕೊಡಬೇಕೆಂದು ಬೇಡಿ ಪಡೆದುಕೊಂಡನು. ಆಮೇಲೆ ಭೂಮಿಯ ಮೇಲಿದ್ದ ಹುಟ್ಟು ಕುರುಡರನ್ನೆಲ್ಲಾ ಕರೆಸಿ ತಾನು ಎರಡು ಕಣ್ಣುಗಳನ್ನಿಟುಕೊಂಡು ಉಳಿದುವನ್ನೆಲ್ಲಾ ಸಂತೋಷದಿಂದ ಅವರಿಗೆ ಕೊಟ್ಟುಬಿಟ್ಟನು. ಜನರೆಲ್ಲರೂ ಕಾಳಿದಾಸನನ್ನು ಸ್ತುತಿಸುತ್ತಿರ ಲಾಗಿ ನಯನರೋಗಿಗಳಲ್ಲಿ ಒಬ್ಬನಾದ ಅಂಬಣ್ಣನೆಂಬುವನು ಕಾಳಿದಾಸನಿಂದ ಕಣ್ಣು ಗಳನ್ನು ಪಡೆಯುವುದು ಅನುಚಿತವಾದದು. ಕಾಳಿದಾಸನ ವಿದ್ಯೆ ನನಗಿಲ್ಲದಿದ್ದರೂ ಶಿವ ಭಕ್ತಿಗೇನೂ ಕೊರತೆಯಿಲ್ಲ. ಸ್ತುತಿನಿಂದೆಗಳೆರಡೂ ಈಶನಿಗೆ ಹಿತವಾದುವೇ. ನನಗೆ ವಿದ್ಯೆ ಯಿಲ್ಲದಿದ್ದರೂ ಈಶ್ವರನಿಗೆ ಮೈದುನತನದಿಂದ ಸರಸವಾದ ಮಾತುಗಳನಾಡುತ್ತ ಶಿವನನ್ನು

ಒಲಿಸಿ ಕಣ್ಣುಗಳನ್ನು ಪಡೆಯುತ್ತೇನೆ ಎಂದು ನಿರ್ಧರಿಸಿ ಕೊಟ್ಟದೊನೆ ಎಂಬ ಶಂಕರೇಶ್ವ ರಾಲಯದ ಹಿಂದುಗಡೆ ಕುಳಿತು ಹಾಸ್ಯರಸಪೂರಿತವಾದ ಅನೇಕ ಪದ್ಯಗಳಿಂದ ಶಿವನನ್ನು ಸ್ತುತಿಸಿದನು. ಅವನ ಪರಿಹಾಸಕ್ಕೆ ಮೆಚ್ಚಿದ ಶಿವನು "ನನ್ನ ಮುದ್ದು ಮೈದುನನಾದ ನಂಬ್ಯಣ್ಣನೇ ಹಾಸ್ಯವನ್ನು ಬಿಟ್ಟು ನನ್ನ ಬಳಿಗೆ ಬಾ, ಕಣ್ಣುಗಳನ್ನು ಕೊಡುತ್ತೇನೆ" ಎಂದನು. ಅದಕ್ಕೆ ನಂಬ್ಯಣ್ಣ "ಎಲೈ ಭಾವನೆ, ನಾನು ಕುರುಡನು ಹಿಡಿದುಕೊಂಡ ಕೋಲಿ ನಂತೆ ಆಗಿದ್ದೇನೆ. ನಿನ್ನ ಬಳಿಗೆ ಹೇಗೆ ಬರಲಿ? ನನಗೆ ಸರ್ವವೂ ನೀನೇ ಆಗಿರುವೆ, ನಾನು ಅನಾಥ, ನೀನೇ ನನ್ನ ಬಳಿಗೆ ಬಂದು ಕಣ್ಣುಗಳನ್ನು ದಯಪಾಲಿಸಬೇಕು" ಎಂದು ಪ್ರಾರ್ಥಿಸಿಕೊಳ್ಳಲು ಶಿವನು ಪರಿವಾರದೊಂದಿಗೆ ಬರುವನು. ಶಿವನ ಬರವಿನೊಂದಿಗೇ ನಂಬ್ಯಣ್ಣನ ಕಣ್ಣುಗಳೂ ಬಂದುವು.

ಇರಿತ್ತಾಂಡಿ ಎಂಬ ಭಕ್ತನೊಬ್ಬನು ಕಾಳಿದಾಸನು ಕಣ್ಣುಗಳನ್ನು ಪಡೆದುಕೊಂಡ ದ್ದನ್ನು ಕೇಳಿ ತನಗೆ ಶತ್ರುಗಳಾಗಿದ್ದ ಜೈನರ ಕಣ್ಣುಗಳನ್ನು ಕಿಡಿಸಿ ತನ್ನ ಕಣ್ಣುಗಳನ್ನು ಶಿವನಿಂದ ಪಡೆದುಕೊಳ್ಳುವನು.

ಶಿವನಾಗಮಯ್ಯನೆಂಬುವನು ಪ್ರತಿದಿನ ಮೂರುಬಾರಿ ತನ್ನ ಕಣ್ಣುಗಳನ್ನು ಕಿತ್ತು ಶಿವನಿಗೆ ಅರ್ಪಿಸಿ ಮತ್ತೆ ಅವನ್ನು ಪಡೆದುಕೊಳ್ಳುತ್ತಿದ್ದನು. ಆತನ ಭಕ್ತಿಗೆ ಮೆಚ್ಚಿದ ಶಿವನು ಇನ್ನುಮುಂದೆ ಪ್ರತಿ ಸೋಮವಾರವೂ ನೇತ್ರಪೂಜೆ ಮಾಡುವಂತೆ ಆತನಿಗೆ ಹೇಳಿ ದನು. ಅದರಂತೆ ಶಿವನಾಗಮಯ್ಯ ಪ್ರತಿ ಸೋಮವಾರವೂ ತನ್ನ ಕಣ್ಣುಗಳನ್ನು ಶಿವನಿಗೆ ಅರ್ಪಿಸಿ ಮರಳಿ ಪಡೆದು ಸಂತೋಷದಿಂದಿದ್ದನು.

ಕಣ್ಣಪ್ಪನೆಂಬ ಶಿವಶರಣ ಹರನ ಕಣ್ಣಿಗೆ ತನ್ನ ಕಣ್ಣನ್ನು ಕಿತ್ತಿಟ್ಟು ಮತ್ತೆ ಅದನ್ನು ಪಡೆದು ಭಕ್ತರೆಲ್ಲರ ಕೀರ್ತಿಗೆ ಒಳಗಾದನು.

ಕಣ್ಣಳದೇವಯ್ಯನೆಂಬುವನು ಪರಿಸೆಯ ಜನರೊಂದಿಗೆ ಶ್ರೀಶೈಲಕ್ಕೆ ಹೋಗಿ ಮಲ್ಲಿ ಕಾರ್ಜುನನಿಗೆ ತನ್ನ ಕಣ್ಣುಗಳನ್ನು ಕಿತ್ತು ಸಮರ್ಪಿಸಿ ಮತ್ತೆ ಅವನ್ನು ಪಡೆದನು. ಅದನ್ನು ಕಂಡ ದುರ್ಜನರು ಇದು ಕುಟಿಲವೆಂದು ಹೇಳಲು ಕಣ್ಣಳದೇವಯ್ಯನು ಸಭೆಯನ್ನು ಸೇರಿಸಿ ಒಂದು ಬೆಕ್ಕನ್ನು ತರಿಸಿ ಅದರ ಕಣ್ಣುಗಳನ್ನು ಕಿತ್ತು ಶಿವಶರಣ ಪಾದಸ್ಮರಣೆಗೈದು ಶಿವನನ್ನು ಧ್ಯಾನಿಸಲು ಬೆಕ್ಕಿಗೆ ಮತ್ತೆ ಕಣ್ಣುಗಳು ಮೂಡಿದುವು. ಲೋಕವೆಲ್ಲ ಅವನನ್ನು ಸ್ತುತಿಸಿತು.

ಈಶ್ವರನಿಗೆ ಕಣ್ಣುಗಳನ್ನು ಸಮರ್ಪಿಸಿ ಮತ್ತೆ ಅವನ್ನೇ ಪಡೆಯುವುದರಲ್ಲಿ ಅತಿಶಯ ವೇನಿದೆ? ಮುಕ್ಕಂಟ ಕಾಲಿವೆಟ್ಟ ಎಂಬ ಶರಣನು ಪೂರ್ವಾರ್ಜಿತ ಪುಣ್ಯದಿಂದ ಮೂರು ಕಣ್ಣುಗಳನ್ನು ಪಡೆದನು.

ಕರಿಕಾಲಚೋಳನೆಂಬ ರಾಜನು ಪರಮಶಿವಭಕ್ತನಾಗಿ ಕನಕವರ್ಷವನ್ನು ಶಿವ ನಿಂದ ಪಡೆದನು. ಆತನು ಕಾವೇರಿಗೆ ಕಟ್ಟೆಯನ್ನು ಕಟ್ಟಬೇಕೆಂದು ಎಲ್ಲಾ ದೇಶದ ರಾಜ ರನ್ನೂ ಬರಿಸಿ ಕಾಳಿವೆಟ್ಟ ರಾಜನಿಗೂ ಹೇಳಿಕಳಿಸಿದನು. ಅದನ್ನು ಕೇಳಿದ ಕಾಳಿವೆಟ್ಟ ಎರಡು ಕಣ್ಣುಗಳುಳ್ಳ ರಾಜನಿಗೆ ಮೂರು ಕಣ್ಣುಗಳುಳ್ಳ ರಾಜನು ಸೇವೆಯನ್ನು ಮಾಡ

ಬಹುದೆ? ಸಲ್ಲದು ಎಂದು ಕರೆಯಲು ಬಂದಿದ್ದ ದೂತನನ್ನು ಕಳಿಸಿಬಿಟ್ಟನು. ಇದನ್ನು ಕೇಳಿದ ಚೋಳ ಕಾಳಿವೆಟ್ಟಯ ಚಿತ್ರವನ್ನು ಬರೆದು ಅವನಿಗೆ ಮೂರುಕಣ್ಣುಗಳನ್ನು ಕೊಟ್ಟವರಾರೆಂದು ತನ್ನ ಕಾಲಬೆರಳಿನಿಂದ ಹಣೆಗಣ್ಣನ್ನು ಮೆಟ್ಟಲು ಅದು ಒಡೆದು ಹೋಯಿತು. ಆಗ ಕಾಳಿವೆಟ್ಟಭೂಪ ಚೋಳನಲ್ಲಿಗೆ ಬಂದು ಅವನ ಪಾದಗಳ ಮೇಲೆ ಬಿದ್ದು ಆ ಮೂರನೆಯ ಕಣ್ಣನ್ನು ಮತ್ತೆ ಪಡೆದನು.

ಶಂಕರದಾಸನೆಂಬ ಸದ್ಭಕ್ತನು ಶಿವನಿಂದ ಮೂರುಕಣ್ಣುಗಳನ್ನು ಪಡೆದು ಅನ್ಯದೈವಗಳನ್ನು ಸುಟ್ಟು ಬೂದಿ ಮಾಡುತ್ತಾ ಕುಟಿಲದೈವಗಳಿಂದ ಸೇವೆಯನ್ನು ಮಾಡಿಸಿಕೊಳ್ಳುತ್ತಿದ್ದನು. ಹೀಗೆ ಪಂಡಿತಾರಾಧ್ಯರು ಪರಶಿವನ ಕೃಪೆಯಿಂದ ಊರ್ಧ್ವನಯನಗಳನ್ನು ಪಡೆದರು ಎಂದು ಭಕ್ತಸಂತತಿ ಅವರನ್ನು ಕೊಂಡಾಡುತ್ತಿತ್ತು.

ಕಾವೇರಿನದಿಯ ದಕ್ಷಿಣಕ್ಕಿದ್ದ ಆವಲೂರಿಗೆ ಚರಮೂರ್ತಿಗಳಿಬ್ಬರು ಬಂದು ನಂಬಿಯಣ್ಣನು ಹೇಳಿದ ತಿರುಪಾಟುಗಳನ್ನು ಹಾಡುತ್ತಿದ್ದರು. ಅದನ್ನು ಪಿರಿಯನಂಗೆ ಎಂಬ ಶಿವದ್ವಿಜ ಕಾಂತೆ ಕೇಳಿ ಈ ಹಾಡುಗಳನ್ನು ಹೇಳಿದವರು ಯಾರು? ಇವುಗಳಿಂದ ಫಲವೇನು? ಎಂದು ಕೇಳಿದಳು. ಈ ಹಾಡುಗಳು ಬಯಸಿದ್ದನ್ನು ಕೊಡುತ್ತವೆ, ಇವನ್ನು ಹಾಡಿದವನು ನಂಬಿಯಣ್ಣ, ಅವನ ಕಥೆಯನ್ನು ಹೇಳುತ್ತೇವೆ ಕೇಳು ಎಂದರು. ಗಿರಿಜಾವಿವಾಹದ ಸಮಯದಲ್ಲಿ ಶಂಕರನು ಶೃಂಗಾರ ಮಾಡಿಕೊಂಡು ನಿಲವುಗನ್ನಡಿಯಲ್ಲಿ ತನ್ನ ರೂಪನ್ನು ನೋಡಿಕೊಂಡನು. ಆ ಕನ್ನಡಿಯಲ್ಲಿ ತನ್ನ ಪ್ರತಿರೂಪು ಹೊಳೆಯಲು ತಾನೇ ಪರಮ ಸೌಂದರ್ಯಶಾಲಿ ಎಂದು ಸಂತೋಷಿಸುತ್ತಿದ್ದನು. ಆಗ ಅವನ ಸುಂದರಮೂರ್ತಿ ಒಂದು ರೂಪವನ್ನು ತಾಳಿ ಕನ್ನಡಿಯಿಂದ ಹೊರಬಂದು ಶಿವನಿಗೆ ನಮಸ್ಕರಿಸಿತು. ಪರಶಿವನು ನನ್ನ ಸುಂದರ ಪ್ರತಿಬಿಂಬವೇ ನೀನಾಗಿರುವುದರಿಂದ ಸೌಂದರ ಎಂಬ ಹೆಸರಿನಿಂದ ಗಣಸಮೂಹದಲ್ಲಿರು ಎಂದು ಹೇಳಿದನು. ಆ ಸೌಂದರನು ಶಿವಪೂಜೆಗೆ ಪುಷ್ಪಗಳನ್ನು ತರಲು ಉದ್ಯಾನವನಕ್ಕೆ ಹೋದಾಗ ಪಾರ್ವತಿಗೆ ಹೂತರಲು ಹೋಗಿದ್ದ ಕನಕಲತೆ ಕಾಂತಿಮತಿ ಎಂಬ ಇಬ್ಬರು ಕನ್ಯೆಯರನ್ನು ಕಂಡು ಮೋಹಗೊಂಡನು. ಸೌಂದರ ಅವರೊಡನೆ ಕಾಮಕ್ರೀಡೆಯಾಡಿದ ಮೇಲೆ ಎಲ್ಲರೂ ಹರನ ಬಳಿಗೆ ಹೋದರು. ಅವರನ್ನು ನೋಡಿದ ಪಾರ್ವತಿ ಪರಮೇಶ್ವರರು ಅವರ ಇಂಗಿತವನ್ನರಿತು ನೀವು ಭೂಮಂಡಲಕ್ಕೆ ಹೋಗಿ ಮನ್ಮಥಸುಖವನ್ನು ಅನುಭವಿಸಿ ಬನ್ನಿ ಎಂದು ಆಜ್ಞಾಪಿಸಿದರು.

ದ್ರಾವಿಡದೇಶದ ತಿರುವಾಲೂರೊಳಗೆ ಜಡೆಯಾರಿ ಎಂಬ ಶಿವಭಕ್ತನ ಮಗನಾಗಿ ಸೌಂದರ ಜನಿಸಿದನು. ನಂಬಿಯಣ್ಣನೆಂಬ ಹೆಸರನ್ನು ಹೊಂದಿದನು. ಕನಕಲತೆ ಅದೇ ತಿರುವಾಲೂರಲ್ಲಿ ಪಂಚಮರ ಗರ್ಭದಲ್ಲಿ ಪರವೆನಾಚಿ ಎಂಬ ಹೆಸರಿನಿಂದ ಹುಟ್ಟಿದಳು. ಕಾಂತಿಮತಿಯಾದರೋ ಮಂಗಲೂರಲ್ಲಿ ಅಂಗಸಂಗಿ ಎಂಬ ಹೆಸರಿನಿಂದ ಶೂದ್ರಜಾತಿಯಲ್ಲಿ ಹುಟ್ಟಿದಳು. ಇತ್ತ ಜಡೆಯಾರಿ ನಂಬಿಯಣ್ಣನಿಗೆ ಶಾಂಭವದೀಕ್ಷೆಯನ್ನು ಕೊಟ್ಟು ಸಲಹುತ್ತಿದ್ದನು. ನಂಬಿಯಣ್ಣನಿಗೆ ಎಂಟು ವರ್ಷವಾಗುತ್ತಲೇ ಉಪನಯನ ಮಾಡುವುದಕ್ಕೆ ಸಿದ್ಧತೆ ಮಾಡಿದನು. ಆಗ ಶಿವನು ವೃದ್ಧವಿಪ್ರರ ವೇಷವನ್ನು ತಾಳಿ ಅಲ್ಲಿಗೆ ಬಂದು "ಈ

ಬಾಲಕನು ನನ್ನ ದಾಸಿಯ ಮಗ. ಇವನಿಗೆ ಪುಣ್ಯಾಹ ವಾಚನೆಯನ್ನು ಮಾಡಬಹುದೆ" ಎಂದು ಜಡೆಯಾರಿಯನ್ನು ಪ್ರಶ್ನಿಸಿ ನಂಬಿಯಣ್ಣನ ಕೈಯನ್ನು ಹಿಡಿದು ಎಳೆದನು. ಅಲ್ಲಿದ್ದ ವಿಪ್ರರೆಲ್ಲರೂ ಆಶ್ಚರ್ಯಗೊಳ್ಳಲು ಜಡೆಯಾರಿಯ ಬಂಧುಗಳು ಬಂದು ಕೋಪ ದಿಂದ ಆ ಮಹಾಬ್ರಾಹ್ಮಣನನ್ನು ಹೊರಕ್ಕೆ ತಳ್ಳಿದರು. ಆಗ ಮುದಿಬ್ರಾಹ್ಮಣ ಅಲ್ಲಿದ್ದ ಪೂಜಾದ್ರವ್ಯಗಳ ಮೇಲೆ ಬಿದ್ದು ಎಲ್ಲವನ್ನೂ ಅಸ್ತವ್ಯಸ್ತ ಮಾಡಿದನು. ಆ ಉಪನಯನ ಮಂಟಪದ ಚಪ್ಪರ ಕುಸಿದು ಅಗ್ನಿಕುಂಡದ ಮೇಲೆ ಬಿದ್ದು ಬೆಂಕಿ ಹೊತ್ತಿಕೊಂಡು ಎಲ್ಲೆಲ್ಲೂ ಆವರಿಸಿತು. ಅಲ್ಲಿದ್ದವರೆಲ್ಲಾ ಚೆಲ್ಲಾಪಿಲ್ಲಿಯಾದರು.

ವೃದ್ಧಬ್ರಾಹ್ಮಣನು 'ನನ್ನ ದಾಸೀಸುತನನ್ನು ಈತ ತನ್ನ ಮಗನೆಂದು ಕರೆದು ಕೊಂಡು ಹೋಗುತ್ತಿದ್ದಾನೆ' ಎಂದು ಕೂಗುತ್ತ ಜಡೆಯಾರಿಯನ್ನು ಎಳೆದು ತಂದನು. ಆ ಊರಿನ ರಾಜನಾದ ಕರಿಕಾಳಚೋಳ ಇದನ್ನು ಕೇಳಿ ಅವರಿಬ್ಬರನ್ನು ಸಭೆಗೆ ಕರೆಸಿದನು. ವೃದ್ಧವಿಪ್ರನು ಕಪಟಲೇಖ್ಯವನ್ನು ರಾಜನ ಮುಂದಿಟ್ಟು—'ಈತ ಮಗುವನ್ನು ತನ್ನ ಕಷ್ಟಕ್ಕಾಗಿ ನನಗೆ ಮಾರಿದ್ದನು. ಈ ಬಾಲಕ ನನ್ನನ್ನು ಅಗಲಿ ಎಂಟುವರ್ಷಗಳಾದುವು. ಇವನನ್ನು ಹುಡುಕುತ್ತ ನಾನು ಇಲ್ಲಿಗೆ ಬಂದೆನು. ಇವನು ಹೇಗೆ ಆತನ ಮಗನಾಗುತ್ತಾನೆ.' ಎಂದು ಹೇಳಿ ಆ ಪತ್ರವನ್ನು ಓದಲು ಕೊಟ್ಟನು. ರಾಜನು ಆ ಪತ್ರವನ್ನು ಓದಿಕೊಂಡು ಸತ್ಯಸಂಗತಿಯನ್ನು ಅರಿತನು. ಜಡೆಯಾರಿ ಬಹಳ ದುಃಖದಿಂದ ಬಾಲಕನನ್ನು ವೃದ್ಧ ಬ್ರಾಹ್ಮಣನಿಗೆ ಒಪ್ಪಿಸಿದನು. ಆತನು ನಂಬಿಯನ್ನು ತಿರುವಾರೂರಿಗೆ ಕರೆದುಕೊಂಡು ಹೋಗಿ 'ನಾನು ಇಲ್ಲಿಯ ವಲ್ಮೀಕನಾಥನ ಮಂದಿರದಲ್ಲಿ ಜಪವನ್ನು ಮಾಡುತ್ತಿರುತ್ತೇನೆ. ನಿನಗೆ ಏನಾದರೂ ಬೇಕಾದರೆ ಅಯ್ಯಾ ಎಂದು ಕರೆದರೆ ಶೀಘ್ರದಲ್ಲಿಯೇ ಬರುತ್ತೇನೆ' ಎಂದು ಹೇಳಿದನು. ಅದರಂತೆ ನಂಬಿ ಬೇಡಿದುದನ್ನೆಲ್ಲ ಪಡೆದು ಸುಖವಾಗಿ ಇರುತ್ತಿದ್ದನು. ತಿರುಪಾಟುಗಳನ್ನು ಹಾಡಿ ಹರನನ್ನು ಒಲಿಸಿದನು. ಹೀಗಿರಲು ನಿತ್ಯವೂ ವಲ್ಮೀಕನಾಥನ ಮಂದಿರಕ್ಕೆ ಬರುತ್ತಿದ್ದ ಪರವೆಯಲ್ಲಿ ನಂಬಿ ಅನುರಕ್ತನಾದನು. ತನಗೆ ಪರವೆನಾಚಿಯನ್ನು ತಂದುಕೊಡುವಂತೆ ಆತ ವಿಪ್ರನನ್ನು ಬೇಡಿದನು. ವಿಪ್ರವೇಷದಲ್ಲಿದ್ದ ಶಿವನು ಪರವೆನಾಚಿಯ ತಂದೆಯ ಬಳಿಗೆ ಹೋಗಿ ಪರವೆನಾಚಿಯನ್ನು ತನ್ನ ಮಗನಿಗೆ ಮದುವೆ ಮಾಡಿಕೊಡ ಬೇಕೆಂದು ಕೇಳಿದನು. ಬಹಳ ಚರ್ಚೆಯಾದ ಬಳಿಕ ಪರವೆಯ ತಂದೆತಾಯಿಗಳು ನಿತ್ಯವೂ ನಿನ್ನ ಮಗನಿಂದ ಸಾವಿರ ಹೊನ್ನುಗಳನ್ನು ಕೊಡಿಸಿದರೆ ಮಗಳನ್ನು ಕೊಡಲು ಸಿದ್ಧವೆಂದು ತಿಳಿಸಿದರು. ಅದಕ್ಕೆ ವಿಪ್ರನು ಒಪ್ಪಿ ನಂಬಿಗೆ ವಿಟರಾಜಪಟ್ಟವನ್ನು ಕಟ್ಟಿದನು. ಬಳಿಕ ಪ್ರತಿದಿನವೂ ಸಾವಿರ ಹೊನ್ನುಗಳನ್ನು ಕೊಡುತ್ತ ನಂಬಿಗೆ ವಿಟತ್ವವನ್ನುಂಟು ಮಾಡಿದನು. ಪರವೆನಾಚಿ ಮತ್ತು ನಂಬಿಯರು ಕಾಮುಕರಥಿಯಲ್ಲಿ ಓಲಾಡುತ್ತಿದ್ದರು. ಒಂದುದಿನ ನಂಬಿ ಪರಮನಾಚಿಯ ಸ್ತನಗಳನ್ನು ಅಪ್ಪಿಕೊಂಡಿರುವಾಗ ಮಜ್ಜನ ಪೂಜೆಗಳನ್ನು ಮಾಡಿದ ಶಿವಲಿಂಗದ ಸ್ಪರ್ಶವಾದಂತಾಯಿತು. ಆತ ಸ್ತನಗಳನ್ನು ಇಷ್ಟಲಿಂಗವೆಂದೇ ಭಾವಿಸಿ ಕಣ್ಮುಚ್ಚಿ ಶಿವನನ್ನು ಸ್ತುತಿಸುತ್ತಿದ್ದನು. ಇದನ್ನು ನೋಡಿ ಪರವೆ ನಿನಗೆ ಇದೇ ಲಿಂಗ ವಾಗಿದ್ದರೆ ಇಲ್ಲಿಯೇ ಇದ್ದು ಸ್ತನಾಕಾರದ ಲಿಂಗದಲ್ಲಿ ಸಾವಿರ ಹೊನ್ನುಗಳನ್ನು ಬೇಡು

ಎಂದು ಕಟಕಿಯನ್ನಾಡಿದಳು. ನಂಬಿ ಹಾಗೆಯೇ ಮಾಡಿ ನಿತ್ಯವೂ ಸ್ತನಲಿಂಗದಿಂದ ಸಾವಿರ ಹೊನ್ನುಗಳನ್ನು ಪಡೆದು ಸುಖವಾಗಿದ್ದನು. ಮುಂದೆ ಪರವೆನಾಚಿಯ ಗೃಹದ ಮಹಿಮೆಯನ್ನು ನಂಬಿಯಣ್ಣನ ಮಹತ್ವವನ್ನೂ ದೀರ್ಘವಾಗಿ ನಿರೂಪಿಸಲಾಗಿದೆ.

ಈ ಕಥೆಯನ್ನು ಕೇಳಿದ ಭಕ್ತರು ನಂಬಿಯಣ್ಣನ ಮಹಿಮೆಗಿಂತ ಮಲ್ಲಿಕಾರ್ಜುನ ಪಂಡಿತಾರಾಧ್ಯರ ಮಹಿಮೆ ಹನ್ನೆರಡು ಸಾವಿರಕ್ಕಿಂತ ಮಿಗಿಲಾದುದು ಎಂದು ಹೊಗಳಿದರು.

ಪಂಡಿತಾರಾಧ್ಯರು ಶಿವಾನಂದಲೀಲೆಯಿಂದ ಕೂಡಿ ಭಕ್ತರೊಡನೆ ಶಂಕರ ಗೀತ ಗಳನ್ನು ಹಾಡುತ್ತ ಆನಂದದಿಂದಿರುವಾಗ ಬಸವಣ್ಣನಲ್ಲಿಗೆ ಹೋಗಿದ್ದ ಭಕ್ತರು ಬಂದು ಅವರು ಕಳಿಸಿದ್ದ ವಿಭೂತಿಯನ್ನು ಕೊಟ್ಟರು. ಆ ಭಸಿತವನ್ನು ಧರಿಸಿಕೊಂಡಕೂಡಲೆ ಅವರಿಗೆ ಕರ್ಣಾಟಕಭಾಷೆ ಮುಖೋದ್ಗತವಾಗಲು ಆ ಭಾಷೆಯಿಂದ ಇಷ್ಟಲಿಂಗ ಸ್ತೋತ್ರವನ್ನು ಮಾಡಿದರು. ಕನ್ನಡ ಭಾಷೆಯಲ್ಲಿ ಬಸವ ಮಾಹಾತ್ಮ್ಯ ಗೀತೆಗಳನ್ನು ರಚಿಸಿ ಹಾಡುತ್ತ ಸುಖದಿಂದಿದ್ದರು. ಬಸವನನ್ನು ಕುರಿತು ನಾನಾರೀತಿಯಲ್ಲಿ ಸ್ತೋತ್ರ ಮಾಡಿದರು. ಆ ಬಸವಣ್ಣನನ್ನು ನೋಡಲು ಭಕ್ತರೊಡನೆ ಕಲ್ಯಾಣವತ್ತ ಸಾಗಿದರು. ತಿರುಗುಡುಮುಲು ಎಂಬ ಗ್ರಾಮಕ್ಕೆ ಬಂದರು. ಅಲ್ಲಿದ್ದ ವೀರಚಾಕಿರಾಜನ ಶಿವಪೂಜಾ ರಕ್ತಿಯನ್ನೂ ಹರನ ಸದ್ಭಕ್ತಿಗೋಷ್ಠಿಗಳಲ್ಲಿನ ಆಸಕ್ತಿಯನ್ನೂ ಕಂಡು ಆತನನ್ನು ಹೊಗಳಿ ತನ್ನ ಹಿರಿಯ ಶಿಷ್ಯನಾದ ದೋನಮಯ್ಯನ ಸೇವೆಯನ್ನು ಕೈಕೊಂಡು ಪಾನುಗಲ್ಲೆಂಬ ಊರಿಗೆ ಬಂದರು. ಆ ಊರಿನಲ್ಲಿದ್ದ ಅವರ ಶಿಷ್ಯ ಗೋವಿಂದ ಪೆಗಡೆ ಎಂಬುವನು ತನ್ನ ಗುರುವಿನ ಬರವಿನಿಂದ ಸಂತೋಷಗೊಂಡವನಾಗಿ ಅವರನ್ನು ಪರಿಪರಿಯಾಗಿ ಉಪಚರಿಸಿ ದನು. ತನ್ನ ತನುಮನ ಧನಗಳನ್ನೆಲ್ಲಾ ಗುರುವಿಗೆ ನಿವೇದಿಸಿದನು. ಪಂಡಿತಾರಾಧ್ಯರಿಗೆ ಆ ಊರಿನಲ್ಲಿ ನಿತ್ಯವೂ ಪರ್ವಂಗಳನ್ನು ಮಾಡುತ್ತ ಶಿವತತ್ತ್ವಗೋಷ್ಠಿಗಳನ್ನು ಏರ್ಪಡಿಸು ತ್ತಿದ್ದನು. ಆ ಊರಿನಲ್ಲಿ ಲಿಂಗನಿಷ್ಠಾಪರನಾದ ಧವಳೇಶನಾಮಯ್ಯನೆಂಬುವನು ರಾಜ ನಾದ ಉದಯಕ್ಷ್ಮಾಪನ ಬಳಿ ಊಳಿಗದಲ್ಲಿದ್ದನು. ಧವಳೇಶನಾಮಯ್ಯನ ವ್ರತನಿಷ್ಠೆ ಯನ್ನು ನೋಡಿ ಸಹಿಸದ ಕೆಲವರು ರಾಜನೊಡನೆ ಚಾಡಿಯನ್ನು ಹೇಳಿದರು. ಅದನ್ನು ಕೇಳಿದ ರಾಜ ಅವನನ್ನು ಕೂಡಲೇ ಕರೆಸಿ ವಿಚಾರ ಮಾಡಿದನು. ಆಗ ಧವಳೇಶ "ನೀನು ನನ್ನ ಸೇವೆಗೆ ಒಡೆಯನೇ ಹೊರತು ಪ್ರಸಾದಕ್ಕಲ್ಲ. ಪರಮೇಶ್ವರ ಪ್ರಸಾದ ಹೊರತು ಮತ್ತಾವುದೂ ಸೇವಿಸಲು ಅನರ್ಹವಾದುದು. ನಾನು ನಿನ್ನ ಸೇವೆಯನ್ನು ಮಾಡಿ ಬಂದ ಹಣದಿಂದ ಜಂಗಮಪೂಜೆ ಮಾಡುತ್ತೇನೆ. ಆದ್ದರಿಂದ ನೀನು ನನಗೆ ಒಡೆಯನೇ ಹೊರತು ನನ್ನ ಆಚಾರಕ್ಕಲ್ಲ" ಎಂದನು. ಅದನ್ನು ಕೇಳಿದ ರಾಜನು ಕೋಪಗೊಂಡು ಸೇವೆಮಾಡಿ ಕೊಂಡಿದ್ದ ಹಲವಾರು ಶರಣರ ಉದಾಹರಣೆಗಳನ್ನೂ ಬಸವಣ್ಣನೂ ಸೇವೆಮಾಡಿಕೊಂಡಿದ್ದ ದೃಷ್ಟಾಂತವನ್ನೂ ಕೊಟ್ಟನು. ಈ ಬಗೆಗೆ ಅವರಿಬ್ಬರಿಗೂ ಸಾಕಷ್ಟು ವಾದವಿವಾದಗಳಾ ದುವು. ಕೊನೆಗೆ ನಾಮಯ್ಯನು ರಾಜನಿಗೆ ಅಧೀನವಾದ ದೇಹವನ್ನು ಅವನಿಗೇ ಒಪ್ಪಿಸು ವುದು ಲೇಸು ಎಂದು ತೀರ್ಮಾನಿಸಿ ರಾಜನ ಕೈಯಲ್ಲಿದ್ದ ಕತ್ತಿಯನ್ನು ಸೆಳೆದುಕೊಂಡು 'ಈ ಕತ್ತಿಯಿಂದಲೇ ಈ ರಾಜನ ವಂಶವೆಲ್ಲವೂ ನಾಶವಾಗಲಿ' ಎಂದು ಅದರಿಂದ ತನ್ನ ಕೊರಳನ್ನು

ಕತ್ತರಿಸಿಕೊಂಡನು. ಅವನ ಶಿರಸ್ಸು ಧವಳೇಶ ಧವಳೇಶ ಎಂದು ಧ್ಯಾನಿಸುತ್ತ ರಜತಾದ್ರಿ ಯನ್ನು ಸೇರಿತು. ಈ ವಾರ್ತೆಯನ್ನೆಲ್ಲ ಕೇಳಿದ ಪಂಡಿತಾರಾಧ್ಯರು ಮುನಿದು ಉದಯ ಭೂಪಾಲನ ವಂಶ ನಾಶವಾಗಲಿ ಎಂದು ಶಾಪವನ್ನು ಕೊಟ್ಟು ಇನ್ನು ಆ ಊರಲ್ಲಿರುವುದು ಅನುಚಿತವೆಂದು ಮುಂದಕ್ಕೆ ಪ್ರಯಾಣ ಮಾಡಿದರು. ಆ ರಾಜನ ವಂಶವೆಲ್ಲ ನಿರ್ಮೂಲ ವಾಯಿತು.

ಪಂಡಿತಾರಾಧ್ಯರು ಭಕ್ತಸಮೂಹದೊಡನೆ ವನಿಪುರದತ್ತ ಬರುತ್ತಿರಲು ಆ ವಾರ್ತೆ ಯನ್ನು ಶಂಕರಯ್ಯನೆಂಬುವನು ತಿಳಿದು ಭಕ್ತವೃಂದದೊಡನೆ ಅವರನ್ನು ಇದಿರುಗೊಂಡು ತನ್ನ ಮನೆಗೆ ಕರೆದುಕೊಂಡು ಹೋಗಿ ಭಕ್ತಿಪೂರ್ವಕವಾಗಿ ಅವರನ್ನು ಪೂಜಿಸಿ ಗೌರವಿಸಿ ದನು. ಪಂಡಿತಾರಾಧ್ಯರು ಕಲ್ಯಾಣಕ್ಕೆ ಹೋಗಲು ಅಣಿಮಾಡಿಕೊಳ್ಳುತ್ತಿರುವಷ್ಟರಲ್ಲಿ ಭಕ್ತನೊಬ್ಬನು ಬಂದು ಕಲ್ಯಾಣ ಹಾಳಾಯಿತು. ಶಿವಭಕ್ತಿ ಕೆಟ್ಟುಹೋಯಿತು. ಮೊಲ್ಲೆ ಬೊಮ್ಮಯ್ಯ ಜಗದ್ದೇವರು ಬಿಜ್ಜಳನನ್ನು ಕೊಂದರು. ಬಸವಣ್ಣನು ಕಪ್ಪಡಿಸಂಗಮದಲ್ಲಿ ಸಂಗಮೇಶ್ವರನೊಳಗೆ ಐಕ್ಯವಾದನು ಎಂದು ಹೇಳಿದನು. ಅದನ್ನು ಕೇಳಿದ ಪಂಡಿತಾರಾ ಧ್ಯರು ಕುಸಿದುಬಿದ್ದರು. ಬಸವಣ್ಣನನ್ನು ಕುರಿತು ಪರಿಪರಿಯಾಗಿ ಪ್ರಲಾಪಿಸಿದರು. ಅವರ ಪ್ರಲಾಪವನ್ನು ಕವಿ ಮನಮುಟ್ಟುವಂತೆ ಚಿತ್ರಿಸಿದ್ದಾನೆ.

### (v) ಪರ್ವತಪ್ರಕರಣ

ಪಂಡಿತಾರಾಧ್ಯರು ಶಂಕರಾಚಾರ್ಯರ ಅನುಮತದಿಂದ ಭಕ್ತರೊಡನೆ ಬರುತ್ತಿ ದ್ದಾಗ ಶ್ರೀಪರ್ವತವು ಇದಿರಿಗೆ ಕಾಣಿಸಿತು. ಆ ಪರ್ವತವು ಲಿಂಗದಾಕೃತಿಯಲ್ಲಿ ಗೋಚರಿ ಸಲು ಅದಕ್ಕೆ ನಮಸ್ಕರಿಸಿ ವೆಲ್ಲಟೂರಿಗೆ ಬಂದು ಆ ಪರ್ವತದ ಮಹಿಮೆಯನ್ನು ಮತ್ತಷ್ಟು ವಿಸರವಾಗಿ ವರ್ಣಿಸಿದರು. ಶ್ರೀಶೈಲದ ಒಂದೊಂದು ಭಾಗವನ್ನೂ ಅದರ ಐತಿಹ್ಯವನ್ನೂ ಪುರಾಣ ಮಹಾತ್ಮ್ಯೆಯನ್ನೂ ತಿಳಿಸುವರು.

ಪಂಡಿತಾರಾಧ್ಯರು ಶ್ರೀಗಿರಿಯನ್ನು ಹೊಗಳುತ್ತ ಭಕ್ತಿಯಿಂದ ಅದಕ್ಕೆ ವಂದಿಸುತ್ತ ತನ್ನ ಶಿಷ್ಯನಾದ ದೋನಮಯ್ಯನಿಗೆ "ನೀನು ಶ್ರೀಗಿರಿಗೆ ಹೋಗಿ ಅಲ್ಲಿರುವ ಶ್ರೀ ಮಲ್ಲಿ ಕಾರ್ಜುನನನ್ನು ಭಕ್ತಿಯಿಂದ ಭಜಿಸು. ಶಿವರಾತ್ರಿ ವ್ರತವನ್ನು ಅಲ್ಲಿಯೇ ಮಾಡು" ಎಂದು ಹೇಳಲು ಅದಕ್ಕೆ ದೋನಮಾರ್ಯ "ಎಲೈ ಗುರುವೆ ಈ ಪರ್ವತವು ಮೊದಲು ಋಷಿಯಾಗಿತ್ತೊ, ಪ್ರಮಥನಾಗಿತ್ತೊ, ಗೋತ್ರಾಪ್ರಕೃತಿಯಾಗಿತ್ತೊ, ಈ ಪರ್ವತಕ್ಕೆ ಈ ಹೆಸರು ಬರಲು ಕಾರಣವೇನು" ಇವೇ ಮೊದಲಾದ ಹಲವಾರು ಪ್ರಶ್ನೆಗಳನ್ನು ಕೇಳಲು ಪಂಡಿತಾರಾಧ್ಯರು ಆ ಎಲ್ಲ ಸಂಗತಿಗಳನ್ನೂ ವಿಶದವಾಗಿ ತಿಳಿಸುವರು. ಶ್ರೀಗಿರಿಯ ಮಹಿಮೆ ಯನ್ನು ಕೇಳಿದ ದೋನಮಾರ್ಯ ಸಂತೋಷಗೊಂಡು ಪಂಡಿತಾರಾಧ್ಯರನ್ನು ನಾನಾರೀತಿ ಹೊಗಳಿದನು.

ಶ್ರೀಶೈಲದ ಮಾಹಾತ್ಮ್ಯೆಯನ್ನು ಕೇಳಿದ ದೋನಮಾರ್ಯ ಗುರುವಿನ ಆಜ್ಞೆಯಂತೆ

ಪರ್ವತಾಭಿಮುಖನಾಗಿ ತಾನು ಕಂಡ ಅನುಭವಗಳನ್ನೆಲ್ಲ ವರ್ಣಿಸುವನು. ಮಲ್ಲಿಕಾರ್ಜುನನನ್ನು ನೋಡಲು ಜನ ಪರಿಸೆಯಂತೆ ಕೂಡಿತ್ತು.

ದೋನಮಾರ್ಯನು ಮಲ್ಲಿಕಾರ್ಜುನನ ದರ್ಶನವನ್ನು ಪಡೆಯಬೇಕೆಂದು ಪರಿಸೆಯ ಜನರೊಡನೆ ಶ್ರೀಶೈಲಕ್ಕೆ ಬಂದನು. ಅಲ್ಲಿ ವನಿಪುರದ ಪಶ್ಚಿಮದಿಕ್ಕಿನಲ್ಲಿ ಬಿಲಪರ್ವತದಲ್ಲಿ ನೆಲಸಿರುವ ಚತುರ್ಮುಖ ಬಸವನನ್ನು ಕಂಡನು. ಆ ಚತುರ್ಮುಖ ಬಸವನ ಮಾಹಾತ್ಮ್ಯೆಯನ್ನು ಸಾದ್ಯಂತವಾಗಿ ವಿವರಿಸಿಡನು. ಚತುರ್ಮುಖ ಬಸವನನ್ನು ಭಕ್ತಿಯಿಂದ ಪೂಜಿಸಿ ಇಷ್ಟಲಿಂಗಾರ್ಚನೆಯನ್ನೂ ಗುರುಪಂಡಿತೇಂದ್ರಾರ್ಥವಾಗಿ ಗಣಪರ್ವವನ್ನೂ ಮಾಡಿ ಪರಿಸೆಯೊಡನೆ ಬರುತ್ತಿದ್ದನು. ಆ ಪರಿಸೆಯ ಜನ ಕೀರ್ತನೆಗಳನ್ನು ಹಾಡುತ್ತ ಭಕ್ತಿಪರವಶರಾಗಿ ನರ್ತಿಸುತ್ತ ಬರುತ್ತಿದ್ದರು.

ದೋನಮಾರ್ಯನು ಶ್ರೀಗಿರಿಯಲ್ಲಿ ಸಾಧುಸಂತರನ್ನೂ ಸಿದ್ಧರನ್ನೂ ವಿರಕ್ತರನ್ನೂ ಶಿವಯೋಗಿಗಳನ್ನೂ ನೋಡಿಕೊಂಡು ಬರುತ್ತಿರುವಾಗ ಮುಂದುಗಡೆಯಲ್ಲಿ ನಾನಾದೇಶಗಳಿಂದ ಬರುತ್ತಿದ್ದ ಪರಿಸೆಯ ಜನರನ್ನು ಹೊಗಳುತ್ತಿದ್ದನು. ಮಗಧ ಕಾಶ್ಮೀರ ಮಾಳವ ಗೌಳ ಸಿಂಧು ಘೂರ್ಜರ ಪಾಂಡ್ಯ ಕಾಂಭೋಜ ಸೌರಾಷ್ಟ್ರ ಲಾಟ ಬರ್ಬರ ಈ ದೇಶದ ಭಕ್ತರು ಶ್ರೀಗಿರಿಗೆ ಬರುತ್ತಿದ್ದರು. ಪರುಷೆಯ ಜನಕ್ಕೆ ಇದಿರಿನಲ್ಲಿ ಮಲ್ಲಿಕಾರ್ಜುನನ ದೇವಾಲಯವು ಕಂಗೊಳಿಸುತ್ತಿತ್ತು. ಆ ದೇವಾಲಯವನ್ನು ನೋಡಿಕೊಂಡು ಪರಿಸೆಯ ಜನ ಬೀದಿಯ ಎರಡು ಮಗ್ಗುಲಲ್ಲೂ ಬರುತ್ತಿತ್ತು. ಮಲ್ಲಯ್ಯನನ್ನು ಕಂಡ ಭಕ್ತರ ಅಭಿವ್ಯಕ್ತಿಯನ್ನು ಬಗೆಬಗೆಯಾಗಿ ವರ್ಣಿಸಲಾಗಿದೆ. ಮಲ್ಲಿಕಾರ್ಜುನನನ್ನು ನೋಡಿಕೊಂಡು ಗಿರಿಯಲ್ಲಿರುವುದೇ ಲೇಸು ಎಂದು ಅವರೆಲ್ಲ ಭಾವಿಸಿದರು.

ದೋನಮಾರ್ಯನು ಸದ್ಭಕ್ತರೊಡನೆ ಜಾಗರಣವನ್ನು ಮಾಡಲು ತೊಡಗಿದನು. ಅದಕ್ಕಾಗಿ ವಿಶಿಷ್ಟವಾದ ಮಂಟಪವನ್ನು ರಚಿಸಿ ಸಮಸ್ತ ಪೂಜಾಸಾಮಗ್ರಿಗಳೊಡನೆ ಅತ್ಯಂತ ಭಕ್ತಿಯಿಂದ ಜಾಗರಣೆಯನ್ನು ಮಾಡಿದನು. ಜಾಗರಣೆಯನ್ನು ಮಾಡಿದ ಭಕ್ತಸಮೂಹ ತಮ್ಮ ಜನ್ಮ ಸಾರ್ಥಕವಾಯಿತೆಂದು ಭಾವಿಸಿ ತಮ್ಮ ತಮ್ಮ ಊರುಗಳಿಗೆ ಹೋಗಲು ಸಿದ್ಧರಾದರು. ದೋನಮಾರ್ಯನಾದರೋ ಭಕ್ತತತಿಯನ್ನು ಬೀಳ್ಕೊಟ್ಟು ಕಣ್ಣುಗಳನ್ನು ಮುಚ್ಚಿ ಕನಸನ್ನು ಕಂಡನು. ಆ ಕನಸಿನಲ್ಲಿ ಶಂಕರನು ವೃದ್ಧಮುನಿ ರೂಪದಿಂದ ದೋನಮಾರ್ಯನಲ್ಲಿಗೆ ಬರಲು ಆತನು ಅವರಿಗೆ ವಂದಿಸಿ ಅವರ ಯೋಗಕ್ಷೇಮವನ್ನು ವಿಚಾರಿಸಿದನು. ಅದಕ್ಕೆ ಆ ವೃದ್ಧತಾಪಸ ಸರ್ವಜ್ಞ ಮಲ್ಲಿಕಾರ್ಜುನನೆಂದು ತನ್ನ ಹೆಸರನ್ನು ತಿಳಿಸಿ ಶ್ರೀಗಿರಿಯಲ್ಲಿನ ಆಶ್ಚರ್ಯಕರವಾದ ತಾಣಗಳನ್ನೆಲ್ಲಾ ತೋರಿಸಿದನು. ಅನೇಕ ಅದ್ಭುತಗಳನ್ನೆಲ್ಲ ವಿವರಿಸಿದನು. ಶ್ರೀಶೈಲದಲ್ಲಿ ತಪಸ್ಸನ್ನು ಮಾಡಿ ಸಿದ್ಧಿಯನ್ನು ಪಡೆದುಕೊಂಡ ಅನೇಕ ಮಾಹಾತ್ಮರ ಕಥೆಗಳನ್ನೆಲ್ಲಾ ನಿರೂಪಿಸುವನು. ನೀನು ನೋಡಿದುದೆಲ್ಲವನ್ನೂ ಪಂಡಿತೇಂದ್ರನಿಗೆ ಹೇಳು, ನೀನು ಪ್ರದಕ್ಷಿಣೆಮಾಡಿದ ಫಲಕ್ಕಿಂತ ನೂರರಷ್ಟು ಫಲವನ್ನು ಆ ಪಂಡಿತೇಂದ್ರನಿಗೆ ಮಲ್ಲಿಕಾರ್ಜುನ ದೇವರಿತ್ತರೆಂದು ತಿಳಿಸು ಎಂದು ಹೇಳಿ ಅದೃಶ್ಯವಾದನು.

ದೋನಮಾರ್ಯನು ಮಲ್ಲಿಕಾರ್ಜುನನನ್ನು ಬೀಳ್ಕೊಂಡು ತಾನು ಕಂಡ ಕನಸನ್ನೇ ಮೆಲುಕುಹಾಕುತ್ತ ವೆಲ್ಲಟೂರಿಗೆ ಬಂದು ತನ್ನ ಗುರು ಪಂಡಿತಾರಾಧ್ಯರನ್ನು ಕಂಡನು. ಶ್ರೀಗಿರಿಯಲ್ಲಿ ತಾನು ಕಂಡದ್ದನ್ನೆಲ್ಲ ಸಾದ್ಯಂತವಾಗಿ ಶ್ರೀಗುರುವಿಗೆ ನಿವೇದಿಸಿಕೊಂಡನು. ಅದನ್ನು ಕೇಳಿದ ಪಂಡಿತಾರಾಧ್ಯರು ಮಲ್ಲಿಕಾರ್ಜುನಸ್ವಾಮಿ ತನ್ನನ್ನು ನೆನೆದುದನ್ನು ಕೇಳಿ ತಾವು ಕೃತಾರ್ಥರಾದರೆಂದು ಭಾವಿಸಿದರು. ಶ್ರೀಗಿರಿಯು ಲಿಂಗಮಯವಾಗಿರುವುದರಿಂದ ಅದನ್ನು ಹತ್ತಿಹೋಗುವುದು ಅಯುಕ್ತವಾಗುತ್ತದೆ. ದೇಹವನ್ನು ಧರಿಸಿರತಕ್ಕವನು ಅದರ ಮೇಲೆ ನಡೆದು ಹೋಗುವುದು ಯುಕ್ತವಲ್ಲ. ಆದ್ದರಿಂದ "ದೇವರೇ ನನ್ನ ಇಷ್ಟಾರ್ಥ ಹೇಗೆ ಕೈಸಾರುತ್ತದೆ? ನನ್ನ ಮನಸ್ಸು ಪ್ರಾಣ ಶರೀರಗಳೆಲ್ಲವೂ ಮಲ್ಲಿಕಾರ್ಜುನನಲ್ಲಿಯೇ ಸಾಮರಸ್ಯವನ್ನು ಪಡೆದು ಎಂದು ಸುಖಿನಾಗಿರುತ್ತವೆಯೋ? ಎಲೈ ಶಂಕರನೆ ನನ್ನ ದೇಹವು ನಿನ್ನ ಸೇವೆಯಲ್ಲಿಯೂ ಮನವು ನಿನ್ನ ಭಾವನೆಯಲ್ಲಿಯೂ ಪ್ರಾಣವು ನಿನ್ನ ಚರಣದಲ್ಲೂ ಸೇರಿ ಹೋಗಲಿ" ಎಂದು ಪ್ರಾರ್ಥಿಸಿದರು. "ಮಲ್ಲಿಕಾರ್ಜುನ ಪಂಡಿತನೆಂಬ ಹೆಸರಿನಿಂದ ಶ್ರೀಗಿರಿಯಲ್ಲಿ ಪ್ರಮಥಸಂದೋಹದ ಮಧ್ಯದಲ್ಲಿರುವುದನ್ನು ನಾನು ಬಯಸುತ್ತೇನೆ. ಇದನ್ನು ನನಗೆ ಅನುಗ್ರಹಿಸು. ಸಂಸಾರಸಾಗರದಿಂದ ನನ್ನನ್ನು ಪಾರುಮಾಡು. ನಾನು ನಿನ್ನವನೆಂದು ನಿನ್ನ ಸಭೆಯಲ್ಲಿರುವ ಪ್ರಮಥರು ತಿಳಿದುಕೊಳ್ಳುವಂತೆ ನನ್ನನ್ನು ಕೈಹಿಡಿದುಕೊಂಡು ಅವರ ಮಧ್ಯದಲ್ಲಿರಿಸು. ಎಲೈ ಮಲ್ಲಿಕಾರ್ಜುನನೇ, ನಾನು ಬಾಲ್ಯದಿಂದಲೂ ಅನ್ಯ ದೈವವನ್ನು ಸ್ವಪ್ನದಲ್ಲಾದರೂ ಕಂಡರಿಯೆನು. ನಾನು ನನ್ನ ಹೆಂಡತಿ ಮಕ್ಕಳೊಂದಿಗೆ ನಿನಗೆ ದಾಸಾನುದಾಸನಾಗಿರುವೆನು. ನಾನು ಜನನ ಮರಣಗಳ ಬಾಧೆಗಳನ್ನು ಸಹಿಸಲಾರೆ. ನಿಮ್ಮಾಜ್ಞೆಯಂತೆ ಈ ಲೋಕದ ಎಲ್ಲ ಕಾರ್ಯಗಳನ್ನು ಮಾಡಿ ಮುಗಿಸಿದ್ದೇನೆ. ಬಸವೇಶ್ವರರು ಈಗಾಗಲೇ ನಿಮ್ಮಲ್ಲಿ ಸೇರಿಕೊಂಡರು. ನಾನು ಭೂಮಿಯಲ್ಲಿ ಇರುವುದಾದರೂ ಎಂತು? ಭೂಲೋಕದಲ್ಲಿ ನಿನ್ನ ಜಂಗಮಾವಳಿಗೆ ಬೇಕಾದುದನ್ನೆಲ್ಲ ಕೊಟ್ಟು, ಪರವಾದಿಗಳಿಗೆ ದುಷ್ಟಪ್ರತ್ಯಯಗಳನ್ನು ತೋರಿಸಿ, ಬಿಜ್ಜಳನ ಗರ್ವವನ್ನು ಪರಿಹರಿಸಿ ತಾರ್ಕಿಕರ ಉದ್ದಂಡತನವನ್ನು ಮಾಣಿಸಿ ಶಿವಭಕ್ತಿಮಾರ್ಗವೇ ವೇದೋಕ್ತಮಾರ್ಗವೆಂಬುದನ್ನು ಸ್ಥಿರಪಡಿಸಿ, ಜಂಗಮವೇ ಲಿಂಗ, ಪ್ರಸಾದವೇ ಭೋಗಮೋಕ್ಷದವಾದುದು, ಹರನೊಬ್ಬನೇ ಎಲ್ಲ ಲೋಕಗಳಿಗೂ ಪತಿ ಎಂದು ಸಾರಿತೋರಿ, ವಿಷವನ್ನು ಅಮೃತವನ್ನಾಗಿ ಮಾಡಿ ಕುಡಿದು, ಶಿವಭಕ್ತರಿಗೆ ಯಾರೂ ಸರಿಯಿಲ್ಲ ಎಂದು ಎಲ್ಲ ಧರ್ಮದವರನ್ನು ನಿರಸನಮಾಡಿ ನಿನ್ನ ಮತವನ್ನು ಲೋಕದಲ್ಲಿ ಸಂಸ್ಥಾಪನೆ ಮಾಡಿದ್ದೇನೆ. ಆದ್ದರಿಂದ ಬಸವೇಶನನ್ನು ನಿನ್ನಲ್ಲಿ ಐಕ್ಯಮಾಡಿಕೊಂಡಂತೆ ನನ್ನನ್ನೂ "ಭವವೆಂಬ ಪುಲಿಯ ಬಾಯಿಂ ತೆಗೆದುಕೊಂಡು ಪಾಲಿಪುದು" ಎಂದು ನಾನಾ ವಿಧವಾಗಿ ಕೀರ್ತನೆಗಳಿಂದ ಪ್ರಾರ್ಥನೆಮಾಡಿದನು. ಆತನ ಭಕ್ತಿಗೆ ಮೆಚ್ಚಿದ ಶಿವನು ಪಂಡಿತಾರಾಧ್ಯರನ್ನು ಅವರ ಸತಿಸುತಾದಿಗಳನ್ನು ತನ್ನಲ್ಲಿ ಐಕ್ಯಮಾಡಿಕೊಂಡನು. ಆಮೇಲೆ ಪಂಡಿತಾರಾಧ್ಯರ ಅಗ್ರಸುತನಾದ ಕೇದಾರಯ್ಯನಿಗೆ ಜಗದಾರಾಧ್ಯ ಪಟ್ಟವನ್ನು ಕಟ್ಟಿದರು. ದೋನಮಾರ್ಯನಿಗೂ ಪಟ್ಟವನ್ನು ಕಟ್ಟಿದರು. ಆ ಕೇದಾರಯ್ಯನಿಗೆ ಮನುಪಂಡಿತ, ಚನ್ನವಿಭು, ಮಹಾದೇವ,

ಭೀಮನ ಪಂಡಿತ ಎಂಬ ನಾಲ್ವರು ಸುತರಾದರು. ಈ ಶೈವಸಂತಾನಶರಧಿಯಲ್ಲಿ ಅನರ್ಘ್ಯ ಮಾಣಿಕ್ಯವೆಂಬಂಥ ಯುವ್ವಟೂರು ಸೋಮನಾಥನೆಂಬ ಜಗದ್ಗುರು ಅವತರಿಸಿದನು. ಆತನ ಮಕ್ಕಳಾದ ವಿಶ್ವನಾಥ, ಸೂರೇಶ್ವರ, ಸಿಂಗಣ್ಣ ಮಾಚಯ್ಯ ಎಂಬುವರು ಭೂಲೋಕದಲ್ಲಿ ಶಿವಭಕ್ತಿಯನ್ನು ಅಭಿವೃದ್ಧಿಗೊಳಿಸುತ್ತ ಬಾಳುತ್ತಿದ್ದರು. ಈ ಕೃತಿಯ ನಾಲ್ಕನೆಯ ಪ್ರಕರಣದಲ್ಲಿನ ಗಣಸಹಸ್ರನಾಮವನ್ನು ಪಠಿಸುವವರಿಗೆ ಐಹಿಕ ಆಮುಷ್ಮಿಕ ಸುಖ ಪ್ರಾಪ್ತಿಯಾಗುವುದು. ಪಂಡಿತೇಶ್ವರನ ಚರಿತ್ರೆಯನ್ನು ಪಾಲ್ಕುರಿಕೆ ಸೋಮೇಶ್ವರನು ಸೂರಾಮಾತ್ಯನಿಗೆ ಹೇಳಿದನು. ಈ ಕೃತಿಯನ್ನು ಪಠಿಸಿದವರಿಗೂ ಬರೆದವರಿಗೂ ಸರ್ವ ಸೌಖ್ಯಪ್ರಾಪ್ತಿಯಾಗುತ್ತದೆ.

## ೫. ತೌಲನಿಕ ಅಧ್ಯಯನ

ಪಂಡಿತಾರಾಧ್ಯರನ್ನು ಕುರಿತು ತೆಲುಗು ಕನ್ನಡ ಮತ್ತು ಸಂಸ್ಕೃತ ಭಾಷೆಗಳಲ್ಲಿ ರಚಿತವಾಗಿರುವ ಕೃತಿಗಳಲ್ಲಿ ಮೂರು ಬಹುಮುಖ್ಯವಾದುವು. "ಕಾಲದೃಷ್ಟಿಯಿಂದ ತೆಲುಗಿನ ಪಾಲ್ಕುರಿಕೆ ಸೋಮನಾಥ ಮೊದಲಿಗ. ತರುವಾಯ ಕನ್ನಡ ಆರಾಧ್ಯಚಾರಿತ್ರದ ನೀಲಕಂಠಾಚಾರ್ಯ. ಕಡೆಯದಾಗಿ ಸಂಸ್ಕೃತ ಪಂಡಿತಾರಾಧ್ಯ ಚರಿತಂ ಕಾವ್ಯದ ಗುರುರಾಜಕವಿ. ಈ ಗುರುರಾಜಕವಿಯ ಕಾಲ ಕ್ರಿ.ಶ. ೧೫ನೆಯ ಶತಮಾನದ ಮಧ್ಯಭಾಗವೆಂದು ಹೇಳಲಾಗಿದೆ. ಈ ಮೂರು ಕೃತಿಗಳ ಕಥಾವಸ್ತು ಒಂದೇ ಆಗಿದೆ. ತೆಲುಗಿನ ಪಂಡಿತಾರಾಧ್ಯ ಚರಿತೆಯನ್ನು ಕನ್ನಡ ಸಂಸ್ಕೃತ ಕೃತಿಕಾರರಿಬ್ಬರೂ ಸಂಪೂರ್ಣವಾಗಿ ಅನುಸರಿಸಿದ್ದಾರೆ. ಈ ಮೂರು ಕಾವ್ಯಗಳ ಆದಿಯಲ್ಲೂ ಕವಿಗಳು ಸ್ವಂತ ವಿಷಯಗಳನ್ನು ನಿರೂಪಿಸಿದ ಮೇಲೆ ಕಾವ್ಯವನ್ನು ಪ್ರಾರಂಭಿಸಿದ್ದಾರೆ. ಕಥಾವಸ್ತುವಿನಲ್ಲಿ ಎಳ್ಳಷ್ಟೂ ಬದಲಾವಣೆಯನ್ನು ಮಾಡಿಕೊಂಡಿಲ್ಲ. ಯಾವ ಪ್ರಕರಣವನ್ನೇ ಆಗಲಿ ಯಾವ ಭಾಗವನ್ನೇ ಆಗಲಿ ಯಾವ ಸನ್ನಿವೇಶವನ್ನೇ ಆಗಲಿ ಇದಕ್ಕೆ ನಿದರ್ಶನವನ್ನಾಗಿ ತೆಗೆದುಕೊಳ್ಳಬಹುದು. ಕೆಲವು ಉದಾಹರಣೆಗಳಿಂದ ಈ ಅಂಶಗಳನ್ನು ಸ್ಪಷ್ಟಪಡಿಸಲಾಗಿದೆ :

ಪಾಲ್ಕುರಿಕೆ ಸೋಮನಾಥ : ಪಂಡಿತಾರಾಧ್ಯ : ದೀಕ್ಷಾ ಪ್ರಕರಣ

(ಪುಟ ೧೩–೧೫)

ಧರ "ಸುಮಾ ಮಾತಾ, ಪಿತಾರುದ್ರ"ಯನಁಗ
ವರ ಪುರಾಣೋಕ್ತಿನೀಶ್ವರಕುಲಜುಂಡಁ
ಬೇರೆಕ್ಕಁದಗಿನ ಶ್ರೀ ಬೆಲಿದೇವಿ ವೇಮ
ನಾರಾಧ್ಯುಲನು ಪರಮಾರಾಧ್ಯದೇವು
ಮನುಮಶಿಷ್ಯುಂಡ ಶ್ರೀಮದ್ಗುರುಲಿಂಗ
ಘನ ಕರುಣಾಹಸ್ತ ಗರ್ಭಸಂಭವುಁಡ;
ಮುನು ಬಸವಪುರಾಣಮುನ ನೆನ್ನಁದಗಿನ

ಪೆನುಪಾರು ಜನುಲಕುಂ ಬೆಂಪುಡುಂಗೊಡುಕ;
ಬಸವಪುರಾಣಪ್ರಬಂಧಮನ್ ಪೇರಿ
ಬಸವಪುರಾಣಮನ್ ಪಟ್ಟೆಗಲಾಂಡ;
ಬಸವಗೋತ್ರುಂಡನು ಬಸವನಿ ಕರುಣ
ಬಸವೇಶು ಶ್ರೀಪಾದಪದ್ಮಸೇವಕುಂಡ;
ಬಸವನ್ನಂ ಬೊಗಡಂ ಬಾಲ್ಪಡು ಕವೀಂದ್ರುಂಡನು;
ಬಸವನ್ನಂ ಬೊಗಡಂ ಬಾಲ್ಪಡು ಪಾತಕುಂಡ;
ಬಸವನ್ನ ದೂತ; ನೇ ಬಸವನ್ನ ಬಂಟ;
ಬಸವನ್ನ ಲೆಂಕ; ನೇ ಬಸವನ್ನ ಲೆಂಗಿ;
ಬಸವನ್ನ ಯಿಲುವುಟ್ಟು ಬಾನಿಸಕೊಡುಕ;
ಬಸವನ್ನ ಪನ್ನಲ ಪನ್ನಂಗಾವುನನು
ಬಸವೇಶುಪೇರಿಡಂ ಬ್ರಾಪ್ತ್ರವ್ಯಮುಗುಟ
ಮಸಲಕಮಾ ಚೆನ್ನಮಲ್ಲಿಕಾರ್ಜುನುನಿ
ಬಸವನಾಮುಂ ಬಿಡಿ ಭಕ್ತಿಪೆಕ್ಕುವನು
ಬಸವಲಿಂಗಂ ಬನಿ ಪ್ರಣುತಿಂಚುವಾಂಡ;
ಭವಿಕೃತಾರಂಭಸಂಭವ ಧಾನ್ಯನಿಚಯು
ಭವಿನಿರೀಕ್ಷಣ ರಸಪಾಕವಿತಾನ
ಭವಿಹಸ್ತಗತ ಫಲಪತ್ರಶಾಕಾದಿ
ಭವಿಗೃಹಕ್ಷೇತ್ರಾಂಘ್ರಿಪ ಧನವರ್ಜಿತುಂಡ;
ಭವಜನ ದರ್ಶನ ಸ್ಪರ್ಶನಾಲಾಪ
ವಿವಿಧ ದಾನಾದಾನ ವಿಷಯದೂರಗುಂಡ;
ಶುದ್ಧ ಭಕ್ತಿಸ್ಥಲ ಶ್ರುತಿಮತಾಚಾರ
ಸಿದ್ಧ ವೀರವ್ರತ ಶೀಲಾನ್ವಿತುಂಡ;
ನಲಿಂ ಬಾಲ್ಕುರಿಕಿ ಸೋಮನಾಥುಂ ಡನಂಗ
ವೆಲಯುವಾಂಡನು; ಚತುರ್ವೇದಪಾರಗುಂಡ
ನ್ಯೈನ ಮತ್ಕೃತಿ ವಿನ ನರ್ಹುಂಡು ವಲಯುಂ
ಗಾನನೀ ವರ್ಧಿನಾಕರ್ಣಿಂಪವಲಯು.
ವಿನು ಸೂರನಾಮಾತ್ಯ, ವಿನಮಿತಾಮಾತ್ಯ,
ಯನಘಸಾಂಗತ್ಯ, ದೃಗಂಚಲಶೈತ್ಯ,
ಪರಮುಪವಿತ್ರ, ಯಾಪಸ್ತಂಬಸೂತ್ರ,
ಹರಿತಸಗೋತ್ರ, ವಿದ್ಯಾಪುಣ್ಯಯಾತ್ರ,
ಬಸವಾಂತರಂಗ, ಶುಂಭದ್ಗುಣೋತ್ತುಂಗ,

ಯಸವುವಿಲಾಸಾಂಗ, ಯಾರ್ಯಾನುಷಂಗ,
ವೀರಭಕ್ತಿಸ್ಥೈರ್ಯ, ವಿಪುಲದೋರ್ವೀರ್ಯ,
ಸಾರತರೌದಾರ್ಯ, ಸಂಚಿತಧೈರ್ಯ,
ವೀರಪೋಚೇಶ್ವರ ವಿಶ್ರುತಾಚಾರ್ಯ
ಕಾರುಣ್ಯಹಸ್ತಾಬ್ಜ ಗರ್ಭಸಂಭವುಂಡ
ಚರಲಿಂಗ ಗುರುಲಿಂಗ ಸಾಹಿತ್ಯಲಿಂಗ
ಚಿರಸಮನಿಷ್ಠೈಕಶೀಲವರ್ಧನುಂಡ
ಕಡುಮಿಂಚಿ ಶಿವುನಕು ಗನ್ನುಲರ್ಪಿಂಚಿ
ಪಡಸಿನ ದೃಢವೀರಭಕ್ತಿವರ್ಧನುಂಡ
ನೀ ದೃಗರ್ಪಿತಪುನರಾದಾನರತಿಕಿ,
ನೀದಾನಧರ್ಮವಿನೀತಿಕಿ ಮೆಚ್ಚಿ
ಬಸವೇಶುಡಕ್ಕಿನ ಭಕ್ತುಂಡ ವನಿಯು,
ನಸದೃಶಲೀಲ ಮಾಕನುಗುಲಂಬನಿಯು,
ಮಚ್ಚಿಕ ನಾಮುದ್ದುಮುಟ್ಟಿದಿ ವೀವನಿಯು,
ನೆಚ್ಚೆಲಿಕಾಂಡವು ನೀವ ಕಾಕನಿಯುಂ,
ಚಾತುರ್ಯ ಸಾಹಿತ್ಯಶಾಲಿ ವೀವನಿಯು,
ಶ್ರೋತೃತ್ವಮುನಕುಂ ಬಾತ್ರುಂಡವೀವನಿಯು,
ರಚಿಯಿಂತುಂ ಬಂಡಿತಾರಾಧ್ಯಚರಿತ್ರ
ಮಚಲಿತಪ್ರೀತಿಯು, ನತಿಶಯಭಕ್ತಿ
ಬುದ್ಧಿಯು, ಭವದೀಯ ಪುತ್ರಪೌತ್ರಾಭಿ
ವೃದ್ಧಿಯು, ಸಂಪತ್ಸಮೃದ್ಧಿಯುಂ ಜಿದಭಿ
ವೃದ್ಧಿಯು, ನಿಷ್ಟಾರ್ಥಸಿದ್ಧಿಯು ನಾತ್ಮ
ಶುದ್ಧಿಯು, ಲೋಕಪ್ರಸಿದ್ಧಿಯು ನಾಯು
ರಾರೋಗ್ಯ ಭಾಗ್ಯ ಸದೈಶ್ವರ್ಯ ಸೌಖ್ಯ
ಭೂರಿಸಮೃದ್ಧಿಯು ಬೊಂದೆಡಮನುಚು
ದೀವಿಂಚಿ ನಿನ್ನು ಸಂಭಾವಿಂಚಿ ಶ್ರೋತಂ
ಗಾವಿಂತು ಸಚಿವಾಗ್ರಗಣ್ಯ ಸೂರಾರ್ಯ

ನೀಲಕಂಠಾಚಾರ್ಯ : ಆರಾಧ್ಯಚಾರಿತ್ರ : ದೀಕ್ಷಾಪ್ರಕರಣ

(ಸಂಧಿ : ೧–೭೬–೮೪)

ಸಲೆ ಉಮಾ ಮಾತಾ ಪಿತಾರುದ್ರ ಎಂಬ ಸ
ಲ್ಲಲಿತ ವಾಕ್ಯಪ್ರಮಾಣದಿನೀಶಕುಲಜನುಟಿ
ಬೆಲಿದೇವಿ ವೇಮನಾರಾಧ್ಯ ಪ್ರಶಿಷ್ಯ ಗುರುಲಿಂಗಕರಕಮಲೋದಯಂ

ಲಲಿತ ಬಸವಪುರಾಣದೊಳಗೆ ಪೇಳ್ದಪರಿಮಿತ
ದಲಘುಭಕ್ತರ ಸಾಕುಮಗನಾ ಪುರಾಣಾಖ್ಯ
ವಿಲಸಿತ ತನೂಜನುಳ್ಳಂ ಬಸವನರಮನೆಯ ಸಿರಿದರದ ಕಾಪಿನಾಳು

ಮಿಸುಪ ಬಸವನ ಜಾತಿ ಬಸವೇಶಗೋತ್ರವುಂ
ತೆಸೆವ ಬಸವನ ಸುತಂ ಬಸವೇಶಪದರುಚಿರ
ಬಿಸಜಸಂಕಲಿತಶಿರನಸಮಬಸವನ ಗುಣಾವಳಿಯನೋದುವ ಪಾಠಕಂ
ಬಸವಕೀರ್ತಿಯ ಪೊಗಳ್ವ ಬೂತು ಬಸವನ ತೊಳ್ತು
ಬಸವನರಮನೆಯ ದಾಸಿಯ ಸುತಂ ಸಂತತಂ
ಬಸವನಣುಗನ ಬಂಟನೆನಸುಮಾ ಬಸವೇಶನಳ್ಕಱಿನ ಪಡಿಹಾಱನು

ನಿರುತದಿಂದಂ ಪ್ರಾಣಲಿಂಗಮಾಗೆಸೆವ ಸುಂ
ದರ ಚೆನ್ನಮಲ್ಲಿಕಾರ್ಜುನನ ಬಸವಾಹ್ವಯಂ
ಗರೆದ ಹಳಿಯುಂ ಭವಿಕೃತಾರಂಭದಿಂದೊಗೆದ ಧಾನ್ಯಾದಿ ನಿಕರದೂರಂ
ದುರುಳಭವಿಹಸ್ತಗತ ಶಾಕಾದಿ ಭವಿದೃಷ್ಟಿ
ಪೊರೆದ ರಸಪಾಕಾದಿ ಭವಿದರ್ಶನಾದಿಗಳ್
ಪಿರಿದು ಪೊರ್ದದ ವ್ರತಸ್ಥಂ ಶ್ರುತಿಮತಾಚಾರಮಾರ್ಗಸಿದ್ಧಂ ಸಂತತಂ

ಕರಮೆ ದಾನಾದಾನ ವಿಷಯದೂರಂ ಮತ್ತೆ
ಪರಮಶಿವಭಕ್ತಿಸಾಗರವೀರಶೈವಬಂ
ಧುರಧುರೀಣಂ ಚತುರ್ವೇದಪಾರಗನಮಲ ವೀರವ್ರತಸ್ಥನೆನಿಸಿ
ಪಿರಿದು ರಾಜಿಪ ಪಾಲ್ಕುಱಿಕೆ ಸೋಮನಾಥವಿಭು
ಕರೆದು ತನ್ನಯ ವೈದುನನನಮಾತ್ಯಾಗ್ರಣಿಯ
ನುರುಸಚಿವನವಿತ ಚರಣನನುನ್ನತೋದಯನನಖಿಲವಿದ್ಯಾನಿಪುಣನಂ

ಪಿರಿದುಮಾಪಸ್ತಂಬಸೂತ್ರೋರುವಿಸ್ಫುರಿತ
ಹರಿತಗೋತ್ರಜನಧಿಕತರ ಪುಣ್ಯಗಾತ್ರನಂ
ಪರಮ ಬಸವಕಥಾರಸೈಕಸತ್ಪಾತ್ರನಂ ಬುಧನಿಕರ ಸನ್ಮಿತ್ರನಂ
ಸುರುಚಿರಪವಿತ್ರನಂ ಸರಳಚಾರಿತ್ರನಂ
ವರ ಸುಕೃತಯಾತ್ರನಂ ಭವಶರಧಿಭೈತ್ರನಂ
ನಿರುಪಮಿತ ಕಾಮಾದಿಷಡ್ವರ್ಗಜೈತ್ರನಂ ಜಿತಪರಾಕ್ರಮಶತ್ರುವಂ

ಪಿರಿದುಮಗಧೈರ್ಯೋನ್ನತನನೀಶಭಕ್ತಿ ಸು
ಸ್ಥಿರನನಚಲಿತ ಭುಜಪರಾಕ್ರಮನನನುಪಮನ
ಪರಮಗುರು ಪೋಚೀಶ್ವರಾಚಾರ್ಯ ಹಸ್ತಜಾತನನಮಿತನೀತಿಯುತನಂ

ಚರಲಿಂಗ ಗುರುಲಿಂಗ ಸೇವಾನುರಕ್ತನಂ
ಕರವಿಷ್ಟಲಿಂಗಪೂಜಾಸಕ್ತಚಿತ್ತನಂ
ವರಶೀಲ ಶರಧಿವರ್ಧನ ಹರಿಣಲಕ್ಷ್ಮನಂ ಸರಳ ಸೂರಾಮಾತ್ಯನಂ

ಹರಿಸದಿಂ ನೋಡಿ ಬಾ ಬಾರ ಸೂರಾಮಾತ್ಯ
ವರನೆ ನಿನ್ನಯ ಭಕ್ತಿನಿಷ್ಠೆಗಾರ್ಪಡಿ ತ್ರಿಣಯ
ಚರಣಸರಸಿಜಕೆ ಕಣ್ದಂಬಿಯ ಸಮರ್ಪಣಂಗೆಯ್ದು ಶಿವನಿಂದೆ ಮತ್ತೆ
ಕರಮಲರ್ವ ಕಣ್ದಾವರೆಯ ಪಡೆದ ನಿನ್ನಂಶ
ರಿರವಱಿದು ಲೋಕದೊಳಗದಱಿಂದೆ ಮೆಚ್ಚಿದೆಂ
ಪಿರಿದಂತುಮಲ್ಲದೆಯುಮತಿಶಯಂ ಮತ್ಸ್ವಾಮಿ ಬಸವಂಗೆ ಬಂಟನೆಂದು

ವಿನುಪಣುಗ ವೈದುನಂ ನೀನೆನಗೆ ಹಿತನೆಂದು
ಕನದಖಿಳ ಸಾಹಿತ್ಯಶಾಲಿ ನೀನೆಂದು ನೆ
ಟ್ಟನೆ ಶ್ರೋತ್ರತೆಗೆ ಪಾತ್ರನಣೆಯರಂ ನೀನೆಂದು ಶಿವನ ಸದ್ಭಕ್ತಿನಿಷ್ಠೆ
ಸುನಯಸಂಸಿದ್ಧ್ಯಧಿಕ ವೃದ್ಧಿ ಪ್ರಸಿದ್ಧಿಗಳ್
ಘನಚಿತ್ತಸವೃದ್ಧ್ಯತ್ನ ಶುದ್ಧ್ಯಾಯುರಾರೋಗ್ಯ
ವಿನುತ ಸಿದ್ಧ್ಯಾದಿಗಳ್ ಪುತ್ರಪೌತ್ರಾದಿ ಸಂವೃದ್ಧಿ ನಿನಗಕ್ಕೆ ನಾಡೆ

ಎನುತೆ ಸೂರಾಮಾತ್ಯನಂ ಪರಸಿ ಮಲ್ಲಿಕಾ
ರ್ಜುನಪಂಡಿತಾರಾಧ್ಯ ಚಾರಿತ್ರವಮಂ ಕರಂ
ಮನವೊಸೆದು ಸೂರಸಚಿವೇಂದ್ರ ಕೇಳೆಂದು ಕೃತಿವೇಳತೊಡಗಿದರೆಂತೆನೆ
ಸನಯ ಶಬ್ದಂ ಕೇಳ್ವವರ ಕಿವಿಯ ಜಕ್ಕುಲಿಸು
ವನುವಾಗೆ ಶಬ್ದಸಂದರ್ಭದೊಳ್ ಸವಿದೋರ್ಪ
ವಿನುತಾರ್ಥಮರ್ಥದೊಳ್ ಭಾವಮದು ಪೊಱಪೊಣ್ಮೆ ಭಾವದೊಳೆ ರಸವೊಸರಲು

ಗುರುರಾಜ ಕವಿ : ಪಂಡಿತಾರಾಧ್ಯ ಚರಿತಂ : ದೀಕ್ಷಾ ಪ್ರಕರಣಂ (ಪ್ರಥಮೋಧ್ಯಾಯಃ)

ಉಮಾಮಾತಾ ಪಿತಾರುದ್ರ ಇತಿ ಪೌರಾಣವಾಕ್ಯತಃ
ಪ್ರಸಿದ್ಧೇಶ್ವರ ಸದ್ವಂಶಪ್ರಸಿದ್ಧೋ ಜಗತೀತಳೆ ೧೧೯
ಬೆಲ್ದೇವಿ ವೇಮನಾರಾಧ್ಯ ಪ್ರಶಿಷ್ಯಸ್ಯ ಕೃಪಾನಿಧೇಃ
ಗುರುಲಿಂಗಾರ್ಯಸ್ಯ ದಯಾಹಸ್ತಗರ್ಭಸಮುದ್ಭವಃ ೧೨೦
ಬಸವಾಖ್ಯಪುರಾಣೋಕ್ತ ಭಕ್ತವರ್ಧಿತನಂದನಃ
ಮಹೀವಿಖ್ಯಾತ ಬಸವಪುರಾಣಾಹ್ವಯಪುತ್ರವಾನ್ ೧೨೧
ಬಸವೇಶಸ್ಯತನಯೊ ಬಸವೇಶ್ವರಗೋತ್ರಕಃ
ಬಸವಶ್ರೀಪದಾಂಭೋಜಯುಗಳಾಂಚಿತ ಮಸ್ತಕಃ ೧೨೨

ಬಸವಪ್ರುತಿನಿರ್ಮಾಣವಿನಿಯುಕ್ತಃ ಕವೀಶ್ವರಃ
ಪಾತಕೊ ಬಸವೇಶಸ್ಯ ಬಸವೇಶ್ವರಲಾಂಛನೀ ೧೨೩
ಬಸವೇಶ ಭುಜಿಷ್ಯಾತ್ಮಭವೊ ಬಸವಕಿಂಕರಃ
ಬಸವ ಪ್ರತ್ನಭೃತ್ಯತ್ವಾನ್ನಾಮತಸ್ಯ ಜಗತ್ಪ್ರಭೋಃ ೧೨೪
ಅರ್ಹಃ ಕರ್ತುಮಹಂ ಚೆನ್ನಮಲ್ಲಿಕಾರ್ಜುನಮೇವತತ್
ಬಸವೇಶ್ವರನಾಮಾನಂಕೃತ್ವಾ ಮತ್ಪ್ರಾಣನಾಯಕಂ ೧೨೫
ಪ್ರಸ್ತೂಯಮಾನೊ ಬಸವಲಿಂಗಮಿತ್ಯೆವ ಭಕ್ತಿತಃ
ಭವಿನಿರ್ಮಿತ ಸಸ್ಯೌಘ ಧಾನ್ಯಜಾತವಿವರ್ಜಿತಃ ೧೨೬
ಭವಿದೃಷ್ಟರಸವ್ಯೂಹಪಾಕಪ್ರಭೃತಿದೂರಗಃ
ಭವಿಹಸ್ತತಳಾನೀತ ಶಾಕಪತ್ರಪರಾಙ್ಮುಖಃ ೧೨೭
ಭವಿನಾಂ ಭವನಕ್ಷೇತ್ರದ್ರುಮಾರ್ಥಚಯ ನಿಸ್ಪೃಹಃ
ಮುಕ್ತೊ ಭವಿಜನಾಲಾಪ ದರ್ಶನಸ್ಪರ್ಶನಾದಿಭಿಃ ೧೨೮
ತ್ಯಕ್ತೊ ಭವಿಜನಾದಾನದಾನಾಭ್ಯಾಂಚ ನಿರಂತರಂ
ಶುದ್ಧಭಕ್ತಿಸ್ಥಲೆ ವೇದಸಂಮತಾಚಾರಸಂಚಯೈಃ ೧೨೯
ಸಿದ್ಧವೀರವ್ರತಮಹಾಶೀಲಾದಿಭಿರುದಂಚಿತಃ
ಶ್ರೀಮತ್ಪಾಲ್ಕುರ್ಕಿಸೋಮೇಶನಾಮಾಹಂ ಸರ್ವವಿತ್ತಮಃ ೧೩೦
ತಥಾಚ ಮತ್ಕೃತಿಂಶ್ರೋತುಂ ಭಾವ್ಯಮರ್ಹೇಣ ಕೆನಚಿತ್
ತತಶ್ಶೃಣು ನತಾಮಾತ್ಯ ಶೂರಣಾಮಾತ್ಯಶೇಖರ ೧೩೧
ಸ್ತುತಾಪಾಂಗಸ್ಥಲೀಶೈತ್ಯದುಷ್ಟಸಾಂಗತ್ಯವರ್ಜಿತ
ಪ್ರಖ್ಯಾತಾಪಸ್ತಂಬಸೂತ್ರಸ್ಫುರದ್ಧರಿತಗೋತ್ರಜ ೧೩೨
ಶಿವವಿದ್ಯಾಪುಣ್ಯಯಾತ್ರಾಪವಿತ್ರನಿಜವರ್ತನ
ಬಸವೇಶಾಭ್ಯಂತರಂಗಕೃತಾರ್ಯಾಸಂಗ ಸುವ್ರತ ೧೩೩
ಅನೌಪಮ್ಯ ವಿಲಾಸಾಂಗ ಗುಣೋತ್ತುಂಗಾತಿಮಂಗಲ
ವೀರಭಕ್ತಿಸ್ಥೈರ್ಯಧೈರ್ಯದೋರ್ವೀರ್ಯಾದಾರ್ಯ ಸುವ್ರತ ೧೩೪
ವೀರ ಪೂಜೇಶ್ವರಾಚಾರ್ಯಹಸ್ತಗರ್ಭಸಮುದ್ಭವ
ಚರಲಿಂಗೆ ಗುರೌಲಿಂಗೆ ಲಿಂಗಸಾಹಿತ್ಯನಾಮನಿ ೧೩೫
ಸರ್ವೈಕನಿಷ್ಠಾಸಂಯುಕ್ತ ಸಚ್ಛೀಲವಿಹಿತಾದರ
ಅತಿಪ್ರೀತ್ಯಾ ಮಹೇಶಾಯ ಸಮರ್ಪ್ಯನಯನದ್ವಯಂ ೧೩೬
ತಸ್ಮಾತ್ಪುನಃ ಪ್ರಾಪ್ತನೇತ್ರ ವೀರಭಕ್ತಿವಿವರ್ಧನ
ದೃಗ್ದಾನೆ ಪುನರಾದಾನೆರತೆ ಸ್ತವಗುಣೋನ್ನತ ೧೩೭
ಸದ್ಧಾನಧರ್ಮನಿಯತೆ ರಹಂ ಸಂತುಷ್ಟಮಾನಸಃ
ಅಪಿತ್ವಂ ಬಸವೇಶಸ್ಯ ಸದ್ಭಕ್ತ ಇತಿ ಸಂತತಂ ೧೩೮

ಮಮಾಪಿ ಸನ್ನಿತ್ರಮಿತಿ ಮಚ್ಛಾಲಕ ಇತಿಪ್ರಿಯಃ
ವಿಖ್ಯಾತ ಶಿವಸದ್ಭಕ್ತಿಸ್ಸದ್ಬುದ್ಧಿಶ್ಶುದ್ಧಿರಾತ್ಮನಃ ೧೩೯
ಪುತ್ರಪೌತ್ರಾಭಿವೃದ್ಧಿಶ್ಚ ಪ್ರಸಿದ್ಧಿರ್ಜಗತೀತಳೆ
ಸಂಪತ್ಸಮೃದ್ಧಿರಿಷ್ಟಾರ್ಥಸಂಸಿದ್ಧಿಃ ಪರಮೋನ್ನತಾ ೧೪೦
ಆಯುರಾರೋಗ್ಯಸತ್ಸೌಖ್ಯ ಭಾಗ್ಯವೃದ್ಧಿರನಶ್ವರಾ
ತೆ ಭೂಯಾದಿತಿ ಸಂತೋಷಾದ್ವಿಧಾಯಾಶಿಷಮುತ್ತಮಾಂ ೧೪೧
ಸಂಭಾವ್ಯಚ ತ್ವಾಂಶ್ರೋತಾರಂ ಕೃತ್ವಾಸ್ಯಾಸ್ಸತ್ಯತೆರ್ಮಮ
ಪಂಡಿತಾರಾಧ್ಯಚರಿತಾಲಂಕೃತಾಂ ಕೃತಿಮಾರಭೆ ೧೪೨

**ಪಾಲ್ಕುರಿಕೆ ಸೋಮನಾಥ : ಪಂಡಿತಾರಾಧ್ಯ ಚರಿತ್ರ : ಪುರಾತನ ಪ್ರಕರಣ**

(ಪುಟ್ಟ ೨೬೧–೨೬೨)

ಶ್ರೀವೃಷಾಧೀಶ ಸಂಚಿತದಯಾಭಾವ
ಭಾವುಕಮಂತ್ರೀಶ ಪಾಲ್ಕುರ್ಕಿ ಸೂರ
ಯಂತ ವೆಂಡಿಯುಁ ಬಂಡಿತಾರಾಧ್ಯದೇವುಁ
ಡಂತಕಾಂತಕಮೂರ್ತಿಯಟ್ಲೊಕ್ಕನಾಁಡು
ಕ್ಷಿಪ್ರಂಬ ತಾನುನು ಶಿಷ್ಯವರ್ಗಂಬು
ಸುಪ್ರಭಾತಮುನ ನುತ್ಸುಕತ ಮೇಲ್ಕಾಂಚಿ
ಮುಸಲಿ ಚುಕ್ಕಲು ಕಾಂತಿಮಾಯಕಮುನ್ನ
ಯುಸಮುಶಂಖಧ್ವನುಲಲರಕ ಮುನ್ನ
ಯಭವಾಲಯಂಬುಲ ನಲರುದೀಪಮುಲು
ಪ್ರಭಸೆಡಿ ವೆಲುವೆಲ್ಲಁ ಬಾಱಕಮುನ್ನ
ಪರಗುವೆನ್ನೆಲ ವರಪರಗಾಕಮುನ್ನ
ಸರಸಿಜಂಬುಲು ಮುಗಿ ವಿರಿಯಕಮುನ್ನ
ಜಿಗಿ ಸೆಡಿ ಕಲುವಲು ಮೊಗುಡಕಮುನ್ನ
ಮೊಗಿಁ ಜಕೋರಮುಲು ನೋರ್ಮೂಯಕಮುನ್ನ
ಚೊಕ್ಕಿ ಯೊಕ್ಕೊಕಯೆಡ ಸುಖಿಯಿಂಪಁ ದಲಁಚಿ
ಜಕ್ಕವಲ್ ಗವಗೂಡಁ ಜನಕಟಮುನ್ನ
ದಿನಮಣಿ ದನ ಪೂರ್ವದಿಕ್ಸತಿಮೀಁದ
ಮನಸೆತ್ತಿ ಪದಪಾರಿ ಮಱವಕಮುನ್ನ
ತೊಲುಕೋಡಿಗನುವಿಚ್ಚಿ ನಿಲಿಚಿ ವ್ರೈವೆಂಚಿ
ಜಲಜಲ ಱೆಕ್ಕಲು ಸಡಲಿಂಚಿ ನೀಲ್ಗಿ
ಗ್ರಕ್ಕನಁ ಗಾಲಾಁಚಿ ಕಂಠಂಬುವಿಚ್ಚಿ

ಮುಕ್ಕುನ ನೀರ್ಗಲು ಸಕ್ಕೊಲ್ಪಿ ಕಡುಪು
ವೆಕ್ಕಿಂಚಿ ಮೆಡಸಾಚಿ ನಿಕ್ಕಿಮಿನ್ ಸೂಚಿ
ಕುಕ್ಕುಟಶೋಕೋಯನಿ ಕೂಯಕಮುನ್ನ
ಪ್ರಬ್ಬತನಾಥ ಪ್ರಬ್ಬತನಾಥ ಯನುಚು
ನುಬ್ಬಿ ನೀರ್ಡೋಳ್ಲ ಗೂಯುಡುಗಕ ಮುನ್ನ
ನನುರಾಗಲೀಲ ನಾತ್ಮಾರಾಮುಮುನಕುಂ
ಜನಿ ಪುಷ್ಪಮುಲು ಗೋಯು ಸಮಯಂಬುನಂದು

ನೀಲಕಂಠಾಚಾರ್ಯ : ಆರಾಧ್ಯಚಾರಿತ್ರ : ಪುರಾತನ ಪ್ರಕರಣ
(ಸಂಧಿ ೧–೨,೩,೪)

ಶ್ರೀ ವೃಷಾಧೀಶ ಸೇಮುದಂಚಿತ ದಯಾಪಾಂಗ
ಪಾವನಾಪ್ತಮೂರ್ತ್ಯಶೇಖರ ಸೂರಸಚಿವೇಂದ್ರ
ಸಾವಧಾನದೆ ಪಂಡಿತಾರಾಧ್ಯರೊಂದುದೆವಸಂ ಶಿಷ್ಯರೊಡನೆ ಸುಖದಿಂ
ತೀವಿದಾನಂದದೊಳಿರುತ್ತೆ ಮುಂಜಾವದೊಳ
ಗಾವೇಳೆಯೊಳಗೆಳ್ದು ನಕ್ಷತ್ರನಿಕರಂಗ
ಳೋವೋವೊ ಬಾನೆಡೆಯೊಳೆಯ್ದೆ ಮೈಗರೆದಿರ್ಪುದರ್ಕಿಂದೆ ಮುನ್ನ ಮುನ್ನೆ

ಮಿಸುಪ ಶಂಖಧ್ವಾನಮುಣ್ಮುವುದಱಿಂ ಮುನ್ನೆ
ಲಸಿತ ಶಿವಸದನಂಗಳೊಳಗೆ ಸೊಡರ್ಗುಡಿ ಬೆಳ್ಪ
ಪಸರಿಸದ ಮುನ್ನೆ ಜೊನ್ನಮನುಣ್ಬ ಪಕ್ಕಿಗಳ ಬಾಯ್ಗಳವಚಱದ ಮುನ್ನೆ
ಎಸೆವ ಕೌಮುದಿಯ ಸೊಂಪಳಿದು ಪೋಗದ ಮುನ್ನೆ
ಬಿಸರುಹಚಯಂಗಳರಲದ ಮುನ್ನೆಯುಮುಳ್ವಕ್ಕಿ
ಕುಸುಮಶರಹತಿಯ ಮಿಾಱದ ಮುನ್ನೆ ರವಿ ಮೂಡವೆಟ್ಟನಡರಿರದ ಮುನ್ನೆ

ಬಿದಿರ್ದು ಗಱಿಗಳ ಮೆಯ್ಯನುರ್ಬಿ ಕಣ್ದೆಱದು ಮುಂ
ಪುದಿದ ತುಪ್ಪುಳ ಚಂಚುವಿಂದೆ ನೇರ್ವಡಿಸುತ್ತೆ
ಮುದದೆ ಕಾಲ್ಗಳ ಮೇಲೆ ಪಕ್ಕಮಂ ಪಸರಿಸುತೆ ಕೊರಲೊಳಗನನುಮಾಡುತೆ
ಪದೆದು ಕಂಧರವೆತ್ತಿ ಪೊಟ್ಟೆಯಕ್ಕುಳಿಸುತ್ತು
ಮೊದವಿ ಮುಂಗೊಳಿಪ ಪರ್ವತನಾಥ ಕೂ ಎನು
ತ್ತೊದಱಿ ಕೂಗುವ ವೇಳೆಯಿಂ ಮುನ್ನೆ ಭರದೆ ತಮ್ಮಯ ಪುಷ್ಪವಾಟಗೆಯ್ದಿ

ಗುರುರಾಜಕವಿ : ಪಂಡಿತಾರಾಧ್ಯ ಚರಿತಂ : ಪುರಾತನ ಪ್ರಕರಣ (ಪ್ರಥಮೋಧ್ಯಾಯಃ)

ಅಂತಕಾಂತಕಮೂರ್ತಿಶ್ರೀಪಂಡಿತಾರಾಧ್ಯದೇಶಿಕಃ
ಜಾತುಜಾತಪ್ರಭಾತಾಯಾಂರಜನ್ಯಾಂ ಶಿಷ್ಯಸಂಯುತಃ ೧

ಯಾವನ್ನತಾರಕಾವ್ಯೂಹಃ ಪ್ರಯಾತಿಕ್ಷೀಣಕಾಂತಿತಾಂ
ಸಮುಲ್ಲಸಂತಿಯಾವನ್ನ ಲಲಿತಾಶ್ಯಂಖನಿಸ್ವನಾಃ ೨
ಯಾವಚ್ಛಿವಾಲಯೆ ದೀಪಾನಪರಿಚ್ಯುತದೀಪ್ತಯಃ
ಯಾವಚ್ಚಕೋರನಿವಹಾನಾಭೂವಂತ್ಸಹೃತಾನನಾಃ ೩
ಯಾವದ್ವಿಕಾಸಮಬ್ಜಾನಿ ನಯಾಂತ್ಯಲ್ಪಾನಕೌಮುದೀ
ಪ್ರಯಾತಿಕ್ರೀಡಿತುಂ ಯಾವನ್ನಚಕ್ರಯುಗಮೇಕತಃ ೪
ಯಾವತ್ಪೂರ್ವದಿಗಾಸಕ್ತೋನಜಹಾತ್ಯಪರಾಂರವಿಃ
ಉನ್ಮೀಲ್ಯನೇತ್ರೆ ಭೂತ್ವೋಚ್ಚೈಶ್ಚಾಲಯಿತ್ವಾಥ ಪಕ್ಷತೀ ೫
ಪ್ರಸಾರ್ಯಚರಣದ್ವಂದ್ವಂ ಕೃತ್ವೋಚ್ಚೂನಾಂ ನಿಜಾಂತನುಂ
ಪತ್ರಾಣಿಚಂಚ್ವಾ ಸಮ್ಮೃಜ್ಯ ಸಮುನ್ನಮ್ಯಸ್ವಕಂಧರಾಂ ೬
ನಿರೀಕ್ಷ್ಯೋರ್ಧ್ವಂ ಪ್ರಕುರುತೆಯಾವದ್ರಾವಂ ನಕುಕ್ಕುಟಃ
ಯಾವತ್ಪ್ರವರ್ತನಾಥೇತಿವಿರುತಂ ಚರಣಾಯುಧಾಃ ೭
ನನಿಶಾಂತೇಷು ಮುಂಚಂತಿ ನಿಶಾಂತಪರಿಶಂಸಿನಃ
ತಾವತ್ಸ್ವಾರಾಮಮಾಗತ್ಯ ಪುಷ್ಪಾಣ್ಯಚಿನುತಸ್ವಯಂ ೮

ಪಾಲ್ಕುರಿಕೆ ಸೋಮನಾಥ : ಪಂಡಿತಾರಾಧ್ಯ ಚರಿತ್ರ : ವಾದ ಪ್ರಕರಣ

(ಪುಟ ೫೧೦-೫೧೫)

.... ಗುರು ಮಲ್ಲಿಕಾರ್ಜುನದೇವು
ಚರಣಾಂಬುಜಮುಲಕುಂ ಜಾಂಗಿಲಿ ಮ್ರೊಕ್ಕಿ,
"ಬಸವಕೃಪಾಪಾತ್ರ ಪರವಾದಿಜೈತ್ರ
ಯಸಮಾನಶೌರ್ಯ ಶಿವಾಶ್ರಮಾಚಾರ್ಯ
ಕರುಣಾಪರಿಷ್ಕಾರ ಘನಶಿವಾಚಾರ
ನಿರವಧಿನಿಜಪುಣ್ಯ ನಿಖಿಲವರೇಣ್ಯ
ಪ್ರಮಥಾನುಗತಶೀಲ ಭಕ್ತಾತಿಲೋಲ
ಸುಮಹದ್ಯಶಸ್ಕ ವಿಶುದ್ಧಮನಸ್ಕ
ಯಸಮಲೋಕಾರಾಧ್ಯ ಕುಸಮಯಾಭೇದ್ಯ
ಸ್ವಸಮಯವಿಸ್ತಾರ ಜಗದೇಕವೀರ
ಹರಭಕ್ತಿಶುದ್ಧ ಪಂಚಾಕ್ಷರೀಸಿದ್ಧ
ಚಿರದಯಾರಸಕುಲ್ಯ ಶಿವಗಣಲೌಲ್ಯ
ಗತದುಷ್ಟಯಂತ್ರ ಜಂಗಮಪರತಂತ್ರ
ಹಿತಶುದ್ಧಶೈವಮಹಿಷ್ಠಾನುಭಾವ
ಪಂಡಿತನತಪಾದ ಪರಿಚಿತವೇದ

ಪಂಡಿತಾರಾಧ್ಯ ಸದ್ಭಕ್ತಿಸಾನ್ನಿಧ್ಯ
ವೀರಾವತಾರ ಸಂವಿತ್ಸುಖಾಧಾರ
ಭೂರಿಯಶಃಪೂರ್ತಿ ಬುಧಚಕ್ರವರ್ತಿ
ವರಮೂರ್ತಿ ಮೀಮಹತ್ತ್ವಮುಁದಲಂಚಿನನು
ಬರಸಮಯಮುಲೆಲ್ಲಁ ಬಱಪಱಗಾವೆ?
ಸನ್ನುತ ಮೀನಾಮಸಂಕೀರ್ತನಂಬು
ವಿನ್ನದುಸ್ಸಮಯುಲು ವಿರಥುಲುಗಾರೆ?
ಪ್ರಮಥಾತ್ಮ ಮೀಮಹತ್ತ್ವಂಬೆನ್ನನನ್ಯ
ಸಮಯುಲು ಗಿಮಯುಲು ಭ್ರಮಿತುಲೈ ಚನರೆ?
ಪಂಡಿತಾರಾಧ್ಯಮೀಪರಿಚಿತಪರಮ
ಪಾಂಡಿತ್ಯನಿತ್ಯಸಂಪಾದಿತ ಮಹಿಮ
ಮೊಗಿ ಬೌದ್ಧಸಮಯುಲ ಮುಕ್ಕುಪ್ಪೈಁಗತ್ತಿ,
ಯೊಗಿನಿನಾರ್ಹತಸಮಯುಲ ವೀಪುಁಗೋಲ,
ದೊಲಁಗನಿ ಭೇದವಾದುಲ ಕೆಕ್ಕಁಗೊಱ್ಱು
ಇಲಁ ಬಾಂಚರಾತ್ರವ್ರತುಲ ತಲಗುಂಡು,
ನೇಕಾತ್ಮವಾದುಲ ಹೃದಯಶಲ್ಯಂಬು,
ಲೋಕಾಯತುಲ ಪೊಟ್ಟಲೋಪಲಿಯಮ್ಮು,
ವೆಲಯನದ್ವೈತವಾದುಲ ರೊಮ್ಮುಁಗೊಟ,
ಮಲರೆಡು ಬ್ರಹ್ಮವಾದುಲ ಕಂಟಕಸವು,
ಕಾಲವಾದುಲ ತುದಿನಾಲುಕಮುಲ್ಲು,
ದೂಲೆಡುಁ ಗರ್ಮವಾದುಲ ಗುಂಡೆಬೆದರು,
ಶೂನ್ಯವಾದುಲ ಮೆಡಁಜುಟ್ಟೆಡಿ ಪಾಮು,
ಸನ್ಯಾಸುಲನು ಬಾರಿಸಮರೆಡುಮಿತ್ತಿ,
ನೆಱಿಯ ಮಾಯಾವಾದಿ ನೆತ್ತಿಗಾಲಂಬು,
ಮಱಿ ವೇದವಾದುಲ ಮನಸುತಲ್ಲಡಮು,
ವೊಲಯನಧ್ಯಾತ್ಮವಾದುಲ ನೋರಿತಾಳ,
ಮಿಲ ನಟ್ಲುಗಾವುನನೆನಯಂದುಁ ಗಲದೆ?
ತಱುಁದಱುಁ ಬರವಾದಿ ದಾಁಗಾಕಯಂಚು
ಮೆಱಸಿ ಮಿಮುಂದಱಁ ಬಱವಕ ನಿಲುವಁ
ಗಲಁಗಕ ತರ್ಕಿಂಪಁಗಾ ನೆಟ್ಟತಾರ್ಕಿ
ಕುಲಕುನು ವಾವದೂಕುಲಕುನು ವಶಮೆ?
ಕಾವುನ ನಿದಿಯೊಕ್ಕ ಕಾರ್ಯಂಬುಗಾಁಗ

భావించి యేల మీపాదంబులెత్త
నేము చాలఁదు మేల యిటువంటిసభల
నేమించి నిర్మూలధామంబు సేయు"
ననచుఁ బండితమల్లికార్జునయ్యకును
వినయంబుతో విన్నవింపుచు మ్రొక్కఁ
గ్రమమున "దక్షాధ్వరంబు", "వ్యాసాష్ట
కము"ను, "గణాడంబరము", "శారభంబు"
నొత్తిలి చదువుచు నుబ్బుచుఁ జనుచు
నత్తఱి భట్లు గ్రైవారంబు సేయ
"శ్రుతిఁబంచగద్యముల్", "రుద్రమహిమ"యు
శతకంబు "శివతత్త్వసార" మాదిగను
గద్యపద్యంబులాకాంక్షఁ జదువుచు
హృద్యంబుగా సత్కవీశ్వరుల్ పొగడ
మదినుబ్బి "సంసారమాయాస్తవంబుఁ"
బదములుఁ దుమ్మెదపదముల్ ప్రభాత
పదములుఁ బర్వత పదములానంద
పదములు శంకరపదముల్ నివాళి
పదములు వాలేశుపదములు గొబ్బి
పదములు వెన్నెలపదములు సంజ
వర్ణన మఱి గణవర్ణనపదము
లర్ణవ ఘోషణ ఘూర్ణిలుచుండఁ
బాడుచు నాడుచుఁ బరమహర్షమునఁ
గూడి సద్భక్తసంకుల మేఁగుదేర
నలరు ఋగ్వేదాది యది యాదిగాఁగఁ
దలుకొత్త రుద్రసూక్తములుఁ దన్నుతులు
సుమహిష్ఠలీల యజుర్వేద నమక
చమక పంచబ్రహ్మ సంస్తుతోక్తులును
ననుపమ సామవేదాన్వితమహిమఁ
జనిన రుద్రప్రశంసాపరోక్తులును
గ్రమమొంద రుద్రసూక్తప్రతానములుఁ
బ్రమథసూక్తములును బసవసూక్తములుఁ
దనరువేదము 'లనంతావై' యనంగఁ

ಜನು ಚರಣವ್ಯೂಹ ಸಂಗತಿಯಂದು
ಶ್ಯಾಮು ಮಾಧ್ಯಂದಿನ ಚರ್ಚ್ಛಕ ಶ್ರವಣ
ಶ್ಯಾಮಾಯನೀಯು ಚರ್ಚ್ಛ ಶ್ರವಣಾಂತ
ಕೌಂಡಲ ದುಂದುಭಿ ದಂಡಿ ಲಾಂಗೂಲ
ಮಾಂಡೂಕ ಶಾಕಲ ವೈತ್ರಾಯಣೀಯ
ವೈನೇಯು ವೈಧೇಯು ವಾರ್ತಾಂತವೇಯ
ಶೌನಕಿ ಮೌದ್ಗಲ್ಯ ಸಾಂಖ್ಯಾಯನೀಯು
ಶಾಪೇಯು ಶೌಕ್ಲೇಯು ಶಾಪಾಯಣೀಯು
ಕಾಪಾಲ ಬಾಷ್ಕಾಲ ಗಾಲವ ಕಾಣ್ವ
ದಾಂತ ವತ್ಯತ್ನರಿತ ಬ್ರಹ್ಮಾದಪ್ರ
ದಾಂತ ಖಲ್ವಲ ದೇವದರ್ಶಿ ಜಾಬಾಲಿ
ವಾರಾಹಿ ಕೌಥೇಯು ವಾಜಸನೇಯ
ನಾರಾಯಣೀಯು ಯಾನಪಹರ್ದವೇಯು
ಪಾರಾಕ್ರಮೋಣಾಂತ ಬೌಧೇಯು ವಿರಥ
ಪಾರಕ್ರಮಿ ಬ್ರಹ್ಮಪೌಷ ಖಾಂಡಿಕ್ಯ
ಆಸುರಾಣೀಯುಯಾಹ್ವಯು ಮೂಲಕಠ ಯ
ವಾಸುರಾಣೀಯ ಕಾತ್ಯಾಯನೀಯಾಶ್ವ
ಲಾಯನಿ ಮೊದಲು ನಾಯಾಯಿಶಾಖಲನು
ನ್ಯಾಯಸೂತ್ರಂಬು ಲಾಮ್ನಾಯಭಾಗಮುಲು
ಮಾನಿತ ತದುಪಶಾಖಾದಿ ಸೂತ್ರಪ್ರ
ತಾನಂಬುಲನು ಬವಮಾನ, ಕೈವಲ್ಯ,
ಕೈನೇಷ, ಜಾಬಾಲ, ಕಾಲಾಗ್ನಿ, ರುದ್ರ,
ಮಾನವ, ಜೈಗೀಷ, ಮಾರುತಾಮ್ನಾಯ,
ನಾರಾಯಣ, ಬ್ರಾಹ್ಮಣ, ಶಿವಸಂಕಲ್ಪ,
ಶ್ರೀರುದ್ರಚಯ, ಬೃಹದಾರಣ್ಯಗರ್ಭ,
ಹಂಸಾದ್ಯುಪನಿಷಚ್ಚಯಮುಲು, ರುದ್ರಪ್ರ
ಶಂಸಾಪರೋಕ್ತುಲಾಶ್ಚರ್ಯಂ ಬೆಲರ್ಪಂ
ಬರಮಲಿಂಗಾರ್ಚನಾಪರುಲು ಸ್ವಾಧ್ಯಾಯ
ಪರುಲುನ್ನೈ ಚನು ಮಹಾಬ್ರಾಹ್ಮಣೋತ್ತಮುಲು
ಸದುವುಚು ವೇದಭಾಷ್ಯಮುಲು ಸೆಪ್ಪುಚುನು

ನೀಲಕಂಠಾಚಾರ್ಯ : ಆರಾಧ್ಯಚಾರಿತ್ರ : ವಾದಪ್ರಕರಣ

(ಸಂಧಿ ೧-೧೯-೩೦)

ಪೊಡವುಟ್ಟು ನುಡಿದರೆಲೆ ಕರುಣಾಪಾತ್ರ
ತೊಡರ್ವ ಪರಸಮಯಬಂಧುರವಾದಿಕುಲಜೈತ್ರ
ಮೃಡದರ್ಶನಾಚಾರ್ಯ ಸದೃಶ ವಿರಹಿತಶೌರ್ಯ ಸತ್ಪುಣ್ಯಜನವರೇಣ್ಯ
ಕಡುಮೆಱೆವ ದುರ್ಮತಾಭೇದ್ಯ ಜಗದಾರಾಧ್ಯ
ಸಡಗರಿಪ ನಿಜಸಮಯವಿಸ್ತಾರ ಸುವಿಚಾರ
ನಿಡಿದೆಸೆವ ಪಂಚಾಕ್ಷರೀಮಂತ್ರಸಿದ್ಧ ಪರಮೇಶ ಸದ್ಭಕ್ತಿಸಿದ್ಧ

ಚಿರದಯಾರಸಕುಲ್ಯ ಭೂತೇಶ ಗಣಲೌಲ್ಯ
ಚರಲಿಂಗ ಪರತಂತ್ರಗತದುಷ್ಟಯಂತ್ರ ಬಂ
ಧುರ ಮಹಿಷ್ಠಾನುಭಾವಾ ಲಸದ್ವಿಹಿತೋರು ಶುದ್ಧಶೈವಾಘದೂರ
ಪರಮಚಿದಕೂಪಾರ ಸದ್ಭಕ್ತಸಾನ್ನಿಧ್ಯ
ವರಪಂಡಿತಾರಾಧ್ಯ ನಿನ್ನ ಪೆಸರಂ ಕೇಳ್ದ
ಪರದುಷ್ಟಸಮಯಿಗಳ್ ನಷ್ಟವಾಗರೆ ಲೋಕವಿಸರದೊಳ್ ಪಂಭಾವಿಸೆ

ಪ್ರಮಥಾತ್ಮ ನಿನ್ನ ಮಾಹಾತ್ಮ್ಯಮಂ ಕೇಳ್ದನ್ಯ
ಸಮಯಸ್ಥರೆಲ್ಲರಪದಸ್ಥರಾಗರೆ ನಿನ್ನ
ಸಮುದಂಚಿತಾಮಲೋನ್ನತ ಮಹಿಮೆಯದು ಬೌದ್ಧಘೋಣಾಗ್ರ ಶಸ್ತ್ರಮಲ್ತೆ
ಅಮಮಾರ್ಹತರ ಬೆನ್ನ ಬಡಿವ ದಂಡಮದಲ್ತೆ
ಕುಮತಲೋಕಾಯತರ ನಾಲಗೆಯ ಥಟ್ಟುಗಿವ
ವಿಮಲಕಂಟಕಮಲ್ತೆ ಕರ್ಮವಾದಿಗಳ ಗಳಮಂ ಬಿಗಿವ ಪಾಶಮಲ್ತೆ

ಉರುತರಾಭೇದವಾದಿಗಳ ಗಂಟಲ ಗಾಣ
ಮರರೆ ಏಕಾತ್ಮವಾದಿಗಳ ಹೃಚ್ಛಲ್ಯಮಂ
ತಿರದೆ ಸನ್ಯಾಸಿಗಳ ಶೂನ್ಯವಾದಿಗಳ ಕಂಧರಬಂಧ ದುಷ್ಟೋರಗಂ
ಭರದೆ ನಿನ್ನಯ ಮಹಿಮೆಯೆಂತಪ್ಪುದೆಂದೊಡಿ
ನ್ನುರುಗರ್ವದಿಂ ನಿನ್ನೊಳಿದಿರಾಂಪ ತಾರ್ಕಿಕಂ
ಪಿರಿದು ವೈಖರ್ಯಮುಳ್ಳವನಾದೊಡಂ ಪರಾಜಿತನಪ್ಪುದೇಂ ಸೋಜಿಗಂ

ಇವನ ಬೌದ್ಧನ ಮಿಱುಪ ಸದ್ವಾದಮಂ ಮಲಂ
ತವಕದಿಂ ನಿರ್ಧೂಮಧಾಮಂಗೆಯಲ್ಕಾವೆ
ತವೆ ಸಮರ್ಥರ್ ನೀಂ ಬರಲ್ ಕಾರ್ಯಮಣಮಿಲ್ಲ ನಿಮ್ಮ ಪಾದದ ಬಲ್ಮೆಯಿಂ

ಸವಿನಯದೆ ನಾವೆಲ್ಲರೆಯ್ದಿ ವಾದಂಗೆಲ್ದು
ಭುವನದೊಳ್ ನಿಮ್ಮ ಕೀರ್ತಿಯನಂಟುಮಾಳ್ಪೆವೆನು
ತವನತರುಮಾದ ತಚ್ಛಿಷ್ಯರಂ ನೋಡಿ ನುಡಿದಂ ಪಂಡಿತೇಶನೊಸೆದು

ಮಿಸುಪ ವಾದಕ್ಕೆನ್ನುಮನುದ್ದೇಶಿಸಿಯೆ ಕರೆಯು
ಲೊಸೆದು ನಿಮ್ಮಂ ಕಳುಪುವುದು ಕಾರ್ಯಮಲ್ತೆನು
ತ್ರಸವಸದೆ ಮಲ್ಲಿಕಾರ್ಜುನಪಂಡಿತಾರಾಧ್ಯರೆಳ್ತರುತ್ತಿರಲಿದಿರೊಳು
ಒಸೆದು ದಕ್ಷಾಧ್ವರ ವ್ಯಾಸಾಷ್ಟಕಂಗಳಂ
ಮಸಕದೆ ಗಣಾಡಂಬರಂಗಳಂ ನಾಡೆ ಪಠಿ
ಯಿಸುತೆ ಶಾರಭವನೋದುತ್ತೆ ವಂದಿಗಳೊಲ್ದು ಕೈವಾರಿಸುತ್ತೆ ಬರಲು

ಉರುತರ ಶ್ರೀರುದ್ರಮಹಿಮೆಯಂ ಶತಕಮಂ
ಸರಳತರಪಂಚಗದ್ಯಂಗಳಂ ಸಂತತಂ
ಹರಿಸದಿಂ ಶಿವತತ್ತ್ವಸಾರಾದಿಯಾದ ಪದ್ಯಂಗಳಂ ಕವಿಗಳೆಯ್ದೆ
ನಿರುತಮಿರ್ಕೆಲವೊಳೋದುತ್ತೆ ಬರೆ ಎಡೆವಿಡದೆ
ಭರದೆ ಸಂಸಾರಮಾಯಾಸ್ತವನ ಪದತತಿಯ
ನಿರದೆ ನೀರಾಜನಪದಂಗಳಂ ದುಮ್ಮಿಯ ಪದಂಗಳಂ ಪಾಡುತೊಸೆದು

ಹಿಂಗದಾನಂದವಪದಂಗಳಂ ಶಂಕರ ಪ
ದಂಗಳಂ ಪರ್ವತಪದಂಗಳಂ ಗೊಬ್ಬಿಯ ಪ
ದಂಗಳಂ ಗಣವರ್ಣನೆಯ ಪದಂಗಳನರ್ಣವದ ರವದವೊಲ್ ಪಾಡುತೆ
ತುಂಗಹರ್ಷಂಬಡೆದು ಸದ್ಭಕ್ತಸಂಕುಲಂ
ಮುಂಗಡೆಯೊಳೆಯ್ದಿ ಬರೆ ಋಗ್ವೇದರುದ್ರಸೂ
ಕ್ತಂಗಳಂ ಪವಮಾನ ಮುಖ್ಯಂಗಳಂ ನಾಡೆ ಪಠಿಸುತ್ತೆ ಸಂತೋಷದಿಂ

ನಿರುತಂ ಯಜುರ್ವೇದ ನಮಕ ಚಮಕಂಗಳಂ
ಪಿರಿಯ ಪಂಚಬ್ರಹ್ಮ ಸನ್ನುತೋಕ್ತಿಗಳನಂ
ತುರು ಸಾಮವೇದಾನ್ವಿತಂಗಳಂ ರುದ್ರಪ್ರಶಂಸೆಗಳನೊಳ್ನುಡಿಗಳಂ
ಭರದಿಂದಥರ್ವಣಶಿರಶ್ಶಿಖೆಗಳಾದ ಭಾ
ಸುರ ರುದ್ರಸೂಕ್ತಪ್ರತಾನಂಗಳಂ ಮತ್ತೆ
ಹರಿಸದಿನಘೋರಾದಿ ದಿವ್ಯಮಂತ್ರಂಗಳಂ ಪಾರ್ಶ್ವದೊಳ್ ಪಠಿಯಿಸುತ್ತೆ

ಪಿರಿದನಂತಾವ್ವೈ ಎನುತ್ತೆ ವೇದಾ ಎನುತೆ
ಹರಿಸದಿಂ ನುಡಿದಾಗಮಪ್ರಮಾಣದೆ ಬಳಿ
ಕ್ಕುರುತರ ಶ್ಯಾಮಮಾಧ್ಯಂದಿನಂಗಳನಂತೆ ಚರ್ಚಕಶ್ರವಣಂಗಳಂ

ಪರಮ ವಾರ್ತಾಂತವೇಯಂಗಳಂ ರಮಣೀಯ
ತರ ಶೌನಕೀದಂಡಿ ದುಂದುಭಿಗಳಂ ಮತ್ತೆ
ನಿರುಪಮ ಶ್ಯಾಮಾಯಣೀಯ ಮಾಂಡೂಕ ವೈಧೇಯ ಕಠಶಾಖೆಗಳನು

ಮಿಗುವ ವೈತ್ರಾಯಣೀಯಂಗಳಂ ದೇವದ
ರ್ಶಿಗಳ ಶಾಖಾಯಣೀಯಂಗಳಂ ಮತ್ತೆ ಸೊಂ
ಪೊಗೆವ ನಾರಾಯಣೀಯಂಗಳಂ ಶೌಕ್ತೇಯ ಕಾಪಾಲ ಶಾಖೆಗಳನು
ಸುಗುಡ ಸಾಂಖ್ಯಾಯನೀಯಂಗಳಂ ಗಾಲವಾ
ದಿಗಳನುಱಿತವೆಱಿತವ ಚರಣವ್ಯೂಹದಲ್ಲಿಯಿಂ
ಪೊಗೆವ ಶಾಖೆಗಳ ಭೇದಂಗಳಂ ಕೀರ್ತಿಸುತ್ತ ಪಱಿಚೊಳ್ದಿದ್ದಿಷ್ಟಮಾದ

ಪರಮಕೈವಲ್ಯ ಕೈನೇಸಂಗಳೊಳ್ ಮತ್ತೆ
ಸರಳ ಜಾಬಾಲ ಕಾಲಾಗ್ನಿ ರುದ್ರಬ್ರಹ್ಮ
ವರಗರ್ಭಹಂಸ ಬೃಹದಾರಣ್ಯಕಾದ್ಯುಪನಿಷತ್ತುಗಳೊಳೆಯ್ದೆ ಪೊಱಿತವ
ಗಿರಿಶ ಪ್ರಶಂಸೆಯಂ ಸ್ವಾಧ್ಯಾಯತತ್ಪರರ್.
ವರ ಭೂಸುರೋತ್ತಮರ್ ಶಿವಪೂಜನಾಪರರ್
ಭರದೆ ನೋಡುತ್ತೆ ಮತ್ತಂ ವೇದಭಾಷ್ಯಂಗಳಂ ಕರಂ ಪಠಿಯಿಸುತ್ತೆ

ಗುರುರಾಜಕವಿ : ಪಂಡಿತಾರಾಧ್ಯ ಚರಿತಂ : ವಾದಪ್ರಕರಣಂ (ಪ್ರಥಮೋಧ್ಯಾಯಃ)

ಶ್ರೀಪಂಡಿತಾರಾಧ್ಯದೇವಂ ಪ್ರಣಿಪತ್ಯೇದಮಬ್ರುವ
ಬಸವೇಶದಯಾಪಾತ್ರವಾದಿಜೈತ್ರನಿರಂಕುಶ ೩೯
ನಿಸ್ಸೀಮಪುಣ್ಯ ನಿಗಮವರೇಣ್ಯಪರಮೋನ್ನತ
ಸದ್ಭಕ್ತಲೋಲಪ್ರಮಥಾನುಗಶೀಲಪ್ರಿಯಂವದ ೪೦
ಮಹದ್ಯಶಸ್ಕಸಂಶುದ್ಧಮನಸ್ಕವಿಭವೋರ್ಜಿತ
ಸಮಸ್ತಜಗದಾರಾಧ್ಯದುರ್ಮತಾಭೇದ್ಯವಿಕ್ರಮ ೪೧
ಲೋಕೈಕವೀರ ಸ್ವಮತವಿಸ್ತಾರಮಹಿಮಾಕರ
ಪಂಚಾಕ್ಷರೀಮಂತ್ರಸಿದ್ಧ ಭಕ್ತಿಶುದ್ಧಕ್ಷಮಾಪರ ೪೨
ಲಸತ್ಕೃಪಾಸುಧಾಕುಲ್ಯಗಣಲೌಲ್ಯಗುಣಾಧಿಕ
ಗತದುರ್ಯಂತ್ರಶರಣಪರತಂತ್ರಸ್ವವರ್ತನ ೪೩
ಹಿತಶೈವಮಹಿಮಾನುಭಾವಲೋಕೈಕಪೂಜಿತ
ಪಂಡಿತಾರ್ಚಿತಸತ್ಪಾದಜ್ಞಾತವೇದಶುಭಾನ್ವಿತ ೪೪
ಪಂಡಿತಾರಾಧ್ಯ ಸದ್ಭಕ್ತಿಸಾನ್ನಿಧ್ಯಶಿವತತ್ಪರ
ವೀರಾವತಾರಚಿತ್ಸೌಖ್ಯೋದಾರಸದ್ಧರ್ಮವತ್ಸಲ ೪೫

ಯಶಃಪ್ರಪೂರ್ತೇ ವಿಬುಧಚಕ್ರವರ್ತಿನ್ಮಹೋದಯ
ಸ್ಮೃತಿ ಮಾತ್ರೇಣಭವತೋಧ್ವಸ್ತಾಃ ಕಿಂನಾನ್ಯವಾದಿನಃ ೪೬
ತ್ವನ್ನಾಮಮಾತ್ರ ಶ್ರವಣಾನ್ನಷ್ಟಾದುಸ್ಸಮಯಾನ ಕಿಂ
ಭವನ್ಮಾಹಾತ್ಮ್ಯ ವಿಸ್ತಾರೇ ಕಿಯಂತತ್ಸಮಯಾಃ ಪರೇ ೪೭
ತ್ವದೀಯಮಹಿಮಾಬೌದ್ಧ ಘ್ರಾಣಸ್ಯೋಪರಿಶಸ್ತ್ರಿಕಾ
ಆರ್ಹತಾನಾಂ ಮಹಾದಂಡಃಪೃಷ್ಠವಂಶಪ್ರಹಾರಕಃ ೪೮
ಅಭೇದವಾದಿನಾಂ ಶೂಲಂ ಪಾಂಚರಾತ್ರಶಿರಶ್ಶಿಲಾ
ಏಕಾತ್ಮವಾದಿಹೃದಯಶಲ್ಯಮತ್ಯಂತದುಸ್ಸಹಂ ೪೯
ಲೋಕಾಯತಾನಾಂ ಮೂರ್ಖಾಣಾಂ ರಸನಾಭೇದಕಂಟಕಃ
ಕರ್ಮವಾದಿಮನೋಭೀತಿರ್ಬ್ರಹ್ಮವಾದಿದೃಶೋಸ್ತೃಣಂ ೫೦
ಸನ್ಯಾಸಿನಾಂ ಕಾಲಮೃತ್ಯುಶ್ಶೂನ್ಯವಾದಿಗಲೋರಗಃ
ಭವತ್ಪುರೋಹಿ ಕೃತಿತಃ ಕಸ್ಸ್ಥಾತುಂ ಕ್ಷಮತೇವಿಭೋಃ ೫೧
ತಾರ್ಕಿಕೋವಾವದೂಕೋಪಿ ಕೃತಶಾಸ್ತ್ರಪರಿಶ್ರಮಃ
ಏತಾದೃಶಾನ ಸದ್ವಾದಾನ್ಸ್ಪಷ್ಟೀಕರ್ತುಂವಯಂ ಕ್ಷಮಾಃ ೫೨
ಭವತ್ಪಾದಪ್ರಭಾವಾತ್ಕಿಂ ಗಂತವ್ಯಂ ಭವತಾಮಿತಿ
ಉಕ್ತ್ವಾವನಮತ್ಸುಶಿಷ್ಯೇಷುವ್ಯಾಸಸ್ತೋತ್ರಮನಿಂದಿತಂ ೫೩
ದಕ್ಷಾಧ್ವರಂ ಶಾರಭಂಚ ಗಣಾಡಂಬರಮಾದರಾತ್
ಪಠತ್ಸ್ವತ್ಯಂತ ಸಂತೋಷಾತ್ಸಂಸ್ತುವತ್ಸ್ವಪಿ ವಂದಿಷು ೫೪
ಶ್ರೀರುದ್ರಮಹಿಮಾನಂಚ ಶತಕಂ ಗದ್ಯಪಂಚಕಂ
ಪ್ರಭೂತಹರ್ಷೇಣ ಶಿವತತ್ವಸಾರಮುಖಾನ್ಯಪಿ ೫೫
ಹೃದ್ಯಪದ್ಯಾನಿಕವಿಷು ಪಠತ್ಸುನಿಜಪಾರ್ಶ್ವಯೋಃ
ಸಂಸಾರಮಾಯಾಸ್ತವನ ಪದಾನಿ ಗುರುಹರ್ಷತಃ ೫೬
ನೀರಾಜನಪದಾನ್ಯುದ್ಯದಾನಂದಾಖ್ಯಪದಾನ್ಯಪಿ
ಶಂಕರಾಖ್ಯಪದಾದೀನಿ ತತ್ಕೃತಾನ್ಯಾಂಧ್ರಭಾಷಯಾ ೫೭
ವಿವಿಧಾನಿಪದಾನ್ಯುಚ್ಚೈರ್ಗಾಯಂತೀಷುಜನಾಲಿಷು
ಋಗ್ವೇದರುದ್ರಸೂಕ್ತಾನಿ ಪವಮಾನಾದಿಕಾನ್ಯಪಿ ೫೮
ನಮಕಂಚಮಕಂಚೈವಯಾಜುಷಂ ಬ್ರಹ್ಮಪಂಚಕಂ
ರುದ್ರಪ್ರಶಂಸಾಪರಾಣಿ ಸಾಮವೇದವಚಾಂಸ್ಯಪಿ ೫೯
ರುದ್ರಸೂಕ್ತಾವಳಿಂ ದಿವ್ಯಾಮಾಥರ್ವಣಶಿರಶ್ಶಿಖಾಂ
ಅತಿಖ್ಯಾತಾನಘೋರಾದಿಮಂತ್ರಾನ್ಪರಮ ವೈದಿಕಾನ್ ೬೦
ಕಿಂಚಮಾನಾದನಂತಾವೈವೇದಾ ಇತ್ಯಾಗಮಾತ್ಮಕಾತ್
ಶ್ಯಾಮಾಮಾಧ್ಯಂದಿನಾಃ ಕಾಣ್ವಾಶ್ಚರ್ಚಕ ಶ್ರವಣಂ ತಥಾ ೬೧

ವಾರ್ತಾಂತವೇಯಾ ಓಖೀಯಾ ದಂಡಿಕೌಂಡಲಶಾಕಲಾಃ
ಶಾನೂಯಣೀಯಾ ಮಾಂಡೂಕಾಲಾಂಗಲಾ ಭಾಷ್ಕಲಾಭಿಧಾಃ ೬೨
ಮೈತ್ರಾಯಣೀಯಾ ವೈನೇಯಾ ವೈಧೇಯಾ ದೇವದರ್ಶಿನಃ
ರಾಮಾಯಣೀಯಾಸ್ಸಾಂಖ್ಯಾಯನೀಯಾಶೌನಕಿನಸ್ತಥಾ ೬೩
ಶಾಬಾಯಣೀಯಾಶೌಕ್ಲೇಯಾ ಕಾಪಾಲಾಗಾಲವಾಸ್ತಥಾ
ದುಂದುಭಿರ್ದೇವದರ್ಶೀಚ ಕ್ವಾಂತಾ ಓಂತಾಶ್ಚ ಖಲ್ವಲಾಃ ೬೪
ಕಠಾಃ ಪ್ರಾಚ್ಯಕಠಾವಾರ ಕ್ರಮಾವೈ ಜವನಾವುಕಾಃ
ಪಾರಾಯಣೀಯಾ ಬೌಧೇಯಾ ಖಾಂಡಿಕೀಯಾಸ್ತಥೈವಚ ೬೫
ಇತ್ಯಾದ್ಯಾಶ್ಚರಣವ್ಯೂಹೇಶಾಖಾಭೇದಾಃ ಪ್ರಕೀರ್ತಿತಾಃ
ತೇಷೂಪದಿಷ್ಟಸೂಕ್ತಾನಿ ಕೈವಲ್ಯೋಪನಿಷದ್ಯಪಿ ೬೬
ಕಾಲಾಗ್ನಿರುದ್ರಜಾಬಾಲಬ್ರಹ್ಮಾತ್ಮೋಪನಿಷತ್ಸ್ವಪಿ
ಬೃಹದಾರಣ್ಯಕೇತದ್ವಚ್ಛಿವಸಂಕಲ್ಪಕೇಷುಚ ೬೭
ಗರ್ಭಹಂಸೋಪನಿಷದೋರ್ಯದ್ವಚ್ಛೈವ ಸರ್ವುವಚಃ
ಪಠತ್ಸುತತ್ತತ್ಸಕಲಂ ಸ್ವಾಧ್ಯಾಯಶ್ರಮಶಾಲಿಷು ೬೮

ಮೇಲಿನ ಉದ್ಧರಣಗಳಿಂದ ಈ ಮೂರು ಕೃತಿಗಳಲ್ಲಿನ ನಿಕಟಸಾಮ್ಯವನ್ನು ಗುರುತಿಸಬಹುದಾಗಿದೆ. ಪಾಲ್ಕುರಿಕೆ ಸೋಮನಾಥನ ತೆಲುಗು ಪಂಡಿತಾರಾಧ್ಯ ಚರಿತೆಯನ್ನು ಕನ್ನಡದ ನೀಲಕಂಠಾಚಾರ್ಯನೂ ಸಂಸ್ಕೃತದ ಗುರುರಾಜಕವಿಯೂ ಅಕ್ಷರಶಃ ಅನುಸರಿಸಿದ್ದಾರೆ. ಮೂಲ ಕಥೆಯಲ್ಲಿ ಈ ಇಬ್ಬರು ಕವಿಗಳು ಯಾವ ಬದಲಾವಣೆಗಳನ್ನೂ ಮಾಡಿಕೊಂಡಿಲ್ಲ. ಆದರೆ ವರ್ಣನಾಭಾಗಗಳಲ್ಲಿ ಇವರು ಅಲ್ಪಸ್ವಲ್ಪ ಸ್ವಾತಂತ್ರ್ಯವನ್ನು ವಹಿಸಿದ್ದಾರೆ. ಪುರಾತನ ಪ್ರಕರಣದಲ್ಲಿ ಬರುವ ದಸರಯ್ಯನ ಕಥೆ, ಗುರುಭಕ್ತಾಂಡಾರಿ ಚರಿತೆ ಇವೇ ಮೊದಲಾದುವನ್ನು ಪರಿಶೀಲಿಸಬಹುದು.

ಕನ್ನಡ ಪಂಡಿತಾರಾಧ್ಯ ಚರಿತೆಯ ವಾದಪ್ರಕರಣದ ಜೈನವಾದ ನಿರಸನದಲ್ಲಿ ಬರುವ ನಾಭಿರಾಜ ತನೂಜನ ಕಥೆ ತೆಲುಗಿನ ಪಂಡಿತಾರಾಧ್ಯ ಚರಿತೆ ಮತ್ತು ಸಂಸ್ಕೃತ ಪಂಡಿತಾರಾಧ್ಯ ಚರಿತಂ ಇವುಗಳಲ್ಲಿ ಇಲ್ಲ. ಇದೇ ವಾದಪ್ರಕರಣದಲ್ಲಿ ಬರುವ ಅಸ್ಥಿ ಚರ್ಮ ಭಿಕ್ಷಾಟನ ವೃಷಭವಾಹನದ ಕಥೆಯಲ್ಲಿನ ಸಂಧಿಗಳಿಗೂ ಸಂಸ್ಕೃತ ಪಂಡಿತಾರಾಧ್ಯ ಚರಿತ್ರೆಯಲ್ಲಿನ ಸಂಧಿಗಳಿಗೂ ವ್ಯತ್ಯಾಸವಾಗಿದೆ. ನಂಬಿಯಣ್ಣನ ಕಥೆಯಲ್ಲಿ ಬರುವ ವೃದ್ಧ ವಿಪ್ರನ ಗೊಡ್ಡಾಟ ಹರಿಹರನಲ್ಲಿ ವಿವಾಹ ಮಂಟಪದಲ್ಲಿ ನಡೆದರೆ ಈ ಮೂರೂ ಕಾವ್ಯಗಳಲ್ಲಿ ಉಪನಯನ ಮಂಟಪದಲ್ಲಿ ನಡೆಯುತ್ತದೆ. ಈ ಮೇಲಿನ ಒಂದೆರಡು ಅಲ್ಪ ಬದಲಾವಣೆಗಳನ್ನು ಬಿಟ್ಟರೆ ಉಳಿದೆಲ್ಲ ಅಂಶಗಳಲ್ಲೂ ಈ ಎಲ್ಲ ಕೃತಿಗಳಿಗೂ ಸಂಪೂರ್ಣ ಸಾಮ್ಯವಿದೆ. ಒಂದೇ ಮಾತಿನಲ್ಲಿ ಹೇಳುವುದಾದರೆ ಪಾಲ್ಕುರಿಕೆ ಸೋಮನಾಥನ ಪಂಡಿತಾರಾಧ್ಯ ಚರಿತೆ ದ್ವಿಪದಿಯಲ್ಲಿರುವುದು ನೀಲಕಂಠಾಚಾರ್ಯನ ಆರಾಧ್ಯ ಚರಿತೆಯಲ್ಲಿ ಷಟ್ಪದಿಯಲ್ಲಿಯೂ ಗುರುರಾಜಕವಿಯ ಪಂಡಿತಾರಾಧ್ಯ ಚರಿತದಲ್ಲಿ ಸಂಸ್ಕೃತ ಶ್ಲೋಕಗಳಲ್ಲಿಯೂ ಮೈವೆತ್ತಿದೆ.

ಸಂಸ್ಕೃತ ಪಂಡಿತಾರಾಧ್ಯ ಚರಿತಂ ಕಾವ್ಯದ ಕರ್ತೃ ಗುರುರಾಜ ಕವಿ. ಇವರ ತಾತಂದಿರು ವೀರಶೈವ ಗುರುವರ್ಯರೂ ಜಗದ್ವಿಖ್ಯಾತರೂ ಆದ ಹುಲಿಯೂರು ನಿರಾಳಾರ್ಯರು. ಇವರು ಷಟ್ಸ್ಥಲಜ್ಞಾನ ಸಂಪತ್ತಿನಿಂದ ಸಂಸಾರಭ್ರಾಂತಿಯನ್ನು ದೂರೀಕರಿಸಿದ್ದರು. ಷಡಕ್ಷರೀ ಮಂತ್ರಾರ್ಥವಿಚಾರತತ್ಪರರಾಗಿದ್ದರು. ವೇದಾರ್ಥವಿಸ್ತರಣದಲ್ಲಿ ಪಂಡಿತರು. ಪುರಾಣಾರ್ಥ ವಿವೇಚನದಲ್ಲಿ ಸಮರ್ಥರು. ಕ್ರಿಯಾ ಚರ್ಯಾ ಯೋಗ ಜ್ಞಾನವೆಂಬ ಪಾದ ಚತುಷ್ಟಯದ ಪರಿಜ್ಞಾನದಿಂದ ಮಂಡಿತರಾಗಿದ್ದರು. ಮಂತ್ರೋದ್ಧರಣ ರಹಸ್ಯವನ್ನರಿತು ಮಂತ್ರಾರ್ಥ ಬೋಧಕರಾಗಿದ್ದರು. ಹರಚರಗುರುಪೂಜಾನಿರತರಾಗಿಯೂ ಸತ್ಯವಚಸ್ಕ ರಾಗಿಯೂ ಗುರುಲಿಂಗಜಂಗಮ ಪಾದೋದಕ ಪ್ರಸಾದೋಪಭೋಗದಿಂದ ಪರಿಶುದ್ಧವಾದ ಶರೀರವುಳ್ಳವರಾಗಿದ್ದರು. ಪರಶಿವನೇ ಈ ಗುರುಸ್ವರೂಪದಿಂದ ಭೂತಲದಲ್ಲಿ ಅವತರಿಸಿ ದನೋ ಎಂಬಂತಿದ್ದರು. ಇಂತಹ ಆರಾಧ್ಯ ಶ್ರೇಷ್ಠರಿಗೆ ಮಲ್ಲಪಾರ್ಯನೆಂಬ ಗುರೂತ್ತ ಮನು ಮಗನಾಗಿದ್ದನು. ಆತನು ಸದಯಾಂತಃಕರಣ, ಶಾಂತಿಸಂಪನ್ನ, ಸಚ್ಚರಿತ್ರ. ಗುರುಲಿಂಗಜಂಗಮ ಪೂಜಾಸಕ್ತನಾಗಿ ಅವರ ಶುದ್ಧ ಸಿದ್ಧ ಪ್ರಸಿದ್ಧ ಪ್ರಸಾದವನ್ನು ಸೇವಿಸು ವುದರಿಂದ ಪರಿಶುದ್ಧವಾದ ಕಳೇಬರವುಳ್ಳವನಾಗಿದ್ದನು. ಅಂತರ್ ಬಹಿರ್ ಲಿಂಗಾರ್ಚನ ವಿಧಾನವನ್ನರಿತವನಾಗಿದ್ದನು. ಸಕಲ ಜನರಿಗೆ ಹಿತಕಾರಿಯೂ, ಷಟ್ಸ್ಥಲಜ್ಞಾನ ಸಂಪ ನ್ನನೂ ಷಡ್ಲಿಂಗ ಷಡಂಗ ಷಟ್ಪದಾರ್ಥಗಳ ವಿವೇಕವುಳ್ಳವನೂ ಆಗಿದ್ದನು. ಷಡಕ್ಷರೀ ಮಂತ್ರಾನುಷ್ಠಾನನಿಷ್ಠನೂ ಷಟ್ ಶಾಸ್ತ್ರಾರ್ಥವಿಚಾರಕುತೂಹಲನೂ . ಪಂಚಾಕ್ಷರೀ ಮಂತ್ರಸಿದ್ಧಿಯುಳ್ಳವನೂ ಆಗಿದ್ದನು. ಶ್ರೀ ಮಲ್ಲಿಕಾರ್ಜುನ ಪಂಡಿತಾರಾಧ್ಯರ ಅವತಾರ ಮೂರ್ತಿಯಾಗಿದ್ದನು. ಇಂತಹ ಗುರೂತ್ತಮನ ಮಗನೂ ಶಿವಶಾಸ್ತ್ರಾರ್ಥವಿಚಾರ ಶೀಲನೂ ವೀರಮಾಹೇಶ್ವರಕೃಪಾಸುಧಾಬ್ಧಿ ಕ್ರೀಡಿತನೂ ಶಿವಲಿಂಗಾರ್ಚನಾಸಕ್ತನೂ ಗುರುಸೇವಾನಿರತನೂ ಜಂಗಮಕೃಪಾಪಾತ್ರನೂ ಬಸವೇಶನ ಸೇವಕನೂ ಆದ ಗುರು ರಾಜನೆಂಬುವನು. ಸಕಲ ಗುರುಗಳಿಗೂ ರಾಜನಾಗಿದ್ದ ಮದ್ಗುರುವಿನ ನಾಮವನ್ನೇ ಪಡೆದವನಾದುದರಿಂದ ಗುರುರಾಜನೆಂಬ ಹೆಸರನ್ನು ಹೊಂದಿದ್ದನು. ಈ ಗುರುರಾಜನಿಗೆ ಬಸವಾರಾಧ್ಯನೆಂಬ ಮಗನಿದ್ದನು. ಗುರುರಾಜಕವಿ 'ಪಾಲ್ಕುರಿಕೆ ಸೋಮನಾಥನ ಪಂಡಿತಾರಾಧ್ಯ ಚರಿತೆ ಆಂಧ್ರಭಾಷೆಯಲ್ಲಿ ರಚಿತವಾಗಿರುವುದರಿಂದ ಅದು ಆ ದೇಶದಲ್ಲಿ ಮಾತ್ರ ಪ್ರಖ್ಯಾತವಾಗಿರುವುದು. ಅದನ್ನು ಸಕಲ ದೇಶೀಯರಿಗೂ ಉಪಯುಕ್ತ ವಾಗಲೆಂದು ಸಂಸ್ಕೃತ ಭಾಷೆಯಲ್ಲಿ ರಚಿಸಿದುದಾಗಿ ಹೇಳಿಕೊಂಡಿದ್ದಾನೆ. ಇದರಲ್ಲಿ ಪಾಲ್ಕುರಿಕೆ ಸೋಮೇಶ್ವರರು ಹೇಳಿರುವ ಅಭಿಪ್ರಾಯಗಳಿವೆಯೇ ಹೊರತು ಸ್ವಬುದ್ಧಿ ಕಲ್ಪಿತ ವಿಷಯಗಳೇನೂ ಇರುವುದಿಲ್ಲ ಎಂದಿದ್ದಾನೆ. ಈ ಗುರುರಾಜ ಕವಿ ಕ್ರಿ.ಶ. ೧೫ ನೆಯ ಶತಮಾನದ ಮಧ್ಯಭಾಗದಲ್ಲಿದ್ದನೆಂದು ಈ ಕೃತಿಯ ಸಂಪಾದಕರು ಅಭಿಪ್ರಾಯ ಪಟ್ಟಿದ್ದಾರೆ.[1] ಗುರುರಾಜಕವಿಯ ಸಂಸ್ಕೃತ ಪಂಡಿತಾರಾಧ್ಯ ಚರಿತಕ್ಕೆ ಮಲ್ಲಿಕಾರ್ಜುನ

[1] ಪಂಡಿತಾರಾಧ್ಯ ಚರಿತಂ : ಸಂ. ಎನ್. ಆರ್. ಕರಿಬಸವಶಾಸ್ತ್ರಿ, ಪ್ರಸ್ತಾವನೆ, ಪುಟ vi

ಕವಿ ಕನ್ನಡ ಟೀಕೆಯನ್ನು ಬರೆದಿರುವುದಾಗಿ ಹೇಳಿದ್ದಾರೆ. ಆ ಗ್ರಂಥ ಉಪಲಬ್ಧವಿಲ್ಲ.[1] ಆಸ್ಥಾನವಿದ್ವಾನ್ ಎನ್. ಆರ್. ಕರಿಬಸವಶಾಸ್ತ್ರಿಗಳು 'ಭಾವಮಂಜರಿ' ಎಂಬ ಹೆಸರಿನಲ್ಲಿ ಇದಕ್ಕೆ ಒಂದು ಟೀಕನ್ನು ಬರೆದಿದ್ದಾರೆ. ಅದನ್ನು:

ರುಚಿರತರ ಪಂಡಿತಾರಾ
ಧ್ಯ ಚರಿತ್ರಕ್ಕಿದಕೆ ಭಾವಮಂಜರಿವೆಸರಿಂ
ರಚಿಸಿರ್ಪೆಂ ಟಿಪ್ಪಣಮಂ
ಪ್ರಚಲಿತ ಕರ್ಣಾಟಭಾಷೆಯಿಂ ಸೊಂಪೆಸೆಯಲ್

ಈ ಪದ್ಯದಲ್ಲಿ ಹೇಳಿಕೊಂಡಿದ್ದಾರೆ.[2]

ಕನ್ನಡದಲ್ಲಿ ಮಲ್ಲಿಕಾರ್ಜುನ ಪಂಡಿತಾರಾಧ್ಯರಿಗೆ ಸಂಬಂಧಿಸಿದ ಮಾಹಿತಿಗಳು ಉತ್ತರದೇಶದ ಬಸವಲಿಂಗನ ಬಸವೇಶ್ವರ ಪುರಾಣದ ಕಥಾಸಾಗರ, ಪಾಲ್ಕುರಿಕೆ ಸೋಮನಾಥನ ಪಾಲ್ಕುರಿಕೆ ಸೋಮೇಶ್ವರ ಪುರಾಣ, ಶಾಂತಲಿಂಗದೇಶಿಕನ ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರರತ್ನಾಕರ, ಲಕ್ಕಣ್ಣದಂಡೇಶನ ಶಿವತತ್ವ ಚಿಂತಾಮಣಿ, ಪರ್ವತೇಶನ ಚತುರಾಚಾರ್ಯ ಪುರಾಣ, ಗುಬ್ಬಿಯ ಮಲ್ಲಣ್ಣನ ವೀರಶೈವಾಮೃತ ಮಹಾಪುರಾಣ, ಸಿದ್ಧನಂಜೇಶನ ಗುರುರಾಜಚಾರಿತ್ರ, ಸೋಮನ ಚತುರಾಚಾರ್ಯ ಪ್ರಬಂಧ, ಎಳಂದೂರು ಹರೀಶ್ವರನ ಪ್ರಭುದೇವರ ಪುರಾಣ ಇವೇ ಮೊದಲಾದ ಪ್ರಾಚೀನ ಕೃತಿಗಳಲ್ಲಿ ಕಂಡುಬರುತ್ತವೆ. ಲಿಂ|| ಡಾ|| ಫ. ಗು. ಹಳಕಟ್ಟಿ ಅವರ ಶಿವಶರಣರ ಚರಿತ್ರೆಗಳು ಮತ್ತು ಅಮರ ಗಣಾಧೀಶ್ವರರ ಚರಿತೆಗಳಲ್ಲಿಯೂ ಪಂಡಿತಾರಾಧ್ಯರ ಸಂಗತಿಗಳಿವೆ.

ಪಂಡಿತಾರಾಧ್ಯರ ಚರಿತ್ರೆಯನ್ನು ನಿರೂಪಿಸಿರುವ ಕನ್ನಡ ಕಾವ್ಯಗಳಲ್ಲಿ ಗುಬ್ಬಿಯ ಮಲ್ಲಣಾರ್ಯನ ವೀರಶೈವಾಮೃತ ಮಹಾಪುರಾಣ ಮತ್ತು ಸಿದ್ಧನಂಜೇಶನ ಗುರುರಾಜ ಚಾರಿತ್ರ ಉಲ್ಲೇಖಾರ್ಹವಾದುವು. ವೀರಶೈವಾಮೃತ ಮಹಾಪುರಾಣದ ಎಂಟನೆಯ ಕಾಂಡ ಐದು ಆರು ಮತ್ತು ಏಳನೆಯ ಸಂಧಿಗಳಲ್ಲಿ ಪಂಡಿತಾರಾಧ್ಯರ ಚರಿತ್ರೆ ಸಂಪೂರ್ಣವಾಗಿ ನಿರೂಪಿತವಾಗಿದೆ. ಪಂಡಿತಾರಾಧ್ಯ ಚರಿತ್ರೆಯ ಐದು ಪ್ರಕರಣಗಳೂ ಈ ಮೂರು ಸಂಧಿಗಳಲ್ಲಿ ಅಡಕವಾಗಿವೆ. ಮೂಲದ ಯಾವೊಂದು ಪ್ರಕರಣವನ್ನೂ ಬಿಡದೆ ಸಂಕ್ಷೇಪವಾಗಿ ನಿರೂಪಿಸಿದ್ದಾನೆ ಗುಬ್ಬಿಯ ಮಲ್ಲಣಾರ್ಯ. ಗುರುಭಕ್ತಾಂಡಾರಿ ಚರಿತೆಯಲ್ಲಿ ಬರುವ ಶಿವರಾತ್ರಿಯ ಕಥೆಯ ಮೂಲವನ್ನು ಒಂದೇ ಒಂದು ಪದ್ಯದಲ್ಲಿ ಹೇಳಿರುವುದೇ ಗುಬ್ಬಿಯ ಮಲ್ಲಣಾರ್ಯ ಮಾಡಿರುವ ಹೆಚ್ಚಿನ ಬದಲಾವಣೆ. ಆ ಪದ್ಯ ಇದು :

ಶಕಟಮುಖ ವಿಕಟಾಂಗರಾ ಕ್ರೋಧಿಸುತರು ಸುರ
ನಿಕರಕ್ಕೆ ಮುನಿದು ಯಜ್ಞಮನಿಕ್ಕಲೊಗೆದು ಹುಲಿ
ಮುಖದಿಂದ ಹೊರಡುತಿರೆಯಾ ಮಾಘಕೃಷ್ಣ ಚಾತುರ್ದಶಿಯ ದಿವಸದಲ್ಲಿ

---

[1] ಪಂಡಿತಾರಾಧ್ಯ ಚರಿತಂ : ಸಂ. ಎನ್. ಆರ್. ಕರಿಬಸವಶಾಸ್ತ್ರಿ, ಪ್ರಸ್ತಾವನೆ, ಪುಟ viii

[2] ಅದೇ: ಮುನ್ನುಡಿ, ಪದ್ಯ ೨

ಸಕಲ ಸುರರೆಸಗೆ ಶಿವರಾತ್ರಿಯ ನಿರಂಜನಾ
ಧಿಕ ರುದ್ರನೀಶನಾಣತಿಯಿಂದ ಕೊಂದುದೇ
ಸುಕಥೆಯೆಂದಿಂದಾಯ್ತು ಶಿವರಾತ್ರಿಯೆಂದಳಂದಾ ಪ್ರೌಢನತಿಯವಂಗೆ

[ವೀರಶೈವಾಮೃತ ಮಹಾಪುರಾಣ ೮-೫-೪೩]

ಪಾಲ್ಕುರಿಕೆ ಸೋಮನಾಥನ ಪಂಡಿತಾರಾಧ್ಯ ಚರಿತೆಯ ಪುರಾತನ ಪ್ರಕರಣದಲ್ಲಿನ "ನಿವೇವಚ್ಚಿಂ ಬುಲಿನಲೆ ನೀ ಶಿವರಾತ್ರಿ" ಎಂಬ ವಾಕ್ಯ ನೀಲಕಂಠಾಚಾರ್ಯನ ಆರಾಧ್ಯ ಚರಿತೆ (೨-೭-೧೧) ಯಲ್ಲಿ "ಮುನಿದ ಪುಲಿಯಂತೆ, ಶಿವರಾತ್ರಿ ಬಂದಿತ್ತು" ಎಂದೂ ಗುಬ್ಬಿಯ ಮಲ್ಲಣಾರ್ಯನ ವೀರಶೈವಾಮೃತ ಮಹಾಪುರಾಣ (೮-೫-೪೫) ದಲ್ಲಿ "ಆ ಶಿವನ ರಾತ್ರೆ ಹುಲಿಯಂದದಿಂ ಬಂದುದು" ಎಂದೂ ಬಳಕೆಗೊಂಡಿದೆ.

ಸಿದ್ಧನಂಜೇಶನ ಗುರುರಾಜ ಚಾರಿತ್ರದಲ್ಲಿ ಎರಡನೆಯ ಸಂಧಿ ೨೧ ರಿಂದ ೪೦ನೆಯ ಪದ್ಯದವರೆಗೆ ಪಂಡಿತಾರಾಧ್ಯರ ಕಥೆ ಸಂಕ್ಷೇಪವಾಗಿಯಾದರೂ ಸಮಗ್ರವಾಗಿ ನಿರೂಪಿತ ವಾಗಿದೆ. ಇನ್ನುಳಿದ ಕೃತಿಗಳಲ್ಲಿ ಪ್ರಾಸಂಗಿಕವಾಗಿ ಪಂಡಿತಾರಾಧ್ಯರ ಕಥೆ ಪ್ರಸ್ತಾಪಿಸಲ್ಪಟ್ಟಿದೆ ಒಟ್ಟಿನಲ್ಲಿ ಕನ್ನಡ ಕವಿಗಳು ಪಂಡಿತಾರಾಧ್ಯರ ಚರಿತ್ರೆಗೆ ಹೊಸವಿಷಯಗಳನ್ನು ಸೇರಿಸುವುದಕ್ಕಾಗಲಿ ಇರುವ ವಿಷಯಗಳನ್ನು ಬಿಡುವುದಕ್ಕಾಗಲಿ ಯತ್ನಿಸಲಿಲ್ಲ. ಸಂಗ್ರಹ ವಾಗಿ ಸಮಗ್ರವಾಗಿ ಪಂಡಿತಾರಾಧ್ಯರ ಕಥೆಯನ್ನು ಚಿತ್ರರಿಸಿದ್ದಾರೆ.

ಉತ್ತರದೇಶದ ಬಸವಲಿಂಗನ ಬಸವೇಶ್ವರ ಪುರಾಣದ ಕಥಾಸಾಗರ ಮತ್ತು ಶಾಂತ ಲಿಂಗದೇಶಿಕನ ಭೈರವೇಶ್ವರ ಕಾವ್ಯದ ಕಥಾಮಣಿಸೂತ್ರ ರತ್ನಾಕರಗಳಲ್ಲಿ ಉಕ್ತವಾಗಿರುವ ಪಂಡಿತಾರಾಧ್ಯರ ಸಂಗತಿಯನ್ನು ಯಥಾವತ್ತಾಗಿ ಕೊಡಲಾಗಿದೆ.

"ಕೈಲಾಸದಿಂದ ಶಿವನಪ್ಪಣೆ ಪಡೆದು ವರಾಲಪುರದಲ್ಲಿ ಭೀಮನಪಂಡಿತನೆಂಬ ಶೈವ ಬ್ರಾಹ್ಮಣನಿರ್ಪನು. ಆತನ ಸತಿ ಗೌರಾಂಬಿಕೆಯ ಗರ್ಭದಲ್ಲಿ ಹಾಲಸಮುದ್ರದಲ್ಲಿ ಹಂಸೆಯ ಮಱಿಯಿರ್ಪಂತೆ ಮೇರುವಿನ ಗುಹೆಯಲ್ಲಿ ಸಿಂಹದ ಶಿಶುವಿರ್ಪಂತೆ ಇದ್ದು ಉದಯವಾಗಲು ಮಲ್ಲಿಕಾರ್ಜುನಪಂಡಿತರೆಂಬ ಪೆಸರ ಕರೆದರು. ಬಳಿಕವರು ಪಲ್ಯಣಾ ಚಾರ್ಯರ ಕಯ್ಯ ವೀರಶೈವದೀಕ್ಷೆ ಪಡೆದು ಚರ್ಯಾತಿರಾಯನ ಮಗಳಂ ಮದುವೆಯಾಗಿ ಬಳಿಕ ಶಿಷ್ಯರ ಮಾಡಿಕೊಂಡರು. ರೇವಯ್ಯ ದೇವಯ್ಯ, ರೇಮಯ್ಯ ರೇಚಯ್ಯ, ವೆಲ್ಲ ಗೊಂಡದ ಮಹಾದೇವಯ್ಯ ಧನಳೇಶನಾಮಯ್ಯ ಡೋನಮಯ್ಯ ಮೊದಲಾದ ಶಿಷ್ಯರೂ ವೇದಾಗಮ ಪುರಾಣವ ಬಲ್ಲವರಾಗಿ ಅನ್ಯವಾದಿಗಳ ಗೆಲುವುತ್ತ ಇರಲು ಒಂದುದಿನ ವೇಲೆ ನಾಡ ಜೋಳನೆಂಬ ಜೈನನ ಗುರುವೆನಿಸುವ ಬೌದ್ಧಾರ್ಯನು ಜಿನನೆ ದೈವವೆಂದು ಹೇಳು ತ್ತಿರಲು ಅದಕ್ಕೆ ಪಂಡಿತಾರಾಧ್ಯರು ಶಿವನೇ ದೈವವೆಂದು ವೇದಾಗಮ ಪುರಾಣಗಳಿಂದ ಸಭೆ ಯಲ್ಲಿ ವಾದವ ಮಾಡಿ ಸೋಲಿಸಲು ಕಱುಬತನದಿಂದ ಅಲ್ಲಿರ್ದ ಮಲ್ಲಿಕಾರ್ಜುನನ ಲಿಂಗದ ದೀಪಮಾಲೆಯ ಕಲ್ಲಕಂಬವ ಕಿತ್ತುಕೊಂಡು ಹೋಗಿ ಬೌದ್ಧನ ಗುಡಿಯ ಮುಂದೆ ನೆಡಿ ಸಲು ಆ ರೇವಯ್ಯ ದೇವಯ್ಯಗಳು ಸಮುದ್ರದ ಗಡ್ಡೆಯಲ್ಲಿದ್ದ ಜಿನನ ಗುಡಿಯ ಮುಂದಿದ್ದ

ದೀಪದ ಕಂಬವ ಕಂಡು ಬೌದ್ಧನ ಕೊಂದು ಹೊಟ್ಟೆಯ ಸೀಳಿ ನಾಲಗೆಯ ಕೊಯ್ದು ಎದೆಯ ಮೇಲಿಟ್ಟು ಈತನ ಕೊಂದೆವೆಂದು ಓಲೆಯ ಬರೆದು ಹೆಣದ ಮೇಲಿಟ್ಟು ಕಂಬವ ಕಿತ್ತುಕೊಂಡು ಬಂದು ಮುನ್ನಿನಂತೆ ಶಿವಾಲಯದ ಮುಂದೆ ನೆಡಿಸಿದರು. ಆಗ ಬೌದ್ಧನ ಶಿಷ್ಯರದ ಕಂಡು ಆ ಓಲೆಯನೋದಿಕೊಂಡು ಪಂಡಿತಾರಾಧ್ಯರ ಶಿಷ್ಯರು ಕೊಂದರೆಂದು ವೇಲ್ನಾಡಚೋಳಗೆ ಹೇಳಲು ಆಗ ಅವರ ಕರೆಸಿ ನಮ್ಮ ಗುರುವ ಕೊಂದವರಾರೆಂದು ಕೇಳಲು ನಾವೆ ಕೊಂದೆವೆನಲು ಧರ್ಮಶಾಸ್ತ್ರವ ಬಲ್ಲವರ ಕರೆತರಿಸಿ ಏನಾಜ್ಞೆಯ ಮಾಡಬೇಕೆಂದು ಕೇಳಲು, ಬ್ರಾಹ್ಮಣಾದಿ ಚಂಡಾಲಾಂತ್ಯವಾದವರಿಗೆ ಆಜ್ಞೆಯುಂಟು ಶಿವಭಕ್ತರಿಗೆ ಆಜ್ಞೆಯ ಮಾಡಬಾರದೆಂದು ಶಾಸ್ತ್ರ ಸಮ್ಮತವು ಎಂದು ಹೇಳಲು ಅವರನ್ನುಲ್ಲಂಘಿಸಿ ಕಣ್ಣುಗಳ ತೆಗೆ ಎನಲು ಅದಕ್ಕೆ ನಖಚಾನವ ತರಲು ಕಯ್ಯಲ್ಲಿ ತೆಗೆದುಕೊಂಡು ವಿಭೂತಿಯ ತಳಿದು ಲಿಂಗಕ್ಕೆ ತೋಱಿ ದ್ರೋಹಿ ಕೋ ಎಂದು ಕೊಡಲು ಅದ ತೆಗೆದುಕೊಂಡು ಕಣ್ಣುಗಳ ತೆಗೆಯಲು ಮತ್ತೆ ಮತ್ತೆ ಬರುತ್ತಿರಲು ಅದ ಕೇಳಿ ಚೋಳನು ಕಣ್ಣೊಳಗೆ ಎಕ್ಕೆಯ ಹಾಲನೊಯ್ಯೆಂದು ಬೊಗಳಲು ಆಗ ಪ್ರತಿಜ್ಞೆಯ ಮಾಡಿದರು. 'ಎಲೆ ಶಿವನೆ ಇನ್ನು ನಮಗೆ ಕಣ್ಣ ಕೊಟ್ಟರೆ ನಿನಗೆ ಶಿವಗಣಂಗಳಾಣೆ' ಎನಲು ಆಗ ಕಣ್ಣುಗಳು ಬರುವುದು ನಿಂತವು. ಇನ್ನಿವನ ನೋಡಲಾಗದೆಂದು ಅಲ್ಲಿಂದ ಬಿಟ್ಟು ದ್ರಾಕ್ಷಾರಾಮಕ್ಕೆ ಹೋದರು. ಇತ್ತ ವೇಲ್ನಾಡ ಚೋಳನ ಸ್ವಪ್ನದಲ್ಲಿ ಶಿವನು ತ್ರಿಶೂಲದಲ್ಲಿ ತಿವಿಯಲು ಮೂಱು ಹುಣ್ಣಾಗಿ ವೆಗ್ಗಳಿಸಲು ಆ ಮಹಿಮನ ಕರೆತಂದರೆ ಒಳ್ಳಿತಾದೀತೆನಲು ಆಗ ಪರಿಚಾರಕನ ಕಳುಹಲು ಅವರ ಬಳಿಗೆ ಹೋಗಿ ಕೈಮುಗಿದು ನಿಂದು ಎಲೆ ಪಂಡಿತಾರಾಧ್ಯರೇ, ನಮ್ಮರಸು ನಿನಗೆ ಅರ್ಧರಾಜ್ಯವ ಕೊಟ್ಟು ದೀಕ್ಷೆಯಾದನೆಂಬುತಾನೆ ಎನಲು ಆ ಮಾತ ಕೇಳಿ ಕಿವಿಗಳ ಮುಚ್ಚಿಕೊಂಡು ಅವನ ಮುಖವ ನೋಡಲೊಲ್ಲೆವು ಹೋಗೆನಲು ಅವ ಬಂದು ಹಾಂಗೆ ಹೇಳಲು ಬಳಿಕ ವೇಲ್ನಾಡ ಚೋಳನು ಸಾಯಲು ಆಮೇಲೆ ಪಂಡಿತಾರಾಧ್ಯರು ಸಹಸ್ರಗಣಗಳ ನುತಿಸುವಾಗ ಶಿವನು ಪ್ರಸನ್ನವಾಗಿ ನಯನವ ಕೊಟ್ಟೆವೆನಲು ನಾವು ಒಲ್ಲೆವೆನಲು ಆಗ ಶಿವನು ಊರ್ಧ್ವಲೋಚನವ ಕೊಟ್ಟನು. ಅಂದು ಮೊದಲಾಗಿ ಊರ್ಧ್ವಲೋಚನದ ಪಂಡಿತಾರಾಧ್ಯರೆಂದು ಹೆಸರಾಯಿತು. ಬಳಿಕ ಬಸವೇಶ್ವರನು ಕಪ್ಪಡಿಗೆ ಹೋದದೆಂಬುದ ಕೇಳಿ ಶೋಕವ ಮಾಡುತ್ತಿರಲು ಆಗ ಬಸವಣ್ಣನು ಬಂದು ಸಂತೈಸಲು ಕೈಲಾಸಕ್ಕೆ ಹೋದರು."

(ಬಸವೇಶ್ವರ ಪುರಾಣದ ಕಥಾಸಾಗರ. ಪುಟ ೫೮–೫೯)

"ಎಲೆನಾಡ ಚೋಳನು ತನ್ನ ಗುರುವು ಬೌದ್ಧನ ಮಲ್ಲಿಕಾರ್ಜುನ ಪಂಡಿತರು ಕೊಲ್ಲಿಸಿದರೆಂದು ಅವರ ನಯನಕ್ಕೆ ಆಜ್ಞೆಯಂ ಮೂಱುವೇಳೆ ಮಾಡಲು, ಮತ್ತೆ ಶಿವಗಣಂಗಳ ಸ್ಮರಣೆಯಂ ಮಾಡಿ ನಯನಮಂ ಪಡೆದು ದ್ರಾಕ್ಷಾರಾಮಕ್ಕೆ ಪೋಗಲು ಇತ್ತ ಅವರ ಶಿಷ್ಯರು ಬಲದೇವಯ್ಯನೆಂಬ ವೀರಭಕ್ತರು, ಆ ಚೋಳನ ಕೊಲ್ಲಬೇಕೆಂದುರವಣಿಸಿ ಪೋಗುವಾಗ, ಶಿವನು ಅವನ ತ್ರಿಶೂಲದಿಂದಿಱಿದು, ಸ್ವಪ್ನದಲ್ಲಿ ಬಂದು ಬಲದೇವಗೆ ಪೇಳಿದ: "ಭೂಪನ ಮಸಲಿ ಕತಕೊಂಡು ಬರಪೇಳೆನಲು", ಅವರು "ಒಲ್ಲೆ"ವೆನೆ, ಅತ್ತಾ

ಚೋಳ ಸತ್ತನು, ಬಲದೇವಯ್ಯಗಳು ತಮ್ಮ ಗುರು ಪಂಡಿತಾರಾಧ್ಯರ ಬಳಿಗೆ ಪೋಗಿ ಸುಖ ದಲ್ಲಿರ್ದರು.”

(ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರರತ್ನಾಕರ : ಭಾಗ ೧ ಪುಟ ೨೬೧)

“ಪಾನುಗಲ್ಲೆಂಬ ಪಟ್ಟಣದಲ್ಲಿ, ವೆಲೆನಾಡ ಚೋಳನೆಂಬ ವೈಷ್ಣವನು ರಾಜ್ಯವನಾಳು ತ್ತಿರುವಾಗ, ಅವನ ಗುರು ಬೌದ್ಧಾಚಾರ್ಯನೆಂಬವನು ಮಲ್ಲಿಕಾರ್ಜುನನ ದೀಪಮಾಲೆಯ ಕಂಭವ ಕಿತ್ತು ವಿಷ್ಣುವಿನ ಗುಡಿಯ ಮುಂದೆ ನಿಲಿಸಲಾಗ, ಮಲ್ಲಿಕಾರ್ಜುನ ಪಂಡಿತರ ಶಿಷ್ಯರು, ರೇಮಯ್ಯ ದೇವಯ್ಯಗಳು ಸಾರಿ ವಾಲಿಯಂ ಕಟ್ಟಲು, ವೈಷ್ಣವ ಚೋಳ ಮಲ್ಲಿ ಕಾರ್ಜುನ ಪಂಡಿತರಿಗೆ ವಾಲಿಯ ತೋರಿಲನರೆಂದರು: ಶಿವಾಚಾರವ ಮಾಡುವರು. ನಮ್ಮ ವರೆನಲು, ಚೋಳನವರಿಗೆ ಮೂರುವೇಳೆ ಕಣ್ಣಿಗಾಜ್ಞೆಯಗೆಯ್ಯಲು, ಮಲ್ಲಿಕಾರ್ಜುನ ಪಂಡಿತರು ಕಣ್ಣಪಡದು ಅವನ ಸೀಮೆಯಂ ಬಿಟ್ಟು ಪೋಗಲತ್ತ, ಇತ್ತ ರೇವಯ್ಯ ದೇವಯ್ಯಗಳು ಪರವಾದಿ ಬೌದ್ಧನ ಕೊಲ್ಲುವೆನೆಂದು ಸಾಧಿಸುವಾಗ ಅವನು ಸಮುದ್ರ ದೊಳಗಿರ್ದ ಬೌದ್ಧಪ್ರತುಮೆಗೆ ಪೂಜೆಯ ಮಾಡುವದಕ್ಕೆ ಬಂದಿರಲು, ಶರಣರು ಸಮುದ್ರ ದಲ್ಲಿಗೆ ಬಂದು ದಾರಿಯ ಕೊಡು ಎನಲಾಗ, ನದಿ ದಾರಿಯ ಕೊಡಲು ಪೋಗಿ, ಎಲೆನಾಡ ಚೋಳನ ಗುರುವಾದ ಬೌದ್ಧನ ತಲೆಯ ಕೊಯ್ದು ಎದೆಯ ಮೇಲಿಟ್ಟು, ಕರವ ಕೊಯ್ದು ಶಿರದ ಮೇಲಿಟ್ಟು, ಕಂಭನಂ ತಂದು ಮರಳಿಲಿಂಗದ ಗುಡಿಯ ಮುಂದೆ ನಟ್ಟು, ಪಂಡಿತಾ ರಾಧ್ಯರಿದ್ದಲ್ಲಿಗೆ ಪೋಗಿ ಸುಖದಲ್ಲಿರ್ದರು.”

(ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರರತ್ನಾಕರ : ಭಾಗ ೨ ಪುಟ ೧೯)

ತೋಂಟದ ಸಿದ್ಧಲಿಂಗ ಶಿವಯೋಗಿ ವಿರಚಿತ ಪಾಲ್ಕುರಿಕೆ ಸೋಮೇಶ್ವರ ಪುರಾಣ ದಲ್ಲಿ ಏಳನೆಯ ಸಂಧಿ ೮೯ನೆಯ ಪದ್ಯದಿಂದ ೧೨೦ನೆಯ ಪದ್ಯದವರೆಗೆ ಪಂಡಿತಾರಾಧ್ಯರ ಕಥೆ ಚಿತ್ರರಿಸಲಾಗಿದೆ. ಆದರೆ ವೆಲ್ನಾಡಚೋಳನ ಆಸ್ಥಾನದಲ್ಲಿ ಬೌದ್ಧಗುರುವಿನೊಡನೆ ಪಂಡಿತಾರಾಧ್ಯರು ಮಾಡಿದ ವಾದದಿಂದ ಮುಂದಿನ ಕಥೆ ಈ ಭಾಗದಲ್ಲಿ ಬಂದಿದೆ. ಇದಾದ ಮೇಲೆ ಸಂಕ್ಷೇಪವಾಗಿ ಪಂಡಿತಾರಾಧ್ಯರ ಕಥೆ ನಿರೂಪಿತವಾಗಿದೆ.

ಪಾಲ್ಕುರಿಕೆ ಸೋಮನಾಥನ ಪಂಡಿತಾರಾಧ್ಯ ಚರಿತೆ ಒಂದು ಅಭೂತಪೂರ್ವಕೃತಿ. ಈ ತೆಲುಗು ಕಾವ್ಯದ ಸ್ವಾರಸ್ಯ ಇನಿತೂ ಕೆಡದಂತೆ ನೀಲಕಂಠಾಚಾರ್ಯ ಕನ್ನಡಕ್ಕೆ ತಂದು ಕೊಟ್ಟಿದ್ದಾನೆ. ಈತನಿಗೆ ಕನ್ನಡ ಸಂಸ್ಕೃತ ಭಾಷೆಗಳಲ್ಲಿ ಅಪರಿಮಿತ ಪಾಂಡಿತ್ಯವಿದ್ದಂತೆಯೆ ತೆಲುಗಿನಲ್ಲಿಯೂ ಸಾಕಷ್ಟು ಪರಿಶ್ರಮ ಇದ್ದಿರಬೇಕೆಂಬುದು ಅಂಗೈನೆಲ್ಲಿಯಂತೆ ಸ್ಪಷ್ಟ ವಾಗಿದೆ. ಏಕೆಂದರೆ ತೆಲುಗಿನ ಕೃತಿಯನ್ನು ಆಧರಿಸಿ ಕನ್ನಡದಲ್ಲಿ ಈ ಕೃತಿಯನ್ನು ರಚಿಸ ಬೇಕಾದರೆ ತೆಲುಗಿನಲ್ಲಿ ಸಾಕಷ್ಟು ಪಾಂಡಿತ್ಯವನ್ನು ನೀಲಕಂಠಾರಾಧ್ಯ ಪಡೆದುಕೊಂಡಿ ದ್ದನೆಂಬುದು ಸ್ಪಷ್ಟವಾದ ಸಂಗತಿಯಾಗಿದೆ. ಆರಾಧ್ಯ ಚಾರಿತ್ರದ ಸೂಕ್ಷ್ಮಾವಲೋಕನ ದಿಂದ ಇದು ಸ್ಥಿರಪಡುತ್ತದೆ. ಈ ಸಂಬಂಧವಾಗಿ ಹಿಂದೆಯೇ ದೃಷ್ಟಾಂತಗಳ ಮೂಲಕ ಸಾದರಪಡಿಸಲಾಗಿದೆ. ತೆಲುಗಿನ ಮೇರುಕೃತಿಯನ್ನು ಆಧರಿಸಿ ರಚಿಸಿರುವ ನೀಲಕಂಠಾ ರಾಧ್ಯನ ಆರಾಧ್ಯ ಚರಿತೆಯನ್ನು ಮುಂದೆ ಪರಾಮರ್ಶಿಸಲಾಗಿದೆ.

೫. ಕೃತಿ ಸಮೀಕ್ಷೆ

ಆರಾಧ್ಯ ಚಾರಿತ್ರದ ಪ್ರತಿಸಂಧಿಯ ಮೊದಲನೆಯ ಪದ್ಯದಲ್ಲಿ ಇಷ್ಟದೇವತಾಸ್ತುತಿಯನ್ನು ಮಾಡಲಾಗಿದೆ. ಈ ಪದ್ಯಗಳಲ್ಲಿ ನೀಲಕಂಠಾಚಾರ್ಯನ ಪಾಂಡಿತ್ಯ ಪ್ರತಿಭೆ ವೈವಿಧ್ಯಗಳು ಗೋಚರವಾಗುತ್ತವೆ. ತನ್ನ ಕಾವ್ಯದಲ್ಲಿನ ಲೋಪದೋಷಗಳನ್ನು ಬುಧ ಜನರು ತಿದ್ದಿ ಕೈಕೊಳ್ಳಬೇಕೆಂದು ಹೀಗೆ ವಿನಯದಿಂದ ಪ್ರಾರ್ಥಿಸಿಕೊಂಡಿದ್ದಾನೆ.

ಸಮಸಂಸ್ಕೃತಂಗಳಂ ತದ್ಧಿತಪದಂಗಳಂ
ಸಮುಚಿತದೆ ಬರ್ಪ ಸತಿಸಪ್ತಮಿಯ ಭೇದಮಂ
ಗಮಕಕ್ರಿಯಾಸಮಾಸಂಗಳಂ ದೇಶೀಯಪದಮಪಭ್ರಂಶಪದವು
ಅಮರ್ದು ರಾಜಿಪ ಸಮಾಸಂಗಳಂ ಶ್ರುತಿಸಹ್ಯ
ವಿಮಲ ಸಂಧಿಗಳನುಱಿ ಅಱಿವ ಸಜ್ಜನಸಮಿತಿ
ಮಮತೆಯಿಂದೀ ಕೃತಿಯೊಳಿರ್ದ ದೋಷಂಗಳಂ ಸಮೆಱಿ ನೆಱಿಕೈಕೊಂಬುದು

(೧-೧-೪೭)

ಕವಿ ತನ್ನ ದೋಷಮಂ ಕಾಣನೆಂತೆನೆ ನೋಡ
ಭುವನದೊಳ್ ತೋರ್ಪ ವಸ್ತುಗಳನಱಿ ಕಣ್ಗಳ್ಗ
ಮವಿರತಂ ತನ್ನೊಳಗೆ ತೋರ್ಪ ಕರ್ಪಂ ಕಾಣದಂತೆವೋಲ್ ಕವಿಯಾದವಂ
ಕವಿಗಳಿಂ ತನ್ನ ಕೃತಿಯಂ ನಾಡೆ ತಿರ್ದಿಸಿದೊ
ಡವನಿಯೊಳ್ ಚಂದ್ರಾರ್ಕರುಳ್ಳನ್ನೆವರೆಗಮದು
ತವಿಲಾಗದದಱಿನೆನ್ನಯ ಕಾವ್ಯಮಂ ತಿರ್ದಿ ಕವಿವರರ್ ಕೈಕೊಂಬುದು

(೧-೧-೪೭)

ಸಹೃದಯರನ್ನು ಸವಿನಯದಿಂದ ಪ್ರಾರ್ಥಿಸಿಕೊಂಡಿರುವಂತೆ ದುರ್ಜನನಿಂದೆಯನ್ನೂ ಯಥೋಚಿತವಾಗಿ ಮಾಡಿದ್ದಾನೆ. 'ಸಜ್ಜನ ಶಿರೋಮಣಿಗಳೀ ಕೃತಿಯ ಕೊನೆದು ಕೊಂಡಾಡುತಿರ್ಕೆ ಬೆದಕಿ ತಪ್ಪಂ ಪಿಡಿವೆನೆಂದು ದುರ್ಜನವಿತತಿ ಕುದಿದು ಕೋಟಲೆಗೊಂಡು ಮನಮುಡುಗಿ ಚಿಂತೆಯೊಳ್ ಪುದಿದಿರಲ್ಕೊಂದು ತಪ್ಪೆಂತಕ್ಕೆ ತಲೆದೋಱಿ ಕಂಡು ನಲಿದಾಡುತಿರ್ಕೆ' ಎಂದು ಆಕ್ಷೇಪಿಸಿದ್ದಾನೆ. ಇನ್ನೂ ಮುಂದುವರಿದು ದುರ್ಜನರನ್ನು ಈ ರೀತಿ ವಿಶೇಷವಾಗಿ ಪರಿಹಾಸಮಾಡಿದ್ದಾನೆ.

ಭೂತಿರುದ್ರಾಕ್ಷಿ ಶಿವಲಿಂಗವುಳ್ಳವನತಿ
ಪ್ರೀತಿಯಿಂ ಪೇಳ್ದ ಸತ್ಕಾವ್ಯಮನಸೂಯೆಯಿಂ
ಬೂತಾಡಿ ನಿಷ್ಕಾರಣಂ ದ್ವೇಷದಿಂದೆ ನಿಂದಿಪನವಂ ಪರಿಭಾವಿಸೆ
ಭೀತಿಯುಳಿದಾ ಪಗಲ್ಗೊಡೆಯ ತನುಜನೆಂದು
ಸಾತಿಶಯ ಶಿವವಾಕ್ಯಮುಂಟದೆಂತೆನೆ ಸುವಿ
ಖ್ಯಾತಿ ತಂ ವಿಂಧ್ಯಾದೆನುತ್ತೆ ಸಲೆ ಜಾರಸಂಭವವೆನುತೆ ಲೋಕದೊಳಗೆ (೧-೧-೪೯)

ಪರನಿಂದೆಯಿಂದೆ ದುರ್ಜನ ಶಿರೋಮಣಿಗಳುರು
ತರ ನಿಧಾನಂಬಡೆದನಂತೆ ಚಿತ್ತದೊಳೊಲ್ದು
ಪರಿತೋಷಮಂ ತಾಳ್ದು ಮದಱಿಂದೆ ಮತ್ಕೃತಿಯ ನಿಂದಿಸಿ ಮುದಂಬಡೆಯಲು
ಪಿರಿದದು ನಿರಂತರಾಯಮನೀವುದೆಂತೆನಲ್
ಪರಹೃದಯ ಮುದವೆ ನಿರ್ವಿಘ್ನಕ್ಕೆ ಕಾರಣಂ
ಪರರ್ಗೆ ದುಃಖಂ ಮಾಡೆ ವಿಘ್ನಕ್ಕೆ ಕಾರಣಂ ಎಂಬ ನುಡಿಯುಂಟಾಗಿರೆ (೧-೧-೫೦)

ದುರ್ಜನ ನಿಂದೆಯನ್ನು ಮಾಡಿದ ಮೇಲೆ ಪರಂಪರಾಗತವಾದ ರೀತಿಯಲ್ಲಿ ಕಾವ್ಯವನ್ನು ಪ್ರಾರಂಭಿಸಿದ್ದಾನೆ.

ವಿಭೂತಿರುದ್ರಾಕ್ಷಿ ಮಹತ್ವವನ್ನು ವಿವರಿಸುವಲ್ಲಿ ನೀಲಕಂಠಾರಾಧ್ಯ ಸ್ಮೃತಿ, ಶ್ರುತಿ, ಪುರಾಣ, ಆಗಮಗಳಿಂದ ಯಥೇಚ್ಛವಾಗಿ ಸಂಸ್ಕೃತ ಉದ್ಧರಣಗಳನ್ನು ಕೊಟ್ಟಿದ್ದಾನೆ. ದೀಕ್ಷಾಪ್ರಕರಣದಲ್ಲಿ ವಿಷಯಸಮರ್ಥನೆಗಾಗಿ ಕವಿ ಕೊಟ್ಟಿರುವ ದೃಷ್ಟಾಂತಗಳು ಆತನ ಬಹುಶ್ರುತತ್ವಕ್ಕೆ ನಿದರ್ಶನಗಳಂತಿವೆ. ಗುರು ಲಿಂಗ ಜಂಗಮ ವಿಭೂತಿ ರುದ್ರಾಕ್ಷಿ ಇವುಗಳ ಮಹತ್ವವನ್ನೂ ವೀರಶೈವಧರ್ಮದಲ್ಲಿ ಇವುಗಳ ಸ್ಥಾನವನ್ನೂ ನಿರ್ದೇಶಿಸಿದ್ದಾನೆ. ಈ ಸಂಬಂಧವಾಗಿ ಅನ್ಯಮತೀಯರ ಭ್ರಾಂತಿ ನಿರಸನಮಾಡಿದ್ದಾನೆ.

ಪುರಾತನ ಪ್ರಕರಣ ಅನೇಕ ಶಿವಶರಣರ ಕಥೆಗಳನ್ನೊಳಗೊಂಡು ಒಂದು ವೀರಶೈವ ಕಥಾಕೋಶದಂತಿದೆ. ಇಲ್ಲಿ ಬಂದಿರುವ ಒಬ್ಬೊಬ್ಬ ಶರಣನ ಕಥೆಯೂ ಒಂದಕ್ಕಿಂತ ಒಂದು ಮಿಗಿಲಾಗಿದೆ. ಈ ಪ್ರಕರಣದಲ್ಲಿ ಬರುವ ವೆಲ್ಲಗೊಂಡದ ಮಹಾದೇವಯ್ಯನ ಕಥೆ ಭಕ್ತಿಯ ಮಡುವೆನಿಸಿದೆ. ಅದೇ ಕಥೆಯಲ್ಲಿನ ಪುಷ್ಪಾಪಚಯದ ವರ್ಣನೆಯಲ್ಲಿ ಹರಿಹರನ ಪುಷ್ಪರಗಳೆಯ ಛಾಯೆ ಕಂಡುಬರುತ್ತದೆ :

ಎಲರಲೆದು ದಲಪಱಿಯದಳಿತುಳಿಯದುಳ್ಳಲರ
ದೊಲೆದು ಜೋಲದ ಕಂಪು ಸರಿದುಪೋಗದ ಪಸು
ರ್ನೆಲೆಗೊಳ್ಳದೆಸಳ್ಗಳೆಡೆಯುಡುಗಿ ಸುರ್ಕದ ಪಳೆಯ ಪೂವಲ್ಲದೊಳ್ಳಿತಾದ
ಅಲರ್ಗಳಿಂ ಶಿವನ ಪೂಜಿಸಿದೊಡಣಿಯರಮಾದ
ಫಲಮಕ್ಕುಮೆಂದು ಶಾಸ್ತ್ರಂ ಪೇಳ್ಗುಂ....

ಈ ಮೇಲಿನ ವರ್ಣನಾಭಾಗವನ್ನು ಹರಿಹರನ ಪುಷ್ಪರಗಳೆಯ :

ಅಳಿಯೆಱಗದನಿಲನಲುಗದ ರವಿಕರಂ ಪುಗದ
ಬೆಳೆಬೆಳೆದು ನಳನಳಿಸಿ ಮಘಮಘಿಸುತ ಆಲರ್ದ
........................................
ನನೆಮುಗುಳ್ ಕೊನೆಮುಗುಳ್ ಬಿರಿದರೆಮುಗುಳ್ಗಳಂ
ತನಿಗಂಪು ತೀವಿರ್ದ ಪೊಚ್ಚಪೊಸ ಪೂಗಳಂ
ಕೊಂಡು ಕುಕಿಲಿರಿವುತಂ ಕುಣಿವುತಂ ನಡೆತಂದು

ಈ ಸಾಲುಗಳೊಂದಿಗೆ ಸಮೀಕರಿಸಬಹುದು. ವೆಲ್ಲಗೋಡದ ಮಹಾದೇವಯ್ಯನ ಪಾದ ಗಳು ಮತ್ತೆ ಮೂಡಿಬಂದಾಗ ಆತನ ನಡೆ ಹೇಗಿತ್ತೆಂಬುದನ್ನು ಕವಿ ಈ ರೀತಿ ವರ್ಣಿಸಿ ದ್ದಾನೆ.

ಮಿಸುಪ ಕರ್ಮಂಗಳಂ ಮೆಟ್ಟಿ ಹುಡಿಹುಡಿಮಾಡು
ತೊಸೆದಿಂತು ನಡೆಯುವೇಳ್ಕೆಂಬುದಂ ತೋಱುವಂ
ತೆಸೆದು ನಡೆದಂ (೨-೧-೫)

ಕಲಿಕಂಬ ಪಿಳ್ಳೈನಾಯ್ನಾರನ ಪಾದತೀರ್ಥ ಮಹಿಮಾಪ್ರಕರಣದಲ್ಲಿ ಬರುವ ಮಲ್ಲನ ಪ್ರಸಂಗ ಅತ್ಯಂತ ಸಹಜವಾಗಿದೆ. ಒಂದುದಿನ ಹರಭಕ್ತರು ತನ್ನ ಮನೆಗೆ ಬಂದಾಗ ಕಲಿ ಕಂಬ ಪಿಳ್ಳೈನಾಯ್ನಾರು ಪತ್ನೀಸಮೇತನಾಗಿ ಅವರ ಪಾದಪ್ರಕ್ಷಾಳನೆ ಮಾಡುತ್ತಿರುವಲ್ಲಿ ಅವರ ಮನೆಯ ಸೇವಕನಾದ ಮಲ್ಲನೆಂಬುವನು ತನ್ನ ಪಾದಗಳನ್ನೂ ನೀಡಲು 'ಶಿವ ಮುದ್ರೆಯುಳ್ಳನಾವಂ ಭಾವಿಸಲ್ಕವಂ ಶಿವನೆ ಅಪ್ಪಂ ತಪ್ಪದು' ಎಂಬ ಭಾವನೆಯಿಂದ ಆತನ ಪಾದಗಳನ್ನು ತೊಳೆಯುತ್ತಿದ್ದಾಗ ಆತನ ಪತ್ನಿ ಅದಕ್ಕೆ ಆಕ್ಷೇಪಿಸಲು ಕಲಿಕಂಬ ಪಿಳ್ಳೈನಾಯ್ನಾರು "ವರಯುವತಿಯೆಂದು ಬಗೆಯದೆ ಕೂರ್ಮೆಯವಳೆಂದು ಪಿರಿದು ನೆನೆ ಯದೆ ಕೈಗಳಂ ತುಂಡಿಸಿಕ್ಕಿದಂ". ಕಲಿಕಂಬನ ಹರಭಕ್ತಸೇವೆಯ ಅತೀವನಿಷ್ಠೆಗೆ ಈ ಪ್ರಕರಣ ಸಾಕ್ಷಿಯಂತಿದೆ.

ದಸರಯ್ಯನ ಕಥೆ ತುಂಬ ಸ್ವಾರಸ್ಯವಾಗಿ ಬಂದಿದೆ. ಇದರಲ್ಲಿ ಆತನ ಸಹನೆ ಸಂಯಮ ಸಹಾನುಭೂತಿಗಳು ವ್ಯಕ್ತಪಟ್ಟಿವೆ. ದಸರಯ್ಯನ ವ್ಯಕ್ತಿತ್ವ ಸೊಗಸಾಗಿ ಚಿತ್ರಿತವಾಗಿದೆ. 'ಖಲರ ನೇಹದೆ ಸಾಧುಗಳ ವೈರಮೊಳ್ಳಿತು' ಎಂಬ ತತ್ವವನ್ನು ಇದರಲ್ಲಿ ಸಾರಿ ತೋರಿ ದ್ದಾನೆ.

ಗುರುಭಕ್ತನ ಕಥೆಯಲ್ಲಿ ಪ್ರದರ್ಶಿತವಾಗಿರುವ ಆತನ ಗುರುಭಕ್ತಿ ಆದರ್ಶಪ್ರಾಯ ವಾದುದು. ಗುರುಭಕ್ತಿಯ ಬಗೆಗೆ ಆತನ ನಿಲವು ಇಂತಿದೆ :

ಗುರುಭಕ್ತಿಯೇ ಹರನ ಭಕ್ತಿಗೆ ಸಮಂ ಮತ್ತೆ
ಗುರುಭಕ್ತಿಯೇ ಹರನ ಭಕ್ತಿಗಾಶ್ರಯಮೆನಿಕು
ಮರರೆ ಗುರುಭಕ್ತಿಯೇ ಹರಭಕ್ತಿಗಾದಿಕಾರಣಮೆನಿಕುಮನವರತವು
ಗುರುಭಕ್ತಿ ಸಕಲಸಂಪಚ್ಛಕ್ತಿ ಮುಕ್ತಿಪುರ
ಹರಭಕ್ತಿ ಸಂಸಿದ್ಧಿಗಳ್ಗೆ ಕಾರಣಮಕ್ಕು
ಮೊರೆಯಲಿದು ನಿಕ್ಕುವಮೆನಿಕ್ಕುಮದುಕಾರಣಂ ಗುರುಭಕ್ತಿಯೇ ಶುಭಕರಂ

(೨-೪-೧೮)

ಇಷ್ಟೇ ಅಲ್ಲದೆ 'ಗುರೋರಾಜ್ಞಾನಲಂಘಯೇತ್' ಮತ್ತು 'ಗುರೋರಾಜ್ಞಾನು ವರ್ತನಂ' ಎಂಬ ವಾಕ್ಯವೆ ಆತನಿಗೆ ಪ್ರಾಣಪದವಾಗಿತ್ತು. ಆದ್ದರಿಂದಲೆ ಗುರುಭಕ್ತನಿಗೆ ಸಾಟಿಯಾ ದವನು ಮತ್ತೊಬ್ಬನಿಲ್ಲವೆಂಬುದನ್ನು 'ಇಂತಪ್ಪ ಗುರುಭಕ್ತಿಯುಕ್ತನಂ ಭೂಲೋಕ ಸಂತತಿ ಯೊಳಾವನೊರ್ವಂ ಕಂಡುದಿಲ್ಲ' ಈ ಉದ್ಧರಣೆಯಿಂದ ವ್ಯಕ್ತಪಡಿಸಿದ್ದಾನೆ.

ಈ ಪ್ರಕರಣದಲ್ಲಿ ಬರುವ ಗುರುಭಕ್ತಾಂಡಾರಿಯ ಕಥೆ ಒಂದು ಪ್ರತ್ಯೇಕ ಕಾವ್ಯದಂತಿದೆ. ಇಲ್ಲಿಯ ಸಂಭಾಷಣೆಗಳು ನಾಟಕೀಯವಾಗಿವೆ. ಈ ಕಥೆಯ ಮಧ್ಯೆ ಮಧ್ಯೆ ಅನೇಕ ಶಿವಶರಣರ ದೃಷ್ಟಾಂತಗಳನ್ನು ಕೊಟ್ಟು ಮೂಲ ಕಥಾಪ್ರವಾಹಕ್ಕೆ ಅಡೆತಡೆಯಾಗದಂತೆ ಭಕ್ತಿಯನ್ನು ಉದ್ದೀಪನಗೊಳಿಸಿದ್ದಾನೆ. ಗುರುಭಕ್ತಾಂಡಾರಿ ಮತ್ತು ಪ್ರೌಢಾವತಿ ಇವರ ಸಂಭಾಷಣೆ ಅತ್ಯಂತ ತರ್ಕಬದ್ಧವಾಗಿದೆ. ಕಾಮಪರವಶನಾದ ಗುರುಭಕ್ತಾಂಡಾರಿಯನ್ನು ಕಾಮವಿಮುಖನನ್ನಾಗಿ ಮಾಡಲು ಇಹದಿಂದ ಪರಕ್ಕೆ ಕೊಂಡೊಯ್ಯಲು ರತಿಜುಗುಪ್ಸೆಯುಂಟುಮಾಡಲು ಪ್ರೌಢಾವತಿ ಮಾಡಿದ ಸ್ತ್ರೀವರ್ಣನೆ ಅದ್ಭುತ ರಮ್ಯವಾಗಿದೆ.

ನುತ ನಾಸಿಕಂಗಳಾವಾಸಂಗಳಾ ಶ್ಲೇಷ್ಮ
ತತಿಗೆ ಪೊಡೆಗಳ್ ಪುರೀಷದ ಬೀಡುಗಳ್ ಕಣ್ಗ
ಳತಿ ಬಾಷ್ಪಯುಕ್ತಂಗಳಲಘು ಜಘನಂಗಳಘಸಂಗದೊಬ್ಬುಳಿಯಣಿಯರಂ
ರತಿಪಥಾಮಂಗಳಾವಗಮೊಸರ್ವ ಮೂತ್ರದಿಂ
ದತಿಶಯಂ ತೋರ್ಪ ಬಗರಗೆಗಳೆಂದುಂ ಮುಚ್ಚ
ದತಿಶೋಭಿಸುವ ಕಳೇವರದ ಪುಣ್ಗಲೆಗಳತಿದುರ್ಗಂಧಕೂಪಂಗಳು (೨-೫-೩೫)

ತರಳ ಕಾಮಾಂಧರುಱಿ ಬೀಳ್ವ ವಿವರಂಗಳುರು
ತರ ಶುಕ್ಲಲೋಹಿತ ಕರಂಡಂಗಳಾವಗಂ
ಪಿರಿದು ಕುಲಹೀನ ಕುಲಜರ್ ಕೂಡಿ ಪೋಪ ದುರ್ಮಾರ್ಗಂಗಳೆನಿಕುಮವಱಿಂ
ನಿರುತಮೊದಗಿದ ಸುಖಂ ಪವನಾಭಿಘಾತಮಂ
ತುರಿತದಿಂದೆಯ್ದಿದಶ್ವತ್ಥ ಪರ್ಣಾಗ್ರದೊಳ್
ಕರಮೆ ಶೋಭಿಪ ವಾರಿಕಣದಂತೆವೋಲಾಗಳಂತೆ ನಾಶಂಬೊಂದುಗುಂ
(೨-೫-೩೬)

ವಾರನಾರಿಯರ ಬಗ್ಗೆ ಆಕೆಯ ನಿಲವು ಇಂತಿದೆ :

'ವಾರಸತಿಯರ್ ಚಪಳೆಯರ್ ನಾಡೆ ಸಿತಗೆಯರ್ ಕಾಮುಕಿಗಳಿಚ್ಚೆಗಾರ್ತಿಯರ ನೃತಭಾಷೆಯರ್ ವಂಚಕಿಯರು' (೨-೫-೩೮)

'ಜಿಗುಳೆ ಪಿಡಿವಂತೆ ಪಿಡಿವರಾ ಬೆಲೆವೆಣ್ಗಳ್' (೨-೫-೪೫)

'ಊಸರವಳ್ಳಿಗಳ ತೆಱದೆ ಸೊಗಸಿನಿಂದೊಂದೊಂದು ಪರಿಯಪ್ಪರ್; ನೀರ ಸುಳಿಯೊಳ್ ತೋರ್ಪ ನೆಗಳ್ದ ಮಿಾನ್ಗಳ ಭಂಗಿಯಂತೆ ಪೊಳೆದೆಯ್ದುವರ್' (೨-೫-೪೬)

ಅನುರಕ್ತೆಯಾದಳಿವಳೆಂದು ಮನದೊಳ್ ನಲಿದು
ವನಿತೆಯರ ನಚ್ಚಲಾಗದು ಮತ್ತಮೊರ್ವಂಗೆ
ವಿನಯದಿಂ ಕೈನೀಡುವರ್ ಲತೆಯ ಪಾಂಗಿನಿಂದೊಡನೆಯುಂ ಬೇಡಿದನಿತಂ

ಅನುವಿನಿಂದಿತ್ತೆನೆಂದಿರವೇಡ ಮತ್ತೊರ್ವ
ನನುನಯದೆ ನೆಲ್ಲನಿತನಿತ್ತೊಡನನತ್ತ ಘ
ಮ್ಮನೆ ಬಾಗುವರ್ ತರಸಿನಂದದಿಂ ಬೆಲೆವೆಣ್ಗಳಾವಗಂ ಮನವೊಲವಿನಿಂ(೨-೫-೪೭)

ಗುರುಭಕ್ತಾಂಡಾರಿಯ ಕಥೆಯಲ್ಲಿ ಬರುವ ಮಲುಹಣ, ಓಹಿಲ, ಜೇರನು, ಉದ್ಭಟ ಇವರ ಪ್ರಸಂಗಗಳನ್ನು ಕವಿ ಅತ್ಯಂತ ಸ್ವಾರಸ್ಯವಾಗಿ ನಿರೂಪಿಸಿದ್ದಾನೆ. ಮಲುಹಣ ಮಲುಹಣಿಯ ತಾಯಿಯ ಜೊತೆಯಲ್ಲಿ ಮಾಡುವ ಸಂಭಾಷಣೆ ಮನೋಜ್ಞವಾಗಿದೆ. ಮಲುಹಣಿಯ ತಾಯಿಯ ಒಂದು ನೈಜಚಿತ್ರವನ್ನು ಇಲ್ಲಿ ಕಾಣಬಹುದಾಗಿದೆ. ವಾರನಾರಿಯರ ಸಹಜಸ್ವರೂಪ ವ್ಯಕ್ತಪಟ್ಟಿದೆ. ಓಹಿಲನ ಕಥೆ ಭಕ್ತಿಪ್ರದವಾಗಿ ನಿರೂಪಿತವಾಗಿದೆ. ಒಟ್ಟಿನಲ್ಲಿ ಈ ಕಥೆಗಳು ಪ್ರತ್ಯೇಕವಾಗಿ ನಿಲ್ಲದೆ ಮೂಲಕಥೆಗೆ ಪರಿಪೋಷಕವಾಗಿ ಬಂದು ರಸೋತ್ಕರ್ಷವನ್ನುಂಟುಮಾಡಿವೆ. ಅಲ್ಲಲ್ಲಿ ಬರುವ ಸೂಳ್ನುಡಿಗಳು ಕವಿಯ ಲೋಕಾನುಭವವನ್ನು ಸೂಚಿಸುತ್ತವೆ. ಉದಾ : 'ಮುನಿದಸಿಯ ಕಲ್ಲ ಮಟಸಲ್ ಮದುವೆ ಕೆಡುವುದೇ' (೨-೮-೪೦) 'ಸುಗುಡರಾದರ್ ವನಿತೆಯರ ಮಾತುಗೇಳ್ ತೊಟ್ಟಗೆ ಸುಖಮನನುಭವಿಸುವರ್' (೨-೯-೨) 'ತಕ್ಕರೊಳ್ನುಡಿಗಳೇತರ್ಕೆ ತಕ್ಕುವುವಯ್ಯ' (೨-೧೦-೨೭) ಇತ್ಯಾದಿ.

ಈ ಪ್ರಕರಣದಲ್ಲಿ ಬರುವ ಚಿಕ್ಕಮಾದಣ್ಣನ ಕಥೆ ಉಲ್ಲೇಖಾರ್ಹವಾದುದು. ಚಿಕ್ಕಮಾದಣ್ಣ ಒಂದುದಿವಸ ಇದ್ದಕ್ಕಿದ್ದಂತೆ ಪ್ರಾಣವನ್ನು ಬಿಡಲು ಅದನ್ನು ಅರಿತ ಆತನ ಪತ್ನಿ ಆ ಶವವನ್ನು ಮನೆಯೊಳಗಣ ನಡುಗಂಭಕ್ಕೆ ಒರಗಿಸಿ ಇರಿಸಿದಾಗ ಅವರ ಮಗ ಬಂದು ತಾಯಿಯನ್ನು ಪ್ರಶ್ನೆಮಾಡುವ ಭಾಗ ನೈಜವಾಗಿ ಮೂಡಿಬಂದಿದೆ. ಅಂತೆಯೆ ಈ ಬಾಲಕ ಮಾದಿರಾಜರ ಬಳಿಗೆ ಹೋಗಿ ಅವರನ್ನು ತನ್ನ ಮನೆಗೆ ಕರೆತಂದು ಪಿತನಿಗೆ ಪ್ರಾಣದಾನಮಾಡಿಸುವ ಪ್ರಸಂಗ ಮನೋಜ್ಞವಾಗಿದೆ.

ಪಂಡಿತಾರಾಧ್ಯ ಚರಿತ್ರೆಗೆ ವಾದಪ್ರಕರಣ ನಿಕಷವಿಟ್ಟಂತಿದೆ. ಇಲ್ಲಿ ಪಂಡಿತಾರಾಧ್ಯರು ಸ್ವಧರ್ಮಪ್ರತಿಷ್ಠಾಪನೆಗಾಗಿ ಹಲವಾರು ಧರ್ಮಗಳನ್ನು ನಿರಸನಮಾಡಿದ್ದಾರೆ. ಈ ಸಂದರ್ಭದಲ್ಲಿ ತಮ್ಮ ವಾದಕ್ಕೆ ಪರಿಪೋಷಕವಾಗಿ ಅವರು ವೇದಾಗಮ ಪುರಾಣೇತಿಹಾಸಗಳಿಂದ ಅಸಂಖ್ಯಾತವಾದ ಸಾಕ್ಷಿಗಳನ್ನು ಒದಗಿಸಿದ್ದಾರೆ. ವಿದ್ವಾಂಸರಿಂದ ಭರಿತವಾಗಿದ್ದ ಪೆಲ್ನಾಡ ಚೋಳನ ಆಸ್ಥಾನದಲ್ಲಿ ಅನ್ಯವಾದಿಗಳನ್ನೂ ಅವರ ವಾದಸರಣಿಯನ್ನೂ ಸಸಾಕ್ಷಿಕವಾಗಿ ನಿರಸನ ಮಾಡಿದ್ದಾರೆ. ಈ ವಾದಪ್ರಕರಣದಲ್ಲಿ ಬರುವ ಆಡುಮಾತುಗಳು ಸಮಯೋಚಿತವಾಗಿ ಸಮರ್ಪಕವಾಗಿ ಮೂಡಿಬಂದಿವೆ. ಅವು ಎಷ್ಟು ಪರಿಣಾಮಕಾರಿಯಾಗಿವೆ ಎನ್ನುವುದಕ್ಕೆ "ಮೊನ್ನಿನ ಕೂಸು ನೀಂ" (೩-೨-೨೧) "ಮಂಡೂಕಕ್ಕೆ ವಿಷ್ಣುವಿನ ನಾಮಮಾದಸಮ ಹರಿಯೆಂಬ ಶಬ್ದಂ ವರ್ತಿಸಲ್ಕೆ ಮತ್ತಸವಸಂ ಭೇಕನಾ ಕಮಲಾಕ್ಷನಪ್ಪುದೇ" ಇತ್ಯಾದಿ ಉದಾಹರಣೆಗಳನ್ನು ನೋಡಬಹುದು.

ಮಹಿಮಪ್ರಕರಣದ ಆದಿಯಲ್ಲಿ ವಿಪ್ರರನ್ನು ಕುರಿತು ಕವಿ ಹೇಳುವ ಮಾತುಗಳು ಹೀಗಿವೆ. 'ವಿಪ್ರನೆನಿತು ತಪ್ಪಂ ಮಾಡೆ ನೆಗಳ್ದಧಮರಂ ಶಿಕ್ಷೆಗೈವಂತೆ ಶಿಕ್ಷಿಸಲ್ ತೆಗಳಕ್ಕುಂ

....ಬ್ರಾಹ್ಮಣೋ ನ ಹಂತವ್ಯ' (೪–೨–೧೭) 'ವರ ವಿಪ್ರಮುಖ್ಯ ಚಾಂಡಾಲಾಂತ್ಯಮಾಗಿ ಈ ಧರೆಯೊಳಾರಾದೊಡಂ ಶಿವಭಕ್ತರಾಗಿಯತ್ಯುರುತರಮೆನಿಪ್ಪ ಪಾಪಂಗೆಯ್ದೊಡಂ ಪಾರ್ವನಂತೆ ಶಿಕ್ಷಿಸಲಾಗದು' (೪–೨–೧೨) ಇತ್ಯಾದಿ. ಈ ಪ್ರಕರಣ ಚಾರಿತ್ರಿಕಾಂಶ ಗಳನ್ನೂ ಒಳಗೊಂಡು ಪ್ರಮುಖವಾಗಿದೆ. ಬಸವೇಶ್ವರನ ಕಥೆ ನಿರೂಪಿತವಾಗಿರುವುದು ಈ ಪ್ರಕರಣದಲ್ಲಿ. ಪಂಡಿತಾರಾಧ್ಯರಿಗೆ ಕನ್ನಡ ಭಾಷೆ ಕೈಗೂಡಿದುದು ಬಸವೇಶ್ವರರಿಂದ:

ಹರಿಸದಿಂ ಬಸವೇಶನಟ್ಟಿದಾ ಭೂತಿಯಂ
ಗುರು ಪಂಡಿತೇಶಂಗೆ ಕೊಟ್ಟರಾ ಭಕ್ತರ್ಕ
ಳುರುತರ ಪ್ರೇಮದಿಂ ಬಸವಮಾಹಾತ್ಮ್ಯಮಂ ಸ್ಮರಿಸುತ್ತೆ ಪಂಡಿತೇಶಂ
ವರ ಬಸವಹಸ್ತದಿಂ ಬಂದ ತದ್ಭಸಿತಮಂ
ಧರಿಸಿಕೊಳಲನಿತಱೊಳ್ ಕರ್ಣಾಟಭಾಷೆ ಭಾ
ಸುರಮಪ್ಪಾಗಿ ಬರಲದಱಿನಿಷ್ಟಲಿಂಗಸ್ತೋತ್ರಮಂ ಮಾಡಿದಂ ಭಕ್ತಿಯಿಂ (೪-೯-೪)
ಬಸವ ಮಾಹಾತ್ಮ್ಯ ಗೀತಂಗಳಂ ಸೊಗಸುಮಿಗೆ
ಮುಸಕದಿಂ ಕರ್ಣಾಟಭಾಷೆಯೊಳ್ ಪಾಡುತ್ತೆ
ಬಸವನಂ ನೆನೆದು ವಂದಿಸುತೆ ತದ್ಬಸವ ಮಹಿಮೆಯ ಕೇಳುತಳ್ಕಱಿಂದಂ
ಬಸವನಿರವಂ ಕೇಳ್ದ ಸೌಖ್ಯದಿಂ ತನುವುರ್ಬಿ
ಪಸರಿಸಲ್ ಪುಳಕಾಳಿ ಹರ್ಷಾಶ್ರು ಸುರಿಯೆ ತ
ದ್ಬಸವನಂ ನೋಳ್ಪುತ್ಸುಕಂ ಪಂಡಿತೇಶ್ವರನ ಮನಮನೆಡೆಗೊಂಡಿತಂದು (೪-೯-೫)

ಪಂಡಿತಾರಾಧ್ಯರು ಬಸವೇಶ್ವರನ ಸಮಕಾಲೀನರು ಎಂಬ ಸಂಗತಿ ಈ ಮೇಲಿನ ಪದ್ಯಗಳಿಂದ ವಿದಿತವಾಗುತ್ತದೆ. ಭೂಲೋಕದಲ್ಲಿ ಧರ್ಮಪರಿಪಾಲನೆಗಾಗಿ ಶಿವನು ಕಳಿಸಿದ ಈ ಇಬ್ಬರು ವಿಭೂತಿ ಪುರುಷರು ಆಂಧ್ರ ಮತ್ತು ಕರ್ಣಾಟಕಗಳಲ್ಲಿ ಧರ್ಮಪ್ರಸಾರವನ್ನು ಮಾಡಿದ್ದಾರೆ. ಬಸವೇಶ್ವರನ ಮಹಿಮೆಯನ್ನು ಅರಿತ ಪಂಡಿತಾರಾಧ್ಯರು ಅವರನ್ನು ಕಾಣ ಬೇಕೆಂಬ ಉತ್ಸುಕತೆಯಿಂದ ಪ್ರಯಾಣ ಮಾಡುವಲ್ಲಿ ಮಾರ್ಗಮಧ್ಯೆ ತಮ್ಮ ಶಿಷ್ಯರಿಂದ ಬಸವೇಶ್ವರರು ಸಂಗಮನಾಥನಲ್ಲಿ ಐಕ್ಯರಾದರೆಂಬುದನ್ನು ಕೇಳಿ ಪರಿಪರಿಯಾಗಿ ಪರಿತಪಿಸಿ ದ್ದಾರೆ. ಬಸವೇಶ್ವರರ ಐಕ್ಯವನ್ನು ಕೇಳಿದ ಪಂಡಿತಾರಾಧ್ಯರು ಮಾಡಿದ ಪ್ರಲಾಪ ಒಂದು ಶೋಕಗೀತೆಯಂತಿದೆ. ಬಸವನ ಮಹಿಮೆಯನ್ನು ತನುವುಬ್ಬಿ ಮನವುಬ್ಬಿ ಹಾಡಿ ಹೊಗಳಿ ದ್ದಾರೆ. ಅವರ ವಿಯೋಗಕ್ಕಾಗಿ ಬಹುವಾಗಿ ಪ್ರಲಾಪಿಸಿದ್ದಾರೆ. ಅವರ ಶೋಕ ಹೊನಲಾಗಿ ಹರಿದಿದೆ:

ಬಸವಣ್ಣ ಬಸವಕುಮಾರ ಬಸವೇಶ್ವರನೆ
ಬಸವ ಎನ್ನಣ್ಣ ಎನ್ನಯ್ಯ ಎನ್ನಯ ಮನೋ
ಬಿಸಜವಿಕಸನಸೂರ್ಯನೇ ಎನ್ನನಿಲ್ಲಿರಿಸಿ ನೀನೆರ್ಮನೇ ಮುದದೊಳು

ಕುಸುಮಶರಹರಗರ್ಭಮಂ ಪುಗುವುದುಚಿತಮೇ
ಬಸವಣ್ಣ ಹಾ ಬಸವದೇವ ಹಾ ಎನ್ನಾಳ್ದ
ಬಸವಯ್ಯ ಹಾ ಬಸವಗುರುವೆ ಹಾ ಬಸವಲಿಂಗವೆ ಹಾ ಎನುತ್ತೞಲುತೆ
(೪–೧೮–೧೧)

ಮಸಕದಿಂದೀ ವೀರಶೈವಮಾರ್ಗಮನೊಲ್ದು
ನಿಸದಮಿನ್ನಾವನುಱಿ ಕೊಂಡುಕೊನೆದಾಡುವಂ
ಮಿಸುಪ ಶಿವದೂಷಕರನಱಿಯಟ್ಟಿ ನಾಶಮಂ ಮಾಳ್ಪನಾವಂ ಧರೆಯೊಳು
ಅಸವಸದೆ ವೀರಮಾಹೇಶ್ವರರ್ಕಳನೆಯ್ದೆ
ಹಸನಾಗಿಯಕ್ಕಱಿಂ ಮನ್ನಿಸನದಾವನೀ
ವಸುಧೆಯೊಳ್ ಜಂಗಮಕ್ಕಿಷ್ಟಾರ್ಥಸಿದ್ಧಿಯಂ ಕುಡುವನಾವಂ ಶಂಕರ-
(೪–೧೦–೧೯)

ಪಂಡಿತಾರಾಧ್ಯರ ಶೋಕ ಇಷ್ಟಕ್ಕೇ ನಿಲ್ಲದೆ ಬಸವಣ್ಣನನ್ನು ತನ್ನಲ್ಲಿಗೆ ಕರೆದುಕೊಂಡ ಶಿವನನ್ನೂ ಮೂದಲಿಸಿದ್ದಾರೆ:

ವರ ಶಿಶುವ ಭಕ್ಷಿಸಲ್ ನಿನ್ನ ಪೊಡೆ ತುಂಬದೊಡೆ
ಕರಮ ಬಸವಣ್ಣನಂ ನೊಣೆದೆಯೋ ಮನಮೊಲ್ದು
ಗರಳಧರ ಕಂಕಾಳಮೂರ್ತಿಯೇ ಮೃಗಭಕ್ಷಣಂಗೆಯ್ದ ಸೊವಡಿನಿಂದಂ
ಪಿರಿದು ನಾಲಗೆ ತೀಂಟೆ ಮಸಗೆ ಬಸವಣ್ಣನಂ
ಹರಿಸದಿಂ ನುಂಗಿದೆಯೊ ಭೋಗಯ್ಯನೊಸೆದಿತ್ತ
ಪರಮ ಗೋವತ್ಸಭಕ್ಷಣದ ಕೈಪೆಗೆ ಬಸವನಂ ನುಂಗಿದೆಯೊ ಶಶಿಧರ (೪–೧೦–೩೯)

ಮಿಸುಪ ಲೋಕಂಗಳಂ ಭಕ್ಷಿಸಲ್ ದಂತಂಗ
ಳಸವಸಂ ಮಲಿನಂಗಳಾಗೆ ಮತ್ತಾ ಕರ್ಪ
ನೊಸೆದು ತೊಡೆಯಲ್ಕೆ ರಕ್ಕಸತನದೆ ಬಸವಣ್ಣನಂ ಭಕ್ಷಿಸಿದೆಯೊ ಪಶುಪ
ಮಸಕದೆ ಶಿವಾಚಾರಮಂ ರಕ್ಷಿಸುತ್ತಿರ್ಪ
ನಿಸದಂ ದಯಾಪೂರಿತಾಂತರಂಗನುಮಪ್ಪ
ಬಸವಣ್ಣನಿಲ್ಲದಿರ್ದೊಡೆ ಪಶುಪ ಲೋಕೇಶಶಂಕರಾ ಭೂಮಿಯೊಳಗೆ(೪–೧೦–೪೦)

ಮಿನುಪ ಸೊಡರ್ಗದಿರಿಲ್ಲದಿರ್ಪ ಮಂದಿರದಂತೆ
ವಿನುತ ಸತ್ಕವಿಗಳಿಲ್ಲದ ರಾಜಸಭೆಯಂತೆ
ನನಸು ಪರಿಮಳಮಿಲ್ಲದಿರ್ಪ ನವಕುಸುಮದಂತುರುದಾನವಿಲ್ಲದಿರ್ಪ
ಕನದಿಭದ ಪಾಂಗಿನಿಂ ಸನ್ಮಾರ್ಗಮಿಲ್ಲದಾ
ವನಿತೆಯಂದದೆ ಹರಣಮಿಲ್ಲದೊಡಲಂತೆ ತೊ
ಟ್ಟನೆ ಶಾಂತಿನೆಱಕೆಟ್ಟ ತಪದಂತೆ ಕಾಂತಿತೋಱದ ರನ್ನಗಡಣದಂತೆ(೪–೧೦–೪೧)

ಇದೇ ಪ್ರಕರಣದಲ್ಲಿ ಬರುವ ಧವಳೇಶನಾಮಯ್ಯನ ಕಥೆ ಆದರ್ಶಪ್ರಾಯವಾದುದು. ಆತನ ಕರ್ತವ್ಯನಿಷ್ಠೆ ಅನುಕರಣೀಯವೂ ಅನುಸರಣೀಯವೂ ಆದುದು. ರಾಜ ಧವಳೇಶ ನಾಮಯ್ಯನನ್ನು ಕರೆಸಿ ತಂಬುಲವನ್ನು ಕೊಟ್ಟು ಅದನ್ನು ಸ್ವೀಕರಿಸುವಂತೆ ಹೇಳಲು ಆತನು ಅದನ್ನು ಬಿಸಾಡಿ ದಿಟ್ಟತನದಿಂದ ರಾಜನಿಗೆ ಕೊಟ್ಟ ಉತ್ತರವಿದು:

"ಸೇವೆಗೊಡೆಯನಲ್ಲದೆ ನಾಡೆ ನಿರುತದಿಂ ನೀಂ ಪ್ರಸಾದಂಗುಡಲ್ ಕರ್ತೃವೇ"(೪- -೨೪)

........ನಿರುತದಿಂ ಜೋಳವಾಳಿತನಕ್ಕೆ ನಿನ್ನನಾಂ ಸೇವಿಸಿದೊಡಾ ಸೇವೆಗೆ
ಪಿರಿದು ನೀಂ ಕರ್ತೃವಲ್ಲದೆ ಮಗುಳ್ದು ಭಾವಿಸಲ್
ಸರಳ ಮುಕ್ತ್ಯರ್ಥ ಸೇವೆಗೆ ಭರ್ತೃ ನೀನಲ್ತು
ಚರಲಿಂಗಪೂಜಾರ್ಥಮಾಗಿ ಧನಮಂ ಪಡೆವೆನಾ ಧನಂಗುಱಿತು ನಿನ್ನಂ

(೪-೯-೨೫)

ಕರಮೆ ಸೇವಿಪೆನೆದರ್ಕೀ ತನುವನಿತ್ತಪೆಂ
ಭರದಿಂದೆ ನಿನಗೆ ಮತ್ತಾಚಾರಮಂ ಮಾಱೆ
ಪೊರೆವೆನೇ ಮಚ್ಚರೀರಮಂ............ (೪-೯-೨೬)

ರಾಜನಿಗೂ ಧವಳೇಶನಾಮಯ್ಯನಿಗೂ ನಡೆದ ಸಂಭಾಷಣೆ ತುಂಬ ಮಾರ್ಮಿಕ ವಾಗಿದೆ. ಇವರಿಬ್ಬರಿಗೂ ಸಾಕಷ್ಟು ವಾದವಿವಾದಗಳಾದ ಮೇಲೆ ಕೊನೆಗೆ ಧವಳೇಶ ನಾಮಯ್ಯ 'ನಿನ್ನ ಸೊಮ್ಮಾದ ತನುವಂ ಇದಂ ನಿನಗೀವೆನು' ಎಂದು ರಾಜನ ಕೈಯಲ್ಲಿದ್ದ ಕತ್ತಿಯನ್ನು ಸೆಳೆದುಕೊಂಡು "ಮುನ್ನೆ ಯಾದವಕುಲಂ ಕರಮೆ ಮುಸಲಾವಶಿಷ್ಟದೆ ನಷ್ಟ ಮಾದವೊಲೀ ಸುರಗಿಯಿಂದಮಿವನ ಮಿನುಪ ಕುಲಮೆಯ್ದೆ ನಿರ್ಮೂಲಮಕ್ಕೆಂದು ಘಮ್ಮನೆ ಶಾಪಮಂ ಕೊಟ್ಟು" ತನ್ನ ತಲೆಯನ್ನು ಕತ್ತರಿಸಿಕೊಳ್ಳುವನು. ಪರಮಶಿವಭಕ್ತ ನಾದ ಧವಳೇಶನಾಮಯ್ಯನ ಕರ್ತವ್ಯನಿಷ್ಠೆ ಎಂದೆಂದಿಗೂ ಆದರ್ಶಪ್ರಾಯವಾದುದು.

## ಶ್ರೀಶೈಲ

ಶ್ರೀಶೈಲ ಚಾರಿತ್ರಕವಾಗಿಯೂ ಐತಿಹಾಸಿಕವಾಗಿಯೂ ಜಾಗೃತಸ್ಥಾನವೆನಿಸಿದೆ. ಪಂಚಪೀಠಗಳಲ್ಲಿ ಒಂದಾದ ಇದಕ್ಕೆ ಸಂಬಂಧಿಸಿದಂತೆ ಅನೇಕ ಪುರಾಣಕಥೆಗಳೂ ಸ್ಥಲ ಪುರಾಣಗಳೂ ಇವೆ. ಆರಾಧ್ಯಚಾರಿತ್ರದ ಪರ್ವತಪ್ರಕರಣದಲ್ಲಿ ಶ್ರೀಶೈಲದ ವರ್ಣನೆ ಯನ್ನೇ ಸಂಪೂರ್ಣವಾಗಿ ಮಾಡಲಾಗಿದೆ. ಈ ವರ್ಣನೆ ಮಿಗಿಲಾಗಿದೆ, ಮನೋಹರವಾಗಿದೆ. ಶ್ರೀಶೈಲ "ವರಲಿಂಗದಾಕೃತಿಯೊಳ್ ಮನೋಹರಮಾಗಿ ಪಂಡಿತೇಂದ್ರನ ಕಣ್ಗೆ" ಸೊಗ ಯಿಸಿತಂತೆ. ದೋನಮಾರ್ಯನು ಶ್ರೀಶೈಲದ ವರ್ಣನೆಯನ್ನು ಅನುಪಮವಾಗಿ ಮಾಡಿ ದ್ದಾನೆ. ಭಕ್ತಿಮುಕ್ತಿಗಳ ತಾಣವೆನಿಸಿದ ಶ್ರೀಶೈಲದ ಪರಿಸೆಗೆ ಬರುತ್ತಿದ್ದ ಭಕ್ತರ ಸಂದಣಿ 'ನರಾರ್ಣವ'ದಂತೆ ಇತ್ತಂತೆ. ಶ್ರೀಶೈಲದ ಮಲ್ಲಿಕಾರ್ಜುನನಿಗೆ ಪೊಡಮಡುತ್ತಿದ್ದ ಭಕ್ತರ ವಿವಿಧ ರೀತಿಗಳಿವು:

ಎರಡು ನೇತ್ರಂಗಳಂ ಕಿೞ್ತು ಪಶುಪತಿಗಿತ್ತು
ನಿರುತದಿಂ ಭುಕ್ತಿಮುಕ್ತಿಗಳನೆರಡಂ ಮತ್ತೆ
ಕರಮೆಸೆವ ಕಣ್ಗಳೆರಡಂ ಕೊಡೆ ಪಡೆಪನೆಂತೀ ನಾಲ್ಕು ವಸ್ತುಗಳನು
ನಿರುತಮೆಂದಾತ್ಮಲೋಚನಯುಗಳಮಂ ಕಳೆದು
ಪರಮೇಶ್ವರಂಗಿತ್ತು ಮರಳಿ ಪಡೆವರ್ ಕೆಲರ್
ಭರದಿನೇನುವನಾಶಿಗೆಯ್ಯದೇ ಕಣ್ಗಳಂ ಕಿೞ್ತಿಕ್ಕುವರ್ ಕೆಲಬರು (೫–೭–೨೬)

ಉದರಾರ್ಥಮಾದನ್ಯಜನರ್ಗೆತ್ತಿದೀ ಕರದೆ
ಸದಮಲಾತ್ಮಂಗೆ ಶಂಭುಗೆ ತುಳಿಲ್ಗೆಯ್ವುದದು
ವಿದಿತಮಾಗಿಯೆ ತೆಗಳೆನುತ್ತೆರಡು ಕೈಗಳಂ ತಱಿದಿಕ್ಕಿ ಸಂತೋಷದಿಂ
ಪಡೆದು ಪೊಸಕೈಗಳಂ ಪದೆದು ಮತ್ತಮಱಿಂದೆ
ಮದನಾರಿಗಂ ಕೂರ್ತು ಪೊಡೆಮಡುತ್ತಿರ್ಪ ಸೊಂ
ಪೊದವಿದ ಮಹಾಭಕ್ತರರೆಬರೆಸೆದಿರ್ದರಾ ಮಲ್ಲಿಕಾರ್ಜುನನಿದಿರೊಳು (೫–೭–೨೯)

ಪಿಂದುದಿನಮಾ ಕರ್ಮದೇಹಮಂ ತಾಳ್ದಿರ್ದ
ಉರಿಗಣ್ಣನೆನಿಪ ಶಿವಕರುಣಮಿಲ್ಲದೆ ಬಳಿ
ಕ್ಕಿರದೆ ಮದ್ದೇಹಮಂ ತಾಳ್ದಿರ್ಪುದಿನ್ನುಚಿತಮಲ್ತೆಂದು ತಿಳಿದಣಿಯರಂ
ಹರಿಸದಿಂ ತಮ್ಮ ದೇಹಂಗಳಂ ತಱಿದು ಬಂ
ಧುರ ವಿರಕ್ತಿಯಿನೀಶಪದಪದ್ಮದೊಳಗಿಟ್ಟು
ಕರಮೆ ದಿವ್ಯಾಂಗದಿಂ ರಾಜಿಸುತ್ತಿರ್ಪ ಸದ್ಭಕ್ತರೆಸೆದಪರದಱಿಕೊಳು (೫–೭–೩೧)

ಶ್ರೀಶೈಲಕ್ಕೆ ಬರುತ್ತಿದ್ದ ಭಕ್ತರ ವಿವಿಧ ರೀತಿನೀತಿಗಳನ್ನೂ ಆಚರಣೆಗಳನ್ನೂ ಪೂಜಾ ವಿಧಾನವನ್ನೂ ಕವಿ ಮನಂಬುಗುವಂತೆ ವರ್ಣಿಸಿದ್ದಾನೆ. ಭಕ್ತರ ತನ್ಮಯತೆಯನ್ನೂ ಅವರ ತಾದಾತ್ಮ್ಯವನ್ನೂ ಎಸಳೆಸಳಾಗಿ ಬಿಡಿಸಿ ತೋರಿಸಿದ್ದಾನೆ.

ಶ್ರೀಶೈಲದ ಪರಿಸೆಗೆ ಹೋಗುತ್ತಿದ್ದ ಭಕ್ತರು ಪಠಿಸುತ್ತಿದ್ದ ಗ್ರಂಥಗಳಿವು:

ಕರಮೆ ಋಗ್ವೇದಾದಿಪದಸೂಕ್ತಿನಿಕರದಿಂ
ದುರುತರ ಬ್ರಾಹ್ಮಣದ ಕಡೆಯ ಸೂಕ್ತಿಗಳಿಂದೆ
ಪರಮ ರುದ್ರಸ್ತವದ ಸೂಕ್ತಿಸಂದೋಹದಿಂದೀಶನಂ ನುತಿಸುವವರು
ಅರೆಬರ್ ಸಮಂತು ಶತರುದ್ರದೊಡವೆರೆದ ನುತಿವಿ
ಸರದಿಂ ಗಿರೀಶನಂ ಪೊಗಳುತ್ತೆ ಲಿಂಗಾರ್ಚ
ನಂಗೆಯ್ವುತಾನಂದದಿಂ ಶಿವನನೊಡವೆರೆದ ಲಸಿತಭಕ್ತರ್ ಕೆಲಬರು (೫–೮–೨೭)
ವರ ಸಾಮದೊಳಗಿರ್ದ ರುದ್ರಸೂಕ್ತಂಗಳಿಂ
ಹರನ ನುತಿಸುತ್ತರ್ಚಿಸುತ್ತಿರ್ಪವರ್ ಕೆಲರ್
ನಿರುತದಿನಥರ್ವ ಶಿರಸಾದಿ ರುದ್ರಸ್ತವಂಗಳನೋದುವರ್ ಕೆಲಬರು

ಉತುರುದ್ರಕವಚವಮಂ ಶಾರಭಮನೆಯ್ದೆ ಬಂ
ಧುರ ಬಾಣಗದ್ಯಮಂ ವ್ಯಾಸಾಷ್ಟಕಮನೆಸೆವ
ಪಿರಿದುಂ ಗಣಾಡಂಬರಾದಿ ನುತಿವಿಸರಮಂ ಪಠಿಸುತಿರ್ಪರ್ ಕೆಲಬರು(೫-೮-೨೮)
ವರ ಪುರಾತನಗೀತ ನಿಕರಂಗಳಂ ಮತ್ತೆ
ಹರಿಸದಿಂದಱುವತ್ತುಮೂವರ ಚರಿತ್ರಮಂ
ಸರಳ ಬಸವಪುರಾಣಕಥೆಗಳಂ ಪ್ರೀತಿಯಿಂದೋದುವರ್ ಪಲಕೆಲಬರು
ಪರಮ ಬಸವೇಶ್ವರರು ಪೇಳ್ದ ಗೀತಂಗಳಂ
ಸರಸಗಾನಂಗಳಿಂ ಪಾಡುತಿರ್ಪರ್ ಕೆಲಬ
ರಿರದೆ ಮಲ್ಲಯ್ಯ ಮಲ್ಲಯ್ಯ ಎಂದತಿಭಕ್ತಿಯಿಂದೆ ನುಡಿವರ್ ಕೆಲಬರು(೫-೮-೩೯)

ಮಲ್ಲಿಕಾರ್ಜುನ ವೃದ್ಧ ತಾಪಸವೇಷದಿಂದ ಬಂದು ದೋನಮಾರ್ಯನಿಗೆ ಶ್ರೀಶೈಲದ ಎಲ್ಲ ಸ್ಥಳಗಳನ್ನೂ ತೋರಿಸಿ ಅಲ್ಲಿಯ ಅನೇಕ ಚೋದ್ಯಗಳನ್ನು ವಿವರಿಸುವನು. ಒಟ್ಟನಲ್ಲಿ ಶ್ರೀಶೈಲದ ವರ್ಣನೆ ಕಣ್ಣಿಗೆ ಕಟ್ಟುವಂತೆ ಮಾಡಲಾಗಿದೆ. ಇದರಿಂದ ಶ್ರೀಶೈಲ ಒಂದು ಪರಮ ಪುಣ್ಯಕ್ಷೇತ್ರವೆಂಬ ಭಾವನೆ ತಾನಾಗಿಯೇ ಓದುಗರ ಮನಸ್ಸಿನಲ್ಲಿ ಉಂಟಾಗುತ್ತದೆ.

### ದ್ರಾಕ್ಷಾರಾಮ

ಪಂಡಿತಾರಾಧ್ಯರ ಜನ್ಮಭೂಮಿಯಾದ ದ್ರಾಕ್ಷಾರಾಮ ಇಂದಿಗೂ ಒಂದು ಜಾಗೃತ ಸ್ಥಾನವೆನಿಸಿದೆ. ಈ ದ್ರಾಕ್ಷಾರಾಮದಲ್ಲಿರುವ ಭೀಮೇಶ್ವರದೇವಾಲಯ ಇತಿಹಾಸ ಪ್ರಸಿದ್ಧ ವಾಗಿದೆ. ಅತ್ಯಂತ ಪ್ರಾಚೀನವಾದ ಈ ದೇವಾಲಯಕ್ಕೆ ರಾಜಮಹಾರಾಜರೂ ದಂಡ ನಾಯಕರೂ ಸಾಮಂತರೂ ದತ್ತಿಗಳನ್ನು ಬಿಟ್ಟಿರುವುದಕ್ಕೆ ಶಾಸನಾಧಾರಗಳಿವೆ. ನೂರಾರು ಶಾಸನಗಳಲ್ಲಿ ಈ ದೇವಾಲಯದ ಉಲ್ಲೇಖವಿದೆ. ತೆಲುಗು, ತಮಿಳು, ಸಂಸ್ಕೃತ ಶಾಸನ ಗಳಲ್ಲಿ ಭೀಮೇಶ್ವರದೇವಾಲಯದ ಪ್ರಸ್ತಾಪವಿದೆ.[1]

ದಕ್ಷಾರಾಮ ದಾಕ್ಷಾರಾಮ ದ್ರಾಕ್ಷಾರಾಮ ಎಂಬ ಹೆಸರುಗಳು ಈ ಪಟ್ಟಣಕ್ಕಿವೆ. ಇದು ಆಂಧ್ರಪ್ರದೇಶದ ರಾಜಮಹೇಂದ್ರಿಗೆ ಆಗ್ನೇಯದಿಕ್ಕಿನಲ್ಲಿ ಸುಮಾರು ೧೫ ಕ್ರೋಶ (ಹರಿ ದಾರಿ)ಗಳ ದೂರದಲ್ಲಿದೆ. ದಕ್ಷಪ್ರಜಾಪತಿ ಇಲ್ಲಿ ಯಾಗ ಮಾಡಿದ್ದರಿಂದ ಇದಕ್ಕೆ ದ್ರಾಕ್ಷಾರಾಮ ಎಂಬ ಹೆಸರು ಬಂದಂತೆ ಪ್ರತೀತಿ ಇದೆ. ಶ್ರೀನಾಥ ಕವಿಯ ಭೀಮೇಶ್ವರ ಪುರಾಣದಲ್ಲಿ ಇದರ ಉಲ್ಲೇಖವಿದೆ. ಈ ಭೀಮೇಶ್ವರಾಲಯದಲ್ಲಿ ಸುಮಾರು ನಾಲ್ಕುನೂರು ಶಾಸನಗಳಿವೆ. ಈ ಶಾಸನಗಳಲ್ಲಿ ದ್ರಾಕ್ಷಾರಾಮಕ್ಕೆ ಡಕರೇಮಿ, ಡಾಕರೇಮಿ, ಪೆದ್ದಡಕರೇಮಿ ಎಂಬ ತೆಲುಗಿನ ಹೆಸರುಗಳಿರುವುದೂ ಕಂಡುಬರುತ್ತದೆ. ಶ್ರೀಶೈಲ, ಕಾಳೇಶ್ವರ, ದಕ್ಷಾರಾಮ ಈ ಮೂರ ರಿಂದ ಆಂಧ್ರದೇಶಕ್ಕೆ ತ್ರಿಲಿಂಗದೇಶ ಎಂಬ ಹೆಸರು ಪ್ರಾಪ್ತವಾಯಿತೆಂದು ಬ್ರಹ್ಮಪುರಾಣ

---

[1] *South Indian Inscriptsons, Vol. IV, No. 1006-1387*

ದಲ್ಲಿ ಕೇಳಿವೆ. ಕ್ರಿ.ಪೂ. ೨೦೧ ವರ್ಷಗಳಿಂದ ದಾಕ್ಷಾರಾಮವು ಶಿವಕ್ಷೇತ್ರವಾಗಿತ್ತೆಂದೂ ಅದಕ್ಕೆ ಮೊದಲು ಬೌದ್ಧಕ್ಷೇತ್ರವಾಗಿತ್ತೆಂದೂ ಚರಿತ್ರಕಾರರು ಊಹಿಸಿದ್ದಾರೆ. ಆದರೆ ಕ್ರಿ.ಶ. ೮೯೨ ರಿಂದ ೯೨೨ ರ ವರೆಗೆ ವೆಂಗಿರಾಜ್ಯವನ್ನು ಆಳುತ್ತಿದ್ದ ಚಾಳುಕ್ಯ ಭೀಮರಾಜ ಸಾಮರ್ಲಕೋಟೆ ಭೀಮವರದಲ್ಲಿ ಭೀಮೇಶ್ವರಾಲಯವನ್ನೂ ದಾಕ್ಷಾರಾಮದಲ್ಲಿಯೂ ಅಂತಹುದೇ ಒಂದು ಆಲಯವನ್ನೂ ನಿರ್ಮಿಸಿ ಎರಡು ಕಡೆಗಳಲ್ಲೂ ಮೊದಲು ಈಶ್ವರನನ್ನು ಪ್ರತಿಷ್ಠಾಪಿಸಿ ತರುವಾಯ ತನ್ನ ಹೆಸರಿನ 'ಭೀಮೇಶ್ವರ ನಾಮ'ವನ್ನು ಇಟ್ಟನೆಂದು ಕೆಲವರು ಹೇಳುತ್ತಾರೆ. ಶಿವನು ದೇವತೆಗಳ ಪ್ರಾರ್ಥನೆಯಂತೆ ಭೀಮರೂಪವನ್ನು ತಾಳಿ ತಾರಕಾಸುರನೇ ಮೊದಲಾದ ರಾಕ್ಷಸರು ಪೂಜಿಸುತ್ತಿದ್ದ ಲಿಂಗವನ್ನು ಐದು ತುಂಡುಗಳಾಗಿ ಮಾಡಿದನೆಂದೂ ಆ ತುಂಡುಗಳನ್ನು ಪ್ರತಿಷ್ಠಿಸಿದ ಸ್ಥಳಗಳು ಅಮರಾವತಿ, ಸೋಮಾರಾಮ, ಕ್ಷೀರಾರಾಮ, ಕುಮಾರಾರಾಮ, ದಕ್ಷಾರಾಮ ಎಂಬ ಪಂಚಾರಾಮ ಕ್ಷೇತ್ರಗಳಾದುವೆಂಬ ಒಂದು ಗಾಥೆ ಇದೆ. ಈ ಪಂಚಕ್ಷೇತ್ರಗಳಲ್ಲಿ ದಾಕ್ಷಾರಾಮ ಹೆಚ್ಚು ಪ್ರಸಿದ್ಧಿಗೆ ಬಂದಿದೆ. ಆಂಧ್ರದೇಶವನ್ನಾಳಿದ ಚಾಳುಕ್ಯರು, ಚೋಳರು, ವೆಲನಾಟಿ ಚೋಳರು, ಕಾಕತೀಯರು, ಪೂರ್ವಗಂಗರು, ಕೊಂಡವೀಡು ರಾಜಮಹೇಂದ್ರಿಗಳನ್ನು ಆಳಿದ ರೆಡ್ಡಿರಾಜರು, ವಡ್ಡಾದಿ ಮತ್ಸ್ಯರಾಜರು, ಕೋಟವಂಶೀಯರು, ಪರಿಚ್ಛೇದರು, ಛೇಗಿರಾಜರು, ಗಜಪತಿರು, ಕೋನವಂಶದವರು, ವಿಜಯನಗರದ ಸಂಗಮವಂಶೀಯರು ಮೊದಲಾದ ರಾಜ್ಯಪಾಲರೂ ಕೆಲವರು ಶ್ರೀಮಂತರೂ ದಾಕ್ಷಾರಾಮದ ಭೀಮೇಶ್ವರನಿಗೆ ಕೈಂಕರ್ಯಗಳನ್ನು ಮಾಡಿ ಶಾಸನಗಳನ್ನು ಕೆತ್ತಿಸಿದರು. ಈ ಶಾಸನಗಳಲ್ಲಿ ಮೊದಲನೆಯದು ಕ್ರಿ.ಶ. ೧೦೩೮ರದು.

ದಕ್ಷಾರಾಮದ ಬಗೆಗೆ ಅನೇಕ ಪುರಾಣ ಗಾಥೆಗಳಿವೆ. ಭಾರತದ ದ್ವಾದಶಜ್ಯೋತಿರ್ಲಿಂಗಗಳಲ್ಲಿ ದ್ರಾಕ್ಷಾರಾಮಲಿಂಗವೂ ಒಂದು. ಇಂದ್ರೇಶ ಸಿದ್ಧೇಶ್ವರರೇ ಆದಿಯಾದ ದ್ವಾದಶಕ್ಷೇತ್ರಗಳೂ ದಕ್ಷಯಾಗಾಗ್ನಿ ಮೊದಲಾದ ಪಂಚತೀರ್ಥಗಳೂ ಇಲ್ಲಿವೆ.

ಭೀಮೇಶ್ವರ ದೇವಾಲಯದ ಗರ್ಭಾಲಯವು ಎರಡು ಆವರಣಗಳ ಮಧ್ಯೆ ಇದೆ. ಈ ದೇವಾಲಯವು ಸುಮಾರು ಆರು ಎಕರೆ ವಿಸ್ತೀರ್ಣವುಳ್ಳದ್ದಾಗಿದೆ. ಇದರ ನಾಲ್ಕು ದಿಕ್ಕುಗಳ ಗೋಡೆಗಳ ಮಧ್ಯಭಾಗದಲ್ಲಿ ಎತ್ತರವಾದ ದ್ವಾರಗಳೂ ಅವುಗಳ ಮುಂದೆ ಮಂಟಪಗಳೂ ಮೇಲುಗಡೆ ವಿಸ್ತಾರವಾದ ಶಿಲ್ಪಶೋಭಿತ ಗೋಪುರಗಳೂ ಇವೆ. ಗೋಡೆಗಳು ಸಂಧಿಸುವ ನಾಲ್ಕು ಮೂಲೆಗಳಲ್ಲಿ ನಾಲ್ಕು ನಂದಿಗಳಿವೆ. ನೈಋತ್ಯ ದಿಕ್ಕಿನಲ್ಲಿ ೧೩ ಸ್ತಂಭಗಳ ಮಂಗಳವಾರದ ಮಂಟಪವೂ ಉತ್ತರ ಮತ್ತು ಮಧ್ಯಭಾಗದಲ್ಲಿ ೭೪ ಸ್ತಂಭಗಳ ಸೋಮವಾರದ ಮಂಟಪವೂ ಇವೆ. ಈಶಾನ್ಯದಲ್ಲಿ ರುದ್ರತೀರ್ಥಾಕೃತಿಯ ಒಂದು ಹಳೆಯ ಬಾವಿ ಇದೆ. ಪಾಕಶಾಲೆಗಳು ಧಾನ್ಯದ ಕೋಠಿಗಳು ಇಂದು ಹಾಳುಬಿದ್ದಿವೆ. ಪೂರ್ವದಿಕ್ಕಿನಲ್ಲಿ ಸಪ್ತಗೋದಾವರಿಯಲ್ಲಿ ಮೂರುಮಂಟಪಗಳಿವೆ. ಪಶ್ಚಿಮದ್ವಾರದ ಸಮೀಪದಲ್ಲಿ ಶಂಕರನಾರಾಯಣರ ಎರಡು ವಿಗ್ರಹಗಳಿವೆ. ದಕ್ಷಿಣದ್ವಾರದ ಕಡೆ ವಾಮನ ವಿಶ್ವೇಶ್ವರ ಅನ್ನಪೂರ್ಣ ವಿಗ್ರಹಗಳುಳ್ಳ ಮೂರು ಆಲಯಗಳಿವೆ. ಅಂತರಾವರಣದಲ್ಲಿ ಡುಂಡಿಗಣಪತಿ ನೃತ್ತಗಣಪತಿಗಳಿದ್ದಾರೆ. ಈ ಅಂತರಾವರಣ ಒಂದುಎಕರೆ ವಿಸ್ತೀರ್ಣ

ವುಳ್ಳದ್ದಾಗಿದೆ. ಈ ಆವರಣದ ಸುತ್ತಲೂ ಉಳ್ಳ ಮಂಟಪವು ಎರಡು ಅಂತಸ್ತುಗಳನ್ನು ಹೊಂದಿದೆ. ಈಶಾನ್ಯದಲ್ಲಿ ಪ್ರಧಾನಶಕ್ತಿ ಪೀಠವಾದ ಮಾಣಿಕ್ಯಾಂಬಿಕಾಲಯವಿದೆ. ದಕ್ಷಿಣ ದ್ವಾರವು ಎರಡು ಅಂತಸ್ತುಗಳನ್ನು ಹೊಂದಿದೆ. ಕೆಳಅಂತಸ್ತಿನಲ್ಲಿ ಆಂಜನೇಯಸ್ವಾಮಿ, ದುರ್ಗಿ, ಸೂರ್ಯೇಶ್ವರ, ಭೀಮಸಭೆ, ಅಷ್ಟದಿಕ್ಪಾಲಕರು, ನವಗ್ರಹಗಳ ವಿಗ್ರಹಗಳಿವೆ. ಮೇಲಿನ ಅಂತಸ್ತಿನಲ್ಲಿ ವೀರಭದ್ರ, ವಟುಕಭೈರವ, ಗಣಪತಿಯ ವಿಗ್ರಹಗಳೂ ದಕ್ಷಿಣದಲ್ಲಿ ನಾಕುಲೇಶ್ವರ, ಚತುರ್ಮುಖಬ್ರಹ್ಮ, ಲಕ್ಷ್ಮೀನಾರಾಯಣಸ್ವಾಮಿ, ವಿರೂಪಾಕ್ಷಸ್ವಾಮಿ, ಪಶ್ಚಿಮದಲ್ಲಿ ಸಪ್ತಮಾತೃಕೆಯರು, ನಟರಾಜ, ಸುಬ್ರಹ್ಮಣ್ಯೇಶ್ವರ, ದುರ್ಗಿಯ ವಿಗ್ರಹಗಳಿವೆ. ಭೀಮೇಶ್ವರನಿಗೆ ಎದುರಾಗಿ ಕೈಲಾಸಗಣಪತಿಯೂ ನೈಋತ್ಯದಲ್ಲಿ ವ್ಯಾಸರ ವಿಗ್ರಹವೂ ಇವೆ. ಶಿವರಾತ್ರಿಯಂದು ಸ್ವಾಮಿಗೆ ಉತ್ಸವಾದಿಗಳು ಜರುಗುತ್ತವೆ. ಭೀಷ್ಮೈಕಾದಶಿಯಂದು ಕಲ್ಯಾಣ ನಡೆಯುತ್ತದೆ. ಕೆಡ್ಡಿರಾಜರ ಕಾಲದಲ್ಲಿ ಈ ವಸಂತೋತ್ಸವಾದಿಗಳು ಅತ್ಯಂತ ವೈಭವದಿಂದ ಜರುಗುತ್ತಿದ್ದುವು. ಈ ಸ್ವಾಮಿಗೆ ಐದು ಗ್ರಾಮಗಳಲ್ಲಿ ಒಂದುಸಾವಿರದ ಆರು ನೂರು ಎಕರೆ ಭೂಮಿ ಇದೆ. ದಾಕ್ಷಾರಾಮ ಮಹಾನದಿಯರಿಗೆ ಕೂಡ ಪವಿತ್ರಸ್ಥಲವಾಗಿದೆ. ಪ್ರತಿಸೋಮವಾರ ಇಲ್ಲಿ ಜರುಗುವ ದನಗಳ ಸಂತೆ ಗೋದಾವರಿ ಜಿಲ್ಲೆಯಲ್ಲಿ ಬಹಳ ದೊಡ್ಡದು[1].

## ೬. ಮಲ್ಲಿಕಾರ್ಜುನ ಪಂಡಿತಾರಾಧ್ಯ

ಶೈವಧರ್ಮವು ಭರತಖಂಡದ ಅತ್ಯಂತ ಪ್ರಾಚೀನ ಧರ್ಮಗಳಲ್ಲಿ ಒಂದು. ಇದು ಅನಾದಿಕಾಲದಿಂದ ಆಸೇತು ಹಿಮಾಚಲ ಪ್ರಚಲಿತವಾಗಿದೆ. ಈ ದೇಶದ ಜನತೆ ಈ ಧರ್ಮಕ್ಕೆ ವಿಶೇಷವಾದ ಗೌರವವನ್ನೂ ಮನ್ನಣೆಯನ್ನೂ ಸಲ್ಲಿಸುತ್ತ ಬಂದಿದ್ದಾರೆ. ಶೈವ ಧರ್ಮದ ಮೇಲ್ಮೆಯನ್ನು ಕುರಿತು ಅನೇಕ ದೇಶೀಯ ಮತ್ತು ವಿದೇಶೀಯ ವಿದ್ವಾಂಸರು ಉದ್ಗ್ರಂಥಗಳನ್ನು ರಚಿಸಿದ್ದಾರೆ. ಇಷ್ಟು ವ್ಯಾಪಕವೂ ಪ್ರಭಾವಯುತವೂ ಆಗಿದ್ದ ಧರ್ಮ ವೈದಿಕ ಬೌದ್ಧ ಜೈನಧರ್ಮಗಳ ತಲೆಯೆತ್ತುವಿಕೆಯಿಂದ ಕ್ರಮೇಣ ಮಸಳಿಸತೊಡಗಿತು. ಹಲವಾರು ಪ್ರಭೇದಗಳಿಗೆ ಒಳಗಾಗಿ ಹರಿದು ಹಂಚಿಹೋಯಿತು. ಪಾಶುಪತ, ಕಾಳಾಮುಖ, ಲಕುಲೀಶ ಮತ್ತು ಕಾಪಾಲಿಕ ಇವು ಇದರ ಪ್ರಮುಖ ಶಾಖೆಗಳು. ಈ ಶೈವ ಧರ್ಮದಿಂದ ಉದ್ಭವಿಸಿದ ಮತ್ತೊಂದು ಶಾಖೆಯೇ ವೀರಶೈವಧರ್ಮ. ಈ ಎಲ್ಲ ಪ್ರಭೇದ ಗಳವರೂ ಶಿವೋಪಾಸಕರೇ. ಶೈವಧರ್ಮದಿಂದ ಕವಲೊಡೆದ ವೀರಶೈವಧರ್ಮ ದಕ್ಷಿಣ ಭಾರತದಲ್ಲಿ ಅದರಲ್ಲೂ ಕರ್ನಾಟಕ ಮತ್ತು ಆಂಧ್ರಪ್ರದೇಶಗಳಲ್ಲಿ ನೆಲೆಯೂರಿತು. ಹನ್ನೆರಡನೆಯ ಶತಮಾನದ ವೇಳೆಗೆ ಈ ಧರ್ಮ ತುಂಬ ವ್ಯಾಪಕವಾಗಿ ಕರ್ನಾಟಕದಲ್ಲಿ ಒಂದು ಧರ್ಮಜಾಗೃತಿಯುಂಟಾಯಿತು. ವೀರಶೈವಧರ್ಮದ ಪ್ರವರ್ತಕರು ಆಚಾರ್ಯರು ಈ ಎರಡೂ ನಾಡಿನಲ್ಲಿ ಜನ್ಮತಳೆದು ಇದರ ಅಸ್ತಿತ್ವಕ್ಕೆ ಈ ಧರ್ಮದ ಪ್ರಸಾರಕ್ಕೆ

---

[1] ಸಂಗ್ರಹಾಂಧ್ರ ವಿಜ್ಞಾನಕೋಶಮು : ಸಂಪುಟ 4 : ಪುಟ 621-625

ಒಂದು ಭದ್ರವಾದ ಬುನಾದಿಯನ್ನು ಹಾಕಿದರು. ಹೀಗೆ ಮಾಡಿದವರಲ್ಲಿ ಆಂಧ್ರದಲ್ಲಿ ಜನಿಸಿದ ಮಲ್ಲಿಕಾರ್ಜುನ ಪಂಡಿತಾರಾಧ್ಯರು ಪ್ರಮುಖರು. ಆರಾಧ್ಯಚಾರಿತ್ರದ ಕಥಾ ನಾಯಕ ಮಲ್ಲಿಕಾರ್ಜುನ ಪಂಡಿತಾರಾಧ್ಯರು ಭೂಲೋಕದಲ್ಲಿ ವೀರಶೈವಧರ್ಮವನ್ನು ಪ್ರಚಾರ ಮಾಡುವುದಕ್ಕಾಗಿ ಅವತರಿಸಿದ ಕಾರಣಪುರುಷರು. ಇವರು ಧರ್ಮಸುಧಾರಕ ರಷ್ಟೇ ಅಲ್ಲದೆ ಕೆಲವಾರು ಕೃತಿಗಳನ್ನೂ ವಚನಗಳನ್ನೂ ರಚಿಸಿದಂತೆ ತಿಳಿದುಬರುತ್ತದೆ. ಶಿವತತ್ತ್ವಸಾರಮು, ಗಣಸಹಸ್ರನಾಮ, ಇಷ್ಟಲಿಂಗ ಸ್ತೋತ್ರ, ಬಸವಗೀತೆ—ಈ ಮೊದ ಲಾದ ಕೃತಿಗಳನ್ನು ತೆಲುಗು ಸಂಸ್ಕೃತ ಕನ್ನಡ ಭಾಷೆಗಳಲ್ಲಿ ಬರೆದಂತೆ ಪ್ರತೀತಿಯಿದೆ. ಇವರ ವಚನಗಳ ಅಂಕಿತ ಗುರುಸಿದ್ಧಮಲ್ಲ ಎಂದು ಹೇಳಲಾಗಿದೆ.

ಪಂಡಿತಾರಾಧ್ಯರು ಪಂಚಾಚಾರ್ಯರಲ್ಲಿ ಒಬ್ಬರೆಂದು ಕೆಲವರೂ ಇವರು ಪಂಚಾ ಚಾರ್ಯರಿಂದ ಭಿನ್ನರೆಂದು ಮತ್ತೆ ಕೆಲವರೂ ಅಭಿಪ್ರಾಯಪಟ್ಟಿದ್ದಾರೆ. ಈ ಪಂಚಾ ಚಾರ್ಯರ ಕಾಲ ದೇಶ ವರ್ತಮಾನಗಳ ಬಗೆಗೆ ಸಾಕಷ್ಟು ವಾದವಿವಾದಗಳಿವೆ. ಶಿವನ ಪಂಚಮುಖಗಳಿಂದ ಉದ್ಭವಿಸಿದ ಈ ಆಚಾರ್ಯರು ಒಂದೊಂದು ಯುಗದಲ್ಲಿ ಒಂದೊಂದು ಹೆಸರಿನಿಂದ ಪ್ರಸಿದ್ಧರಾಗಿದ್ದಂತೆ ತಿಳಿದುಬರುತ್ತದೆ. ಕಲಿಯುಗದಲ್ಲಿ ಇವರು ರೇವಣಾರಾಧ್ಯ, ಮರುಳಾರಾಧ್ಯ, ಏಕೋರಾಮಾರಾಧ್ಯ, ಪಂಡಿತಾರಾಧ್ಯ, ವಿಶ್ವಾರಾಧ್ಯ ಎಂಬ ಹೆಸರುಗಳಿಂದ ಪರಿಚಿತರಾಗಿದ್ದಾರೆ. ಈ ಪಂಚಾಚಾರ್ಯರ ಪೀಠಗಳು (1) ರೇಣುಕ ಪೀಠ: ಇದು ಕರ್ನಾ ಟಕ ರಾಜ್ಯದ ಚಿಕ್ಕಮಗಳೂರು ಜಿಲ್ಲೆ ಕೊಪ್ಪ ತಾಲ್ಲೂಕಿನ ಬಾಳೇಹಳ್ಳಿಯಲ್ಲಿದೆ. ಭದ್ರಾ ನದಿಯ ದಂಡೆಯಲ್ಲಿದೆ. ಇದು ರಂಭಾಪುರಿ ಎಂಬ ಹೆಸರಿನಿಂದಲೂ ಬಾಳೇಹೊನ್ನೂರು ಎಂಬ ಹೆಸರಿನಿಂದಲೂ ಪ್ರಸಿದ್ಧವಾಗಿದೆ. (2) ದಾರುಕ ಪೀಠ: ಇದು ಮಧ್ಯಪ್ರದೇಶ ಪ್ರಾಂತ್ಯಕ್ಕೆ ಸೇರಿದ ಉಜ್ಜಯಿನಿ ಎಂಬ ಊರಿನಲ್ಲಿದೆ. ಕ್ಷಿಪ್ರಾನದಿಯ ತೀರದಲ್ಲಿದೆ. (3) ಶ್ರೀಶೈಲಪೀಠ: ಇದು ಆಂಧ್ರಪ್ರದೇಶದ ಕರ್ನೂಲು ಜಿಲ್ಲೆಯ ನಂದಿಕೊಟ್ಕೂರು ತಾಲ್ಲೂಕಿನ ಕೃಷ್ಣಾ ನದಿಯ ತೀರದಲ್ಲಿದೆ. (4) ಕೇದಾರಪೀಠ: ಇದು ಹಿಮಾಲಯ ಪರ್ವತದ ಅಮರಗಂಗಾ ನದಿಯ ತೀರದಲ್ಲಿದೆ. (5) ಕಾಶೀಪೀಠ: ಇದು ಕಾಶಿಯಲ್ಲಿ ಗಂಗಾನದಿಯ ತೀರದಲ್ಲಿದೆ.

ಪಂಚಾಚಾರ್ಯರ ಬಗ್ಗೆ ಡಾ. ಎಂ. ಆರ್. ಸಾಖರೆ ಅವರು ಈ ರೀತಿ ಹೇಳಿ ದ್ದಾರೆ—

**They are five traditional Acharyas associated with the Veerashiva religion. In the minds of men that they have any knowledge of them their figures are dim. Their memories are curiously mixed up with men and matters belonging to different ages: Agastya, Vibhishana, Rajendra Chola, Bijjala all come to be their contemporaries regardless of the fact that historically ages Yawn between Bijjala and Vibhishana**[1]

[1] *History and Philosophy of Lingayat Religion, Page 248*

We are told that the five Acharyas originated from five faces of Shiva. We are again told that they are the five of the Shivaganas chosen by Shiva and sent down to the earth to found the religion. These two statements evidently contradict each other. If they cannot be true together which of the two is true?

How can five Acharyas be founders of a religion at one and the same time? The order in which the names of these five Acharyas are usually mentioned gives one the impression that they come down to the earth one after another. If they did so, how can all the five be credited with the founding of the religion? Must it not be that only one of them founded it and the others only promoted it?

The Acharyas are said to have risen from Sthavaralingas with a view to preaching the religion of Isthalinga, the soul of Lingayat religion. Can anything be more absurd than this?

Even supposing that they rose from the Sthavaralingas to found the religion of Ishtalinga, how to reconcile their preaching of the worship of Ishtalinga with their establishing of Sthavaralinga? (Renukacharya, for example, is said to have established thirty million Sthavaralingas at Lanka for Vibhishana instead of preaching the religion and philosophy of Ishatalinga.)[1]

ಪಂಡಿತಾರಾಧ್ಯರು ಶೈವರೆಂದೂ ಬ್ರಾಹ್ಮಣರೆಂದೂ ವೀರಶೈವರೆಂದೂ ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಪಾಲ್ಕುರಿಕೆ ಸೋಮನಾಥನು ಪಂಡಿತಾರಾಧ್ಯ ಚರಿತ್ರದಲ್ಲಿ ಈತನ ಪೂರ್ವಜರು ಬ್ರಾಹ್ಮಣರು ಎಂದು ಹೇಳಿರುವುದನ್ನೇ ನೀಲಕಂಠಾರಾಧ್ಯನೂ ಆರಾಧ್ಯಚಾರಿತ್ರದಲ್ಲಿ ಪ್ರತಿಪಾದಿಸಿದ್ದಾನೆ—

ಧರಣಿಯೊಳ್ ವೆಂಗಿದೇಶೇಂದಿರೆಯ ಮುಂದಲೆಯು
ಸಿರಿರನ್ನದಂತೆ ದ್ರಾಕ್ಷಾರಾಮವೆಂಬ ಪೊಳ
ಲುರುವೈಭವದಿನಿರ್ಪುದಲ್ಲಿ ಭೀಮೇಶ್ವರಂ ನೆಲಸಿರ್ಪನಾ ದೇವನ
ವರ ಪುರೋಹಿತನುತ್ತಮಂ ಪಾಣಸಾನ್ವಯೋ
ದ್ಧುರಜ ಭೀಮನಪಂಡಿತಂ ವಿಪ್ರನೊರ್ವನುರು
ತರ ಪುತ್ರಕಾಮನಾಗುತ್ತೆನ್ನ ಮೂರ್ತಿಯಂ ಪಿರಿದು ಪೂಜಿಸುತೆ ಮತ್ತಂ

(ದೀಕ್ಷಾಪ್ರಕರಣ : ೧–೯೫)

---

[1] *History and Philosophy of Lingayat Religion, Page 249*

ಇವರಿಂತೆ ಲಿಂಗಯಜ್ಞೋಪವೀತಗಳೆರಡನ್ನೂ ಧರಿಸಿದ್ದ ಆರಾಧ್ಯಬ್ರಾಹ್ಮಣವೆಂಬ ಒಂದು ಸಂಪ್ರದಾಯ ಇದ್ದಿರಬಹುದೆಂದು ತೋರುತ್ತದೆ. ಅಥವಾ ಇವರು ವೀರಶೈವನಿಷ್ಠೆಯುಳ್ಳ ಬ್ರಾಹ್ಮಣಪಂಗಡಕ್ಕೆ ಸೇರಿದವರಾದರೂ ಆಗಿದ್ದಿರಬಹುದು. ಬಸವಣ್ಣ, ಶ್ರೀಪತಿ ಪಂಡಿತ, ವೇಮನಾರಾಧ್ಯ, ಪಾಲ್ಕುರಿಕೆ ಸೋಮನಾರಾಧ್ಯ ಇವರೇ ಮೊದಲಾದವರು ಮೊದಲು ಈ ಸಂಪ್ರದಾಯಕ್ಕೆ ಸೇರಿದ್ದು ತರುವಾಯ ವೀರಶೈವರಾದಂತೆ ಅವರ ಚರಿತ್ರೆಯಿಂದ ತಿಳಿದುಬರುತ್ತದೆ. ಈ ಬಗ್ಗೆ ಶ್ರೀಶೈಲ ಪಂಡಿತಾರಾಧ್ಯಚರಿತ್ರಮು (ಪುಟ ೮೯–೯೦) ಎಂಬ ಗ್ರಂಥದ ಪೀಠಿಕೆಯಲ್ಲಿ ಹೀಗೆ ಹೇಳಲಾಗಿದೆ.

"ಬಸವೇಶ್ವರ ಮಲ್ಲಿಕಾರ್ಜುನ ಪಂಡಿತಾರಾಧ್ಯ ಇವರು ಆಂಧ್ರ ಮತ್ತು ಕರ್ಣಾಟಕದೇಶಗಳಲ್ಲಿ ವೀರಶೈವ ಮತವನ್ನು ಉದ್ಧರಿಸಿ ಪ್ರಚಾರ ಮಾಡುವುದಕ್ಕಾಗಿ ಅವತರಿಸಿದ ಮಹಾಪುರುಷರೇ ಹೊರತು ಆಚಾರ್ಯಪಂಚಕೋಕ್ತ ಮಠಾಚಾರ್ಯರೆನಿಸಲಾರರು. ಪಾಲ್ಕುರಿಕೆ ಸೋಮನಾಥನು ಸಹ ಇವರನ್ನು ಮಠಾಚಾರ್ಯರೆಂದು ಎಲ್ಲಿಯೂ ಹೇಳಿಲ್ಲ. ಶಿವಲೆಂಕಮಂಚಣಪಂಡಿತ ಶ್ರೀಪತಿಪಂಡಿತರಂತೆ ಮಲ್ಲಿಕಾರ್ಜುನಪಂಡಿತನೂ ಸಹ 'ಪಂಡಿತ' ಎಂಬ ಉಪಪದವಿರುವುದರಿಂದಲೂ ಈತನೂ ಸಹ ವೀರಶೈವ ಮತೋದ್ಧಾರಕನಾದ ಬಸವೇಶ್ವರ ಕಾಲದಲ್ಲಿದ್ದುದರಿಂದಲೂ ಈತನನ್ನು ವೀರಶೈವ ಪಂಚಾಚಾರ್ಯರಲ್ಲಿ ಪರಿಗಣಿಸುವುದು ದೊಡ್ಡಪ್ರಮಾದ. ಇಷ್ಟಕ್ಕೂ ಪಂಚಾಚಾರ್ಯರಲ್ಲಿ ಬಸವೇಶ್ವರನ ಹೆಸರೇ ಕಾಣದಿರುವಾಗ ಮಲ್ಲಿಕಾರ್ಜುನಪಂಡಿತನಿಗೆ ಅಲ್ಲಿ ನೆಲೆಗೊಡುವುದು ಆಶ್ಚರ್ಯ. ಮತ್ತು ಬಸವೇಶ್ವರ ಹಾಗೂ ಮಲ್ಲಿಕಾರ್ಜುನ ಪಂಡಿತಾರಾಧ್ಯರಿಬ್ಬರೂ ತಮ್ಮ ಜೀವನದ ಕಡೆಯವರೆಗೂ ಗೃಹಸ್ಥಾಶ್ರಮಿಗಳಾಗಿಯೇ ಇದ್ದು ಸತಿಸುತರೊಡನೆ ಸಂಸಾರವೆಸಗಿದಂತೆ ಪಾಲ್ಕುರಿಕೆ ಸೋಮನಾಥ ಮುಂತಾದವರ ಕೃತಿಗಳಲ್ಲಿ ಸ್ಪಷ್ಟವಾಗಿದೆ. ವೀರಶೈವ ಮಠಾಚಾರ್ಯ ಪೀಠಗಳಾದರೋ ಅದ್ವೈತಾದಿ ಮತಸ್ಥಾಪಕರಾದ ಶ್ರೀ ಶಂಕರಾದಿ ಆಚಾರ್ಯರಂತೆ ಪಾರಂಪರ್ಯವಾಗಿ ಸಂನ್ಯಾಸಾಶ್ರಮ ಸ್ವೀಕಾರ ಮಾಡಿದವರಿಂದಲೇ ಅಧಿಷ್ಠಿತವಾಗಿರುತ್ತವೆ. ವಿಚಾರಜ್ಞರಿಗೆ ಮಲ್ಲಿಕಾರ್ಜುನ ಪಂಡಿತನು ಆಚಾರ್ಯ ಪಂಡಿತನಲ್ಲವೆಂಬುದಕ್ಕೆ ಇದೊಂದೇ ಅಂಶವು ಸಾಕು."

ಡಾ. ಫ. ಗು. ಹಳಕಟ್ಟಿಯವರು ಶಿವಶರಣರ ಚರಿತ್ರೆಗಳು ಭಾಗ ೩, ಪುಟ ೧೮೦ ರಲ್ಲಿ ಈ ರೀತಿ ಅಭಿಪ್ರಾಯಪಟ್ಟಿದ್ದಾರೆ–"ಆಂಧ್ರವೀರಶೈವರು ರೇವಣಸಿದ್ಧ, ಮರುಳಸಿದ್ಧ ಮತ್ತು ಏಕೋರಾಮಸಿದ್ಧ ಎಂಬವರು ಸಿದ್ಧತ್ರಯರು ಎಂದೂ; ಶ್ರೀಪತಿಪಂಡಿತ, ಮಂಚಣ್ಣ ಪಂಡಿತ, ಮಲ್ಲಿಕಾರ್ಜುನ ಪಂಡಿತ ಎಂಬವರು ಪಂಡಿತತ್ರಯರೆಂದೂ; ಉದ್ಭಟ ವೇಮನಾರಾಧ್ಯಕೋಟಿಪಲ್ಯಾರಾಧ್ಯ (ವಿಶ್ವಾರಾಧ್ಯರೆಂತಲೂ ಹೇಳುವುದುಂಟು) ಎಂಬವರು ಆರಾಧ್ಯತ್ರಯರೆಂತಲೂ; ಮಾಯಿದೇವ, ಭಾಸ್ಕರ ಮತ್ತು ನೀಲಕಂಠ ಇವರು ಆಚಾರ್ಯತ್ರಯರೆಂತಲೂ; ಬಸವರಸ, ಬಾಚರಸ, ಸಕಲೇಶಮಾದರಸ ಇವರು ರಾಜತ್ರಯರೆಂತಲೂ; ರೇವಣಸಿದ್ಧ, ಮರುಳುಸಿದ್ಧ, ಏಕೋರಾಮಸಿದ್ಧ ಇವರು ಗುರುಪರಂಪರೆಯವರೆಂತಲೂ ಹೇಳುವುದುಂಟು. ಇವರೆಲ್ಲರನ್ನು ಆಂಧ್ರವೀರಶೈವರು ಅತ್ಯಂತ ಭಕ್ತಿಭಾವದಿಂದ ಎಂದಿ

ನಿಂದಲೂ ಕಾಣುತ್ತ ಬಂದಿದ್ದಾರೆ. ಇವರಲ್ಲಿ ಬಹುಜನರು ಕರ್ನಾಟಕದ ಶಿವಶರಣರೂ ಗ್ರಂಥಕಾರರೂ ಇದ್ದಾರೆ. ಇದರಿಂದ ಕರ್ನಾಟಕದ ಶರಣರ ಪ್ರಭಾವವು ಆಂಧ್ರವೀರಶೈವರ ಮೇಲೆ ಇದ್ದುದು ಸ್ಪಷ್ಟವಾಗಿ ತೋರಿಬರುತ್ತದೆ."

ಡಿ. ಎಲ್. ನರಸಿಂಹಾಚಾರ್ಯರು ಆಚಾರ್ಯ ಪಂಚಕದ ಬಗ್ಗೆ ಹೀಗೆ ಹೇಳಿದ್ದಾರೆ: "ಈ ಪಂಡಿತಾರಾಧ್ಯನೂ ವೀರಶೈವಪಂಡಿತತ್ರಯದಲ್ಲಿ ಒಬ್ಬನಾದ ಮಲ್ಲಿಕಾರ್ಜುನ ಪಂಡಿತಾರಾಧ್ಯನೂ ಅಭಿನ್ನರೆಂದು ಕವಿಚರಿತಕಾರರು ಅಭಿಪ್ರಾಯಪಡುತ್ತಾರೆ. ಆದರೆ ನಮಗೆ ದೊರೆತಿರುವ ಈ ಇಬ್ಬರ ಅಂಕಿತಗಳ ಭಿನ್ನತೆಯಿಂದ ಇವರು ಬೇರೆ ಬೇರೆ ಎಂದು ಹೇಳಬೇಕಾಗಿದೆ. ಇವರಿಬ್ಬರ ವಚನಗಳಲ್ಲಿ ಒಂದೊಂದು ನಮಗೆ ದೊರೆತಿದೆ. ಅಮರ ಗುಂಡದ ಮಲ್ಲಿಕಾರ್ಜುನ ತಂದೆಗಳ ಅಂಕಿತ 'ಅಮರಗುಂಡದ ಮಲ್ಲಿಕಾರ್ಜುನ' ಎಂದೂ, ಪಂಡಿತಾರಾಧ್ಯನ ಅಂಕಿತ 'ಗುರುಸಿದ್ಧಮಲ್ಲ' ಎಂದೂ ಇವುಗಳಿಂದ ಗೊತ್ತಾಗುತ್ತದೆ. ಆದುದರಿಂದ ಇವರಿಬ್ಬರೂ ಭಿನ್ನರೇ ಹೊರತು ಅಭಿನ್ನರಲ್ಲ. ಇವರಲ್ಲಿ ಪಂಡಿತಾರಾಧ್ಯನು ಬಸವನ ಸಮಕಾಲಿಕನಾಗಿದ್ದನೆಂದು ಕವಿಚರಿತಕಾರರು ಬರೆದಿರುವರು. ಪಂಡಿತಾರಾಧ್ಯನು ವೀರಶೈವಾಚಾರ್ಯಪಂಚಕದಲ್ಲಿ ಒಬ್ಬನೋ ಅಥವಾ ಇವನೇ ಬೇರೆ ಮತ್ತೊಬ್ಬ ವ್ಯಕ್ತಿಯೋ ಎಂಬುದನ್ನು ನಿರ್ದೇಶಿಸಿ ಹೇಳಲು ಆಧಾರಗಳಿಲ್ಲ. ಬಹುಶಃ ಇವನು ಆಚಾರ್ಯಪಂಚಕದಲ್ಲಿ ಒಬ್ಬನಾಗಿದ್ದನೆಂದು ನಾವು ಅಭಿಪ್ರಾಯಪಡುತ್ತೇವೆ. ಪಂಡಿತಾರಾಧ್ಯನು ಬಸವಣ್ಣನವರ ಸಮಕಾಲೀನನಾಗಿದ್ದುದರಿಂದಲೂ, ಆಚಾರ್ಯ ಪಂಡಿತಾರಾಧ್ಯನೂ, ಸಮಕಾಲಿಕ ನಾಗಿರಬೇಕಾದುದರಿಂದಲೂ, ಈ ಇಬ್ಬರೂ ಬಸವಣ್ಣನವರ ಸಮಕಾಲೀನರು. ಬಸವಣ್ಣ ನವರಿಗಿಂತ ಇವರಿಗೆ ಹೆಚ್ಚು ವಯಸ್ಸಾಗಿರಬೇಕು. ನಮಗೆ ದೊರೆತ ಆಚಾರ್ಯ ಪಂಡಿತಾ ರಾಧ್ಯನ ಒಂದು ವಚನವನ್ನು ಇಲ್ಲಿ ಕೊಡಬಹುದು.

ಇಲ್ಲದ ಕುತ್ತವ ಕೊಂಡು ಬಲ್ಲವರ ಬಾಯ ಹೊಗಹೋದಡೆ
ಆ ಬಲ್ಲಬಲ್ಲವರೆಲ್ಲ ಆ ಬಲೆಯಲ್ಲಿ ಅಲ್ಲತಗೊಳುತ್ತಿರ್ದ್ದರು
ಇದೆಲ್ಲಿಯ ಕುತ್ತವೆಂದು ತಿಳಿದು ವಿಚಾರಿಸಲು
ಅದೆಲ್ಲ ಬಯಲಾಯಿತ್ತು ಗುರುಸಿದ್ಧಮಲ್ಲ"

(ಪೀಠಿಕೆಗಳು, ಲೇಖನಗಳು : ಪುಟ ೪ ೧_೪೫೨)

ವೀರಶೈವ ಧರ್ಮಸಂಸ್ಥಾಪಕರೆನಿಸಿಕೊಂಡ ಪಂಚಾಚಾರ್ಯರ ಬಗೆಗೆ ವಿದ್ವಾಂಸ ರಲ್ಲಿ ಭಿನ್ನಾಭಿಪ್ರಾಯಗಳಿವೆ. ಈ ಪಂಚಾಚಾರ್ಯರ ಕಾಲದೇಶವರ್ತಮಾನಗಳ ಬಗೆಗೆ ಸಾಕಷ್ಟು ವಾದವಿವಾದಗಳಿವೆ. ಅಲ್ಲದೆ ಇವರು ಅಂಗೋದ್ಭವರೆಂದು ಕೆಲವರೂ ಲಿಂಗೋ ದ್ಭವರೆಂದು ಕೆಲವರೂ ಅಭಿಪ್ರಾಯಪಡುತ್ತಾರೆ. ಶಿವನ ಪಂಚಮುಖಗಳಿಂದ ಉದ್ಭವಿಸಿದ ಈ ಆಚಾರ್ಯರು ಒಂದೊಂದು ಯುಗದಲ್ಲಿ ಒದೊಂದು ಹೆಸರಿನಿಂದ ಪ್ರಸಿದ್ಧರಾಗಿದ್ದಂತೆ ತಿಳಿದುಬರುತ್ತದೆ. ಕಲಿಯುಗದಲ್ಲಿ ಇವರು ರೇವಣಾರಾಧ್ಯ ಮರುಳಾರಾಧ್ಯ ಏಕೋ ರಾಮಾರಾಧ್ಯ ಪಂಡಿತಾರಾಧ್ಯ ವಿಶ್ವಾರಾಧ್ಯ—ಈ ಪಂಚನಾಮಗಳಿಂದ ಪ್ರಚಲಿತರಾಗಿ

ದ್ದಾರೆ. ಈ ಹೇಳಿಕೆಗೆ ಪುರಾಣಾಗಮಗಳ ಸಾಕ್ಷ್ಯವನ್ನು ನೀಡುತ್ತಾರೆ. ಹೀಗಾಗಿ ಈ ಪಂಚಾಚಾರ್ಯರ ಕಾಲದೇಶ ವರ್ತಮಾನಗಳ ಬಗೆಗೆ ಸದ್ಯದಲ್ಲಿ ಖಚಿತವಾಗಿ ಏನನ್ನೂ ಹೇಳಲು ಬರುವಂತಿಲ್ಲ. ಪ್ರಸ್ತುತ ಆರಾಧ್ಯಚಾರಿತ್ರದಲ್ಲಿ ನಿರೂಪಿತವಾಗಿರುವ ಪಂಡಿತಾರಾಧ್ಯರ ಸಂಗತಿಗಳನ್ನು ಮಾತ್ರ ಇಲ್ಲಿ ಪ್ರಸ್ತಾಪಿಸಿದೆ.

## ೭. ಉಪಸಂಹಾರ

ಪಾಲ್ಕುರಿಕೆ ಸೋಮನಾಥನ ಪಂಡಿತಾರಾಧ್ಯಚರಿತೆಯ ಮಲ್ಲಿಕಾರ್ಜುನ ಪಂಡಿತ ಮರ್ತ್ಯದಲ್ಲಿ ವೀರಶೈವಧರ್ಮವನ್ನು ಉದ್ಧರಿಸಲು ಅವತರಿಸಿದ ಕಾರಣಿಕ ಪುರುಷ ಈ ಧರ್ಮದ ಅಭ್ಯುದಯಕ್ಕೂ ಪ್ರಚಾರಕ್ಕೂ ಇವರು ಕೈಕೊಂಡ ವಿಧಿವಿಧಾನಗಳು ಮೆರೆದ ಪವಾಡಗಳು ಪಂಡಿತ ಪಾಮರ ರಂಜಕವಾಗಿ ವರ್ಣಿತವಾಗಿವೆ. ಮಾನವರಾಗಿ ಮರ್ತ್ಯದಲ್ಲಿ ಜನಿಸಿ ಮಹತ್ಕಾರ್ಯಗಳನ್ನು ಮಾಡಿ ಈಶಸಾಕ್ಷಾತ್ಕಾರದಿಂದ ಈಶ್ವರನಲ್ಲೇ ಐಕ್ಯರಾದ ಮಹಾಮಹಿಮರು ಇವರು. ಈ ಕಾವ್ಯದಲ್ಲಿನ ಅನೇಕ ಘಟನೆಗಳು ಪವಾಡಗಳು ಇಂದು ಅಸಹಜವಾಗಿಯೂ ಅದ್ಭುತವಾಗಿಯೂ ತೋರಬಹುದು. ಆದರೆ ಸುಮಾರು ಎಂಟುನೂರು ವರ್ಷಗಳಿಗೂ ಹಿಂದೆ ಬಾಳಿ ಬದುಕಿ ಮಹತ್ಕಾರ್ಯಗಳನ್ನು ಮಾಡಿದ ಈ ಧರ್ಮಸುಧಾರಕರ ಬಗೆಗೆ ಅಂದಿನ ಜನತೆಯಲ್ಲಿದ್ದ ಗಾಢವಾದ ನಂಬಿಕೆಯೇ ಇವೆಲ್ಲಕ್ಕೂ ಕಾರಣವಾಗಿದೆ ಎನ್ನಬಹುದು. ಒಟ್ಟಿನಲ್ಲಿ ಮಲ್ಲಿಕಾರ್ಜುನ ಪಂಡಿತಾರಾಧ್ಯರು ವೀರಶೈವ ಧರ್ಮದ ಪ್ರಸಾರಕ್ಕೆ ಮಹತ್ತರವಾಗಿ ಶ್ರಮಿಸಿ ನಾಡಿನಾದ್ಯಂತ ಅದನ್ನು ಜ್ವಲಂತಗೊಳಿಸಿದರು.

ನೀಲಕಂಠಾಚಾರ್ಯನ ಆರಾಧ್ಯಚಾರಿತ್ರ ಕೇವಲ ಅನುವಾದಗ್ರಂಥವಲ್ಲವೆಂಬುದನ್ನು ಹಿಂದೆಯೆ ಸಾದರಪಡಿಸಲಾಗಿದೆ. ವಿದ್ವತ್ಪರಂಪರೆಯಲ್ಲಿ ಜನಿಸಿದ ನೀಲಕಂಠಾಚಾರ್ಯ ಅಪಾರವಾದ ಪಾಂಡಿತ್ಯವನ್ನು ಪ್ರದರ್ಶಿಸಿರುವುದು ಈ ಗ್ರಂಥದಲ್ಲಿ ಕಾಣಬಹುದಾಗಿದೆ. ಉಭಯ ಭಾಷಾಪಂಡಿತನಾದ ಈತ ಮೂಲಕಾವ್ಯಕ್ಕೆ ಯಾವ ರೀತಿಯಲ್ಲಿಯೂ ಅಪಚಾರ ಮಾಡದಂತೆ ಸಮರ್ಥವಾಗಿ ವಿಷಯ ನಿರೂಪಣೆ ಮಾಡಿದ್ದಾನೆ. ಆರಾಧ್ಯಚಾರಿತ್ರ ಒಂದು ಶಾಸ್ತ್ರಗ್ರಂಥ, ಧರ್ಮಗ್ರಂಥ; ಒಂದು ಉತ್ತಮ ಕಾವ್ಯ. ಮಿಗಿಲಾದ ಕಾವ್ಯಗುಣಗಳಿಂದಲೂ ಉನ್ನತ ಧಾರ್ಮಿಕ ಗುಣಗಳಿಂದಲೂ ಕೂಡಿರುವ ಈ ಕೃತಿ ವೀರಶೈವರಿಗಷ್ಟೇ ಅಲ್ಲದೆ ಇತರರಿಗೂ ಆದರಣೀಯವಾಗಬಲ್ಲುದು. ಧರ್ಮ, ಸಾಹಿತ್ಯ ಸಂಸ್ಕೃತಿಗಳ ಸಂಗಮವನ್ನು ಈ ಕಾವ್ಯದಲ್ಲಿ ಕಾಣಬಹುದಾಗಿದೆ. ಕೇವಲ ಬೃಹತ್ತಿನಿಂದಷ್ಟೇ ಅಲ್ಲದೆ ಮಹತ್ತಿನಿಂದಲೂ ಇದು ಮಿಗಿಲಾದ ಕೃತಿ. ಇಹಪರಸಾಧಕವಾದ ಏಕೈಕ ಮಹತ್ಕೃತಿಯನ್ನು ರಚಿಸಿದ ನೀಲಕಂಠಾಚಾರ್ಯ ಕೃತಾರ್ಥನಾಗಿದ್ದಾನೆ. ಈವರೆಗೆ ಅಪ್ರಕಟಿತವಾಗಿದ್ದ ಈ ಕೃತಿಯನ್ನು ನಾಲ್ಕು ಪ್ರತಿಗಳ ನೆರವಿನಿಂದ ಸಂಪಾದಿಸಲಾಗಿದೆ. ಅವುಗಳ ವಿವರ ಇಂತಿದೆ.

## ೮. ಗ್ರಂಥಸಂಪಾದನೆ

'ಕ' ಪ್ರತಿ:—ಇದು ಕನ್ನಡ ಅಧ್ಯಯನ ಸಂಸ್ಥೆಯ ಕೆ.ಎ.೭೩, ಕೆ.ಎ.೭೪ ನೆಯ ನಂಬರಿನ ಕಾಗದದ ಪ್ರತಿ. ಕೆ.ಎ.೭೩ ನೆಯ ನಂಬರಿನ ಹಸ್ತಪ್ರತಿಯ ಉದ್ದ ೧೨.೬" ಅಗಲ ೭.೮" ಇದರಲ್ಲಿ ೧–೨೦೫ ಪತ್ರಗಳಿವೆ. ಪ್ರತಿ ಪತ್ರದಲ್ಲಿ ೨೪ ಪಂಕ್ತಿಗಳಿವೆ. ಪ್ರತಿ ಪಂಕ್ತಿಯಲ್ಲಿ ೧೮ ಅಕ್ಷರಗಳಿವೆ. ಈ ಸಂಪುಟದಲ್ಲಿ ದೀಕ್ಷಾಪ್ರಕರಣ ಮತ್ತು ಪುರಾತನ ಪ್ರಕರಣಗಳು ಮುಗಿದು ವಾದಪ್ರಕರಣದಲ್ಲಿ ೨೮ ಪದ್ಯಗಳು ಮಾತ್ರ ಇವೆ. ಕೆ.ಎ.೭೪ ನೆಯ ನಂಬರಿನ ಹಸ್ತಪ್ರತಿಯ ಉದ್ದ ೧೨.೬" × ೭.೮". ಇದರಲ್ಲಿ ೧–೧೯೯ ಪತ್ರಗಳಿವೆ. ಪ್ರತಿ ಪತ್ರದಲ್ಲಿ ೨೪ ಪಂಕ್ತಿಗಳು, ಪ್ರತಿ ಪಂಕ್ತಿಯಲ್ಲಿ ೧೮ ಅಕ್ಷರಗಳಿವೆ. ಎರಡನೆಯ ಸಂಪುಟವು ವಾದ ಪ್ರಕರಣದ ೨೯ನೆಯ ಪದ್ಯದಿಂದ ಪ್ರಾರಂಭವಾಗಿ ಮಹಿಮಾ ಪರ್ವತ ಪ್ರಕರಣಗಳೊಂದಿಗೆ ಮುಕ್ತಾಯವಾಗುತ್ತದೆ. ಈ ಎರಡೂ ಭಾಗಗಳಲ್ಲಿ ೬೫ ಸಂಧಿಗಳೂ ೩೦೬೯ ಪದ್ಯಗಳೂ ಇವೆ. ಅಲ್ಲಲ್ಲಿ ಶಕಟರೇಫದ ಬಳಕೆ ಇದೆ. ಪ್ರತಿ ಸಮಗ್ರವಾಗಿದೆ, ಶುದ್ಧವಾಗಿದೆ. ಈ ಪ್ರತಿಯಿಂದ ಮುದ್ರಣಪ್ರತಿಯನ್ನು ತಯಾರಿಸಲಾಗಿದೆ.

'ಗ' ಪ್ರತಿ :—ಇದು ಕರ್ನಾಟಕ ವಿಶ್ವವಿದ್ಯಾನಿಲಯದ ವಚನ ವಾಙ್ಮಯ ಸಂಶೋಧನ ಶಾಖೆಯ ನಂ. ೨೫೦೧ ನೆಯ ಓಲೆಪ್ರತಿ. ಇದರಲ್ಲಿ ೧–೧೮೬ ಪತ್ರಗಳಿವೆ. ಇದರ ಉದ್ದ ೩೦.೫ ಸೆಂ.ಮೀ. ಅಗಲ ೫.೫ ಸೆಂ.ಮೀ. ಇದು ಸಮಗ್ರವಾಗಿದೆ, ಶುದ್ಧವಾಗಿದೆ. ಶಕಟರೇಫದ ಬಳಕೆಯನ್ನು ಕ್ರಮವಾಗಿ ಮಾಡಲಾಗಿದೆ. ಪ್ರತಿ ಸಂಧಿಯ ಪ್ರಾರಂಭದಲ್ಲಿ ಶಿರೋನಾಮೆಯನ್ನು ಕೊಡಲಾಗಿದೆ. ಸಂಪಾದನೆಯಲ್ಲಿ ಈ ಪ್ರತಿಗೆ ಬಹುಮಟ್ಟಿಗೆ ಆದ್ಯತೆ ಕೊಡಲಾಗಿದೆ. ಪ್ರತಿಯ ಕಡೆಯಲ್ಲಿ "ಶಾಲೀವಾಹನ.... ಮಲ್ಲಿಕಾರ್ಜುನದೇವರ ಪ್ರಿಯ ಶಿಷ್ಯನಾದ ರಾಚವಿಟದೇವರಿಗೆ ಪಂಡಿತಾರಾಧ್ಯಚಾರಿತ್ರವನು ಬರದಾತನು ಪೆನುಗೊಂಡೆಯ.... ಲುವ ಹರುಹೆಯ ಮಾಗಾಣಿಯ ಶಾನಭಾಗ ಲಿಂಗರಸಯ್ಯನ ಮಗ ಭೈರವಯನು ಬರದ ಪುಸ್ತಕಕ್ಕೆ ನಿತ್ಯಕಲ್ಯಾಣಮಸ್ತು" ಎಂಬ ಬರಹವಿದೆ.

'ಜ' ಪ್ರತಿ :—ಮುದ್ರಿತ ಪ್ರತಿ. ಇದರಲ್ಲಿ ದೀಕ್ಷಾಪ್ರಕರಣ ೬ ನೆಯ ಸಂಧಿ ೮ ನೆಯ ಪದ್ಯದವರೆಗೆ ಮಾತ್ರ ಇದೆ. ಇದು ಆರಾಧ್ಯ ಧರ್ಮೋಜ್ಜೀವಿನಿ ಮಾಸಪತ್ರಿಕೆಯಲ್ಲಿ ಬಿಡಿ ಬಿಡಿಯಾಗಿ ಪ್ರಕಟವಾಗಿದೆ. ಇದರಲ್ಲಿ ಶಕಟರೇಫವನ್ನು ಬಳಸಿಲ್ಲ.

'ಟ' ಪ್ರತಿ :—ಇದು ಮೈಸೂರಿನ ಶ್ರೀ ಜಿ. ಎ. ಶಿವಲಿಂಗಯ್ಯನವರ ಓಲೆಪ್ರತಿ. ಇದರ ಉದ್ದ ೧೩.೨" ಅಗಲ ೭". ಇದರಲ್ಲಿ ೧–೨೩೯ ಪತ್ರಗಳಿವೆ. ಪ್ರತಿ ಪತ್ರದಲ್ಲಿ ೧೧ ಪಂಕ್ತಿಗಳಿವೆ. ಪ್ರತಿ ಪಂಕ್ತಿಯಲ್ಲಿ ೭೫ ಅಕ್ಷರಗಳಿವೆ. ಈ ಪ್ರತಿಯನ್ನು ದೀಕ್ಷಾಪ್ರಕರಣ ೧೧ನೆಯ ಸಂಧಿ ೩೬ನೆಯ ಪದ್ಯದಿಂದ ಬಳಸಿಕೊಳ್ಳಲಾಗಿದೆ. ಪ್ರತಿಯ ಕಡೆಯಲ್ಲಿ "ರುಧಿರೋದ್ಗಾರಿ ಸಂವತ್ಸರದ ಚೈತ್ರ ಶುದ್ಧ ೬ ಬುಧವಾರದ ದಿವಸಕ್ಕೆ ಸಂದ ಶಾಲಿವಾಹನ ಶಕ ೧೫೪೫ ಕ್ಕೆ

ಶಿವಭಕ್ತ ಮರಿಯಪ್ಪನಾಯಕರಿಗೆ... ಲಿಂಗದೇವರು ಬರೆದುಕೊಟ್ಟ ಆರಾಧ್ಯಚಾರಿತ್ರ" ಎಂಬ ಬರಹವಿದೆ. ಶಕಟರೇಫವಿದೆ. ಪ್ರತಿ ಶುದ್ಧವಾಗಿದೆ, ಸಮಗ್ರವಾಗಿದೆ. ಸಂಪಾದನೆಯಲ್ಲಿ ಈ ಪ್ರತಿಯನ್ನು ವಿಶೇಷವಾಗಿ ಬಳಸಿಕೊಳ್ಳಲಾಗಿದೆ.

ಈ ಕೃತಿಯ ಸಂಪಾದನೆಗೆ ಹಸ್ತಪ್ರತಿಗಳನ್ನು ಎರವಲಾಗಿ ನೀಡಿದ ಕರ್ನಾಟಕ ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಪೀಠದ ಮುಖ್ಯಸ್ಥರಿಗೂ ಶ್ರೀಮರ್ನಾ ಜಿ. ಎ. ಶಿವಲಿಂಗಯ್ಯನವರಿಗೂ ಅತ್ಯಂತ ಕೃತಜ್ಞನಾಗಿದ್ದೇನೆ. ಆರಾಧ್ಯಚಾರಿತ್ರದ ಸಂಪಾದನ ಕಾರ್ಯದಲ್ಲಿ ಹಲವಾರು ಮಂದಿ ವಿವಿಧ ರೀತಿಗಳಲ್ಲಿ ನೆರವು ನೀಡಿದ್ದಾರೆ. ಪ್ರತಿಮಾಡುವುದರಿಂದ ಹಿಡಿದು ಕರಡಚ್ಚನ್ನು ತಿದ್ದುವವರೆಗೂ ಪೀಠಿಕೆ ಅನುಬಂಧಗಳನ್ನು ಸಿದ್ಧಪಡಿಸುವವರೆಗೂ ಸಹಕರಿಸಿದ ಸಂಪಾದನ ವಿಭಾಗದ ಸಹೋದ್ಯೋಗಿಗಳಿಗೆಲ್ಲ ನಾನು ವಿಶೇಷವಾಗಿ ಋಣಿಯಾಗಿದ್ದೇನೆ. ಈ ಕಾವ್ಯದಲ್ಲಿ ಬರುವ ಸಂಸ್ಕೃತ ಉದ್ಧರಣಗಳನ್ನು ಪರಿಶೀಲಿಸಿ ಕೊಟ್ಟುದಲ್ಲದೆ ಇತರ ಹಲವು ವಿಧಗಳಲ್ಲಿ ನೆರವಾದ ಪ್ರಾಚ್ಯವಿದ್ಯಾ ಸಂಶೋಧನಾಲಯದ ವಿದ್ವಾನ್ ಎಂ. ಎಸ್. ಬಸವರಾಜಯ್ಯನವರಿಗೆ ನಾನು ತುಂಬಾ ಆಭಾರಿಯಾಗಿದ್ದೇನೆ. ಅಂತೆಯೇ ಈ ಕಾವ್ಯದ ಪ್ರಕಟಣೆಯ ಬಗ್ಗೆ ವಿಶೇಷ ಕಳಕಳಿಯನ್ನು ತೋರಿದ ಡಾ. ಎಲ್. ಬಸವರಾಜು ಮತ್ತು ಆಸ್ಥಾನ್ ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ ಇವರಿಗೂ ನನ್ನ ನೆನಕೆಗಳು ಸಲ್ಲುತ್ತವೆ. ಈ ಮಹತ್ಕೃತಿಯನ್ನು ಸಂಪಾದಿಸುವಲ್ಲಿ ನನ್ನ ಅಜ್ಞಾನ ಅನವಧಾನ ಅನ್ಯಥಾಜ್ಞಾನ—ಇವುಗಳಿಂದ ಎಡೆವಾಯ್ದು ಬಂದ ತಪ್ಪುಗಳನ್ನು ಕಡೆತನಕ ಸಾಧಿಸದೆ ಬಂದ ಲೇಸಿಂಗೆ ತಲೆದೂಗಬೇಕೆಂದು ಪ್ರಾಜ್ಞರನ್ನು ಕೇಳಿಕೊಳ್ಳುತ್ತೇನೆ. "ಕೃತಿಯಧಿಕಮಿರ್ದೊಡೇಂ ತವೆಕೇಳ್ವರಿಲ್ಲದಡೆ" ಎಂಬಂತಾಗದೆ ಈ ಕೃತಿಯನ್ನು ಸಹಾನುಭೂತಿಯಿಂದ ಪರಿಶೀಲಿಸಬೇಕೆಂದು ವಿದ್ವಜ್ಜನರನ್ನು ಮತ್ತೊಮ್ಮೆ ವಿನಯಪೂರ್ವಕವಾಗಿ ಪ್ರಾರ್ಥಿಸುತ್ತೇನೆ.

ಕನ್ನಡ ಅಧ್ಯಯನ ಸಂಸ್ಥೆ
ಮೈಸೂರು

ಎನ್. ಬಸವಾರಾಧ್ಯ
ಉಪನಿರ್ದೇಶಕ

# ಮೊದಲನೆಯ ಸಂಧಿ

*ಸೂಚನೆ: ಭೂಮಿ[1]ಯೊಳ್[1] ಮಲ್ಲಿಕಾರ್ಜುನಪಂಡಿತಾರಾಧ್ಯ
ನಾಮನುನ್ನತ ಶಿವನ ಶಾಸನದಿನುದ್ಭವಿಸಿ
ಕಾಮಹರನಿಭಕೋಟಿಪಲ್ಯಾಖ್ಯ ದೇಶಿಕನ ಕೃಪೆವಡೆದು ಸುಖವಿರ್ದನು

ಶ್ರೀಮದಮಲಾಂಬಿಕಾತ್ತನುಕಾಂತಿಸಲಿಲಜೋ
ದ್ದಾಮ ನವತಾರುಣ್ಯತಾಮರಸಸೌರಭ
ಪ್ರೇಮಮುದರೋಲೆಂಬ ವಾಣೀಶ ಲಕ್ಷ್ಮೀಶ ಪೂಜಿತ ಸದಾಬ್ಜಯುಗಳ
ತಾಮರಸಮಿತ್ರ ಶುಚಿ ತಾಮರಸವೈರಿನಯ
ನಾ ಮಹಾಶ್ರಾದ್ಧದೇವಾವಲೇಪನ ರುಂದ್ರ
ಭೂಮಿಧ್ರಭಿನ್ನಭಿದುರಾ ಪಾಲಿಸೆಮ್ಮನಂ ಪ್ರೇಮದಿಂ ನೀಲಕಂಠ ೧

†ಉಱತ ನಮೋ ರುದ್ರಾಯ ಮನ್ಯವೇ ಎನುತೆ ಕೂ
ರ್ತೆಱಗೆ ಋಗ್ವೇದಂ ಯಜುರ್ವೇದವಳ್ತಿಯಿಂ
ದೆಱಗೆ ನಿಚ್ಚಂ ನಮಸ್ತೇ ರುದ್ರಮನ್ಯವೇ ಎನುತೆ ಸಲೆ ಸಾಮವೇದಂ
ಎಱಗೆ ರುದ್ರಾಯ ತೇ ರಸತೇ ನಮೋ ಎನುತೆ
ನೆಱತ ನಮೋ ರುದ್ರಾಯ ಎನುತಥರ್ವಣವೇದ
ವೆಱಗೆ ವೇದಾಳಿ ಯಸ್ಮೈ ನಮಸ್ತೇ ಶಿವೋ ಎನಲೀಶ್ವರಂಗೆಱಗುವೆಂ ೨

ವರ ಕೃಪಾದೃಷ್ಟಿ ಬೇಱಾಜ್ಞೆಯಾದಿಯ ಶಾಖೆ
ನೆರೆದಾದ್ಯತತ್ತ್ವಂಗಳುಪಶಾಖೆಗಳ್ ಶ್ರುತಿನಿ
ಕರಮೆಸೆವ ಪಲ್ಲವಚಯಂ ಮಂತ್ರತತಿ ಕುಸುಮದೋಳಿ ಲಿಂಗಂ ಸತ್ಫಲಂ
ಪರಿಮಳಂ ಜಂಗಮಂ ಫಲರಸಂ ಸುಪ್ರಸಾ
ದರಸವಾಪ್ಯಾಯನಂ ಮುಕ್ತಿಯಾಗಲ್ ತೋರ್ಪ
ಗುರುಕಲ್ಪತರುವೆಮಗೆ ಕಾರುಣ್ಯದಿಂದೀಗೆ ಕಾಮಿತಫಲವನಾವಗಂ ೩

---

1 ಯೊಳೆ (ಗ) * (ಗ) ಪ್ರತಿಯಲ್ಲಿ ಸೂಚನೆಗೆ ಬದಲಾಗಿ ಪಲ್ಲವ ಎಂದು ಮೊದಲಿಂದ ಕೊನೆಯವರೆಗೂ ಇದೆ. † (ಗ) ಪ್ರತಿಯಲ್ಲಿ ೨ನೆಯ ಪದ್ಯದಿಂದ ೧೩ನೆಯ ಪದ್ಯದವರೆಗೆ ಇಲ್ಲ. ೧೪ನೆಯ ಪದ್ಯದಿಂದ ಪದ್ಯ ೨, ೩ ಎಂದು ಕ್ರಮವಾಗಿದೆ.

ಚರವೆ ಚಿರಲಿಂಗಯುತತಿರವೆ ಹರಭಕ್ತಗೋ
ಚರವೆ ಚರಿತವ್ರತೋತ್ಕರವೆ ಕರುಣಾಂಬುಸಾ
ಗರವೆ ಗುರುತರಗುಣನಿಕರವೆ ಸುರುಚಿರಕಳೇಪರವೆ ಪರಮುದಮುಕುರವೆ
ವರವೆ ನಿರವಧಿಪುಣ್ಯಪುರವೆ ಸರಸೋಕ್ತಿವಿ
ಸ್ತರವೆ ದುರಿತಾಬ್ಜಕುಂಜರವೆ ಪರಮಾರ್ಥಮಂ
ದಿರವೆ ನಿರುಪಮಶಾಂತಿಕರವೆ ಪುರರಿಪುಚಿದಾಕರವೆ ಕರುಣಿಪುದು ಗುರುವೆ ೪

ಇಂದುಧರನಪರತನುವೆನಿಪ ಧರ್ಮಂ ಪ್ರಳಯ
ವೊಂದಲಭವಂಗೆ ವೃಷರೂಪವಾಹನಮಾಗಿ
ನಿಂದು ಮತ್ತೆ ಶಿಲಾದಮುನಿಗೆ ಹರನಾಜ್ಞೆಯಿನಯೋನಿಜ ತನೂಜನಾಗಿ
ನಂದಿನಾಮದಿನುಗ್ರತಪವಿರಲೊಡಂ ಶಿವಂ
ಬಂದನುಗ್ರಹಿಸಿ ಗಣನಾಥಪಟ್ಟಂಗಟ್ಟ
ಲಂದಿಂ ದ್ವಿತೀಯಶಂಭುವೆನಿಪ್ಪ ನಂದೀಶ್ವರಂಗೆ ವಂದಿಸುವೆನೊಸೆದು ೫

ಶಕ್ತಿಭಾಗವೆನಿಪ್ಪ ಪಲಲಾದಿಯಂ ಬಿಟ್ಟು
ಭಕ್ತಿನಿಷ್ಠಾಭರಿತ ದೇಹಮಂ ಮುಂದಿಟ್ಟು
ಯುಕ್ತಿ ನಿಲುಕದ ಶಿವೈಕ್ಯಾನುಭವಸಂಧಾನಯುಕ್ತಚೇತಸ್ಕನಾಗಿ
ರಕ್ತಿಯಿಂ ಭರತಶಾಸ್ತ್ರೋಕ್ತ ನಾಟಕದಭಿ
ವ್ಯಕ್ತಿಯಿಂ ಶಂಕರಂಗನುದಿನಂ ತೋಱುತುಂ
ಮುಕ್ತಾತ್ಮನಪ್ಪ ಭೃಂಗೀಶನೀಗೆಮಗೆ ನಿಷ್ಠಾಶಕ್ತಿಯಂ ಭಕ್ತಿಯಂ ೬

ರುದ್ರನುರುತರ ಕೋಪದುದ್ರೇಕದಿಂದೊಗೆ[1]ದ
ಭದ್ರಕಾಳೀಶಕ್ತಿ ಸದ್ರಕ್ತನಾಗಿ ಭಯ
ಕೃದ್ರೂಪ ಘನತರ ಕುಲಾದ್ರಿನಿಭ ಗಣವರರ ರೌದ್ರವಗ್ಗಲಿಸೆ ನಡೆದು
ಕ್ಷುದ್ರ ದಕ್ಷಾಧ್ವರೋಪದ್ರವಂಮಾಡಿ ಸುರ
ವಿದ್ರಾವಣಂಗೆಯ್ದು ಚಿದ್ರೂಪನಪ್ಪ ತ
ದ್ರುದ್ರನಡಿಗೆಱಗಿದ ವಿನಿದ್ರವಿಕ್ರಮ ವೀರಭದ್ರಂ ಕುಡುಗೆ ಭದ್ರಮಂ ೭

ಸಲ್ಲಲಿತ ಸಾತ್ವಿಕಗುಣದ ದೀಪ್ತಿ ಹೃದಯದೊಳ
ಗೆಲ್ಲಿಯುಂ ತೀವಿ ಮೇಲೊಗೆವ ಪರಿಯೋ ಬಗೆಯ
ಲಲ್ಲಿ ಚಿದ್ವ್ಯೋಮ ಶಶಿರುಚಿ ಮುಖದ್ವಾರದಿಂ ಪೊಱಸೂಸುವಂದಮೊ ಎನೆ

[1] ದು (ಜ)

ಸಲ್ಲ ಬೆಳಗುಗಳೊಡನೆ ದರಹಸಿತಮುಣ್ಮುತಿರ
ಲೆಲ್ಲಾ ಪುರಾತನರೊಳನುಭವನಂಗೆಯ್ಯುತಿ
ರ್ಪಲ್ಲಮಪ್ರಭುವಾರ್ಯವಲ್ಲಭಂ ಕುಡುಗೆಮಗೆ ಸೊಲ್ಲಿಡುವ ಬಲ್ಲತನವಂ ೮

ವಿಧ್ಯುಕ್ತ ಶಿವಯಜನ ವೃದ್ಧ್ಯುಪಗತಂ ದೇಶಿ
ಕಾಧ್ಯಕ್ಷನನುಪಮ ಮುನಿಧ್ಯೇಯ ಪರಶಿವ ಪ
ದಧ್ಯಾನರತನಮಲಬುದ್ಧ್ಯನ್ವಿತಂ ವಿಜಿತಮಾಧ್ಯಮಿಕಮತನವಧ್ಯಂ
ಬೋಧ್ಯ ಪಂಚಾಕ್ಷರೀಸಾಧ್ಯ ಕೈವಲ್ಯಸಂ
ಸಿದ್ಧ್ಯಪೇತಂ ಭಕ್ತ್ಯುಪಾ[1]ಧ್ಯಾ[1]ಯಕಂ ಶರಣ
ಮಧ್ಯಗಂ ಪಂಡಿತಾರಾಧ್ಯಗುರುವೆಮಗೆ ಸಾನ್ನಿಧ್ಯಮಂ ಮಾಳ್ಕಬಾಧ್ಯಂ ೯

ಆದಂ ಪ್ರಳಯದಲ್ಲಿ ಪರಮೇಶನಪರತನು
ವಾದ ಧರ್ಮಂ ವೃಷಾಕಾರ ವಾಹನಮಾಗಿ
ಸಾದರದಿನಿರೆ ಶಿವಂ ಬೆಸಸಲು ಶಿಲಾದಂಗಯೋನಿಜತನೂಜನಾಗಿ
ಮಾದೇವನಂ ನಂದಿನಾಮದಿಂ ಭಜಿಸಿದರ್
ಮೇದಿನಿಗೆ ಶಿವಭಕ್ತಿವರ್ಧನಾರ್ಥಂ ಬಂದು
ಮಾದಿರಾಜಂಗೊಗೆದು ಕಲ್ಯಾಣದೊಳಗೆಸೆವ ಬಸವೇಶನಂ ಬಣ್ಣಿಪೆಂ ೧೦

ಶೋಣಿಮಾಚಿತ ವರದ ಪಾಣಿ ಶಿವಲೋಕ ನಿ
ಶ್ರೇಣಿ ಜನಿವಲ್ಲೀಕೃಪಾಣಿ ಭಕ್ತ್ಯಂಕುರ
ಕ್ಷೋಣಿ ಸತ್ಯಸಮೇತವಾಣಿ ಭವಸಾಗರದ್ರೋಣಿ ಬಿಜ್ಜಳ ಸಮಕ್ಷಾ
ಕ್ಷೂಣಿತ ಖಲಾನನಶ್ರೇಣಿ ಚಿದ್ರಸನದೀ
ವೇಣಿ ನಿಸ್ಸೀಮ ಗೀರ್ವಾಣಿ ನಿಜಜಂಗಮ
ಪ್ರಾಣಿ ಬಸವೇಶ್ವರಂ ಕೇಣಿಗೊಂಡೆನ್ನ ಹೃನ್ಮಾಣಿಕ್ಯಗೃಹದೊಳಿರ್ಕೆ ೧೧

ವ್ಯೋಮಕೇಶಾರ್ಚನಾಪ್ರೇಮ ಸಿತಭಸಿತಾಭಿ
ರಾಮ ರುದ್ರಾಕ್ಷ ಸದ್ದಾಮ ಪಂಚಾಕ್ಷರೀ
ಧಾಮ ಚರಿತವ್ರತಸ್ತೋಮ ಕೃತಜಂಗಮಕ್ಷೇಮ ಶಿವಗಣಲಲಾಮ
ಶ್ರೀಮತ್ಪ್ರಸಾದ ಸುಖಕಾಮ ಸನ್ನುತ ಬಸವ
ನಾಮ ಗದಿತಾಗಮಗ್ರಾಮ ಪರತತ್ತ್ವ ವಿ
ಶ್ರಾಮ ದೇಶಿಕಸಾರ್ವಭೌಮ ಕರುಣಿಸು ವಾದಿಭೀಮ ಪಾಲ್ಕುರಿಕೆಸೋಮ ೧೨

---

[1] ನ್ಯಾ (ಕ)

ಶ್ರೀಗುರುವೆ ಜಗದೇಕಗುರುವೆ ಮದ್ಗುರುವೆ ಸಕ
ಲಾಗಮ ಪುರಾಣ ಶ್ರುತಿತತಿಯಱಿಸಿ ಕಾಣದ ಮ
ಹಾಗುರುವೆ ನಿತ್ಯನಿರ್ಮಲಗುರುವೆ ಪರಮಸವ್ಯಜ್ಞಾನಭರಿತಗುರುವೆ
ಆಗುಹೋಗೆಂಬುವಿಲ್ಲದ ಗುರುವೆ ನಿಖಿಲಶರ
ಣಾಗತರ ಪೊರೆವ ಘನಗುರುವೆ ನೀನೆನ್ನ ಹೃದ
ಯಾಗಾರದೊಳ್ ನೆಲಸಿ ಸಲಹುಗೆ ನಮೋ ನಮೋ ದಕ್ಷಿಣಾಮೂರ್ತಿ ಗುರುವೆ ೧೩

ಲುಂಪಂತಿ ದೈವಲಿಖಿತಾನಿ ಎನಿಸೆಸೆವ ಸಲೆ
ಸೊಂಪಡರ್ದ ಶ್ರೀವಿಭೂತಿಯ ನೊಸಲೊಳಿಟ್ಟು ನೆಱೆ
ಪೆಂಪಡರ್ದ ವಿಶ್ವತೋಬಾಹುವೆಂದೆನಿಪ ಘನಲಿಂಗಮಂ ಕರದ್ಕೊಳಿಟ್ಟು
ಇಂಪೊಗೆವ ಕರ್ಣಕೋಟೇರಮಧ್ಯದಲಿ ಮುದ
ದಿಂ ಪರಮ ಪಂಚಾಕ್ಷರಿಯನಿಟ್ಟು ಭವಪಾಶ
ಮಂ ಪಱಿದು ಜನನಿಕರಮಂ ಪೊರೆದ ವಿಶ್ವನಾಥಾರ್ಯಂಗೆ ವಂದಿಸುವೆನು ೧೪

ದುಷ್ಟತರ ಬಿಜ್ಜಲೋರ್ವೀಪರಿವೃಢಾಖರ್ವ
ಕಷ್ಟಗರ್ವಪ್ರಚಿತಿ ಶತಪತ್ರಕಾನನೋ
ತ್ಕೃಷ್ಟ ಮದದಂತಾವಲಪ್ರತಿಮನುರುಗರಳಗಿಳನ ನಿರ್ಭಯಚಿತ್ತನು
ಕಷ್ಟಮೀಮಾಂಸಕ ನಿಕೃಷ್ಟ[1]ತೃಣ[1]ಜೈತ್ರನ
ತ್ಯೃಷ್ಟಮಹದೈಶ್ವರ್ಯ ದಾನಪ್ರವೀಣನತಿ
ಶಿಷ್ಟವರ್ತನನೆನಿಪ ಬಸವದಂಡೇಶನೆಮಗಿಷ್ಟಾರ್ಥಸಿದ್ಧಿಮಾಳ್ಕೆ ೧೫

ಮಡಿಗಳಮಳಿನ ಪುಣ್ಯ ಸಸ್ಯಸಮುದಯಕೆ ಕೈ
ಪಿಡಿಗಳುದ್ದಾಮ ಮುಕ್ತ್ಯಂಗನೆಯ ಕರೆದ[2] ದಾಂ
ಗುಡಿಗಳತ್ಯಧಿಕ ಭಕ್ತರ್ಗಿಷ್ಟಫಲನಿಕರಮಂ [3]ಕುಡುವ ಕಲ್ಪಲತೆಯ
ಕಿಡಿಗಳಘಸಂಘಕಾರ್ಪಾಸಪೃಥ್ವೀಧರಕೆ
ಪಡಿಗಳೀಶಪದಾಂಬುಜಕೆ ಭೃಂಗಿರಿಟಿಯ ಮೆ
ಲ್ಲಡಿಗಳೆನ್ನಯ ಮತಿಗೆ ಸತತಮೀವುತ್ತಿರ್ಕೆ ನಿರ್ಮಳತ್ವಮನಳ್ಕಱಿಂ ೧೬

ಕ್ಷುದ್ರನರಸಿಂಹಗರ್ವಾದ್ರಿವಿದಳನ ಶಂಬ
ನುದ್ರಿಕ್ತದೇವಮಸ್ತನ್ಯಸ್ತಶಸ್ತಪದ
ನದ್ರಿಜಾಧಿಪ ಲಲಾಟಾಂಬಕ ಸುಜಾತನತಿರಮಣೀಯನೆನಿಸಿ ಮೆಱೆವ

1 ಮತ (ಕಜ) 2 ಕೆ (ಚ) 3 ಕೊ (ಗ)

ಭದ್ರಕಾಳೀವದನ ವನಜಮಿಹಿರಂ ವೀರ
ಭದ್ರನೊಸೆದಾವಗಂ ಸಲಹುಗೆ[1]ಮ್ಮಂ[1] ಮಹೋ
ಪದ್ರವಂಗಳ ತವಿಸಿ ಭದ್ರಸಮುದಯಮನಿತ್ತೀ ಕೃತಿ[2]ಗೆ ಕರುಣದಿಂದಂ[2] ೧೭

ದ್ಯೋತಿತಾಮಲಷಟ್ಸ್ಥಲಂಗಳಂ ದೂರೀಕೃ
ತಾತತಾಖಿಳಪಾಪನಿಕರಂಗಳಂ ಮಹಾ
ಖ್ಯಾತ ಸದ್ಭಕ್ತ ಚೇತಃ[3]ಸದ್ಮ[3] ಲಸಿತ ಪ್ರದೀಪಂಗಳಂ ಸಂತತಂ
ಸಾತಿಶಯ ಶರಣಸಂಘಟ್ಟಪ್ರದಂಗಳಂ
ಪ್ರೀತಿಯಿಂ ಪ್ರಭುವಿಭುವ ಪಾದಪದ್ಮಂಗಳಂ
ಭೂತಾದಿ ಕಾಲತ್ರಯಂಗಳೊಳು ನೆಱೆ ನೆನೆದು ರಚಿಸಿದಪೆನೀ ಕೃತಿಯನು ೧೮

ಲಲಿತಚಿದ್ವ್ಯೋಮ ಮಾರ್ಗದೊ[4]ಳೆ[4]ಸೆದು ವರ್ತಿಸುವ
ಮಲಕರ್ಮಮಾ[5]ಯೆಯೆಂಬ[ವ][5] ತಮಸ್ತೋಮಮಂ
ಮಲರಿಸುವ ಷಟ್ಸ್ಥಲಾಮಲ ಮಯೂಖಂಗಳಂ ಭೂವಳಯದೊಳ್ ಸೂಸುವ
ಮಲಹರಾರ್ಚಕಚಿತ್ತ ಶತಪತ್ರಸಂತತಿಯ
ನಲರಿಸುವ ಚನ್ನಬಸವೇಶ ದಿನಮಣಿಯೆಮ್ಮ
ಕಲುಷಸಂದೋಹ ನೀಲೋತ್ಪಲಾನೀಕಮಂ ಕೊರಗಿಸುತ್ತಿ[6]ರ್ಕೆ[6] ಮುದದೆ ೧೯

ಚಂಡ ಭಟ್ಟಾನೀಕಜಡಧಿವಡಬಂ ಮಹೋ
ದ್ದಂಡ ಚಾರ್ವಾಕ ಪಾರ್ವಣ ಶರ್ವರೀನಾಥ
ಮಂಡಲೋರ್ಜಸ್ವಲ ಸ್ವರ್ಭಾನು ವೇದಾಂತಕಾಂತಾರ ಜಾತವೇದಂ
ಖಂಡೇಂದುಧರಪಾದಮಂಡಿತಾಮಲಚಿತ್ತ
ಪುಂಡರೀಕಂ ಕಕು[7]ಭಷಂ[7]ಡಪೂರಿತ ಕೀರ್ತಿ
ಪಂಡಿತಾರಾಧ್ಯ ಮಾರ್ತಾಂಡನೊಸೆದಲರಿಸುಗೆ ಮತ್ಸ್ವಾಂತ ಸರಸಿಜವನು ೨೦

ಪರಮ ಶೈವಾಚಾರವಾರ್ಧಿವರ್ಧನಚಂದ್ರ
ನುರುತರ ಪ್ರತಿವಾದಿತರುಪರಶ್ವಧನಮಲ
ವರತಂತ್ರವೇದಾದಿ ಶಿವಶಾಸ್ತ್ರಪಾರಂಗತಂ ನಿಶ್ಚಲಂ ಸಂತತಂ
ಹರಚರಣಸರಸಿರುಹಪರಿಸೇವಕಂ ಕಾಮ
ಹರ ಭಕ್ತಸಂಯುಕ್ತ ಗೋಷ್ಠೀವಿಲಾಸನನ
ವರತಮಂಹೋಹರಂ ಪಾಲ್ಕುಱಿಕೆ ಸೋಮೇಶನೊಸೆದು ರಕ್ಷಿಸುಗೆಮ್ಮನು ೨೧

---

1 ಮ್ಮಯ (ಗ) 2 ಯ ನತಿಮುದದೊಳು (ಗ) 3 ಸಿದ್ಧ (ಕ) 4 ಳೊ (ಗ)
5 ಯೆಯೆಂಬುದ (ಕಗ) ಯಾಂಬುದ (ಜ) 6 ಕ್ಕೆ (ಗ) 7 ತ್ಷಂ (ಕಜ)

ಕಂಪಮರ್ದ ಚಂದನದ ಪಂಕದೊಳ್ ಪರಿಮಳಂ
ಪೆಂಪುವಡೆದಂತೆ ರಸಭರಿತ ಪ್ರಬಂಧದೊಳ್
ಸೊಂಪುದೋಱುವ ಶಬ್ದಸಂದರ್ಭಮೊಪ್ಪುತಿರೆ ಪೊಸತಪ್ಪ ಯುಕ್ತಿಯಿಂದಂ
ಇಂಪಾಗಿ ಶಿವಗಣಪ್ರಕರಮಂ ಕೊಂಡಾಡಿ
ಪಂಪೆಯೊಳ್ ಪಂಪಾವಿರೂಪಾಕ್ಷನೊಳಗವಿದ
ಪಂಪೆಯ ಹರೀಶ್ವರನ ಪಾದಪದ್ಮಂಗಳಂ ನೆನೆದೆಸಗುವೆಂ ಕೃತಿಯನು ೨೨

ಮಿನುಪ ಕರ್ಣಾಟ ಸಂಸ್ಕೃತ ಶಬ್ದಶಾಸ್ತ್ರದಿಂ
ಕನದಮಲಮಾದ ಸವಿನುಡಿ ಪಸರದೆಸಕದಿಂ
ಜನವಿತಾನದ ಕಿವಿಗೆ ಮಾಣಿಕ್ಯಖಚಿತಸೂತ್ನಾಭರಣಮಂ ರಚಿಸುತೆ
ಮನಸಿಜಾಂತಕನಾಗಮಂಗಳಂ ಭಕ್ತರ್ಗೆ
ಮನಮೊಸೆದು ಬೋಧಿಸುತ್ತಿನಗೆ ಸದ್ವಿದ್ಯೆಯಂ
ವಿನಯದಿಂದಿತ್ತ ಗಂಗಾಧರಾಚಾರ್ಯಗೆ ವಂದಿಪೆಂ ಭಕ್ತಿಯಿಂ[1]ದಂ[1] ೨೩

ಶರಧಿಯೊಳು ಮುಳುಗಿರ್ದ ಚಾರುಕುಂಭದ ತೆಱದೆ
ಪರಶಿವ[2]ನ ಹೊ[2]ಱಗೊಳಗೆ ತೆರಪಿಲ್ಲದಂತಿರಿಸಿ
ನಿರುಪಮಿತ ಮಹಿಮಾವಲಂಬನರೆನಿಸಿ ಧರೆಯೊಳೊಲ್ದು ಸುಳಿದಾಡುತಿರ್ಪ
ಪರಮ ಮಾಹೇಶ್ವರರ ಚರಣಸರಸಿಜವೆನ್ನ
ಸುರುಚಿರಾಮಲಹೃದಯಕಾಸಾರ ಮಧ್ಯದೊಳ್
[3]ಪಿ[3]ರಿದುಮುಳ್ಳಲರ್ದು ರಾಜಿಸುತಿರ್ಕೆ ಸಂತತಂ ಭಕ್ತಿಗಂಧಂ ಬೀರುತೆ ೨೪

ನತಜನ ಕಿರೀಟಮಂಡಿತಪಾದನಖರ ಸಂ
ತತಿ ಕಾಂತಿವಿಸರ ಚಂದ್ರಾತಪಂ ಭವತಾಪ
ವಿತತಿಯೊಳ್ ಬೆಂದು ಮಮ್ಮಲನೆ ಮಱುಗುವ ಲೋಕಕೊಲ್ದುಮಿಗೆ ತಂಪನೀಯೆ
ವಿತತದುರ್ಮತ ಕುಮುದಚಂಡಹರಿದಶ್ವನೆನಿ
ಪತಿವಿಶದಕೀರ್ತಿ ವಿಶ್ರುತಮಾಗೆ ವಿಶ್ವದೊಳ್
ನುತಿವಡೆದು ಶೋಭಿಸುವ ಶ್ರೀಸೋಮಶಂಭುದೇಶಿಕನೆಮ್ಮ ಸಲಹುತಿರ್ಕೆ ೨೫

ಕಾಮಿಕಾದ್ಯಖಿಳ ಶಿವ[4]ಕಥಿತ[4]ತಂತ್ರಾವಲಿಗೆ
ಪ್ರೇಮದಿಂ ವೃತ್ತಿದೀಪಿಕೆಗಳಂ ಬಿತ್ತರಿಸಿ
ಸೋಮಧರ ಸಮಯಮಂ ಧರಣಿಯೊಳ್ ನಿ[5]ಱಿ[5]ಸಿ ಕುಮತಾಬ್ಜರಾತ್ರೀಶನೆನಿ[6]ಸಿ[6]

---

[1] ದೆ (ಗ) [2] ಸುಪೊ (ಗ) [3] ಬಿ (ಜ) [4] ಗಧಿಕ (ಗ) [5] ಲಿ (ಗ) [6] ಪ (ಕಜ)

ಕಾಮಿತಫಲಂಗಳಂ [1]ಭಾ[1]ತ್ರಿತತಿಗೀವವರ
ಸೋಮ ಶಂಭು ತನೂಜ ಸಕಲಾಗಮಾಚಾರ್ಯ
ನಾಮವೀ ಭೂಮಿಜನ ಸಮಿತಿಯಂ ಪಾಲಿಸುಗೆ ಸಂತತಂ ಪ್ರೀತಿಯಿಂದಂ ೨೬

ಸಕಲಾಗಮಾಚಾರ್ಯರುದರ ಪಾರಾವಾರ
ವಿಕಟ ಪಾರ್ವಣ ಶರ್ವರೀನಾಥರೆನಿಸುತ್ತು
ಮಕಳಂಕ ವಿಶ್ವನಾಥಂಗೆ ಲೆಂಕ[2]ತ್ವದಿಂದೆಸೆವ[2] ಶುಭರೂಪನೆನಿಪ
ಪ್ರಕಟ ಶಿವಲೆಂಕಮಂಚಣ್ಣ ಪಂಡಿತರ ಪದ
ವಿಕಸಿತಾಂಬುಜದ ಸೌಸವದೊಳೆನ್ನಯ ಹೃನ್ಮ
ಧುಕರನೊಲವಿಂದೆ ರಮಿಯಿಸುಗೆ ತನಿಗಂಪನುಂಡುಂಡು ತಣ್ಣನೆ ತಣಿಯುತೆ ೨೭

ಶಿವಕುಲವೆ ಮಿಗಿಲೆಂದು ವಾದದೊಳ್ ಭೂದೇವ
ನಿವಹ[3]ಕ್ಕೆ[3] ಸಾಱಿ[4]ತ್ತಿದ್ದೈ[4]ಸ[5]ವೆಂದೆಸೆವ ವೇ
ದವನೊನಕೆಪಾಡಾಗಿ ಪಾಡಿ ಪರಸಮಯಾಟವೀದಾವನೆಂದು ಮೆಱೆವ
ಶಿವಲೆಂಕ ಮಂಚಣ್ಣ ಪಂಡಿತೋತ್ತಮತನೂ
ಭವರೆನಿಪ್ಪುರಿಲಿಂಗದೇವ ದೇಶಿಕಪಾದ
ಭುವನಜಪರಾಗದೊಳ್ ಮತ್ಸ್ವಾಂತ ಭೃಂಗಶಿಶು ಪೊರಳ್ದು ನಲಿದಾಡುತಿರ್ಕೆ ೨೮

ಮಿನುಗುವಾವುರಿಲಿಂಗದೇವ ಕರಕಮಲದಿಂ
ಜನಿಸಿ ವಿಶ್ರುತಮಾಗಿ ವಿಶ್ವಂಭರಾತಲದೊ
ಳೆನಸುಂ ವಿರಾಜಿಸುತೆ ಪರವಾದಿಗಂಧಸಿಂಧುರದಳನಪಂಚಾನನಂ
ಎನಿಪ ಭಾಸುರ ಕೀರ್ತಿವನಿತೆ ಮೂಲೋಕದೊಳ್
ಘನಲೀಲೆಯಿಂದೆ ನಲಿದಾಡುತಿರೆ ಸಂತತಂ
ಸುನಯದಿಂದುರಿಲಿಂಗಪೆದ್ದಿ ಗುರುಮೂರ್ತಿ ವಿಭ್ರಾಜಿಸಿದನೇವೊಗಳ್ವೆನು ೨೯

ಪರವಾದಿವೃಂದಾರವಿಂದಪಾರ್ವಣಚಂದ್ರ
ನುರುತರ ವಿಪಕ್ಷರಾದ್ಧಾಂತ ಕುವಲಯಭಾನು
ಪರಸಮಯ ಚಂಡಹರಿದಶ್ವಪೀಡಿತರಾಹು ಕುಮತಗಿರಿನಿಶಿತಾಶನಿ
ಉರಿಲಿಂಗಪೆದ್ದಣಾಚಾರ್ಯರಂಗೋದ್ಭವಂ
ಪರಮಗುರು ವಿಶ್ವೇಶ ಪೆದ್ದಣಾರ್ಯಂ ಪೊರೆಗೆ
ಸರಸ ವಾಕ್ಚತುರತೆಯನಿತ್ತೆ[5]ನ್ನನವಿರ[5]ತಂ ಹೃತ್ಪ್ರಮೋದಂಗಳಿಂದಂ ೩೦

---

[1] ಧಾ (ಕ) [2] ನೆಂದೆನಿಸಿ ಮೆಱೆದು (ಕ) [3] ದೊಳ್ (ಗ) [4] ದ್ದೀಪ (ಜ) [5] ಮ್ಮ ಸಂತ (ಗ)

ವರಭಸಿತ ಭಸ್ಮರಕ್ಷಾಕಾರ ಭೂತಿಯೆಂ
ಬುರುತರಾಮಲನಾಮಪಂಚಕದಿನೊಪ್ಪಿರ್ಪ
ಸಿರಿವಿಭೂತಿಯ ಮಹಿಮೆಯಂ ಲೋಕದೊಳಗೆ ಪಸರಿಸಿ ತದ್ವಿಭೂತಿಯಿಂದೆ
ಕರವೆಸೆವ ವಿಶ್ವೇಶಪೆದ್ದಣಾಚಾರ್ಯಸುತ
ನಿರುಪಮ ವಿಭೂತಿಸಿದ್ಧಾಚಾರ್ಯಪುಂಗವರ
ಚರಣಸರಸಿಜದಲ್ಲಿ ಮತ್ಸ್ವಾಂತಮಧುಭೃಂಗನನುದಿನಂ ನಲಿವುತಿರ್ಕೆ ೩೧

ವರವೀರಶೈವ ಪ್ರವರ್ತನಂ ಭಾವಿಸಲ್
ಪರಿಜುವೆತ್ತು[1]ದೊ[1] ಶಾಂತಿದಾಂತ್ಯಾದಿಗಳ್ ನಾಡೆ
ಪರಿಕಿಪೊಡೆ ರೂಪುವಡೆದುವೊ ಎಂದು ಭೂಜನಂ ಕೀರ್ತಿಸುತ್ತಿರೆ ರಂಜಿಪ
ನಿರುಪಮ ವಿಭೂತಿಸಿದ್ಧಾಚಾರ್ಯ ಗರ್ಭಸಾ
ಗರಚಂದ್ರ ಸೋಮನಾಥಾರ್ಯ ದಿವಸಾಧಿಪಂ
ಹರುಷದಿಂದೆಮ್ಮ ಹೃತ್ಸರಸಿಜಮನಲರಿಸುಗೆ ಸೌಸವಂ ಪಸರಿಪಂತೆ ೩೨

ವರಸೋಮನಾಥ ದೇಶಿಕತಿಲಕರಂಗಭವ
ಸುರುಚಿರಾನಂತ ಪೆದ್ದಣದೇಶಿಕಪ್ರವರ
ಹರಿಣಧರನೆಮ್ಮ ಮತಿಕುಮುದಿನಿಯನಲರಿಸುತೆ ಕುಮತಶತಪತ್ರಂಗಳ
ಕೊರಗಿಸುತೆ ಸಿತಕೀರ್ತಿಕೌಮುದಿಯ ಪಸರಿಸು
ತ್ತಿರರೆ ಶಿಷ್ಯಚಕೋರ ಶಾಬನಿಕರಂಗಳಂ
ಪಿರಿದು ತಣಿಪುತ್ತೆಮ್ಮ ಹೃದ್ವ್ಯೋಮ ವೀಧಿಯೊಳ್ ನಾಡೆ ವಿಹರಿಸುತುಮಿರ್ಕೆ ೩೩

ಧರಣಿಯೊಳ್ ವೀರಶೈವಾಚಾರಕಲ್ಪಲತೆ
ಪರಿದು ಪರ್ಬಲ್ಕಿಟ್ಟ ಸುರಕುಜದಡರ್ಪೊ ಬಂ
ಧುರಭಕ್ತ ಕಾಮದುಘಮೋ ದೇಶಿಕಾಗ್ರಣಿಯೊ ಎಂದು ಭೂಜನ ಸಂತತಿ
ಹರುಷದಿಂ ಕೀರ್ತಿಸುತ್ತಿರೆ ವಿರಾಜಿಸುತಿರ್ಪ
ನಿರುಪಮಾನಂದ ಪೆದ್ದಣ್ಣಗುರುಕುಲತಿಲಕ
ವರಸೂನು ವಾರಾಣಸಿಯ ಬಲ್ಲಣಾರ್ಯರಂ ಭಜಿಸುವೆಂ ಚಿತ್ತದೊಳಗೆ ೩೪

ವಾ[2]ರಾಣಸಿಯ[2] ಬಲ್ಲಣಾಚಾರ್ಯ ವರಸುತಂ
ಕಾರುಣ್ಯಸಿಂಧು ಸಜ್ಜನಬಂಧುವೆಂದೆಸೆವ
ವೀರಶೈವೋದ್ಧರಣ ನಾಗನಾಥಾರ್ಯಪದನಖಮಯೂಖಂಗಳೆಂಬ

---

1 ಪೊ (ಕಗ) 2 ರಣಾಸಿಯ (ಗ) ರಾಣಸೀ (ಜ)

ತಾರಾಧಿಪ ಜ್ಯೋತ್ಸ್ನೆ ಮತ್ಸ್ವಾಂತ ಶಶಿಕಾಂತ
ಮೋರಂತಿರೊಸರ್ವಂತೆ ಮಾಡುತ್ತುಮೆಮ್ಮ ಮತಿ
ವಾರಿಧಿಯನತಿವರ್ಧಿಸುತ್ತೆ ರಾಜಿಸುತಿರ್ಕೆ ಸಂತತಂ ಲೋಕದೊಳಗೆ ೩೫

ನಿರತಿಶಯ ಸುಖರೂಪನಪಗತಾಖಿಲ ಪಾಪ
ನುರುತರಾಗಮಕಲ್ಯನಿ[1]ತರ[1]ಮತಹೃಚ್ಛಲ್ಯ
ನೆರರೆ ಭಕ್ತಕುಟುಂಬನೀಶ್ವರಪ್ರತಿಬಿಂಬನೆಂಬ ಜಸವೆಣ್ದೆಸೆಯೊಳು
ಪರಕಲಿಸುತಿರೆ ರಾಜಿಸುವ ನಾಗನಾಥಾರ್ಯ
ವರಸುತಂ ನೀಲಕಂಠಾಚಾರ್ಯಪುಂಗವಂ
ಕರುಣಾಕಟಾಕ್ಷದೀಧಿತಿಯಿಂದಮಾವಗಂ ಪೊರೆಗೆ ಭೂಜನಸಮಿತಿಯಂ ೩೬

ಆ ನೀಲಕಂಠದೇಶಿಕಕುಲಲಲಾಮನುದ
ರಾನೂನಶರಧಿವರ್ಧನಚಂದ್ರನೆಂದೆಸೆವ
ಮಾನಿತಗುಣಂ ವಿಶ್ವಜನವಂದ್ಯನಖಿಳಾಗಮಂಗಳಕಳಾಭಿಜ್ಞನು
ಜ್ಞಾನರೂಪಂ ವಿಶ್ವನಾಥಾರ್ಯನನುದಿನಂ
ಸಾನುರಾಗದಿನೊಸೆದು ಪಾಲಿಸುತ್ತಿರ್ಕೆಮ್ಮ
ಮಾನಸದೊಳೊದವಿದದವಳಲನುಚಿತ ತವಿಸಿ ಸಲೆ ಸಂತಸಂ ಪಸರಿಪಂತೆ ೩೭

ಇಂತೆಸೆವ ವಿಶ್ವನಾಥಾ[2]ಚಾರ್ಯ ಪುಂಗವರ[2]
ಸಂತತಿಯೊಳೊಗೆದು ಮಧುವೇಶ್ವರಾಹ್ವಯದಿಂದೆ
ಸಂತತಂ ರಾಜಿಸುವ ಪರಮಗುರು ಚಾರುತರ ವೀರಶೈವೋದ್ಧರಣನು
ಕಂತುಹರಸನ್ನಿಭಂ ಭವಪಾಶಸಮುದಯ ನಿ
ಕೃಂತನಂ ಪಾಲಿಸುತ್ತಿರ್ಕೆಮ್ಮನಾವಗಂ
ಸಂತಸದೊಳೊಲ್ದು ಹೃದ್ದುಃಖ ನಿಕುರುಂಬಕ್ಕೆ ತೌದಲೆಯನಡರಿಸುತ್ತೆ ೩೮

ಭವಪಾದಪಂಕಜ ಪ್ರವಣೈಕಮಾನಸಂ
ಸವಿನಯಾಂಭೋಧಿ ತನ್ಮಧುವೇಶಗರ್ಭಸಂ
ಭವನಾರ್ಯವರ್ಯನಾರಾಧ್ಯಸೀಮಂತಮಣಿ ಭಕ್ತಜನಚಿಂತಾಮಣಿ
ಭವಲತಾಮೂಲಕುದ್ದಾಲನುನ್ನತ ಪರಮ
ಶಿವರೂಪನೆಂದೆಸೆವ ನೀಲಕಂಠಾಚಾರ್ಯ
ನವಿರತಂ ಪೊರೆಗೆ ಮತ್ಕೃತಿಯಂತರಾಯಮಂ ತವಿಸುತ್ತೆ ಸಂತಸದೊಳು ೩೯

---

1 ರಥ (ಗ) 2 ರ್ಯ ಪುಂಗವರವರ (ಗ)

ಪ್ರವಿದಿತ ಷಡಧ್ವ ಸಮ್ಯ[1]ಜ್ಞನಾ[1]ನತಲೋಕ
ನಿವ[2]ಹಾ[2]ಶಿವಾಂಧತಮಸಾನೀಕಭಾಸ್ಕರಂ
ಪ್ರವಿಮಲ ಶಿವೋಕ್ತತಂ ತ್ರೈ[3]ಲೋಕ ಕರ್ತಾರ[3] ಪರಮಮಂಗಲದೇಹನು
ಅವಿರಳಜ್ಞಾನಪ್ರದಾತೃ ಸಜ್ಜನಬಂಧು
ಭವತಾರಕಂ ನೀಲಕಂಠಾರ್ಯವರತನೂ
ಭವ ವಿಶ್ವನಾಥದೇಶಿಕನೆಮ್ಮ[4]ನನುದಿನಂ[4] ರಕ್ಷಿಸುತ್ತಿರ್ಕೆ ಮುದದೆ ೪೦

ಜನವಿನುತ ತದ್ವಿಶ್ವನಾಥಾರ್ಯಪುಂಗವರ
ಮಿನುಪ ಜಠರಕ್ಷೀರವಾರಾಸಿ ಮಧ್ಯದೊಳ್
ಜನಿಸಿದಾ ನೀಲಕಂಠಾಚಾರ್ಯನೆಂಬ ವಿಧು ಸುಜನರತ್ನಾಕರವನು
ಮನವೊಲ್ದು ಪೆರ್ಚಿಸುತೆ ಸಿತಕೀರ್ತಿಕೌಮುದಿಯ
ನನಿಶಮೆಂಟುಂದೆಸೆಗೆ ಬೀಱುತ್ತೆ ಕಣ್ಗೆಡ್ಡ
ಮೆನಿಸಿದುದು ನೋಡೆ ಮಿಗೆ ಪೊಸತೆಂದು ಭೂಜನಂ ನಲಿದು ಕೀರ್ತಿಸುತಮಿರಲು ೪೧

ಅನವರತಮಿಂತು ನುತಿಗೊಳಗಾದ ವಿಶ್ವೇಶ
ತನುಜನುನ್ನತಕಳಾವಿದನೀಶ್ವರಕ್ರಮ ಭು
ವನಜ ನವಮಕರಂದಪಾನಲೋಲುಪ ಮಧುವ್ರತನತಿವಿಶಾಲಗುಣನು
ಎನಿಪ ಮಂಜುಳನೀಲಕಂಠಾರ್ಯ[5]ನೀ ಕೃತಿಯ[5]
ನನುನ[6]ಯದೆ[6] ಪೇಳ್ದನೆಂದೆನೆ ಸುಜನನಿಕರದೊಳ್
ಮನವೊಸೆದು ಕೊಂಡಾಡಿ ತಿರ್ದಿ ಮುದ್ದಿಸಿ ಮೆಚ್ಚದವರೊಳರೆ ಪರಿಕಿಸುವೊಡೆ ೪೨

ಕೃತಿನಾಮಮಾರಾಧ್ಯಚಾರಿತ್ರಮೆನಿಸುವುದು
ಕೃತಿಪಾಲಕರ್ ಶಿವನ ಸದ್ಭಕ್ತರೀ ಕೃತಿಗೆ
ಪತಿ ನೀಲಕಂಠಲಿಂಗಂ ಕೃತಿಯನತಿಶಯಂ ಪೇಳ್ದಾತನಾರೆಂದೆನೆ
ವಿತತ ಕರ್ಣಾಟಲಕ್ಷಣ ಕಮಲಭವನೆನಿಪ
ಚತುರವರ ನೀಲಕಂಠಾಚಾರ್ಯನೆಂದೊಡಿದು
ನುತಿವೆತ್ತು ಸತ್ಪುರುಷಕರ್ಣಭೂಷಣಮೆನಿಪುದಚ್ಚರಿಯೆ ಪರಿಭಾವಿಸೆ ೪೩

ಅರಿರಾಯ ಗರ್ವಪರ್ವತದಳನಭಿದುರನುರು
ತರವಿಪಕ್ಷ ಪ್ರಬಲಸೇನಾಬ್ಧಿ ಬಾಡಬಂ
ಪರಭೂಮಿಪಾಲ [7]ಜೀ[7]ವಪ್ರಭಂಜನಭೋಗಿ ಯಾಚಕಾಮರಭೂಜನು

---

[1] ಜ್ಞಾನ (ಗ) [2] ಹದ (ಗ) [3] ಕ ಕರ್ತಾರನತಿ (ಕಜ) [4] ಸಂತತಂ (ಗ) [5] ಸೂಕ್ತತೆಯ (ಕಜ) [6] ಯಂ (ಗ) [7] ದೇ (ಗ)

ಕರವೆಸೆವ ಗಜಬೇಂಟೆಕಾಱನೀಶ್ವರ ಪಾದ
ಸರಸಿರುಹಸೇವಕಂ ವೀರನಂಜೇಂದ್ರನಿಂ
ಪರಿಪೂಜಿತಂ ನೀಲಕಂಠದೇಶಿಕನುಸಿರ್ದನೀ ಕೃತಿಯನಳ್ತಿಯಿಂದೆ ೪೪

ಮಾರ್ಜಾರನಗ್ರದೊಳ್ ಪರಮಾನ್ನಮಿರ್ದೊಡೆ ವಿ
ಸರ್ಜಿಸಿಯದಂ ಮೂಷಿಕಾನುಗತಮಪ್ಪಂತೆ
ತರ್ಜಿಸಿ ರಸೋಪೇತಶಬ್ದಂಗಳಂ ಮಱದು ಬಂದ ತಪ್ಪೊಂದನಱದು
ನಿರ್ಜರಾಧಿಪಪದವಿಯಂ ಪಡೆದವೋಲಿರ್ಪ
ದುರ್ಜನರ್ ಸುಖಮಿರ್ಕೆ ಧರೆಯೊಳಗದೇಕೆನಲು
ಪಾರ್ಜಿಸುವ ಶಬ್ದಂಗಳಂ ಕವಿಗಳಾರ್ಕೆಗುನುವರ ಭಯದಿಂ ಸಂತತಂ ೪೫

ಸಮಸಂಸ್ಕೃತಂಗಳಂ ತದ್ಧಿತಪದಂಗಳಂ
ಸಮುಚಿತದೆ ಬರ್ಪ ಸತಿಸಪ್ತಮಿಯ ಭೇದಮಂ
ಗಮಕಕ್ರಿಯಾಸಮಾಸಂಗಳಂ ದೇಶೀಯಪದಮಪಭ್ರಂಶಪದವು
ಅಮರ್ದು ರಾಜಿಸ ಸಮಾಸಂಗಳಂ ಶ್ರುತಿಸಹ್ಯ
ವಿಮಲ ಸಂಧಿಗಳನಱ ಅಱವ ಸಜ್ಜನಸಮಿತಿ
ಮಮತೆಯಿಂದೀ ಕೃತಿಯೊಳಿರ್ದ ದೋಷಂಗಳಂ ಸಮ[1]ಱ ನೆಱ[1] ಕೈಕೊಂಬುದು ೪೬

ಕವಿ ತನ್ನ ದೋಷಮಂ ಕಾಣನೆಂತೆನೆ ನೋಡ
ಭುವನದೊಳ್ ತೋರ್ಪ ವಸ್ತುಗಳನಱ ಕಣ್ಗಾಣ್ಗ
ಮವಿರತಂ ತನ್ನೊಳಗೆ ತೋರ್ಪ [2]ಕರ್ಪಂ[2] ಕಾಣದಂತೆವೊಲ್ ಕವಿಯಾದವಂ
ಕವಿಗಳಿಂ ತನ್ನ ಕೃತಿಯಂ ನಾಡೆ ತಿರ್ದಿಸಿದೊ
ಡವನಿಯೊಳ್ ಚಂದ್ರಾರ್ಕರುಳ್ಳನ್ನೆವರೆಗಮದು
ತವಿಲಾಗದದಱನೆನ್ನಯ ಕಾವ್ಯಮಂ ತಿರ್ದಿ ಕವಿವರರ್ ಕೈಕೊಂಬುದು ೪೭

ಪದದ ಕಡೆ ಪದಮಧ್ಯಮೆಂಬೆಡೆಗಳಂ ಪರಿಕಿ
ಸದೆ ಮಿಕ್ಕೆಡೆಯೊಳಿರ್ದ ಪದದೆಡೆಗಳಂ ತೀರ್ಚಿ
ಪದಪಿಂದೆ ಸಜ್ಜನಶಿರೋಮಣಿಗಳೀ ಕೃತಿಯ ಕೊನೆದು ಕೊಂಡಾಡುತಿರ್ಕೆ
ಬೆದಕಿ ತಪ್ಪಂ ಪಿಡಿವೆನೆಂದು ದುರ್ಜನವಿತತಿ
ಕುದಿದು ಕೋಟಲೆಗೊಂಡು ಮನಮುಡುಗಿ ಚಿಂತೆಯೊಳ್
ಪುದಿದಿರಲ್ಕೊಂದು ತಪ್ಪೆಂತಕ್ಕೆ ತಲೆದೋಱ ಕಂಡು ನಲಿದಾಡುತಿರ್ಕೆ ೪೮

---

1 ವೆನಿಸಿ (ಗ) 2 ತರ್ಪಂ (ಕ) ತಪ್ಪಂ (ಜ)

ಭೂತಿರುದ್ರಾಕ್ಷಿ ಶಿವಲಿಂಗವುಳ್ಳವನತಿ
ಪ್ರೀತಿಯಿಂ ಪೇಳ್ದ ಸತ್ಕಾವ್ಯಮನಸೂಯೆಯಿಂ
ಬೂತಾಡಿ ನಿಷ್ಕಾರಣಂ ದ್ವೇಷದಿಂದೆ ನಿಂದಿಸನವಂ ಪರಿಭಾವಿಸೆ
ಭೀತಿಯುಳಿದಾ ಪಗಲ್ಜೋಡೆಯ [1]ತನುಜನೆಂದು[1]
ಸಾತಿಶಯ ಶಿವವಾಕ್ಯಮುಂಟದೆಂತೆನೆ ಸುವಿ
ಖ್ಯಾತಿ ತಂ ವಿಂದ್ಯಾದೆನುತ್ತೆ ಸಲೆ ಜಾರಸಂಭವವೆನುತೆ ಲೋಕದೊಳಗೆ ೪೯

ಪರನಿಂದೆಯಿಂದೆ ದುರ್ಜನಶಿರೋಮಣಿಗಳುರು
ತರ ನಿಧಾನಂಬಡೆದನಂತೆ ಚಿತ್ತದೊಳೊಲ್ದು
ಪರಿತೋಷಮಂ ತಾಳ್ಗುಮದಱಿಂದೆ ಮತ್ಕೃತಿಯ ನಿಂದಿಸಿ ಮ್ಮುದಂಬಡೆಯಲು
ಪಿರಿದದು ನಿರಂತರಾಯಮನೀವುದೆಂತೆನಲ್
ಪರಹೃದಯ ಮುದವೆ ನಿರ್ವಿಘ್ನಕ್ಕೆ ಕಾರಣಂ
ಪರರ್ಗೆ ದುಃಖಂ ಮಾಡೆ ವಿಘ್ನಕ್ಕೆ ಕಾರಣಂ ಎಂಬ ನುಡಿಯುಂಟಾಗಿರೆ ೫೦

ಇಂತು ದುರ್ಜನ ಸಜ್ಜನರ್ಗೆ ಸಂತೋಷಮಂ
ಮುಂತಿಡುತ್ತಿರ್ಪೀ ಮಹಾಕೃತಿಗೆ ಮೊದಲಾವು
ದೆಂತೆನಲ್ಕೀ ಧರೆಗೆ ಕೈಲಾಸವೆನಿಸುವಾ ಶ್ರೀಗಿರಿಯೊಳೆಸೆವುತಿರ್ಪ
ಅಂತಕಾಂತಕಭಕ್ತರಲ್ತಿಯಿಂದಣೆಯರಂ
ಮುಂತಿರ್ದ ಪಾಲ್ಕುಱಿಕೆ ಸೋಮೇಶನಂ ಕರೆದು
ಕಂತುಹರನಿಭ ಪಂಡಿತಾರಾಧ್ಯವೃತ್ತಿಯನೊಱಲ್ದು ಪೇಳೆಂದು ಬೆಸಸೆ ೫೧

ಸಂತಸದಿ ಪಾಲ್ಕುಱಿಕೆ ಸೋಮನಾಥಂ ಮುನ್ನೆ
ಸಂತ[2]ಸಭೆ[2] ಮೆಚ್ಚುವಂ[3]ತಾ[3]ಂಧ್ರಭಾಷೆಯೊಳೊಲ್ದ
ನಂತಯುಕ್ತಿಗಳಿಂದೆ ಪಂಡಿತಾರಾಧ್ಯಚಾರಿತ್ರಮಂ ಪೇಳ್ದನೊಸೆದು
ಚಿಂತಿಸುತ್ತದನೆನ್ನ ಮತಿಗೆಯ್ದಿದಂದದಿಂ
ಕಂತುಹರಭಕ್ತರಱಿವಂತೆ ಕನ್ನಡದಿನ
ತ್ಯಂತ ವಿಶ್ರುತಮಾಗಿ ಪೇಳ್ದಪೆಂ ಕೇಳ್ವರ್ಗೆ ಕನ್ನವುರವಪ್ಪ ತೆಱದೆ ೫೨

ಪರಮಗುರುಮೂರ್ತಿ[4]ಯಂ ಸ್ಥಿರತರ[4] ಸುಕೀರ್ತಿಯಂ
ನಿರುತ ವೇದಾಗಮಾಭ್ಯಂತರಸ್ಫೂರ್ತಿಯಂ
ನಿರುಪಮಾನಂದವರ್ತಿಯನಪಗತಾಂಘ್ರಿಯುಗ ನತಜನಾರ್ತಿಯನನಿಶಮುಂ

---

[1] ಸುತಂ ಎಂದು (ಗ) [2] ರುಚಿ (ಜ) [3] ತಂ (ಗ) [4] ಯನನಶ್ವರ (ಗ)

ವರವೀರಶೈವ ರಾದ್ಧಾಂತಾನುವರ್ತಿಯಂ
ನಿರುಪಮಿತ ಶಿವಸಮಯಕುಲಚಕ್ರವರ್ತಿಯಂ
ಸರಳ ವೃಷಮೂರ್ತಿಯಂ ಪಾಪಾಂಧಕಾರನಿರ್ಹರಣವಿಲಸನ್ಮೂರ್ತಿಯಂ ೫೩

ವಿಜಿತೇಂದ್ರಿಯನನಧಿಕಕಲ್ಯಾಣನಂ ಮಹಾ
ಸುಜನಸಂತತಿಪರಿತ್ರಾಣನಂ ಭಕ್ತಿ ಸ
ದ್ವಿಜ ಧುರೀಣನನಮಲಚಂಡಪ್ರತಾಪನಂ ಗತವಿಷಯಸಂಮೋಹನಂ
ನಿಜಸಂವಿದಾಕಾರನಂ ಶರಣಜೀವನಂ
ಭಜಕಜನಸುಪ್ರಮೋದೈಕವಿಶ್ರಾಮನಂ
ಕುಜನದೂರನನುನ್ನತಪ್ರಮಥನಾಥನಂ ಸುಗುಣಗಣಮಣಿಹಾರನಂ ೫೪

ಚಿರಭಕ್ತಿ[1]ದಾಸ್ಯ[1]ನಂ ಸರಳನಿಗಮಾಸ್ಯನಂ
ವರಬುಧೋಪಾಸ್ಯನಂ ಭೂತಳನಮಸ್ಯನಂ
ಹರಶರಣಸಿಂಹನಂ ಚಿತ್ಸಮೂಹಾಶ್ರಯನನೆನ್ನೊಡೆಯನೆನಿಸಿ ಮೆಱೆವ
ಉರುಚನ್ನಮಲ್ಲಿಕಾರ್ಜುನರೂಪನಂ ಬಸವ
ಗುರುಸಚಿವನಂ [2]ದಲೀ[2] ಕೃತಿಗಧಿಪನಂ ಮಾಡಿ
ಗಿರಿಶಪ್ರಸಾ[3]ದದಿಂ[3] ಸದ್ಭಕ್ತಿಸಂಯುಕ್ತ ಚೇತಸ್ಕನಾಗಿ[4][ರ್ಪೆನು][4] ೫೫

ಸಕಲ ನಿಷ್ಕಲ [5]ಶಿವಕಳೇವರರ[5] ಪ್ರಮಥನಾ
ಯಕರ ಭುವನಾಭೋಗಮಥನ ವಿಕ್ರಮರ ಪು
ತ್ರಕಳಂಕ ಪೂರ್ವಾದ್ಯತನರ ಹರಗಣ ಸಮಿತಿಗಳನೆ ಹರನೆಂದು ನೆನೆದು
ಪ್ರಕಟದಿಂದಂ ಮಲ್ಲಿಕಾರ್ಜುನಾರಾಧ್ಯರ್ಕ
ಳಕುಟಿಲಚರಿತ್ರಮಂ ಬಣ್ಣಿಪೆಂ ಸಂತತಂ
ಸುಕರನವರಸಮುಣ್ಮುವಂತೆ ಪದಸಂದರ್ಭಮತಿಶಯಂದೋಱುವಂತೆ ೫೬

ಅತಿಭಕ್ತಿಯಿಂ ಪಂಡಿತಾರಾಧ್ಯ ನುತಿಗೆಯ್ಯೆ
ವಿತತ ಶಿವಧರ್ಮಮೆಯ್ದುಗುಮಶೇಷಾಘ ಸಂ
ತತಿ ಕಿಡುಗುಮವಿರತಂ ಭಕ್ತಿಸೌಭಾಗ್ಯಲತೆಯಣಿಯರಂ ಕುಡಿವರಿವುದು
ಸತತಮುಗ್ರೋರಗವಿಷಂ ನಾಶಮಕ್ಕುಮು
ನ್ನತ ದಾವವಹ್ನಿ ಮಂಜಿನ ಪುಂಜಮಕ್ಕು[6]ಮ
ತ್ತ[6]ತಿಶಯಂ ವಿಷಯಸಂಕ್ಲೇಶಂಗಳೆಯ್ದೆ ತವಿಸುವುವು ಭವಶರಧಿಯುಳಿಗುಂ ೫೭

1 ಭಾಷ್ಯ (ಗ) 2 ಯೆನ್ನ (ಗ) 3 ದ (ಜ) 4 ರ್ಪೆನ್ನನು (ಕಜ) ಯಾನು (ಗ)
5 ಕಳೇವರರನಾ (ಕಜ) 6 ಮುಂ।ತ (ಗ)

ಸಲೆಯುದಱಿನೀ ಪಂಡಿತಾರಾಧ್ಯ ಮಹಿಮೆ ಸ
ಲ್ಲಲಿತ ಶಿವಮಹಿಮೆಯಿಂದಗ್ಗಳಂ ಭಾವಿಸಲ್
ನಲವು ಕೈಮಿಗೆ ಶಿವಂ ಲೋಕಾನುಸಾರಿಯಿಾ ಪಂಡಿತಾರಾಧ್ಯರನಿಶಂ
ಒಲವಿನಿಂ ಲೋಕಾನುಸಾರವರ್ತನೆಗಳಂ
ಮಲರಿಸುತೆ ರಾಜಿಪರ್ ತಚ್ಛಂಭು ಶೂಲಿಯಿಾ
ವಿಲಸಿತಾರಾಧ್ಯರಪಗತಗದಾನೀಕರೆನಿಸುತ್ತು ಮತಿಸುಖವಿ[1]ರ್ಪರು[1] ೫೮

ತವೆ ತಮೋಗಣಪರಿವೃತಂ ಶಂಕರಂ ಕರಂ
ನವಸಾತ್ವಿಕೋತ್ಕೃಷ್ಟನೀ ಪಂಡಿ[2]ತೇಶ್ವರಂ[2]
ಭುವನ ಚರಮೂರ್ತಿ ಚರಲಿಂಗಸ್ವರೂಪನೀ ಪಂಡಿತಾರ್ಯಂ ಗಿರಿಶನು
ಭುವನಾಳಿ ಸಂಹಾರಕಂ ಪಂಡಿತೇಶ್ವರಂ
ತವಿಸದೀ ಭುವನಮಂ ಪಾಲಿಪಂ ಸಂತತಂ
ಶಿವನಸಿತಗಳನೋವೊ ಭಸಿತಗಳನೀ ಪಂಡಿತಾರಾಧ್ಯ ಗುರುರೂಪನು ೫೯

ಮಿನುಪ ಶಿವನೂರ್ಧ್ವೈಕಲೋಚನಂ ಪರಿಕಿಪೊಡೆ
ಕನದೂರ್ಧ್ವನಯನಯುಗಳಂ ಪಂಡಿತೇಶ್ವರಂ
ವಿನುತ ಭಕ್ತೈಕದೇಹಂ ಶಿವಂ ಪಂಡಿ[3]ತಾರ್ಯಂ[3] ಭಕ್ತಸತ್ಪ್ರಾಣನು
ಸುನುತಿವಡೆದಂ ಮಲ್ಲಿಕಾರ್ಜುನಾಂಗದಿನಭವ
ನನವರತ ಮಲ್ಲಿಕಾರ್ಜುನ ಕೀರ್ತಿವಡೆದು ಜಲ
ಕನೆ ವಿರಾಜಿಸುವನೀ ಪಂಡಿತಾರಾಧ್ಯನೀ ಭೂಮಿಗತಿಶಯಮಾಗಲು ೬೦

ಪಂಡಿತತ್ರಯದೊಳಗೆ ಮಾನ್ಯತ್ವಮಂ ಪಡೆದ
ಖಂಡಗುಣನಿಧಿ ಪಂಡಿತಾರಾಧ್ಯರೊಪ್ಪುವರ್
ಖಂಡೇಂದುಧರಭಕ್ತ ಪಂಡಿತತ್ರಯಮಾವುದೆಂಬೊಡದನುಸುರ್ವೆನೊಸೆದು
ತಂಡತಂಡದ ಜನನಕಾರಣಂ ಬ್ರಹ್ಮನೆಂ
ದಂಡಲೆದು ನುಡಿದಜಂ ಪರಬೊಮ್ಮವೆಂಬವರ
ಖಂಡಿಸುತೆ ಭಕ್ತಿಜನನಕ್ಕೊಡೆಯನಾದ ಸಿರಿಪಂಡಿ[4]ತಂ ರಾ[4]ರಾಜಿಸಂ ೬೧

ಸ್ಥಿತಿಕರ್ತೃ ವಿಷ್ಣುವೆಂದುಲಿವ ವೈಷ್ಣವರನು
ನ್ನತವಾದದಿಂದವರ ಬಲ್ಮೆಯಂ ಮುಱಿದು ತ
ತ್ಪತಿಯಪ್ಪ ಕೇಶವನ ವಿಶ್ವೇಶನಡಿಗೆ ಪೊಡಮಡಿಸಿ ಮೂಲೋಕದೊಳಗೆ

---

[1] ರ್ಪುದು (ಜ)   [2] ತಂಶಿವಂ (ಜ)   [3] ತಯ್ಯಂ (ಗ)   [4] ತೇಂದ್ರಂ (ಗ)

ನುತಿವಡೆದು ತೋರ್ಪ ಭಕ್ತಿಸ್ಥಿತಿಗೆ ತಾನೆ ನೋ
ಡತಿಶಯದ ಕರ್ತೃ ಶಿವಲೆಂಕವಂಚಣ್ಣ ಪಂ
ಡಿತ ದೇಶಿಕಂ ವಿಜಿತ ಕುಸುಮಕೋದಂಡನಪಗತಪಾಪನೊಪ್ಪಿಪ್ಪನು ೬೨

ಲಯಕರ್ತೃ ಹರನೆಂದು ನುಡಿವ ವಾದಿಗಳನನು
ನಯದೆ ಬಾಧಿಸುತೆ ಶಿವದೂಷಕರನೊರಸುತ್ತೆ
ರಯದಿಂದ ವಾದಿಸುವ ಜೈನ ಬೌದ್ಧಾದಿಮತಕಾನನ ಪ್ರಚಿತಿಗೆಯ್ದೆ
ಲಯಕಾಲ ಧೂಮಧ್ವಜಂ ಶಿವನ ಭಕ್ತಿಪ್ರ
ಚಯಪಾಲಕಂ ತಾನೆಯೆನಿಸುತ್ತೆ ಸತತಮತಿ
ಶಯದಿಂದೆ ಮಲ್ಲಿಕಾರ್ಜುನ್ಗಪಂಡಿತೇಶ್ವರಂ ವಿತತವೊಪ್ಪುತ್ತಿರ್ಪನು ೬೩

ಇಂತು ಭಕ್ತಿನಿಮಿತ್ತಮೀ ಪಂಡಿತತ್ರಯಂ
ಸಂತತಂ ರಾಜಿಸುತ್ತಿರಲವರೊಳತ್ಯಧಿಕ
ನಂತಕಾಂತಕಭಕ್ತಿಕಾರಣಂ ಮಲ್ಲಿಕಾರ್ಜುನಪಂಡಿತಂ ಜನಿಸಿದಂ
ಮುಂತವರ ಜನನಮಂ ಪೊಗಳಲುದ್ಯುಕ್ತನಾ
ದೆಂ ತವಕದಿಂದಮಾ ಕಥೆಯೆಂತೆನಲ್ [1]ಭಕ್ತ[1]
ಸಂತತಿಯು ಕಿವಿವಚ್ಚಮುಪ್ಪಂತೆವೋಲ್ ಪೇಳ್ವೆನತಿಹರ್ಷದೆಸಕದಿಂದೆ ೬೪

ಧರೆಯೊಳಗೆ ಯಾವ್ಯಕ್ಕೈಲಾಸವೆಂಬಭಿಧಾನ
ದಿರವಿನಿಂ ಕಣ್ಗೆಡ್ಡಮಕ್ಕುಮದು ಕುಲಗಿರಿಗ
ಳರಸು ಮುನಿಗಳ ಮುಮುಕ್ಷುಗಳ ಪುಣ್ಯಾಲಯಂ ಪ್ರಮಥರಾಡುವ ಹರ್ಮ್ಯವು
ಪರಮ ಪರ್ವತಮುನಿಯ ತಪದ ಫಲಸಂದೋಹ
ವರರೆ ಮುಕ್ತಿಯ ರಾಶಿ ಶಂಕರಯಶಃಪುಂಜ
ಮುರುತರ ಜ್ಞಾನಶರಧಿಯ ಚಲಿಸದಿರ್ಪ ತೆರೆಯೆನಿಸಿ ಪರ್ವತಮಿರ್ಪುದು ೬೫

ನಿರುತಮಾ ಶ್ರೀಪರ್ವತಾಗ್ರದೊಳ್ ಬ್ರಹ್ಮಾದಿ
ಸುರನಿಕರಮಣಿಮಕುಟಕೋಟಿ [2]ತಟ[2]ಘೃಷ್ಟಪದ
ಸರಸೀರುಹಂ ವಿನುತಜನ ಪಾಪವಾರಾಶಿಬಾಡಬಂ ಶಶಿಜೂಟನು
ಪಿರಿದುಮನುರಾಗದಿಂ ಶ್ರೀಮಲ್ಲಿಕಾರ್ಜುನಂ
ಪರಮ ಭಕ್ತಾಳಿ ಚಿತ್ತೇಷ್ಟಪ್ರದಾನನನ
ವರತವೊಪ್ಪುತ್ತಿರ್ಪನದ್ರಿಜಾ ವದನಾಂಬುಜಾತ ಬಾಲಾರ್ಕನಿಭನು ೬೬

---

1 ಸಾಭ್ಯ (ಗ)   2 ಕಟಿ (ಕ)

ಇಂತೊಪ್ಪುತಿಪ್ಪ ಸಿರಿಶೈಲದೊಳ್ ವಸಿಸಿರ್ಪ
ರಂತಕಾಂತಕ ಭಕ್ತರಾ ಶಿಖರಿಮಕುಟಕ್ಕ
ನಂತಮಣಿಗಳ್ ಭುಕ್ತಿಮುಕ್ತಿದಾನರ್ ಭಕ್ತಿರಕ್ತರತಿಕೃತಕೃತ್ಯರು
ಸಂತರುಱಿ ಸಂಸೃತಿ ವಿರಕ್ತರೀಶಧ್ಯಾನ
ಸಂತತಾಸಕ್ತ ಚೇತಸ್ಕರುನ್ನತಧರ್ಮ
ಸಂತಾನಸಂಯುಕ್ತರಘತಿಮಿರ ಸಂದೋಹಮಾಸರಾಧಿಪರೂಪರು ೬೭

ಸಾರಶಿವತಂತ್ರಜ್ಞರಮಲಗುರುಮಂತ್ರಸುವಿ
ಚಾರತತ್ಪರರಮಿತ ಧನ್ಯರಪಗತದೈನ್ಯ
ರಾ ರತಿಪಮದದೂರರುರುಮಾನ್ಯರಖಿಳವಿಸ್ತಾರಲೋಕಾರಾಧ್ಯರು
ಧೀರರ್ಕಳಸಮಪಾತ್ರರ್ ಕರ್ಮಜೈತ್ರರತಿ
ಭಾರ ಭವಪಲ್ಲೀಲವಿತ್ರರತುಳಿತಮಲವಿ
ದೂರ ಶುಭಕರರೂಪರುನ್ನತ ಘೃಣಾಬ್ಧಿಗಳ್ ಶಿವಮಹಸ್ಸದೃಶಾಂಗರು ೬೮

ಕಲಿಕಾಲ ವೀರಭದ್ರರ್ ಭೂಮಿರುದ್ರರತಿ
ಲಲಿತ ವಿಬುಧಮನೋಹರರ್ ಶ್ರುತಿವಿಧಿಜ್ಞರುಱಿ
ಪಲವಾತದೇನೊ ನಿಖಿಳಾವನೀ ನಮಸ್ಕಾರ್ಯರಸಮವೀರ್ಯರ್ ಶರಣರು
ನಲಿದೊಂದುವಾಸರಂ ಮಲ್ಲಿಕಾರ್ಜುನ ಸಭಾ
ನಿಳಯದೊಳ್ ಕಣ್ಗೆಡ್ಡಮಾಗಿಯೊಡ್ಡೋಲಗದೊ
ಳೊಲವಿನಿಂ ಪರಶಿವನ ತತ್ತ್ವಪ್ರಸಂಗಮಂ ಮಾಡುತಿರ್ದರ್ ಸುಖದೊಳು ೬೯

ಇರುತೆ ಮತ್ತಾ ಶರಣಜಾಲ[1]ಮು[1]ತಿ ಮುದದಿಂದೆ
ವರಪುರಾತನರ ನೂತನ [2]ಪುರಾತನರ[2] ಬಂ
ಧುರ ಮಹೋನ್ನತ ಮಹಿಮೆಗಳ ಕೀರ್ತಿಸುತ್ತೆ ಬಸವೇಶನೂರ್ಜಿತಮಹಿಮೆಯಂ
ಪಿರಿದು ಕೊಂಡಾಡುತ್ತೆ ಮಲ್ಲಿಕಾರ್ಜುನ ಪಂಡಿ
ತರ ಮಹಿಮೆಗಳನಂಕಿಸುತ್ತೆ ಹರ್ಷಿತರಾಗಿ
ಪರವಶದೊಳಾಳುತಾನಂದಬಾಷ್ಪಗಳಿಂದೆ ತೊಪ್ಪನೇ ನೆಱಿತೊಯ್ಯುತೆ ೨೦

ಹರುಷದಿಂದುನ್ನಿದ್ರನಯನರಾಗುತೆ ಬಾರ
ಪರಮಸದ್ಭಕ್ತ ಪದಕಮಲ ಭೃಂಗನೆ ಬಾರ
ವರಗಣ ಸುಲಾಲಿತನೆ ಬಾ ಬಾರ ಪಾಲ್ಕುಱಿಕೆ ಸೋಮನಾಥಾ ಎನು[3]ತಲಿ[3]

---

[1] ವ (ಗ) [2] ಭಕ್ತವೃಂದ (ಜ) [3] ತಲು (ಕ) ತ್ತ (ಜ)

ಕರೆದೆನ್ನನೋವಿ ಮುಂಡಾಡಿ ನೀಂ ಮುನ್ನೊರೆದ
ಸರಳ ಬಸವಪುರಾಣ ಮಧುಮಧುರ ಮೃದುಶಬ್ದ
ವಿರಚನೆ[1]ಯಿ[1]ನೆಲ್ಲಾ ಗಣಶ್ರವಣ ಮಣಿಕರ್ಣಪೂರಮಾದುದು ಸಂತತಂ ೭೧

ನುತ ಪುರಾತನಭಕ್ತಗಣಕಥನ ಸಂತತಿಯ
ನತಿವಿಶದಮಾಗಿ ಸದ್ಭಕ್ತಲಾಲಿತಮಾಗಿ
ವಿತತೇತಿಹಾಸವೇದಾದಿ ಸಮ್ಮತವಾಗಿ ಪೊಸತಪ್ಪ ಯುಕ್ತಿಗೂಡಿ
ಕೃತಿ ಚತುರ್ವೇದ ಸಾರಮನಂತೆ ಮತ್ತೆ ವಿ
ಶ್ರುತ ಬಸವಗುಣಕಥನಮಂ ಗದ್ಯಪದ್ಯದಿಂ
ದತಿಶಯಮುಮಪ್ಪಂತೆ ಪೇಳ್ದವೊಲ್ ಮಲ್ಲಿಕಾರ್ಜುನಪಂಡಿತರ ವೃತ್ತಿ[2]ಯಂ[2] ೭೨

ಪರಿಮಿತದೆ ಶಿಷ್ಟಭಕ್ತರ ವರ್ತಸಂಗೂಡಿ
ಪರಮಭಕ್ತರ ಮಹಿಮೆವೆರಸಿ ಪೇಳೆಂದೆನಗೆ
ಕರುಣಪ್ರಸಾದಮಂ ಕುಡಲವರ ವಾಕ್ಯಮಂ ಮುಚ್ಚಿರದೊಳಾಂತವ[3]ರನು[3]
ಸರಳ ಭಕ್ತರ [4]ಮೂಮೆ[4] ಬಲಮಂದು [5]ಬಗೆ[5] ಪೊಡರಿ
ನಿರುತದಿಂದಂ ನಮಸ್ಕಾರತ್ರಯಂಗಳಂ
ವಿರಚಿಸುತಮಾತ್ಮಪ್ರಮೋದದಿಂ ಜುಂಗಣಂಗುಣಿಗುಣಿದು ತೊನೆದಾಡುತೆ ೭೩

ಶರಣಕರುಣಾಮೃತಾಬ್ಧಿಯೊಳಾಳುತೇಳುತ್ತೆ
ಹರಶರಣ ಚರಣಸರಸಿರುಹ ಪರಿಮಳದೊಳಂ
ಪಿರಿದುಮೋಲಾಡುತ್ತೆ ತಚ್ಚರಣಪದರಜೋನಿವಹನಿಟಲನುಮಾಗುತೆ
ಶರಣಾಂಘ್ರಿನಖರದರ್ಪಣ ಮಂಜುರುಚಿಯೊಳಗೆ
ಪರಿಲುಳಿತಕಾಯನಾಗುತೆ ತೆಱಂಬೊಳೆವ ತ
ಚ್ಚರಣಸಂತತಿಕೃಪಾಪಾತ್ರನಾಗುತ್ತೆ ಸುಖಪರವಶೀಭೂತನಾಗಿ ೭೪

ಬಳಿಕಮೆಚ್ಚತ್ತಿಂದು ಮದ್ವಿಶಿಷ್ಟಾಚಾರ
ಪಳಿಸಿತ್ತು ಮಜ್ಜನನ ಸಫಲಮಾದುದು ಭಕ್ತ
ಕುಳಮಹಿಮೆ[6]ಯಂ[6] ಪೊಗಳ ಮದ್ರಸನೆ ಶುದ್ಧಮಾದುದು ಭಾವಿಸಲ್ ಸಂತತಂ
ಲುಳಿತ ಮದ್ವ್ರತವಿತತಿ [7]ತುದಿ[7]ಮುಟ್ಟಿದುದು ನೋಡ
ವಿಳಸದಮಳಿನ ಶರಣಕರುಣದಿಂದಿನ್ನವರ
ಲುಳಿತಪದಧೂಳಿಯಂ ಶಿರದೊಳಾಂತೆಸಗುವೆಂ ಪಂಡಿತೇಂದ್ರನ ಕಥೆಯನು ೭೫

---

1 ಯ (ಕ) 2 ಯ (ಗ) 3 ಗೆ (ಕಜ) 4 ಮಹಿಮೆ (ಗ) 5 ಮನ (ಗ)
6 ಯಿಂ (ಗ) 7 ಕುಡಿ (ಕಜ)

ಸಲೆ ಉಮಾ ಮಾತಾ ಪಿತಾ ರುದ್ರ ಎಂಬ ಸ
ಲ್ಲಲಿತ ವಾಕ್ಯಪ್ರಮಾಣದಿನೀಶಕಲಜನುಱಿ
[1]ಬಲಿ[1]ದೇವಿ ವೇಮನಾರಾಧ್ಯ ಪ್ರಶಿಷ್ಯಗುರುಲಿಂಗಕರಕಮಲೋದಯಂ
ಲಲಿತ ಬಸವಪುರಾಣದೊಳಗೆ ಪೇಳ್ದಪರಿಮಿತ
ದಲಘುಭಕ್ತರ ಸಾಕುಮಗನಾ ಪುರಾಣಾಖ್ಯ
ವಿಲಸಿತ ತನೂಜನುಳ್ಳಂ ಬಸವನರಮನೆಯ ಸಿರಿದರದ ಕಾಪಿನಾಳು ೭೬

ಮಿಸುಪ ಬಸವನ ಜಾತಿ ಬಸವೇಶಗೋತ್ರಮಂ
ತೆಸೆವ ಬಸವನ ಸುತಂ ಬಸವೇಶ ಪದರುಚಿರ
ಬಿಸಜಸಂಕಲಿತಶಿರನಸಮಬಸವನ ಗುಣಾವಳಿಯನೋದುಪ ಪಾಠಕಂ
ಬಸವಕೀರ್ತಿಯ ಪೊಗಳ್ವ ಬೂತು ಬಸವನ ತೊಳ್ತು
ಬಸವನರಮನೆಯ ದಾಸಿಯ ಸುತಂ ಸಂತತಂ
ಬಸವನಣುಗನ ಬಂಟನೆನಸುಮಾ ಬಸವೇಶನಳ್ಕಱಿನ ಪಡಿಹಾಱಿನು ೭೭

ನಿರುತದಿಂದಂ ಪ್ರಾಣಲಿಂಗಮಾಗೆಸೆವ ಸುಂ
ದರ ಚೆನ್ನಮಲ್ಲಿಕಾರ್ಜುನನ ಬಸವಾಹ್ವಯಂ
ಗರೆದ ಹಳೆಯಂ ಭವಿಕೃತಾರಂಭದಿಂದೊಗೆದ ಧಾನ್ಯಾದಿನಿಕರದೂರಂ
ದುರುಳಭವಿಹಸ್ತಗತ ಶಾಕಾದಿ ಭವಿದೃಷ್ಟಿ
ಪೊರೆದ ರಸಪಾಕಾದಿ ಭವಿದ[2]ರ್ಶ[2]ನಾದಿಗಳ್
ಪಿರಿದು [3]ಪೊರ್ದದ[3] ವ್ರತಸ್ಥಂ ಶ್ರುತಿಮತಾಚಾರ ಮಾರ್ಗಸಿದ್ಧಂ ಸಂತತಂ ೭೮

ಕರಮೆ ದಾನಾದಾನವಿಷಯದೂರಂ ಮತ್ತೆ
ಪರಮಶಿವಭಕ್ತಿಸಾಗರ ವೀರಶೈವ ಬಂ
ಧುರಧುರೀಣಂ ಚತುರ್ವೇದಪಾರಗನಮಲ ವೀರವ್ರತಸ್ಥನೆನಿಸಿ
ಪಿರಿದು ರಾಜಿಪ ಪಾಲ್ಕುಱಿಕೆ ಸೋಮನಾಥವಿಭು
ಕರೆದು ತನ್ನಯ ಮೈದುನನನಮಾತ್ಯಾಗ್ರಣಿಯ
ನುರುಸಚಿವನಮಿತ ಚರಣನನನ್ನತೋದಯನನಖಿಲವಿದ್ಯಾನಿಪುಣನಂ ೭೯

ಪಿರಿದುಮಾಪಸ್ತಂಬಸೂತ್ರೋರುವಿಸ್ಫುರಿತ
ಹರಿತಗೋತ್ರಜನಧಿಕತರ ಪುಣ್ಯಗಾತ್ರನಂ
ಪರಮ ಬಸವಕಥಾರಸೈಕಸತ್ಪಾತ್ರನಂ ಬುಧನಿಕರ ಸನ್ಮಿತ್ರನಂ

[1] ಬಲ (ಗ) [2] ರುಶ (ಗ) [3] ಪಾರದ (ಜ)

ಸುರುಚಿರಪವಿತ್ರನಂ ಸರಳಚಾರಿತ್ರನಂ
ವರ ಸುಕೃತಯಾತ್ರನಂ ಭವಶರಧಿಬೈತ್ರನಂ
ನಿರುಪಮಿತ ಕಾಮಾದಿ ಷಡ್ವರ್ಗಜೈತ್ರನಂ [1]ಜಿ[1]ತಪರಾಕ್ರಮ ಶತ್ರುವಂ ೮೦

ಪಿಱಿ[2]ದುಮಗಧೈ[2]ರ್ಯೋನ್ನತನನೀಶಭಕ್ತಿ ಸು
ಸ್ಥಿರನನಚಲಿತ ಭುಜಪರಾಕ್ರಮನನನುಪಮನ
ಪರಮಗುರು ಪೋಚೀಶ್ವರಾಚಾರ್ಯರ ಹಸ್ತಜಾತನನಮಿತನೀತಿಯುತನಂ
ಚರಲಿಂಗ ಗುರುಲಿಂಗ ಸೇವಾನುರಕ್ತನಂ
ಕರಮಿಷ್ಟಲಿಂಗಪೂಜಾಸಕ್ತಚಿತ್ತನಂ
ಪರಶೀಲ ಶರಧಿವರ್ಧನ ಹರಿಣಲಕ್ಷ್ಮನಂ ಸರಳಸೂರಾಮಾತ್ಯನಂ ೮೧

ಹ[3]ರಿಸ[3]ದಿಂ ನೋಡಿ ಬಾ ಬಾರ ಸೂರಾಮಾತ್ಯ
ವರನೆ ನಿನ್ನಯ ಭಕ್ತಿನಿಷ್ಠೆಗಾರ್ಪಡಿ ತ್ರಿಣಯ
ಚರಣಸರಸಿಜಕೆ ಕಣ್ದುಂಬಿಯ ಸಮರ್ಪಣಂಗೆಯ್ದು ಶಿವನಿಂದೆ ಮತ್ತೆ
ಕರಮಲರ್ವ ಕಣ್ದಾವರೆಯ ಪಡೆದ ನಿನ್ನಂಶ
ರಿರವಱಿದು ಲೋಕದೊಳಗದಱಿಂದೆ ಮೆಚ್ಚಿದೆಂ
ಪಿರಿದಂತುಮಲ್ಲದೆಯುಮತಿಶಯಂ ಮತ್ಸ್ವಾಮಿ ಬಸವಂಗೆ ಬಂಟನೆಂದು ೮೨

ಮಿನುಪಣುಗ ಮೈದುನಂ ನೀನೆನಗೆ ಹಿತನೆಂದು
ಕನದಖಿಳ ಸಾಹಿತ್ಯಶಾಲಿ ನೀನೆಂದು ನೆ
ಟ್ಟನೆ ಶ್ರೋತ್ರತೆಗೆ ಪಾತ್ರನಣಿಯರಂ ನೀನೆಂದು ಶಿವನ ಸದ್ಭಕ್ತಿನಿಷ್ಠೆ
ಸುನಯಸಂಸಿದ್ಧ್ಯಧಿಕ ವೃದ್ಧಿಪ್ರಸಿದ್ಧಿಗಳ್
ಘನಚಿತ್ತಸಮೃದ್ಧ್ಯಾತ್ಮಶುದ್ಧ್ಯಾಯುರಾರೋಗ್ಯ
ವಿನುತ ಸಿದ್ಧ್ಯಾದಿಗಳ್ ಪುತ್ರಪೌತ್ರಾ[4]ದಿ[4] ಸಂಮೃದ್ಧಿ ನಿನಗಕ್ಕೆ ನಾಡೆ ೮೩

ಎನುತೆ ಸೂರಾಮಾತ್ಯನಂ ಪರಸಿ ಮಲ್ಲಿಕಾ
ರ್ಜುನಪಂಡಿತಾರಾಧ್ಯಚಾರಿತ್ರಮಂ ಕರಂ
ಮನವೊಸೆದು ಸೂರಸಚಿವೇಂದ್ರ ಕೇಳೆಂದು ಕೃತಿವೇಳತೊಡಗಿದರೆಂತೆನೆ
ಸನಯ ಶಬ್ದಂ ಕೇಳ್ವವರ ಕಿವಿಯ ಜಕ್ಕುಲಿಸು
ವನುವಾಗೆ ಶಬ್ದಸಂದರ್ಭದೊಳ್ ಸವಿದೋರ್ಪ
ವಿನುತಾರ್ಥಮರ್ಥದೊಳ್ ಭಾವಮದು ಪೊಱಪೊಣ್ಮೆ ಭಾವದೊಳೆ ರಸಮೊಸರಲು ೮೪

---

1 ದಿ (ಕಗ) 2 ದುಮಗದಾ (ಗ) ದನುಘಧೈ (ಜ) 3 ರುಷ (ಗ) 4 ಭಿ (ಗ)

ವರ ವೀರಶೈವನುತದೇಶಿಕೇಂದ್ರಂ ಸತತ
ಮುರುಪಾಶಮೋಚಕ ಕಲಾನಿಪುಣನುನ್ನತಂ
ಪಿರಿದುಂ ಚತುರ್ವೇದಪಾರಗಂ ವೀರಭಕ್ತಿಕ್ರಿಯಾನಿಷ್ಠನನಘಂ
ತರಳ ಸಂಸೃತಿ ಮಸ್ತಕಚ್ಛೇದನೆನಿಪ ಬಂ
ಧುರ ಮಂತ್ರರಾಜ ಪಂಚಾಕ್ಷರೀಮನುಸಿದ್ಧ
ನಿರುತಿರ್ಪನೊಲ್ದು[1]ವಾಂತರ[1]ದೇಶಿಕೇಂದ್ರನೀಶ್ವರಭಕ್ತಗಣಪುಂಗವಂ ೮೫

ಅವರ ಶಿಷ್ಯಂ ಘೋರಸಂಸಾರದೂರನಘ
ನಿವಹತರುಪರಶುವಿಜಿತೇಂದ್ರಿಯಂ ಸಂತತಂ
ಶಿವಶರಣಸೇವಕಂ ವೇದವೇದಾಂತಾದಿಶಾಸ್ತ್ರಂಗಳಲ್ಲಿ ನಿಪುಣಂ
ತವೆ ಅಖಂಡಿತಕೀರ್ತಿಯುದ್ದಂಡವಾದಿಗಿರಿ
ಪವಿ ಕೋಟಿಪಲ್ಯಾಖ್ಯದೇಶಿಕೇಂದ್ರಂ ನೋಡೆ
ವಿವಿಧ ವೈಭವದಿನಿರ್ಪಂ ವಲಂ ತಚ್ಛಿಷ್ಯನಭವಸದ್ಭಕ್ತಿಯುಕ್ತಂ ೮೬

ಜಗವನುಱ[3] ರಕ್ಷಿಸುವ ಸದ್ಬುದ್ಧಿಯಿಂದೆ ತೊ
ಟ್ಟಗೆ ಸ ರುದ್ರೋ ನಾತ್ರ ಸಂಶಯಃ ಎಂಬ ಸಲೆ
ಸೊಗಸಿನ ಪುರಾಣೋಕ್ತಿಯಿಂದಮಿಾ ಧರೆಯೊಳಗೆ ಜನಿಸಿದಂ ಸಾಕ್ಷಾಚ್ಛಿವಂ
ಗಗನಕಚ ಭಕ್ತವದನವ್ರಾತಜಲಜಾತ
ಗಗನಮಣಿ ಶೈವೇ ದಶಪ್ರತ್ಯ[2]ಯಾ[2] ಎಂದು
ಮಿಗುವ ತದ್ವ್ಯಾಖ್ಯಾನುಸಾರದಿಂದಂ ದಶಪ್ರತ್ಯಯಯುತಂ ಧನ್ಯನು ೮೭

ಪರಮಪಂಚಾಕ್ಷರೀ ಮಂತ್ರತತ್ಪರನಮಲ
ತರನಪರವೀರಭದ್ರಂ ಪಾಶನಾಶನುರು
ತರ ಸಂತತೋಜ್ವಲಾದಭ್ರ ಶುಭ್ರಸ್ಫುರಿತ ಸತ್ಕೀರ್ತಿ ವಿಭ್ರಮಯುತಂ
ಭರದೆ ಶಾಪಾನುಗ್ರಹಾತಿದಕ್ಷಂ ದುಷ್ಟ
ತರ ವಾಿವಿದೂಕಾದಿಪರಸಮಯತರುನಿಚಯ
ಪರಶು ಗುರುಮಲ್ಲಿಕಾರ್ಜುನಪಂಡಿತಾರಾಧ್ಯನುದಯಿಸಿದನೀ ಧರೆಯೊಳು ೮೮

ಎನ್ನ ರಸನೆಯ ಪಾವನಂ ಮಾಡಲಿನ್ನವರ
ಸನ್ನುತೋದಯ ರೀತಿ ಪೇಳಪಟ್ಟಪುದು ನೆಱ[3]
ನನ್ನಿಯಿಂದಂ ಶಿವಂ ವೃಷಭನಂ ಬಸವನಾಮಂಗರೆದು ಭೂತಳಕ್ಕೆ

---

[1] ವಂ ವರ (ಕಜ) [2] ಯಾಂ (ಗ) [3] ಮ (ಗ)

ಮುನ್ನೆ ಪ್ರಮಥಾನುಮತದಿಂ ಭಕ್ತಿಯಧಿಕತೆಗೆ
ಸನ್ನಿದಂ ಬೀಳ್ಕೊಟ್ಟನಂತರಂ ನಂದೀಶ
ನುನ್ನತದ ಶಿವನ ಸದ್ಭಕ್ತಿಯಂ ಮತ್ತೆ ತತ್ಸರ್ವಜ್ಞತೆಯನುಮಂತೆ ೮೯

ಪರಮಭೃಂಗೀಶ್ವರನ ನಿಷ್ಠೆಯಂ ದೂರ್ವಾಸ
ನುರುಶಾಪಶಕ್ತಿಯಂ ಗೌತಮನ ವೈಖರಿಯ
ನಿರದೆ ರುದ್ರಪ್ರಮಥನಿವಹ ಪ್ರಸಾದೈಕರತಿಯನುಪಮನ್ಯು ಮುನಿಯ
ವರ ಗುರುತ್ವಮನಖಿಲ ಪೂರ್ವಾದ್ಯತನರ ಬಂ
ಧುರ ಭಕ್ತವರರ ದೃಷ್ಟಪ್ರತ್ಯಯಾನೀಕ
ಸರಳ ಮಾಹಾತ್ಮ್ಯಮಂ ವೀರಭದ್ರನ ಶೂರತೆಯನೊಸೆದು ಸೆಳೆದುಕೊಂಡು ೯೦

ವಿನಯದಿಂ ಶಿಷ್ಯನೊಂದು ಪರಿಜುಪೂಡಲ್ ನೆನೆಯ
ಲನಿತಱಿತೊಳೆ ರೂಪಾಗಿ ಶೂಲಿಗೆ ತಳಿಲ್ಗೆಯ್ದು
ಸನಯದಿಂ ಮುಂದಿರ್ದ ಮೂರ್ತಿಯಂ ಹ[1]ರಿಸ[1]ದಿಂದಂ ನೋಡಿ ಪರಮೇಶ್ವರಂ
[2]ವಿನುತ[2] ವೇದಾದಿ ವಿಜ್ಞಾನಮುಮನಾ ಮೂರ್ತಿ
ಗನುನಯದಿನಿತ್ತು ಮತ್ತದರೊಡನೆ ನುಡಿದನೊ
ಲ್ದೆನಸುಮಖಿಲ ಪ್ರಮಥಸಂದೋಹಕಿಷ್ಟಾರ್ಥಸಿದ್ಧಿಗಳನೊಸೆದೀ[3]ಯು[3]ತ್ತೆ ೯೧

ರಸೆಯಲ್ಲಿ ಬಸವ ಸುಕುಮಾರನೊಪ್ಪಿರ್ದಪಂ
ನಿಸದಮಾತನ ಪಜ್ಜೆವಿಡಿದು ನೀಂ ಪೋಗು ಮ
ತ್ತಸವಸದೆ ನಿನ್ನಿಂದ ಮಾಳ್ಪ ಕ[4]ಜ್ಜವೆ[4]ಯೆಮ್ಮ ಸದ್ಭಕ್ತಪರಿಪಾಲನಂ
ಎಸೆವ ಗುರುರೂಪನಂಗೀಕರಿಸಿಯಾಂ ಮತ್ತೆ
ರಸೆಗೆ[5]ಯ್ದಿ[5] ಮಚ್ಛಿಷ್ಯನಂ ನಿನ್ನ ಮಾಡಿಕೊಂ
ಡೊಸೆದು ರಸೆಯೊಳ್ ಕರಂ ಶಿಕ್ಷಿಸಿ ಸಮಂತು ಪರಿರಕ್ಷಿಸಿ ಮನಃಪ್ರೀತಿಯಿಂ ೯೨

ಧರೆಯೊಳಗೆ ಶಿಷ್ಯಪ್ರಶಿಷ್ಯರ್ಕಳಿಂದೆ ಬಂ
[6]ಧುರ[6]ತರಖ್ಯಾತನಂ ಮಾಡಿ ನಿಜಸಮಯಮಂ
ಪರಿರಕ್ಷಿಸಲ್ಲಿ ಜಗದಾರಾಧ್ಯತೆಯನಸಮಪರಪಕ್ಷದೂಷಣೆಯೊಳು
ಸರಸಪಾಂಡಿತ್ಯಮಂ ವೀರಭಕ್ತಿಸ್ಥಲಾ
ಪರಿಮಿತಾಚಾರ ಸುವ್ರತನಿಷ್ಠೆಯಂ ವಿಮಲ
ಪರಶಿವನ ಮಾಹಾತ್ಮ್ಯಮಂ ಪ್ರತಿಷ್ಠಿಸುವಲ್ಲಿ ಪಟುತರವಚಸ್ಸಿದ್ಧಿಯಂ ೯೩

---

1 ರುಷ (ಗ) 2 ಮಿನುಪ (ಗ) 3 ವು (ಕಜ) 4 ಜ್ಜಂ (ಗ) 5 ಯ್ದು (ಗ)
6 ದುರು (ಗ)

ವೇದ ವೇದಾಂತ ಸಿದ್ಧಾಂತಪ್ರತಿಷ್ಠೆಯಂ
ಸಾದರಡೆ ಮಾಳ್ಪುದ್ಧತಿಯನೆ[1]ನ್ನ[1] ಭಕ್ತಿ ಸಂ
ಪಾದನಮನೀ[2]ಷೆಯಂ[3] ಶಿವತತ್ತ್ವಸಾರ ಸುಕಲಾಪ್ರೌಢಿಯಂ ಸಂತತಂ
ಆದಮಿಾಶ್ವರ ಯೋಗಸಂಪದಮುಮತಿಘೋರ
ಮಾದ ದೃಷ್ಟಪ್ರತ್ಯಯಾದಿ ಮಾಹಾತ್ಮ್ಯಮಂ
ಮೇದಿನಿಯೊಳೆಸೆವ ಶಾಪಾನುಗ್ರಹೋನ್ನತಮುಸೊಲ್ಪು ನಿನಗೀವೆನೆನುತೆ ೧೪

ಧರಣಿಯೊಳ್ [3]ವೆಂಗಿ[3]ದೇಶೇಂದಿರೆಯ ಮುಂಡಲೆಯ
ಸಿರಿರನ್ನದಂತೆ ದ್ರಾಕ್ಷಾರಾಮಮೆಂಬ ಪೊಳ
ಲುರುವೈಭವದಿನಿರ್ಪುದಲ್ಲಿ ಭೀಮೇಶ್ವರಂ ನೆಲಸಿರ್ಪನಾ ದೇವನ
ವರಪುರೋಹಿತನುತ್ತಮಂ ಪಾಣಸಾನ್ವಯೋ
[4]ದ್ಧರಜ[4] ಭೀಮನಪಂಡಿತಂ ವಿಪ್ರನೊರ್ವನುರು
ತರ ಪುತ್ರಕಾಮನಾಗುತ್ತೆನ್ನ ಮೂರ್ತಿಯಂ ಪಿರಿದು ಪೂಜಿಸುತೆ ಮತ್ತಂ ೧೫

ನುತ ದಿವ್ಯಪಂಚಾಕ್ಷರೀಮನುಪುನಶ್ಚರಣ
ತತಿಯನುಜಿತ ಮಾಡೀಗಳುಂ ಮಲ್ಲಿಕಾರ್ಜುನನ
ಜಿತರತಿಪನಿದಿರೊಳೆನಸುಂ ಪುರಶ್ಚರಣಮೊಂದಂ ಪರ್ವತಾಗ್ರದಲ್ಲಿ
ವಿತತಮಪ್ಪಂತೆ ಮಾಡುತ್ತಿರ್ದಪಂ ನಲಿದು
ಸುತನಾಗು ನೀನವಂಗೆಂದಿಂತು ಶಿವ ನುಡಿಯು
ಲತಿಹ[5]ರ್ಷ[5]ದಿಂ ಶಿನಂಗೆಜಗಿ ತನ್ಮೂರ್ತಿ ಭೂತಳಕೆಯ್ದಿ ತೇವೊಗಳ್ವೆನು ೧೬

ಪರಮಪತಿಭಕ್ತೆ ಭೀಮನಪಂಡಿತನ ವನಿತೆ
ತರಳಮೃಗನಯನೆ ಗೌರಾಂಬಿಕೆಯ ಗರ್ಭದೊಳೆ
ಹ[5]ರಿಸ[5]ದಿಂ ಜನಿಸಿ ಮಾತೃವ ಜಠರಪೀಠಮಂ ಪುಗುವ ಕರ್ಮವಿನಾಶನು
ವರಮೂರ್ತಿ ಮಲ್ಲಿಕಾರ್ಜುನನ ನಾಮಂದಳೆದು
ಪಿರಿದು [6]ದ್ರಾ[6]ಕ್ಷಾರಾಮದಲ್ಲಿ ತೊಳಗುತ್ತೆ ಸು
ಸ್ಥಿರನಾದ ಕೋಟಿಪಲ್ಯಾರಾಧ್ಯದೇಶಿಕನ ಕೃಪೆವಡೆದು ಮೇಟಿತಿಯುತನಿಶಂ ೧೭

ಪಿರಿದುಮಾ ಗುರುಕೃಪಾಪೀಯೂಷವಾರಿಯಿಂ
ದಿರದೆ ಮುನ್ನಿನ ಜನ್ಮಕರ್ದಮಂಗಚ್ಚುತ್ತೆ
ವರ ವೀರಶೈವದೀಕ್ಷಾದೀಪದಿಂದೆ ಸಂಸ್ಕೃತಿತಮಮನಳಜಿಸುತ್ತೆ

---

1 ನ್ನ (ಗ) 2 ಶ್ರೇಷ್ಠತೆಯ (ಜ) 3 ವೆನ್ನಿ (ಕಜ) 4 ಧುರಜ (ಗ). ದ್ಧರಣ (ಜ)
5 ರುಷ (ಗ) 6 ದಾ (ಗ)

ಸುರುಚಿರ ವಿಭೂತಿಪಟ್ಟಂದಳೆವುದಱಿಂಸಧಿಕ
ತರಮಾದ ವಿಧಿಲಿಖಿತ ದುರ್ಲಿಪಿನಿಕಾಯಮುಂ
ಕರಮೊರಸುತಾಚಾರ್ಯರ್ ಹಸ್ತಸಂಯೋಗದಿಂ ಭಾವಶುದ್ಧನುಮಾಗುತೆ ೯೮

ಮಿನುಪ ಗುರುಕೃಪೆಯಿಂದೆ ಪಂಚಾಕ್ಷರೀಮಂತ್ರ
ಮೆನಿಪ ಸುಧೆ ನಿಜಕರ್ಣದೊಳ್ ತೀವಲದಱಿಂದ
ಮನವರತ ಪಶುಪಾಶಪತಿ ಸಂವಿದುದ್ಭವಿಸಿಯಜ್ಞಾನಮಂ ಕೆಡಿಸಲು
ಮನದೊಳಗೆ ಪೊಣ್ಮುತಃ ಮಂತ್ರ ಹೃದ್ಗತಲಿಂಗ
ಮನುನಯದಿಸಂಗಮಂ ಸಾರಿ ಸಿಜಕಳೆಗಳಂ
ಸುನಯದಿಂ ಪ್ರಾಣದೊಳ್ ವೇಧಿಸಲ್ ಪ್ರಾಣಲಿಂಗಮದಾಗಿ ಸುಖಮಿರುತ್ತೆ ೯೯

ಲಲಿತಮಾಗೆಸೆವ ಭಾವಳಿಯ ಪಾತ್ರಂ ಮಾಡಿ
ಲುಲಿತ ವಿಷಯ ಪದಾರ್ಥನಿಕರಮಂ ಬೈತದಱೊ
ಳೊಲವಿನಿಂ ಪ್ರಾಣಲಿಂಗಕ್ಕೆ ಕೊಟ್ಟಾ ಪ್ರಸಾದಮನುಂಡು ಮಿಗೆ ತಣಿಯುತೆ
ಸಲೆ ಸದ್ಗುರುಭ್ಯೋ ನಿವೇದಯೇದೆಂಬ ಸ
ಲ್ಲಲಿತಾಗಮೋಕ್ತಿಯಿಂ ತನುಧನಾಸುಗಳ ನಿ
ರ್ಮಳಕಾಯ ಕೋಟಿಪಲ್ಯಾರಾಧ್ಯ ಪದಯುಗಕೆ ಪದೆದರ್ಪಣಂಗೆಯ್ವುತೆ ೧೦೦

ತನುಸಮರ್ಪಣದಿಂ ಪ್ರಸಾದಮಂ ಮಿಗೆ ಪಡೆದು
ಧನಸಮರ್ಪಣದಿಂದೆ ಚರಲಿಂಗಮಂ ಪಡೆದು
ಕನದಸುಸಮರ್ಪಣದೆ ಪ್ರಾಣಲಿಂಗಂಬಡೆದು ಮಿನುಪ ತದ್ಗುರುಪೂಜೆಯ
ಮನವೊಸೆದು ಮಾಡುತಿಂತೀ ವೀರಭಕ್ತಿಯಿಂ
ಸುನಯದಿಂ ವರ್ತಿಸುತ್ತಿರಲೊಂದುವಾಸರಂ
ಘನತರಾಸಹ್ಯದಿಂ ಭೂಸುರರ್ ಮುಳಿದು ತತ್ಪಂಡಿತೇಂದ್ರನನೀಕ್ಷಿಸಿ ೧೦೧

ಸದಮಲಪ್ರಚುರವಿಶ್ರುತ ಪರಮಭಕ್ತಗಣ
ಪದಸರೋರುಹಸಾಂದ್ರ ಮಕರಂದಪಾನ ಸ
ಮ್ಮುದಿತಚಂಚಚ್ಚಂಚರೀಕನನವರತ ಪಂಚಾಕ್ಷರೀಪ್ರಸಿತಹೃದಯಂ
ವಿದಿತ ಮಂಜುಲನೀಲಕಂಠಾಹ್ವಯಂ ಮನೋ
ಮುದದೆ ಪೇಳ್ದುರುತರಾರಾಧ್ಯಚಾರಿತ್ರದೊಳ
ಗಿದು ಪಂಡಿತಾರಾಧ್ಯ ಜನನಮುಂ ಗುರುಕೃಪೆಯ ಪಡೆದುದುಂ ಮೊದಲ ಸಂಧಿ ೧೦೨

# ಎರಡನೆಯ ಸಂಧಿ

## ವಿಭೂತಿ ರುದ್ರಾಕ್ಷಿ ಮಹತ್ವ

**ಸೂಚನೆ:** ಉರುತರಾರಾಧ್ಯಚಾರಿತ್ರದೊಳೆ ರಾಜಿಸುವ
ನಿರುಪಮಿತ ದೀಕ್ಷಾಪ್ರಕರಣದೊಳ್ ಶೋಭಿಸುವ
ವರಭಸಿತರುದ್ರಾಕ್ಷಮಾಹಾತ್ಮ್ಯಮಂ ಸೂರಸಚಿವ ಕೇಳ್ ಸಂತೋಷದೆ

ಪೊಡೆಯಲರ ಬರ್ಮರಿಂದರ ಸಗ್ಗಿಗರ್ ದೆಸೆಗ
ಳೊಡೆಯರಚ್ಚರಸ ಬಿಜ್ಜೋದರರ್ ಜತಿಗಳುಱ
ಗಡಣದಿಂದಂ ಬಂದು ಸೀಯದರ ಮುಂಬಿನೊಳ್ ಸಮಯಮಂ ಸಲೆಪಾರುತೆ
ಸಡಗರದೆ ನಿಂದಿರಲ್ ಬಗ್ಗದೊವಲುಡುತೆ ಜಡೆ
ಮುಡಿಯ ಸಿಂಗರಿಸುತ್ತೆ ಮಱವಾವುಗಳ ರಯ್ಯ
ದೊಡವಂ ತುಡು[1]ತ್ತಂ[1]ತವುರದೊ[2]ಳಗೆ[2] ಬಿನದಿಸುವ ಕಱಗೊರಲನೆಮ್ಮ ಪೊರೆಗೆ ೧

ದುರುಳವಿಪ್ರರ್ ನೆರೆದು ಹರನ ತೇಜಂಬಡೆದು
ಪರಮಸುಖದೊಳಗಿರ್ಪ ಗುರುಪಂಡಿತೇಂದ್ರನಂ
ಕರಮಸೂಯದೆ ನುಡಿದರೆಲೆ ಪಂಡಿತಾರಾಧ್ಯ ನೀಂ ನೋಡೆ ಸದ್ಬ್ರಾಹ್ಮಣಂ
ಧರಣಿಯೊಳ್ ನಿನ್ನನ್ನರುಂಟೆ ಕುಲಜರ್ ನಾಡೆ
ಸುರುಚಿರಾಗಮವಿದಂ ವೇದಜ್ಞನುತ್ತಮಂ
ವರನೀತಿಶಾಸ್ತ್ರಯುತನಾಗಿ ನೀನಿಂತು ವೇದೋಕ್ತಮಾರ್ಗಂದೊಱಯುತೆ ೨

ಪಿರಿದುಂ ವಿಭೂತಿ ರುದ್ರಾಕ್ಷೆಗಳ ಧರಿಸುವುದು
ಹರಪಾದ ತೀರ್ಥಪ್ರಸಾದಂಗಳಂ ಕೊಳ್ವ
ದುರುಲಿಂಗಸಂಬಂಧಕಾಯನಾಗಿರ್ಪುದಿದು ವೇದೋಕ್ತಮೋ ಭಾವಿಸೆ
ಪರಮೇಷ್ಠಿ ವಿಷ್ಣು ಜಿಷ್ಣು ಪ್ರಮುಖದೇವರ್ಕ
ಳಿರಲಿಂತುಟಲ್ಲ ಮನುಮುನಿ ಋಷಿಕದಂಬಕಂ
ಕರಮಿಂತು ವರ್ತಿಸಿದುದಿಲ್ಲ ನಿನ್ನಯ ತಲೆಯೊಳಳಿಯಿತ್ತು ವೇದೋಕ್ತವು ೩

---

[1] ವುತಂ (ಗ) [2] ಳೆ (ಕಜ)

ಎನೆ ದರ[1]ಹಸಿತ[1]ವದನನಾಗುತ್ತೆ ವಿಪ್ರರಿರ
ಮಿನುಪ ವೇದಾರ್ಥವಱಿಯಿರೆ ಯಜುಶ್ಶಾಖೆ ಭೋಂ
ಕನೆ ಪೇಳಿದತ್ತು ಭಾಸುರ ಭಸಿತದಿಂದಂ ತ್ರಿಪುಂಡ್ರವಂ ಮಾಳ್ಪುದೆಂದು
ಘನಘೋಷದಿಂದೆ ಭೂತ್ಯೈನಪ್ರಮದಿತವ್ಯ
ಮೆನುತೆ ಸುಟ್ಟುಂಬೆರಲಂ ನೆಗಪಿ ಸಂತತಂ
ಕನದಮಲಮತಿಯೊಡನೆಪೆರದುಮಿನ್ನದು ದಲಂತಿರ್ಕೆ ಪರಿಭಾವಿಸುವೊಡೆ ೪

ಕರಮನಾದರದಿಂದೆ ಭಸಿತಮಂ ಪಣೆಯೊಳಗೆ
ಧ[4]ರಿಸ[4]ದಿರಲಾಗದೆಂದಾ ಯಜುರ್ವೇದ[2]ಮು
ದ್ಧ[2]ರುನಾದದಿಂ ಪೇಳಿದಂಥ್ಧದೊಳೆ ಮನುವಾಕ್ಯಮುಂ ಮಹಾರಾವಮೆಸೆಯೆ
ಭರದೆ ನೈವಪ್ರಮಧ್ಧಿತವ್ಯಮೆನುತಂ ನುಡಿಗು
ಮುರುತರವಿಭೂತಿಯಂ ಸಾದರಂ ಸಂತತಂ
ಧರಿಸಿದವನೇ ಬ್ರಾಹ್ಮಣೋತ್ತಮಂ ನೋಡಿಮಿದು ಶ್ರುತಿವಿಹಿತಸನ್ಮಾರ್ಗವು ೫

ನಿರುತದಿಂದಗ್ನಿರಿತ್ಯಾದಿ ಮಂತ್ರಂಗಳಿಂ
ವರ[3]ಭೂತಿಯಂ[3] ತೆಗೆದುಕೊಂಡು ಶುದ್ಧಂಮಾಡಿ
ಹ[4]ರಿಸ[4]ದಿಂದಂ ಯೋಗ್ಯಮಾದ ತಾಣಂಗಳೊಳ್ ಧರಿಸವೇಳ್ದತಿಘೋಷದಿಂ
ಪಿರಿದುಮುಲಿಗುಂ ನಿಜಮಥರ್ವಣ ಶಿರಸ್ಸು ಭಾ
ಸುರ ವಿಮೃಜ್ಯಾಂಗಾನಿ ಸಂಸ್ಪೃಶೇದೆಂಬ ಬಂ
ಧುರವಾಕ್ಯದಿಂದಮುದನಱಿಯಿರಿಮುದಂತಿರ್ಕೆ ಮತ್ತೆಯುಂ ಕೇಳಿಮೆನುತೆ ೬

ಸತತಮಗ್ನಿಯನು ಭಾಸಿಸಿ ಭೂತಿಯಿಂದ[5]ವೇ[5]
ವಿತತಮಪ್ಪಂತೆ ಮೆಯ್ಯೊಳ್ ಪೊರೆದುಕೊಂಡು ಮ
ತ್ತತಿಶಯದೆ ಪಣೆಯೊಳೆರ್ದೆಯೊಳ್ ತೋಳ್ಗಳೊಳ್ ತ್ರಿಪುಂಡ್ರಮನೊಲಿದು ಧರಿಪುದೆಂದು
ನುತಿವಡೆದ ಮಾನವಪುರಾಣೋಕ್ತಿಯೆತ್ತಲು
ನ್ನತವಾಗಿ ಕೂಗಿ ಬೊಬ್ಬಿಡುತಿರ್ಕುಮೆಂತೆನಲ್
ಹಿತಮಾಗಿ ಭೂತ್ಯೈವ ಎನಿತುಮಗ್ನಿಂ ಸಮುತ್ಥಾಯಿ ಎಂದತಿ ಮುದದೊಳು ೭

---

1 ಸ್ಮಿತ (ಗ) 2 ಮುತ್ಸು (ಜ) 3 ಭೀತಮಂ (ಗ) 4 ರುಷ (ಗ) 5 ಲೇ (ಜ)

ಜಮದಗ್ನ್ಯಗಸ್ತ್ಯ ಕಶ್ಯಪ ಮುಖ್ಯಮುನಿಗಳ್ಗೆ
ಮಮತೆಯಿಂದಂ ತ್ರಿಯಾಯುಷಮಾದ ಮತ್ತೆಯುಂ
ಪ್ರಮುದದಿಂ ದೇವತಾನೀಕಕ್ಕೆಯುಂ ತ್ರಿಯಾಯುಷಮಾದ ಭೂತಿಯೊಲ್ದು
ಅಮಿತಮಾಗೆನೆ[1]ಗಂ[1] ತ್ರಿಯಾಯುಷಮದಕ್ಕೆಂದು
ಸುಮನಸ್ಕ ಕಾತ್ಯಾಯನಸ್ಮೃತಿ ಮಸಂದೇದು
ಸುಮುದದಿಂದಂ ಕಶ್ಯಪಸ್ಯ ತ್ರಿಯಾಯುಷಂ ಎಂದು ನುಡಿಗುಂ ಸಂತತಂ ೮

ಪರಮತೀರ್ಥಂಗಳೊಳಗಾವಪುಣ್ಯಂ ನೋಡೆ
ಸುರುಚಿರ ಮುಖಂಗಳೊಳಗಾವ ಫಲವಿತತಿ ಮ
ತ್ತಿರದಾ ಫಲಂಗಳಿಂದತ್ಯಧಿಕಫಲವೀವುದೀ ಭಸಿತದುದ್ಧೂಳನಂ
ನಿರುತಮೆಂದೊಡನೊಡನೆ ಕೈಯೆತ್ತಿ ಸಾಱುಗುಂ
ಭರದಿಂದೆ ಭೀಮಾಗಮಂ ಸದಾಕಾಲದೊಳ್
ಪಿರಿದಾಗಿ ತತ್ಫಲಂ ಕೋಟಿಗುಣಿತಂ ಎಂದು ಮನದೊಳತಿ ಮುದಮೊದಗಲು ೯

ಸಲೆ ಮಜ್ಜನದೊಳಧಿಕಯಜ್ಞದೊಳ್ ಜಪದೊಳಗೆ
ಸುಲಲಿತ ಸುರಾರ್ಚನೆಯೊಳಂ ವೈಶ್ವದೇವದೊಳ
ಗಲಸದೆ ವಿಭೂತಿಯಂ ಧರಿಸಿ ಮಿಳ್ತುವ ಗೆಲ್ವನೆಂದು ಮನದೊಲವಿನಿಂದೆ
ವಿಲಸಿತ [2]ಸುಶಾ[2]ತಾತಪಸ್ಮೃತಿ ನಿರಂತರಂ
ನಲಿಯುತುಂ ಸ್ನಾನೇ ಜಪೇ ಎನುತೆ ಮತ್ತೆ ಸ
ಲ್ಲಲಿತ ಮತಿಯಿಂ ವೈಶ್ವದೇವೇ ಸುರಾರ್ಚನೇ ಎಂದು ಘೋಷಿಸುತಿರ್ಪುದು ೧೦

ವರ ವಿಬುಧನಾದ ಸದ್ಬ್ರಾಹ್ಮಣಂ ಭೂತಿಯಂ
ಪಿರಿದು ಧರಿಸಲ್ವೇಳ್ಕುಮೆಂದು ಮನಮುಣ್ಮೆ ಬಂ
ಧುರ ಕೂರ್ಮಪೌರಾಣವಾಕ್ಯಮುಲಿಗುಂ ತ್ರಿಪುಂಡ್ರಂ ಬ್ರಾಹ್ಮಣೋ ಎನುತ್ತೆ
ನಿರುತದೆ ವಿಭೂತಿಯನಿಡಲ್ ಪುನರ್ಜನ್ಮಮಂ
ತಿರದಳಿಗುಮೆಂದು ಪುನರಾವರ್ತತೇ ಎಂಬ
ಸುರುಚಿರಾಲಾಪಮಂ ಕಾಲಾಗ್ನಿರುದ್ರೋಪನಿಷದಣಿಯಂ ಘೋಷಿಕುಂ ೧೧

ಶಿವಮಂತ್ರದಿಂ ಪವಿತ್ರತೆವಡೆದು ನೆಱೆ ರಾಜಿ
ಸುವ ಕಾಮದಹನಾಂಗಕೊಲ್ದು ಭೂಷಣಮಾದ
ಸುವಿನಯದೆ ಪರಮೇಷ್ಠಿ ಪಣೆಯಲ್ಲಿ ಬರೆದ ದುರ್ಲಿಪಿಯನೊರಸುವ ಮುಕ್ತಿಯಂ

1 ಗೆಯುಂ (ಕಜ) 2 ಶ್ವೇ (ಗ)

ತವಕದಿಂ ಕುಡುವ ಭಾಸುರಮಾದ ಭಸಿತಂಗ
ಳವಿರತಂ ಧರಿಪುದರ್ಕತ್ಯಂತಯೋಗ್ಯಮ
ಪ್ಪುವು ಎನುತೆ ಲುಂಪಂತಿ ದೈವಲಿಖಿತಾನಿ ಎಂದಾ ಸ್ಕಂದಸೂಕ್ತಿ ನುಡಿಗುಂ ೧೨

ಆವನಿಂ ವಿಪ್ರನಿಂ ಶಿರದಲ್ಲಿ ಭೂತಿಯುಂ
ತೀವಿ ಮೂರೆಖೆಗಳ್ ಮಾಡಪಟ್ಟುವು ಸಮಂ
ತಾ ವಿಪ್ರನಿಂದೋದಿದುದು ಕೇಳ್ದುದುಂ ಮತ್ತನುಷ್ಠಿಸಿದುದೆಲ್ಲಾಗಳುಂ[1]
ಪಾವನತೆವಡೆದಿರ್ಕುಮೆಂದು ಸದ್ವಾಕ್ಯತತಿ
ಯೋವಿ ಘೋಷಿಸುತಿರ್ಕುಮುಣಿಯರಂ ಭಾವಿಸು
ತ್ರ್ಯೋವೊ ಶಿರಸಿ ತ್ರಿಪುಂಡ್ರಂ ಭಸ್ಮನಾ ಎನುತ್ತಾಪಗಂ ಸಂತಸದೊಳು ೧೩

ಪರಮತ್ರಿಪುಂಡ್ರಮುಂ ಪಣೆಯೊಳೊರ್ವಂ ಶಾರ್ವ
ನುರುಭಸಿತದಿಂ ಧರಿಸನವನ ದೀಕ್ಷಾತಪೋ
ವರಮಂತ್ರತತಿ ದೇವತಾರ್ಚನಾವಿದ್ಯಾದಿ ನಿಕರಂಗಳೆಲ್ಲಮನಿಶಂ
ಉರಿವಹ್ನಿಯೊಳ್ ಬಿಳ್ದ ಶುಷ್ಕತೃಣದಂತೆ ನೋ
ಡಿರದೆ ನಾಶಂಬುಗುವುದೆಂದುಱಿ ಪುರಾಣೋಕ್ತಿ
ನಿರುತದಿಂದಂ ತ್ರಿಪುಂಡ್ರಂ ಯೋ ನ ಧಾರಯೇದೆಂದು ಸಲೆ ಬೊಬ್ಬಿಡುವುದು ೧೪

ಸುರರ್ಗೆ ವಿಪ್ರರ್ಗೆ ಸಲೆ ಭಸಿತದಿಂದಂ ಪಣೆಯೊ
ಳಿರವೇಳ್ಕುಮೇಗಂ ತ್ರಿಪುಂಡ್ರಮೆಂದನವರತ
ಮಿರದೆ ನುಡಿಗುಂ ಪುರಾಣೋಕ್ತಿ ವಿಪ್ರಾಣಾಮೆನುತ್ತಮತಿಹರ್ಷದಿಂದೆ
ಅರಸುಗಳ್ಗಂ ವೈಶ್ಯತತಿಗಮತಿಶಯಮಾಗಿ
ಸುರುಚಿರವಿಭೂತಿಯಿಂದಂ ಬಟ್ಟವೊಟ್ಟೆಂದು
ನಿರವಿಕಮಂ ವರ್ತುಳಂ ನೃಪವೈಶ್ಯಯೋರ್ಯೆಂದು ಸದ್ವಾಕ್ಯಮೊಸೆದು ನಾಡೆ ೧೫

ಮಿನುಪ ಶೂದ್ರರ್ಗಳೆಯ ಪೆಱಿಯುಂದದೊಳ್ ಪೊಟ್ಟೆ
ನನುನಯಂ ಪಣೆಯೊಳಿಡವೇಳ್ಕೆಂದು ಭಾಸುರಂ
ಮುನಿವಾಕ್ಯಮರ್ಧಚಂದ್ರಂ ತು ಶೂದ್ರಾಣಾಮೆನುತ್ತುಸುರ್ಗುಮತಿಶಯದೊಳು
ಎನಸುಮಿತರರ್ಗೆ ಬಂಧುರಭೂತಿಯಿಂದೆ ಚ
ಕ್ಕನೆ ಊರ್ಧ್ವಪುಂಡ್ರಮಂ ಧರಿಸವೇಳ್ಕೆಂದು ಮ
ತ್ತಿನ ಪುರಾಣೋಕ್ತಿಯುಽನ್ಯೇಽಷಾಮೆನುತ್ತೂರ್ಧ್ವಪುಂಡ್ರಮೆನುತಂ ನುಡಿವುದು ೧೬

---

1 ಳು (ಕಜ) 2 ದೈ (ಜ)

ಚತುರಾನನಂ ಮುನ್ನೆ ಸೃಷ್ಟಿಸುವ ಕಾಲದೊಳ್
ನುತವಿಭೂತಿಯ ಧರಿಸವೇಳ್ಕೆಂದು ಪಣೆಯನು
ನ್ನತನಾಗಿಯಡ್ಡಮಾಗಿಯೆ ನಾಡೆ ಪುಟ್ಟಿಸಿದನಲ್ಲದೇ ಬಟ್ಟೆತಾಗಿ
ವಿತತೋರ್ಧ್ವಮಾಗಿ ಪುಟ್ಟಿಸಿದುದಿಲ್ಲೆಂದು ಸ
ನ್ನುತವಾಕ್ಯಮೊಸೆದು ಬೊಬ್ಬಿಡುಗುಮತಿಶಯದಿಂದೆ
ಸತತಂ ಸಸರ್ಜ ಚ ಲಲಾಟಂ ಹಿ ಎಂದು ತರ್ಜನಿಯೆತ್ತಿ ಸಮ್ಮುದದೊಳು ೧೭

ಆ ವಿರೂಪಾಕ್ಷನುನ್ನತ ಭಸಿತವೆಂಬ ಸಲೆ
ಪಾವನ ಪರಂಜ್ಯೋತಿರಂಗವೆನುತುಂ ಪಿರಿದು
ಭಾವಿಸುತ್ತುಂ ಮಿಗೆ ಸ ಏಷ ಭಸ್ಮಜ್ಯೋತಿ ಎಂದು ನುಡಿಗುಂ ಹರ್ಷದೆ
ಓವೊ ಜಾಬಾಲೋಪನಿಷದಜಸ್ರಂ ಮಹಾ
ದೇವನ ನಿಜಸ್ವರೂಪಂಬಡೆದ ಭೂತಿಯುಂ
ಗ್ರೀವದೊಳ್ ಭಾಳದೊಳ್ ಶಿರದೊಳಗೆ ತಳೆದವಂ ದವನಘವನಕ್ಕೆ ಸತತಂ ೧೮

ಮಿಸುಗುವೀಯರ್ಥದೊಳೆ ಮಾನವಪುರಾಣಮುಂ
ತೊಸೆದು ಭಸ್ಮಜ್ಯೋತಿ ಎಂದಣಿಯರಂ ಬಿಡದೆ
ಲಸದುಕ್ತಿಯಿಂ ನುಡಿಗುಮಂತೆ ಬೋಧಾಯನಸ್ಮೃತಿ ಪುನಂ ನಲಿ[1]ಯುu[1]ತೆಯ್ದೆ
ಅಸವಸಂ ಮತ್ವಾ ಹವಾಮಹೇ ಎನುತೆ ಸಂ
ತಸದಿಂದೆ ಕೂಗಿ ಬೊಬ್ಬಿಡುತಿರ್ಪುಮಾವಗಂ
ನಿಸದಮಿದು ಮತ್ತೆ ಶಾತಾತಪಸ್ಮೃತಿ ಕರಂ ಪೇಳ್ಗುಮಿಂತೆಂದು ಕೂಡೆ ೧೯

ನೆನೆಯಬಾರದ ಪಾತಕಂಗಳಂ ವಿರಚಿಸಿದ
ಮನುಜನೇಗಂ ಭೂತಿಯಿಂದಮುದ್ಧೂಳನಮು
ನನುಗೊಳಿಸಿ ಭೂತಿತಳ್ಪದೊಳೆ ಪಟ್ಟಿರುತೆ ರುದ್ರನನೊಸೆದು ತನ್ನ ಮನದ
ಕೊನೆಯ ಮೇಲಿರಿಸಿ ಜಾನಂಗೆಯ್ಯೆ ಪಾಪತತಿ
ಇನಿತು ತಲೆದೋಱದೆಲ್ಲಂ ಕೆಟ್ಟುಪೋಪುದೆಂ
ದನುದಿನಂ ಭಸ್ಮಶಯ್ಯಾ ಶಯಾನೋ ಎಂದು ಮನದೊಲವಿನಿಂ ಸಂತತಂ ೨೦

ಪರಮತ್ರಿಪುಂಡ್ರಮಂ ಧರಿಸನಾವಂ ದ್ವಿಜಂ
ಪಿರಿದವಂ ಮಾಳ್ಪ ಯಾಗಾದಿಕರ್ಮಂ ಕಿಡುಗು
ಮಿರದವಂ ಕೇಳ್ದುದೋದಿ[2]ದ ವೇದಮೆಲ್ಲಮೋ[2]ದಿದುದಲ್ತು ಸತತಮೆಂದು

---

[1] ವು (ಗ) [2] ದುದೆಲ್ಲ ಕೇಳ್ದುದೋ (ಜ)

ಕರಮುಲಿವ ವಾಕ್ಯಮಂ ಕೇಳಿರೆಲೆ ವಿಪ್ರರಿರ
ಭರದೆ ಶ್ರುತಮಪ್ಯಶ್ರುತಂ ಭವೇದೆಂದುಮು
ದ್ಧರನಾದದಿಂ ಪಂಡಿತೇಶ್ವರಂ ಕಿಸುಗಣ್ಣೆ ನುಡಿದನಾ ವಿಪ್ರರೊಡನೆ ೨೧

ಓವೊ ಚಿತ್ರಂ ನೋಡಿದೊಂದನನುಭಾವವಿಡಿ
ದಾವಗಂ ಸಚ್ಚಿದಾನಂದಲಕ್ಷಣಮುಳ್ಳ
ಭಾವದಿಂ ನಲಿದು ಧರಿಸಲ್ಪಟ್ಟ ಭಸ್ಮಮಂ ಮಱೆದು ಮಣ್ಣಂ ಪಣೆಯೊಳು
ತೀವಿಕೊಂಡುಱೆ ಕಿಡುವ ಮಾನವರ ರೀತಿಯೆಂ
ದಾ ವಶಿಷ್ಠನ ಶಿಷ್ಟರಾಮಾಯಣಂ ನುಡಿಗು
ಮೀ ವಿಧದೆ ಭಸ್ಮ ತದ್ವಿಸ್ಪಷ್ಟಂ ಧೃತಮೆಂದು ಯದಸತ್ಯಮೆಂದು ಸತತಂ ೨೨

ಮಿನುಪ ಗೋಪಿಯು ಮಲಿನಮಂ ಧರಿಸಿಕೊಂಡು ತೊ
ಟ್ಟನೆ ಶಿವನ ಮುಟ್ಟುವಾ ಭೂಸುರಂ ಭಾವಿಸಲ್
ಕನದಖಿಳನರಕಪಾಥೋನಿಧಿಗಳೊಳ್ ತನ್ನ ಕುಲವಿತತಿವೆರಸಿ ನೋಡೆ
ಅನುದಿನಂ ಮುಳುಗಾಡುತಿರ್ಪನೆಂಬೀ ವಾಕ್ಯ
ದನುವನುಱೆ ಕೇಳಿರೆಲೆ ವಿಪ್ರರಿರ ಮನಸಂದು
ಸುನಯದಿಂ ಸೋಽಕ್ಷಯಂ ನರಕಂ ವ್ರಜೇದೆಂದು ಘನಘೋಷದಿಂದುಲಿವುದು ೨೩

ಮುನಿನಿಕರಕಂ ಬ್ರಹ್ಮವಾದಿಗಳ್ಗಂ ಭಸಿತ
ವನೆ ಧರಿಪುದತ್ಯಧಿಕಫಲ[1]ವೆಂದು[1] ಸಂತತಂ
ಸನಯದಿಂ ಸೂತಸಂಹಿತೆಯಹೋ ಮೋಹಸ್ಯ ಮಾಹಾತ್ಮ್ಯವೆಂದು ನುಡಿಗುಂ
ಮಿನುಗುವ ಭವಿಷ್ಯತ್ಪುರಾಣಮುಲಿಗುಂ ಪಾಪ
ವಿನಿತುಳಿಯದಳಿದು ಪೋಕುಂ ಭಸ್ಮಧಾರಣದೆ
ನನಸೆಂದು ಶುದ್ಧ್ಯತೇ ಸರ್ವಪಾಪೈಶ್ಚೆಂಬ ವಾಕ್ಯಮಂ ಸಂತಸದೊಳು ೨೪

ಭಸಿತಮಂ ವಾಮಕರದೊಳ್ ಬಯ್ತು ಬಲ[2]ಗಯ್ಯ[2]
ನೊಸೆದು ಮಂತ್ರಿಸಿ ತಾಣತಾಣದೊಳ್ ಧರಿಪುದೆಂ
ದಸೆದಳಂ ಕಾರಣಾಗಮಮೊಲ್ದು ಭಸ್ಮ ವಾಮೇ ಕರೇ ಎನುತೆ ಮುದದೆ
ಉಸುರ್ಗುಮದು ಮತ್ತೆ ಶಿವಧರ್ಮಶಾಸ್ತ್ರಂ ಜಲದಿ
ನೆಸೆವ ಮಾಹಂದೊಱೆದು ಭಸ್ಮಮಜ್ಜನಮನು
ಲ್ಲಸದೆ ಮಾಳ್ಕೆಂದು ನುಡಿ[3]ದುಂ[3] ಸ್ನಾನಮಾಗ್ನೇಯಮಾಚರೇದೆಂದು ರಯದಿಂ ೨೫

---

[1] ವೆಂದು (ಕಜ) [2] ಗಯ್ಯಿ (ಜ) [3] ಗುಂ (ಜ)

ಇನಿತು ವೇದಸ್ಮೃತಿ ಪುರಾಣೇತಿಹಾಸಾದಿ
ಮನುವಾಕ್ಯವಿತತಿ ಬೊಬ್ಬಿಡುತಿರ್ಪುಮುಱಿದೆ ತ
ರ್ಜನಿಯೆತ್ತಿ ಭೂಸುರಂ ಭೂತಿಯಂ ಪ್ರೀತಿಯಿಂ ಧರಿಸವೇಳ್ಕೆಂದು ಸತತಂ
ಎನಸುಮಿದನಱಿಯದಜ್ಞಾನದಿಂ ವಿಪ್ರರಿರ
ಕನದಮಲಭಸ್ಮಮಂ ತೊಱೆದು ಗೋ[1]ಪೀ[1]ಮಲಿನ
ವನೆ ಪಣೆಯೊಳೂರ್ಧ್ವಪುಂಡ್ರಮನಿಟ್ಟು ನರಕಮಂ ಪುಗುವಿರೆಂತೆನೆ ಪೇಳ್ವೆನು ೨೬

ಪಿರಿದುಂ ವಿನೋದಾರ್ಥದಿಂದೆ ಸದ್ಬ್ರಾಹ್ಮಣಂ
ಕರಮೆಸೆವ ಪಣೆಯೊಳತ್ಯೂರ್ಧ್ವಪುಂಡ್ರಂದಳೆವ
ನುರುತರಾಂತಕದೂತರಪನನುಱಿ ಕೋಪದಿಂ ಪಿಡಿದೊಯ್ದು ಕೋ[2]ಪಿಸುತ್ತೆ[2]
ನಿರುತೋರ್ಧ್ವಪುಂಡ್ರವಾಕೃತಿಯಿಂ ತೆಱಿಂಬೊಳೆವ
ಕರವಾಳಧಾರೆಯಿಂ ತತ್ತಱಿಂದಱಿಪರಂ
ದೊರೆಗುಮೆಲ್ಲಾಗಳುಂ ಭಿದ್ಯತೇ ಯಮಕಿಂಕರೈಃ ಎಂಬ ಸದ್ವಾಕ್ಯವು ೨೭

ಎಸೆವೂರ್ಧ್ವಪುಂಡ್ರಮಂ ಬಟ್ಟವಟ್ಟಂ ಮತ್ತೆ
ವಿಸುಪೆಳೆಯ ಪೆಱಿಯಂದದೊಳ್ಪೊಟ್ಟಸಂತೆ ರಂ
ಜಿಸುವ ಶೂಲಾಕೃತಿಯ ನಿಡುವೊಟ್ಟನಾವಗಂ ನಿಟಲತಟದೊಳಗಿಟ್ಟವಂ
ಅಸವಸದೆ ಧರ್ಮವನಮಂ ಸುಟ್ಟವಂ ಪಾಪ
ವಿಸರದೊಳ್ ಮನಮನಿಂಬಿಟ್ಟವಂ ನೋಡೆಂದು
ನಿಸದಮುಲಿಯುತ್ತಿರ್ಪುವೂರ್ಧ್ವಪುಂಡ್ರಂ [3]ಚ[3] ಶೂಲಂ ಚ ಎಂಬೀ ವಾಕ್ಯವು ೨೮

ಲಲಿತೋರ್ಧ್ವಪುಂಡ್ರಕಂ ನೆಱಿ ಬಟ್ಟವೊಟ್ಟು ಸ
ಲ್ಲಲಿತಾರ್ಧಚಂದ್ರನಂದದ ಬಟ್ಟು ನಿತ್ಯಮು
ಜ್ಜ್ವಲಿಪಾಂಕುಶಾದಿಗಳ ಪೋಲ್ವ ನಿಡುವೊಟ್ಟುಗಳ್ ಕರಮಶುದ್ಧತೆಯೆನುತ್ತೆ
ಸಲೆ ಸಾಂಬಸೂಕ್ತಿ ಘೋಷಿಸುತಿರ್ಪುವಾವಗಂ
ನಲಿದಶುದ್ಧಂಚಾರ್ಧಚಂದ್ರಂ[4]ತುಮೆಂ[4]ಬ ಸ
ದ್ವಿಲಸಿತದ ವಾಕ್ಯದಿಂದೆಂದು ಪೇಳ್ದಂ ಪಂಡಿತೇಂದ್ರನತಿಹರ್ಷದಿಂದೆ ೨೯

ಪಿರಿದು ಪಣೆಯೊಳ್ ಶ್ರದ್ಧೆಯೊಡಗೂಡಿ ವೇದಬಾ
ಹಿರಮಾದ ಲಲಿತೋರ್ಧ್ವಪುಂಡ್ರಮಂ ಮೋಹದಿಂ
ಕರಮೆ ಪಾಷಂಡದರ್ಶನದಿಂದೆ ಕೆಟ್ಟಜನವಿತತಿ ಧರಿಸುಗುಮಲ್ಲದೆ

---

1 ಪಿಯ (ಗ) 2 ಪದಿಂದೆ (ಗ) 3 ತ್ರಿ (ಜ) 4 ಚ ಎಂ (ಜ)

ಪರಮವೈದಿಕನಾದ ಸದ್ಬ್ರಾಹ್ಮಣಂ ಮುದದೆ
ಧರಿಸಲಾಗದುವೆಂದು ಸೂತಸಂಹಿತೆ ನಿರಂ
ತರ ಘೋಷಿಕುಂ ಧಾರಯಿಷ್ಯಂತಿ ಮೋಹೇನ ಎಂಬ ಸದ್ವಾಕ್ಯದಿಂದೆ ೩೦

ಮಿಸುಪರ್ಧಚಂದ್ರಕಂ ಲಲಿತೋರ್ಧ್ವಪುಂಡ್ರಕಂ
ತಿಸುಳದಾಕೃತಿಯಿನೆಸೆವೊಳ್ಪೊಟ್ಟು ವರ್ತುಳಂ
ನಿಸದಮಾಗೀ ಬೊಟ್ಟುಗಳ್ ತಂತ್ರನಿಷ್ಠರಿಂ ವೇದಜ್ಞರಿಂದಮನಿಶಂ
ಒಸೆದು ಪಣೆಯೊಳ್ ಧರಿಸತಕ್ಕುದ[1]ಲ್ತೆಂ[1]ದು ಸಂ
ತಸದಿಂದೆ ಮಾನವಪುರಾಣವಾಕ್ಯಂ ನುಡಿಗು
ಮೆಸಕದಿಂ ವರ್ತುಳಂಚಾರ್ಧಚಂದ್ರಕಮೆನುತೆ ತಂತ್ರನಿಷ್ಠಾ ಎನುತ್ತೆ ೩೧

ನೆಗಳ್ದೂರ್ಧ್ವಪುಂಡ್ರವಂ ತಾಳ್ದ ವಿಪ್ರನ ಮೊಗವ
ನಗಲದೀಕ್ಷಿಸಿದವಂ ತದ್ದೋಷನಿ[2]ರ್ಹ[2]ರಣ
ಕೊಗೆದ ಚಾಂದ್ರಾಯಣವೆನಿಪ್ಪ ವ್ರತವಂ ಮಾಡವೇಳ್ಕೆಂದು ಮನವುಣ್ಮುತೆ
ಸೊಗಸಾಗಿ ಪೇಳಿತ್ತು ಮಂಜುಘೋಷಣೆಯಿಂದೆ
ಬಗೆದು ಮನುವಾಕ್ಯವೆಂತೆನಲದಂ ಪೇಳ್ವೆ ನಾಂ
ಮಿಗೆ ವ್ರತಂ [3]ಚಾಂ[3]ದ್ರಾಯಣಂ ಚರೇದೆಂದು ಸಂತಸದೆಸಕವೆಸೆಯಲೊಸೆದು ೩೨

ಶ್ರುತಿಬಾಹ್ಯರಾದ ಪಾಷಂಡದ[4]ರ್ಶ[4]ನದವರ
ವಿತತೋರ್ಧ್ವಪುಂಡ್ರಯುತ ಮುಖಮನುಱೆ ಕಂಡವಂ
ಗತಿದೋಷಮಕ್ಕುಮಾ ದೋಷಪರಿಹಾರಾರ್ಥಮಾಗಿ ನೊಸಲೊಳ್ ಭಸಿತಮಂ
ನುತಿವಡೆದ ಪಂಚಾಕ್ಷರಿಯ ನೆನೆದು ಧರಿಸಿಕೊಳು
ತತಿಶಯಂ ತದ್ಭಸ್ಮವಂ ಮಾಳ್ಪುದೆಂದು ಸಂ
ತತಮುಲಿಗುಮೂರ್ಧ್ವಪುಂಡ್ರಂ ಧರಂ ವಿಪ್ರಂ ಸಕೃತ್ತೆಂದು ಶ್ರುತಿವಾಕ್ಯವು ೩೩

ಅವಯವಂಗಳೊಳೆಸೆವ ದೇವತಾಯುಧ ಲಾಂಛ
ನವನಾವನೋರ್ವನುನ್ನತ ವಿಪ್ರನಾಪಗಂ
ತವೆ ಧರಿಪನವನೆ ದಲ್ ಪತಿತನಿದು ನಿಕ್ಕುವಂ ನೋಡಣಿಯರಂ ಎನುತ್ತೆ
ತವಕದಿಂದಂಗೇಷುನಾಂ ಕಯೋದ್ವಿಪ್ರ ಎಂ
ದವಿರತಂ ಶಾತಾತಪಸ್ಮೃತಿ ಮನಂದಂದು
ಸವಿನಯದೆ ಘೋಷಿಸುತ್ತಿರ್ಕುಮೆಂದಾ ಪಂಡಿತೇಂದ್ರನುಸಿರ್ದಂ ಮುದದೊಳು ೩೪

---

1 ಲ್ಲೆ (ಕಜ)   2 ನಿರು (ಗ)   3 ಚಂ (ಗ)   4 ರುಶ (ಗ)

ತನುವನಂಕಿಸಲಿಲ್ಲ ಸುಡಲಿಲ್ಲ ಮೋಹದಿಂ
ದೆನಸುಮುತ್ತಪ್ತಲೋಹದೆ ಬಯಕೆಯಿಂದೆ ಮ
ತ್ತನುನಯಂ ಸುಡಿಸಿಕೊಂಡೊಡೆ ಸುಡಿಸಿಕೊಂಡಾತನುನ್ನತದ್ವಿಜನ ತೆಱದೆ
ಘನತರ ಶ್ರು[1]ತಿಯು[1]ಕ್ತ ಕರ್ಮಂಗಳಲ್ಲಿ ನೆ
ಟ್ಟನೆ ಯೋಗ್ಯತೆಯ ಹಡೆಯನವನೆಂದು ರಯದಿಂದೆ
ಸುನಯದಿಂ ಬೋಧಾಯನಸ್ಮೃತಿಯೆ ನಾಂಕಯೇನ್ನದಹೇದೆನುತ್ತಿರ್ಪುದು ೩೫

ಮಿಗೆ ಕಾದ [2]ಕಾ[2]ರ್ಬೊನ್ನ ದಂಡದಿಂ ದೇಹವಂ
ತಗುಳ್ದು ಸುಡಲಿಲ್ಲೆಂದು ಗೌತಮಸ್ಮೃತಿ ಮತ್ತೆ
ನೆಗಳ್ದು ಪೊಗಳುತ್ತಿರ್ಕುಮುತ್ತಪ್ತಲೋಹದಂಡೇನ ಎಂದತಿಘೋಷದೆ
ಬಗೆಯೆ ವಿಪ್ರಂ ದೇವತಾಯುಧದ ಮುದ್ರೆಗಳಿ
ನಗಲದೆನಸುಂ ಸುಡಿಸಿಕೊಳಲಾಗದೆಂದು ತೊ
ಟ್ಟನೆ ಯಮಸ್ಮೃತಿ ನಾಡೆ ದೇವತಾಯುಧಲಾಂಛನೈ ಎಂದು ಬೊಬ್ಬಿಡುವುದು ೩೬

ನರನೊರ್ವನಾವನುಂ ನೆಱೆ ತನ್ನ ದೇಹದೊಳ್
ಪರರ ದೇಹದೊಳಾದೊಡಂ ಶಂಖಚಕ್ರಮೆಂ
ಬುರುಮುದ್ರೆಗಳನಂಕನಂಗೆಯ್ವನವನೆ ಅತ್ಯಂತ ಪಾತಕಿ ಭಾವಿಸೆ
ನಿರುತಮೆಂದಾ ಸೂತಸಂಹಿತೆಯ ವಾಕ್ಯ[3]ಮು
ದ್ಧರ[3]ನಾದದಿಂದುಲಿಗುಮಿಂತೆಂದು ಸಂತತಂ
ಪಿರಿದದೆಂತೆನೆ ನ ಕುರ್ಯಾದಂ[4]ಕನಂ ನರೋ[4] ಎಂದು ಪರಿತೋಷದಿಂದೆ ೩೭

ಆಯತದ ಶಂಖಚಕ್ರಾಂಕಿತರ ಶೀಘ್ರದಿಂ
ರಾಯನುಱೆ ತಾನಾಳ್ವದೇಶದಿಂ ಪೊಱಮಡಿಪು
ದಾಯತಮದೆಂದು ಪಾರಾಶೋಕ್ತಿಯಂಕಿತೋ ಯಸ್ವದೇಶಾ[5]ದೆ[5]ನುತ್ತೆ
ಓಯಾರದಿಂ ನುಡಿಗುಮಂತೆ ಮನಮೊಸೆಯುತ್ತ
ಮಾಯುಧೈಃ ಶಂಖಚಕ್ರಾದ್ಯೈ ಎನುತ್ತೆ ಮ
ತ್ತೀಯರ್ಥಮಂ ಕರಂ ಮಾನವಪುರಾಣಮುಲಿಗುಂ ತೆಱಂಬೊಳೆವಂದದೆ ೩೮

ನಿರುತಮಾ ದೇವತಾಯುಧಲಾಂಛಿತರ್ಕಳಂ
ಪಿರಿದು ಮುಟ್ಟಲ್ ನೋಡಲೊಲ್ದು ನುಡಿಸಲ್ಕಾಗ
ದರಸುಗಳ್ ಶೀಘ್ರಮವರಂ ತಮ್ಮ ದೇಶದಿಂ ಪೊಱಗಣ್ಗೆ ಪೊಱಮಡಿಪುದು

---

1 ತ್ಯು (ಜ) 2 ಕ (ಳ) 3 ಮು|ತ್ಯುರು (ಜ) 4 ನರಕಂ ನರಃ (ಗ) 5 ಯೆ (ಗ)

ಕರವೆ ಯೋಗ್ಯಮದೆಂದು ಮಾನವಪುರಾಣಮಂ
ತೊರೆದು ಹರ್ಷದೆ ನುಡಿಗುಮೆಂತೆಂಬೊಡವಱರವ
ನಿರದೆ ಕೇಳಿರೆ ನ ಸಂಭಾಷ್ಯಾ ದ್ವಿಜಾತಯೋ ಎಂಬ ಸದ್ವಾಕ್ಯಂಗಳ ೩೯

ಮಂದಮತಿಯಾದ ವಿಪ್ರಂ ಭಾವಿಸಲ್ಕಾವು
ದೊಂದಱಿಂ ಚಿಹ್ನಂಗಳಂ ಪಡೆವನೇಗಳುಂ
ಸಂದೆಗಮದಿಲ್ಲ ಸಾಕ್ಷಿಕನಲ್ತು ಲಾಂಛಿತಂ ಶ್ರುತಿಯುಕ್ತಮಾರ್ಗದಿಂದೆ
ನಿಂದಿತಂ ನೋಡೆಂದು ಯಜ್ಞವೈಭವಕಾಂಡ
ಸೌಂದರಾಲಾಪಮುಂ ಘೋಷಿಕುಂ ನಾಡೆ ಮನ
ಸಂದು ಮರ್ತ್ಯೋ ನ ಸಾಕ್ಷೀ ಸರ್ವದಾ ಭವೇದೆಂದು ಮಂಜುಲನಾದದಿಂ ೪೦

ಸಂತತಂ ಶಂಖಚಕ್ರಾದಿ ಮುದ್ರೆಗಳನೋ
ರಂತೆ [1]ಲಲಿತೋ[1]ರ್ಧ್ವಪುಂಡ್ರಮನೊಸೆದು ತಾಳ್ದವನ
ನುಂತೆ ಮುಟ್ಟಲ್ತಕ್ಕುದಲ್ತೆಂದು ನೋಡಲುಂ ಯೋಗ್ಯಮಲ್ತೆಂದು ನಿಸದಂ
ಇಂತೆಂದು ಶ್ರುತಿಗಳ್ ಪುರಾಣೇತಿಹಾಸಾದಿ
ಸಂತತಿಗಳೋದುತಿರೆ ಭೂಸುರಾ[2]ನೀಕ[2]ಕ್ಕ
ದೆಂತು ಧರಿಸಲ್ಬಾರದೆಲೆ ವಿಪ್ರನೀಚರಿರ ಭೂತಿಯಂ ಪ್ರೀತಿಯಿಂದಂ ೪೧

ಭಸಿತಮಂ ತಾಳ್ದವನೆ ಸತ್ಕುಲಜನಾವಗಂ
ಭಸಿತಮಂ ಧರಿಸಿದವನುನ್ನತೋನ್ನತಪುಣ್ಯ
ವಿಸರವುಳ್ಳಂ ಶುಭ್ರಭಸಿತಮಂ ತನುವಿನೊಳೆ ಲೇಪನಂಗೆಯ್ದ ಮನುಜಂ
ಲಸಿತ ಮೋಕ್ಷಾಂಗನಾಲಿಂಗನಂ ಮಾಡುವಂ
ಭಸಿತಮಂ ಭೂಸುರಂ ಕಾಯದೊಳ್ ತಳೆಯಲುಂ
ನೊಸಲೊಳಿಡಲುಂ ಯೋಗ್ಯನವನೆಂದು ಪಂಡಿತೇಂದ್ರಂ ನುಡಿದನವ[3]ಱ[3]ದಿರೊಳು ೪೨

ಕೇಳಿರೆಲೆ ವಿಪ್ರರಿರ ರುದ್ರಾಕ್ಷಧಾರಣಂ
ಭಾಳಾಕ್ಷನಂಶದ ನರಂಗೆ ಕೈಗೂಡುಗುಂ
ಜಾಳಿಸಿದ ಪಾಪಾತ್ಮಮನುಜಂಗಯೋಗ್ಯಮದಱ[3]ರ[3]ವನೊರೆವೆಂ ನನ್ನಿಯಿಂ
ತಾಳಿತ್ತು ವೇದಸಂದೋಹ ಮತ್ತಂ ದೇವ
ತಾಳಿ ತಾಳಿತ್ತು ರುದ್ರಾಕ್ಷೆಗಳನೆಂದು ಸ
ಮ್ಮೇಳದಿಂ ಬೋಧಾಯನೋಕ್ತಿ ವೇದಾಧಾರಯಂತಿ ಎನುತೆಯ್ದೆ ನುಡಿಗುಂ ೪೩

---

[1] ತೀವಿತ್ತೋ (ಗ) [2] ನಿಕರ (ಕಜ) [3] ನಿ (ಕ)

3

ಮಾಡಬಾರದ ಮಹಾಕರ್ಮನಿಕರಂಗಳಂ
ಮಾಡುತ್ತೆ ತೆಗಳಪ್ಪ ಸಂಪರ್ಕನಿಚಯಮಂ
ಮಾಡುತುಂ ಸಂತತಂ ಶಿರದಲ್ಲಿ ರುದ್ರಾಕ್ಷಿಯಂ ತಳೆದಿರಲ್ ತಕ್ಷಣಂ
ನಾಡೆ ಶುದ್ಧಾತ್ಮನವನಕ್ಕುಮೆಂದಾವಗಂ
ನೋಡೆ ಲಿಂಗಪುರಾಣ ಲಸದುಕ್ತಿ ಸಾಱುಗುಂ
ರೂಢಿಯಿಂದಂ ಪಿಬೇನ್ಮದ್ಯಮೆಂಬೀ ವಾಕ್ಯರೂಪದಿಂ ಸಂಭ್ರಮಿಸುತೆ ೪೪

ಪರಮತ್ರಿಪುಂಡ್ರಮಂ ರುದ್ರಾಕ್ಷವಿತತಿಯಂ
ಪಿರಿದು ಸದ್ಭಕ್ತಿಯಿಂ ತಾಳ್ದ ಸದ್ಬ್ರಾಹ್ಮಣಂ
ಕರಮುಮಂ ಶುಚಿಯುಮಂ ಶ್ರಾದ್ಧದೊಳ್ ಕುಳ್ಳಿರಲ್ಕಾ ಪಂಕ್ತಿ ಹೂನ್ಯವಡೆಗುಂ
ಸುರರಿಂದೆ ವಿಪ್ರರ್ಕಳಿಂದಮಂ ಪೂಜ್ಯನೆಂ
ದಿರದೆ ಮತ್ಸ್ಯಪುರಾಣದುಕ್ತಿಯುಲಿಗುಂ ಪಲಂ
ಪಿರಿದುಂ ತ್ರಿಪುಂಡ್ರದುತ್ ಎನುತೆ ವಿಪ್ರವರೋ ಎನುತ್ತುಮತಿಶಯಮಾಗುತೆ ೪೫

ನೆಗಳ್ದ ರುದ್ರಾಕ್ಷೆಗಳ ಧರಿಸು[1]ತುಂ[1] ಮಾನವಂ
ಮಿಗಿಲಪ್ಪ ಪಾಪಂಗಳಂ ಮಾಡಿದೊಡಮವನ
ಮಗುಳ್ದು ತತ್ಪಾತಕಂ ಪೀಡಿಸದು ಖತಮೆಂದು ಜಾಬಾಲಶಾಖೆ ಸತತಂ
ಮೊಗಸಿ ಕೀರ್ತಿಕುಮೆಂದು ಮಾನವಪುರಾಣಮುಂ
ತಗಲದುಲಿಗುಂ ಕೂಡೆ ಬೊಬ್ಬಿ[2]ಟ್ಟುದೆಂ[2]ತೆನಲ್
ಸೊಗಸಿನಿಂ ರುದ್ರಾಕ್ಷಧಾ[3]ರಯನ್ ಎನುತ[3]ಮತ್ಯಂತ ಪರಿತೋಷದಿಂದೆ ೪೬

ಸ್ನಾನದೊಳೆ ಜಪದೊಳೆ ಸುರಾರ್ಚನೆಯೊಳಾವಗಂ
ದಾನದೊಳ್ ವೈಶ್ವದೇವದೊಳೆ ಹೋಮದೊಳೊಲ್ದು
ಸಾನುರಾಗಂಬೆರಸಿ ರುದ್ರಾಕ್ಷವಿತತಿಯಂ ಭೂಸುರಂ ಧರಿಸಲವನು
ಮಾನಿತ ಸುಕೀರ್ತಿಯುತನಪ್ಪನೆಂದತಿಮೋದ
ಮಾನಸದೆ ಕೂರ್ಮಪೌರಾಣೋಕ್ತಿ ಘೋಷಿಕುಮು
ನೂನರವದಿಂ ವೈಶ್ವದೇವೇ ಸುರಾರ್ಚನೇ ಎಂದು ತರ್ಜನಿಯ ನೆಗಪಿ ೪೭

ಪರಮರುದ್ರಾಕ್ಷೆಯಂದಮನೆಸೆವ ವೃತ್ತಿನಿಂ
ವಿರಚಿಸಿಯುದಂ ಯತ್ನದಿಂದೆ ಹ[4]ರ್ಷಂ[4]ಬಡೆದು
ಕೊರಲೊಳೊಸೆದಾವನೊರ್ವಂ ಪಾಪಕರ್ಮಿ ಧರಿಪಂ ಸಮಂತವನಾವಗಂ

---

[1] ತಂ (ಗ) [2] ಟ್ಟಡೆಂ (ಗ) [3] ರಯೇದೆನುತ್ತು (ಕ) ರಿಯೆಂದೆನುತು (ಜ)
[4] ರುಷಂ (ಗ)

ವರಮೋಕ್ಷಧಾಮದೊಳ್ ಸಂತಸದಿನಿರ್ಪನೆಂ
ದುರುತರಾಹ್ಲಾದದಿಂದಂ ಪುರಾಣೋಕ್ತಿ ಸುರು
ಚಿರಮಾಗಿ ಪೇಳ್ಗುಮೆಂತೆನೆ ಮೃಣ್ಮಯಂ ವಾಪಿ ರುದ್ರಾಕ್ಷಮೆಂದು ಸತತಂ ೪೮

ತಗಳ್ದ ಸಂಧ್ಯಾದಿಕರ್ಮಂಗಳೊಳ್ ಯಜ್ಞದೊಳ್
ಮಿಗೆ ಶ್ರಾದ್ಧಕರ್ಮಂಗಳಲ್ಲಿ ಸುರಪೂಜೆಯೊಳ್
ನೆಗಳ್ದ ಪ್ರಾಯಶ್ಚಿತ್ತ ಮುಖ್ಯಕರ್ಮಂಗಳೊಳ್ ರುದ್ರಾಕ್ಷೆಯಂ ಧರಿಪುದು
ಬಗೆಯೆ ವಿಪ್ರಂಗೆ ಯೋಗ್ಯಂ ನೋಡದೆಂದು ತೊ
ಟ್ಟಗೆ ಪುರಾಣದ ವಾಕ್ಯಮಾವಗಂ ಮಿಡದೆ ಸೊಗ
ಸೊಗೆಯೆ ಸಂಧ್ಯಾದಿಷು ಚ ಕರ್ಮಸು ಶ್ರಾದ್ಧೇ ಎನುತ್ತೆ ಘೋಷಿಸುತಿರ್ದುದು ೪೯

ಮಿನುಪ ಕೊರಳಲ್ಲಿ ರುದ್ರಾಕ್ಷೆ ರಂಜಿಸುತಿರ್ಪ
ಶುನಕನಂಚಿತ ಮರಣಮೆಯ್ದಲ್ ನೋಡೆ ತತ್ಕ್ಷಣಂ
ಘನ ರುದ್ರತೆಯನೆಯ್ದಿದತ್ತು ರುದ್ರಾಕ್ಷೆಯಂ ಭಕ್ತಿಯಿಂದಾವನೊರ್ವಂ
ಮನುಜನೇಗಂ ತನ್ನ ಕಂಠದೊಳ್ ತಳೆಯೆ ಚ
ಕ್ಕನೆ ಶಿವನ ರೂಪಾಗಿ ಮಿನುಗುತಿರ್ಪಂ ದಲೆಂ
ದನುನಯದೆ ಸೋಽಪಿ ರುದ್ರತ್ವಮಾಪ್ನೋತಿ ಎಂಬೀ ವಾಕ್ಯಮುಲಿಗುಮನಿಶಂ ೫೦

ಎಸೆವ ಶ್ರುತಿಗಳ್ ಸ್ಮೃತಿಪುರಾಣೇತಿಹಾಸಾದಿ
ವಿಸರಮೆಲ್ಲಂ ಭಸಿತ ರುದ್ರಾಕ್ಷೆಯಂ ವಿಪ್ರ
ನೊಸೆದು ಧರಿಸಲ್ವೇಳ್ಕುಮೆಂದು ಪೇಳ್ಗುಂ ಮತ್ತೆ ಭಸಿತ ರುದ್ರಾಕ್ಷೆಗಳನು
ವಿಸದಮಾಗಗ್ನಿ ಗಾಯತ್ರಿಗಳ್ ಪ್ರಣಮಮು
ಲ್ಲಸದಚ್ಯುತಾದಿಗಳ್ ಪ್ರಣಯದಿಂದಂ ಕರಂ
ಲಸಿತ ಕಾಯದೊಳೆಯ್ದೆ ಧರಿಸಿ ಮೆಱೆ[1]ದರ್ ಕೇಳಿರೆಲೆ ವಿಪ್ರರ[1]ದನುಸರ್ಮೆನು ೫೧

ಸಲೆ ಭಸಿತದಿಂ ತ್ರಿಪುಂಡ್ರಂದಾಳ್ದು ರುದ್ರಾಕ್ಷಿ
ವಲಯಮಂ ತೊಟ್ಟು ಜಡೆಮುಡಿಯಾಂತು ರಾಜಿಸುವ
ಬಲದ ಕಯ್ಯೊಳಗಂ ಕಮಂಡಲುಮನಾಂತು ಭಾಸುರಮಾದ [2]ಮುಿದಮೆಸೆಯಲು
ಮಲಹರನ ಶಿವನ ಪದಯುಗಸೇವೆಯಂ ವಹ್ನಿ
ನಲಿದು ಮಾಡುತ್ತಿರ್ಕುಮೆಂದು ಸಂಭ್ರಮದಿಂದ
ಮುಲಿಗುಮನಿಶಂ ತ್ರಿಪುಂಡ್ರೇಣ ಎನಿತುಂ ವಿರಾಜಿತಮೆನುತೆ ಶ್ರುತಿವಾಕ್ಯವು ೫೨

---

1 ದರೆಲೆ ವಿಪ್ರಂರ ಕೇಳಿ (ಜ) 2 ಮು (ಗ)

ಪರಮಗಾಯತ್ರಿ ರುದ್ರಾಕ್ಷ ಭೂಷಣಮಾಗಿ
ವರ ಜಟಾಮಂಡಲಂ ತಾಳ್ದಕ್ಷಮಾಲೆಯಂ
ಧರಿಸಿಯೇಗಂ ತ್ರಿಪುಂಡ್ರಾವಲಿ ನಿಯುಕ್ತಾಂಗನಾಗಿ ಶೋಭಿಸುತಾವಗಂ
ಹ[1]ರಿಸ[1]ದಿಂ ಋಗ್ಯಜುಸ್ಸಾಮರೂಪದೆ ಶಿವನ
ಚರಣಸೇವೆಯೊಳಿರ್ಪನೆಂದು ಸದ್ವಾಕ್ಯಮಂ
ತಿರದೆ ನುಡಿಗುಂ ಋಗ್ಯಜುಸ್ಸಾಮರೂಪೇಣ ಸೇವಿತೋಽಸ್ಮ್ಯೆಂದು ನಿರುತಂ ೫೩

ಲಸಿತ ರುದ್ರಾಕ್ಷವಲಯಂಗಳಿಂದೆ ಜಡೆಗಳಿಂ
ಭಸಿತಾವಲಿಪ್ತಸರ್ವಾಂಗಧವಳಿಮದಿಂದೆ
ನಿಸದಂ ಕಮಂಡಲು ಕಲಾನ್ವಿತದೆ ಕೃಷ್ಣಾಜಿನೋಪವೀತಾಂಗದಿಂದೆ
ಎಸೆವ ಮುತ್ತುಗದಂಡದಿಂದೆ ಶೋಭಿಸುತೆ ರಾ
ಜಿಸುವ ಶಿವನಂ ಪ್ರಣಮಮೋಲೈಸುತಿರ್ಪುದೆಂ
ದಸದಳಂ ಭಸ್ಮಾವಲಿಪ್ತಸರ್ವಾಂಗಃ ಕಮಂಡಲುವೆನಿಪ್ಪ ವಾಕ್ಯಂ ೫೪

ಜಡೆಮುಡಿಯಿನೊಪ್ಪುತುಂ ಭಸ್ಮತ್ರಿಪುಂಡ್ರದಿಂ
ಕಡು ಮೆಱೆಯುತುಂ ದಿವ್ಯರುದ್ರಾಕ್ಷವಲಯಂದಿಂ
ಬಿಡದೆಸೆಯುತುಂ ಭಸ್ಮದಿಗ್ಧಸರ್ವಾಂಗದಿಂ ಶೋಭಿಸುತ್ತನವರತಮುಂ
ಸಡಗರದೆ ಸಂಸ್ತುತಿಯಮಾನನಾಗುತ್ತಭವ
ನಡಿಗಳಂ ವಿಷ್ಣು ಪೂಜಿಸುತೆ ಸುಖಮಿರ್ಪನೆಂ
ದಡಿಗಡಿಗೆ ಶುಶುಭೇ ಎನುತ್ತೆ ಸತತಂ ವಿಷ್ಣು ಎನುತೆ ಸದ್ವಾಕ್ಯಮುಲಿಗುಂ ೫೫

ಭಾಸುರದ ಭಸ್ಮತ್ರಿಪುಂಡ್ರಮಂ ತಾಳ್ದು ನೆಱೆ
ಲೇಸೆನಿಪ ರುದ್ರಾಕ್ಷೆಯಂ ತೊಟ್ಟು ದೇವತತಿ
ಸಾಸದಿಂದಿರ್ಕುಮೆಂದಾ ತ್ರಿಪುಂಡ್ರೋದ್ಭಾಸಿ ಸರ್ವಾಂಗವೆಂಬ ವಾಕ್ಯಂ
ಘೋಸದಿಂ ನುಡಿಗುಮಂತಾವಷಡ್ದೇವತೆಯು
ಮೋಸರಿಸದೀ ಭಸ್ಮರುದ್ರಾಕ್ಷೆಗಳನೆ ಉ
ಲ್ಲಾಸದಿಂ ತಾಳ್ಗುಮೆಂದೆನುತ ರುದ್ರಾಕ್ಷಾಭಿಧಾನಮೆಂಬೀ ವಾಕ್ಯವು ೫೬

ಮಿಱುಪ ರುದ್ರಾದಿ ಪಂಚಬ್ರಹ್ಮಮಂತ್ರಮಂ
ಮೆಱೆವ [2]ರು[2]ದ್ರಾದಿ ಮಂತ್ರಂಗಳಂ ಭಾಸುರಂ
ತಱಿಸಂದ ಪಂಚಾಕ್ಷರೀಮನುವನಾವಗಂ ಜಪಿಸುತಂ ಶುಚಿಯಾಗುತೆ

---

[1] ರುಷ (ಗ) [2] ಶಾ (ಗ)

ಕಱಿಕಗೊರಲನಂ ಪಾರ್ವತೀಪತಿಯನಭವನಂ
ಪೆಱಿಕದಲೆಯನಂ ಶಂಕ[1]ರನನ[1]ಣಿಯುರಂ ಮನದೊ
ಳೆಱಕದಿಂ ತಾಳ್ದು ಪೂಜಿಸಿ ನಮಸ್ಕರಿಸುತುಂ ಮತ್ತಮಿಂತೊಪ್ಪುತಿರ್ಪಂ ೫೭

ಪೊಳೆವ ಭಸಿತೋದ್ಧೂಳಿತಾಂಗದಿಂದಂ ತೆಱಿಂ
ಬೊಳೆವ ರುದ್ರಾಕ್ಷಮಾಲಾನ್ವಿತದೆ ಶುಭದ ನಿ
ರ್ಮಳ ಭಾಸುರತ್ರಿಪುಂಡ್ರಂ ತನ್ನ ಮನದನ್ನರೆನಿಪ ಶಿಷ್ಯಾಳಿಯಿಂದಂ
ಲಳಿತ ವೇದವ್ಯಾಸಮುನಿಯೆಸೆವನೆಂದು ಮೊ
ಕ್ಕಳಮಾಗಿ ಶುಭ್ರತ್ರಿಪುಂಡ್ರಾಣಿ ಎಂಬ ನೆಱಿ
ತಿಳಿದ ವಾಕ್ಯಂ ಕರಂ ಬಿಸಮಂದದಿಂ ಸಿದ್ಧಮಾಗಿ ನುಡಿಗುಂ ಬರ್ದಿನಿಂ ೫೮

ಘನಭಸಿತ ಲಸಿತ್ಥಕಾಯರುಮಾಗುತುಂ ಬಳಿಕೆ
ಸುನಯದಿಂ ರುದ್ರಾಕ್ಷಮಾಲಾವಿಭೂಷಿತರು
ಮೆನಿಸುತುಂ ಸ್ವಾಯಂಭುಮುಖ್ಯಮನುಗಳೆ ಶೋಭಿಸುತ್ತಿರ್ಪರೆನಿಕುಮನಿಶಂ
ವಿನಯದಿಂದಂ ತ್ರಿಪುಂಡ್ರಾಲಂಕೃತಾಂಗಾಶ್ಚ
ಎನಿಪ ವಾಕ್ಯಂ ಮತ್ತೆ ಸರ್ವೇ ತಪಸ್ವಿನೋ
ಎನಿಪ ವಾಕ್ಯಂ ಪೇಳ್ಗುಮೆಂತೆಲ್ಲ ಮುನಿಗಳುಂ ಭಸ್ಮರುದ್ರಾಕ್ಷಧರರು ೫೯

ಪರಮೇಷ್ಠಿ ವಿಷ್ಣುದೇವೇಂದ್ರಪ್ರವೇಕ ನಿ
ರ್ಜರ ಮನುಮುನೀಶ್ವರರ್ ಮೊದಲಾಗಿಯುಂ ವೇದ
ಪುರುಷರುಂ ಪ್ರಣವಮುಂ ವೀತಿಹೋತ್ರಂ ವಷಡ್ದೇವತೆಗಳುಂ ಸಂತತಂ
ಹ[2]ರಿಸ[2]ದಿಂ ಭೂತಿರುದ್ರಾಕ್ಷಗಳ ಧರಿಸರೆಂ
ದಿರದೆ ಶ್ರುತಿಗಳ್ ಸ್ಮೃತಿ ಪುರಾಣೇತಿಹಾಸಾದಿ
ಮೊರೆವುತಿರೆ ಭೂಸುರರ್ ಭಾಸುರಮೆನಿಪ್ಪ ಭೂತಿಯ ಧರಿಸವೇಳ್ಕುಮನಿಶಂ ೬೦

ಸದಮಲಪ್ರಚುರವಿಶ್ರುತ ಪರಮಭಕ್ತಗಣ
ಪದಸರೋರುಹಸಾಂದ್ರ ಮಕರಂದಪಾನ ಸ
ಮ್ಮುದಿತ ಚಂಚಚ್ಚಂಚರೀಕನನವರತ ಪಂಚಾಕ್ಷರೀಪ್ರಸಿತಹೃದಯಂ
ವಿದಿತ ಮಂಜುಲನೀಲಕಂಠಾಹ್ವಯಂ ಮನೋ
ಮುದದೆ ಪೇಳ್ದುರುತರಾರಾಧ್ಯಚಾರಿತ್ರದೊಳ
ಗಿದು ಭಸ್ಮರುದ್ರಾಕ್ಷಗಳ ಮಹತ್ವದ ಸಂಧಿ ಶೋಭಿಕುಂ [3]ತ[3]ತ್ಸಭೆಯೊಳು ೬೧

---

1 ರಂಗ (ಕ) 2 ರುಷ (ಗ) 3 ಸ (ಕಜ)

# ಮೂರನೆಯ ಸಂಧಿ

## ಪಾದತೀರ್ಥದ ಶಿವಪೂಜಾವಿಧಾನದ ಮಹತ್ವಂ

ಸೂಚನೆ: ಹರನ ಪಾದೋದಕಮನೀಶ್ವರನ ಪೂಜೆಯುಂ
ಸ್ಫುರಿತ ಕುಲಜಂಗೆ ವಿಪ್ರಂಗೆ ಯೋಗ್ಯಮದೆಂದು
ಗುರುಪಂಡಿತಾರಾಧ್ಯರೊರೆದರಾ ವಿಪ್ರರ್ಗದಂ ಕೇಳ ಸೂರಸಚಿವ

ಶ್ರೀಮದನುಪಮಭೇಷ ನಿರ್ಮಲಾಂಶುಪ್ರಕರ
ಚಾಮರೋಲ್ಲಸಿತ ಮಕುಟಂಗೆ ನಾಗೇನ ಲಲಿ
ತಾಮಲಾವಾಪಕಂಗಸುರಾರಿನೇತ್ರಪೂಜಿತಪಾದಸರಸಿಜಂಗೆ
ಭೀಮ ಯಮುನಾಭ್ರಾತೃ ಗೋತ್ರೋರ್ಧ್ವಗೋತ್ರಕು
ದ್ದಾಮ ಶತಕೋಟಿಸನ್ನಿಭಲಲಾಟಾಂಬಕಂ
ಗಾಮೋದದಿಂ ವಂದಿಪೆಂ ನೀಲಕಂಠಂಗೆ ಗಿರಿಜಾಮನೋಹರಂಗೆ ೧

ಪಿರಿದಿಷ್ಟಫಲವೀವ ನಿರ್ವಿಘ್ನಮಪ್ಪ ಬಂ
ಧುರ ಷಡ್ಗುಣೈಶ್ವರ್ಯಸಂಪನ್ನನಪ್ಪ ಸುರು
ಚಿರ ಸನಾಥನೆನಿಪ್ಪ ಪರಿಪೂರ್ಣನಪ್ಪ ನಿರ್ಭಿನ್ನನೆನಿಸುವ ಶಿವನನು
ಉರುತರ ಶ್ರೀರುದ್ರಮಂತ್ರಗಳಿಂದೆಯ್ದೆ
ಭರದಿನಭಿಷೇಕಮಂಗೆಯ್ದು ತತ್ತೀರ್ಥಮಂ
ಧರಿಪುದೆಂದುಱಿ ಋತಂ ಸತ್ಯಂ ಪರಬ್ರಹ್ಮ ಎಂಬ ಮಂತ್ರಂ ಪೇಳ್ದುದು ೨

ನೆಗಳ್ದ ಶಿವಚರಣಮಂ ಪ್ರಕ್ಷಾಳನಂಗೆಯ್ದು
ಸೊಗಸಿನಿಂ ಶಂಖದೊಳ್ ತೀವಿ ತತ್ತೀರ್ಥಮಂ
ಮಿಗೆ ಷೋಡಶೋಪಚಾರಂಗೆಯ್ದುದರ್ಕೆ ಚರುಗೊಟ್ಟು ಬಳಿಕಂ ಪ್ರೀತಿಯಿಂ
ಮೊಗಸಿ ತತ್ಪಾದಾಂಬುವಂ ಪೀರ್ವುದೆಂದು ಸಲೆ
ಭಗವತಃ ಪಾದೌ ಎನುತ್ತೆ ಶಂಖಂ ಎನುತೆ
ಪೊಗಳ್ದ ಜಾಬಾಲಶಾಖಾವಚನ[1]ಮೋ ಮಾನವೆಂ[1]ದನಾ ಪಂಡಿ[2]ತೇಂದ್ರಂ[3] ೩

---

[1] ಮಂ ಕೇಳಿಮೆಂ (ಜ) [2] ತೇಶ್ವರಂ (ಕ) ತೇಶಂ (ಜ)

ಮತ್ತಂ ಯಜುರ್ವೇದ ಸೂತ್ರೋಕ್ತಿಯುಲಿಗುಮಾ
ಯತ್ತದಿಂ ಭಗವಂತನಾದ ನಿರ್ಮಳನಾದ
ಚಿತ್ತಜಾರಿಯ ಪದಪ್ರಕ್ಷಾಳನಂಗೆಯ್ದು ತತ್ತೀರ್ಥಕಳ್ತಿವಟ್ಟ
ಉತ್ತಮ ಶ್ರೀರುದ್ರಮಂತ್ರಂಗಳಿಂ ಧರಿಪು
ದುತ್ತಮೋತ್ತಮಪುಣ್ಯವೆಂದು ಮನದಂದು ಬೊ
ಟ್ಟಿತ್ತಿ ಭಗವಂತ ರುದ್ರಂ ಎಂಬ ಮಂತ್ರದಿಂದಾವಗಂ ಬೊಬ್ಬಿಡುತ್ತಂ ೪

ಭವ[1]ಪಾಶ[1]ಜಾಲಮಂ ದೆಸೆದೆಸೆಗೆ ಪಱದಿಡುವ
ತವೆ ರಾಜಿಸುವ ಮಹಾದೇವಪಾದೋದಕಮ
ನವಿರತಂ ಪ್ರಮಥನಾಯಕರೊಸೆದು ಪಾಣಿತಳಶುಕ್ತಿಯಿಂ ತೆಗೆದುಕೊಂಡು
ಸವಿನಯದೆ ಮನವಾರೆಯಿಂಟಿ ರಾಜಿಸುತಿರ್ಪ
ರವರೆಂದು ಶಿವಪುರಾಣೋಕ್ತಿ ಸಂತಸಗೂಡಿ
ತವಕದಿಂದುಲಿವುತಿರ್ಕುಂ ಪಪುಃ ಕಾಮಂ ಗಣೇಶ್ವರಾ ಎಂದು ನಿರುತಂ ೫

ಹರನ ಪಾದಾಂಬುವಂ ಪಾಣಿತಳಶುಕ್ತಿಯಿಂ
ದಿರದೀಂಟಿ ಬಳಿಕಶುದ್ಧತೆಯೆಂಬ ಶಂಕೆಯಿಂ
ಸಿರಿದಾಚಮನವನಾವಂ ಮೋಹದಿಂ ಮಾಳ್ಪನವನೆ ನೆಱಿ ಭಾವಿಸುವೊಡೆ
ಕರಮೆ ಬೊಮ್ಮೇತಿಕಾಱಂ ನಿಸದಮೆಂದು ಬಂ
ಧುರ ಶಿವಪುರಾಣೋಕ್ತಿ ಸಂತತಂ ಸಾಱುಗುಂ
ಭರದೆ ಪಶ್ಚಾದಶುಚಿಶಂಕಯಾ ಎಂಬ ಸಲ್ಲಲಿತವಚನಂಗಳಿಂದಂ ೬

ಸದಮಲ ಕುರುಕ್ಷೇತ್ರ ನೈಮಿಷಾರಣ್ಯಾದಿ
ವಿದಿತ ಭೂಭಾಗದೊಳಗಿರ್ಪ ನಿರ್ಮಳ ನದೀ
ನದ ಮುಖ್ಯಪುಣ್ಯತೀರ್ಥಂಗಳೆಲ್ಲಂ ಶಿವನ ಪಾದತೀರ್ಥದ ಸದೃಶವಂ
ಪಡೆದೆಯ್ದಲಱಯ[2]ವೆಂದೇ[2]ಗಳುಂ ಸಾಱಗುಂ
ಮುದದೆ ಬ್ರಹ್ಮಾಂಡವೆಂಬುದು ಪುರಾಣಂ ಕರಂ
ಪುದಿದಿರ್ದ ಸರ್ವತೀರ್ಥೋದ[3]ಕಾನ್ಯೇತತ್ಕಲಾ ಎಂಬ[3] ಸದ್ವಾಕ್ಯದಿಂ ೭

---

[1] ಜಾತ (ಕಜ) [2] ವೇದಂ (ಗ) [3] ಕಸ್ಯೈತೆಕಲಾನೆಂಬ (ಕಗ)

ಹರನ ಪಾದೋದಕಂ ತತ್‌ಕ್ಷಣಂ ಪಾಪಂಗ
ಳಿರವನಳಿಗುಂ ಸರ್ವರೋಗನಿಕರಂಗಳಂ
ತುರಿತದಿಂ ಕಿಡಿಸುಗುಮನಂತ ದುರ್ವ್ಯಾಪಾರಸಮುದಯಂಗಳನಳರಿಕೆಯಿಂ
ಪಿರಿದು ಕೊಂಡಾತನಂ ಪೂತನಂ ಮಾಡುಗುಂ
ನಿರುತಮಿದುಯೆಂದು ಸದ್ವಾಕ್ಯಮುಲಿತ ಘೋಷಿಸುವ
ಭರದಿಂದೆ ತೇಽಪಿ ಪೂತಾ ಭವಂತ್ಯಾಶು ಸದ್ಯಃ ಎಂದು ಮನದೆಱಕದಿಂ ೮

ಶಿರದಲ್ಲಿ ಶಿವನ ಪಾದಾಂಬುವಂ ಭಕ್ತಿಯಿಂ
ಹ[1]ರಿಸ[1]ದಿಂದಾವನೊರ್ವಂ ಧರಿಪನವನೆ ಸೌಂ
ದರ ಸರ್ವಮಂಗಲಕೆ ಮಾಂಗಲ್ಯನತಿ ಸರ್ವಪಾವನಕೆ ಪಾವನ ಕರಂ
ಪಿರಿದವಂಗೆಲ್ಲಾ ಸುತೀರ್ಥ ಸತ್ಫಲನಿಕರ
ಮಿರದೆಯ್ದುಗುಂ ಸತ್ಯಮೆಂದು ಮನದಂದು ಬಂ
ಧುರವಾಕ್ಯಮುಲಿಗುಮನಿಶಂ ಪ್ರಾಪ್ಯತೇ ಮೂರ್ಧ್ನಿ ಧಾರಣಾದೆಂದು ರಯದಿಂ ೯

ಆವನೊರ್ವಂ ಶಿವನ ಚರಣಪಾನೀಯಮಂ
ಸಾವಧಾನದೆ ಪಾನವಂ ಮಾಳ್ಪನವನೆ ದಲ್
ಪಾವನಾನ್ವಯಜನಂತವನೇಕವಿಂಶತಿಕುಲಂ ಮುಕ್ತಿಸದ್ಧಾಮಮಂ
ಶೀವಿಕೊಂಡಿರ್ಕುವೆಂದಾವಗಂ ಮನಮುಣ್ಮೆ
ಭೂವಿನುತ ಜಾಬಾಲಶಾಖೆಯುಲಿಗುಂ ಮತ್ತ
ಮೋವೋವೊ ನಾಡೆ ದಶಪೂರ್ವಾನ್ ದಶಾಪರಾನೆಂಬ ಸಲ್ಲಾಪದಿಂದೆ ೧೦

ಶಿವನ ಪಾದಾಂಬುವಂ ಧರಿಸಿರ್ದ ಮಾನವಂ
ತವೆ ಸೂತಕ ಪ್ರೇತಕಾದ್ಯಶೌಚಂಗಳೊಳ
ಗವಿರತಂ ವರ್ತಿಸುತ್ತಿರ್ದೊಡಂ ನೋಡವನೆ ಅಣಿಯರಂ ಶುದ್ಧನೆಂದು
ತವಕದಿಂದಂ ಘೋಷಿಸುತ್ತಿರ್ಪ ಸದ್ವಾಕ್ಯ
ನಿವಹಂಗಳಂ ಕೇಳ[2]ರು[2]ಸುರ್ದಪೆಂ ವಿಪ್ರರಿರ
ಸವಿನಯದೆ ದೂಷಿತಾಶ್ಚಾಪಿ ಪಾದಾಂಬು ಬೀಭ್ರಚ್ಛುದ್ಧಿ ಎಂದಾವಗಂ ೧೧

ಹರ[3]ನ ಪಾದಾಂಬುವಂ[3] ಧರಿಸುವದಱಿಂದೆ ದು
ರ್ಧರ ಸರ್ವರೋಗದಟ್ಟುಳಿ ದುಷ್ಟತರ ಶನೀ
ಶ್ವರ ಮುಖ್ಯದುರ್ಗ್ರಹೋತ್ಪಾತಂಗಳೆಲ್ಲಮುಳಿಗುಂ ಸ್ವೇಚ್ಛೆ ಕೈಗೂಡುಗುಂ

---

1 ರುಷ (ಗ) 2 ದು (ಕ) ಮು (ಜ) 3 ಪಾದತೀರ್ಥಮಂ (ಕ)

ನಿರುತವೆಂ[1]ಡೋದು[1]ಗುಂ ಸರ್ವಕಾಲದೊಳೊಸೆದು
ವರ ಪುರಾಣೋಕ್ತಿಯೆಂತೆಂಬೊಡದನುಸುರ್ದಪೆಂ
ಭರದಿಂದೆ ದುಷ್ಟಗ್ರಹೋಪಶಮನಂ ಎಂದು ಮನವಾರೆ ಸಂತಸದೊಳು ೧೨

ಇಂತನಂತಶ್ರುತಿಸ್ಮೃತಿಪುರಾಣೇತಿಹಾ
ಸಂ ತಗುಳ್ದು ಶಿವನ ಪಾದೋದಕಂ ವಿಪ್ರಂಗೆ
ಸಂತತಂ ಯೋಗ್ಯವೆಂದಳ್ಕರ್ತು ಸಾಱುತಿರಲೆಂತಯೋಗ್ಯಂ ವಿಪ್ರನು
ಕಂತುಹರಪಾದತೀರ್ಥಕ್ಕೆಂದು ನುಡಿವುತಂ
ಮುಂತೆ ಲಿಂಗಾರ್ಚನಾವಿಧಿಯನಾ ವಿಪ್ರರ್ಗೆ
ಸಂತಸದೆ ಪೇಳಿದರು ಪಂಡಿತೇಂದ್ರಂ ಕೇಳ ಸೂರಸಚಿವನೆ ಮುದದೊಳು ೧೩

ಭರದೆ ದಾನಾದಿರ್ಚನಾದ್ಧಾರಣಾದೆಂದು
ನಿರುತದಿಂ ಶ್ರೌತಮುಂ ಸ್ಮಾರ್ತಮುಂ ಪೇಳುತಿರೆ
ಹರಿವಿಧಿ ಪ್ರಮುಖಸುರರುಂ ಮತ್ತೆ ಮುನಿಗಳುಂ ಮನುಗಳುಂ ಶಿವನನೊಲ್ದು
ಪಿರಿದು ಪೂಜಿಸಿ ಘೋರಸಂಸಾರಗಂಧಸಿಂ
ಧುರಕೆ ಹರ್ಯಕ್ಷರಾದರ್ ದೇವತಾವಿತತಿ
ಹರಿಸ[2]ದಿಂದಂ ಶಿವನ ಪೂಜಿಸಿದುದಂ ಕೇಳಿರೆಲೆ ವಿಪ್ರರಿರ ಮುದದೊಳು ೧೪

ಎಲೆ ರುದ್ರ ನಿನ್ನ ಶಿವಲಿಂಗಮೂರ್ತಿಯನಮರ
ಕುಲವೆಲ್ಲಮುಂ ತಮ್ಮ ಕರದಿಂದೆ ಪರಿಸನವು
ನೊಲವಿನಿಂ ಮಾಡಿ ಪೂಜಿಸಿ ನಿಜಶ್ರೀಯೊಳಂ ಸುಖಮಿರ್ಪರೆಂದು ರಯದಿಂ
ಸುಲಲಿತ ಯಜುರ್ವೇದಮಾವಗಂ ಮನಮುಣ್ಮೆ
ನಲಿಯುತುದ್ಘೋಷದೊಡವೆರಸಿಯುಲಿಯುತ್ತಿರ್ಕು
ಮುಲಸದೆಯೆ ರುದ್ರ ಯತ್ತೇ ಜನಿಮ ಚಾರು ಚಿತ್ರಂ ಪದಂ ಎಂಬ ನುಡಿಯಿಂ ೧೫

ಎಸೆವಿಂದ್ರನೀಲಮಯಲಿಂಗಮಂ ವಿಷ್ಣು ಸಂ
ತಸದಿಂದೆ ಪೂಜೆಯನೊಡರ್ಚಿಯೆಲ್ಲಾ ಗಳುಂ
ಬಿಸವಂದ ಮಾಳ್ಪ ಭಾಸುರ ಸನಾತನಮಪ್ಪ ಪೂಜ್ಯತ್ವಮಾಗೊಪ್ಪುವ
ಲಸಿತ ವಿಷ್ಣುತ್ವಮಂ ಪಡೆದು ಸುಖಮಿರ್ಪನೆಂ
ದಸದಳಂ ಶಿವಧರ್ಮಶಾಸ್ತ್ರಮುಲಿಗುಂ ನೋಡೆ
ನಿಸದಮಿದು ಸಾದ್ಭುತೈಕಂ ಸನಾತನವೆಂಬ ವಾಕ್ಯದಿಂದಂ ಸಂತತಂ ೧೬

---

1 ದೊಡಗು (ಕ) ದು ಮೊರೆ (ಜ) 2 ರುಷ (ಗ)

[1]ಹರನ ಯಮ[1]ಹರನ ಮನ್ಮಥಹರನ ಶಿವನ ಶಂ
ಕರನ ಲೇಸಾಗಿ ಪೂಜಿಸುವೆವಾವೆಂದು ಬಂ
ಧುರ ಯಜುರ್ವೇದತತಿ ಸುಯಜಾ ಯಜಾಮಃ ಎನುತ್ತೆ ನುಡಿಗುಂ ಮುದದೊಳು
ಪರಮತ್ರಿಯಂಬಕಂ ಪುಷ್ಟಿವರ್ಧನನ ನಿ
[2]ಟ್ಟುರ ಮಿಳ್ತುವಂ[2] ಗೆಲಲ್ ಸೂಚಿಸುವೆ ನಾನೆಂದು
ನಿರುತದೆ ಯಜಾಮಹೇ ಎಂದು ಋಗ್ವೇದಮುಲಿಗುಂ ಸಿಜಾನಂದಮೊಗೆಯೆ ೧೭

ಧರಣಿಯೊಳಗಾಂ ಬಾರದಿರ್ದ ಯೋನಿಗಳಿಲ್ಲ
ಹ[3]ರಿಸ[3]ದಿಂದುಣ್ಣದಾಹಾರಮೊಂದಿನಿತಿಲ್ಲ
ಕರವೆ ಪಾನಂಮಾಡದಿರ್ದುರೋಜಾನೀಕಮಿಲ್ಲೆಂದು ಗರ್ಭಾರ್ಭಕಂ
ನಿರುತಮೆತ್ತಾನುಮೀ ಯೋನಿಯಿಂ ಪೊಱಮ[4]ಟ್ಟ
ಡಿರದ[4] ಶಿವನಂ ಪೂಜೆ[5]ಗೆಯ್ಯಿದಿನ್ನೆ ಬಾರೆ[5]ನೆಂ
ದಿರದೆ ನುಡಿಗುಂ ಎಂದು ಶ್ರುತಿಯೊಸೆದು ಪೀತಾಶ್ಚ ವಿವಿಧಾಸ್ಸ್ತನಾ ಎಂಬುದು ೧೮

ನಾಡೆ ಕಲ್ಪೋಕ್ತಾಗ್ನಿಯಿಂದೊಗೆದ ಭೂತಿಯಂ
ಕೂಡೆ ಕೈಕೊಂಡು ಮೆಯ್ಯೊಳ್ ತಳೆದುಕೊಂಡಿನ್ನೆ
ರೂಢಿಸಿದ ಶಿವನ ಪೂಜಿಸಿ ಗರ್ಭಮಂ ಪುಗುವ ಬೇವಸಂ ಮಾಳ್ಪೆನೆಂದು
ನೋಡೆ ಗರ್ಭಗತಾರ್ಭಕಂ ನೆನೆಗುಮೆಂದಿಂತು
ಗಾಡಿ ಮಿಗೆ ವಿರಜಾನಲಜಮೆಂದು ಸಂತತಂ
ಜೋಡಿಸಿದ ಸೂತಸಂಹಿತೆ ತರ್ಜನಿಯನೆತ್ತಿ ಘೋಷಿಕುಂ ಸಮ್ಮುದದೊಳು ೧೯

ತವೆ ಗರ್ಭಶಿಶುಗಳಿಂತೊಗೆದು ಶಿವನಂ ಭಜಿಸಿ
ತವಿಸುವೆವು ಮುಂ ಪುಟ್ಟುವುದನೆಂದು ನೆನೆಗುಮೆನೆ
ಸವಿನಯದೆ ಲಿಂಗಪೂಜೆಯ ಮಾಳ್ಪ ಮನುಜಂಗೆ ಪುಟ್ಟುಗಿಡುವುದು ನಿಕ್ಕುವಂ
ತವಕದೆ ನ ವಿದ್ಯತೇ ಎಂಬ ವಾಕ್ಯಂಗಳಿಂ
ದವೆ ಪುರಾಣಂಗಳುಂ ಶಿವಧರ್ಮಯುಕ್ತಿಗಳು
ಮವಿರತಂ ನುಡಿಗುಮೆಂದೊಡೆ ಶಿವನ ಪೂಜೆಯಂ ರಚಿಸಿದವರೊಳರೆ ಸತತಂ ೨೦

ಕುಸುಮಕೋದಂಡಹರನೆನಿಪ ಶಿವ ಶಿರದಲ್ಲಿ
ಕುಸುಮಮೊಂದಂ ಭಕ್ತಿಯಿಂದಾವನೊರ್ವನುಂ
ನಿಸದಮಿರಿಸುವನವಂ ಮಾತೃಜಠರಕಠೋರಪಿಠರಮಂ ಪುಗನಾವಗಂ

---

1 ಪರಸಮಯ (ಜ) 2 ಷ್ಟುರ ಮೃತ್ಯುವಂ (ಜ) 3 ರುಷ (ಗ) 4 ಟ್ಟೊ।ಡರರೆ (ಗ)
5 ಗೆಯ್ಯುದಿರಲಾರೆ (ಜ)

ಮಿಸುಪ ಸುಮನೋರಾಸಿಯಿಂದೆ ಮನಮುಣ್ಮಿ ರಾ
ಜಿಸುವ ಶಂಕರನ ಪೂಜಿ[1]ಸಿದ[1] ಮನುಜಂಗೆ ಮ
ತ್ತೆಸೆವ ಫಲದಂದಮಂ ಬಣ್ಣಿಸುವನಾವನದನಾ ಶಿವನೆ ಅಱಿವನನಿಶಂ ೨೧

ಮುರಹರಂ ಪೂಜೆಗೆಯ್ದವಸರದೊಳೊಂದು ಪು
ಷ್ಕರವಿಲ್ಲದಿರೆ ನೋಡಿ ತನ್ನ ಬೆಳತಿಗೆಗಣ್ಣ
ನಿರದೆ ಕಿೞ್ತುಭವನಂಘ್ರಿಗೆ ಪೂಜೆಗೆಯ್ದಿಱಿಗಿ ಮಱಳೆ ಶಿವನಿಂದೆ ಮಿಱುಪ
ಸರಸಿಜಾಕಾರದಲರ್ಗಣ್ಣ ಪಡೆದಾವಗಂ
ವರ ಪುಂಡರೀಕಾಕ್ಷನೆನಿಸಿ ವಿಷ್ಣುತ್ವಮಂ
ಪುರಹರಂ ದಯೆಗೆಯ್ಯೆ ಪಡೆದು ಸುಖಮಿರ್ಪನಾ ವಿಷ್ಣು ಸಮ್ಮೋ[2]ದ[2]ದಿಂದೆ ೨೨

ಸಂತತಂ ದ್ರೋಣಪುಷ್ಪಂಗಳಿಂ ಬ್ರಹ್ಮನ
ತ್ಯಂತ ಸದ್ಭಕ್ತಿಯಿಂ ಬ್ರಹ್ಮೇಶ್ವರನ ಪಾದ
ಮಂ ತಾನೆ ಪೂಜೆಯಂ ರಚಿಸಿ ಮತ್ತಾ ಬ್ರಹ್ಮಪದವಿಯಂ ಸಲೆ ಪಡೆದನು
ಉಂತೆ ಕೈಯಿಂ ಜಗುಳ್ದು ಬಿಳ್ದೊಂದುಃಪುಷ್ಪಮಂ
ಕಂತುಹರ ಶೂಲಿಗೆಂದಾ ಕುಸುಮಫಲದಿಂದೆ
ಮುಂತೆ ನೋಡಾ ಶ್ವೇತನಿಂದ್ರಪದವಿಯನಾಂತನಿದು ನಿಕ್ಕುಮಂ ಭಾವಿಸೆ ೨೩

ವಿನುತಾರ್ಕಲೋಚನನ[3]ನರ್ಕ[3]ಪುಷ್ಪಂಗಳಿಂ
ಮಿನುಗುವರ್ಕಂ ಪೂಜೆಗೆಯ್ದರ್ಕಪದವಿಯಂ
ಸುನಯದಿಂದಂ ಪಡೆದು ರಾಜಿಸುತ್ತಿರ್ಪನತ್ಯಂತ ತೇಜೋರೂಪದಿಂ
ಘನತರಾಕ್ಷತೆಗಳಿಂ ಖುಕ್ಷೇಶನಾವಗಂ
ಕನದ[4]ಕ್ಷಯನ[4] ಯಕ್ಷಪತಿಸಖನ ಪೂಜೆಗೆ
ಯ್ದನ[5]ಸಮಂ ವಿ[5]ರಾಜಿಸುವ ಖುಕ್ಷೇಶ್ವರತ್ವಮಂ ಪಡೆದು ಸುಖದಿಂದಿರ್ಪನು ೨೪

ಸುರುಚಿರ ಶ್ರೀವೃಕ್ಷಪತ್ರದಿಂದೊಲ್ದು ಶಂ
ಕರನ ಮೆಲ್ಲಡಿಗಳಂ ಶ್ರೀವಧುವಹರ್ನಿಶಂ
ಪಿರಿದು ಪೂಜಿಸಿ [6]ಸುಂ[6]ದರ ಸ್ತ್ರೀತ್ವಮಂ ಪಡೆದು ಸುಖದೆ ರಾಜಿಸುತಿರ್ಪಳು
ನಿರುತಮಿನ್ನೇಕೆ ಪಲವಾತುಗಳ್ ಮಖವಿತತಿ
ವರದಾನತತಿ ಧರ್ಮಸಂದೋಹಮೆಂಬಿವ್ಕಂ
ಹರನ ಪೂಜಿಸಿದೊಂದು ಕುಸುಮಫಲದಿರವಿಂಗೆ ಸಮವಾಗವೆಯ್ದೆ ನೋಡೆ ೨೫

1 ಸುವ (ಗ) 2 ಹ (ಗ) 3 ಕರ್ಣ (ಕಜ) 4 ಯಕ್ಷನ (ಗ) 5 ಸುಶಾ (ಕಜ)
6 ಸೌಂ (ಗ)

ಸಸಿಗಳಿಂ ತೀವಿದ ವಸುಂಧರೆಯನಂತೆ ರಾ
ಜಿಸುವ ಹೇಮಾದ್ರಿನಿಭಧನವಮನುನ್ನತಮಾಗಿ
ವಿಸುಪ ಗೋದಾನ ಕೋಟಿಯನಣಿಯರಂ ಕೂಡೆ ವಿಧ್ಯುಕ್ತಮಾಗಿ ಸತತಂ
ಒಸೆದಿತ್ತ ಫಲವಿತತಿ ಶಿವನ ಶಿರದಲ್ಲಿ ಸಂ
ತಸದಿನಿಕ್ಕಿದದೊಂದು ಕುಸುಮ ಸಮವಿಲ್ಲೆಂದು
ಮಸಕದಿಂದಂ ಗವಾಂಕೋಟಿಪ್ರದಾನೇನ ಎಂಬ ವಾಕ್ಯಂ ಘೋಷಿಕುಂ ೨೬

ಸದಮಲಪ್ರಚುರವಿಶ್ರುತ ಪರಮಭಕ್ತಗಣ
ಪದಸರೋರುಹಸಾಂದ್ರ ಮಕರಂದಪಾನ ಸ
ಮ್ಮುದಿತ ಚಂಚಚ್ಚಂಚರೀಕನನವರತ ಪಂಚಾಕ್ಷರೀಪ್ರಸಿತಹೃದಯಂ
ವಿದಿತಮಂಜುಲ ನೀಲಕಂಠಾಹ್ವಯಂ ಮನೋ
ಮುದದೆ ಪೇಳ್ದರುತರಾರಾಧ್ಯಚಾರಿತ್ರದೊಳ
ಗಿದು ಪಾದತೀರ್ಥ ಶಿವಪೂಜಾವಿಧಾನಮಾಹಾತ್ಮ್ಯಮೆನಿಕುಂ ಭಾವಿಸೆ ೨೭

# ನಾಲ್ಕನೆಯ ಸಂಧಿ

## *ಶಿವಲಿಂಗಧಾರಣ ಮಾಹಾತ್ಮ್ಯ

ಸೂಚನೆ: ಕೇಳೊಸೆದು ಸೂರಸಚಿವೇಂದ್ರ ಪೇಳ್ದಪೆವಿನ್ನೆ
ಶೂಲಿಸನ್ನಿಭ ಪಂಡಿತಾರಾಧ್ಯರಾ ವಿಪ್ರ
ಜಾಲಕ್ಕೆ ಶಿವಲಿಂಗಧಾರಣಮನೊರೆದುದಂ ಶರಣತತಿ ಮೆಚ್ಚುವಂತೆ

ಯಾಮಿನೀಪರಿವೃಢಾಕಾಶಮಣಿ ರಮಣೀಯ
ಧೂಮಧ್ವಜಾನಿಲಾಂಬರ ಸಲಿಲ ಯಜಮಾನ
ಭೂಮಿಗಳುಮೆಂಬಷ್ಟತನುಗಳಿಂ ಶೋಭಿಸುತೆ ನಿಷ್ಕಾಯನೆನಿಸಿ ಮೆಱೆವ
ವಾಮದೇವಂ ಮುರಭಿದಂಬಕಾರ್ಚಿತಪಾದ
ತಾಮರಸನಖಿಲವೇದಾಗಮಃಶಿರೋಮಣಿ ಮ
ಹಾಮಹಿಮನೀಶ್ವರಂ ನೀಲಕಂಠಂ ಪೊರೆಗೆ ಮೂಜಗಮನೋಜೆಯಿಂದೆ ೧

ಕರತಳದೊಳಿಸೆವ ಲಿಂಗಂ ಪಾ[1]ರಿಸಾ[1]ನಂಗೆಯ್ದೆ
ಪರಮನಿಜಕರಮೆ ಭಗವತ್ತರಂ ಭಗವಂತ
ನುರು ವಿಶ್ವಭೇಷಜಂ ಮಾತೃಪಿತೃಸಂಜೀವನಂ ಎಂದು ಋಗ್ವೇದವು
ಪಿರಿದಯಂ ಮೇ ವಿಶ್ವಭೇಷಜಂ ಎಂದು ಮು
ತ್ತಿರದಯಂ ಮಾತಾ ಅಯಂ ಪಿತಾ ಎಂದು ಸಲೆ
ತುರಿತ[2]ದಿಂದಂ ವಾತುಲಾಗಮಮ[2]ದಾವಗಂ ರೂಢಿಮಿಗೆ ಬೊಬ್ಬಿಡುವುದು ೨

ಉರು ದುಃಖಹರನೆನಿಪ ಶಿವನೆ ನಿ[3]ಮ್ಮೂ[3]ಯ ದಿವ್ಯ
ಶರಿರಮದು ಪಾಪರಹಿತರೊಳೆ ಶೋಭಿಸುತುಮಿ
ರ್ಪಿರವುಳ್ಳುದೆಂದುಮೆಲ್ಲಾ ಶ್ರುತಿಗಳುಂ ಪುರಾಣಾದಿಗಳು ಮೊರೆವವೆಂದು
ಸುರುಚಿರ ಶ್ರೀರುದ್ರಮಣಿಯರಂ ಘೋಷಿಕುಂ
ಪಿರಿದು ಯಾತೇ ರುದ್ರ ಎಂದುಱೆ ಶಿವಾ ಎಂದು
ನಿರುತದೆ ತನೂರಘೋರಾಪಾಪ[4]ಕಾ[4]ಶಿನೀ ಎಂದೊ[5]ಳರ್ದು[5] ಮನಮಲರುತೆ ೩

---

[1] ರುಷ (ಗ) [2] ದಿಂ ಜೀವಾತುರಾರಮದೆ (ಕಗ) [3] ನ್ನ (ಗ) [4] ನಾ (ಜ)
[5] ಣರ್ದು (ಗ) ರೆದು (ಜ) * (ಕಜ) ಪ್ರತಿಗಳಲ್ಲಿಲ್ಲ.

ಎಲೆ ಶಿವನೆ ನಿನ್ನ ವಪು ಪಾಪವಿರಹಿತರಲ್ಲಿ
ಸಲೆ ಚೆಲ್ವುವಡೆದಿರ್ಕುಮಱನವ[1]ರ್ಗಳೆ ಶಿಷ್ಟ[1]
ರಲಘುಪ್ರಸಿದ್ಧರಪಗತಪಾಪರವರಿಂದಮನ್ಯರ್[2]ವಿ[2]ಶಿಷ್ಟರನಿಶಂ
ಕಲುಮಸರವರ್ ನೋಡಲೆಂದು ಮನ ಪೊಡರುತುಂ
ನಲಿದುಱೆ ಯಮಸ್ತ್ರೋತ್ರ[3]ಮಿಂ[3]ತೊಣರ್ದು ಘೋಷಿಕುಂ
ಲಲಿತವಚದಿಂದಮನ್ಯಾನಶಿಷ್ಟಾನೆನುತುಮಿತಿ ನಿಶ್ಚ[4]ಯೋ[4] ಎನುತ್ತುಂ ೪

ಮಿನುಗುವೀಮರ್ಥದೊಳೆ ರುದ್ರಸೂಕ್ತ್ಯರ್ಥಮುಂ
ಮನವೊಸೆದಘೋರಾಂಗ ಯೋ ರುದ್ರ ಎಂದೆನುತೆ
ಕೊನರ್ದು ನುಡಿಗುಂ ವಲಂ ನಲಿಯುತುಂ ಮತ್ತದಱೀಶಮೂರ್ತಿಯನಾವಗಂ
ಅನುನಯದಿನಂಗದೊಳ್ ತಾಳ್ದವಂ ಸಂಸಾರ
ವನ[5]ಧಿಯಂ[5] ಪೂಣ್ದವಂ [6]ಪಾಪ[6]ವಂಶಾನೀಕ
ವನೆ ಸೀಳ್ದವಂ ನಾಡೆ ಮುಱುವುಟ್ಟ ತೂಳ್ದವಂ ಶಿವನೊಡನೆ ನೆಱೆ ಬಾಳ್ದವಂ ೫

ಇನ್ನೆಯುಂ ಕೇಳಿರೆಲೆ ವಿಪ್ರರಿರ ಮನದಂದು
ಮುನ್ನೆ ನಿಷ್ಪಾಪರೆನಿಸುವ ಹರಿ ವಿರಿಂಚೇಂದ್ರ
ರುನ್ನತಾಮರನಿಕರಮೆಲ್ಲರುಂ ಮನುಮುನಿಗಳುಂ ಗರುಡಸಂದೋಹಮುಂ
ಪನ್ನಗಾಭರಣನ[7]ಭವನ[7]ನಂಗದೊಳ್ ತಳೆದು
ನನ್ನಿಯಿಂ ತಂತಮ್ಮ ದೇವತ್ವಮೆಯ್ದಿದರ್
ಸನ್ನಿದಂ ನೋಡಿ[8]ಮ[8]ವರಾರೆಂಬೊಡವರ್ಗಳಂ ಪೇಳ್ದಪೆಂ ಸಂತಸದೊಳು ೬

ಶ್ರುತಿತತಿಸ್ಮೃತಿಪುರಾಣೇತಿಹಾಸಾದಿಗಳ್
ಸತತಮುಲಿಗುಂ ವಿಷ್ಣುವಿಂದ್ರನೀಲತ್ವರೂ
ಪತೆವಡೆದು ರಾಜಿಸುವ ಲಿಂಗಮಂ ನಿಜದೇಹದೊಳ್ ತಾಳ್ದು ಪೂಜೆಗೆಯ್ದ
ಅತಿವಿಸ್ಮಯಂಬೆತ್ತ ವಿಷ್ಣುತ್ವಮಂ ಪಡೆದು
ನುತಿಪಾತ್ರನಾದನೆಂದಣಿಯರಂ ಸಂತಸದೆ
ವಿತತೇಂದ್ರನೀಲಮಯಮೆಂ[9]ಬ[9] ಲಿಂಗಂ ವಿಷ್ಣುವೆಂಬ ಸದ್ವಾಕ್ಯಂಗಳಿಂ ೭

ಚತುರಾನನಂ ಲಸಿತ ಶೈಲಮಯಲಿಂಗಮಂ
ನುತ ದೇಹದೊಳ್ ತಾಳ್ದು ಪೂಜೆಯಂ ರಚಿಸಿ ವಿ
ಶ್ರುತಭಕ್ತಿಯಿಂದೊಣರ್ದು ತನ್ನ ನಿಜಪದವಿಯಂ ಬ್ರಹ್ಮತ್ವಮಂ ಪಡೆದನು

---

1 ರ್ಗಳ್ ವಶಿಷ್ಠ (ಕ) 2 ವ (ಕ) 3 ಯೆಂ (ಕಜ) 4 ನೋ (ಕ) 5 ನಿಧಿಯ (ಗ)
6 ದೋಷ (ಗ) 7 ಶಿವನ (ಜ) 8 ರು (ಕ) ಮಿ (ಜ) 9 ದು (ಜ)

ಋತವೆಂದು ಕೈಯೆತ್ತಿ ಬೊಬ್ಬಿಡುತ್ತಿರ್ಕುಮಂ
ತತಿಶಯದೆ ಶಿವಧರ್ಮಶಾಸ್ತ್ರಮೆಲ್ಲಾಗಳುಂ
ವಿತತವುಪ್ಪಂತೆ ನಿತ್ಯಂ ಶೈಲಸುಯುವೆಂಬ ಲಿಂಗವೆಂಬೀ ವಾಕ್ಯ[1]ದಿಂ[1] ೮

ಪುರುಹೂತ[2]ನಳ್ಕ[2]ರ್ತು ದೇದೀಪ್ಯಮಾನದಿಂ
ಪಿರಿದೆಸೆವ ರತ್ನನಿರ್ಮಿತ ಮಹಾಲಿಂಗಮಂ
ಧರಿಸಿ ತನ್ನಂಗ[3]ದೊಳ್[3] ಸದ್ಭಕ್ತಿಯಿಂ ಪೂಜೆಗೆಯ್ದದಱಿನೊಪ್ಪುತಿರ್ಪಂ
ಸುರುಚಿರೇಂದ್ರತ್ವಮಂ ಪಡೆದನೆಂದಳ್ಕಱಿಂ
ಭರದೆ ತರ್ಜನಿಯೆತ್ತಿ ಶಿವಧರ್ಮಸೂಕ್ತಿ[4]ಯು
ದ್ಧುರ[4]ನಾದ[5]ದಿಂದೆ ಲಿಂಗಂ ಮಣಿಮಯಂ ಶುಭಂ[5] ಎಂದು ಸತತಂ ಘೋಷಿಕುಂ ೯

ಎನಸುಮೊಪ್ಪುತ್ತಿರ್ಪ ಹೇಮಮಯಲಿಂಗಮಂ
ಧನದನತಿಹರ್ಷದಿಂ ನಿಜದೇಹದೊಳ್ ಧರಿಸಿ
ಮನಮೊಸೆದು ಸದ್ಭಕ್ತಿಯಿಂ ಪೂಜೆಯಂ ಮಾಡಿ ಬಳಿಕಮದಱಿಂ ಶೋಭಿಪ
ಧನದತ್ವಮಂ ಪಡೆದು ಸಂತಸದಿನಿರ್ಪನೆಂ
ದನವರತಮುಂ ವಾಕ್ಯಮೊಲ್ದು ಘೋಷಿಸುತಿರ್ಕು
ಮನುನಯಂ ನೋಡೆ ಲಿಂಗಂ ಹೇಮಮಯಮೆಂದು ಲಲಿತವಾಕ್ಯಂಗಳಿಂದಂ ೧೦

ಕನದಾರಕೂಟಮಯಲಿಂಗಮಂ ಸಂತತಂ
ತನುವಿನೊಳ್ ತಳೆದು ರಾಜಿಸುವ ಸದ್ಭಕ್ತಿಯಿಂ
ದೆನಸು ಪೊಸೆದಾ ಲಿಂಗಮಂ ಪೂಜೆಗೆಯ್ದು ಬಂಧುರವಾಯು ಮನಮಲರುತೆ
ಘನತರಮೆನಿಪ್ಪ ವಾಯುತ್ವಮಂ ಪಡೆದು ಚಿ
ಕ್ಕನೆ ರಾಜಿಸುತ್ತಿರ್ಪನೆಂದು ಸದ್ವಾಕ್ಯಮೆಂ
ಬಿನೊಳಾರಕೂಟಮಯವೆಂದು ಲಿಂಗಂ ಎಂದು ನುಡಿಗುಮತಿಹ[6]ರ್ಷ[6]ದಿಂದೆ ೧೧

ಸ್ಫುರದಮಲ ರೌಪ್ಯಲಿಂಗಮನಂಗದೊಳ್ ತಾಳ್ದು
ಕರಮೆ ವಿಶ್ವೇದೇವತೆಗಳಹರ್ನಿಶಮೆಯ್ದೆ
ಪಿರಿದು ವಿಶ್ವಾಸದಿಂ ಪೂಜೆಯನೊಡರ್ಚಿ ತಚ್ಛಿವಲಿಂಗದಿಂದೆ ಮತ್ತೆ
ಭರದೆ ತದ್ದೇವತ್ವಮಂ ಪಡೆದು ತಂತಮ್ಮ
ನಿರುಪಮಿತ ಪದವಿಯೊಳು ಸುಖದಿಂದಮಿರ್ಪರೆಂ
ದಿರದೆ ರೌಪ್ಯಂ ಲಿಂಗವೆಂಬ ಸದ್ವಾಕ್ಯಮುಲಿಗುಂ ಮಹಾ[7]ನಾ[7]ದದಿಂದೆ ೧೨

---

1 ಮಂ (ಕ) 2 ನಾಳ್ಕೊ (ಕ) 3 ದೊಳೆ (ಕಜ) 4 ಬಂ।ಧುರ (ಜ) 5 ನದಱಿಂದೆ ಲಿಂಗಮಣಿಯರಂ ಶುಭ (ಕಜ) 6 ರುಷ (ಗ) 7 ನಂ (ಕಜ)

ವಸುಗಳೆಲ್ಲಾಗಳುಂ ಕಂಚಿನಿಂ ವಿರಚಿಸಿದ
ಮಿಸುಪ ಲಿಂಗಂಗಳಂ ತಮ್ಮ ತನುವೊಳ್ ತಳೆದು
ನಿಸದಮಭ್ಯರ್ಚನಂಗೆಯ್ದು ರಸನೆಯು ಪಸಂಗಳೆ[1]ವಂ[1]ತೆ ನುತಿಸಿ ಬಳಿಕಂ
ವಸುಪದವಿಯುಂ ಪಡೆದು ಸುಖಮಿರ್ಪರೆಂದು ರಾ
ಜಿಸುವ ಬಂಧುರಸೂಕ್ತಿಯುಲಿಗುಮನಿಶಂ ನಾಡೆ
ಜಸದಿಂದೆ ಕಾಂಸ್ಯಕಂ ಲಿಂಗಂ ಎನುತ್ತೆ ತಱಿಸಂದು ಮನಮಲರುತಿರಲು ೧೩

ಮಿಱುಪ ಲಿಂಗಾಕೃತಿಯ ಮೃತ್ತಿನಿಂ ರಚಿಸಿ ಮ
ತ್ತೆಱಕದಿಂ ತಮ್ಮಂಗದೊಳ್ ಧರಿಸಿ ಪೂಜೆಯಂ
ತಱಿಸಂ[2]ದು ಮಾಡಿ[2]ಯಶ್ವಿನಿದೇವತೆಗಳೊಸೆದು ಹರ್ಷಮಣಿಯುರಮಾಗಲು
ಮೆಱೆವ ತತ್ಪದವಿಯಂ ಪಡೆದು ಶೋಭಿಸುತಿರ್ಪು
[3]ದೆ[3]ಱಿಯಿರೆಲೆ ವಿಪ್ರರಿರ ಮುಂಪೇಳ್ದ ವಾಕ್ಯಮುಂ
ನೆಱೆಯೆ ಪಾರ್ಥಿವಮಯಂ ಲಿಂಗವೆಂದಾವಗಂ ಬೊಬ್ಬಿಟ್ಟು ಮಿನುಗುತಿರ್ಪ ೧೪

ಸಂತತಂ ದೇಹದೊಳ್ ಸ್ಫಾಟಿಕದ ಲಿಂಗಮಂ
ಮುಂತುಗೊಂಡೆಯ್ದೆ ವರುಣಂ ತಾಳ್ದು ಪೂಜೆಯಂ
ಸಂತಸದೆ ಮಾಡಿ ಕಣ್ತ್ರೀವಿ ನೋಡುತ್ತೆ ನುತಿವಿಸರಮಂ ಪಸರಿಸುತ್ತೆ
ಅಂತೆ ತನ್ನಯ ವರುಣಪದವಿಯಂ ಪಡೆದುಱಿ ಸ
ಮಂತು ರಾಜಿಸುತಿರ್ಪನೆಂದು ತತ್ಸೂಕ್ತಿಯೋ
ರಂತೆ ನುಡಿಗುಂ ಸ್ಫಾಟಿಕಂ ನಿರ್ಮಲಂ ಲಿಂಗವೆಂದು ಕಾದಲ್ಮೆಯಿಂದೆ ೧೫

ಸರಳಾನ್ನಮಯಲಿಂಗಮಂ ಭಕ್ತಿಯಿಂದೆ ವಿ
ಸ್ಫುರದಗ್ನಿ ತನ್ನ ಕಾಯದೊಳೆಯ್ದೆ ಮಡಗಿಟ್ಟು
ಸುರುಚಿರಾನಂದದಿಂದೆಱಗಿ ಪೂಜಿಸಿ ಮತ್ತೆ ತೇಜೋವಿಶಾಲಮಪ್ಪ
ನಿರುತಮಗ್ನಿತ್ವಮಂ ಪಡೆದು ರಾಜಿಸುತಿರ್ಪ
ನುರುತರ ಪ್ರೇಮದಿಂದೆಂದು ಮಸದಂದು ಬಂ
ಧುರನಾದದಿಂದಮುಲಿಗುಂ ಲಿಂಗಮನ್ನಮಯಮೆಂಬ ಸದ್ವಾಕ್ಯಮನಿಶಂ ೧೬

ಚಾರುತರಲಿಂಗದಾಕಾರಮಂ ಮನವೊಸೆದು
ದಾರುವಿಂದಂ ರಚಿಸಿ [4]ಕೋ[4]ಣಪಂ ಭಕ್ತಿಯಿಂ
ಮೇರೆವಿಾಱಿದ ಮನೋರಾಗದೊಡಗೂಡಿ ದೇಹದೊಳೆಯ್ದೆ ತಾಳ್ದಾವಗಂ

---

1 ಡಂ (ಕ) 2 ದೆಸಗಿ (ಜ) 3 ವ (ಕ) 4 ಕಾ (ಕ)

ಓರಂತೆ ನಲಿದು ಪೂಜಿಸಿ ಶೋಭನಂದಳೆದ
ಸಾರನಿರುತಿತ್ವಪದವಿಯೊಳಿರ್ಪನೆಂದು ಸಲೆ
ದಾರುಜಂ ಎಂಬ ನಿರುತಿಶ್ಚೈವ ಎಂಬ ಸದ್ವಾಕ್ಯಮುಲಿಗುಂ ಘೋಷಿಸಿ ೧೭

ದಿನಕರಂ ಭಕ್ತಿಯಿಂದಂ ಸದಾಕಾಲದೊಳ್
ಮಿನುಪ ತಾಮ್ರದ ಲಿಂಗಮಂ ತನುವಿನೊಳ್ ಧರಿಸಿ
ಘನಭಕ್ತಿಯಿಂದಮಭಿನಂದನಂಗೆಯ್ದು ಪೂಜಿಸಿ ಮತ್ತೆ [1]ತಲ್ಲಿಂಗದಿಂ[1]
ಎನಸುಂ ವಿರಾಜಿಸುವ ಸೂರ್ಯತ್ವಮಂ ಪಡೆದು
ಮನವಲರುತಂ ಸುಖದಿನಿರ್ಪನವನೆಂದು ನೆ
ಟ್ಟನೆ ತಾಮ್ರಲಿಂಗಂ ಸದಾಕಾಲವೆಂಬ ಭಕ್ತ್ಯಾ ಎಂಬ ವಾಕ್ಯಮುಲಿಗುಂ ೧೮
[2]

ಸುರುಚಿರಮೆನಿಪ್ಪ ಮುತ್ತಿನ ಲಿಂಗಮಂ ಚಂದ್ರ
ನಿರದೆ ಸದ್ಭಕ್ತಿಯಿಂದಂ ದೇಹದೊಳ್ ತಾಳ್ದು
ಪರಮಹರ್ಷಂದಳೆದು ಪೂಜೆಯನೊಡರ್ಚಿಯನಿಶಂ ಕಾಂತಿಯುಕ್ತಮೆನಿಪ
ನಿರುಪಮಿತ ದೇದೀಪ್ಯಮಾನಮಾ[3]ಗಿ[3]ಸೆದಿರ್ಪ
ಸರಳ ಸೋಮತ್ವಮಂ ಪಡೆದಿರ್ಪನೆಂದು ಬಂ
ಧುರಮಾಗಿ ತೇನ ಸೋಮೇನ ಸಂಪ್ರಾಪ್ತಮೆಂಬೀ ವಾಕ್ಯಮೊಲ್ದು ನುಡಿಗುಂ ೧೯

ಪನ್ನಗರ್ ಭಕ್ತಿಯಾಗಿ ಪೊಳೆವ ಶಿವಲಿಂಗಮಂ
ಚನ್ನಮರ್ದ ಪವಳದಿಂದಂ ರಚಿಸಿ ಸಂತತಂ
ಭಿನ್ನವಿಲ್ಲದೆ ತಮ್ಮ ತನುಗಳೊಳು ಸ್ಥಿತಿಟ್ಟು ಭಕ್ತಿಯಿಂದನವರತವು
ನನ್ನಿಯಿಂ ಪೂಜಿಸುತೆ ಪನ್ನಗತ್ವಂಬಡೆದು
ಸನ್ನಿದಂ ಶೋಭಿಸುತ್ತಿರ್ಪರಪರೆಂದು ಸಂ
ಪನ್ನವಾಕ್ಯಂ ನಾಡೆ ನಾಗಾಃ ಪ್ರವಾಳಜಂ ಲಿಂಗಮೆಂಬುಲಿಗುಮನಿಶಂ ೨೦

ಅಸುರರೊಸೆದಾವಗಂ [3]ಕಾ[3]ರ್ಬೊನ್ನಲಿಂಗಮಂ
ಸಸಿನೆ ತಂತಮ್ಮಂಗದೊಳ್ ತಳೆದು ಭಕ್ತಿಯಿಂ
ದೆಸೆವ ಕಾಲತ್ರಯಂಗಳೊಳೆಯ್ದೆ ಪೂಜಿಸುತೆ ಮೂಲೋಕಮಂ ಸೋಲಿಪ
ಅಸದಳದ ರಾಕ್ಷಸತ್ವಮನೆಯ್ದೆ ಪೆಂಪನುರ್ದ್ಧ
ನಿಸದಮನಿಶಂ ಸುಖಂದಳೆದಿರ್ಪರೆಂದು ಸಂ
ತಸದೆ ಕೃಷ್ಣಾಯಸೋ ಎಂಬ ಭಾಸುರವಾಕ್ಯಮುಲಿಗುಮನವರತಮೊಲ್ದು ೨೧

[1] ಲಿಂಗದಿಂ (ಕ) ಲಿಂಗದಿಂದೆ (ಜ) [2] ಗೊ (ಕ) [3] ಕ (ಕ)

ನಿರುತಂ ಪಿಶಾಚತತಿ [1]ಸೀ[1]ಸಮಯಲಿಂಗಮಂ
ಪಿರಿದಾವಗಂ ತಮ್ಮ ಕಾಯಂಗಳೊಳ್ ತಳೆದು
ಭರದೆ ಕಾದಲ್ಮೆವೆರಸರ್ಚಿಸುತೆ ಭಕ್ತಿಸಂಯುಕ್ತ ಚೇತಸ್ಕಮಾಗಿ
ಉರುತರ ಪಿಶಾಚತ್ವಮಂ ಸಾರ್ದು ಸುಖದಿಂದ
ಮಿರುತೊಪ್ಪಿತೆಂದು ಘೋಷಿಸಿ ನುಡಿಗುಮಾವಗಂ
ಕರಮೆ ಲಿಂಗಂ ಸೀಸಮಯಮೆಂಬ ವಾಕ್ಯಮುಲ್ಲಾಸದಿಂ ನುಣ್ಪುಮುರುತೆ ೨೨

ಪೊಳೆವ ಲೋಹತ್ರಯದ ಲಿಂಗಮಂ ಗುಹ್ಯಕರ್
ವಿಳಸದಂಗದೊಳೆಯ್ದೆ ಧರಿಸಿ ಮೂಱುವಸರದೊ
ಳೆಳಸಿ ಸದ್ಭಕ್ತಿಯಿಂ ಪೂಜಿಸಿ ಮನೋಮುದಂಬೆರಸಿ ತಮಗುಚಿತಮಪ್ಪ
ಲಲಿತ ಗುಹ್ಯಕಪದವಿಯಂ ಪಡೆದಹರ್ನಿಶಂ
ತೊಳಗುತೊಪ್ಪುವರೆಂದು ಪೌರಾಣವಾಕ್ಯಮು
ಜ್ವಲದಿಮುಲಿಗಂ ತ್ರಿಲೋಹಕಮಯಮೆನುತ್ತೊಣರ್ದು ಘೋಷಿಸುತ್ತತಿಶಯದೊಳು ೨೩

ಮಿಗೆ ವಜ್ರಲೋಹಮಯಲಿಂಗಮಂ ಭಕ್ತಿಯಿಂ
ನೆಗಳ್ದ ಮಾತೃಕೆಯರೆಲ್ಲಾಗಳುಂ ವಸುಗಳೊಳ್
ಸೊಗಸೊಗೆಯೆ ಧರಿಸಿ ಕಾಲತ್ರಯಂಗಳೊಳಗುಂದಲೆಯಾಗಿ ಪೂಜೆಗೆಯ್ದು
ತೆಗಳಣಂ ಪೊರ್ದದುರುಮಾತೃಕಾಪದವಿಯಂ
ತಗುಳ್ದೆಯ್ದಿ ಸಂತೋಷದಿಂದಿರ್ಪರೆಂದು ತೊ
ಟ್ಟಗೆ ಪುರಾಣೋಕ್ತಿಯುಲಿಗುಂ ವಜ್ರಲೋಹಮಯಮೆನುತೆ ಲಿಂಗಂ ಎನುತ್ತೆ ೨೪

ಧರಿಸಿ ಚಾಮುಂಡಿ ಸೈಕತದ ಲಿಂಗಮನೆಯ್ದೆ
ಭರದೆ ಪೂಜಿಸಿ ತನ್ನ ಪದವಿಯಂ ಪಡೆದಳೆಂ
ದುರುತರಂ ವಾಕ್ಯಮುಲಿಗುಂ ಸೈಕತಂ ಎಂದು ಸಾಕ್ಷಾದೆನುತ್ತೆ ಮತ್ತೆ
ವರದುರ್ಗಿ ಪಿಷ್ಟಮಯಲಿಂಗಮಂ ತಾಳ್ದು ಭಾ
ಸುರ ಪೂಜೆಗೆಯ್ದು ನಿಜಪದವಿಯಂ ಪಡೆದ[2]ಸೊಕ[2]
ಮಿರುತೆಸೆದಳೆಂದು ನುಡಿಗುಂ ಪಿಷ್ಟಮಯಲಿಂಗಮೆಂಬ ಸದ್ವಾಕ್ಯಮನಿಶಂ ೨೫

ಸತತ ದೂರ್ವಾಂಗಲಿಂಗಮನಾವಗಂ ಸರ
ಸ್ವತಿ ಧರಿಸಿ ಪೂಜೆಯಂ ರಚಿಸಿ ನಿಜಪದವಿಯಂ
ವಿತತವೆಯ್ದಿದಳೆಂದು ದೂರ್ವಾಮ[3]ಯಂ[3] ಲಿಂಗಮೆಂಬ ವಾಕ್ಯಂ ಘೋಷಿಕುಂ

[1] ಖಾ (ಕ) [2] ಸುಕ (ಜ) [3] ಯಾ (ಗ)

ಯತಿವಿತತಿ ದಧಿರೂಪಲಿಂಗನುಂ ತಾಳ್ದು ಮ
ತ್ತತಿಶಯಂ ರಾಜಿಸುತಿರ್ಪುದೆಂದಾವಗಂ
ಶ್ರುತಿಯೆ ಸರ್ವೇ ದಧಿನುಯಂ ಲಿಂಗವೆಂಬ ಸದ್ವಾಕ್ಯದಿಂ ಘೋಷಿಸುವುದು ೨೬

ಮುನಿನಿಕರವೊಲ್ದು ಮಂತ್ರಾ[1]ಹ್ವಾ[1]ಜ್ಯಮಯವೆಂದು
ಮಿನುಗಿಪ ವಾಕ್ಯಪ್ರಮಾಣದಿನಾವಗಂ ಮತ್ತೆ
ಘನಮಂತ್ರಚಯವೆನಿಸುವಾಜ್ಯಮಯಲಿಂಗನುಂ ಪೂಜಿಸುಗುಮತಿಶಯದೊಳು
ಸನಯದಿಂ ಲಿಂಗಂ ಕುಶಾಗ್ರಮಯವೆಂಬ ಸುವ
ಚನ ಮಾನದಿಂದೆ ಮತ್ತಿನ ಮುನಿಗಳೆಯ್ದೆ ತೊ
ಟ್ಟನೆ ಕುಶಾಗ್ರಸ್ವರೂಪದ ಲಿಂಗವುಂ ಪೂಜೆಗೆಯ್ದು ಮನವರತವೊಸೆದು ೨೭

ಮರಕತದ ಲಿಂಗವುಂ ತಾಳ್ದು ಪೂಜಿಸಿ ಯಮನುಂ
ಸುರುಚಿರವೆನಿಪ್ಪ ನಿಜಪದವಿಯಂ ಪಡೆದು ಭಾ
ಸುರಕಾಯಮಾಗಿರ್ಪನೆಂದು ಲಿಂಗಂ ಮಾರಕತವೆಂಬ ವಾಕ್ಯಮುಲಿಗುಂ
ಪಿರಿದು ನವನೀ[3]ತಂ[3]ಗವಾಂಕುಲಂ ಎಂಬ ಸುಂ
ದರ ವಾಕ್ಯಮಾನದಿಂ ನವನೀತಲಿಂಗನುಂ
ಭರದಿಂದಮಭ್ಯರ್ಚನಂಗೆಯ್ದು ಗೋಕುಲಂ ಸೊಕದೊಳನಿಶಂ ಬಾಳ್ವುದು ೨೮

ಲಲಿತ ಕಾಮವಸಂತ ಮುಖ್ಯರನಿಶಂ ಮತ್ತ
ಮಲರಲಿಂಗಂ ಮಾಡಿ ತಂತಮ್ಮ [4]ವಪುಗಳೊಳ್[4]
ಸಲೆ ಧರಿಸಿ ಪೂಜೆಯನೊಡರ್ಚಿ ಪಡೆದರ್ ಮನೋಹರಮಪ್ಪ ರೂಪುಗಳನು
ನೆಲೆಯಿದೆಂದಾವಗಂ ಸದ್ವಾಕ್ಯಮುಗ್ಗಡಿಪು
ದೊಲವಿನಿಂ ಪುಷ್ಪಲಿಂಗಂ ಎಂದುಮಿಂತೆಲ್ಲ
ರಲಸದೆ ಮಹಾದೇವನಂ ತಾಳ್ದು ಪೂಜಿಸುಗುಮತಿನಿಷ್ಠೆಯಿಂ ಭಕ್ತಿಯಿಂ ೨೯

ಇಂತು ಹರಿಯಜ ಸುರಪ ಮುಖ್ಯ ನಿರ್ಜರರಸುರ
ಸಂತತಿ ಕುಬೇರಮುಖ ಯಕ್ಷ ಕಿನ್ನರ ಗರುಡ
ಸಂತಾನಮಂತೆ ಮತ್ತಿನ ಮುನಿಗಳಮುಳತರ ಶಕ್ತಿಗಳ್ ಮೊದಲಾಗಿಯುಂ
ಕಂತುಹರನಂ ಶಿರೋಭಾ[5]ಳಾದಿ[5] ಸುಸ್ಥಾನ
ಸಂತತಿಗಳೊಳ್ ತಳೆವರೆಂದು ಪದ್ಮಪುರಾಣ
ಮುಂತಗುಳ್ದು ಶಂಭು ರಾಘವನ ಸಂವಾದ ಸೂಕ್ತಿಗಳೊಳುಲಿಗುಂ ಸಂತತಂ ೩೦

---

[1] ಖ್ಯಾ (ಜ) [2] ಗು (ಗ) [3] ತಾಂ (ಕ) [4] ಪೂಗಳೊಳು (ಕ) ಪೂಗಳಂ (ಜ)
[5] ಳದಿಂ (ಕಜ)

[1]ಎಂ[1]ತೆಂಬೊಡದ ಕೇಳಿರೆಲೆ ವೇದದೂರರಿರ
ಸಂತತಂ ಹರಿಸುರಜ್ಯೇಷ್ಠೇಂದ್ರಮುಖ ದೇವ
ಸಂತತಿಗಳೆಯ್ದೆ ಮಸ್ತಕ ಮಕುಟ ಭಾಳಂಗಳಲ್ಲಿ ಶಿವನಂ ತಾಳ್ದದ
ಮುಂತುರದೆ ಮಸ್ತಕೇ ಧಾರಣಂ ಶುಭಮೆನು
ತ್ತಂತೆ ಮಕುಟೇಷು ಚ ಶುಭಂ ಎನುತ್ತೊಣರುತೆ ಸ
ಮಂತು ನೋಡಲ್ ಲಲಾಟೇ ಧಾರಣಂ ಶಸ್ತಮೆಂದುಲಿಗುಮೊಸೆದು ವಾಕ್ಯಂ ೩೧

ಮಾಲಕುಮಿ ಮಾದೇವನಂ ಭಕ್ತಿಯಿಂದೆ ನಿಜ
ಭಾಳಾಗ್ರದೊಳ್ ತಾಳ್ದಳೆಂದು ನುಡಿಗುಂ ಮಹಾ
ಲೀಲೆಯಿಂ ಲಕ್ಷ್ಮ್ಯಾ ಧೃತಂ ಪುರಾ ಎಂಬ ಸದ್ವಾಕ್ಯಮಳ್ಕಱನಾವಗಂ
ಭಾಳೇಂದುಮೌಳಿಯಂ ತನ್ನ ಮೂರ್ಧದೊಳೆಯ್ದೆ
ಶೂಲಿಪದಭಕ್ತ ಬಾಣಾಸುರಂ ತಾಳ್ದನೆಂ
ದಾ ಲಲಿತವಾಕ್ಯಮುಲಿಗುಂ ಧೃತಂ ಮೂರ್ಧ್ನಿ ಎನುತಾವಗಂ ಸಂತಸದೊಳು ೩೨

ಲಲಿತಶಿವಲಿಂಗಮಂ ಲೋಹಪಾತ್ರೆಯೊಳಿಟ್ಟು
ಗಳಿಲನಿರ್ಬಗಿಮಾಡಿ ತಮ್ಮೊಡಲನಲ್ಲಿ ಮನ
ವಳುಕದಾ ಲಿಂಗಮಂ ತಾಳ್ದಿ[2]ರ್ಪರು[2]ಳಿದ ರಕ್ಕಸಗಡಣಮೆಂದಾವಗಂ
ತೊಳಪ ವಾಕ್ಯಂ ನುಡಿಗುಮೆಂತೆನಲು ಕೂಡೆ ನಿ
ರ್ಮಳದೇವಿ ವರಲೋಹಪಾತ್ರಕೆಯೆಂದು ಸ
ಲ್ಲಲಿತ ಗುರುಪಂಡಿತೇಂದ್ರಂ ಪೇಳ್ದನಳ್ಕಱಿಂದಾ ವಿಪ್ರನಿತತಿಗೊಲ್ದು ೩೩

ಮುನಿನಿಕರಮುಭವನಂ ಕಂಠದೊಳ್ ತಾಳ್ದರೆಂ
ದೆನಸುಮುಲಿಗುಂ ಮಹಾಘೋಷದಿಂ ಸದ್ವಾಕ್ಯ
ಮನವರತ[3]ಪೊ[3]ಣರ್ದ ಕಂಠೇಷು ಹರಕಂಠಾದಿ ಮುನಯೋ ಎನುತ್ತೆ ಬಳಿಕಂ
ವಿನಯದಿನಯಂ ಮೇ ಎನುತ್ತೆ ಹಸ್ತೋ ಎನುತೆ
ಮಿನುಪ ಋಗ್ವೇದಮುಸುರ್ದಂತೆ ವಾತೂಲಮುದು
ಸನಯದಿಂ ಧಾರಯೇದ್ಯಸ್ತು ಹಸ್ತೇನೆಂದು ಕರದೆ ಧರಿಸಲ್ವೇಳ್ವುದು ೩೪

ಸಂತತಂ ಪ್ರಾಣಲಿಂಗಮನಾವಗಂ ಹಸ್ತ
ದಿಂ ತಳೆಯುವೇಳ್ದತ್ತು ಹಸ್ತಸ್ಥಲೇವಾಪಿ
ಇಂತೆಂಬ ವಾಕ್ಯಮುಂತೊಲ್ದು ಮಸ್ತಕದಲ್ಲಿ ಮೂರ್ಧದೊಳ್ ಶಿವಲಿಂಗಮಂ

---

1 ಇಂ (ಗ) 2 ರ್ಪುದು (ಜ) 3 ಪೊ (ಜ)

ಸಂತಸದೆ ಧರಿಸವೇಳ್ಪುದು ಮಸ್ತಕೇ ಎಂದು
ಮುಂತುಸರ್ವ ಮೂರ್ಧ್ನಿನಾಧಾರಯೇದೆಂಬ ವಾ
ಕ್ಯಂ ತಗುಳ್ದು ಪಿರಿದುಮಿನ್ನುಂ ಕೇಳಿರೆಲೆ ವಿಪ್ರರಿರ ಪೇಳ್ವೆನತಿಶಯಮದೊಳು ೩೫

ಶಿವಲಿಂಗಮಂ ಶಿರದೊಳಗೆ ಗಳದೊಳಾವಗಂ
ತವೆ ಧರಿಪುದೆಂದುಲಿಗುಮತಿಶಯಂ ಸದ್ವಾಕ್ಯ
ಮವಿಕಲದಿನುತ್ತಮಾಂಗೇ ಗಳೇವಾಪಿ ಎಂದತಿ ಘೋಷಮುಣ್ಮುತಿರಲು
ತವಕದಿಂ ಪೊರ್ಕುಳೆರ್ದೆಗಳೊಳೆ ಧರಿಸಲ್ವೇಳ್ಕು
ಮವಿರತಂ ನಾಭೌಚ ಹೃದಯೇ ಎನುತ್ತೆ ಸೊಗ
ಸುವ ವಾಕ್ಯಮಾನದಿಂದೆಂದು ನುಡಿಯುತ್ತೆ ಮತ್ತಮಿಂತೆಂದನಪರ್ಗಳೊಡನೆ ೩೬

ಪಿರಿದು ಶುಚಿರ್ಯಾದೊಡನುಶುಚಿಯಾದೊಡಂ ಪಗಲು
ಮಿರುಳುಮೆಡೆವಿಡದೆ ಲಿಂಗಂ ಧರಿಪುದೆಂದು ಬಂ
ಧುರವಾಕ್ಯಮುಲಿಗುಂ ಶುಚಿರ್ವಾಪ್ಯಶುಚಿ ಎನುತ್ತೊಲವಿನಿಂದಂ ಸಂತತಂ
ವರಲಿಂಗಮಂ ವಕ್ತ್ರದೊಳ್ ಧರಿಸಲೇಗಳುಂ
ನಿರುತಮುಚ್ಛಿಷ್ಟಮಿಲ್ಲೆಂದು ಸದ್ವಾಕ್ಯಮು
ದ್ಧರನಾದದಿಂದೆ ನೋಚ್ಛಿಷ್ಟಮಿತಿ ನಿಶ್ಚಿತಂ ಎಂದು ಸಾಱುಗುಮತಿಶಯಂ ೩೭

ಪರಮಭಕ್ತಂಗೆ ಯಾವಜ್ಜೀವ ಪರಿಯಂತ
ಮುರುತರಮೆನಿಪ್ಪ ಲಿಂಗಂದಳೆಯದಿರೆ ಪಾಪ
ಮಿರದೆಯ್ದುಗುಂ ನೋಡ ಬಿಭ್ರತೋಲಿಂಗಮೆಂಬೀ ವಾಕ್ಯಮಾಸದಿಂದಂ
ಭರದಿನೆಲ್ಲಾಗಳುಂ ಲಿಂಗಧಾರಣನಪ್ಪ
ಪುರುಷಂಗೆ [1]ಜವಹುರಂ[1]ಬುಗುವ ದಂದುಗವಿಲ್ಲ
ನಿರುತಮೆನುತಂ ಸದಾ ವೈ ಲಿಂಗಧಾ[2]ರಣಾದೆಂ[2]ಬ ವಾಕ್ಯಂ ಘೋಷಿಕುಂ ೩೮

ಶಿರದಲ್ಲಿ ನಿಷ್ಠೆಯಿಂ ತಾಳ್ದ ಶಿವಲಿಂಗ[3]ಮು
ದ್ಧರ[3]ತರಾಲಸ್ಯದಿಂ ಪೆಱಪಿಂಗಲಾಱದಂ
ತಿರವೇಳ್ಕುಮೆಂದು ನಕದಾಚಿದ್ವಿಯೋಗ ಎಂದೆಂಬ ವಾಕ್ಯಂ ನಿರವಿಕುಂ
ಹರಸಂಗನಾದ ಮನುಜಂ ಪುಣ್ಯಪುರುಷನೆಂ
ದಿರದೆ ನುಡಿಗುಂ ಮಹಾವಾಕ್ಯಮೆಂತೆಂಬೊಡದ
ನೊರೆವೆನೆಂತೆನೆ ಪ್ರಕೃತಿ ಮಾನುಷಾಃ ಎಂದು ಸಂತೋಷದಿಂದನವರತವು . ೩೯

---

1 ಯಮಪುರಂ (ಜ)   2 ರಣಾವೆಂ (ಕಗ)   3 ಮಾತ್ಸ್ಯರು (ಜ)

ಇಂತೊಪ್ಪುತಿರ್ಪ ಶಿವಲಿಂಗಮಂಗದೊಳಗಲ
ದಂತೆ ನಿಮಿಷಾರ್ಧದೊಳ್ ಸಾವಧಾನಂಗೂಡಿ
ಸಂತತಂ ಧರಿಸವೇಳ್ಕೆಂದು ವೇದಾಗಮಪುರಾಣೇತಿಹಾಸಂಗಳಿಂ
ಕಂತುಹರನಿಭ ಪಂಡಿತಾರಾಧ್ಯರಾ ವಿಪ್ರ
ಸಂತತಿಯ ದುಷ್ಪ್ರಶ್ನೆಯಂ ತವಿಸಿ ಶಿವಲಿಂಗ
ಮಂ ತಳೆಯವೇಳ್ಕು ವಿಪ್ರರ್ ನೋಡಿವೆಂದವರ ನುಡಿಗಡಣಮಂ ತೀರ್ಚಿದಂ ೪೦

ಸದಮಲಪ್ರಚುರವಿಶ್ರುತ ಪರಮಭಕ್ತಗಣ
ಪದಸರೋರುಹಸಾಂದ್ರ ಮಕರಂದಪಾನ ಸ
ಮ್ಮುದಿತ ಚಂಚಚ್ಚಂಚರೀಕನನವರತ ಪಂಚಾಕ್ಷರೀಪ್ರಸಿತಹೃದಯಂ
ವಿದಿತ ಮಂಜುಲನೀಲಕಂಠಾಹ್ವಯಂ ಮನೋ
ಮುದದೆ ಪೇಳ್ದುರುತರಾರಾಧ್ಯಚಾರಿತ್ರದೊಳ
ಗಿದು ಲಿಂಗಧಾರಣದ ಮಾಹಾತ್ಮ್ಯವೆಂಬ ಭಾಸುರಸಂಧಿ ಭಾವಿಸುವೊಡೆ ೪೧

# ಐದನೆಯ ಸಂಧಿ

## *ಪ್ರಸಾದ ಮಾಹಾತ್ಮ್ಯ

ಸೂಚನೆ: ಶಿವಸುಪ್ರಸಾದ ಮಾಹಾತ್ಮ್ಯಮಂ ಮನಸಂದು
ಭವನಾಶ ಪಂಡಿತೇಂದ್ರಂ ಪೇಳ್ದನಾ ವಿಪ್ರ
ನಿವಹಕ್ಕೆ ಕೇಳ್ದಂ ಸೂರಸಚಿವೇಂದ್ರ ಯಾಚಕಚಕೋರಾಳಿಚಂದ್ರ

ಕೀನಾಶಭಂಜನಕೃಶಾನು ಪೀಯೂಷಕರ
ಭಾನುನೇತ್ರಾ ಕೃಪಾಮಾನಾಕರಾಕಮಲ
ಯೋನಿ ಹರಿಮುಖ್ಯ ನಾನಾನಿರ್ಜರಾರ್ಚಿತಪದಾ ನಾಮರೂಪರಹಿತ
ಮಾನಕೇತನಗರ್ವಕಾನನ[1]ವಿತತಿ[1]ದಾವ
ಮೇನಕಾತನಯಾತಿ ಪೀನಕುಚ ಪತ್ರಲೇ
ಖಾನೀಕಲಿಪ್ತವಕ್ಷಾ ನಾಗಪತಿ ವಿಭೂಷಾ ನೀಲಕಂಠ ಜಯತು ೧

ಶ್ರುತಿಪುರಾಣೇತಿಹಾಸಾದಿಗಳ ವಾಕ್ಯಮಂ
ಸ್ಮೃತಿತತಿಗಳುಂ ಪೇಳ್ದವೋಲೊಡಂಬಟ್ಟಿವಿವ
ನತಿವಿರುದ್ಧಂ ವೇದಮಾರ್ಗಕಿದು ಶಿವನ ಪ್ರಸಾದಮಂ ಭುಂಜಿಸುವುದು
ನುತ ಕುಲಜನಪ್ಪ ವೈದಿಕನಪ್ಪ ವಿಪ್ರಂಗೆ
ಹಿತಮಲ್ತಿದಂ ಕಾಣೆನೆಲ್ಲಿಯುಂ ಭಾವಿಸಲ್
ಪತಿತನಪ್ಪಾತನುಂ ವೇದಸನ್ಮಾರ್ಗದೂರನು[2]ಮೊಲ್ದಿದಂ[2] ಭುಂಜಿಪಂ ೨

ಆದಿಯೊಳಾಗಾರಾಧ್ಯರಾರಾದೊಡಂ ಶಿವನ ಪ್ರ
ಸಾದಮಂ ಭುಂಜಿಸಿದರೊಳರೆ ಮತ್ತೀಗಳೀ
ಮೇದಿನಿಯೊಳಾವನೊರ್ವಂ ವೇದವಿದನಿದಂ ಭುಂಜಿಪುದುಮೆಂತುಮಿಲ್ಲ
ಮಾದೇವನುಸಿರ್ದನೆನ್ನೀ ಪ್ರಸಾದಂ ನಾಡೆ
ಭೂದೇವ ಸಂದೋಹ[3]ಕತಿ[3]ಯೋಗ್ಯಮ[4]ಲ್ತೆಂ[4]ದು
ಸಾದರಮನರ್ಹಂ ಎನುತ್ತೆ ಮಮನ್ನೈವೇದ್ಯಮೆನುತೆ ಶಿವಸದ್ವಾಕ್ಯಮುಂ ೩

---

[1] ವವಿ (ಕ) ವಲೀ (ಗ) [2] ಮೋಣದಂ (ಜ) [3] ಕಿದು (ಜ) [4] ಲ್ಲಂ (ಗ)

* (ಕಜ) ಪ್ರತಿಗಳಲ್ಲಿಲ್ಲ.

ಶಿವ ನುಡಿದ ನುಡಿಯೇ ಪ್ರಮಾಣವೆಂದಥಮುಮತ
ದವಿವೇಕದಿಂದಿತರ ಜನಮುಣ್ಬುದಲ್ಲದೇ
ಸುವಿವೇಕಿಯಾದ ವೇದಜ್ಞನುಣ್ಬುಪು ಕರಮನುಚಿತವಿದು ಪರಿಭಾವಿಸೆ
ತವೆ ತದೀಯೇಷ್ಟಲಿಂಗಾರ್ಪಿತಾನ್ನಂ ರಾಜಿ
ಸುವಕನ[1]ಪ್ರಾ[1]ಣಾಗ್ನಿಹೋ[2]ತ್ರಕ[2]ರ್ಹಮೆ ಬಳಿಕೆ
ಶಿವಲಿಂಗಕರ್ಪಿಸಿದ ಶೇಷಾನ್ನಮೆಯ್ದೆ ಪಿತೃದೇವತಾರ್ಹಮೆ ಮತ್ತೆಯುಂ ೪

ಸುಲಲಿತ ಶ್ರಾದ್ಧಕರ್ಮಕ್ಕರ್ಹಮಲ್ತು ಸ
ಲ್ಲಲಿತ ಯಜ್ಞಾದಿಕರ್ಮಕ್ಕರ್ಹಮಲ್ತು ನಿ
ರ್ಮಲ ವೈಶ್ವದೇವಕಾರ್ಯಕ್ಕರ್ಹಮಲ್ತು ಲಿಂಗೋಚ್ಛಿಷ್ಟಮನ್ನನಿಕರಂ
ನಲಿದದಂ ಬ್ರಾಹ್ಮಣಂ ಭುಂಜಿಸಲ್ಕಾಗದೆಂ
ದೊಲವಿನಿಂ ನುಡಿದ ವಿಪ್ರರ್ಗೆ ಪರವಾದಿಸಂ
ಕುಲತಿಮಿರಕುದ್ದಂಡಮಾರ್ತಾಂಡ ಪಂಡಿತೇಂದ್ರಂ ನುಡಿದನುತ್ತರವನು ೫

ಪರಶಿವನ ಭಕ್ತಿಸಂವರ್ಧನಮೆನಿಪ್ಪ ಬಂ
ಧುರ ಶುದ್ಧಸಿದ್ಧಪ್ರಸಿದ್ಧಪ್ರಸಾದದುರು
ತರ ಮಹತ್ವಮನೊರೆದಪೆಂ ಕೇಳಿರೆಲೆ ವಿಪ್ರರಿರ ಮನದಂದು ಮುದದೆ
ನಿರುತದಿಂ ನೈವೇದ್ಯಶಬ್ದಕ್ಕೆ ಭಾವಿಸಲ್
ಪಿರಿದು ನಾನಾರ್ಥಂಗಳೊಳವವಱೊಳಿದು ಗೌಣ
ಮಿರದಿದುವೆ ಮುಖ್ಯಂ ವಿಧೇಯಮೆಂಬುದನಿನಿಸುಮಱಿಯದೇ ನೀವೆಲ್ಲರು ೬

ಪಿರಿದು ಕೋಟಲೆಗೊಂಬಿರಿನ್ನಿದಂ ಪೇಳ್ದಪೆಂ
ಭರದಿಂದೆ ಷಡ್ವಿಧಮೆನಿಪ್ಪುದಾ ನಿರ್ಮಾಲ್ಯ
ಮಿರದದಱ ಭೇದಮೆಂತೆನೆ ದೇವತಾದ್ರವ್ಯಮಂತೆ ದೇವಸ್ವಮೆಂದು
ಪರಮನ್ನೈವೇದ್ಯಮಾ ನಿವೇದಿತಂ ಮತ್ತೆ ಭಾ
ಸುರದ ಚಂಡದ್ರವ್ಯಮುಂ ಬಹಿಃಕ್ಷಿಪ್ತಮುಂ
ನಿರುತಮೆಂದಿಂತಾಱುತೆಱನಿವಱ ವಿವರಮೆಂತೆಂಬೊಡುಸುರ್ದಪೆನಣಿಯರಂ ೭

ವರ ಹೇಮ ರೌಪ್ಯ ರತ್ನಾದಿಗಳ್ ಭಾವಿಸಲ್
ಪಿರಿದು ದೇವದ್ರವ್ಯಮೆನಿಸುಗುಂ ಗ್ರಾಮಮುಂ
ಧರಣಿಯುಂ ದಾಸಿಯುಂ ದಾಸನುಂ ದೇವಸ್ವಮೆನಿ[3]ಕು[3]ಮಿವು ಪರಿಭಾವಿಸೆ

---

[1] ಕಪ್ರ (ಕ) ಪಾತ್ (ಜ) [2] ತ್ರಾ (ಜ) [3] ತು (ಕಜ)

ಪುರಹರಂಗೆಂದು ಸಂಕಲ್ಪಿಸಿದ ಪುಷ್ಪಫಲ
ಪರಮಾನ್ನ ಪಾನಾದಿಗಳ್ ನಾಡೆ ನೈವೇದ್ಯ
ಮಿರದಕ್ಕುಮೊಂದು ಸಲೆ ಹೇಮ ರೌಪ್ಯಂ ಚ ರತ್ನಾದಿ ಎಂಬುದು ವಾಕ್ಯವು ೮

ದೇವತಾದ್ರವ್ಯಮೆನಿಸುವ ಕಾಂಚನಾದಿಯುಂ
ದೇವಸ್ವಮೆನಿಪ ಭೂಮ್ಯಾದಿಯುಂ ಸಂತತಂ
ದೇವತೋದ್ದಿಷ್ಟಮೆನಿಸುವ ಫಲ ಜಲಾನ್ನಾದಿ ನಿವಹಮುಮನರ್ಹಮೆನಿಕುಂ
ಭಾವಿಸಲ್ಕೀ ತ್ರಿವಿಧ ನಿರ್ಮಾಲ್ಯದೊಳಗಾವ
ನೋವದೆಳ್ಳನಿತನನುಭವಿಪನವನಾವಗಂ
ಸೇವಿಪಂ ನರಕಸಂದೋಹಮನ್ನೆನುತ್ತೆಸೆವ ವಾಕ್ಯಮುಲಿಗುಮದೆಂತೆನೆ ೯

ದೇವತಾದ್ರವ್ಯಮೆನಿಸುವ ಹೇಮಮುಂ ಮತ್ತೆ
ದೇವಸ್ವಮೆನಿಪ ಭೂಗ್ರಾಮಂಗಳಂ ಬಳಿಕೆ
ದೇವತೋದ್ದಿಷ್ಟಮೆನಿಸುವ ಪುಷ್ಪಫಲಜಲಂಗಳನಾವನಾಸೆವಟ್ಟು
ಸೇವಿಪುದನರ್ಹಮಿತಿ ಕಥ್ಯತೇ ಎಂದು ಮ
ತ್ತಾವಿಧಂ ದ್ರವ್ಯಾಪಹಾರೇಣ ಎಂದು ಮ
ತ್ತೋವದುಱಿ ರೌರವಂ ನರಕಂ ಪ್ರಜೇದೆಂದು ಸದ್ವಾಕ್ಯಮುಲಿಗುಮನಿಶಂ ೧೦

ಇದಱಿನಿಂತೀ ತ್ರಿವಿಧ ನಿರ್ಮಾಲ್ಯಮರ್ಹಮ
ಲ್ಲೊದವಿದ ನಿವೇದಿತಂ ತಾನದೆಂತೆಂಬೊಡಂ
ತದನುಸರ್ದಪಂ ಸಲೆ ಶಿವೋಪಭುಕ್ತಂಗಳಾಗೆನಸುಮಘಹರಮೆನಿಸುವ
ವಿದಿತಾನ್ನಪಾನ ಸ್ರಕ್ಚಂದನಂ ಮೊದಲಾದ
ಸದಮಳಪದಾರ್ಥಂಗಳುಂ ಭಕ್ತತತಿಗರ್ಹ
ಮಿದು ನಿಕ್ಕುವಂ ಸಂತತಂ ನಿವೇದಿತಮಿತಿಪ್ರೋಕ್ತಮೆಂಬೀ ವಾಕ್ಯವು ೧೧

ಸಲೆ ಬಾಣಲಿಂಗ ಚರಲಿಂಗ ವಿಸರದ ಮಹೋ
ಜ್ವಲ ರತ್ನಲಿಂಗ ಸ್ವಯಂಭುವೆನಿಸುವ ಲಿಂಗ
ದಲಘು ಪ್ರಸಾದತತಿ[1]ಗ[1]ಧಿಕಾರಿಯಲ್ಲು ಚಂಡೇಶನೆಂದನವರತವು
ಉಲಿವುತಿರ್ಕುಂ ಬಾಣಲಿಂ[2]ಗಾ[2]ಚರೇ ಎನು
ತ್ತೊಲವಿನಿಂ ರತ್ನಲಿಂಗೇ ಸ್ವಯಂಭುವೆ ಎನುತೆ
ನಲಿದು ವಾಕ್ಯಂ ಮತ್ತೆ ನಾಣೆ ಚಂಡದ್ರವ್ಯಮಾವುದೆನೆ ಪೇಳ್ವೆನದನು ೧೨

---

[1] ಯ (ಗ) [2] ಗಂ (ಕ) ಗೇ (ಜ)

ವರಶಾಸ್ತ್ರವಿಧಿಯಿಂದೆ ದೇವರ್ಕಳಿಂದೆ ಭಾ
ಸುರ ಪೂರ್ವದೇವರ್ಕಳಿಂ ಮನುಷ್ಯರ್ಕಳಿಂ
ಪಿರಿದುಂ ಪ್ರತಿಷ್ಠಿಸಲ್ಪಟ್ಟ ಲಿಂಗಂ ತ್ರಿವಿಧ ನಿರ್ಮಾಲ್ಯಮನವರತವು
ಕರಮೆ ಚಂಡೇಶಂಗೆ ಯೋಗ್ಯಮದಱಿಂ ಮತ್ತ
ಮಿರದೆ ಚಂಡದ್ರವ್ಯಮೆನಿಸಿತ್ತದೆಂದು ಭಾ
ಸುರವಾಕ್ಯಮುಃಲಿಗುಮೋತತ್ರಿವಿಧ ನಿರ್ಮಾಲ್ಯಮೆನುತೆ ಚಂಡೇಶ ಎನುತೆ ೧೩

ಸಾತಿಶಯದಿಂ ಬಹಿಃಕ್ಷಿಪ್ತಮೆಂಬುದು ನೋಡೆ
ಭೂತಬಲಿಯಕ್ಕುಮಾ ನಿರ್ಮಾಲ್ಯಮದನರ್ಹ
ಮೋತೆಱದೊಳಂ ಪಿಶಾಚಾನೀಕಕರ್ಹಮದು ಸಂತತಂ ಪರಿಭಾವಿಸೆ
ಈ ತೆಱದೊಳಾಱುಪರಿ ನಿರ್ಮಾಲ್ಯದೊಳಗೆ ಮ
ತ್ತಾತನ್ನಿವೇದಿತಂ ಶರಣಾರ್ಹಮೆನಿಸುಗುಂ
ಖ್ಯಾತ ನೈವೇದ್ಯಮೆಂಬುದು ಮತ್ತೆ ಮೂದೆಱಂ ಪೇಳ್ವೆನದಱಿರವನೊಸೆದು ೧೪

ಹರಿಭುಕ್ತ ಶೇಷಾನ್ನಮುಂ ನೋಡೆ ನೈವೇದ್ಯ
ಮಿರದಕ್ಕುಮುಭವ ಸಂಕಲ್ಪಿತದ್ರವ್ಯಸಂ
ಕರಮುಮಂತೆವೊಲೆಯ್ದೆ ನೈವೇದ್ಯಮೆನಿಕುಮೀಶೋಪಭುಕ್ತಂ ಸಂತತಂ
ಪರಮನೈವೇದ್ಯಮೆನಿಸುಗುಮಿಂತು ಮೂದೆಱದೊ
ಳುರು ವಿಷ್ಣುಭುಕ್ತ ನೈವೇದ್ಯಮದು ಗೌಣಮು
ದ್ಧುರ ಶಿವೋದ್ದಿಷ್ಟ ನೈವೇದ್ಯಮದು ಮುಖ್ಯಮೀಶೋಪಭುಕ್ತಂ ವಿಧೇಯಂ ೧೫

ಹರಿಭುಕ್ತ ನೈವೇದ್ಯಮಪ್ರಧಾನಂ ಪರಿ
ಸ್ಫುರಿತ ವೇದೋಕ್ತಾನುವರ್ತಿಗಳ್ಗೀಗಳುಂ
ನಿರುತಮುಭವೋದ್ದಿಷ್ಟ ನೈವೇದ್ಯಮದು ನಿರ್ಮಲರ್ಗೆ ಮುಖ್ಯಂ ಭಾವಿಸೆ
ಪರಮ ಶಿವಭುಕ್ತ ನೈವೇದ್ಯಂ ವಿಧೇಯಮು
ದ್ಧುರುತರ ವ್ಯಾಸ ಜೈಮಿನಿಯ ಸಂವಾದದೊಳ
ಗೊರೆದ ವಾಕ್ಯಂಗಳಂ ಕೇಳಿರೆಲೆ ವಿಪ್ರರಿರ ಪೇಳ್ದಪೆನದೆಂತೆಂಬೊಡೆ ೧೬

ವ್ಯಾಸನಂ ಸ[1]ರ್ವಾ[1]ಗಮಾವಾಸನಂ ನೋಡಿ
ಭಾಸುರ ಮುನೀಶ ಜೈಮಿನಿ ವಂದನಂಗೆಯ್ದು
ಲೇಸಪ್ಪ ವಾಕ್ಯಮಂ ನುಡಿದನೆಲೆ ಸ್ವಾಮಿ ವೇದವ್ಯಾಸ ಮುನಿತಿಲಕನೆ

---

[1] ವಾರ್ಂ (ಗ)

ಭಾಸಮಾನೇ[1]ಶ[1]ನ್ನೈವೇದ್ಯಮಂ ಕೊಂಡವರ್ಗೆ
ದೋಸಮಪ್ಪುದು ಗಡೆಂದೀ[2]ಶ್ವರನ ವಾಕ್ಯಮಂ
ತೋಸರಿಸದುಲಿಗುವೆಂದರ್ ಕೆಲಬರದಱಭಿಪ್ರಾಯಮಂ ಪೇಳೆಪೆನಗೆ ೧೭

ಎಂದ ಜೈಮಿನಿಗೆ ವೇದವ್ಯಾಸನಳ್ತಿಯಿಂ
ದೆಂದಮಪ್ಪಂತೆ ಪೇಳ್ದಂ ಶಿವನ ವಾಕ್ಯಮದು
ಸಂದೇಹಮಿಲ್ಲನರ್ಹಂ ಮನು ಎನುತ್ತೆ ನೈವೇದ್ಯಂ ಎನುತ್ತೆ ನುಡಿದ
ಮುಂದದಱಭಿಪ್ರಾಯಮೆಂತೆಂಬೊಡದನುಸುರ್ವೆ
ನೆಂದು ವೀರೇಶ್ವರನ ಶಾಪಕೊಳಗಾದವರ್ಗೆ
ಮಂದಮತಿ ಮುನಿಗಳ್ಗೆ ಶಿವಭಕ್ತಿದೂರರ್ಗಶುದ್ಧಕರ್ಮಿಗಳ ತತಿಗೆ ೧೮

ಶಿವನೊಡನೆ ಭುಕ್ತ ವಿಷ್ಣ್ವಾದೀಂದ್ರ ದೇವತಾ
ನಿವಹಮದು ದೊರೆಯೆಂಬವರ್ಗೆ ದೀಕ್ಷಿತರಲ್ಲ
ದವರ್ಗೆ ಹರನ್ನೈವೇದ್ಯ ಪಾದಾಂಬುಕುಸುಮದಲತತಿಗಳೆಂಬೀ ಪ್ರಸಾದಂ
ತವೆ ಅನರ್ಹಂ ತಪ್ಪದೆಂದು ನುಡಿಗುಂ ವಾಕ್ಯ
ಮವಿರತಂ ಯೇಽ ಶುದ್ಧಕರ್ಮಣಾ [3]ಏ[3]ನುತೆ ಮುಂ
ತವಕದಿಂ ತೇಷಾಮನರ್ಹಮಿಾಶಸ್ಯ [4]ಏ[4]ನುತೊಱದರ್ು ಮನದೆಸಕದಿಂದೆ ೧೯

ಎಲೆ ಜೈಮಿನಿಯೆ ಕೇಳ ಶಿವನ ವಾಕ್ಯಂ ಬಳಿಕೆ
ಲಲಿತ ಮದ್ಭಕ್ತ ನಿರ್ಮಾಲ್ಯಪಾದಾಂಬು ನಿ
ರ್ಮಲಕುಸುಮದಲತತಿಗಳೆಂಬೀ ಚತುಷ್ಕಪ್ರಸಾದಮನವರತಮೊಸೆದು
ಅಲರ್ದು ಧರ್ಮಾರ್ಥಕಾಮಂಗಳಂ ಮೋಕ್ಷಗಳ
ನಿಲವಿಲ್ಲದೀವುದೆನುತಂ ಸಾಱುಗುಂ ಮಹೋ
ಜ್ವಲನಾದದಿಂ ಧರ್ಮಮರ್ಥಂ ಚ ಕಾಮಂ ಚ ಮೋಕ್ಷಂ ಚ ಎಂದು ಸತತಂ ೨೦

ಅದಱಿಂದೆ ಶಿವಭಕ್ತರಾದ ಶರಣರ್ ಮನಂ
ಪುದುಗಿ ಶಿವನೊಡನೆ ಸುಖಮಿರ್ದವರ್ ಕೊಂಬುದ
ಕ್ಕಿದು ಯೋಗ್ಯವೆಂದುಱ ಮದೇಕ ಶರಣಾಸ್ತೇಷು ಯೋಗ್ಯಂ ಎನುತ್ತೆ ಮತ್ತೆ
ಒದವಿ ನೈವಾನ್ಯಜಂತುಷು ಎಂದು ಶಿವವಾಕ್ಯ
ಮದು ಘೋಷಿಸುತ್ತಿರ್ಕುಮನವರತವೆಂದೆು ಸ
ಮ್ಮದದೆ ವೇದವ್ಯಾಸಮುನಿ ಜೈಮಿನಿಗೆ ಪೇಳ್ದನೀಶವಾಕ್ಯದ ತೆಱನನು ೨೧

---

[1] ಷ್ಪ (ಕಜ) [2] ಕ್ಕಂ ಗಡೆಂದೀ (ಕಜ) [3] ಮೆ (ಜ) [4] ಮೆ (ಕ)

ಪಿರಿದು ಶುಚಿಯಾದ ಗೋಬ್ರಾಹ್ಮಣಾದಿಗಳನು
[1]ದ್ಧ[1]ರದಿನುಚ್ಛಿಷ್ಟವ[2]ನುಜಂ[2] ಮುಟ್ಟಲಾಗದಂ
ಬರದಲ್ಲಿ ತೋರ್ಪ ಶುಭನಕ್ಷತ್ರತತಿಯನತಿಪೂತನಲ್ಲದ ಮಾನವಂ
ಕರವೆ ನೋಡಲ್ಕರ್ಹನಲ್ಲನೆಂತಂತೆ ಬಂ
ಧುರತರೇಶಪ್ರಸಾದಮನಶುಚಿಯಾದವಂ
ಪರಿಹರಿಸವೇಳ್ಕುವಂ ಭುಂಜಿಸಲ್ಕರ್ಹನಲ್ತೇಗಳುಂ ಪರಿಭಾವಿಸೆ ೨೨

ಸಲೆ ದೀಕ್ಷಿತನ ಮುಟ್ಟಲಾಗದೆಂಬಂತೆ ಸ
ಲ್ಲಲಿತ ವಟಪತ್ರಾದಿ ಶುದ್ಧಪತ್ರಂಗಳೊಳ್
ನಲಿದು ಭುಂಜಿಸಲಾಗದೆಂಬಂತೆ ಶಂಭುಪ್ರಸಾದಮಂ ಸ್ವೀಕರಿಪುದು
ನೆಲೆಯಾಗದಶುಚಿಗಳ್ಗದುಕಾರಣಂ ಶಿವನ
ಲಲಿತವಾಕ್ಯಂ ಪೇಳಿದತ್ತು ಮನ್ನೈವೇದ್ಯ
ಮಲಘು ಕಲ್ಮಷಯುಕ್ತತತಿಗರ್ಹಮಲ್ತೆಂದು ಸಂತೋಷನಮುಣ್ಮುವಂತೆ ೨೩

ವಿತತಮಿಾಯರ್ಥದೊಳೆ ಶಿವಪುರಾಣಂ ಪೇಳ್ಗು
ಮತಿಶಯದೆ ನಿರ್ಮಲತ್ವಾದನಿಂದಿತಮೆಂದು
ಸತತಮದು ನಿರ್ಮಾಲ್ಯಮತಿನಿರ್ಮಲಂ ಶುದ್ಧಮಂತನಿಂದಿತಮೆನಿಸುಗುಂ
ಹಿತಮಾಗದದಱಿಂದಶುದ್ಧರ್ಗೆ ನೀಚಸಂ
ತ[3]ತಿಗೆ[3] ಭೋಗಿಸುವದ[4]ಕ್ಕರುಹಮ[4]ಲ್ತೇಗಳುಂ
ನುತಿಪಾತ್ರರಾದ ಶಿವಶರಣರ್ಗೆ ನಿರ್ಮಲರ್ಗದು ಭೋಗಿಸಲ್ ತಕ್ಕುದು ೨೪

ಶಿವನ ನಿರ್ಮಾಲ್ಯಮದನರ್ಹಮೆಂಬೀ ವಾಕ್ಯ
ಮವಿರತಂ ಪೇಳ್ಗುಮೇಕೆಂಬೊಡದನುಸುರ್ದಪೆಂ
ಶಿವನಿಂದಕರ್ಗಶುಚಿಗಳ್ಗೆ ಭುಂಜಿಪುದಾಗ ಭುಂಜಿಸದೊಡತಿಪಾತಕಂ
ಸವನಿಸುವುದೋವೊ ಶೂದ್ರಂ ವೇದಮಂ ಪಠಿಸ
ಲವನೆಂತಯೋಗ್ಯನೆಂತರ್ಗೆ ಪಠಿಸಿದೊಡವಂ
ತವೆ ಪಾತಕಂಬಡೆವನೆಂತಂತೆ ನೋಡಿಮೆನುತಂ ಪಂಡಿತೇಂದ್ರನೊರೆದಂ ೨೫

ಅದಱಿಂದೆ ಶುಚಿಗಳ್ಗೆ ಶಿವಭಕ್ತಿತತ್ಪರರ್ಗೆ
ವಿದಿತ ನಿರ್ಮಲಮಾನಸರ್ಗೆ ಸತ್ಕುಲಜರ್ಗೆ
ಸದಮಲಬ್ರಾಹ್ಮಣರ್ಗೆಲ್ಲಾಗಳುಂ ಶಿವನ ನೈವೇದ್ಯಮರ್ಹಮೆನಿಕುಂ

---

[1] ರ್ಧ (ಗ) [2] ನದಂ (ಜ) [3] ತಿ (ಕಜ) [4] ಕರ್ಹರುಹಮದ (ಕ) ಕರ್ಹ ಮುಮದ (ಜ)

ಇದನೊಡಂಬಡದೆ ಮತ್ತಂ ಶಿವನ ನೈವೇದ್ಯ
ಮದು ಯೋಗ್ಯಮಲ್ತು ವಿಪ್ರರ್ಗೆಂದು ಜಱಚುವೊಡೆ
ಮುದದಿಂದೆ ಪೇಳ್ವೆನೆಲ್ಲಾ ವಸ್ತುವೀಶಪ್ರಸಾದಮೆನಿಕುಂ ಭಾವಿಸೆ ೨೬

ಏಂತೆನೆಲ್ ಶ್ರುತಿ ವಿಶ್ವರೂಪೇಭ್ಯ ಎಂದು ಮ
ತ್ತಂತೆ ವಿಶ್ವಪತಿಭ್ಯ ಎಂದು ವಿಶ್ವೇಭ್ಯೆಂದು
ದಂತುಮೆ ಗಡಾ ವಿಶ್ವರೂಪಾಯಮ್ವೈಸಮೋ ಎಂದು ಸಾಱುತ್ತುಮಿರಲು
ಸಂತತಂ ರಸೆಯೊಳೊಗೆದೆಲ್ಲಾ ಪದಾರ್ಥಂಗ
ಳುಂ ತಗುಳ್ದು ಶಿವನ ತೇಜೋರೂಪದಿಂ ಬೆಳೆವು
ವೆಂತವುಂ ಶಂಭುಪ್ರಸಾದಂಗಳಲ್ತು ಸಲೆ ಪರಿಭಾವಿಸಲ್ಕಣಿಯರಂ ೨೭

ಆವುದೊಂದೇ ತತ್ತ್ವಮೆನಿಕುಮವ್ಯಕ್ತಮೆಂ
ದಾವಗಂ ನುಡಿಸಿಕೊಳ್ಗುಂ ವಿಶ್ವಮೆನಿಸುಗುಂ
ಭಾವಿಸಲನಂತರೂಪಂ ತಾಳ್ಗುಮಂತುಱಿ ಪುರಾಣಮೆನಿಕುಂ ಪ್ರಕೃತಿಯಿಂ
ಓವೋವೊ ಮೇಲೆನಿತುಮಾ ವಿಶ್ವರೂಪಾದ
ಭಾವಜಾಂತಕನಿಂದೆ ಜನಿಸಿದಾಱುಂ ರಸಂ
ತೀವಿದಾಹಾರಪಾನಾದಿಗಳ್ ಲಿಂಗಪ್ರಸಾದಮೆನಿಕುಂ ಸಂತತಂ ೨೮

ಇಂತೆಂದು ನುಡಿಗುಂ ಯದೇಕಮವ್ಯಕ್ತಮೆನು
ತಂತೆವೊಲನಂತರೂಪಂ ವಿಶ್ವಮೆನುತೆ ಮ
ತ್ತಂ ತವೆ ಪುರಾಣಂ ಎನುತ್ತೆ ತಮಸಃ ಪರಸ್ತಾದೆನುತೆ ಮನದೊಲವಿನಿಂ
ಮುಂತುವರಿದಾ ಯಜುರ್ವೇದಮುದಱಿಂ ಲೋಕ
ಸಂತತಿಯೊಳುಳ್ಳ ವಸ್ತುಗಳೆಲ್ಲಮುಭವನಿಂ
ದಂತೆ ನೈವೇದ್ಯಮಾದವು ನಿಮ್ಮ ಪಿತೃಗಳ್ಗೆ ಯೋಗ್ಯವಸ್ತುವದಾವುದೊ ೨೯

ಅದಱಿಂದೆ ನೈವೇದ್ಯಮರ್ಹಮಲ್ತೆಂದು ಸ
ಮ್ಮುದದಿಂ[1]ದೆ ನುಡಿವ[1] ವಿಪ್ರರ್ಗೆಲ್ಲಿಯುಂ ಮಲಂ
ವಿದಿತ ಶಿವನೈವೇದ್ಯಮಲ್ಲದು[2]ದದೊಂದು ವಸ್ತ್ವನೀಕ[2]ಮುವನಿಯೊಳಗೆ
ಬೆದಕಿದೊಡಣಂ ದೊರಕದೆಂದು ಮನದೊ[3]ಳ್ವಲಂ[3]
ಪುದಿಯೆ ಗುರುಮಲ್ಲಿಕಾರ್ಜುನಪಂಡಿತೇಂದ್ರನತಿ
ಮುದದಿಂದೆ ನುಡಿದು ಮತ್ತಂ ದ್ವಿಜಸಮೂಹಕ್ಕೆ ನುಡಿದನುನ್ನತ ಘೋಷದೆ ೩೦

1 ದ ನುಡಿದ (ಕಜ) 2 ದೊಂದೇನುಂ ಪದಾರ್ಥಚಯ (ಜ) 3 ಳಲಂದು (ಗ)

. ಪಿತನ ತನುವೇ ಸುತನ ತನುವಪ್ಪುದೆಂದು ವಿ
ಶ್ರುತವೇದವೆನಸುವಂಗಾದೆನುತೆ ಮತ್ತೆಯುಂ
ವಿತತವಂಗಾತ್ಸಂಭವ[1]ಸಿ[1] ಎನುತೆ ಮತ್ತೆ ಪಿತನೇ ತನಯನಪ್ಪನೆಂದು
ಶ್ರುತಿಯೆ ಆತ್ಮಾ ವೈ ಎನುತ್ತೆ ಮತ್ತಂ ನಲಿವು
ತತಿಶಯಡೆ ಪುತ್ರನಾಮಾಸೀ ಎನುತೆ ಮಹೋ
ನ್ನತಿಯಿಂದೆ ನುಡಿಗುವಮಾ[2]ವೇದ ಮುದದಿಂ[2] ಶಿವನ ದೇಹದಿಂದಂ ಜನಿಸಿದ ೩೧

ಎಸೆವಷ್ಟಮೂರ್ತಿಗಳೆ ಸತತಂ ಚರಾಚರಕೆ
ವಿಸುಗುವ ನಿಮಿತ್ತಕಾರಣಮಾಗಿ ತೋಱುಗುಂ
ನಿಸದವುವಱುತ್ಪತ್ತಿಯೆಂತೆಂಬೊಡುಸುರ್ದಪೆಂ ಕೇಳಿರೆಲೆ ಭೂಸುರರಿರ
ಎಸಕದಿಂ ನೀವೋದುವಾದಿರುಕ್ಕಿನೊಳೆ ರಾ
ಜಿಸುವ ಬ್ರಾಹ್ಮಣದಗ್ರಖಂಡದೊಳಗೆಯ್ದೆ ಸೊಗ
ಯಿಸುತೆ ಬಳಿಕೋನ್ನಮೋ ಭಗವತೇ ರುದ್ರಾಯ ಎಂದಣಿಯರಂ ಘೋಷಿಪ ೩೨

ಪುರುಷಸೂ[3]ಕ್ತಿಯೊ[3]ಳೆ ಭವಚರಣಾಂಬುಜಕ್ಕೆಱಗಿ
ಪಿರಿದು ಜಗದುತ್ಪತ್ತಿಯಂ ಸೂಚಿಸೆಡೆಯೊಳಗೆ
ನಿರುತದಿಂದಂ ಯಜುರ್ವೇದವದು ತತ್ಪುರುಷ ಮಾಹಾತ್ಮ್ಯಮಂ ಪೊಗಳುತೆ
ಇರದುಱ[3] ಸಹಸ್ರಶೀರ್ಷಾಪುರುಷ ಎಂದು ಮ
ತ್ತುರುಸಹಸ್ರಾಕ್ಷ ಎನು[4]ತುಂ[4] ವಿಶ್ವತೋವೃತ್ತ
ಮರರೆ ಎನುತತ್ಯತಿಷ್ಠದ್ದಶಾಂಗುಲಮೆನುತೆ ಮತ್ತಮೊಲ್ದುಪನಿಷತ್ತು ೩೩

ಲಲಿತ ಪಂಚಬ್ರಹ್ಮ ಪುರುಷಂ ಎನುತ್ತೆ ಮ
ತ್ತೊಲವಿನಿಂ ಕೃಷ್ಣಪಿಂಗಲಮೆನುತೆ ನಾಡೆ ಸ
ಲ್ಲಲಿತ ತತ್ಪುರುಷಾಯವಿದ್ಮಹೇ ಎನುತೆ ಮತ್ತಂ ಸಾಮವೇದವೊಸೆದು
ಸಲೆ ಮಹಾಪುರುಷಾಯ ಎನುತಿಂತು ಪೊಗಳ್ವ ಸ
ದ್ವಿಲಸಿತಾಮ್ನಾಯದ ಪೊಗಳ್ತೆಗೆಯ್ದದ ಮಹೋ
ಜ್ವಲದುಮಾನಾಥನಾ ಸರ್ಗದುತ್ಪತ್ತಿಕಾರಣಮಾದ ತನ್ನ ತನುವ ೩೪

ವಿನಯದಿಂ ನೋಡೆ ಮತ್ತಷ್ಟಮೂರ್ತಿಗಳೊಗೆದು
ವೆನಿಕುಂ ಸ ಈಕ್ಷತೇ ಲೋ[5]ಕಾಂಶ್ಚ ಎಂಬ ಶ್ರುತಿ[5]
ಮಿನುಪಷ್ಟಮೂರ್ತಿಗಳ್ ಪುಟ್ಟಿದೆಡೆಗಳನುಸುರ್ದಪೆಂ ಕೇಳಿಮೆನುತೆ ಪೇಳ್ದಂ

---

[1] ತಿ (ಜ) [2] ನಂದದಿಂದಂ (ಕಜ) [3] ಕ್ತದೊ (ಕಜ) [4] ತಂ (ಕಜ) [5] ಕಾಯಂಬ ಶ್ರುತಿ (ಕ) ಕಾಯೆಂಬ ಸಚ್ಛ್ರುತಿ (ಜ)

ಜನಿಸಿದಂ ಶಿವನ ನೇತ್ರದೆ ಸೂರ್ಯನಮೃತರುಚಿ
ಮನದೆ ಮುಖದಿಂದಗ್ನಿ ಪಾದದಿಂ ಭೂಮಿ ನೆ
ಟ್ಟನೆ ನಾಸಿಕದೆ ವಾಯುವಾತ್ಮನಿಂದಾತ್ಮವಿಂದ್ರಿಯದಿನುದಕಂ ಪುಟ್ಟಿತು ೩೫

ಸಲೆ ನಾಭಿಯಿಂದಂತರಿಕ್ಷಮೊಗೆತಂದತ್ತು
ಲಲಿತ ಕರ್ಣದೆ ದಿಕ್ಕುಗಳ್ ಜನಿಸಿದುವುವೆಂದು
ನಲಿದು ವೇದಂ ಚಕ್ಷುಷಾ ಸೂರ್ಯ ಎಂದು ಮನಸಶ್ಚಂದ್ರಮಾ ಎನುತ್ತೆ
ಒಲವಿನಿಂದಂ ಮುಖಾದ್ವಾಯೋಗ್ನಿ ಎನುತೆ ಮ
ತ್ತಲರ್ದ ಪದ್ಭ್ಯಾಂ ಭೂಮಿ ಎನುತೆ ಸಂತೋಷದಿಂ
ಜಲಕನಾ[1]ತ್ಮನನಾ[1]ತ್ಮನೋ ಎನುತೆ ರೇತ[2]ಸಿ ಎನುತ್ತು[3]ಮಾಪೋ ಎನುತ್ತೆ ೩೬

ರೀತಿಯಿಂದಂ ಷುತ್ತೆ ನಾಭ್ಯಾ [3]ಎ[3]ನುತ್ತುಮಂ
ತಾತತಾಸೀದಂತರಿಕ್ಷಂ ಎನುತ್ತೆ ಸಂ
ಪ್ರೀತಿಯಿಂ ನುಡಿಗುಮಿಂತಭವನಯನದೆ ಜನಿಸಿದರ್ಕನಂಗದೊಳಾವಗಂ
ಓತು ಶಿವಮೂರ್ತಿ ಸಂಕ್ರಮಿಸಿರ್ಪುದದಱಿಂದ
ಮಾ ತರಣಿ ಶಿವನೆ ಅಪ್ಪಂ ನೋಡಿಪೆಂದು ವಿ
ಖ್ಯಾತಮಾ ಶ್ರುತಿ ಸೂರ್ಯೋಽಪಿ ಎನುತಂ ನುಡಿಗುಮಂತೆ ಸದ್ಭಾಷ್ಯಮೊಸೆದು ೩೭

ಅನವರತಮೊಲ್ದು ಭೂತಾನಾಮೆನುತ್ತೆ ತೊ
ಟ್ಟನೆ ಪದಾರ್ಥಾನಾಂ ಸಮಾಕರ್ಷತೀತಿ ಎಂ
ದನುತೆ ಪೇಳ್ದಂತೆ ಸರ್ವಪದಾರ್ಥ ಭೂತರಸನಿಕರಮಂ ಮಾರ್ತಾಂಡ[4]ನು[4]
ಸನಯದಿಂದಾಕರ್ಷಿಸಲ್ಪಟ್ಟು ಮಿಕ್ಕ ರಸ
ಮನಿತು ರವಿಭುಕ್ತಶಿಷ್ಟಪ್ರಸಾದಂ ತಾನ
ದೆನಿಸಃಗುಮದಂ ರಸಮನಂತರ್ಹಮಲ್ತೆಂದು ಬಿಡುವುದುಚಿತಂ ದ್ವಿಜರ್ಗೆ ೩೮

ತರಣಿಹೃದಯದೊಳಿಯ್ದೆ ಕನಕಸ್ವರೂಪದಿಂ
ಪರಮೇಶ್ವರ ಪ್ರೀತಿಯಿಂದಿರುತುಮಾ ಸೂರ್ಯ
ನುರುಕಿರಣಜಾಲದಿಂದಂ ಸಮಸ್ತಪದಾರ್ಥರಸನಿಕರಮಂ ಪೀರ್ವನು
ನಿರುತಮಿದು ಯೋಽ ಸೌತಪನ್ನುದೇತಿ ಎನುತ್ತೆ
ಭರದೆ ನುಡಿಗುಂ ಮತ್ತೆ ಶ್ರುತಿಯಿದಱಿಂ ತೋರ್ಪ
ವರಪದಾರ್ಥಂಗಳೆಲ್ಲಂ ಶಿವೋಚ್ಛಿಷ್ಟಮಿನ್ನಿವನಂಟದೊಡೆ ದೋಷವು ೩೯

1 ತ್ಮನ ಅ (ಗ) ತ್ಮಾನಾ (ಜ) 2 ಸೇಂ ಎನತು (ಕ) ಸೋ ಎನತು (ಜ) 3 ಮೆ (ಜ) 4 ನಿಂ (ಜ)

ಸಲೆ ತಂಡುಲೈರ್ಜುಹೋತಿ ಎನುತ್ತೆ ಮತ್ತೆ ಸ
ಲ್ಲಲಿತ ಲಾಜೈರ್ಜುಹೋತಿ ಎನುತ್ತೆ ನುಡಿಗುಮು
ಜ್ವಲ ವೇದವಕ್ಕಿಯಿಂದರಳ್ಗಳಿಂದಗ್ನಿಗಾಹುತಿಗುಡಲ್ ಪಿತೃನಿಕರವು
ನಲಿದು ಕೊಂಬುದೊ ಬಳಿಕ್ಕೋಕರಿಪುದೋ ಇದಱ
ನೆಲೆಯಾವುದಾಯುಕ್ಕಿ ಶಿವನ ನಿರ್ಮಾಲ್ಯಮೆಂ
ದುಲಿಗುಮಾ ವೇದತತಿ ತಂಡುಲಾದೀನಾಮೆನುತ್ತೆ ಸಂತೋಷದಿಂದಂ ೪೦

ಇದುಮಲ್ತು ಬಳಿಕಿನ್ನು ಕೇಳಿರೆಲೆ ವಿಪ್ರರಿರ
ಮದನಾರಿ ರೇತಸ್ಸಿನಿಂದಮಾಯುದಕತತಿ
ಯುದಯಿಸಿತ್ತೆಂದು ಜಲರೂಪೀ ಮಹಾದೇವ ಎನುತೆ ಶ್ರುತಿಮಿಗೆ ಘೋಷಿಕುಂ
ಅದಱಿಂದೆ ದಕ್ಷಿಣಾಯನ ಸೂರ್ಯಕಿರಣದಿಂ
ದೊದಗಿದಭ್ರಗೃಹೀತಮುಕ್ತಜಲಮೀಶ್ವರನ
ಪದಸಲಿಲಮಿನ್ನೆಂತದಂ ಕೊಂಬುದರ್ಕೆ ಯೋಗ್ಯಂ ದ್ವಿಜಾನೀಕಕನಿಶಂ ೪೧

ಬಳಿಕಮಾ ಜಲತತಿಗಳೇ ಸರ್ವಭೂತಂಗ
ಳುಳಿದ ಪಶುಗಣಮನ್ನಮಮೃತಮಿಂತೆಲ್ಲಮು
ಜ್ವಲ ಜಲಂಗಳೆ ಪಿತಾಮಹನ ವಿಷ್ಣುವಿನ ಸಂಪನ್ನಿಕಾಯಂಗಳೆಲ್ಲಂ
ಪೊಳೆವ ನಕ್ಷತ್ರಂಗಳುಂ ವೇದಸವಿತಿಯುಂ
ಮಿಳಿರ್ವ ಜಲಮಯಮೆಂದು ನೀವೋದಿ ಮಱೆದುದಂ
ತಿಳಿಯೆ ಪೇಳ್ವೆಂ ಕೇಳಿರೆಲೆ ವಿಪ್ರರಿರ ಮನಂದಂದು ಶ್ರುತಿವಚನಚಯಮಂ ೪೨

ಪಿರಿದುಮಾಪೋವಾ ಇದಂ ಸರ್ವಮೆನುತೆ ಬಂ
ಧುರದಿಂದೆ ವಿಶ್ವಭೂತಾನ್ಯಾಪ ಎನುತೆ ಮ
ತ್ತಿರವೆ ಪಶವಾಪನ್ನಮಾಪೋ ಎನುತ್ತಮೃತಮಾಪಃ ಎನುತ್ತೆ ಮತ್ತೆ
ನಿರುತದಿಂದಂ ವಿರಾಡಾಪಃ ಸ್ವರಾಡಾಪ
ಯಿರದಿಂತೆನುತ್ತೆ ಘೋಷಿಸುತಿರ್ಪ ಶ್ರುತಿವಚನ
ದಿರವನಱಿಯದೆ ಬಱಿದೆ ಜಱೆಚುವಿರಿ ಬಳ್ಳಗಳ ತೆಱದಿಂದನುನವರತವು ೪೩

ಇಂತು ಶ್ರುತಿವಚನದಿ ಸಮಸ್ತ ಜಲನಿಕರಮುಂ
ಕಂತುಹರಚರಣಾಭಿಷಿಕ್ತ ಪ್ರವಾಹಮೇ
ಯೆಂತಮುಂ ವಿಶ್ವವಿಶ್ವಂಭರಾನ್ವಿತ ಪುಣ್ಯತೀರ್ಥಜಲನಿಕರಂಗ[1]ಳು[1]

---
1 ಳುಂ (ಜ)

ಸಂತತಮನನರ್ಹಂಗಳಕ್ಕನಂತಾದೊಡಿ
ನ್ನಂತೆ ತೀರ್ಥಸ್ನಾನಮಂ ಮಾಡೆ ಪಾಪಂಗ
ಳುಂ ತವಿಕುಮೆಂಬ ವೇದಪ್ರಮಾಣಂ ಕಿಡುಗುಮತಿಶಯಂ ಭಾವಿಸುವೊಡೆ ೪೪

ಕೇಳಿರೆಲೆ ವಿಪ್ರರಿರ ಬಳಿಕಿನ್ನುಮಾಪಗಂ
ಭಾಳಲೋಚನ ನಾಸಿಕೋದ್ಗತ ಪ್ರಾಣಸ
ಮ್ಮೇಳನದೆ ಜನಿಸಿದನಿಲಂ ವಾತರೂಪೇಣ ಶಂಭುನಾ ಎಂಬ ಶ್ರುತಿಯ
ಆಳಾಪದಿಂ ಹರನೆ ಅಪ್ಪನಂತದಱಿನಾ
ಗಾಳಿಯಿಂದಂ ಗೃಹೀತಂ ದಲಾದಾಪೋದ
ದೋಳಿಯುಳ್ಳಲರ್ಗಳೆಲ್ಲಂ ದೇವಪೂಜಾರ್ಥಕನರ್ಹಂಗಳ್ ಭಾವಿಸೆ ೪೫

ಅಂತಾದೊಡೀಶನಂ ಭಕ್ತಿಯಿಂದಂ ಪುಷ್ಪ
ಸಂತತಿಯಿನೆಂತಪ್ಪನೊಡೊಡಂ ಪೂಜಿಸಲ್
ಮುಂತೆ ಪುಟ್ಟ[1]ಳಿದು[1] ಪೋಕುಂ ಪುಣ್ಯಮೆಯ್ದುಗುಂ ತತ್ಕುಸುಮಫಲದಿನೆಂದು
ಅಂತು ಕುಲಕೋಟಿಂ ಸಮುದ್ಧರೇದೆಂದೊಸೆದು
ಸಂತತಂ ನುಡಿವಾಗಮಂ ವ್ಯರ್ಥಮಕ್ಕುಮಿ
ನ್ನುಂ ತಗುಳ್ದು ಕೇಳಿರೆಲೆ ವಿಪ್ರರಿರ ವೇದಂಗಳುಸುರ್ದ ಸದ್ವಾಕ್ಯಂಗಳಂ ೪೬

ಭವನ ಮನದಿಂ ಜನ್ಮಿಸಿದ ಕಲಾನಿಧಿಯಿನು
ದ್ಭವಿಸಿದ ಸುಧಾಸಾರಪೂರಮಂ ದೇವತಾ
ನಿವಹಮೊಸೆದೀಂಟಿ[2]ಯುಜ[2]ರಾಮರತ್ವಮನೆಯ್ದಿ [3]ಸುಖದೆ ಬಾಳ್ದಿ[3]ರದೆ ಸತತಂ
ಶಿವನಿಂದೆ ನಿರ್ಮಾಲ್ಯಮಾದ ಚಂದ್ರನ ಕಿರಣ
ದಮಿರಳಾಮೃತರಸದೆ ಬೆಳೆದ ತದ್ವ್ರೀಹಿಗಳ್
ಶಿವನ ನಿರ್ಮಾಲ್ಯಮಕ್ಕುಂ ದೇವತಾಯೋಗ್ಯಮಾಗ[4]ದವು[4] ಪೋಗವೇಡಾ ೪೭

ಹರವದನ [5]ನಿಸ್ಸೃತ ವಿಘಸಿ ಭೂತ[5]ಮಾದ ಬಂ
ಧುರಶಬ್ದರೂಪದಿಂ ವೇದಾಗಮಂಗಳುಜಿತ
ವರಿಸುಗುಂ ತಚ್ಛಬ್ದನಿಕರಂಗಳೆಲ್ಲಮೀಶಪ್ರಸಾದಂ ದಲೆನಿಕುಂ
ನಿರುತಮಾಮ್ನಾಯಾದಿ ಶಾಸ್ತ್ರಮಂ ಪಠಿಸಿದೊಡ
ವಿರದೆ ಶಿವನಿರ್ಮಾಲ್ಯಮಂ ಕೊಂಡ ತೆಱನಪ್ಪು
ದರಿ[6]ದ[6]ದಱಿನಾ ವೇದಪಾಠಮುಮನರ್ಹಮಾ ವಿಪ್ರಸಂತತಿಗೆಂಬುದು ೪೮

---

[1] ಜಿತು (ಗ) [2] ಯಜಯಜ (ಕ) [3] ಸುಖದೊಳಿ (ಕ) ಬಹುಸುಖದೊಳಿ (ಜ)
[4] ದಜ (ಗ) [5] ನಿಸ್ಸೃತ ಘನೀಭೂತ (ಜ) [6] ದಿ (ಗ)

5

ಜಗನೆಯ್ದೆ ಶಬ್ದದಿಂದಂ ಪ್ರವರ್ತಿಪುದೆಂದು
ಬಗೆದು ಶಬ್ದವಿವರ್ತವೆಂದು ಜಗದೇಕದೆಂ
ದಗಲದೆ ಪ್ರಪಂಚ[1]ರೂಪೇ[1] ಎಂದು ಶ್ರುತಿ[2]ಯತಿಶಯಂ[2] ಪೇಳು[3]ತಿ[3]ರ್ಕುಮನಿಶಂ
ಮಿಗೆಯದಱಿಂನೀ ಪ್ರಪಂಚದ ಕಾರ್ಯಮೆಲ್ಲಮಂ
ತೆಗಳೆಂದು ವಿಪ್ರನಣಿಯರನುಸಿಕನಿರವೇಳ್ಕು
[4]ವೊ[4]ಗೆದ ಭೂಶಬ್ದರೂಪಂ ಶಬ್ದಮದು ಶಿವನ ನಿರ್ಮಾಲ್ಯಮಾದ ಕತದಿಂ ೪೯

*ಪರಮಾತ್ಮನೊಳಗಾತ್ಮನೊಗೆದು ಮತ್ತೀಕಾತ್ಮ
ನಿರವೆನಿಸಿ ನಿಖಿಲಜಂತುಗಳೊಳಗೆ ತಾನಗಲ
ದಿರುತೀಶನವಕೆ ಚೈತನ್ಯಸ್ವರೂಪನಾಗೆಳಸಿ ಮತ್ತಾಯಾತ್ಮನಿಂ
ವರ ಚರಾಚರಭೂತಜಾತಂಗಳೆಲ್ಲವಂ
ನಿರುತದಿಂ ಜೀತರಿಸುವಂತೆ ಮಾಳ್ಪಂದವೆಂ
ದುರುತರಾಮ್ನಾಯಮೆಲ್ಲಾಗಳುಂ ಘೋಷಿಸುಗುಮೆಂತೆಂಬೊಡದನುಸುರ್ದಪೆಂ ೫೦

ಪಿರಿದು[5]ಮಾತ್ಮಾನಮಾತ್ಮ[5]ನೋ ಎನುತೆ ಮತ್ತೆ ನಿ
ರ್ಭರದಿಂದಣೋರಣೀಯಾನೆನುತುಮನವರತ
ಮಿರದೆ ಮಹತೋ ಮಹೀಯಾನೆನುತ್ತಾತ್ಮಾ ಗುಹಾಯಾಂ ಎನುತ್ತೆ ಮತ್ತೆ
ಭರದೆ ನಿಹಿತೋಸ್ಯಜಂತೋ ಎನುತೆ ನುಡಿವ ಭಾ
ಸುರ ವೇದಮಾನದಿಂ ದೇಹದೊಳಗಿರ್ಪಾತ್ಮ
ನುರುತರೇಶಪ್ರಸಾದವೆನಲ್ಕೆ ನಿರ್ಮಾಲ್ಯವೆಂತನರ್ಹಂ ದ್ವಿಜರ್ಗೆ ೫೧

ಶಿವಮುಖೋದ್ಗತ ವಾಕ್ಯದಿಂ ಜನಿಸಿದಗ್ನಿ ಮ
ತ್ತ್ರವಿಕಲಂ ರುದ್ರ [6]ಎ[6]ನುತಂ ಯಜುಸ್ಸೂಕ್ತಿಯದು
ಸುವಿವೇಕದಿಂದೆ ರುದ್ರೋವಾ ಎನುತ್ತೆ ಮತ್ತೇಷೋಯದಗ್ನಿ ಎನುತೆ
ಸವಿನಯದೆ ಮತ್ತಮಗ್ನಿರ್ನಾಮ ರುದ್ರ ಎಂ
ದವಿರತಂ ನುಡಿಗುಮದಱಿಂ ರುದ್ರರೂಪಾದ
ತವೆಯಗ್ನಿಯಿಂದೆ ಪಾಕಂಬಡೆದ ಸುರಸಪಕ್ವಾನ್ನಾದಿನಿಕರಂಗಳು ೫೨

ಭರದೆ ತತ್ಸರ್ವಂ ಶಿವೋಪಭುಕ್ತಂ ಎಂಬ
ಪರಮವಾಕ್ಯಪ್ರಮಾಣದೆ ಪಾಕಮಾದ ವ್ಯದು
ತ್ತರ ಸರಳಪಕ್ವಾನ್ನಮೀಶಪ್ರಸಾದಮೆನಿಕುಂ ಮೆತ್ತದೆಂ[7]ತೆ[7] ನಿಮ್ಮ

[1] ರೂ (ಗ) [2] ಯತಿಯತಂ (ಕ) ತತಿಯದಂ (ಜ) [3] ತ್ತಮಿ (ಗ) [4] ಮೊ (ಜ)
[5] ಮಾತನ ಆತ್ಮ (ಕ) [6] ನೆ (ಗ) [7] ತು (ಜ)

* (ಜ) ಪ್ರತಿಯಲ್ಲಿ ೫೦ನೆಯ ಪದ್ಯದ ಮೊದಲ ಮೂರು ಪಾದಗಳಿಲ್ಲ.

ಪರದೇವತೋಪಹಾರಕ್ಕತಿಥಿತರ್ಪಣಕೆ
ವರವೈಶ್ವದೇವರ್ಗೆ ಪ್ರಾಣಾಗ್ನಿಹೋತ್ರಕ್ಕೆ
ಪಿರಿದು ಧರ್ಮಕ್ಕನರ್ಹಂ ಮತ್ತೆಯುಂ ಕೇಳಿರೆಲೆ ವಿಪ್ರಪುಲ್ಕಸರಿರ ೫೩

ಧರಣಿಯೊಳಗುಳ್ಳನ್ನನಿಕುರುಂಬವೆಲ್ಲಮಿಾ
ಶ್ವರನ ನೈವೇದ್ಯಮೆನುತಾವಗಂ ಶ್ರುತಿನಿಕರ
ಮುರುತರ ನಿನಾದದಿಂ ಪೇಳ್ಗುಮೆಂತೆನೆ ಸರ್ವಮನ್ನಂ ಎನುತ್ತೆ ಮತ್ತಂ
ಪಿರಿದು ರುದ್ರೋಚ್ಛಿಷ್ಟಮೆನುತುಮುದಱಿಂ ಮತ್ತೆ
ಪರಮೇಶ್ವರೋಚ್ಛಿಷ್ಟಮಲ್ಲದ ಪದಾರ್ಥತತಿ
ಧರೆಯೊಳಿನಿಸೊಳವೆ ಶಿವನೈವೇದ್ಯಮಿನ್ನೆಂತನರ್ಹಮೆಲೆ ಪುಲ್ಕಸರಿರ ೫೪

ಇದುಕಾರಣಂ ಧರೆಯೊಳೊಗೆದು ಸತತಂ ತೋರ್ಪ
ಸದಮಲ ಪದಾರ್ಥಸಮುದಾಯಂಗಳೆಲ್ಲವುಂ
ವಿದಿತ ಶಿವಪಾದೋದಕ ಪ್ರಸಾದಂಗಳೆನಿಸುಗುಮುಮವಱಿನನ್ಯಮಿನಿತುಂ
ಪದೆದು ಜನಿಯಿಸವೆಂದು ವೇದೋಕ್ತಿಯಿಂ ತಿಳಿದು
ಮೊದಲೆ ಶಿವನೀಕ್ಷಿಸಿದ ನೈವೇದ್ಯಮಂ ಮನೋ
ಮುದದೆ ನಿಜರಸನೆಯೊಳ್ ಶೂಲಿಗರ್ಪಿಸಬಲ್ಲನವನೆ ಸದ್ಭಕ್ತನನಿಶಂ ೫೫

ಪಿರಿದುಮಿಾಯರ್ಥಮಂ ಸದ್ವಾಕ್ಯಮುಮಂ ಪೇಳ್ಗು
ಮಿರದೆ ನೈವೇದ್ಯಂ ಎನುತ್ತೆ [1]ಪ[1]ರತೋನ್ಯಸ್ತ
ಮುರುದರ್ಶನಾತ್ ಸ್ವೀಕೃತಂ ಮಯಾ ಎನುತೆ ಮತ್ತೀ ವಾಕ್ಯಮಾನದಿಂದೆ
ನಿರುತ ಸದ್ಭಕ್ತಹೃನ್ಮಧ್ಯಸ್ಥನಪ್ಪ ಭಾ
ಸುರ ಭಕ್ತವಾತ್ಸಲ್ಯನಪ್ಪ ಸತ್ಪ್ರಾಣಾದಿ
ಮರುತಸ್ವರೂಪನೆನಿಸುವ ಶಿವನ ಪ್ರೀತ್ಯರ್ಥಭಾವಸಂಯುಕ್ತನಾಗಿ ೫೬

ವಿನಯದಿಂ ಪ್ರಾಣಾಗ್ನಿಹೋತ್ರಪಿತೃದೇವರ್ಗೆ
ಮನವೊಲ್ದು ಕೊಟ್ಟತಿಥಿಸಂತರ್ಪಣಂ ಮಾಡಿ
ಘನಪೂತವಪ್ಪ ಶಿವ[2]ಭುಕ್ತಶೇಷಪ್ರಸಾದಂ ವಿಪ್ರತತಿಗರ್ಹವು
ಎನೆ ವಿಪ್ರಸಮಿತಿ ನುಡಿದುದು ಪಂಡಿತೇಂದ್ರ ನೀ
ನನುವದಿಸಿದಂತೆ ತಪ್ಪದು ರಸೆಯೊಳೊಗೆದು ತೊ
ಟ್ಟನೆ ತೋರ್ಪ ಸಕಲ ವಸ್ತ್ವಾನೀಕಮಾಶಪ್ರಸಾದಮಪ್ಪೊಡೆ ಲೇಸದು ೫೭

---

[1] ಪು (ಜ)  [2] ಭ (ಕಜ)

ಭುವನದೊಳಗೆಸೆವ ಪುಲ್ಕಸದೇಹಿಗಳುಮೆಯ್ದೆ
ಶಿವನ ಲಲಿತಪ್ರಸಾದಿಗಳಕ್ಕುಮಂತೆಂದು
ತವೆ ಕಟಕಿಯುಂ ಮತ್ತೆ ನುಡಿಯೆ [1]ಕಿಸುಗಣ್ಣೆ[1] ನುಡಿದಂ ಪಂಡಿತೇಂದ್ರನವರ್ಗೆ
ತವಕದಿಂ ಶೈವೋಕ್ತ ದೀಕ್ಷೆಯಿಲ್ಲದ ನರ
ರ್ಗವಿರತಂ ಮಲದೂಷಿತರ್ಗೆ ನೀಚರ್ಗೆ ಸಂ
ಭವಿಸದೀಶಪ್ರಸಾದಂ ತಾನದೆಂಬ ಸದ್ವಾಕ್ಯಮಂ ಕೇಳಿಮೆನುತೆ ೫೮

ಪಿರಿದುಂ ಮಹೇಶ್ವರಕೃತಂ ಸರ್ವಮೆಂದು ಮು
ತ್ತಿರೆ ಯೇನ ಭಕ್ತಾ ಮಹೇಶ್ವರಾ ಎಂಬ ನುಡಿ
ಯಿರೆ ಕೃತಘ್ನಾ ಭವಿಷ್ಯಂತಿ ಎಂಬೀ ವಾಕ್ಯವಿಸರಮೊಸೆದನವರತವು
ನಿರುತದಿಂ ನೀಚರಂ ಮುಟ್ಟದೆನಸುಂ ಮಹೇ
ಶ್ವರ ಸುಪ್ರಸಾದಮಂ[2]ತೆವೊಲಿ(ದ)[2]ಶ್ವರಂ ವಲಂ
ಭರದಿನವರಂ ಮುಟ್ಟೆನೆಂದು ಪೇಳ್ಗುಂ ಕೇಳಿಮಿನ್ನುಮೀಯರ್ಥದಿರವಂ ೫೯

ಮಲಹರನ ನಿರ್ಮಾಲ್ಯಮದು ಶುದ್ಧಮುಂತೆ ನಿ
ರ್ಮಲಮದರಿನಾವಗಂ ಮಿಗೆ ಶುದ್ಧನಪ್ಪ ನಿ
ರ್ಮಲನಪ್ಪ ಮಾನವಂಗದು ಯೋಗ್ಯಮುಳಿದ ಮಲದೇಹಿಗಳಿಗದು ಸಂತತಂ
ಸಲೆ ಧರಿಸಲುಂ ಭುಂಜಿಸಲುಮಂತೆ ನೋಡಲುಂ
ನಲಿದು ಮುಟ್ಟಲುಮರ್ಹಮಲ್ತೆಂದು ಪೇಳ್ದ ಸ
ಲ್ಲಲಿತ ವಾಕ್ಯಂಗಳಂ ಕೇಳಿರೆಲೆ ವಿಪ್ರರಿರ ಕಾದಲ್ಮೆಯಿಂದಣೆಯರಂ ೬೦

ಬಳಿಕೆ ಮಲದೇಹೀನಧಾರಯೇದೆನುತೆ ಮುಂ
ತಳೆ ನ ಭುಂಜೀಯಾ ಎನುತ್ತೆ ಮನದೊಳಗಿನಿಸು
ಪೆಳಲದೆ ನದರ್ಶನೀಯಾ ಎನುತೆ ನೋಪಸ್ಪೃಶೇದೆನುತೆ ನುಡಿಗುಮದರಿಂ
ಲಲಿತ ಶಿವದೀಕ್ಷೆಯುಂ ಪಡೆದ ಸದ್ಭಕ್ತಂಗೆ
ಪೊಳೆವ ಶಿವನಿರ್ಮಾಲ್ಯ[3]ಮಾರ್ಹ[3]ಮೆಂದಾವಗಂ
ಲುಳಿತ ವಾಕ್ಯಂ ನಿರ್ಮಲತ್ವಾಚ ನಿರ್ಮಾಲ್ಯಮೆಂದು ನುಡಿಗುಂ ಸಂತತಂ ೬೧

ಮಿಸುಪ ವಾಕ್ಯಂ ಪಶೂನಾಮಧಿಪತಿಃ ಎನು
ತ್ತೊಸೆದು ನುಡಿದಂತೆ ಪಶುಗಳ್ಗೊಡೆಯನಾಗಿ ರಾ
ಜಿಸುವ ರುದ್ರನೆ ನಿನ್ನ ಕರುಣಿತು ಮತ್ತೀ ಪಶುವನೀಗ ಬಂಧಂಗೆಯ್ವೆನು

---

1 ಸುಗುಣೆ (ಕಜ) 2 ಮತ್ತೆವೊಲೀ (ಕ) ಮತ್ತೀ (ಜ) 3 ಮಾಹ (ಕ)

ಮಿಸುಗುತ್ತಿಪ್ಪಂ ಪಶುಂ ಪಶುಪತೇ ಆದ್ಯ ಎಂ
ದಸದಳಂ ಬಧ್ನಾಮಿ ಎನಿಪ ವಾಕ್ಯಂಗಳಿಂ
ದೆಸೆವ ಯಜ್ಞಂ ಶಿವನ ಸುಪ್ರಸಾದಂಗೊಳ್ಪುದೆನಲುಳಿದಪರ್ಗಾಗದೆ ೬೨

ಜನ್ನಕ್ಕೆ ಪತಿಯಾದ ರುದ್ರನಿಂ ಸೇವಿಸಿದ
ಸನ್ನುತಾಮಲ ಹವ್ಯಮಂ ದೇವತಾನೀಕ
ಮುನ್ನತೋನ್ನತ ಭಕ್ತಿಯಿಂ ಭುಂಜಿಸುವುದೆಂದು ಶ್ರುತಿನುಡಿಗುಮೆಂತೆಂಬೊಡೆ
ಸನ್ನಿದಂ ಜು[1]ಷ್ಟಂ[1] ಎನುತ್ತೆ ದೇವಾನಾಮಿ
ದನ್ನಾಡೆ ಎನುತಸ್ತುಹವ್ಯಂ ಎನುತ್ತುಮು
ತ್ಪನ್ನಮತಿಯಿಂ ಮುನ್ನೆ ಜುಷ್ಟಂ ಎನಿಪ್ಪ ಧಾತ್ವರ್ಥ ನಾನಾರೂಪವು ೬೩

ಸಲೆ ಜುಷ ಪ್ರೀತ್ತಿ ಸೇವನಯೋ ಎನುತ್ತೆ ಮ
ತ್ತೊಲವಿನಿಂ ದೀವರೊಳಗೆಸೆವನಾರ್ಥಮನಿಲ್ಲಿ
ನೆಲೆಗೊಳಿಸೆ ಜುಷ್ಟಂ ಎನಿಪ್ಪ ಶಬ್ದಕ್ಕೆ ಮತ್ತದಱಿಂದ ದೇವತೆಗಳು
ನಲಿದು ಸೇವಿಸುತಿರ್ಪರೀಶಪ್ರಸಾದಮಾ
ದಲಘು ಹವ್ಯಮನೆನುತೆ ವೇದಮುಸುರಿತ್ತು ನಿ
ರ್ಮಲತರೇಶಃ ಪ್ರಸಾದಂ ದೇವಯೋಗ್ಯಮೆನೆ ಸತ್ಕ್ರಿಯೆಗದೆಂತಾಗದೊ ೬೪

ಸುಲಲಿತ ಪ್ರಾಣಾಗ್ನಿಹೋತ್ರಕ್ಕೆ ಜೀವಸಂ
ಕುಲಕೆ ಯಜ್ಞಾವಲಿಗೆ ಸಲ್ಗುಮೆಂದನವರತ
ಮುಲಿಗುಮಗ್ನೀ ಎಂದು ಸುಕೃತಸ್ಯ ಮಧ್ಯನನುಮನ್ಯಸ್ವ ಎಂದು ಮತ್ತಂ
ನಲಿದು ಸುಯುಜಾಯುಜಾಮಃ ಎಂಬ ಶ್ರುತಿವಾಕ್ಯ
ದೊಲವಿನಿಂ ಪ್ರಾಣಾಗ್ನಿಹೋತ್ರ ಕ್ರಿಯಾದಿಗ
ಳ್ಗಲಘು ಶಿವಭುಕ್ತಶೇಷಂ ತಾನದೆಂತರ್ಹಮಲ್ತು ಪರಿಭಾವಿಸುವೊಡೆ ೬೫

ಶ್ರಾದ್ಧಕಾಲಂ ಮಾಳ್ಪ ವಿಪ್ರನೊಸೆದಾವಗಂ
ಬುದ್ಧಿಯಿಂದಂ ತನ್ನ ಪಿತೃಪಿತಾಮಹರ ಸ
ನ್ನದ್ಧರಂ ಸಂಕಲ್ಪನಂಗೆಯ್ದು ವಿಪ್ರರ್ಗೆ ಮುಂಬಡಿಸಿದಮಲಾನ್ನವು
ಶ್ರಾದ್ಧಾನ್ನಮಂ ಕೊಳ್ವ ಪಾರ್ವರ್ಗೆ ಪಿತೃಶೇಷ
ಮುದ್ಧತಮುದಕ್ಕುಮಾ ಪಿತೃಶೇಷಮಂ ಮತ್ತೆ
ಶ್ರದ್ಧೆಯಿಂ ಪ್ರಾಣಾಗ್ನಿಹೋತ್ರಕ್ಕೆ ಕುಡಲದೆಂತರ್ಹಮಕ್ಕುಂ ಭಾವಿಸೆ ೬೬

---

[1] ಷ್ಟಾ (ಜ)

ಅದಱಿಂದೆ ಪ್ರಾಣಾಗ್ನಿಹೋತ್ರಕ್ಕೆ ಪಿತೃಭುಕ್ತ
ವಿದಿತ ಶೇಷಾನ್ನಮರ್ಹಂ ತಾನದಲ್ತೆಂದು
ಮುದದೆ ಪಿತೃಶೇಷಮಂ ಭುಂಜಿಸಲ್ ಪೋಪ ಸದ್ಬ್ರಾಹ್ಮಣರ್ ತಮ್ಮ ಗೃಹದಿಂ
ಪದೆದನ್ನಮಂ ದೊನ್ನೆಯೊಳ್ ತೀವಿಕೊಂಡೊಯ್ದು
ಸದಮಲ ಪ್ರಾಣಾಗ್ನಿಹುತಿಗೆಯ್ವರೋ ಅವರ
ಸದನದೊಳ್ ಬೇಱಟ್ಟು ನೂತ್ನೋದನದೊಳಿನಿತನಿಕ್ಕವೇಳ್ವರೊ ಕೆಲದೊಳು ೬೭

ಮಿಸುಪ ವಿಪ್ರರ್ಗಣಿಯರಂ ಶ್ರಾದ್ಧಭೋಜನಮ
ನೊಸೆದು ಮಾಳ್ಪುದು ಲೇಸೊ ಪೊಲ್ಲಮೆಯೊ ಭಾವಿಸಲ್
ಘಸಕದಿಂ ಶ್ರಾದ್ಧಪಂಕ್ತಿಗಳಲ್ಲಿ ಪ್ರಾಣಾಹುತಿಗಳಕ್ಕುಮೋ ಆಗದೊ
ಎಸೆವ ಪಿತೃಶೇಷದಿಂ ಪ್ರಾಣಾಗ್ನಿಹೋತ್ರಮಂ
ಸಸಿನೆ ಮಾಳ್ಪುದನರ್ಹ[1]ಮಂ[1]ತದಂ ಬಿಟ್ಟೊಡಂ
ತಸದಳಂ ಪಾರ್ವಕುಲಕಿನ್ನೆಂತು ಬರ್ದುಕುಂಟು ವಿಪ್ರಸಂತತಿಗಾವಗಂ ೬೮

ಎಲೆ ಮರುಳ್ಗಳಿರ ಪಿತೃಭುಕ್ತ ಶೇಷಾನ್ನಮದು
ಸುಲಲಿತ ಪ್ರಾಣಾಗ್ನಿಹೋತ್ರಕ್ಕೆ ಸಲ್ಗು ಮೆಂ
ದುಲಿ[2]ಪಿರ್[2]ದಱಿಂದೀಶ್ವರಪ್ರಸಾದಂ ನಿಷಿದ್ಧಮೆ ಅಳುಂಬಂ ಪರಿಕಿಸೆ
ತಿಲಮಿಶ್ರಪಿಂಡಂಗಳಿಂದೆಂತು ಪಿತೃಕುಲಂ
ಸಲೆ ತೃಪ್ತಿವಡೆಗುಮಂತೀಶಪ್ರಸಾದಮಂ
ನಲಿಯುತಂ ಶ್ರಾದ್ಧಕಾಲದೊಳೀಯೆ ಪಿತೃನಿಕರಮೊಲ್ದು ತಣಿಗುಂ ಸಂತತಂ ೬೯

ಎಂದು ಕೂರ್ಮಪುರಾಣವಾಕ್ಯಮುಂಟೆಂತೆಂಬೊ
ಡೊಂದಿ ಕೇಳಿಮೆನುತ್ತೆ ಹರಭುಕ್ತಶೇಷಂ ದ
ಲೆಂದುಱಿ ದದಾತಿ ಭಕ್ತ್ಯಾ ಎಂದು ಪಿತೃದೇವತಾನಾಮೆನುತ್ತೆ ಮತ್ತೆ
ಮುಂದೆ ತೇನೈವ ಪಿಂಡೈಶ್ಚ ಎನುತುಂ ತಿಲೈ
ಎಂದು ಪಿತರಸ್ಸುತೃಪ್ತಾ ಎಂದು ಘೋಷಿಸುಗು
ಮೆಂದು ಪೇಳ್ದಂ ಪಂಡಿತೇಂದ್ರನಾ ವಿಪ್ರರ್ಗೆ ಕುಂದುಕಲೆದೋರ್ಪ ತೆಱದೆ ೭೦

ಸತತಂ ಹವಿಶ್ಶೇಷಮಪ್ಪ ಚರು ಭಕ್ಷ್ಯಾದಿ
ತತಿಕರಂ ಪ್ರಾಣಾಹುತಿಗೆ ಸಲ್ಲದಂತೆ ಮಿಗೆ
ಪಿತೃಶೇಷಮನ್ನಮದು ಭೋಜನಕ್ಕಣಿಯರಂ ಪ್ರಾಣಾಗ್ನಿಹೋತ್ರಕನಿಶಂ

[1] ಮೆಂ (ಜ) [2] ಗುಮ (ಜ)

ಶ್ರುತಿಮತದೆ ಸಲ್ಲುವೋ ಸಲ್ಲದೋ ಪೇಳಿವೆನು
ತತಿವೋದದಿಂದೆ ಸೋಮೋವೈ ಎನುತ್ತೆ ವಿ
ಶ್ರುತಮಾಗಿ ಸೌಮ್ಯಂ ಚರುಂ ಎನುತೆ ಘೋಷಿಸುವ ವೇದಮಂ ಕೇಳ್ದಱಿಯಿರೆ ೭೧

ಪದೆದವಿಚ್ಛಿನ್ನ ಹೋತಾರರಾ ಶ್ರಾದ್ಧಸಮು
ಯದೊಳೀಶ್ವರಪ್ರೀತಿಯೆನುತಗ್ನಿಯಲ್ಲಿ ಸ
ಮ್ಮುದದಿ ಹೋಮಂಗೆಯ್ವೆವೆನುತ ಮಂತ್ರದೊಳೆ ಮುಂಬಡಿಸಿದನ್ನಮನಳ್ತಿಯಿಂ
ವಿದಿತ ವಿಶ್ವೇದೇವರ್ಗಿತ್ತು ಬಳಿಕದನೆಯ್ದೆ
ಸದಮಲಪ್ರಾಣಾಗ್ನಿಹೋತ್ರಕ್ಕೆ ಕುಡುವರೆಂ
ದೊದವಿದಗ್ನೌಕರಣಮೆನಿಃತುಂ ಕರಿಷ್ಯೇ ಎನುತ್ತೆ ವೇದಂ ಬಣ್ಣಿಕುಂ ೭೨

ವಿಚ್ಛಿನ್ನಹೋತಾರರಾ ಶ್ರಾದ್ಧಸಮಯದೊಳ
ಗಿಚ್ಛೇಶ್ವರಪ್ರೀತಿಯೆನುತೆ ಕರದಿಂದವೇ
ಸ್ವಚ್ಛ ಹೋಮಂಗೆಯ್ವೆವೆನುತ ಮಂತ್ರದೊಳೆ ಮುಂಬಡಿಸಿದನ್ನಮನೆಳ್ಕಱಿಂ
ವಿ[1]ಚ್ಛಿನ್ನ[1]ಮಾಗದೆ ಹವಿಸ್ಸಿಂಗೆ ಕೊಟ್ಟ ಹವಿ
ಯುಚ್ಛಿಷ್ಟಮಾದುದಂ ಪ್ರಾಣಾಗ್ನಿಹೋತ್ರಕ್ಕೆ
ತುಚ್ಛವಿಪ್ರರ್ ಕುಡುಗುಮದಱೀಶಪ್ರಸಾದಂ ನಿಷಿದ್ಧಮೆ ಭಾವಿಸೆ ೭೩

ಇಂತೆಂದು ಪಾಣೌಕರಣಮೆನುತೆ ಮತ್ತೆಯುಂ
ಮುಂತುಱಿ ಕರಿಷ್ಯೇ ಎನುತ್ತೆ ನುಡಿಗುಂ ವೇದ
ಮಿಂತಿದಂ ಕೇಳ್ದಱಿಯಿರೇ ಹವಿಶ್ಶೇಷದಿಂದೀಶಪ್ರಸಾದಮೆಯ್ದೆ
ಸಂತತಂ ಪ್ರಾಣಾಗ್ನಿಹೋತ್ರಕ್ಕನರ್ಹಮೆ
ಮುಂತಱಿಯದುಲಿವಿರಿನ್ನುಂ ಕೇಳಿಮೆನುತುಮ
ತ್ಯಂತ ಹರ್ಷದೆ ವಿಪ್ರಸಂತತಿಯ ಮರ್ಮಮಂ ನುಡಿದನಾ ಪಂಡಿತೇಂದ್ರಂ ೭೪

ಸತತಮಾ ಶ್ರಾದ್ಧಕಾಲದೊಳೆಯ್ದೆ ಪಿತೃದೇವ
ತತಿಯ ವಿಶ್ವೇದೇವತೆಗಳ ವೈಶ್ವಾನರನ
ಪಿತೃರೂಪನ ಸುಪಿತಾಮಹರುದ್ರ ಸಮುದಯದ ಭುಕ್ತಶೇಷಾನ್ನನಿಕರಂ
ಅತಿಶಯಂ ಪ್ರಪಿತಾ ಮಹಾದಿತ್ಯನುಚ್ಛಿಷ್ಟ
ವಿತತಿಗಳ್ ಶ್ರಾದ್ಧಕಾಲದೊಳಾವಗಂ ನೋಡೆ
ರತಿಯಿನಾ ಪ್ರಾಣಾಹುತಿಗೆ ಸಲ್ಗುಮೆಂದೊಡೀಶಪ್ರಸಾದಂ ಸಲ್ಲದೆ ೭೫

[1] ಚ್ಛಿಂದ (ಕ)

ಪಿರಿದುಮಿಾಶೋಪಭಃಕ್ತಾನ್ನಮುದು ಭಾವಿಸಲ್
ಕರಮೆ ಉತ್ಕೃಷ್ಟಮಾದನ್ನಮೆನಿಸುಗುಮದಂ
ನುರುತರ ಪ್ರಾಣಾಗ್ನಿಹೋತ್ರಕ್ಕೆ ಶಿವನ ಶೇಷಾನ್ನಮೇ ಮುಖ್ಯಮೆಂದು
ಭರದೆ ಯದ್ಭುಕ್ತಂ ಪರಂ ಎನುತೆ ಮತ್ತೆ ಭಾ
ಸುರದಿನಾಗಚ್ಛೇ ಎನುತ್ತೆ ತದ್ಧೋಮಿಾಯ
ಮಿರದೆನುತ್ತು ವ್ಯಾಸಬೋಧಾಯನರ್ಕಳಾ ಸ್ಮೃತಿವಿಸರಮೊಸೆದು ಪೇಳ್ಗುಂ ೭೬

ಎನಸುಮಾ ಪಾಷಂಡ ವೈದಿಕರ್ ಪುಲ್ಕಸರ್
ಮನಮೊಸೆದು ತಮ್ಮ ಪಿತೃಶೇಷಮಂ ರುದ್ರಂಗೆ
ವಿನಯದಿಂದಿತ್ತ ಫಲದಿಂದೆ ತತ್ಪಿತೃಗಳುಂ ರೇತಸ್ಸನುಣ್ಬರೆನುತಂ
ಸನಯದೆ ಹರಾಯ ಪರಮಾತ್ಮನೇ ಎನುತೆ ಮ
ತ್ತನವರತಮೊಲ್ದು ರೇತೋ ಧಾರ ಎನುತೆ ಜಲ
ಕನೆ ಮತ್ತೆ ಪೋಷಿಪುದು ನಾಡೆ ಪಿತರಸ್ತಸ್ಯ ಎನುತೆ ವೇದಂ ಮುದದೊಳು ೭೭

ಶ್ರುತಿಪುರುಷರುಂ ಮತ್ತೆ ಮನದಣಿಗಿನಿಂದೆ ವಿ
ಶ್ರುತ ಶಿವನ ಶೇಷಾನ್ನಮಂ ಬಯಸಿ ಬಾಯೊಡಿವು
ತತಿಹರ್ಷಮುಣ್ಮುತಿರೆ ಭುಂಜಿಸುತೆ ಸುಖಮಿರ್ಪರೆನುತೆ ಭಾಸುರನಾದದಿಂ
ನುತ ಯಜುಶ್ಶಾಖೆ ರುದ್ರೇಣಾನ್ನಮಪ್ಪೃತಂ ಎ
ನುತೆ ಭೋಕ್ತೃ ಕಾಮಾ ಎನುತ್ತೆ ಮತ್ತಂ ನೋಡ
ಲತಿಶಯಂ ವೇದಾಶ್ಚ ಕಾಮಯಂತೇ ಎನುತೆ ಘೋಷಿಸುಗುಮನವರತಮ್ ೭೮

ವೀರಭದ್ರಾದಿ ಗಣನಿಕರಮುಂ ದೈತ್ಯಾರಿ
ಸಾರಸೋದ್ಭವ ಸಹಸ್ರಾಕ್ಷಾದಿ ನಿರ್ಜರರು
ಮಾರಯಲ್ ದಶವದನ ಬಾಣಾಸುರಾದ್ಯಸುರರುಂ ಶಿವನ ಶೇಷಾನ್ನಮಂ
ಹಾರೈಸಿಕೊಳುತಿರ್ಪರೆಂದು ಸದ್ವಾಕ್ಯಮುದು
ವೀರಭದ್ರಾಶ್ಚ ಎನುತಂ ಮತ್ತೆಯುಂ ಕರಂ
ಭೋರೆನುತ ಜೋಹರಿ ಸಹಸ್ರಾಕ್ಷ ಎಂದುಲಿಗುಮಾವಗಂ ಸಂತಸದೊಳು ೭೯

ಮಿನುಪ ಪಾಣಿನಿ ಕಣಾದಂ ಕಪಿಲ ಗೌತಮರ್
ಕನದಮಲ ಶೇಷಪ್ರಸಾದಮಂ ನೆಱೆಕೊಂಡು
ಸನಯದಿಂ ಷಟ್ತರ್ಕಕಧಿಪರಾದರೆನುತ್ತುಮುನುನಯುಂ ಶ್ರುತಿವಾಕ್ಯವು

ಎನಸುಂ ಕಣಾದಶ್ವ ಕಪಿಲೋ ಎನುತ್ತಿರ್ಕ್ಕು
ಮುನಿಶಮುಂ ವಾಶಿಷ್ಠ ದೂರ್ವಾಸ ನಾರದರ್
ಮನವೊಲ್ದು ಕಂಡರೆನುತರ್ಚನಾದ್ಧಾರಣಾದಪಿ ಎಂದು ಶ್ರುತಿಯೊರೆದುದು ೮೦

ಪರವೀರಶೈವ ವ್ರತೋತ್ಕೃಷ್ಟಮಾರ್ಗದಿಂ
ದಿರುತೀಶ್ವರಪ್ರಸಾದಂ ಸೇವಿಪರ್ಗೆ ಬಂ
ಧುರ ಮೋಕ್ಷಮಾರ್ಗಮೆಯ್ದುಗುಮೆಂದು ಗೌತಮಪ್ರಮುಖ ಮುನಿನಿಕರಮೆಯ್ದಿ
ಭರದಿನೀಶಪ್ರಸಾದಂಗೊಂಡ [1]ಫಲದಿಂದೆ
ಧರಣಿಯೊಳ್ ಪೂಜ್ಯರಾಗಿರ್ದರವರೆಲ್ಲರುಂ
ಪಿರಿದವೈದಿಕರೊ ವೈದಿಕರೊ ಪೇಳಿಮೆನುತ್ತೆ ಪಂಡಿತೇಂದ್ರಂ ನುಡಿದನು ೮೧

ಭೂದೇವತತಿ ಸ್ವಂತಪೋಷಣಂಗೆ[2]ಯ್ಯೆ ವಿ[3]ಗೆ
ವೇದಮುಂ ಪಠಿಪುದದಱರ್ಥಮುಂ ತಾನಱಿಯ
ದಾದರದೆ ವೇದಮಂ ಪೊತ್ತು ತಿಟ್ಟನೆ ತಿರುಗುವುದು ಲೋಕದೊಳಗಣಿಯರಂ
ಸಾದರಂ ಪೊಱೆವೊತ್ತು ಚರಿಪ ಗರ್ದಭನಂತೆ
ಮೇದಿನಿಯೊಳಾ ಬ್ರಾಹ್ಮಣರ್ ಸುಳಿಗುಮೆಂದು ಸ
ಮ್ಮೋದದಿಂದೋದುಗುಂ ನೋಡೆ ಬ್ರಾಹ್ಮಣ ಗರ್ದಭಃ ಎಂಬ ವಾಕ್ಯಮನಿಶಂ ೮೨

ಇಂತು ಖರರೂಪರೆನಿಸುವ ಕರ್ಮ[4]ಚಾಂ[5]ಡಾಲ
ಸಂತತಿಯೆನಿಪ್ಪ ಪಾರ್ವರ ಗಡಣಮಾಮ್ನಾಯ
ಮಂ ತವೆ ಸುನಿಶ್ಚಿತಂಗೆಯ್ಯಲಱಿಯದು ಪುರಾತನ ಮುನಿಗಳಂತೆ ಮುದದೆ
ಸಂತತಾದ್ಯರ್ಕ[6]ಗ್ಗನ[7]ರ್ಹಮೇ ಶಾಪಶಿಖಿ
ಯಿಂ ತಗಳ್ದು ಬೆಂದ ಶ್ರುತಿ ವಿಮುಖವಿಪ್ರರ್ಗೆ ನೋ
ಡಂತಿರೆ ಶಿವಪ್ರಸಾದಮದನರ್ಹಂ ಎಂದು ನುಡಿದು ಮತ್ತಿಂತೆಂದನು ೮೩

ವಿಲಸಿತಾಮರರಾದ್ಯ ಮುನಿಗಳಂತಿರಲೀಗ
ನಲಿದು ಪಾರ್ವಣನನುದ್ದೇಶಿಸುವ ಕಾಲದೊಳ್
ಮಲಹರೇಶಪ್ರಸಾದಂ[6]ಯೋಗ್ಯಮೆಂಬುದದು ಸಿದ್ಧಮುಕ್ಕುಂ ಭಾವಿಸೆ
ಲಲಿತ ಪುತ್ರಾರ್ಥಿಗಳ್ಗಂ ನೋಡಲಿಲ್ಲಿ ನಿ
ರ್ಮಲತರೇಶಪ್ರಸಾದಂ ಯೋಗ್ಯಮೆಂದು ಶ್ರುತಿ
ಯೊಲವಿನಿಂ ಪೇಳ್ಗುಮೆಂತೆಂ[6]ಬೊಡಂ[6] ಕೇಳಿಮದನೆನುತೆ ಸೊಬ[7]ಗಿಂ ನುಡಿದನು[7] ೮೪

---

[1] ಬ (ಕಜ) [2] ಯ್ಯಲೊಸೆದು (ಗ) [3] ಡು (ಗ) [4] ಜ (ಕಜ) [5] ಳಂತ (ಜ)
[6] ಬಃವಂ (ಕಜ) [7] ಗಿನಿಂದೆ ನುಡಿದಂ (ಕಜ)

ವಸುರುದ್ರ ಸೂರ್ಯರೂಪಾದ [1]ಪಿಂ[1]ಡಂಗಳೊಳ್
ಮಿಸುಪ ರುದ್ರೀಯ ಮಧ್ಯದ ಪಿಂಡವಮಂ ಹರ್ಷ
ವಿಸರದಿಂ ಪುತ್ರಾರ್ಥಿ ತನ್ನ ಸತಿಗೀಯಲಾ ರುದ್ರಾರ್ಪಿತದ ಪಿಂಡದೆ
ಎಸೆವ ಶಶಿಯಂತೆ ಲಕ್ಷಣಭರಿತನಾಗಿ ರಾ
ಜಿಸುವ ಸುತನಪ್ಪನೆಂದೋದುಗುಂ ವೇದಮು
ಲ್ಲಸದೆ ಪತ್ನಿಂ ಪ್ರಾಶಯೇದೆಂದು ರುದ್ರಸ್ಯ ವಿಪ್ರೇಣ ಎಂದು ಸತತಂ ೮೫

ಮತ್ತೆಯುಂ ಮಧ್ಯಪಿಂಡಸ್ತು ಪುತ್ರದ ಎನು
ತ್ತುತ್ತಮ ಸ್ಕಂದಸೂಕ್ತಂ ಪೇಳ್ಗುಮಾವಗಂ
ಚಿತ್ತರಂ ರುದ್ರನಿರ್ಮಾಲ್ಯಮದು ಶಿವಭಕ್ತಿಸಂಯುಕ್ತಚಿತ್ತನಪ್ಪಾ
ಬಿತ್ತಿಗನೆನಿಪ್ಪ ಮಗನಂ ಕುಡುಗುಮೆಂದು ಮಿಗೆ
ಸುತ್ತೆ ನೋಲಿಂಗ ಪ್ರಸಾದಮರ್ಹಂ ವಿಪ್ರ
ಗೋತ್ತಲುಂ ಕೇಳಿಮಿನ್ನುಂ ವೇದವಾಕ್ಯಮಂ ಪೇಳ್ದಪೆಂ ಸಂತಸದೊಳು ೮೬

ಎಲೆ ರುದ್ರ ನಿನ್ನಿಂ ಪ್ರಸಾದಿಸಲ್ಪಟ್ಟ ಸ
ಲ್ಲಲಿತ ಸುಖಮಪ್ಪ ಭವರೋಗಭೇಷಜಮಪ್ಪ
ವಿಲಸತ್ಪ್ರಸಾದ[2]ದಿಂ[2] ಭಕ್ತರಂ ಪರಮಾತ್ಮನೊಡನೆ ಸಮ್ಮೇಳಿಸುವುದು
ಸಲೆ ತತ್ಪ್ರಸಾದಿ ಮದವರ್ಜಿತಂ ಪಾಪಸಂ
ಕುಲರಹಿತನತಿಭಕ್ತಿಯುಕ್ತನವಿಶೂಚಿ ನಿ
ರ್ಮಲನೆಂದು ಋಗ್ವೇದಮಣಿಯರಂ ವ್ಯಾಸಜೈಮಿನಿಯ ಸಂವಾದದೊಳಗೆ ೮೭

ಸಲೆ ರುದ್ರ ಶಂತಮೇಭಿಃ ಎನುತಲುಂ ಮತ್ತೆ
ಸುಲಲಿತದೆ ಭೇಷಜೇಭಿರ್ವ್ಯಾ ಎನುತ್ತೆ ಮ
ತ್ತೊಲವಿನಿಂ ವ್ಯಂಹೋವ್ಯಮಿಮಾವಾ ಎನುತ್ತೆ ಮಿಗೆ ಜಾತಯುಸ್ವ ಎನುತ್ತಲುಂ
ವಿಲಸದವಿಶೂಚೀ ಎನುತ್ತುಮತಿಭಾಸುರದೆ
ನಲವಿನಿಂ ಘೋಷಿಸುತ್ತಿರ್ಕುಮದ ನೀಮಱಿಯಿ
ರೆಲೆ ವಿಪ್ರರಿರ ಕೇಳಿಮಿನ್ನುಮೆಂ[3]ದುಂ ನುಡಿದ[3]ನಾ ಪಂಡಿತೇಂದ್ರನವರ್ಗೆ ೮೮

ಎಲೆ ರುದ್ರ ನಿನ್ನ ಪೂಜೆಯೊಳಾ ಯಜು[4]ರ್ಮಂತ್ರ[4]
ಮಲದರ್ಪಾವ ಮಂತ್ರದಿಂ ಪೂಜಿಸುಗುಮಾ ನೀನೆ
ಸಲೆ ಲೋಕಪಿತನದಱಿನೆಯ್ದೆ ನಿನ್ನುಪಭುಕ್ತಮುಮಂ ಭುಂಜಿಸಿದೆವು ಬಳಿಕ್ಕಂ

---

[1] ವಂ (ಜ) [2] ಮದು (ಜ) [3] ಧಂಡೊರೆದ (ಜ) [4] ವೇದ (ಜ)

ನಲಿದದುನಿಮಿತ್ತಮಾ ಭೋಗವಿಷಯದ ಸುಖಂ
ಲಲಿತಪರಮಾತ್ಮನಂ ಮುಟ್ಟುಗುಮೆನುತ್ತುಮು
ಜ್ವಲದಿನುಲಿಗುಂ ಯಜುರ್ವೇದದೊಳ್ ನಾಡೆ ಶತರುದ್ರೀಯಮನವರತವು ೮೯

ಮಿನುಪ ಯಚ್ಛಂಚಯೋಚ್ಛಿನುತೆ ಮನಃರಾಯಜೇ
ದೆನುತುಱಿ ಪಿತಾತದಸ್ಯಾಮಃ ಎನುತ್ತೆ ಮ
ತ್ತನುನಯದೆ ತವರುದ್ರ ಎನುತಂ ಪ್ರಣೀತೌ ಎನುತ್ತೆ ಮಿಗೆ ಘೋಷಿಸುವುದು
ವಿನಯದಿಂದಿಂತು ಶ್ರುತಿ ಶಿವನ ಶೇಷಾನ್ನಮಂ
ಮನವಾರೆ ಕೊಂಡು ಶಿವ ಸಮರಸಭಾವದೊಳ
ಗೆನಸುವೊಪ್ಪಿರ್ಪುದೆಂದೊಡೆ ವಿಪ್ರತತಿಗಾಗದೆಂಬುದೊಳ್ಳಿತು ಭಾವಿಸೆ ೯೦

ನಿರುತಮುತ್ಕೃಷ್ಟ ಶಿಷ್ಟಬ್ರಾಹ್ಮಣರ್ ನಾಡೆ
ಪರಮೇಶ್ವರೋಪಭುಕ್ತಾನ್ನಮಂ ಭುಂಜಿಪರ್
ಪರಮೇಶ್ವರಂ ಪೀರ್ದ ವಾರಿಯಂ ಪೀರ್ವರಘ್ರಾತಂ ಘ್ರಾಣಿಸಿದುದನದನೆ
ಪಿರಿದುಮಾಘ್ರಾಣಿಪರ್ ಶಿವನ ನಿರ್ಮಾಲ್ಯ ಶಿವ
ಪರಮಪ್ರಸಾದಂಗಳನೆ ಭುಂಜಿಸುವರೆಂದು
ಭರದೆ ಜಾಬಾಲಶ್ರುತಿಯೆ ಪೇಳ್ಗುಮದಱ ವಾಕ್ಯಂ ತಾನದೆಂತೆಂ[1]ಬೊ[1]ಡೆ ೯೧

ಮಿನುಪ ರುದ್ರೇಣಾತ್ತಮಶ್ನಂತಿ ಪೀತಂ ದ
ಲೆನುತೆ ಮತ್ತಂ ಪಿಬಂತಿ ಎನುತ್ತೆ ರುದ್ರೇಣ
ಎನುತುಮಾಘ್ರಾ[2]ಣಂ[2] ಎನುತ್ತೆ ಜಿಘ್ರಂತಿ ತಸ್ಮಾದ್ಬ್ರಾಹ್ಮಣಾ ಎನುತ್ತೆ
ಎನಸುಂ ಪ್ರಶಾಂತಮನಸೋ ಎನುತೆ ಮತ್ತೆ ಜಲ
ಕನೆ ನೋಡೆ ನಿರ್ಮಾಲ್ಯಮೇವ ಭಕ್ಷ್ಯಂತಿ ಎಂ
ದೆನುತಿಂತು ಪೇಳಿದುದನಱಿಯದೆ ಬಱಿದೆ ಬಕ್ಕುಡಿಗುಟ್ಟ ಬಾಯ್ಬಡಿವಿರಿ ೯೨

ಈಯರ್ಥಮಂ ಸ್ಕಾಂದಮುಸುರಿತ್ತದೆಂತೆನ
ಲ್ಕಾಯ[3]ತಂ[3] ಶಿಷ್ಟಾ ಎನುತ್ತೆ ಶಾಂತಶ್ಚ ಎನು
ತೋಯಾರದಿಂದೆ ಮಿಗೆ ರುದ್ರೇಣ ಭುಕ್ತಮೇವ[4]ಹಿ ಭುಂಜ[4]ತೇ ಎನುತ್ತೆ
ಆಯತಿಕೆಯಿಂ ಘ್ರಾತಮೇವ ಜಿಘ್ರಂತಿ ಎನು
ತೀಯುಕ್ತಿ[5]ವೋಲ್[5] ಪಿತಮೇವ ಎನುತುಂ ಮತ್ತ
ಮಾಯತ್ತದಿಂದಂ ಪಿಬಂತಿ ಚ ಎನುತ್ತದಱಿನೀಶಪ್ರಸಾದಮರ್ಹಂ ೯೩

---

[1] ದೊ (ಜ) [2] ತಂ (ಜ) [3] ಕಂ (ಜ) [4] ಭುಂಜಂ (ಜ) [5] ಯಿಂ (ಜ)

ವಿಲಸದೀಶಪ್ರಸಾದಂಗೊಳ್ವುದೆಂದು ಸ
ಲ್ಲಲಿತ ವೇದಂಗಳುಂ ಜಾಬಾಲ ಮುಖ್ಯ ನಿ
ರ್ಮಲ ಶಾಖೆಗಳುಮಂತೆವೋಲ್ ಬೃಹತ್ಕಾಲೋತ್ತರಾದಿಗಳುಮನವರತವು
ನಲಿದು ಪೇಳುತ್ತಿರ್ಕುಮಾಶಪ್ರಸಾದಮಂ
ತಲಘುಃ ವಿಪ್ರರ್ಗರ್ಹಮಾಮ್ನಾಯದೂರರ್ಗೆ
ಮಲಯುಕ್ತ ದೇಹಿಗಳ್ಗಾಗದದು ಕೇಳಿಮಿನ್ನುಂ ವಿಪ್ರವುಲ್ಕ ಸರಿರ ೯೪

ಎಸೆವ ಮುಕ್ಕಣ್ಣನಿಂ ಭಕ್ಷಿಸಲ್ಪಟ್ಟು ರಾ
ಜಿಸುವ ನಿರ್ಮಾಲ್ಯಮಂ ಭುಂಜಿಸುವುದೆತ್ತಾನು
ಮೊಸೆದನರ್ಪಿತಮನಜ್ಞಾನದಿಂದುಂಡಪಂ ಪಾಪಮಂತಂ ಮತ್ತಮಂ
ಮಿಸುಪ [1]ಪುಳ್ಗಳ್[1] ತಿಂದಮಂ ಮತ್ತೆ ಕುಣಪ ಮಲ
ವಿಸರಂಗಳಂ ಭೋಜನಂಗೆಯ್ವಮಂ ಕರಂ
ಬಿಸವಂದಮಪ್ಪ ನಾಯಕನರಕ [2]ನಿಕರಮಂ ಸಾರ್ದಪಂ ಎಂದು[2] ರಯದಿಂ ೯೫

ಮತ್ತೆ ನುಡಿಗುಂ ತ್ರಿಗುಪ್ತಾತಮುಶ್ನೀಯಾನೆ
ನುತ್ತಂತೆ ಮತ್ತೆ ಯದಿ ಪಾಪಾ ಎನುತ್ತೆ ನೆಱೆ
ವೊತ್ತಂಬದಿಂ ಶಿವಾನರ್ಪಿತಂ ಭುಂಕ್ಷ್ವ ಎನುತುಂ ಮಲಂ ಭುಂಕ್ಷ್ವ ಎನುತೆ
ಮತ್ತೆ ಯೇನೋ ಭುಂಕ್ಷ್ವ ಎನುತುಂ ಕ್ರಿಮಿಂ ಭುಂಕ್ಷ್ವ
ನುತ್ತೆ ಮತ್ತಿರದಧೋಗಚ್ಛ ಎನುತುಂ ಘೋಷಿ
ಸುತ್ತಿರ್ಕುಮೊಲ್ದು [3]ಮವಕಳ[3] ಶಾಖೆಯಾವಗಂ ಕೇಳಿರೆಲೆ ವಿಪ್ರರೊಸೆದು ೯೬

ಪ್ರತಿದಿನಂ ಮೂಱವಸರದೊಳೀಶಪೂಜೆಯುಂ
ವಿತತಮಪ್ಪಂತೆಸಗಿ ನೈವೇದ್ಯಮಂ ಕೊಟ್ಟು
ಸತತಮಾಯಿಾಶಪ್ರಸಾದಮಂ ಸ್ವೀಕರಿಸದಂತೆ ಭುಂಜಿಸುವನಾವಂ
ಅತಿಶಯದಿನವನುಂಡುದುಂ ಕುಡಿದುದುಂ ಶುನಕ
ತತಿಯಡಗು ಮೂತ್ರಮೆಂದನವರತಮುಲಿಗುಮಾ
ಯತದಿಂ ಶ್ವಮಾಂಸ ಮೂತ್ರಾಣಿ ಭುಂಕ್ತೇ ಎನುತೆ ಶ್ರುತಿವಾಕ್ಯಮತಿಶಯದೊಳು ೯೭

ಪರಮೇಶ್ವರಪ್ರಸಾದೇತರಮದೆತ್ತಾನು
ಮಿರದೀಶ್ವರಪ್ರಸಾದದೊಳಲ್ಪವಾದೊಡಂ
ಪಿರಿದಾದೊಡಂ ಕೂಡಿದೊಡಮನರ್ಪಿತಮುದಂ ಸ್ವೀಕರಿಸೆ ದೋಷಮುಕ್ಕುಂ

---

[1] ಪುಳುಗಳ (ಜ) [2] ಮಂ ಸಾರ್ದಪಂ ಸತ್ಯಮೆಂದು (ಜ) [3] ಮದಕಳ (ಜ)

ನಿರುತಮೆಂದೋದುಗುಂ ಸದ್ವಾಕ್ಯಮೆಂತೆಂಬೊ
ಡೊರೆವೆನ:ಜಿತ ಬಹ್ವಾಪಿ ಎನುತೆ ಮತ್ತಂ ಕೊಡೆ
ಭರದೆ ನುಡಿಗುಂ ಸ್ತೋಕಮೇವಾಪಿ ಶಿಷ್ಟಮನ್ನಂ ವಿಮಿಶ್ರಿತಮೆನುತ್ತೆ ೯೮

ನೆನೆವ ಮನಕೆಯ್ದೆ ರಮಣೀಯಮಾಗುತೆ ನೋಳ್ಪ
ಘನನಯನಕಾನಂದಮಂ ಬೀಱುತಾವಗಂ
ಮಿನುಪಖಿಳ ವಸ್ತುನಿಕರಂಗಳಂ ತನಗೆಂಬ ಬುದ್ಧಿಯಂ ತೊಲಗಿಸುತ್ತೆ
ಅನುನಯದೆ ಸಾವಧಾನದೊಳೀಶ್ವರಂಗಿತ್ತು
ಮನವ:ಲರ್ದು ತತ್ಪ್ರಸಾದಂಗೊಳ್ವುದೇ ಮಾರ್ಗ
ಮೆನುತೆ ವಾಕ್ಯಂ ಮನಃಪೂರ್ಣಂತು ನೈವೇದ್ಯಮೆಂದು ಘೋಷಿಸುತಿರ್ಪುದು ೯೯

ಶಿವಸಮರ್ಪಣಮಪ್ಪಾದ ಭಾಸುರಾನ್ನಾದಿಯೊಳ್
ಶಿವಸಮರ್ಪಣಮಾಗದಿ[1]ರ್ದೊಡನ್ನಾ[1]ದಿಗಳ್
ತವೆ ಬೆರೆದೊಡಂತದಂ ಬಿಡವೇಳ್ಕು ಭುಂಜಿಸಲ್ಕಾಗದದನೆಂದು ನುಡಿಗುಂ
ತನಕದಿಂ ವಾತೂಲತಂತ್ರಮೆಂತೆಂಬೊಡದ
ನವಿರಳಂ ಪೇಳ್ದಪೆಂ ಕೇಳಿರೆಲೆ ವಿಪ್ರರಿರ
ಸವಿನಯಂ ಮಿಗೆ ಕದಾಚಿ[2]ನ್ನೈವಭುಂಜೀತ[3] ಎನುತೆ ಮನವಾರೆ ಸತತಂ ೧೦೦

ತನ್ನ ಲಿಂಗಕ್ಕಾವ ವಸ್ತು ಕೊಡಪಟ್ಟುದದು
ನನ್ನಿಯಿಂ ಯಜ್ಞಶೇಷಂ ತಪ್ಪದಾ ಚರುಕ
ವನ್ನಲಿದು ತಾನೆ ಭುಂಜಿಪು[3]ದರ್ಹಮೆಂದದಂ ಭುಂಜಿಪಂ[3] ಸದ್ಬ್ರಾಹ್ಮಣಂ
[4]ಚ:[4]ನ್ನಮಾಗದನೇಳಿಲಂಗಂಡು ಲೋಗರ್ಗೆ
ಸನ್ನಿದಂ ಕುಡುವವಂ ಗೋಜಲಾದಿಗಳಲ್ಲಿ
ಯುನ್ನಿಸದಮಿಡುವವನೆ ಪರಮಪಾತಕಚಕ್ರವರ್ತಿಯಿಮಾ ಭೂಮಿಯೊಳಗೆ ೧೦೧

ಎನಸ[5]ಮಾ[5]ಸ್ವೇಷ್ಟ ಲಿಂಗಸ್ಯಯದ್ದತ್ತಂದ
ಲೆನುತೆ ಚರುಕಂ ತನ್ನಸಂಶ[6]ಯ ಎನುತ್ತೆ[6] ಮ
ತ್ತನುನಯಂ ತತ್ಪ್ರಸಯೇತ್ಸ್ವಯಂ ಪ್ರಾಜ್ಞೋ ಎನುತ್ತೆ ನಾನ್ಯಸ್ಮೈ ಎನೆ
ಸುನಯದಿಂ ನತುದಾಪಯಂ ನದದ್ಯಾದೆನು
ತ್ತನುವಿನಿಂ ಗೋಜಲಾದಿಭ್ಯೋ ಎನುತ್ತೆ ಮ
ತ್ತನಿಶಮುಂ ನರಕಂ ವ್ರಜೇದೆಂದು ಸೂತಸಂಹಿತೆ ಪೇಳ್ದುಮಿದನಜಿಯಿರೆ ೧೦೨

---

[1] ರ್ದೋದನಾ (ಗ) [2] ಸ್ನೋಪಭೋಜೀತ (ಕ) ನ್ನೋಪವೋ ಭುಂಜೀ (ಗ) [3] ದದಂ ಭುಂಜಿಸುವನವನೆ ತಾಂ (ಜ) [4] ಚ (ಕ) [5] ಮ (ಕ) ವಂ (ಜ) [6] ಯೋಯೆನುತೆ (ಜ)

ಮಿಗೆ ಕೇಳಿ[1]ಯೀ[1]ಶಪಾದಾಂಬು ನಿರ್ಮಾಲ್ಯಮಂ
ಸೊಗಸಿನಿಂ ಸೋಂಕಿದನಿಲನ ಮಹಿಪನಳ್ತಿಯಿಂ
ಮೊಗಸಿ ಪಾನಂಗೆಯ್ಯಲಡಱ ಬಲದಿಂ ಬಿಣ್ಣಿತಪ್ಪಿಳೆಯ ಬಲ್ಪೊಱೆಯನು
ತಗುಳ್ದು ಧರಿಸುವ ಸತ್ವಮಂ ಶೇಷಪದವಿಯುಂ
ನೆಗಳ್ದ ಶಿವನೊಳ್ಪಾರತನಮನೆಯ್ದಿದನೆಂದು
ಸೊಗಸಿನಿಂದಿಂದ್ರಂಗೆ ನಾರದಂ ಪೇಳ್ದ ವಾಕ್ಯಮನೆಯ್ದೆ ಪೇಳ್ವೆನೊಸೆದು ೧೦೩

ಪಿರಿದು [2]ಪವನಃ ಪನ್ನಗೇಶೇ[2]ನ ಎನುತುಮಂ
ತಿರೆ ನಿಪೀತಃ ಪುಣ್ಯಕಾರಿಣಾ ಎನುತೆ ನಿ
ರ್ಭರದಿಂದೆ ಭೋಗೀಶ್ವರತ್ವಮಚಲಮೆನುತ್ತೆ ಮತ್ತೆಯುಂ ಪರಿಭಾವಿಸೆ
ನಿರುತದಿಂದೀಶಭೂಷಣತಾ ಎನುತ್ತೆ ಸುಂ
ದರ[3]ದೆ ದೇವೇಂದ್ರ[3] ನಹಿ ಸಂಶಯೋ ಎನುತೆ ಬಂ
ಧುರನಾದದಿಂ ಪಂಡಿತೇಂದ್ರನಾ ವಿಪ್ರರ್ಗೆ ಪೇಳ್ದನತಿಹರ್ಷದಿಂದೆ ೧೦೪

ಶಿವನ ನಿರ್ಮಾಲ್ಯಮಂ ಸೋಂಕಿ ಬಂದನಿಲನಂ
ತವೆ ಸೇವಿಸಿದ ಶೇಷನೀ ಪದವ ಸಾ[4]ರ್ದನೆ[4]ನೆ
ತವಕದಿಂ ಭಕ್ತಿಯಿಂದೀಶಪ್ರಸಾದಮಂ ಕೊಂಡ ಭಕ್ತನ ಫಲವನು
ಸವಿನಯದಿನಿಂತೆಂದು ಪೇಳ್ವೊಡಾ ಭಾರತಿಗೆ
ಸುವಿಮಲ ಬೃಹಸ್ಪತಿಗೆ ಶಕ್ಯಮಲ್ತೆಂದು ನೋ
ಡವಿರತಂ ಸಾಕ್ಷಾತ್ಪ್ರಸಾದಭೋಗೇನ ಭೋಕ್ತೋಽಯಮೆಂಬುದು ವಾಕ್ಯವು ೧೦೫

ಪಿರಿದುಮಿನ್ನುಂ ಕೇಳಿರೆಲೆ [5]ನೀಚ ವಿಪ್ರ[5]ರಿರ
ಪರಮಪ್ರಸಾದಮದು ಮೂದೆಱದೊಳೊಪ್ಪುಗುಂ
ನಿರುತದಿಂದಂ ಶುದ್ಧ ಸಿದ್ಧ ಪ್ರ[6]ಸಿದ್ಧ[6]ಮೆಂದನವರತಮವಱಿರವನು
ಇರದುಸುರ್ದಪೆಂ ಲಿಂಗಭುಕ್ತಮದು ಶುದ್ಧಮಂ
ತುರು ಜಂಗಮಪ್ರಸಾದಂ ಸಿದ್ಧಮಂತೆ ಸ
ದ್ಗುರು ಮುಖೋಚ್ಛಿಷ್ಟಂ ಪ್ರಸಿದ್ಧಮೆಂದೋದುಗುಂ ತಂತ್ರನಿಕರಂ ಸಂತತಂ ೧೦೬

ಅವಱೊಳಗೆ ಶುದ್ಧಪ್ರಸಾದಮೆಂಬುದು ನೋಡೆ
ಭುವನದೊಳ್ ಬ್ರಹ್ಮಚಾರಿಗೆ ಗೃಹಸ್ಥಂಗೆ ಸ
ತ್ಪ್ರವಿಮಲ ಯತೀಂದ್ರರ್ಗೆ ಸಲ್ಗುಮದುಮವರ್ಗೆಯುಂ ಭುಕ್ತಿಮುಕ್ತಿಗಳೀವುದು

---

[1] ಮೀ (ಜ) [2] ಪರಮಃ ಪನ್ನಗೇಶಾ (ಕ) [3] ದೇವತಾಂಚ (ಜ) [4] ದರ್ದದೆ (ಕ)
[5] ವಿಪ್ರನೀಚ (ಕಜ) [6] ಸಾದ (ಗ)

ತವೆ ದಿಟಂ ಬ್ರಹ್ಮಚಾರಿಗೆ ಗೃಹಸ್ಥನಾಂ ದ
ಲವಿರತವೆನುತ್ತುಂ ಯತೀನಾಮೆನುತ್ತೆ ನೆಱೆ
ತವಕದಿಂ ಭುಕ್ತಿಮುಕ್ತಿದವೆಂದು ಘೋಷಿಸುವ ಸದ್ವಾಕ್ಯಮಂ ಕೇಳಿರೆ ೧೦೭

ಪರಮ ಚರಲಿಂಗಪ್ರಸಾದಮಂ ಕೊಂಡು ಮ
ತ್ತುರು ಕಳೇವರದೊಳಾವಂ ಲೇಪನಂಗೆಯ್ವ
ನಿರದವಂ ನಾಡೆ ಜೀವನ್ಮುಕ್ತನಪ್ಪನುದ್ಧತ ವಜ್ರಕಾಯನಪ್ಪಂ
ನಿರುತಮೆಂದೋದುಗುಂ ವರವಾಕ್ಯಮೆಂತೆಂಬೊ
ಡೊರೆವೆನೞಿ ವಜ್ರಕಾಯಃ ಎನುತೆ ಮತ್ತೆಯುಂ
ಪಿರಿದುಂ ಶಿವೇನ ಸಹ ಮೋದತೇ ಎಂದು ಭಾಸುರನಾದದಿಂದಾವಗಂ ೧೦೮

ಗುರುಪಾದತೀರ್ಥಮಘಜಾಲಹರವೆನಿಸುಗುಂ
ಪರಮಗುರು ನಿರ್ಮಾಲ್ಯಮಿಹಲೋಕಸುಖಕರಂ
ವರಗುರುನಿವೇದಿತಂ ಮೋಕ್ಷಫಲಮಂ ಕುಡುಗುಮಿದು ತಥ್ಯಮೆಂದೋದುಗುಂ
ಪರಮವಾಕ್ಯಂ ಗುರೋರ್ಭುಕ್ತಂ ಸದಾಕಾಲ
ಮಿರದೆನುತುಮಾಮುಷ್ಮಿಕಫಲಪ್ರದಂ ದಲೆಂ
ದೊರೆಗುಮಾ ನಿರ್ಮಾಲ್ಯಮೈಹಿಕಪ್ರದಮೆಂದು ಸಂತಸದೊಳನವರತಮು ೧೦೯

ಇಂತು ವೇದ ಸ್ಮೃತಿ ಪುರಾಣಾಗಮೇತಿಹಾ
ಸಂ ತಗುಳ್ದು ನುಡಿದ ಮಾನದೆ ಧಾತೃ ಹರಿ ಜಿಷ್ಣು
ಮುಂತಾದ ದೇವರ್ಕಳುಂ ಭೃಗು ವಶಿಷ್ಠ ಗೌತಮಮುಖ್ಯಮುನಿನಿಕರಮುಂ
ಸಂತತಂ ಶಂಭುಪ್ರಸಾದಮಂ ಭುಂಜಿಸಿಯೆ
ಸಂತಸದಿನ[1]ಪ[1]ವರ್ಗಮಾರ್ಗಮಂ ಕೊ[2]ಡಿದರ್[2]
ಮುಂತದಱೀನೀಶಪ್ರಸಾದಮಂ ಭುಂಜಿಸುವುದರ್ಹಮನಿಶಂ ದ್ವಿಜರ್ಗೆ ೧೧೦

ಎಂದು ಗುರುಮಲ್ಲಿಕಾರ್ಜುನಪಂಡಿತೇಂದ್ರನಾ
ನಂದದಿಂದಾ ವಿಪ್ರಸಂತತಿಯ ಭಂಗಿಸಿದ
ನೆಂದು ಪಾಲ್ಕುಱಿಕೆ ಸೋಮೇಶ್ವರಂ ಸೂರಸಚಿವೇಂದ್ರಂಗೆ ಪೇಳ್ದನಿದನು
ಕುಂದಣಂ ಪೊರ್ದದೀಶಪ್ರಸಾದಿಗಳೆಯ್ದೆ
ಸಂದ ಶರಣರ್ ಕೋವಿದರ್ ಮನೋಮುದದೆ ತಱಿ
ಸಂದು ಲಾಲಿಪುದೀ ಪ್ರಸಾದ ಮಾಹಾತ್ಮ್ಯಮನಸೂಯಾದ್ರಿಪವಿಸದೃಶರು ೧೧೧

---

1 ಘ (ಕಜ) 2 ಡದೇ (ಕಜ)

ಸದಮಲಪ್ರಚುರವಿಶ್ರುತ ಪರಮಭಕ್ತಗಣ
ಪದಸರೋರುಹಸಾಂದ್ರ ಮಕರಂದಪಾನ ಸ
ನ್ಮುದಿತ ಚಂಚಚ್ಚಂಚರೀಕನನವರತಪಂಚಾಕ್ಷರೀ ಪ್ರಸಿತಹೃದಯಂ
ವಿದಿತ ಮಂಜುಲನೀಲಕಂಠಾಹ್ವಯಂ ಮನೋ
ಮುದದೆ ಪೇಳ್ದರುತರಾರಾಧ್ಯಚಾರಿತ್ರದೊಳ
ಗಿದು ಸುಪ್ರಸಾದಮಾಹಾತ್ಮ್ಯವೆನಿಸುವ ರುಚಿರಸಂಧಿ ನೆಱೆ ಭಾವಿಸುವೊಡೆ ೧೩

# ಆರನೆಯ ಸಂಧಿ

## ಘಂಟಾತ್ಮ್ಯ ಕರ್ಣಾಭೀರು ದೂರ್ವಾಸ ಸುಕೇಶರ ಕಥೆ

ಸೂಚನೆ: ಪರಮ ಘಂಟಾಕರ್ಣ ಭೀರು ದೂರ್ವಾಸ ಭಾ
ಸುರ ಸುಕೇಶರ ಕಥೆಯ ಭೂಸುರಗೊರೆದನಾ
ದರದಿಂದೆ ಪಂಡಿತೇಶಂ ಕೇಳದಂ ಸೂರಸಚಿವೇಂದ್ರ [1]ನೀಂ ಮುದದೊಳು[1]

೧

ಶತಧೃತಿ ಶ್ರೀವತ್ಸಸಿತಕುಂಜರಪ್ರಮುಖ
ನತಿ ತತ್ಪರ ತ್ರಿದಶಮಣಿಖಚಿತಕೋಟೀರ
ತತಿಕೋಟಿಸಂಘಟ್ಟನಿರ್ಗತ ಸುವರ್ಣರಜಮಂಘ್ರಿಯೊತ್ತಿನೊಳೆಸೆಯಲು
ಪಿತೃಸನ್ನಿಧಿಯೊಳಾಡುತಿರ್ಪ ಶಿಶುಗಜವದನ
ನತಿಹ[2]ರ್ಷ[2]ದಿಂದೆ ಕೆಂಧೂಳಿಗೆತ್ತಿರದದಂ
ಸುತ ಪಾಂಸುಲೀಲೆಯಾಡಲ್ ನೋಡಿ ನಗುತಿರ್ಪ ಗುರುನೀಲಕಂಠ ಶರಣು ೧

ಪಿರಿದುಮಿನ್ನುಂ ಕೇಳಿರೆಲೆ ನೀಚವಿಪ್ರರಿರ
ಪರಮೇಶ್ವರ ಪ್ರಸಾದಂ ಭಾವಿಸಲ್ಕೆ ಭಾ
ಸುರತರೇಶಪ್ರಸನ್ನತೆಯದಱ ಮಹಿಮೆಯಂ ನಾಲ್ಮೊಗನುಮಱಿಯನೆನಲು
ನರ[3]ರೆಂ[3]ತದಂ ಬಲ್ಲ[4]ರೀ[4]ಶ ಪ್ರಸನ್ನತೆಯ
ನಿರದೆಯ್ದಿದರ್ ಬಲ್ಲರೆಂದು ಬಣ್ಣಿಸುತಿರ್ಕು
ಮುರುಘೋಷದಿಂದಂ ಪ್ರಸಾದಯುಕ್ತಾನಾಮೆನಿಪ್ಪ ವಾಕ್ಯಂ ಸಂತತಂ ೨

ಅದಱೀಶಪ್ರಸಾದದ ಬಲ್ಮೆಯಿಂ ಪಾಂಸು
ವೊದವಿದದ್ರಿಗಳಕ್ಕುಮದ್ರಿಗಳ್ ತುಷವಕ್ಕು
ಮಿದು ನಿಕ್ಕುವಂ ಪಾಂಸವಃ ಪರ್ವತಾ ಎಂಬ ವಚನಪ್ರಮಾಣದಿಂದಂ
ವಿದಿತ ದುರ್ಜನಶಿರೋಮಣಿಗಳಿರ ಕೇಳಿಘ್ನು
ಮುದ[5]ದೆಯಿ[5]ತಿಹಾಸಂಗಳಂ ಪೇಳ್ದಪೆಂ ಮುನ್ನೆ
ಸದಮಲ ಶ್ರೀಕಂಠಮೂರ್ತಿ ಭಾಸುರಕೀರ್ತಿ ವಿಮಲಗಣಚಕ್ರವರ್ತಿ ೩

---

[1] ನೊಲಿದು ಮುದದೆ (ಗ) [2] ರುಷ (ಗ) [3] ನೆಂ (ಗ) [4] ನೀ (ಗ) [5] ತೇ (ಗ)

ಎನಿಪ ಘಂಟಾಕರ್ಣನೊಂದುವಾಸರವಿಶ್ವ
ರನ ಪೂಜೆಗೆ[1]ಯ್ದು[1] ತನ್ನಿರ್ಮಾಲ್ಯ ಪುಷ್ಪಗತ
ಘನಮರಂದಮನೆಯ್ದೆ ಸೂರ್ಯನಾಕರ್ಷಿಸಲ್ ಕಿಸುಗಣ್ಣಿ ನುಡಿದನಾತಂ
ನಿನಗೆ ಧರಿಸಲ್ಕರ್ಹಮೇ ಶಿವನ ನಿರ್ಮಾಲ್ಯ
ಮನುನಯಿದೆ ಸೂರ್ಯ ಶಿವಶರಣರಾರೋಗಿಪುದ
ನಿನಿಸುಮಣುರೇಣು ಸೂರ್ಯಾಗ್ನೀಂದುಗಳ್ ಸೋಂಕಲದನೆಂತು ಭುಂಜಿಸುವರು ೪

ಎಸೆವಿಷ್ಟಲಿಂಗನಿರ್ಮಾಲ್ಯಮಂ ಭಕ್ಷಿಪುದು
ಮಿಸುಪ ಭಕ್ತರ್ಗ[2]ರ್ಹ[2]ಮುಳಿದವರ್ಗನರ್ಹಮೆಂ
ದೊಸೆದನರ್ಹಂಚೈವ ಎಂದು ವಾಕ್ಯಂ ಪೇಳುತಿರೆ ಬಳಿಕೆ ಮುಂದಱ[3]ಯದೆ[3]
ಮುಸಕದಿಂದೆವ್ಮಿಷ್ಟಲಿಂಗಪ್ರಸಾದಮೆನಿ
ಸೆಸೆವ ಕುಸುಮಾಸೀಕರಸಮನಾಕರ್ಷಿಸಿದ
ನಿಸದಮುದಱಂ ಕುಷ್ಠರೋಗಿಯಾಗೆಂದು ಶಾಪವನಿತ್ತನಾ ಯತಿಪನು ೫

ಮುದದೆ ಮಾರ್ತಾಂಡ ಭಾನೋ ಕುಷ್ಠನೆಂದುಲಿವ
ಸದಮಲಾಗಮವಾಕ್ಯಮೇ ಪ್ರಮಾಣಂ ಮತ್ತ
ಮದಱಂನಾ ರವಿ ಕುಷ್ಠತನುವಾಗಿ ನೊಂದು ಮಿಗೆ ಪೆಳಱಯಾ ಪ್ರಮಥನಡಿಗೆ
ಬೆದಬೆದನೆ ಬೇವುತ್ತೆ ವಂದನಂಗೆಯ್ದು ಮನ
ದದವಳಲ್ ಪೊಱಪೊಣ್ಮೆ ಶಾಪಶಿಖಿಗೆಯ್ದೆ ನುಂ
ಪದೆದು ಗುಱಯಾಗಿ ಮಿಗೆ ಅಪರಾಧಿಯಾದೆನ್ನ ಕಾವುದೈ ಕರುಣಾಕರ ೬

ಧರಣಿಯೊಳಗುಳ್ಳ [4]ವಸ್ತ್ವನಿಕರ[4] ಸಂತತಿಯು
ಭರದೆ ಪೀರ್ವವೊಲಱಯದಾಂ ಪೀರ್ದೆನತ್ಯಂತ
ಕರುಣಾಂಬುನಿಧಿಯೆ ನೀನೆನ್ನ ಶಿಕ್ಷಿಸಿದೊಡನ್ಯರ್ ಕಾವರೊಳರೆ ಮತ್ತಂ
ಪಿರಿದು ನೀನೇ ಶರಣೆನುತ್ತಡಿಗಳಂ ಪಿಡಿಯೆ
ಪರಮು ಘಂಟಾಕರ್ಣನಲ್ತಿಯಿಂದೀಕ್ಷಿಸುತೆ
ಹರಿದಶ್ವ[5]ಗಂ[5] ನುಡಿದನೆಲೆ ರವಿಯೆ ನೀಂ ಮನೋಹರನೆಂಬ ಗಣನಾಥನ ೭

ಲಲಿತ ಪಾದಾಂಬುವಿಂ ಪಡೆ ನಿಜಾಂಗಮನೆಂದು
ಸಲೆ ಬೆಸಸಲಾ ಸೂರ್ಯನಾ ಮನೋಹರನ ಮನ
ದೊಲವಿನಿಂ ಭಾವಿಸುತ್ತುಂ ಪ್ರಾರ್ಥಿಸುತ್ತುಮಿರೆ ತನ್ಮನೋಹರನ ದಯೆಯಿಂ

---

1 ಯ್ದ (ಕ) ಯ್ದಿ (ಗ) 2 ರುಹ (ಗ) 3 ಯುತೆ (ಜ) 4 ಖಿಲವಸ್ತುರಸ (ಜ)
5 ದಂ (ಗ)

ವಿಲಸಿತ ಪದಾಂಬುವಂ ಪಡೆದು ಕುಷ್ಠಂ ನೀಗಿ
ನಲಿದು ಮುನ್ನಿನ ತೇಜದಿಂ ವಿರಾಜಿಸುತಿರ್ದ
ಸಲಿಲಜಸಖಂ ನೋಡಿವೆಂದು ತತ್ಪಂಡಿತೇಂದ್ರಂ ಮತ್ತಮಿಂತೆಂದನು* ೮

ಹರಸುಪ್ರಸಾದಿಗಳ್ ಪಾಪಕ್ಷಯಕ್ಷಮರ್
ಪಿರಿದು ಶಾಪಾನುಗ್ರಹಂಗಳ್ಗೆ ಶಕ್ತರುಱು
ನಿರತಂ ತ್ರಿಲೋಕಕಾರಾಧ್ಯರಾಗತಿಪೂಜ್ಯರಾಗಿರ್ಪರನಿಶವೆಂದು
ಗುರುಪಂಡಿತಾರಾಧ್ಯರಾ ವಿಪ್ರನಿಕರಕ್ಕೆ
ಹ[1]ರಿಸ[1]ದಿಂ ನುಡಿದು ಮತ್ತಂ ಪೇಳಿವೆಂದು ನಿ
ರ್ಭರನಿನಾದದ ಭೀರುವೆಂಬ ಗಣಪುಂಗವನ ಕಥೆವೇಳ್ವೆನೆಂತೆಂಬೊಡೆ ೯

ಕೇಳ ಸೌರಾಷ್ಟ್ರಮಾತ್ಯ ಜಿತಿಕುವರನೊರ್ವನು
ತ್ತಾಳಭಯಚಿತ್ತನಪ್ಪುದಱಿಂದವಂಗೆ ಸ
ಮ್ಮೇಳಿಸಿತು ಭೀರುನಾಮಂ ಸಮಂತಾ ಭೀರುವಿನ ತಂದೆ ಸುತನ ನೋಡಿ
ಪೇಳಬಾರದ ವಿಸ್ಮಯಾವಿಷ್ಟಚಿತ್ತದೊಳ
ಗಾಳಿಮುಳುಗುತ್ತೆ ಬಿಸುಸುಯ್ದು ಚಿಂತಿಸುತುಮಿಾ
ವ್ಯಾಳಸಾಧ್ವಸಮಿಾಶಪೂಜೆ ಪೊಱಗಾಗಿ ಮತ್ತಾವುದಱಿನಳಿಯದೆಂದು ೧೦

ತಿಳಿದು ಭೀರುಗೆ ವೀರಶೈವೋಕ್ತದೀಕ್ಷೆಯಂ
ಲಳಿತಮಪ್ಪಾ ಪ್ರಾಣಲಿಂಗಸಂಬಂಧಮಂ
[2]ಘ[2]ಳಿಲನೆಸಗಲ್ ಮುನ್ನೆ ಸನೆದ ದುಷ್ಕರ್ಮಫಲವಿನಿತುಳಿಯದಳಿದು ಪೋಗೆ
ಮಿಳಿರ್ವ ಚಾರಿತ್ರಮದು ಲೋಕಕಚ್ಚರಿಯೆನಿಸಿ
ತೊಳಗಿಬೆಳಗುತ್ತಿರ್ದನಾ ಭೀರುವಿನ ಮಹೋ
ಜ್ವಳ ವೀರಶೈವಭಕ್ತಿಕ್ರಿಯಾಚರಣೆಯಂ ಪೊಗಳ್ವನಾವಂ ಧರೆಯೊಳು ೧೧

ಹರನ ಸದ್ಭಕ್ತಿ ತಲೆಗೇಱುವಂತಿರೆ ನೋಡೆ
ಪಿರಿದಿಷ್ಟಲಿಂಗಪ್ರಸಾದಕುಸುಮಂಗಳಂ
ಭರದಿಂದೆ ಸಾವಧಾನದೊಳಾವಗಂ ತನ್ನ ಶಿರದಲ್ಲಿ ತಾಳ್ದು ಮುದದಿಂ
ಚರಿಸುತಿರ್ಪಂ ಶಿವನ ಮಾಹಾತ್ಮ್ಯ ಭಾರಮಂ
ಧರಿಸಿದಂತೆವೊಲಿಂತು ಪಲವುದಿವಸಂ ಪೋಗೆ
ಪರಮೇಶ್ವರಂ ಭೀರುಮು[3]ನಿ[3]ಯ ಸದ್ಭಕ್ತಿನಿಷ್ಠೆಯ ನೋಳ್ಪೆನೆಂದು ಬಗೆದು ೧೨

---

[1] ರುಷ (ಗ) [2] ಗ (ಕ) [3] ರಿ (ಕ)

* (ಜ) ಮುದ್ರಿತಪ್ರತಿಯಲ್ಲಿ ೯ನೆಯ ಪದ್ಯದಿಂದ ಮುಂದಕ್ಕೆ ಇಲ್ಲ.

ಒಂದುದಿವಸಂ ಶಿವನ ನಿರ್ಮಾಲ್ಯತತಿಯೊಳಗ
ದೊಂದು ದುಷ್ಟಮೆನಿಪ್ಪ ಕೀಟಮಂ ಕಲ್ಪಿಸಲ್
ಮುಂದದಂ ಕಂಡು ಶಿವನಿರ್ಮಾಲ್ಯದೊಳಗಿರ್ದುದೆಲ್ಲವುಂ ನಿರ್ಮಾಲ್ಯವು
ಎಂದು ಬಗೆದಾ ಪುಳುವುಗೂಡಿ ನಿರ್ಮಾಲ್ಯಮಂ
ಚಂದಮಪ್ಪಂತೆ ಮುಡಿಯೆಡೆಯೊಳದನಿಂಬಿಟ್ಟು
ಹೆಂದದಾನಂದದಿಂದಿರುತಿರಲ್ಕಾ ಕೀಟದುತ್ಪಾತಮುವನಿಗರಿದು ೧೩

ತಲೆನವಿರನೆಲ್ಲಮಂ ವೇದಿಸುತ್ತಂ ಭರದೆ
ತಲೆಯ ಚರ್ಮಂ ಭಕ್ಷಿಸುತ್ತುಮಾಸುರದಿಂದೆ
ತಲೆಯೋಡನಿರ್ಬಗಿಯ ಮಾಡಿ ತದ್ಗತರಕ್ತಮಂ ಕೂಡೆ ಪೀರುತಿರಲು
ಲಲಿತ ನಿರ್ಮಾಲ್ಯ ನಿಷ್ಠಾನ್ವಿತಂ ಭೀರುಮುನಿ
ತಿಲಕನಾ ನೋವನೇನೆಂದಱಯದಿರುತಿರಲ್
ಮಲಹರಂ ಮೆಚ್ಚಿ ನಿಜಮೂರ್ತಿಯಂ ತೋಱ ಬಳಿಕಂ ನುಡಿದನಾ ಭೀರುವಂ ೧೪

ಎಲೆ ಭೀರುಮುನಿಯೆ ನಿನ್ನಯ ವೀರಭಕ್ತಿಗಂ
ಲಲಿತಪ್ರಸಾದನಿಷ್ಠೆಗಮೊಸೆದು ಮೆಚ್ಚಿದೆಂ
ನಲವಿನಿಂ ನಿನಗೆ ಮೃತ್ಯತ್ವಮಂ ಕೊಟ್ಟಪೆಂ ಸೊಕದಿಂದೆ ಬಾಳ್ವುದೆನುತುಂ
ಮಲಹರಂ ನುಡಿಯಲಾ ವಾಕ್ಯಮಂ ಕೇಳಿ ಮ
ಮ್ಮಲನೆ ಮಱುಗುತ್ತೆ ನೆಱೆ ಹಮ್ಮಿದಂಬೋಗಿ ಸ
ಲ್ಲಲಿತ ಕರುಣಾಂಬುಧಿಯೆ ಎನಗೆ ಕೊಲೆಗಮ್ಮುವದು ಯೋಗ್ಯಮೇ ಎನ್ನಾಳ್ದನೆ ೧೫

ಕೊಲೆಯಿಂದನಂತಕರ್ಮಂ ಸೇರುಗುಂ ಮಹೋ
ಜ್ವಲಪುಣ್ಯತತಿ ಕಿಡುಗುಮಿಾ ಹಿಂಸೆಗಾರ್ಪೆನೇ
ನಲಿದೆನಗೆ ಕುಡುವವರವಂತಿರ್ಕೆ ಪಾಪಕಾನರ್ಹನೇ ಎಂದು ನುಡಿದ
ಲಲಿತಭಕ್ತಂಗೆ ಭೀರುಗೆ ಪೇಳ್ದನೀಶ್ವರಂ
ಮಲಯುಕ್ತನಂತೆವೊಲ್ ಮತ್ಪ್ರಸಾದಿಗೆ ಸದಾ
ಲಲಿತ ನಿರ್ಮಾಲ್ಯಧಾರಿಗೆ ಪಾಪಪುಣ್ಯಂಗಳಿರವಿಲ್ಲ ಲೋಕದೊಳಗೆ ೧೬

ವಿತತ ಪ್ರಸಿದ್ಧಪ್ರಸಾದಿಯಂ ನಿರ್ಮಾಲ್ಯ
ತತಿನಿಷ್ಠೆಯುಳ್ಳನಂ ಪುಣ್ಯಪಾಪಂಗಳೆಂ
ಬತಿಶಯದ ಕರ್ಮದ್ವಯಂ ಪೊರ್ದದಾತನುರುಕರ್ಮಹರನಪ್ಪ ಕತದಿಂ

ಸತತಂ ನ ಕರ್ಮಾರ್ಹಮೆಂಬ ಸದ್ವಾಕ್ಯಮು
ದ್ಧತನಾದದಿಂದುಲಿವುತಿರ್ಕುಮಿನ್ನುಂ ಕೇಳ
ಯತಿಸುತನೆ ದೃಷ್ಟಮಂ ತೋಱಿ ನುಡಿದಪೆನೆಂದು ಶಂಕರಂ ಮಗಳ್ದು ಪುರ್ದನು ೧೭

ರಸೆ ಜಲಂ ಮೊದಲಾದ ಪಂಚಭೂತಂಗಳೊಳ್
ಮಿಸುಪ ಜಂತುಗಳೊಸೆದು ಪಲಕೆಲವು ಪುಟ್ಟುಗುಂ
ನಿಸದಮಂತಲ್ಲಿಯೇ ಮರಣಮೆಯ್ದುಗುಮವಱ ಹಿಂಸೆಯಾ ಭೂತತತಿಯ
ಒಸೆದೆಂತು ಮುಟ್ಟದಂತೆ[1]ನ್ನಾ[1] ಪ್ರಸಾದಿಯಂ
ಮಸಕದಿಂ ಪುಣ್ಯಪಾಪಂ ಪೊರ್ದವೆಂದು ನುಡಿ
ದೊಸೆದು ಭೀರುಗೆ ಶಿವಂ ಮೃತ್ಯುತ್ವಮಂ ಕೊಟ್ಟನಿದು ಸಿದ್ಧಮನವರತವು ೧೮

ಅದಱಿಂದೆ ಲಿಂಗಪ್ರಸಾದಿಗಳ್ ಕರ್ಮದ್ವ
ಯದ ಸೀಮೆಯಂ ಮೆಟ್ಟರೆಂದು ವಿಪ್ರರ್ಗೊರೆದು
ಮುದದಿಂದೆ ಪಂಡಿತೇಶಂ ಬಳಿಕ್ಕಾ ದ್ವಿಜರ್ಗೆ ದೂರ್ವಾಸನೆಂಬ ಮುನಿಯ
ವಿದಿತ ಕಥೆಯಂ ಪೇಳ್ದನೆಂತೆನಲ್ಕೆರಡನೆಯ
ಮದನಾರಿ ಮುನಿಸಾರ್ವಭೌಮನಪಗತಕೋಪ
ನುದಿತ ಸುಜ್ಞಾನಾನ್ವಿತಂ ದಯಾಕೂಪಾರನಧಿಕ ಶಾಪಾನುಗ್ರಹಂ ೧೯

ಸಲೆ ಪ್ರಸಾದಾನ್ನಂ ಚ ಭುಜ್ಯತೇ ಎಂಬ ನಿ
ರ್ಮಲ ಪುರಾಣೋಕ್ತಿ ಪ್ರಮಾಣದಿಂ ಸಂತತಂ
ಸುಲಭ ಶುದ್ಧಪ್ರಸಾದಪ್ರಸಿತಮಾನಸಂ ದೂರ್ವಾಸಋಷಿರಾಜನು
ನಲವಿನಿಂದಂ ದ್ವಾರವತಿಗೆ ಬರಲಾ ಕೃಷ್ಣ
ನೊಲವಿನಿಂ ರುಕ್ಮಿಣೀಯುಕ್ತನಾಗುತ್ತಮಾ
ವಿಲಸಿತ ಮುನೀಂದ್ರನಡಿದಾವರೆಗೆ ಭಕ್ತಿಯಿಂದಂ ತುಳಿಲ್ಗೆಯ್ದನೊಲ್ದು ೨೦

ಮಿಸುಪಂತವರ್ಗೆ ಕೈಗೊಟ್ಟು ಕರೆದೊಯ್ದು ರಾ
ಜಿಸುವ ಸಿಂಹಾಸನದೊಳಿರಿಸಿ ಪನಿನೀರಿಂದ
ಮೆಸೆವ ಮೆಲ್ಲಡಿಗರ್ಚಿಯೆನ್ನ ಸೈಪಿಂದೆ ಮನ್ಮಂದಿರಕ್ಕೈತಂದಿರಿ
ಅಸಮಾಕ್ಷಸದೃಶ ಮುನಿಕುಲಚಕ್ರವರ್ತಿಯೆಂ
ದೊಸೆದು ಸಲ್ಲಾಪಮಂ ನುಡಿದು ರುಕ್ಮಿಣಿಯನು
ಲ್ಲಸದಿಂದೆ ಕೃಷ್ಣನೀಕ್ಷಿಸಲವಳ್ ಪರಮಾನ್ನಮಂ ಮುಂದೆ ತಂದಿಟ್ಟಳು ೨೧

1 ನ್ನಯೆ (ಗ)

ಎಲೆ ಸ್ವಾಮಿ ಆರೋಗಿಸೆನೆ ಕೃಷ್ಣನಾ ಮುನಿಪ
ನೊಲವಿನಿಂದೀಶಾರ್ಪಣಂಗೆಯ್ದು ಬಳಿಕವಾ
ಲಲಿತಪ್ರಸಾದಮಂ ದೂರ್ವಾಸನಳ್ತಿಯಿಂ ಭೋಜನಂ ಮಾಡಿ ಮಿಕ್ಕ
ಸುಲಭಪ್ರಸಾದಮಂ ವಿಷ್ಣುವಿಂಗಿತ್ತು ನಿ
ರ್ಮಲಸುಪ್ರಸಾದಮಂ ಕೊಂಡುಳಿದುದಂ [1]ನಿನ್ನ[1]
ವಿಲಸ[2]ದಂಗ[2]ದೊಳೆಯ್ದೆ ಲೇಪನಂಗೆಯ್ಯೆಂದು ನುಡಿದನಾ ಮುನಿನಾಥನು ೨೨

ಅಂತೆವೋಲಾ ವಿಷ್ಣು ಮುನಿಭುಕ್ತಶೇಷಮಂ
ಸಂತಸದಿನುಂಡು ಮಿಕ್ಕಾ ಪ್ರಸಾದಮನೊಲ್ದ
ನಂತಭಕ್ತಿಯನೆಯ್ದೆ ಪಾದತಳಮಂ ಬಿಟ್ಟು ತನ್ನಂಗದೊಳ್ ತಳಿಯಲು
ಅಂತದಂ ಕಂಡು ದೂರ್ವಾಸಮುನಿ ನುಡಿದನೋ
ರಂತೆ ನಿನ್ನಂಗಾಲೆ ಬಿಯದನೊರ್ವನ ಶರಕೆ
ಮುಂತೆ ಗುಱಿಯಕ್ಕುಮದಱಿಂ ನಿನಗೆ ಮರಣಮೆಲೆ ಕೃಷ್ಣ ನೋಡಿದು ತಪ್ಪದು ೨೩

ಎಂದು ದೂರ್ವಾಸಮುನಿ ನುಡಿದಂತೆ ಕೃಷ್ಣಂಗೆ
ಸಂದೆಗಮಣಂದೋಱದಾ ಬಿಯದನಿಂದ ಸಲೆ
ಸಂದ ಮರಣಂ ಸಾರ್ದುದದಱಿನೀಶಪ್ರಸಾದಿಗಳ ಮಹಿಮೆಯನಾವನು
ದಂದವೊಡೆಮಂತೆ ಬಣ್ಣಿಪನದಂತಿರ್ಕೆ ಮನ
ದಂದು ಮತ್ತಂ ಕೇಳಿರೆಲೆ [3]ದುಷ್ಟವಿಪ್ರರಿರ[3]
ಮುಂದಿನ್ನೆ ಪೇಳ್ವೆಂ ಸುಕೇಶಮನಪುಂಗವನ ಕಥೆಯನದನಾಲಿಸುವುದು ೨೪

ಮಿನುಪ ವಾಮನಪುರಾಣದೊಳೆ ಪೇಳ್ದಿತಿಹಾಸ
ಮನುನಯಂ ಪೇಳಿತ್ತು ಮುನ್ನೊರ್ವನೆಸೆವ ಸ
ನ್ಮುನಿವಂದ್ಯನೀಶಸದ್ಭಕ್ತನೆನಿಸುವ ಸುಕೇಶ ಪ್ರಮಥಗಣನಾಥನು
ಎನಸುಂ ವಿರಾಜಿಸುವ ಶೀಲವಂತಂ ಸದಾ
ಕನದಮಲ ಸರ್ವಾಂಗಲಿಂಗಪ್ರಸಾದಿ ಮ
ತ್ತನವರತ ಸರ್ವಪ್ರಸಾದಪ್ರಸಾದಿ ಬಳಿಕಂ ಪ್ರಸಿದ್ಧಪ್ರಸಾದಿ ೨೫

ಎನಿಸಿ ಬಾಳುತೆ ಮನದೊಳಾಳೋಚನಂಗೆಯ್ದು
ನಿನಿತುಂ ಪದಾರ್ಥ ಮಿಶ್ರಪ್ರಸಾದಂಗೊಳ್ಳ
ದನಲಲೋಚನಭಕ್ತವಿತತಿಯಿ ಪಂಚಭೂತಂ ಗುಣಂಗಳ ಬಳಿಕ್ಕಂ

---

[1] ಸನ್ನಿ (ಗ) [2] ದನ್ನ (ಕ) [3] ವಿಪ್ರದುಷ್ಟ (ಕ)

ಎನಸುಮುಪಜಿಂ ಜನಿಸಿದಾ ದ್ರವ್ಯನಿಕರಮಂ
ನನಸುಮುಮವಟಿಂಶಂಗಳಂ ಲಿಂಗಮುಖಕಿತ್ತು
ಮನದೊಲವಿನಿಂ ತಾನಮಂ ಭುಂಜಿಸುವುದೆಯ್ದೆ ಸೊಗಸಾಗಲಜಿಯದನಿಶಂ ೨೬

ಕೆಲವು ರೂಪಾರೂಪು ನಿಕರಂಗಳಾಗಿ ಮ
ತ್ತಲಘುತರವಸ್ತುಗಳ್ ಖಂಡಿತಾಖಂಡಿತಂ
ಕೆಲವಿಂತುಟಾಗಿ ತೋರ್ಪಾ ದ್ರವ್ಯತತಿಗಳೊಳ್ ಖಂಡಿತಮದಲ್ಪಮೆನಿಕುಂ
ಸಲೆ ಅಖಂಡಿತಮನಲ್ಪಂ ದಲಿನಿತುಂ ಮಹೀ
ತಲದೊಳೋಷಧಿವಿತತಿ ಖಂಡಿತಮೆನಿಕ್ಕುಮಂ
ತೊಲವಿನಿಂ ಮಿಕ್ಕ ಭೂತಲಮಖಂಡಿತಮೆನಿಕುಮುಮಚಿಕೊಳಗೆ ಖಂಡಿತಮದು ೨೭

ನಿರುತಮಲ್ಪಮಪ್ಪುದಂ ಶಿವಂಗರ್ಪಿಸಲ್ಬರ್ಕು
ಮಿರದಖಂಡಿತಮಾದ ಭೂಮಿಯೊಳ್ ನಿರ್ಮಾಲ್ಯ
ದುರುಪಾದುಕೆಯ ಮೆಟ್ಟಿ ನಡೆಯಲೆಂತುಂ ಪ್ರಸಾದಿಗೆ ಶಕ್ಯಮಾಗದನಿಶಂ
ಪಿರಿದು ಬೆಳ್ದಿಂಗಳಾತಪಮೆಂಬಿವಂ ಪಿಡಿದು
ಕರದಿನರ್ಪಿಸಬಾರದಂತೆವೊಲ್ ಮನದಿಂದೆ
ಭರದಿನರ್ಪಿಸಬಾರದವರಲ್ಲಿ ಚರಿಯಿಪುದು ತಾನದೆಂದುಂ ತೀರದು ೨೮

ಮಿಗೆ ಖಂಡಿತಾಖಂಡಿತಾಕಾರಮುಳ್ಳ ವಾ
ರಿಗಳೊಳಗೆ ವರ್ಷ[1]ಪ್ರವಾಹಾಂಬುಗಳನುಳಿದು
ಸೊಗಸಿನಿಂ ಮಿಕ್ಕ ಜಲಮರ್ಪಣಂಗೆಯ್ವವೊಲ್ ಜ್ಯೋತ್ಸ್ನಾತಪಂಗಳೆರಡಂ.
ತಗುಳ್ದರ್ಪಣಂಗೆಯ್ಯಲಳವಲ್ತು ವಹ್ನಿಯಂ
ಬಗೆದು ಬೇರ್ಕೆಯ್ದು ಶಿವಸಂಸ್ಕಾರಮಂ ಮಾಡಿ
ನೆಗಳ್ದ ದೀಪಾಗ್ನಿಗಳನೀವವೋಲಭವಂಗೆ ಕುಡಲರಿದವಂ ಸಂತತಂ ೨೯

ಪಿರಿದುಂ ಸ್ವವಿಷಯಮುಮಪ್ಪನಿಲನಂ ಬೇರ್ಕೆಯ್ದು
ವರತಾಲವೃಂತಾದಿ ವಾಯುವಂ ಕುಡುವವೋ
ಲಿರದೆ ಘಟಮುಟತತಿಯನಾಶ್ರೈಸಿ ತೋರ್ಪಂಬರಾಂತರಮನೀವಂತಿರೆ
ಮರದ ಮೇಘದ ಗೃಹದಖಂಡಿತಚ್ಛಾಯೆಯಂ
ಹರುಷದಿಂದಂ ಶಿವಂಗೀವಂತೆ ಭಕ್ತರಿಂ
ನಿರುತಮಾ ಜ್ಯೋತ್ಸ್ನಾತಪಂಗಳಂ ಶೂಲಿಗೀವುದು ಕರಮನುಚಿತಮೆಯ್ದೆ ೩೦

---

1 ರುಷ (ಗ)

ಅವಿರತಮಕಾಮಕೃತಗಂಧಾದಿಯಂ ತಿಳಿದು
ತವಕದಿಂದೀಶಾರ್ಪಣಂಗೆಯ್ವವೋಲಿಪಂ
ಸುವಿನಯದಿ ಕುಡಬರ್ಕುಮೆಂಬೊಡೀ ಜ್ಯೋತ್ಸ್ನಾತಪಂಗಳೆಂದುಂ ಭಾವಿಸೆ
ತವೆ ಅಂತರಂಗವಿಷಯಂಗಳೆಂತೆಕೆನಲ್
ಭುವನದೊಳ್ ಶಬ್ದಾದಿಪಂಚವಿಷಯಂಗಳೊಳ
ಗವು ನಾಲ್ಕುವಿಷಯಂಗಳಂತರಂಗದ ವಿಷಯತತಿಗಳೆನಿಕುಂ ನಿರುತದಿಂ ೩೧

ಮಿಗೆ ಬಾಹ್ಯವಿಷಯಮೆನಿಕುಂ ಸ್ಪರ್ಶವೊಂದು ಮುಂ
ನೆಗಳ್ದ ಬೆಳ್ದಿಂಗಳುಂ ಬಿಸಿಲುಮೆಂಬಿವು ನಾಡೆ
ಸೊಗಸುವಾ ಸ್ಪರ್ಶವಿಷಯಂಗಳೆನಿಸುಗುಮದಱಿನಿವು ಬಾಹ್ಯವಿಷಯಮನಿಶಂ
ಅಗಲದೆ ಶರೀರಮಂ ಸೋಂಕಿ ಮತ್ತಾತ್ಮಂಗೆ
ತಗುಳ್ದು ಸುಖಮೆಯ್ದಿಸುಗುಮದಱಿನೀಯೆರಡುಮಂ
ಬಗೆದು ಗಂಧಾದಿಗಳ ತೆಱದಿನೀಶಾರ್ಪಣಂಗೆಯ್ಯನಾ ಸುಪ್ರಸಾದಿ ೩೨

ಪರಿಮಿತಂಗೆಯ್ದ ರೂಪುದ್ರವ್ಯನಿಕರಮಂ
ಪಿರಿದಂತರಂಗಬಹಿರಂಗಾರ್ಪಣಂಗಳಂ
ಪರಮೇಶ್ವರಂಗೆ ರಚಿಸಲ್ಬರ್ಪುದಾವಗಂ ನೀರೂಪವಸ್ತುತತಿಯಂ
ನಿರುತದಿಂ ಭಾವಾರ್ಪಣಂಗೆಯ್ಯಬರ್ಕುಮಿಾ
ವರ ಚಂದ್ರಿಕಾತಪಂಗಳನಾವತೆಱದಿಂದೆ
ಪುರಹರಂಗೀಯಲರ್ಹಂ ತಾವವಲ್ತೊಂದುತೆಱದಿನರ್ಪಿಪೆನೆಂ[1]ದೊ[1]ಡೆ ೩೩

ಪರದೈವ ಕಿರಣಸಂಸ್ಪರ್ಶನಸಮರ್ಪಣಮು
ದುರು[2]ಪೂತಿ[2] ಗಂಧಾರ್ಪಣಂಬೊಲದು ದೂಷ್ಯಮಂ
ತಿರದೆಮಂ[3]ತೀತರ್ಕೆ[3] ನಾಡೆ ಮನದಿಂದಂ ಸಮರ್ಪಿಸುವೆನೆಂದು ಬಗೆದು
ಪುರುಷರ್ಗೆ ಮನಮೆ ಕಾರಣಮೆಲ್ಲಕಾರ್ಯಕ್ಕೆ
ಭರದೆ ನ ತದಾಲಿಂಗ್ಯತೇ ಪತಿಃ ಎಂಬ ಬಂ
ಧುರವಾಕ್ಯಮಾನದಿಂ ಬಾಹ್ಯಾರ್ಪಣದ ತೆಱದೆ ಮನವೆ ಪ್ರವರ್ತಿಸುವುದು ೩೪

ಎಂದು ಬಾಹ್ಯಾರ್ಪಣಂದೊಱೆದು ಭಾವಾರ್ಪಣಮು
ನೊಂದುವುದದಾಗದೆಂತೆನೆ ತನ್ನ ತಾನೆ ನೋ
ಡೊಂದು ನೀರೂಪಮಂ ದಲೆನಿಪ ಪದಾರ್ಥಮದು ಸೋಂಕೆ ಮನದಿಂದೀವುದು

---

[1] ಬೊ (ಕ) [2] ಪೂರಿ (ಗ) [3] ತೆಂತಕ್ಕೆ (ಗ)

ಚಂದಮಕ್ಕುಮದಲ್ಲದೇ ತಾನೆ ಬಯಸಿ ಮುಂ
ತಂದುಕೊಂಡಾ ರೂಪ ವಸ್ತುವಂ ನೋಡಿ ಮನ
ದಿಂದೀಶ್ವರಂಗರ್ಪಿಪುದು ಯೋಗ್ಯಮಲ್ತು ಕ್ರಿಯೆಯಿಂದೀಯವೇಳ್ಕುಮದನು ೩೫

ಕ್ರಿಯೆಯಿಂದ ಕುಡುತಕ್ಕ ವಸ್ತುವಂ ಭಾವದಿಂ
ರಯದಿನೀಯಲ್ಕರ್ಹಮಲ್ತೆಂದು ವಾಕ್ಯಮುಂ
ಪ್ರಿಯದೆ ಘೋಷಿಸುಗುಂ ಕರಾಂಗವಾಂ ಸರ್ಪಿಃ ಶರೀರಸ್ಥಮೆಂದು ಸತತಂ
ನಯದಿಂದೆ ಸರ್ಪಿಯಂತಂತಸ್ಥಮಾದಗ್ನಿ
ನಯನನಾ ಭಾವಾರ್ಪಣದೆ ತೃಪ್ತನ[1]ಲ್ತೆಂ[1]ದು
ನಿಯತದಿಂ ನಕರೋತಿ ಎನುತುಂ ಹಿತಂ ನೃಷುವೆನುತ್ತೆ ವಾಕ್ಯಂ ನುಡಿವುದು ೩೬

ಇಂತಾಗಮುಂ ಮಾನಸಾರ್ಪಣಂ ಸಲ್ಲದೆನು
ತಂತೆ ನುಡಿಯಲ್ ಮಾನಸಾರ್ಪಣಂಗೆಯ್ದುವರ್ಗೆ
ಕಂತುಹರನೀಯನೆಂದುಂ ಹಿತಮನದಱಿನೀ ಜ್ಯೋತ್ಸ್ನಾತಪಂಗಳೆರಡುಂ
ಸಂತತಂ ಸೂಕ್ಷ್ಮಪ್ರಸಾದಿಗಳ್ ಸೋಂಕುವುದ
ದೆಂತುಮಾಗದೆನುತ್ತೆ ಮಂದರಾಚಲಕಂಧ
ರಾಂತರ್ಬಿಲಾಗಾರಮಧ್ಯದೊಳ್ ಭಕ್ತತತಿಗೂಡಿ ಸುಖಗೋಷ್ಠಿಯಿಂದಂ ೩೭

ಪಿರಿದು ಸೀಮೊಲಂಘನವ್ರತದೊಳಿರುತಿರಲ್
ಭರದೆ ನಾರದನೊಂದುವಾಸರಂ ಮುದದಿಂದೆ
ಬರಲಲ್ಲಿಗಾ ದ್ವಾರಪಾಲಕರ್ ಪುಗಲೀಯದಿರೆ ನೊಂದು ತಿರಿಗಿ ರವಿಯ
ಪುರಕೆಯ್ದಿ ಬಂದು ಕೇಳೆಲೆ ಭಾಸ್ಕರಾ ನಿನ್ನ
ಕಿರಣತತಿ ಸೋಂಕಿದೊಡೆ ದೋಷಮೆನುತಾಪಗಂ
ವರ ಸುಕೇಶಂ ಪಿತಗನೊರ್ವನೀ ಮಂದರಾಚಲದ ಬಿಲದೊಳಗಿರ್ಪನು ೩೮

ನಿನ್ನ ಕಿರಣಂಗಳತಿಪಾವನಂಗಳೆನಿಕ್ಕು
ಮುನ್ನ ತನ್ನಿಂ ಸುರಶ್ರೇಷ್ಠನೀ ಕಿತ್ತಡಿಯ
ವನ್ನನ್ನಿಯಿನ್ನರಂ ಕ್ಷಿತಿಯೊಳವನಿಂ ದೂಷ್ಯನಾದ ನಿನ್ನೀ ಬರ್ದುಕನು
ಮುನ್ನೀರೊಳಳ್ದೆಂದು ನಾರದಂ ಕುಯುಕವಮಂ
ಸನ್ನಿದಂ ಪೇಳೆ ರವಿ ಕಿಸುಗಣ್ಣೆ ನುಡಿದನಂ
ತನ್ನಯಮನಾ ಮಂದರಾಚಲಂ ಛಿಟಲೆನುತ್ತೆರಡಾಗಿ ಸೀಳ್ವಂತುಟು ೩೯

---

1 ಲ್ಲೆಂ (ಗ)

ಭರದಿನೆನ್ನಯ ಕಿರಣಹೇತಿಯಿಂ ಸುಡುವೆನಿ
ನ್ನಿರದೆ ನೋಡೆಲೆ ಮುನಿಪ ಎಂದು ಕೋಪಾಗ್ನಿ ಮುಂ
ಬರಿವವೊಲ್ ತನ್ನ ಬೆಂಗದಿರಗಡಣಮನೆಯ್ದೆ ಆ ಗಿರಿಯ ಮೇಲೆ ಸೂಸೆ
ಪಿರಿದು ಸಂವರ್ತಾಗ್ನಿಯಂತೆ ಮಂದರಗಿರಿಯ
ನುರುಪುತಿರೆ ಗಣಪುಂಗವಂ ಸುಕೇಶಂ ಮತ್ತ
ಮುರುನಾದದಿಂ ನಮೋ ರುದ್ರಾಯ ಶರ್ವಾಯ ಭೀಮಾಯ್ಯವೆನುತುಮಿರಲು ೪೦

ಆರವಮನೆಯ್ದೆ ರುದ್ರಂ ಕೇಳಿ ಕೋಪದಿಂ
ದೀ ರವಿಯ ನೋಡೆ ತತ್‌ಕ್ಷಣ[1]ದೊಳಗ್[1] ಧರಣಿಯೊಳ್
ಸೂರನುಱೆ ಬಿಳ್ದು ಪೊರಳುತ್ತಿರ್ದನಣಿಯರಂ ತನ್ನ ಪನ್ನತಿಕೆ ಜಾಱೆ
ಓರಂತೆ ಶಶಿಧರಾ ಶಂಕರಾ ಕಾರುಣ್ಯ
ವಾರಿಧಿಯೆ ಭಕ್ತಯೋಗಕ್ಷೇಮಕರನೆಯಾಂ
ಕ್ರೂರಕರ್ಮಂ ನೀಂ ದಯಾಳುವೆನ್ನಂ ಕಾಯ್ವುದೆನುತೆ ನೋಱೆಯಿಡುತೆ ಬಳಿಕಂ ೪೧

ಪಿರಿದು ಬಲವಂದು ವಂದನೆಗೆಯ್ವ ಭಾನುವಂ
ಹರನೀಕ್ಷಿಸುತ್ತೆ ನುಡಿದಂ ರವಿಯೆ ಸುಜ್ಞಾನ
ಪರರ್ಗೆ ಲಿಂಗಾರ್ಚನಾಸಕ್ತರ್ಗೆ ಮದ್ಭಕ್ತವಿತತಿಗಪರಾಧಿ ನೀನು
ನಿರುತದಿಂ ಮುನ್ನೆ ಘಂಟಾಕರ್ಣನಿಂದೆ ನಿ
ನ್ನುರುಶರೀರಂ ಕುಷ್ಠವಾದ[2]ತ್ತು[2] ದಲ್ ಮನೋ
ಹರಪಾದತೀರ್ಥದಿಂದಾ ಕುಷ್ಠಮಳಿಯಿತ್ತದಂ ಮಱದೆಯಕಟ ಎಲವೊ ೪೨

ಮಿನುಪ ಜನ್ನದೊಳಂದು ಪಲ್ಗಳುಂ ಪದವಿಗಳು
ಮಿನಿತುಳಿಯದಂತೆ ಪೋದವು ಸಮಂತೆನಗೆ ನೀಂ
ಘನಶಿಲಾಭಾವಾಂಗುಳೀನಾಮಮುಳ್ಳ ತಾಣದೊಳೆಯ್ದೆ ಪತ್ತುವೆರಲಂ
ವಿನಯದಿಂದರ್ಪಣಂಗೆಯ್ದು ನಿಜಪದಮನತಿ
ವಿನುತ ರತಿಯಿಂ ಪಡೆದುದಂ ನೆನೆಯಬೇಡವೇ
ಇನಿತನೆಲ್ಲಂ ಮಱೆಯೆ ನಾರದನ ನುಡಿಗೇಳಿ ಧರೆಗೆ ಬೀಳ್ವಂದಮಾಯ್ತು ೪೩

ಇರದಿನ್ನೆ ವಾರಾಣಸಿಯನೆಯ್ದಿಯಲ್ಲಿ ಭಾ
ಸುರ ವಿಧಾನೋಕ್ತಿಯಿಂ ಲಿಂಗಪ್ರತಿಷ್ಠೆಯಂ
ವಿರಚಿಸಿಯದರ್ಕೆ ಬಾಲಾರ್ಕೇಶ್ವರಂ ಎಂಬ ಪೆಸರಿತ್ತದಂ ಲಿಂಗಮಂ

---

[1] ಕೆ ವರ (ಗ) [2] ಲ್ತು (ಗ)

ಭರದೆ ಪೂಜಿಸೆ ನಿನ್ನ ಪದಮಕ್ಕುಮೆಂದು ಬಂ
ಧುರಕೃಪಾನಿಧಿ ಶಿವಂ ಪೇಳಲಾ ಭಾನು ಮಿಗೆ
ಉರುಳುತುರುಳುತ್ತೆ ವಾರಾಣಸಿಯ ಸೇರಿ ಬಾಲಾರ್ಕೇಶನಂ ಪೂಜಿಸಿ ೪೪

ಎಸೆವ ಮುನ್ನಿನ ತನ್ನ ಪದವಿಯಂ ಪಡೆದನೆಂ
ದಸಮಲೋಚನ ಸದೃಶ ಪಂಡಿತೇಶಂ ವಿಪ್ರ
ವಿಸರಕ್ಕೆ ಲಿಂಗಪ್ರಸಾದಿಗಳ ಮಹಿಮೆಯಂ ಪೇಳ್ದು ಮತ್ತಿಂತೆಂದನು
ಅಸಮಪ್ರಸಾದದಾ ಮಹಿಮೆಯಂ ಪೊಗಳ್ವಡಾ
ರಸನೆಯೊಂದುಳ್ಳ ಮಾನವರ್ಗೆಂತುಮಾಗದಾ
ಮಿಸುಪ ಸಾಸಿರನಾಲಗುಳ್ಳ ಭ್ಲಾಸುಗಿಗರಿದುಮರಿದುಂ ಭಾವಿಸೆ ೪೫

ಎಂದು ಪೇಳಲ್ ಕೇಳ್ದು ಭೂಸುರಾವಲಿ ಮಿಗೆ ಮ
ನಂದಂದು ಪಂಡಿತಾರಾಧ್ಯರಂ ಕೀರ್ತಿಸುತೆ
ಮುಂದಲೆಯೊಳಿಟ್ಟ ಕರಪುಟದಿಂದೆ ವಂದಿಸುತೆ ಭಕ್ತಿಯುಳ್ಳ[1]ರು[1]ಮಾಗುತೆ
ಮಂದಿರಂಗಳ್ಗೆಯ್ದಿದರ್ ಬಳಿಕ ಮತ್ತಲ್ಲಿ
ಚಂದನಡೆವಂತಭವಪೂಜೆಗೆಯ್ಯುತ್ತೆ ಸಲೆ
ಸಂದ ಸೊಕದಿಂ ಪಂಡಿತೇಶನಿರ್ದಂ ನಿಜಾವಾಸದೊಳಗತಿಮುದದೊಳು ೪೬

ಸದಮಲಪ್ರಚುರವಿಶ್ರುತ ಪರಮಭಕ್ತಗಣ
ಪದಸರೋರುಹಸಾಂದ್ರ ಮಕರಂದಪಾನ ಸ
ಮ್ಮುದಿತ ಚಂಚಚ್ಚಂಚರೀಕನನವರತ ಪಂಚಾಕ್ಷರೀಪ್ರಸಿತಹೃದಯಂ
ವಿದಿತ ಮಂಜುಲನೀಲಕಂಠಾಹ್ವಯಂ ಮನೋ
ಮುದದೆ ಪೇಳ್ದುರುತರಾರಾಧ್ಯಚಾರಿತ್ರದೊಳ
ಗಿದು ಸುಘಂಟಾಕರ್ಣ ಭೀರು ದೂರ್ವಾಸರ ಸುಕೇಶಮಾಹಾತ್ಮ್ಯ ಕಥನಂ ೪೭

---

[1] ಸು (ಗ)

# ಏಳನೆಯ ಸಂಧಿ

## ಕೆಂಭಾವಿ ಭೋಗಣ್ಣಗಳ ಕಥೆ; ಸೂರಸಾಂಬಾ ಚರಿತ್ರಂ

**ಸೂಚನೆ :** ಚಾರು ಕೆಂಭಾವಿ ಭೋಗಣ್ಣನುರುಮಹಿಮೆಯಂ
ಸೂರಸಾನಾಂಬೆ ವಿಪ್ರರ್ಗೊರೆದಳದನೆಯ್ದೆ
ಸೂರಸಚಿವೇಂದ್ರ ನಿನಗುಸುರ್ದಪೆಂ ಕೇಳ ಮನದೊಲವಿನಿಂದಂ ಸಂತತಂ

ಶ್ರೀಮದಮೃತಾಂಶುಲೇಖಾಂಕಿತಕಿರೀಟ ಸು
ತ್ರಾಮಮುಖನಿರ್ಜರಸ್ತೋಮವಂದಿತಪಾದ
ಕಾಮಮದ ಭೂಮಿಧರವಿದಳನಾಯತನಿಶಿತಶತಕೋಟಿ ಸದೃಶನೇತ್ರ
ಹೈಮವತ್ಯಂಗ ಸುಮನಃಸುರಭಿಮದಭೃಂಗ
ಸಾಮಗಾನಾನಂದ ನಾಮರೂಪಾತೀತ
ಕಾಮಿತಫಲಪ್ರದಾಯಕ ರಕ್ಷಿಸೆಮ್ಮಮಂ ಪ್ರೇಮದಿಂ ನೀಲಕಂಠ ೧

ಸೂರ ಸಚಿವಾಗ್ರಣಿಯೆ ಕೇಳಿತ್ತಲೀ ಪಂಡಿ
ತಾರಾಧ್ಯರೊಪ್ಪುತಿರ[1]ಲ[1]ತ್ತ ಸದ್ಭಕ್ತಿಯುತೆ
ಸೂರಸಾನಾಂಬೆಯೆಂ[2]ಬಾ ಭ[2]ಕ್ತೆ ಪೋರಂ[3]ಡ್ಲ[3]ವೆಂಬಗ್ರಹಾರದೊಳಗೆ
ವೀರಶೈವಾಚಾರ ಲಕ್ಷ್ಮಿಯೆಂಬಂತೆ ಭವ
ದೂರೆ ತನ್ನಯ ಭರ್ತೃ ಕಳಿದ ಬಳಿಕಂ ಜಂಗ
ಮಾರಾಧನೆಯ ಮುನ್ನಿನಂತೆಸಗುತಿರ್ಪಳತಿಸಾಶ್ಚರ್ಯಮಾಗೆ ಜಗಕೆ ೨

ಅದನೆಯ್ದೆ ಕಂಡು ಸ್ವೈರಿಸ[4]ಲಾರ[4]ದಾಯೂರ
ವಿದಿತ ವಿಪ್ರರ್ ನೆರೆದು ತತ್ಪುರಾಧಿಪನಿರ್ದ
ಸದನಕೆಳ್ತಂದಾತನೊಡನೆ ನುಡಿದರ್ ಮಹೀಪತಿ ನೀನೆ ಆದೊಡೆಮ್ಮ
ಸದಮಲಗ್ರಾಮದೊಳಮುತ್ಪಾತಮುಣ್ಮುವುದೆ
ಪದೆದು ನೀವೆಂದುಮಿದನಱಿಯಿರೋ ಬಲ್ಲೊಡಂ
ಪು[5]ದುಗಿ[5]ಕೊಂಡಿರ್ಪಿರೋ ಎಂದವಂ ಕುಪಿತನಪ್ಪಂತುಸಿರ್ದ ವಿಪ್ರತತಿಗೆ ೩

---

[1] ಲಿ (ಕ) [2] ಬಸದ್ಭ (ಕ) [3] ಡ (ಕ) [4] ಲಜಿಸಿಯ (ಗ) [5] ದಿದು (ಗ)

ಧರಣಿಪಂ ನುಡಿದನೇನೆಂದು ಪೇಳಿಮೆನುತ್ತೆ
ಪಿರಿದದಂ ಪೇಳ್ವುದೇಂ ಸೂರಾಂಬೆಯೆಂಬವಳ್
ಕರಮಶುಚಿ ವಿಧವೆ ಈ ಗ್ರಾಮದೊಳು ಪೊಲೆಗಲಸಿದಳ್ ಕೇಳಿಮೆಂತೆಂಬೊಡೆ
ನಿರುತಮೇಂ ಪುರ್ಚುಮರ್ದಾಗಿದಳೋ ವೈಧವ್ಯ
ದಿರವ ಬಿಟ್ಟಳ್ ಕೆನ್ನೆಕದಪುಗಳ್ ಮುಟ್ಟುವಂ
ತಿರೆ ಭೂತಿಯಂ ಸಾಂದ್ರಮಾಗೊರೆದುಕೊಂಡು ಮೆಯ್ಯೊಳ್ ತಳೆದುಕೊಂಡು ಮತ್ತಂ ೪

ಶ್ರುತಿಗಳೊಳ್ ಕಂಠದೊಳ್ ಕರದೊಳ್ ಶಿರಸ್ಸಿನೊಳ
ಗತಿಶಯಂ ರುದ್ರಾಕ್ಷನಿಕರಂಗಳಂ ಧರಿಸಿ
ನುತ ಶುದ್ಧಭಕ್ತಿತತ್ಪರೆಯಂತೆ ಜಂಗಮಂ ಕಾಣುತ್ತಲತಿಮುದದೊಳು
ನುತಿಸುತವರಂ ತನ್ನ ಮನೆಗೆ ಕೊಂಡೊಯ್ದು ಸಂ
ತತಮವರ ಕಾಲ್ಗರ್ಚಿ ನೀರ್ಗುಡಿವಳವರುಂಡ
ವಿತತಮುಚ್ಛಿಷ್ಟಮಂ ತಾನುಂಬಳುತ್ಯಜರುಮವರಾದೊಡಂ ಪೇಸದೆ ೫

ಪಿರಿದುಮಿಂತೀಯಗ್ರಹಾರದೊಳ್ ಪೊಲೆಗಲಸು
ತಿರೆ ನೀಮುಮಱಿಯದಂತಿರಲಾರ್ಗೆ ಪೇಳ್ದಪೆವು
ಕರಮದಂತಿರ್ಕೆ ಬಳಿಕಿನ್ನಾದೊಡಂತ್ಯಜರನವಳ ಮನೆಯೊಳ್ ತೋಱಲು
ನಿರುತ[1]ದಿಂ[1] ಶಿಕ್ಷಿಪುದದುಂಟೊ ಇಲ್ಲವೊ ಪೇಳಿ
ಮಿರದೆನಲ್ಕಾ ನೃಪತಿ ಮಿಗೆ [2]ಕನಲ್ದ[2]ವರೊಡನೆ
ಭರದೆ ನುಡಿದಂ ತನ್ನಿಕೇತ[3]ನದೆ[3] ತೋಱಿದೊಡಮವಳ ದಂಡಣೆಗೆಯ್ವೆನು ೬

ಎಂದು ವಿಪ್ರರ ಕಳುಪಲವರ್ಗಳತಿವೇಗದಿಂ
ಬಂದು ಮಿಗೆ ಸೂರಸಾನಾಂಬೆಯಱಿಯದ ತೆಱದಿ
ನಂದು ತನ್ಮಂದಿರಮನಾರೈವುತಿರ್ಪ ವೇಳೆಯೊಳಿತ್ತ ವಿಕೃತವೇಷಂ
ಮುಂದೆ ಸುಳಿದಂ ದೊಡ್ಡಮೋರೆಯುರ್ಬಿದ ತೋಳ್ಗ
ಳೊಂದಿ ತೊಳೆಯದ ಮಲಿನದಂಗವೊಳಬಾಗಿ ವಿ
ಚ್ಛಂದಮಾಡೊಳ್ದೊಡೆ ಕರಂ ಕೂನಬೆನ್ ನಿಟ್ಟೆಗಣ್ ಕುಂಭಸದೃಶೋದರಂ ೭

---

1 ಮಿಂ (ಗ) 2 ಕೆಲದ (ಕ) 3 ದೊಳ್ (ಗ)

ಅಗುಳ್ದು ಪತ್ತಿದ ಕೊರಲ್ ಪೊಱವಾಯ್ದು ಕೀನಿವಲ್
ಬಗ್ಗೆಯೆ ವಕ್ರೋರು ನಾಸಿಕಮೆಸೆವ ಗುಜಱುದಲೆ
ತೊಗಲ ಕೊಯ್ಯುಲಪಾಯದಿಂ ಕತ್ತಿ ತಾಗಿದಂತೆಸೆವೊಡೆದ ಕರದ ಗಾಯಂ
ನೆಗಳ್ದ ಹೞಗಡ್ಡ ಹಕ್ಕಲ್ಮೀಸೆಗಳ್ ಮನಂ
ಬುಗುವ ನೊಸಲೊಳ್ ತೋರ್ಪ ಸಿತಭೂತಿ ಕಂಧರದೊ
ಳಗೆ ಮಿಱುಪ ರುದ್ರಾಕ್ಷಮಾಲೆಯುಚ್ಛಸ್ಫಟಿಕಮಣಿಗೂಡಿ [1]ತೊಳಗು[1]ತಿರ್ಪ ೮

ನಿರುತದಿಂ ಗುಜ್ಜುದಲೆ ನವಿರೊಳಗೆ ತೋರ್ಪ ಭಾ
ಸುರಲಿಂಗ ಸೂತ್ರದೊಳ್ ಗಂಟಿಕ್ಕಿ ಮೆಱೆವ ವಿ
ಸ್ಫುರದೀಶ ಸೆಜ್ಜೆಯುಡಿದಡುವುದಲೆಯಱುವೆ ಪೆಗಲೊಳ್ ಮಿಣೆಯು ಪೊಱೆ ಕರದೊಳು
ಪಿರಿಯ ಸಂಬಳಿಗೋಲ ಪಿಡಿದ ಶಿವನಂತ್ಯಜನ
ವರವೇಷಮಂ ಧರಿಸಿಯಾ ಪುರಮನೆಯ್ದಿ ಸ
ತ್ವರಗತಿಯಿನಾ ಕೇರಿಗೇರಿಯೊಳ್ ತಿರಿಗಿಡಂ ಮಿಣಿಬಿಲ್ತುಗೊಳ್ಳಿಮೆನುತೆ ೯

ಸಲೆ ಘೋಷಿಸುತ್ತೆ ಪಾರ್ವರ ಕಂಡೊಡೋಸರಿಸಿ
ನಿಲುತೆ ಮಿಗೆ ಸಂಬೋಳಿ ಎನುತೆ ಮಿಣಿ ಮಾಱುತ್ತೆ
ನಲಿದು ಮನೆಮನೆ ಬೀದಿಬೀದಿಯೊಳ್ ತಿರುಗುತ್ತೆ ಮಿಣಿಗೊಳ್ಳಬಂದವರ್ಗೆ
ಒಲವಿನಿಂ ಪಿರಿದೊಂದೆರಳ್ಮೂಱುಮಡಿಯಾಗಿ
ಬೆಲೆವೇಳುತುಂ ಕೇರಿಗೇರಿಯೊಳ್ ಮರಳಿ ಮ
ತ್ತಲಸಿದುದ್ಘೋಷಿಸುತೆ ತಿರುತಿರುಗಿ ಪೊಕ್ಕ ಮನೆಯಂ ಮರಳಿ ಮರಳಿ ಪೊಗುತೆ ೧೦

ಮಿಱುಪ ಭಕ್ತರ ಕಂಡೊಡವರಡಿಗೆ ಸಂತಸದೆ
ಸಱನಾತಿ ಸಱನಾತಿ ಸಱನಾತಿ ಎಂದು ಸಲೆ
ತಱಸಂದು ವಂದಿಸುತ್ತವರ ಪಳೆಗೆರ್ಪುಗಳನೊಸೆದು ನೆಱೆಪೊಲ್ದು ಕೊಡುತೆ
ಉಱುವ ವಿಪ್ರವಿತಾನಮೆಲ್ಲಕ್ಕೆ ಸಂದೆಗಂ
ನೆಱೆಯದಂತೆಯ್ದೆ ಸೂರಾಂಬಿಕೆಯ ಮನೆ[2]ಗೆಯ್ದಿ[2]
ಕಱೆಗೊರಲನಂತ್ಯಜನ ವೇಷದಿಂ ಬಂದನಾ ಸತಿಯ ಮನೆಯಂ ಕೇಳುತೆ ೧೧

ಆನಿತಱೊಳಗಾ ದನಿಯ ಸೂರಸಾನಾಂಬೆ ಘ
ಮ್ಮನೆ ಕೇಳುತೆಳ್ತಂದು ನೋಡಲ್ಕೆ ಕಟ್ಟದಿರೊ
ಳನುನಯಂ ಭೂತಿರುದ್ರಾಕ್ಷಿಲಿಂಗಂ ತೋರ್ಪ ತನ್ಮೂರ್ತಿಯಂ ಕಾಣುತೆ

---

[1] ತೋಱು (ಕ)  [2] ಗಾಗಿ (ಗ)

ತನುಪುಳಕದಿಂದ ಗುಡಿಗಟ್ಟಿ ನಯನಾಂತದೊಳ್
ಘನಹರ್ಷವಾರಿ ಸೂಸಲ್ ಕಾಲ್ಗೆ ವಂದಿಸುತೆ
ಮನೆಗೆ ಕರೆದೊಯ್ದು ಮಣಿಹೊಱ[1]ಯುಮಂ[1] ಗುಂಟಿಕೆಯೊಳಿರಿಸಿ ನೆಱ ಕೈಯೊಳಿಸೆವ ೧೨

ತೊಗಲ ಚೀರಂ ವೇದಿಕಾಮಧ್ಯದೊಳ್ ಬೈತು
ಮಿಗೆ ಕಳೆದುಕೊಂಡು ಸಂಬಳಿಗೋಲ ಮುಂಜೂಱ
ಳಗೆ ಸಮಂತಿಟ್ಟು ಕೈವುಳಿಗತ್ತಿಗಳನುತ್ತರಾಸದೊಳ್ ಸಸಿನೆ ಮಡಗಿ
ಸೊಗಸಿನಿಂ ಪಾದಂಗಳಂ ತೊಳೆದು ತೀರ್ಥಮಂ
ಬೊಗಸೆಯೊಳ್ ಮೊಗೆದೀಂಟೆ ಗೃಹದೊಳಗೆ ರಾಜಿಸುವ
ನೆಗಳ್ದ ಪೀಠದೊಳಯ್ಯನಂ ಮೂರ್ತಿಗೊಳಿಸಿ ಮುಂಗದವನಗುಳಿಯ ಬಲಿದಳು ೧೩

ಬಳಿಕ ಲಿಂಗಾರ್ಚನೆಗೆ ಸಂತಸದಿನನುಮಾಡಿ
ಲಳಿತ ಪಕ್ವಾನ್ನಸಂಯುಕ್ತ ನೈವೇದ್ಯಮಂ
ತೊಳಪ ಕದಳೀಪತ್ರದೊಳ್ ಬಡಿಸಿ ಮುಂದಿರಿಸೆ ಶಿವನೊಲ್ದು ಭುಂಜಿಸುತಿರೆ
[2]ಘು[2]ಳಿಲನಾ ವೇಳೆಯೊಳ್ ಭೂಸುರರ್ ನೆರೆದೆಯ್ದಿ
ಗಳಗಳನೆ ನುಡಿದ[3]ರೀ[3] ಸೂರಾಂಬೆ ಇನಿತುದಿನ
ವಳುಕದೆಮ್ಮೂರೊಳಗೆ ಪೊಲೆಗಲಸುತಿರ್ದಳೀಗಗಪಟ್ಟಳಿಮ್ಮ ಕೈಗೆ ೧೪

ಎನುತ ಸೂರಾಂಬೆ ಜಂಗಮಕೆ ನೀನಿನಿತುದಿನ
ಮನುನಯಂ ನೀಡಿದನ್ನದ ಫಲಂ ನಿನಗಿಂದು
ಘನದುಃಖಮಂ ಮಾಡಿತೆಂದು ನುಡಿಯುತ್ತುಮಂತೋರೋರ್ವರತಿಮುದದೊಳು
ಮನೆಯ ಪೊಱಗದವ ಬೀಯಗಮುಸುಱ ಬಲಿದು ವಾ
ಮನಭಟ್ಟನುಂ ತೋಯಕೇಶವನುಮಿರ್ವರುಂ
ಸನಯದಿಂ ಕಾದುಮಿರಿಮೊಲ್ದು ಪಿಂಗಡೆಯೊಳಗೆ ಜತನಮಿರು ಮಾಚಿಭಟ್ಟ ೧೫

ವಿಳಸ ರಾಮನ ಕೂಚಿಪಾಯಸದ ಮೈಲಾರ
ನೊಳಗಾದವರ್ ಜತನದಲ್ಲಿ ಕಾದಿರಿಮೆನುತೆ
ಬಳಿಕಂ ತಳಾಱರಂ ಕರೆದು ಕಾಪಿಟ್ಟು ಭಾಸ್ಕರಭಟ್ಟ ಮುಖ್ಯರಾದ
ಲಳಿತ ದಾಮೋದರಂ ವರಸೋಮಯಾಜಿಗಳ್
ಪಳೆಯ ಸಮ್ಮಾವುಗೆಯ ಮಾಧವಂ ಪೆದ್ದಿಗಳ್
ಪಳೆಯ ಧೋತ್ರದ ದಾನ[4]ಮ[4]ರಸನಂಬಿಲದಣ್ಣಮರಸನುದ್ದಂಡ ಕೃಷ್ಣಂ ೧೬

---

[1] ಯಮುಮಂ (ಗ)   [2] ಗ (ಕ)   [3] ಳೀ (ಗ)   [4] ದ (ಕ)

ಪಾಯಸದ ಸಾಯಣ್ಣ ಭಟ್ಟ ಮಾಚಣ್ಣ ಗಳ್
ಜೋಯಿಸದ ಸಿಂಗಣ್ಣ ನುಂಡಲಿಗೆಯಲ್ಲಾಳ
ಸಾಯಭಟ್ಟರ ಚಿಕ್ಕಿ ಹೋಳಿಗೆಯ ಭಾಸ್ಕರರ್ ತೊಗರಿ[1]ಗೊಟ್ಟೆಯ ಅಯ್ಯಣಂ[1]
ತೋಯ[2]ಕು[2]ಪ್ಪಣ್ಣನುದ್ದಂಡ ಯಜ್ಞಂ ಬದಣೆ
ಗಾಯ[3]ಹೋಳ್ಗ[3]ಳ ಭಾಸ್ಕರಂ ಧೂರ್ತವಿಟ್ಠಲಂ
ಮಾಯಣ್ಣ ಚಪ್ಪಟೆಯ ಚನ್ನಿಭಟ್ಟಂ ಮಿಂಡವಲ್ಲಭಂ ಪೋಚಿಭಟ್ಟಂ ೧೭

ಇಂತಿವರ್ ಮೊದಲಾದ ವಿಪ್ರರೆಲ್ಲೊಗ್ಗಾಗಿ
ಮಂತಣಂಗೆಯ್ದು [4]ತ[4]ಮ್ಮೊರೆಱಿಯನಿರ್ದಲ್ಲಿ
ಗಂತೆಯಿದ್ದು ಬಂದಧಿಪ ಮುನ್ನೆ ನಿಮಗೊರೆದಂತೆ ಸೂರಸಾನಾಂಬೆಯಿಾಗ
ಸಂತಮಿರದೊರ್ವನಂತ್ಯಜನನೆಮ್ಮೆಲ್ಲರಱಿ
ವಂತೆ ತನ್ನಯ ಗೃಹಕೆ ಕರೆದುಕೊಂಡೊಯ್ದಳೋ
ರಂತಿದಂ ಕಂಡುಸಿಕನಿರ್ಪ ಪರಿಯಂತೆನಲ್ ಭೂಪನತಿಕೋಪದಿಂದೆ ೧೮

ಬಂದನಾ ವಿಪ್ರರೊಡಗೂಡಿ ಸೂರಾಂಬಿಕೆಯ
ಮಂದಿರಕೆ ಬಳಿಕಮಿಂತೆಂದರಾ ಭೂಸುರರ್
ನಿಂದಿತ್ತ ನೋಡ[5]ರಸ[5] ಗುಂಟಕೆಯ ಮೇಲಿರ್ಪ ಮಣಿಯ ನಾದಿಗೆಯ ನಡುವೆ
ಒಂದಿಪ್ಪ ತೊಗಲ ಚೀರವನೆಂದು ತೋಱಿಸ
ಲ್ಕಂದೆಲ್ಲರಕ್ಕಜಂಬಡುತಿರ್ಪ ಸಮಯದೊಳ
ಗೊಂದುವಂ ತಾನಱಿಯದಂತೆ ಶಿವನಾರೋಗಿಸುತ್ತೊಳಗೆ ದನಿದೋಱುತೆ ೧೯

[6]ಸ[6]ರಸಲೇಹ್ಯಾದಿಗಳ ಸವಿಯುತ್ತೆ ಪಾಯಸವ
ನುರುತರಧ್ವನಿಯಿಂದೆ ಸುಱಿವುತ್ತೆ ಕಣ್ಣೀರ
ಭರದೆ ಘುಟುಕಿಸಿಕೊಳುತೆ ಗಂಡೂಷಮಂ ಮಹಾನಾದದಿಂ ಮಾಡುತೊಲ್ದು
ಹ[7]ರಿಸ[7]ದಿಂದಿಂತು ಶಿವನಾರೋಗಿಸುತ್ತಿರಲ್
ನೆರೆದ ವಿಪ್ರರ್ ಪೊರೆಗೆ ಭೂಪತಿಗೆ ಸೂಚಿಸು
ತ್ತಿರವ ಕಂಡಿರೆ[8]ಯ[8]ವನ ನಿಶ್ಶಂಕತೆಯ ತನ್ನ ಥಾಳಿಯೆಂಬುದನಱಿಯದೆ ೨೦

ಪಿರಿಯಗ್ರಹಾರಮಿದಱೊಳಗಗ್ರಜರ ಗೃಹನಿ
ಕರಮುಂಟು ಬಳಿಕಮಿಲ್ಲಿರ್ದೊಡೆನಗತಿಭಯಂ
ಕರಮಕ್ಕುಮಿಂತಪ್ಪುದೆಂಬ ಶಂಕಾನೀಕಮಿನಿತು ಮನದೊಳ್ ತೋಱದೆ

---

[1] ಗೋಟೆಯ ಆಯ್ತಣಂ (ಗ) [2] ತು (ಕ) [3] ಪೊಳ್ಮ (ಕ) [4] ನ (ಗ) [5] ಧಿಪ (ಗ) [6] ಸು (ಕ) [7] ರುಷ (ಗ) [8] ಯಿ (ಗ)

ಭರದಿನೆನ್ನಂ ಪಿಡಿಯ ಬಂದಿರ್ದರೆಂಬಳ್ಕು
ಶರಿರದೊಳಗೆಳ್ಳನಿತು ಜನಿಯಿಸದೆ ಮತ್ತಿವರ
ಕರದೊಳಗಪಟ್ಟೆನಗದೆಂತಪ್ಪುದೋ ಎಂಬ ಚಿಂತೆಯಣಮಂ ತೋಱದೆ ೨೧

ಎನಸುಮಿವರಿಂದೆನ್ನ ಬಲ್ಪನುಡುಗಿಪರೆಂದು
ಮನದೊಳಗೆ ಧೃತಿಗೆಡದೆ ಅವನಿಪಂ ಕೇಳ್ದೊಡಂ
ತನುವ ತತ್ತಱದಱಸುವಂ ಬಳಿಕವೆಂಬ ಪೆಳಱಣಮೆಯ್ದೆ ತಲೆದೋಱದೆ
ನನಸುಮೆನಗಂ ಸಾವು ತಪ್ಪದೆಂತೆಂದು ತೊ
ಟ್ಟನೆ ಉಂಡು ಸತ್ತಪೆನೆನುತ್ತಮಂ ಶಂಕಿಸದೆ
ದನಿಗೆಯ್ವುತಂ ರಸರಸಾಯನಮನುಣ್ಣಲೀ ಸೂರಸಾನಾಂಬೆ ಬಳಿಕಂ ೨೨

ಪಿರಿದುಮೆಮ್ಮೆಲ್ಲರೊಳಗಿರ್ಪಿರವು ತಪ್ಪುಗುಂ
ಕರಮೆ ಕುಲಧರ್ಮಮಳಿಗುಂ ಮೋಚಿಯಿರ್ಪುದಿದು
ಭರದೆ ಕಿಡುಗುಂ ನೋಡಿದೆಗ್ಗುಮೆನ್ನದೆ ವನಿತೆ ವರ್ತನಂತಪ್ಪಿನಡೆಯೆ
ನಿರುತದಿಂ ವಿಧ್ಯುಕ್ತಮಾದ ಕರ್ಮಂಗಳಿಂ
ಪರಿಹರಿಸಬಾರದೆಂಬುದನಱಿದು ನೋಡದಾ
ನೆರವಪ್ಪೆನೀ ವಿಪ್ರರೊಡನೆರೆದು ಬಾಳ್ವುದರ್ಕೆಂದು ಮನದೊಳ್ ಬಗೆಯದೆ ೨೩

ಮುಂದೆ ಪಿತೃಲೋಕಮಾರ್ಗಂ ದೂರಮಪ್ಪುದೆನ
ಗೆಂದು ಬಗೆಯದೆ ನೃಪತಿಯಱಿದನಾದೊಡೆ ಕರಂ
ಬಂಧನಮುಡೆನಗಕ್ಕುಮದಱಿನೆನ್ನಯ ಬರ್ದುಕು ಸಂದೆಗಂ ತಾನೆನ್ನದೆ
ಕುಂದಪ್ಪೆನೆನ್ನ ಬಂಧುಗಳ ಮಧ್ಯದೊಳೆನ್ನ
[1]ಛಂ[1]ದಮಿಲ್ಲದೆ ಸಮಂತಂತ್ಯಜನ ಗೃಹದೊಳಗೆ
ತಂದಿರಿಸಿಕೊಂಡು ಸಲೆಸಂದ ಸತ್ಕುಲಕುಜಕೆ ಕೊಡಲಿಯಾದಳ್ ಭಾವಿಸೆ ೨೪

ಎನುತೆ ಭೂಪತಿಯೊಡನೆ ನುಡಿದಿಂತು ಭೂಸುರರ್
ಕನಲಿಯೋರೋರ್ವರು[2]ಬ್ಬೆಳ್ದು[2] ಸೂರಾಂಬಿಕೆಯ
ಮನೆಯ ಕೇರಂ ಕೆಡಪಿಯರ್ಗಳವ ನುರ್ಗೊತ್ತಿ ಕದವನೊಡೆದೀಡಾಡುತೆ
ತೊನೆದು ಸೂರಂ ಸೇರಿ ಪಿರಿಯುತ್ತುಮಂತ್ಯಜನ
ನನುನಯದೆ ಪಿಡಿದು ಪೆಡಗುಡಿಗಟ್ಟಿ ತನ್ನಿಮೆಂ
ದೆನಸುಮಿರದಿಂತು ನುಡಿಯುತ್ತಿರ್ಪ ವೇಳೆಯೊಳ್ ತದ್ವನಿತೆ ಪೊಱಗನೆಯ್ದಿ ೨೫

---

1 ದಂ (ಕ) 2 ಬ್ಬೆದ್ದು (ಗ)

ಜಡಿದು ನುಡಿಯುತ್ತವರ ನಿಮ್ಮ ವಂದಿಗರಪ್ಪ
ನಿಡುವೊಲೆಯುರೀಶಭಕ್ತರ ಗೃಹಕೆ ಬರ್ಪರೇ
ಕಡುಪಿನಿಂದವರ ಕೇರಿಯೊಳಂತ್ಯಜರ್ ಸುಳಿವುದಿಲ್ಲ ಪರಿಕಿಸೆ ನಿತ್ಯವು
ಮಡದೊಳಗೆ ನೋಡಿಮಂತ್ಯಜನಿರ್ದಪನೆಯೆಂದು
ನುಡಿಯುತ್ತ ಕೇಳಿರೆಲೆ ವಿಪ್ರರಿರ ಸಂತತಂ
ಮೃಡಭಕ್ತರಾಲಯಕೆ ಮೃಡರೂಪರಲ್ಲದರ್ [1]ಪು[1]ಗಬಾರದೆಲ್ಲೆಡೆಯೊಳು ೨೬

ನಿರುತಮಿದು ರುದ್ರಭಕ್ತರ ಗೃಹಕ್ಕಾವಗಂ
ಭರದಿಂದೆ ರುದ್ರರ್ಕಳಲ್ಲದೀ ಕ್ಷುದ್ರತತಿ
ಪಿರಿದು ಬರಬಾರದದಱಿಂದೆ ಮಾಹೇಶ್ವರರ ಭವನ ಭವನಂಗಳಲ್ಲಿ
ಪರಮಮಾಹೇಶ್ವರರೆ ಇರ್ಪರಲ್ಲದೆ ಬಳಿಕೆ
ನರರಿರ್ಪರೇ ಲೋಕವಂ[2]ದ್ಯ ಸದ್ಭ[2]ಕ್ತರ್ಕ
ಳುರುಗೇಹದೊಳೆ ಲೋಕವಂದ್ಯರ್ಕಳಲ್ಲದೇ ಲೌಕಿಕರದೆಂತಿರ್ಪರು ೨೭

ಶರಣಗಣ ಸತ್ಪ್ರಾಣ ಶರಣರಾಲಯದಲ್ಲಿ
ಶರಣರಲ್ಲದೆ ಮಿಕ್ಕ ಸಂಸಾರಿಗಳ್ ನಾಡೆ
ಇರಬರ್ಪುದೇ ಬಳಿಕಭವರಹಿತ ಭೃತ್ಯಭವನಂಗಳೊಳ್ ಪರಿಕಿಸುವೊಡೆ
ಇರಬರ್ಕುವೆಂತು ಭವಿಗಳ್ಗೆ ಲಿಂಗಾಂಗಿಗಳ
ಶರಣದೊಳೆ ಲಿಂಗಾಂಗಿಗಳೆಯಿರ್ಪ ಪಾಂಗಿನಿಂ
ನಿರುತದಿನಮಂಗಳಾಂಗಿಗಳಿರ್ಪ ತೆಱನೆಂತು ಪೇಳಿರೆಲೆ ಭೂಸುರರಿರ ೨೮

ತವೆ ಕುಲಶ್ರೇಷ್ಠದಾಸರ ನಿವಾಸಂಗಳೊಳ್
ನವಕುಲಜರಿರ್ಪ ಭಂಗಿಯೊಳೊಲ್ದು ಕುಲಜರುಱೆ
ತವಕದಿಂದಿರ್ಪಂದಮೆಂತು ಸತ್ಪ್ರಮಥಕುಲರಿರ್ಪ ವಾಸಂಗಳಲ್ಲಿ
ಅವಿರತಂ ಪ್ರಮಥರಿರ್ಪಂತೆ ದುಷ್ಪಾತ್ರಜನ
ನಿವಹಮಂತಲ್ಲಿರ್ಪುದೇ ಎಲೆ ಮರುಳ್ಗಳಿರ
ಭವನದೊಳ್ ನೋಡಿಮಂತ್ಯಜನಿರ್ದಪನೆ ಬಱಿದೆ ಶಿವಭಕ್ತರಂ ದೂಷಿಸಿ ೨೯

ನರಕಾಗ್ನಿಯೊಳ್ ಬೀಳ್ವಿರೆಲವೊ ದುಷ್ಪಾತ್ರರಿರ
ಭರದೆ ನಿಟಿಲಾಕ್ಷಸದ್ಭಕ್ತರಂ ಪಳಿದು ಭಾ
ಸುರ ಕುಟಿಲಪಟಲಚಟುಲೋರ್ಮಿಭವವಾರಾಸಿ ಮಧ್ಯದೊಳಗಾಳ್ವಿರನಿಶಂ

---

[1] ಪೊ (ಗ) [2] ದ್ಮೇಶಭ (ಕ)

ನಿ[1]ರು[1]ತದಿಂ ಕಾಲಕೋಲಾಹ[2][ಲ][2]ನ ಭಕ್ತರಂ
ಪಿರಿದು ಕೆಡೆನುಡಿದು ಕಾಲನ ದಂಡದಂಡಲೆಗೆ
ಕರಪೊಡಲನೀಡಾಡಿ ಕಿಡದಿರೆಲೆ ವಿಪ್ರರಿರ ಮನೆಯೊಳಗೆ ಶಿವನಿರ್ದಪಂ ೩೦

ಎಲೆ ಭಕ್ತಿಕಂಟಕರಿರಾ ಶಕ್ಯಮೇ ನಿಮಗೆ
ನಲಿದೆಮ್ಮ ಮನೆಯೊಳಗೆ ಹರನಿರ್ದಪಂ ನೋಡೆ
ಕಲುಮುಸರಿರಾ ನೀವದೆತ್ತಬಲ್ಲಿರಿ ಮದ್ಗೃಹದೊಳೀಶನೆಸೆದಿರ್ದಪಂ
ಲುಲಿತ ದುಷ್ಕರ್ಮಸಂಗತರಿರಾ ನಿಮಗೆತ್ತ
ಸುಲಲಿತ ಬ್ರಾಹ್ಮಣತ್ವಂ ನಿಂದಕರ್ ನಾಡೆ
ಸಲೆ ಅದಱನೀಗೆಂತು ಗೋಚರಿಪನೆಮ್ಮ ಮನೆಯೊಳಗಿರ್ದ ಲೋಕನಾಥಂ ೩೧

ಸತತ ದುರ್ಬೋಧಕರಿರಾ ನಿಮಗೆ ಮದ್ಗೃಹದೊ
ಳತಿಶಯದಿನಿರ್ಪ ಶಶಿಜೂಟನಱಿಯಲ್ಕಳವೆ
ವಿತತ ದುಷ್ಕರ್ಮ[3]ಚಾಂ[3]ಡಾಲರಿರ ನೀವಱಿಯಿರೊಲ್ದೆಮ್ಮ ಮನೆಯೊಳಿರ್ಪ
ಶಿತಿಕಂಠನಂ ಎಂದು ನುಡಿಯುತ್ತುಮಿನ್ನುಮು
ದ್ಧತಲಿಂಗನಿಷ್ಠೆಯಿಂ ತೋಱುವೆಲ್ಕೆಂದು ಮ
ತ್ತತಿಹರ್ಷದಿಂದರ್ಗಳಂದೆಗೆದು ತತ್ಕವಾಟದ ಬಲ್ಪ ಸಡಿಲಿಸಿದಳು ೩೨

ಅನಿತಱೊಳಗುರವಣಿಸಿ ವಿಪ್ರರೊಳಗಂ ಪುಗಲ್
ಮನಸಿಜಹರಂ ನಿರಾಕಾರನಾದಂ ಬಳಿ
ಕ್ಕನುನಯದಿನಾ ದ್ವಿಜರ್ ಗೃಹದೊಳಗೆ ಪೊಕ್ಕು ತನ್ಮೂರ್ತಿಯಂ ನೆಱೆಕಾಣದೆ
ನನಸುಮೆತ್ತಲ್ಪೋದನೆನುತೆ ದೇವಾರ್ಚನೆಯ
ಮಿನುಪ ಕಾವಣದ [4]ಗೃಹ[4]ದೊಳ್ ಪೆಟ್ಟಿಗೆಯ ನಡುವೆ
ಘನಕುಶೂಲಂಗಳೊಳಗಂ ಕವಾಟದ ಸಂಧಿಯೊಳಗಱಸಿ ಬಳಲುತಿಯ್ದೆ ೩೩

ಮಿಗೆ ಮಾಯಮಾದನೋ ಮಾಯಮಪ್ಪೊಡೆ ನರಂ
ಗೊಗೆಯದಾ ಮಾಯಮಿಂತಿದು ಸೋಜಿಗಂ ನಾಡೆ
ಬಗೆಯಲೋಡಿದೆನೆಂಬೊಡಾವೆಲ್ಲರುಂ ಮುಂದೆ ಪಿಂದೆ ಕಾದಿರ್ದೆವನಿಶಂ
ನೆಗಳ್ದಿವಳ ಕೌಟಿಲ್ಯವಿದು ತನಗೆ ತಕ್ಕುದಂ
ನೆಗಳಿದೊಡೆ ತಾನೆ ತೋಱುವಳೆಂದು ರಯದಿಂದೆ
ಭುಗಿಲೆನುತ್ತಾ ವಿಪ್ರರುಂತೆ ಸೂರಾಂಬಿಕೆಯ ಭರ್ತ್ಸನಂಗೆಯ್ದರೆಯ್ದೆ ೩೪

1 ರ (ಗ) 2 ರ (ಕಗ) 3 ಚಂ (ಕ) 4 ಗ್ರ (ಕ)

ಎಲೆಗೆ ಯಾವೆಡೆಯೊಳಗೆ ಮಡಗಿಟ್ಟೆ[1]ಯಂ[1]ತ್ಯಜನ
ನಿಲವನೀ ಮನೆಯೊಳಗೆ ಕಾಣೆವೆನೆ ವಿಪ್ರಸಂ
ಕುಲಕೆ ಮಿಗೆ ಸೂರಸಾನಾಂಬೆ ನುಡಿದಳ್ ಕೋಪಶಿಖಿ ಪೊಣ್ಮೆ ಮನದತ್ತಣಿಂ
ಎಲೆ ಕರ್ಮ[2]ಚಾಂ[2]ಡಾಲರಿರ ಧರ್ಮದೂರರಿರ
ನಲಿದೆಮ್ಮ ಶಿವನಂತ್ಯಜರ್ಗೆ ರೂಹಂದೋಱ
ನೊಲವಿನಿಂದಂತ್ಯಜನೆನುತ್ತೆ ಹರನಂ ಕೆಟ್ಟು ನುಡಿಯದಿರಿ ಕೇಳಿವಿನ್ನುಂ ೩೫

ಮುನ್ನೆ ಕೆಂಬಾವಿಯೆಂಬಗ್ರಹಾರದೊಳೆಮ್ಮ
ಪನ್ನಗಧರಂ ಸತ್ತಕಱುವ ಪೆಗಲೊಳ್ ತಳೆದು
ಸನ್ನಿದಂ [2]ಚಾಂ[2]ಡಾಲವೇಷವಂ ಕೈಕೊಂಡು ಸುಳಿಯೆ ಭೋಗಣ್ಣನಱಿದು
ಉನ್ನತೋನ್ನತ ಭಕ್ತಿಯಿಂ ವಂದನಂಗೆಯ್ದು
ತನ್ನ ಗೃಹಕಳ್ತಿಯಿಂ ಕರೆದೊಯ್ದು ಭೋಜನ
ಕ್ಕನ್ನಿಸದಮಾ ಕಱುವ ಕೊಯ್ದಿಕ್ಕುವವಸರದೊಳಾಯೂರ ವಿಪ್ರರಱಿದು ೩೬

ಪೊಲೆಗಲಸಿದಂ ನೋಡಿಮಾತನುತಾಯೂರ
ಪೊಲೆಪಾರ್ವರೆಯ್ದೆ ಮುನಿದಾತನ ಗೃಹಂ ಮುತ್ತೆ
ಲಲಿತ ಶಿವನಲ್ಲಿ ಬಯಲಾದನತಿಕೋಪದಿಂ ಭೋಗಯ್ಯನಾ ಗ್ರಾಮವಂ
ತೊಲಗಲಲ್ಲಿರ್ದ ಲಿಂಗಂಗಳೆಲ್ಲಂ ಕೂಡೆ
ನಲಿದುರುಳುತುರುಳುತಾತನ ಬೆನ್ನಲೆಯ್ದಿ ಬರೆ
ಸಲೆ ಬೆದಱಿಯಲ್ಲಿರ್ದ ವಿಪ್ರರಾ ಭೋಗಿದೇವಯ್ಯನಿರ್ದೆಡೆಗೆ ಪೋಗಿ ೩೭

ಕಾವುದೆಮ್ಮೆಲ್ಲರಂ ಕರುಣಾಮೃತಾಂಬುನಿಧಿ
ನೀವೆನುತ್ತಾ ಪಾರ್ವರತಿಭಕ್ತಿಯಿಂ ಭೋಗಿ
ದೇವಯ್ಯನಡಿಗೆಱಗೆ ಕರುಣಿಸಿಯವರ್ಗೆ ತಲ್ಲಿಂಗಪರಿಕರನಾಗುತೆ
ಭಾವಜಾಂತಕಭಕ್ತ ಭೋಗಿದೇವಂ ಮರಳೆ
ದೇವತತಿ ಸಂಭ್ರಮದೆ ತಿರಿಗಿ ಪೀಠಂಗಳೊಳ
ಗೋವೋವೊ ಪಲ್ಲಟಂಬೊಂದಿ ನಿಂದಿರ್ದುವೀ ಭೂಮಿಗಚ್ಚರಿಯಾಗಲು ೩೮

ಕಂತುಹರನಾವ ರೂಪಿಂದೆ ಬಂದಪನೆಂಬು
ದಂ ತಗುಳ್ದು ನೀವಱಿಯಿರೆಲೆ ವಿಪ್ರಧೂರ್ತರಿರ
ಮುಂತಱಿಯ[3]ದುಂ[3]ತೆ ಪರಮೇಶ್ವರನ ದೂಷಿಸಲ್ಕರ್ಹರೇ ನೀವೆಲ್ಲರು

[1] ನಂ (ಗ) [2] ಚಂ (ಕ) [3] ದಂ (ಕ)

ಅಂತಕನ ಕುಂತಘಾತಕೆ ಶರೀರಂಗಳಂ
ಸಂತತಂ ಕುಡುವಿರೆನುತಾ ಸೂರಸಾನಾಂಬೆ
ಸಂತಸದೆ ಶಿವನ ಮಾಹಾತ್ಮ್ಯಮಂ ಪೇಳಲ್ಕೆ ಮತ್ತಂ ಮನಂದಂದಳು ೩೯

ಸದಮಲಪ್ರಚುರವಿಶ್ರುತ ಪರಮಭಕ್ತಗಣ
ಪದಸರೋರುಹಸಾಂದ್ರ ಮಕರಂದಪಾನ ಸ
ಮ್ಮುದಿತ ಚಂಚಚ್ಚಂಚರೀಕನನವರತ ಪಂಚಾಕ್ಷರೀಪ್ರಸಿತಹೃದಯಂ
ವಿದಿತ ಮಂಜುಲನೀಲಕಂಠಾಹ್ವಯಂ ಮನೋ
ಮುದದೆ ಪೇಳ್ದುರುತರಾರಾಧ್ಯಚಾರಿತ್ರದೊಳ
ಗಿದು ಸೂರಸಾನಾಂಬೆ ವಿಪ್ರಗ್ಗೆ ಪೇಳ್ದ ಭೋಗಣ್ಣ[1]ನುರು[1]ಮಾಹಾತ್ಮ್ಯವು ೪೦

[1] ನವರ (ಗ)

# ಎಂಟನೆಯ ಸಂಧಿ

## ಸಾಮವೇದಿಗಳ ಕಥೆ

ಸೂಚನೆ: ಎರೆವರ್ಗೆ ಸುರಭೂಜವೆನಿಪ ಸೂರಾಮಾತ್ಯ
ವರಸೂರಸಾನಾಂಬೆಯಾ ವಿಪ್ರನಿ[1]ವಹಕ್ಕೆ
ಭರದಿಂದೆ ಸಾಮವೇದಿಗಳ ಕಥೆವೇಳ್ದಳದನುಸುರ್ವೆನೊಸೆದಾಲಿಸುವುದು

ಜಡೆಮುಡಿಯ ಗಡಣದೆಡೆಯೆಡೆಯೊಳಡಿಗಡಿಗಡಿಯ
ನಿಡುತೆ ಸಡಗರದೊಡನೆ ಮಿಡುಕಿ ನಡುಮಡುಗಟ್ಟೆ
ಕುಡಿನಿಮಿರ್ದು ನಿಡುದೆರೆಗಳೆಡೆಯುಡುಗದೊಡನೊಡನೆ ಪೊಡಕರಿಸಿ ಕಡೆದಡಿಯನು
ಅಡರಿಯುಡುಪತಿಯೊಡಲನೆಡೆವಿಡದೆ ಕಡುಪಿನಿಂ
ತುಡುಕಿ ಕಡುಮಿಳಿರ್ವ ಸುರಗಂಗೆಯಂ ತಾಳ್ದ ಜಗ
ದೊಡೆಯನೆನಿಸುವ ನೀಲಕಂಠಲಿಂಗಂ ಪೊರೆಗೆ ಪೊಡಮಿಗಡಣಮನನಣಿಯರಂ ೧

ಇನ್ನೆ ಬಳಿಕಂ ಕೇಳಿರೆಲೆ ವಿಪ್ರಸೀಚರಿರ
ಮುನ್ನೆ ಭೋಗಣ್ಣನ ನಿವಾಸಕೆಯ್ದಿದ ತೆಱದೆ
ಪನ್ನಗಾಭರಣನಳ್ತಿಯಿನೊಂದು ಸತ್ತಾವುಗೆಱುವೊತ್ತು ನಟಣೆಯಿಂದಂ
ಚನ್ನಮರ್ದ [2]ಚಾಂಡಾಲವೇಷಮಂ ತಾಳ್ದು ಭರ
ದಿನ್ನಡದು ಸಾಮವೇದಿಯ ಜನ್ನಸಾಲೆಯಂ
ಸನ್ನುತ ದ್ವಿಜಶರಧಿವೇಲೆಯಂ ಸೇರಿದನ್ನೇರಿದರ ಪೊರೆವ ಶಿವನು ೨

ಬಡನಡುವಿನುರುನಿತಂಬದ ತೊಂಡೆವಾಯ್ದೆಱೆಯ
ಬಿಡದೆ ಬೆಳ್ಪಡರ್ದ ಪಲ್ಗಳ ಡೊಂಕುಬ್ಬೆ ತಲೆಯ
ನಿಡುಗಣ್ಣ ಕುಡಿಮುರ್ಗಗಳ ತೋರಜಪ್ಪನಡ ಕರಿಯ ಬಣ್ಣದ ಕಾಂತಿಯ
ಎಡೆವರಿದ ತಲೆನವಿರ ಕಂಚುಗಾಲುಂಗುರದ
ಬಿಡದೆಸೆವ ಗಾಟುಮಳೆಗಳ ಶಂಖಮಣಿಯಾರ
ದುಡೆಯೊ[3]ಳೊರ್ಚುತ್ತಿನೊಳ್ಪಟ್ಟಿಗೆಯ ಕೊರಲಸರದಾಲಿಗಳ ಗುಂಜಿಸರದ ೩

---

1 ಕರ (ಗ) 2 ಚಂ (ಕ) 3 ಳೆ (ಗ)

ವಿಸುಪ ನೊಸಲೊಳಗಿನಿಸು ತೋರ್ಪ ಭಸಿತದ ಸವಂ
ತೆಸೆವ ಹರಿದಲೆಯೊಳೊಪ್ಪುವ ಲಿಂಗಸಜ್ಜೆಯು
ಲ್ಲಸದ ಭವಸೂತ್ರದವಿರಳದ ಸೊಬಗಿಂದೆ ಪೊಲತಿಯ ವೇಷವುಂ ತಾಳುತೆ
ಉಸಿಗನೆಡಗೌಂಕುಳೊಳಗೊಂದು ಕಂಡಾಲವುಂ
ಸಸಿನೆದಳೆಯುತ್ತೆ ಮಾದೇವಿ ಸಡಗರದೆ ಸಿಂ
ದೆಸೆಯೊಳೊಪ್ಪುತ್ತಿರಲ್ ಸಾಮವೇದಿಗಳ ಸೈವೇಳ್ತರ್ಪ ಪಾಂಗಿನಿಂದಂ ೪

ಇಂತು ಪಾರ್ವತಿಯುಕ್ತನಾಗಿ ಬಂದಾ ಶಿವನ
ನಂತೀಕ್ಷಿಸುತ್ತಲಾ ಸಾಮವೇದಿಗಳಜಿಂದು
ಮುಂತೆಳ್ದು ಬಂದು ಸಂಭ್ರಮದಿಂ ತುಳಿಲ್ಗೆಯ್ದು ಸೆಗಲ ಕಱುವಂ ಶೀಘ್ರದಿಂ
ಅಂತಿಳಿಸಿಕೊಂಡಿರಿಸೆ ಪಾರ್ವರೆಲ್ಲರ್ ಕಂಡು
ಮಂತಣಂಗೆಯ್ದೆಳ್ದು ಪೊಱಮಟ್ಟು ಪೋದರ್ ಸ
ಮಂತು ಬಳಿ[1]ಕಾ[1] ಸಾಮವೇದಿ ಪಾದಕ್ಷಾಲನಂಗೆಯ್ವ ಸಮಯದಲ್ಲಿ ೫

ಗಿರಿಸುತೆಯ ಸೆಗಲ ಮೇಲೊಂದು ಕರಮಂ ನೀಡಿ
ಭರದೆ ತನ್ನಯ ಕಟಿಯ ಮೇಲೊಂದು ಕೈಯಿರಿಸಿ
ಪಿರಿದು ಬಾಗುತ್ತೆ ಪಾದಂನೀಡೆ ತದ್ವಾರಿಯೊಳಗೆ ಮುಕ್ಕಣ್ ಪೊಳೆಯಲು
ವರ ಹೇಮಕಲಶದಿಂ ಕಾಲ್ಗೆ ನೀರೆಱೆತವ ಭಾ
ಸುರ ಸಾಮವೇದಿಗಳ ಭಾರ್ಯೆ ಕಂಡಾಗಳಾ
ತುರದೆ ನಿಜಕರದ ಕಲಶಮನಂತೆ ಮಡಗಿ ತತ್ಪದಯುಗಕೆ ವಂದಿಸುತ್ತೆ ೬

ಎಲೆ ಪತಿಯೆ ಈತನೀಶ್ವರನೆಂದು ಪೇಳಲ್ಕೆ
ಲಲಿತದರಹಸಿತನಾಗುತೆ ನುಡಿದನಾ ಸತಿಗೆ
ನಲವಿನಿಂ ಮುನ್ನೆ ನರಸೆಂದಿರ್ದೆಯಾ ಯುವತಿ ಸಾಕ್ಷಾಚ್ಛಿವಂ ಶಂಕರಂ
ನೆಲೆಯಿಾತನೇ ಎನುತ್ತುಸುರುತ್ತೆ ಪಾದವುಂ
ಲಲಿತಾಂಬುವಿಂ ತೊಳೆದು ತಚ್ಚರಣತೀರ್ಥವುಂ
ನಲಿದೀಂಟಲಾ ಸಾಮವೇದಿ ತತ್ತೀರ್ಥವೇ ತ್ರಿವಿಧೋದಕಂಗಳಾಯ್ತು ೭

---

1 ಳಂ (ಗ)

ಎಂತುಟೆನೆ ಶಿವನ ಪಡಿರೂಹು ತತ್ತ್ರೀರ್ಥದೊಳ
ಗಂತು ಪೊಳೆದುದಱಿಂದಮಾಯ್ತು ಲಿಂಗೋದಕಂ
ಸಂತತಂ ಶಂಭುಪ್ರಸನ್ನದೃಷ್ಟಿಗಳೆಯ್ದೆ ಸೋಂಕಿದುದಱಿಂದಣಿಯರಂ
ಮುಂತೆ ನೋಡಲ್ ಪ್ರಸಾದೋದಕಂ ತಾನೆನಿಸಿ
ತಿಂತು ರಾಜಿಪ ಪಾದತೀರ್ಥಮಲ್ಲದೆ ದುರಿತ
ಸಂತತಿಂಧನಮನುರುಪುವ ಬೃಹದ್ಭಾನು ತಾನೆಲ್ಲಿತ್ತೊ ಧರಣಿಯೊಳಗೆ ೮

ಸಲೆಶಿವನ ಪಾದೋದಕಂಗಳೊಳಗಲ್ಲದೇ
ನಲಿವಿನಿಂದಿತರ ಸಲಿಲಂಗಳೊಳ್ ಮುಳುಗಿ ಮಿಗೆ
ಕಲುಮುಸಗೆಸರ್ಗಚ್ಚಲಕ್ಕುಮೆ ನರರ್ಗೆ ಮತ್ತನಘಲಿಂಗೋದಕವನು
ನಲಿದು ಪಾನಂಗೆಯ್ದು ನರನಾವಗಂ ನೋಡ
ಲೊಲವಿನಿಂ ಮಾತೃಕುಚಕಲಶಸುಧೆಯಂ ಮತ್ತ
ಮಲದರ್ು ಪಾನಂಗೆಯ್ಯನೀ ತ್ರಿವಿಧಜಲದ ಮಹಿಮೆಯ ಪೊಗಳ್ವೊಡರಿದು ನರರ್ಗೆ ೯

ಮಿಗೆ ಪಶವ ಆ[1]ಪ[1] ಎಂದಾವಗಂ ಪೇಳುತಿರೆ
ನೆಗಳ್ದ ಪಶುಪಾಶವಾರಾಸಿಗಿನ್ನಾವುದಱಿ
ತಗುಳ್ದ ಕುಂಭಜಸದೃಶಮೀ ತ್ರಿವಿಧಜಲಮುಳಿಯೆ ಎನುತೆ ಸಂತೋಷದಿಂದಂ
ಬೊಗಸೆಯೊಳ್ ಮೊಗೆದು ಪತಿಸತಿಗಳೋರಂತೆ ತೊ
ಟ್ಟಗೆ ಪಾದತೀರ್ಥಮಂ ಸನಯದಿಂದೀಂಟೆ ನೆಱೆ
ಪೊಗಳುತ್ತೆ ತತ್ತ್ರಿವಿಧಜಲ ಸರಿತ್ಪತಿಮಧ್ಯದೊಳಗೆ ಮುಳುಗಾಡಿ ಬಳಿಕಂ ೧೦

ಶಿವನನಗ್ರಾಸ[2]ನದೊಳಿ[2]ರಿಸಿ ಸದ್ಭಕ್ತಿಯಿಂ
ದವೆ ಅರ್ಚಿಸುತ್ತಿರ್ಪ ಸಮಯದೊಳ್ ನುಡಿದನಾ
ಭವನೊಂದು ಕಜ್ಜಮಂ ಸಾಮವೇದಿಗಳೊಡನೆ ಸತ್ತ್ರಾವುಗಱುವನಿದನು
ತವಕದಿಂ ಪಾಕಮಂ ರಚಿಸಿ ನೀಡೆಮಗೆನಲ್
[3]ಸ[3]ವಿನಯಂ ಮುನ್ನೆ ಯಜ್ಞಾರ್ಥಮಾಗೆ[4]ಸೆದಿರ್ದ[4]
ವಿವಿಧ ಮಂಗಳಪದಾರ್ಥಂಗಳೊಡವೆರಸಿಯದನತಿಭಕ್ತಿಯಿಂದರ್ಪಿಸಿ ೧೧

ಪರಿತುಷ್ಟನಾಗಿ ಶಿವನಂದು ನಿಜಮಂ ತೋಱಿ
ಭರದಿನುಸಿರ್ದಂ ಸಾಮವೇದಿ ನಿನ್ನಭಿಮತವ
ನಿರದೀವೆ ನಾಂ ಬೇಡು ಬೇಡೆನಲ್ ತದ್ಭಕ್ತನತಿಹ[5]ರ್ಷ[5]ದಿಂದೆ ನುಡಿದಂ

---

[1] ಮ (ಕ) [2] ದೊಳಗಿ (ಗ) [3] ಸು (ಗ) [4] ಸತ್ತ್ರೀರ್ಥ (ಗ) [5] ರುಷ (ಗ)

ಪರಮೇಶ್ವರಾ ಮುನ್ನೆ ದಾಸಯ್ಯನೊಲ್ದಿತ್ತ
ವರವಸ್ತ್ರಮಂ ಪೊದೆದು ಭೋಜನಂಗೆಯ್ಯದಿ
ರ್ದಿರವಿನಿಂ ಪೋದಂತೆ ಚಾಳೈಸಿ ಪೊಗಲೀಯೆಂ ಮತ್ತೆ ನೋಳ್ಪೊಡೊಸೆದು ೧೨

ಕೊಲಿಸಿ ಚಿಱುತೊಂಡನಣುಗನನುಣ್ಣದಲ್ಲಿಂದೆ
ತೊಲಗಿದಂದದಿ ಬಲ್ಲಹನನೆಯ್ದೆ ವಂಚಿಸು
ತ್ತಲಸದಾರೋಗಣೆಯನುಳಿದು ಪೋದಂತೆ ತಿರುನೀಲಕಂಠರನಲ್ತಿಯಿಂ
ಜಲದೊಳಾಳಿಸಿ ಪೋದ ತೆಱದೆ ನಂಬಿಯನೊಸೆದು
ಲಲಿತಸುತನೆಂದು ಕೈವಿಡಿದುಣ್ಣದಲ್ಲಿಂದೆ
ಸಲೆ ಸರಿದವೋಲ್ ಚೇರಮಾಂಕನಗ್ರದೊಳೊಲ್ದು ಕುಣಿದುಸಿಕನೆಯ್ದಿದಂತೆ ೧೩

ಭರದಿನಣುಮೂರ್ತಿ[1]ಯೊ[1]ಲಿದಿತ್ತ ಸಿರಿಗಂಧಮಂ
ತರಿತದಿಂ ಲೇಪನಂಗೆಯ್ದಂಗದೊಳ್ ನಾಡೆ
ಸರಿದಂತೆ ಮತ್ತಮೋಹಿಲನರ್ಪಣಂಗೆಯ್ದು ಧೂಪದಿಂ ತುಷ್ಟನಾಗಿ
ನಿರುತಮೊಯ್ಯನೆ ಪೋದ ತೆಱದೆ ನಮಿನಂದಿ ಭಾ
ಸುರದಿನೆತ್ತಿದ ದೀಪತತಿಯನೀಕ್ಷಿಸಿ ಕರಂ
ಹರಿಸವಡೆ[2]ದಂ[2]ತೆ ಪೋದಂತೆ ಪಿಳ್ಳೆಯನಾರು ಕೊಟ್ಟ ಭೂತಿಯನೆ ಪಿಡಿದು ೧೪

ಉಸಿಕನಾರೋಗಿಸದೆ ಪೋದಂತೆ ನಿಮ್ಮ ನಾಂ
ಮಿಸುಕಲೀಯೆಂ ಚಂದ್ರಚೂಡ ನೀಂ ಕೇಳಯ್ಯ
ಮಿಸುಪೆನ್ನ ಬಿನ್ನಪವನಾಂ ನಿಮ್ಮ ಭೃತ್ಯನಿದು ನಿಕ್ಕುವಂ ಮುನ್ನೆ ಮುನ್ನೆ
ಎಸೆವಸಂಖ್ಯಾತ ರುದ್ರರ [3]ಭಂಟನಾಂ ಮತ್ತೆ[3]
ನಿಸದಮಾಗಳಿನ ಮುನ್ನಿನ ಪುರಾತನ[4]ರ[4] ರಾ
ಜಿಸುವ ಗೃಹದನುಚರಂ ಬಳಿಕ ಸದ್ಭಕ್ತರಾರವರ ಲೆಂಕರ ಲೆಂಕನು ೧೫

ಕರುಣದಿಂದೆನ್ನ ಗೃಹದೊಳ್ ಮು[5]ನ್ನೆ[5] ಚನ್ನಗುಣ
ವರನ ರಸನೆಯೊಳೊಸೆದು ಭುಂಜಿಸಿದವೊಲ್ ಮತ್ತೆ
ನಿರುತಮಾ ಕಾರಿಕಾಲಮ್ಮೆಯಾಲಯದಲ್ಲಿ ನೆಱೆಸವಿದ ತೆಱದೆ ಮತ್ತಂ
ಸುರಗಿ ಚೌ[6]ಡಯ್ಯ[6]ನೊಲಿದಿತ್ತ ತುತ್ತುಗಳ ನಿ
ರ್ಭರದಿನಾರೋಗಿಸಿದ ಮಾಳ್ಕೆಯಿಂ ಕಣ್ಣಪ್ಪ
ನುರುಭಕ್ತಿಯಿಂದರ್ಪಣಂಗೆಯ್ದ ನೈವೇದ್ಯಮಂ ನಾಡೆ ಸವಿದ ಪಾಂಗಿಂ ೧೬

---

1 ನ (ಕ) 2 ದಂ (ಗ) 3 ಲಂಟನಾಯತ್ತೆ (ಕ) 4 ರು (ಕ) 5 ನ್ನ (ಕ)
6 ಡಾರ್ಯ (ಕ)

ಲಲಿತ ಪಿಟ್ಟವ್ವೆ ನೀಡಿದ ಪಿಟ್ಟನುಂಡಂತೆ
ಜಲಕನರಿವಾಳ್ತಂಡನಿತ್ತ ಶಾಲ್ಯಾನ್ನಮಂ
ನಲಿದುಂಡರೀತಿಯಿಂ ವೀರಚೋಳವ್ವೆ ಬಡಿಸಿದೊಡೆಯ್ದಿ ಉಂಡ ತೆಱದಿಂ
ಸುಲಭದಿಂ ನಿಂಬವ್ವೆ ನೀಡೆ ಭುಂಜಿಸಿದಂತೆ
ಸಲೆ ಅದಂಗುಲಿಯಾರಿಗೃಹದಲ್ಲಿ ಭೋಜನವ
ನೊಲವಿನಿಂ ಸವೆದಂತೆ ಪರಮೇಶ ಪರಮಾತ್ಮ ಪರಮಸ್ವತಂತ್ರಲೀಲ ೧೭

ಪರಮಭಟ್ಟಾರಕ ಪರಾತ್ಪರೇಶ್ವರ ಪರಮ
ಪರಮಾತ್ಮ ಯಜ್ಞಸ್ವರೂಪ ಯಜ್ಞೇಶ ಬಂ
ಧುರ ಯಜ್ಞಸಂಹರಣ ಯಜ್ಞಮಸ್ತಕದಳನ ಯಜ್ಞಸತ್ಫಲದಾನನೆ
ಧರೆಯೊಳಗಸಂಖ್ಯಾತರುದ್ರರುಂ ಮತ್ತೆ ಗಣ
ವರರ ಮುನ್ನಿನ ಪುರಾತನರಾದ್ಯತನರ ಭಾ
ಸುರಶರಣರುಂ ಕುಱುತು ಕೂಡಿದೀ ಭಕ್ಷ್ಯಭೋಜ್ಯಾದಿಗಳನೊಸೆದು ನೀವು ೧೮

ನಲವಿನಿಂ ಸ್ವೀಕರಿಪುದೆಂದು ಸಾಷ್ಟಾಂಗದಿಂ
ದಿಳೆಯೊಳಗೆ ಪತಿಸತಿಗಳೀರ್ವರುಂ ವಂದಿಸ
ಲ್ಕೊಲವಿನಿಂದಾ ಭಕ್ತವತ್ಸಲಂ ಭಕ್ತಪ್ರಿಯಂ ಭಕ್ತದೇಹನೊಸೆದು
ಸುಲಭದಿಂ ಭೋಜನಂಗೆಯ್ದು ಹರ್ಷಂಬಟ್ಟು
ಜಲಕನಾ ಸಾಮವೇದಿಗೆ ತದಂಗನೆಗೆ ಶಿವ
ನಲರ್ವ ಕರುಣಾಪಾಂಗದಿಂ ಪ್ರಸಾದಂಗೆಯ್ಯಲನಿತಱೊಳಗಾ ಪ್ರಮಥರು ೧೯

ಮುಂದೆ ನಿಂದತಿನುತಿಸುತಿರೆ ವಿಷ್ಣುಜೇಂದುರ್ಕ
ಳೊಂದಿ ವಂದಿಸುತಿರಲ್ ಚಂಡಕೀರ್ತ್ಯಾದಿಗಳ್
ಚಂದವೊಡೆವಂತೆ ಕೈವಾರಿಸುತಿರಲ್ ಮುನಿಗಳಿರ್ದೆಸೆಯೊಳೋಲೈಸಲು
ಸಂದ ರುದ್ರರ್ಕಳತಿಸಂತಸಮನೆಯ್ದೆ ಸುರ
ದುಂದುಭಿರವಂ ಮೇಘಮಾರ್ಗದೊಳ್ ಶೋಭಿಸ
ಲ್ಕಂದು ನಿರ್ಮಲಕುಸುಮವೃಷ್ಟಿ ದೆಸೆದೆಸೆಗಳೊಳ್ ಸೈಗಱೆಯೆ ಸಾಂದ್ರಮಾಗಿ ೨೦

ಆ ವೇಳೆಯೊಳ್ ಮುಂದೆ ಬಂದಿರ್ದ ಪುಷ್ಪಕದೊ
ಳೋವೋವೊ ಮುನ್ನೆ ಜನ್ನಕೆ ಬಂದ ವಿಪ್ರರುಂ
ಶೀವಿ ಛತ್ತೀಶಪುರಜನಮೆಲ್ಲಮಂ ತಿಂಬಿ ಬಳಿಕಮಾ ಸತಿಪತಿಗಳು

ಭಾವಜಾಂತಕನಿರಿಸಿಯಾ ಸಾಮವೇದಿಗಳ
ಭೂವಲಯವಱಿಯೆ ಕೈಲಾಸಪರ್ವತಕೊಯ್ದು
ನಾ ವಿಭುವನೀವೆತ್ತಲಱಿವಿರಲೆ ಕಾಲುರಿಚರಿರ ಕರ್ಮಧೀಯುತರಿರ ೨೧

ಪರಮೇಶ್ವರಂ ರಹಿತಮಾದ ದಕ್ಷನ ಮಖಂ
ಪರಿಭಾವಿಸಲ್ಕಶ್ವಮೇಧಮದು ತನ್ನ ಫಲ
ದಿರವನಿನಿಸಂ ಕುಡದೆ ಕುಱಿದಲೆಯನಿತ್ತುದಾ ದಕ್ಷಪ್ರಜಾಧಿಪಂಗೆ
ವರಸಾಮವೇದಿಗಳ ಜನ್ನವದು ಲೋಕದೊಳ
ಗುರುಪುಣ್ಯಫಲವನಿತ್ತುದು ಭಕ್ತಿಹೀನಜನ
ವಿರದೆ ರಚಿಸಿದ ಮಖಂ ನಿಂದೆವಡೆಗುಂ ತನ್ನ ಫಲನುನಿನಿಸಂ ಕುಡದದು ೨೨

ಧರಣಿಯೊಳ್ ಚನ್ನಯ್ಯನಂತೆವೊಲ್ ಭಾವಿಸಲ್
ನಿರತಮಾ ದೇವಯಜ್ಞಮನಾವನೊರ್ವನೀ.
ವರ ವಿಪ್ರರೊಳಗೆಸಗಿದಂ ಮತ್ತೆ ಉತ್ತುಂಗಚೋಳಭೂವರನ ಪಾಂಗಿಂ
ವಿರಚಿಸಿದನಾವನುಱೆ ಪಿತೃಯಜ್ಞಮಂ ಬಸವ
ವರಗಣಾಧಿಪನಂತೆ ಭೂತಯಜ್ಞಮನೊಸೆದು
ಭರದಿಂದ ಸಿದ್ಧರಾಮಯ್ಯನೆಸಗಿದವೊಲ್ ಮನುಷ್ಯಯಜ್ಞಮನೆಸಗಿದಂ ೨೩

ಲಲಿತಭಕ್ತಂಗೆ ಜಗಮಂಗಾತ್ಮದೊಳ್ ಕರಂ
ವಿಲುಲಿತ ಬ್ರಹ್ಮಯಜ್ಞಂ ಸಾರ್ದ ತೆಱದೆ ಮ
ತ್ತಿಳೆಯೊಳಾ ಷಟ್ಕರ್ಮಯುಕ್ತ ಸದ್ಬ್ರಾಹ್ಮಣಂಗಾವಂಗೆ ಕೈಗೂಡಿತು
ಸಲೆ ದಕ್ಷಮಖ ಫಲಂ ವಿಫಲಂ ದಲಾಯ್ತು ಮ
ತ್ತಲಘು ಸಗರನ ಯಾಗಫಲಮೊರ್ವ ಕಿತ್ತಡಿಯ
ನೆಲೆಯಾದ ಕೋಪಾಗ್ನಿಗುಣಿಸಾಯ್ತು ಸಂತತಂ ಭಾವಿಪೊಡೆ ಲೋಕದೊಳಗೆ ೨೪

ಭರದೆ ನಹುಷನ ಯಾಗಫಲವನಿಳೆಯೊಳಗೆ ದು
ರ್ಧರಫಣಿಯ ಮಾಡಿತವನಂ ಧರ್ಮಜನ ಯಜ್ಞ
ವಿರದಿಕ್ಕಿ ಕೊಲಿಸಿತ್ತು ಬಂಧುಗಳನೆಲ್ಲರಂ ಸಾಮವೇದಿಯ ಜನ್ನವು
ಪರಮೇಶ್ವರನ ತೋಱಿಸಿತ್ತು ವಿಪ್ರರ್ ಸಮೆದ
ವರರಾಜಸೂಯವಗಣಿತವೆಯ್ದುವೆಮ್ಮ ಭಾ
ಸುರ ಭಕ್ತನೇಣಾದಿನಾಥ ಸತ್ಕರ್ಮನಿಕರದ ಸದೃಶಮಂ ಭಾವಿಸೆ ೨೫

ಗೋಮೇಧಯಾಗ ಲಕ್ಷಂ ಸರಿಯೆ ಎಮ್ಮನಿ
ಷ್ಕಾಮ ಭೋಗಯ್ಯನೆಸಗಿದ ಕಜ್ಜಕಾವಗಂ
ಪ್ರೇಮದಿಂ ಸಮೆದಮಲ ಪೌಂಡರೀಕಾಧ್ವರಂ ಸರಿಯೆ ಇಱೆಭಕ್ತನೆಂಬ
ಕಾಮಹರಭಕ್ತ ಭಕ್ತಿಗೆ ಮನುಜಯಾಗಮದು
ಭೂಮಿಯೊಳನಂತವೇಣಿಯೆ ಚನ್ನ ಸಿರಿಯಾಳ
ನಾ ಮನೋಮುದದೆ ನೆಗಳಿದ ಪುಣ್ಯಕೃತ್ಯಕ್ಕೆ ಪರಿಕಿಪೊಡೆ ಧರಣಿಯೊಳಗೆ ೨೬

ಕಿಸುವೊನ್ನ ಜನ್ನಂಗಳಪರಿಮಿತಮೆಯ್ದುಗುಮೆ
ಬಸವದಂಡೇಶ ಮಹಿಮೆಯನದಂತಿರಲೊಂದು
ಕುಸುಮಫಲದಿಂ ಶತಕ್ರತುಗೆಯ್ದ ಫಲಮಾಯ್ತು ತಪ್ರೀತಮುನಿಗಮುದಱಿಂ
ಮಿಸುಪ ಭಕ್ತನ ಮಹಿಮೆಯಂ ದೇವನೇ ಬಲ್ಲ
ನೆಸೆವ ಶಶಿಧರನ ಮಹಿಮೆಯನಂತೆ ನೋಡಲಾ
ವಸುಧೆಯೊಳ್ ಭಕ್ತರೇ ಬಲ್ಲರುಳಿದರ್ಗಱಿಯಲಳವೆ ನೀಚೋತ್ತಮರಿರ ೨೭

ಪಿರಿದು ಬಹುರೂಪಾಗಲಱಿದ ಪುರುಷನ ರಾಣಿ
ಕರಮೊಸೆದು ತನ್ನ ಪತಿ ಯಾವ ರೂಪೆಯ್ದಿದೊಡ
ಮಿರದಱಿವವೋಲಭವನಾವ ವೇಷಂದಳೆದೊಡಾ ಭಕ್ತರಱಿವರೆಯ್ದೆ
ವರಭಕ್ತರಾವಾವ ಜಾತಿಯೊಳಗಿರ್ದೊಡಂ
ನಿರುತದಿಂದಾ ಶಂಕರನೆ ಬಲ್ಲನೆಂದು ಸೌಂ
ದರ ಸೂರಸಾನಾಂಬೆ ವಿಪ್ರರ್ಗೆ ಪೇಳ್ದು ಮತ್ತಂ ಕೇಳಿಮೆಂದಳೊಸೆದು ೨೮

ಸದಮಲಪ್ರಚುರವಿಶ್ರುತ ಪರಮಭಕ್ತಗಣ
ಪದಸರೋರುಹಸಾಂದ್ರ ಮಕರಂದಪಾನ ಸ
ಮ್ಮುದಿತ ಚಂಚಚ್ಚಂಚರೀಕನನವರತ ಪಂಚಾಕ್ಷರೀಪ್ರಸಿತಹೃದಯಂ
ವಿದಿತ ಮಂಜುಲನೀಲಕಂಠಾಹ್ವಯಂ ಮನೋ
ಮುದದೆ ಪೇಳ್ದುರುತರಾರಾಧ್ಯಚಾರಿತ್ರದೊಳ
ಗಿದು ರಾಜಿಸುವ ಸಾಮವೇದಿಗಳ ಮಾಹಾತ್ಮ್ಯಕಥನಮಘಜಲಧಿಮಥನಂ ೨೯

# ಒಂಬತ್ತನೆಯ ಸಂಧಿ

## ಹಿರಿಯಭಕ್ತರ ಕಥೆ

ಸೂಚನೆ : ಪರಸಚಿವ ಮಕುಟಮಣಿಕಿರಣಚುಂಬಿತಚರಣ
ಸರಸಿರುಹ ಸೂರಸಚಿವೇಂದ್ರ ಕೇಳ್ ಸೂರಾಂಬೆ
ಹಿರಿಯ ಭಕ್ತರ್ಕಳೊಳ್ಗಥೆಗಳಂ ಪೇಳ್ದಳಾ ವಿಪ್ರರ್ಗೆ ಸಂತಸದೊಳು

ನೊಸಲ ನಡುವೆಸೆವ ಕಿಸುಬಿಸಿಗಣ್ಣ ಮಸಕದಿಂ
ಮಿಸುಪ ಸುಮನೋಬಾಣದಹನ ಭಸಿತಾಂಗದಿಂ
ಪೊಸಜೊನ್ನವಸರಮಂ ದೆಸೆದೆಸೆಗೆ ಬಿಚ್ಚಳಿಪ ಬಾಲಶಶಿಜೂಟದಿಂದೆ
ಒಸೆದೆಡದ ತೊಡೆಗೆ ತೊಡವಾದುಮಾದೇವಿಯಂ
[1]ಪ[1]ಸಿಯ ಬಿಸದೆಸಕದಿಂ ತೊಳಪ ಕಂಠದೆ ವಿರಾ
ಜಿಸುವ ಗುರುನೀಲಕಂಠಂ ಪಾಲಿಸುತ್ತಿರ್ಕೆ ಸಜ್ಜನಸ್ತೋಮಂಗಳಂ ೧

ಹರಿಸದಿಂ ದ್ರವಿಡದೇಶದೊಳಿರ್ಪನೊರ್ವನೀ
ಶ್ವರಭಕ್ತನತಿಕರ್ಮ[2]ಚಾಂ[2]ಡಾಲತತಿಗೆ ತಾ
ನಿರದೆ [2]ಚಾಂ[2]ಡಾಲನಂತೆಸೆದಿರ್ಪನೊರ್ವ ಪಾರ್ವನ ಮನೆಯ ಬಂಟನಾಗಿ
ನಿರುತಮಾತಂಗೆ ತಿರುನಾಳ್ಪೋವರೆಂಬ ಬಂ
ಧುರನಾಮಮೆಸೆಯುತಿರೆ ತನಗಿತ್ತ ಜೀವಿತದೆ
ವರ ಜಂಗಮಾರಾಧನೆಯ ಮಾಡುತುಂ ಮತ್ತಮವನ ಕೆಲಸಂಗೆಯ್ವುತೆ ೨

ಇರುತಿಂತು ಪೆರುಮಟ್ಟ ಪುಲಿಯೂರನಾಥನ
ಪ್ಪುರುತರ ಶ್ರೀಪತೀ[3]ಶನ[3] ರಥೋತ್ಸವಮನಾಂ
ಪಿರಿದು ನೋಡಲ್ ಪೋದಪೆಂ ಪೋದಪೆಂ ಎಂದು ಪನ್ನೆರಳ್ವರಿಸಮೆಯ್ದೆ
ಭರದಿಂದಮೊಂದುದೆವಸಂ ತನ್ನ ಪುಣ್ಯತ್ತತಿ
ಕರಮೆ ಬರ್ಪಂತೆ ಬಂದುದು ಬಿಟ್ಟ ತದ್ವಿಜಂ
ಗಿರದವಂಗಾಗಿ ಪುಲ್ಪೊಱೆವೊತ್ತು ಶ್ರೀಪತೀಶನ ಪುರಕೆ ನಡೆಯುತಿರಲು ೩

---

[1] ಪ (ಕ) [2] ಚಂ (ಕ) [3] ಶ್ವರ (ಕ)

ಒಡನೆಯ್ದಿದವರೊಸೆದು ಮುಂ ಪೋಗಲಾಯೂರ್ಗೆ
ನಿಡುವೊಱಿಯ ಭಾರದಿಂ ಮೆಲ್ಲನೆಯ್ತರುತಿರಲ್
ಘುಡುಘುಡಿಸಿ ಕಾಱಮುಗಿಲ್ಗಳ್ ಕತ್ತಲೆಗವಿಯೆ ಕಾಳ್ಪುರಂ ದಾರಿಗೆಡಿಸೆ
ಕಡುಪಿಂದೆ ಮೆಲ್ಲನಡಿಯಿಡುತೆ ದಡದಡಿಸುತ್ತೆ
ನಡೆಯುತೊರ್ವನೆ ಬಳಿಕ್ಕಾ ಪೊಳಲನೆಯ್ದಿ ಗಡ
ಗಡನೆ ನಡುಗುತ್ತೊಂದು ಭಿತ್ತಿ[1]ಯಂ[1] ಮಱಗೊಂಡು ಪೊಱೆವೊತ್ತು ನಿಂದಿರ್ದನು ೪

ಬಳಿಕ ಮಿಗಿಲಾಗಿ ಮುಗಿಲ್ಗಳ್ ಪೊನಲುರ್ಗೆ[2]ಳ್ದು
ಗಳಗಳನೆ ತನ್ನ ಮೇಲ್ಸುರಿಯಲದನಱಿಯದೇ
ಸುಲಲಿತ ಶ್ರೀಪತೀಶನ ರಥೋತ್ಸವಮನೇಗಳ್ ಕಾಣ್ಬೆನೋ ಎನುತೆ
ಬಳಿಕೆ ಬಳಿಕಂ ಮುಗುಳ್ದು ಮುಗುಳ್ದದನೆ ನೆನೆಯುತಂ
ಪುಳಕಿತಾಂಗನುಮಾಗುತಿರಲಿತ್ತ ಭಕ್ತರ್ಗೆ
ಬೆಳಗಪ್ಪ ಸಮಯದೊಳ್ ಶ್ರೀಪತೀಶಂ ಸ್ವಪ್ನದೊಳ್ ನುಡಿದನಳ್ಕಱಿಂದೆ ೫

ಮಿಸುಪೆನ್ನಭಕ್ತನೀಯೂರ ಮೂಡಣಕಡೆಯೊ
ಳೆಸೆವ ಗೋಪುರದ ಮುಂದೀಶಾನದಿಕ್ಕಿನೊಳ್
ಬಿಸಮಂದಮಾದ ಮುಳೆಯೊಳ್ ನೆನೆದು ಕೊರಲ ಸೆರೆಬಿಗಿದು ಪೊಡೆಯುಬ್ಬರಿಸುತೆ
ಮುಸಕದಿಂದುಡಿಯುದ್ದ ಮುಳೆವೊನಲೊಳಗೆ ನಿಂದು
ಹಸಗುಂದುತುಂ ನಡುಗುತೊಡನೊಡನೆ ಕೈಕಾಲ್ಗ
ಳಸವಸಂ ಜೆಱತಿರುತೆ ನಾಡೆ ಪಲ್ಪಱಗುಟ್ಟುತುಂ ಸೇಡುಗೊಳುತೆ ಮತ್ತಂ ೬

ಶಿರದೊಳಗೆ ತಾಳ್ದ ಪುಲ್ಪೊಱೆಯಿಂದೆ ರಾಜಿಸುತೆ
ನಿರುತಮಿರ್ದಪನಾತನಂ ನೀಮುಮೆಲ್ಲರುಂ
ಭರದಿನಲ್ಲಿಗೆ ಪೋಗಿ ಗಜಕುಂಭದೊಳ್ ಬೈತು ಕರೆದೊಯ್ದು ಬರ್ಪುದೆಂದು
ಹ[3]ರಿಸ[3]ದಿಂದಾಕ್ಷಣದೊಳವರೆಲ್ಲರೆಳ್ದು ಪುರ
ಹರನುಸುರ್ದ ಕನಸಮಾತಂ ನುಡಿಯುತಿರಲಾಗ
ಳಿರದೆ ಮುಳೆ ತವಿಸಿ ಬಳಿಕಂ ಸುಸಿಲ್ಗಾಲದರುಣಿಮುಮುಣ್ಮುತಿಂದ್ರಾಶೆಯುಂ ೭

ಅನಿತಱೊಳೆ ಭಕ್ತರೆಲ್ಲರ್ ನೆರೆದು ಸಂತಸಂ
ಕೊನರುತಿರೆ ತನ್ನಿಯೋಗಂಗೂಡಿ ಶಿವನೊರೆದ
ಮಿನುಪ ಗೋಪುರದಲ್ಲಿಗೆಯ್ದಿ ಕಂಡಾತನಂ ಗಜಕುಂಭಪೀಠದೊಳಗೆ

---

[1] ಯಿಂ (ಗ) [2] ರ್ದು (ಗ) [3] ರುಷ (ಗ)

ಸನಯದಿಂದಿರಿಸಿ ನುತಿಸುತ್ತೆ ಸಂಭ್ರಮದಿಂದೆ
ಘನತರ ಶ್ರೀಪತೀಶನ ಪೊರೆಗೆ ಕೊಂಡೊಯ್ಯ
ಲನಿತಱೊಳ್ ಶ್ರೀಪತೀಶನ ಕಂಡು ತನ್ಮೂರ್ತಿಯೊಳಗಡಂಗಿದನಕ್ಕಱಿಂ ೮

ಎಲವೊ ವಿಪ್ರರಿರ ತಿರುನಾಳ್ಪೋವರಂ ಪೊಲೆಯ
ಕುಲದವಂ ತಾನೆಂದು ನುಡಿಯಲಕ್ಕುಮೆ ಶಿವನ
ಕುಲದ ಭಕ್ತರ ಮಹಿಮೆಯಂ ಪೊಗಳ್ವೊಡುರಗರಾಜಂಗಮರಿದೆಂದೊಡಿನ್ನು
ನಲಿದೆಂತು ಕೀರ್ತಿಪಂ ಮನುಜನಿನ್ನುಂ ಕೇಳಿ
ಮಲಸದೆನುತುಂ ಸೂರಸಾನಾಂಬೆ ಪೇಳ್ದಳಾ
ಮಲಹರನ ಸದ್ಭಕ್ತನೆನಿಪ ಕಕ್ಕಯ್ಯನುರುಮಹಿಮೆಯಂ ಸಂತಸದೊಳು ೯

ಧರಣಿಯೊಳು ಶಿವಭಕ್ತನೊರ್ವನಿರ್ಪಂ ಮಹೇ
ಶ್ವರನಣುಗಿನಾಳೆನಿಸಿ ಕಕ್ಕಯ್ಯನೆಂಬ ಭಾ
ಸುರನಾಮದಿಂದೊಪ್ಪುತುಂ ಮತ್ತಮೊಂದುದಿನಮೊರ್ವನುನ್ನತ ದುಷ್ಟನು
ನಿರುತದಿಂ ಶ್ರುತಿಯೇಕ ಯೇವ ರುದ್ರಃ ಎನು
ತ್ತಿರಲನ್ಯದೇವತಾಸ್ತುತಿಗೆಯ್ವುತಿರೆ ಕೇಳಿ
ಭರದಿನವನಂ ಕೊಲಲ್ ತದ್ವಿಜರ್ ಮುಳಿಯಲವರ್ಗಂ ತೋಱಿದಂ ಮಹಿಮೆಯಂ ೧೦

ಬಳಿಕಮಾ ಪೌ[1]ರಾಣಿಕ[1]ನ ದೇಹಮೆಲ್ಲಮುಂ
ಪುಳುರಾಸಿಯಾಗಿರಲ್ ಕಾಣುತ್ತುಮಾ ವಿಪ್ರ
ಕುಳಮೆಯ್ದೆ ವಿಸ್ಮಯಂಬಟ್ಟು ನೆಱೆಪೋಯ್ತು ಮತ್ತಾತನಂತ್ಯಜನೆ ಮುನ್ನೆ
ಲಳಿತ ಮಾದರಧೂಳಿದೇವಯ್ಯ ಪಾದಾಂಬು
ಗಳಿನೊ[2]ರೆ[2]ದ ಕರ್ದಮದೊಳಗೆ ಪೊರಳ್ದು ಪೊರಳ್ದು ಸ
ಲ್ಲಲಿತ ತನುವೆಯ್ದಿರೇ ಏಳ್ನೂಱುಸಾರ್ವರುನ್ನತಕುಷ್ಠರೋಗಯುತರು ೧೧

ಧರಣಿಯೊಳು ಗುಡ್ಡವ್ವೆಯೆಂಬ ವಿಶ್ರುತ ಭಕ್ತೆ
ವರಧಾನ್ಯಮಂ ಮಾಡಿದಪೆನೆಂದು ಸಂತಸದೊ
ಳಿರದೆ ನಾವಿಟಕಿಯೆಂಬಾ ಪೊಳಲ್ಗೆಯ್ದಿ ಪಡಿವೇಡುತಿರಲಾಯೂರೊಳು
ನೆರೆದು ವಿಪ್ರರ್ ಗುದಿಗೆ ಕಲ್ಗುಂಡುಗೊಂಡು ನಿ
ರ್ಭರದೆ ಪೊಱಮಡಿಸಿವಳ ಮೈಕೆಟ್ಟ ಪೊಲತಿಯಂ
ನಿ[3]ರತ[3]ಭಕ್ತೆಯ ತೆಱದೆ ಭೂತಿರುದ್ರಾಕ್ಷೆಗಳ ಧರಿಸಿ ಶಿವಶಿವ ಎ[4]ನುತ್ತೆ[4] ೧೨

---

1 ರೋಹಿತ (ಕ) 2 ಗೆ (ಕ) 3 ರುತೆ (ಕ) 4 ಸ್ತುತೆ (ಗ)

ನಲವಿನಿಂ ಮುಷ್ಟಿಯಂ ಬೇಡುತಿರ್ಪಳೆನುತ್ತೆ
ಪಲಕೆಲವು ಮಾತನಾಡುತ್ತಲಾಯೂರಿಂದೆ
ನಿಲಗುಡದೆ ಪೊಱಮಡಿಸಲಂದು ಗುಡ್ಡವ್ವೆ ಮೆಯ್ಯಂ ಪಡೆವೆನೆಂದು ಬಗೆದು
ಛಲದಿಂದೆ ಸೌರಾಷ್ಟ್ರಪುರಕೆಳ್ತರುತ್ತಿರಲು
ಕೆಲವು ಪಯಣದ ಮೇಲೆ ಮೃದುಪಾದಪದ್ಮಂಗೆ
ಅಲದುರ್ಕೆ ಕಣ್ಣೆತ್ತರೊಱೆಱಯಲ್ ನಡೆಯಲನುವಾಗದುರುಳ್ದುರುಳ್ದು[1]ಪೋಗು[1]ತಿರಲು ೧೩

ತನುವೆಯ್ದಿ ಬಿಱಿದು ಮುಂಪೋಗಲಳವಲ್ಲದಿರೆ
ಮನದ ಬಲ್ಪುಡುಗದಿರೆ ಸೋಮೇಶ್ವರಂ ಮೆಚ್ಚಿ
ವನಿತೆ[2]ಗಿದಿರ್ವಂದು[2] ನಿಜಮಂ ತೋಱಿ ಮೈದಡವೆ ಕುಂದಣದ ಕಾಂತಿಯಂತೆ
ಮಿನುಕುದೋಱಲ್ ಶರೀರಂ ಮತ್ತೆ ತತ್ಕಾಂತೆ
ಘನಶಾಪಮಂ ಕುಡಲ್ ನಾಪಿಟಕಿಯೊಳಗಿರ್ಪ
ಬಿನುಗುವಿಪ್ರರ ತನುಗಳೆಯ್ದೆ ತೊನ್ನಾದುವಾ ಗುಡ್ಡವ್ವೆ ಕುಲಹೀನೆಯೆ ೧೪

ನಿರುತಮಿನ್ನುಂ ಕೇಳಿರೆಲೆ ಸಿತಗ ಪಾರ್ವರಿರ
ಧರೆಯೊಳಗೆ ಶಿವನಾಗಮಯ್ಯನೆಂದೆಸೆವ ಪುರ
ಹರನ ಸದ್ಭಕ್ತನಾತನ ಚರಿತ್ರಂ ವಿಚಿತ್ರಂ ನಾಡೆ ಭಾವಿಸುವೊಡೆ
ಪಿರಿದು ಬಸವಾಮಾತ್ಯನೊಡನೆ ಚರಿಸುತ್ತಿರಲ್
ಕರಮಸಹ್ಯದೆ ನಿಂದಿಸಲ್ ವಿಪ್ರಸಮಿತಿ ನಿ
ರ್ಭರದಿನಾ ಬಿಜ್ಜಳಂ ಮೆಚ್ಚೆ ತತ್ಕರದಿನಮೃತಂದೋಱನೇ ಬಸವನು ೧೫

ಧರಣಿಯೊಳ್ ಶ್ವಪಚಯ್ಯನೆಂಬ ಗಣಪುಂಗವಂ
ಪರಮೇಶ್ವರನ ಭಕ್ತರೆನಿಸಿ[3]ರ್ಪ[3]ನಾತಂಗೆ
ವರಸಾಮವೇದಿಗಳ್ ಶಿಷ್ಯರಾಗಿರ್ಪರೆನೆ ತಚ್ಚರಣಮಾಹಾತ್ಮ್ಯಮಂ
ಪಿರಿದು ಪೊಗಳಲ್ಕೆ ಬಾಸುಗಿಗಜಂಗಾಗದೆನೆ
ನರನೆಂತು ಪೊಗಳ್ವನಾ ಶ್ವಪಚ[4]ಯನ[4] ಮಹಿಮೆಯಂ
ನಿರುತಮಾತಂ ಹೀನಕುಲದವನೆ ಭಾವಿಸಲ್ ವಿಪ್ರರಿರ ಕೇಳಿಮಿನ್ನು ೧೬

ಮುನ್ನೆ ಮಾದರಚನ್ನದೇವಯ್ಯನೆಂಬೊವಗ
ನುನ್ನತೋನ್ನತಭಕ್ತನೆಸೆದಿರ್ಪನಾತಂಗೆ
ಸನ್ನಿಹಿತನಾಗಿರ್ಪನೀಶ್ವರಂ ಮತ್ತವನ ಚಾರಿತ್ರವತಿಪವಿತ್ರಂ

---

[1] ಪೊರಳು (ಕ) [2] ಗೀ ವಂದು (ಕ) [3] ಪ್ಪ (ಕ) [4] ಯ್ಯ (ಗ)

ಸನ್ನಿದಂ ಶಿವಭಕ್ತಪುಂಗವರ ವೃತ್ತಂಗ
ಳನ್ನರಾನೀಕವೆಂತಱಿಗುಮಾ ಶಿವನಜಿವ
ನಿನ್ನುಮಾ ಶಿವಭಕ್ತರೇ ಕುಲಜರವರೆ ಶಿವಮೂರ್ತಿಗಳ್ ಪರಿಭಾವಿಸೆ ೧೭

ಶಿವಭಕ್ತಿರಹಿತಮಾದಾ ದ್ವಿಜನೆ ಅಂತ್ಯಜಂ
ಶಿವಭಕ್ತಿಯುಕ್ತನಾದಂತ್ಯಜನೆ ಸದ್ವಿಪ್ರ
ನವಿರತಂ ನೋಡಿರೆಲೆ ವಿಪ್ರರಿರ ಸದ್ರಸಂ ಸೋಂಕಿ ಲೋಹಂಗಳೆಲ್ಲಂ
ತವೆ ಕನಕಮಪ್ಪಂತೆ ಶರದಭ್ರಮಾವರಿಸೆ
ತವಕದಿಂ ಧೂಮಾದಿಯಾವರಿಸೆ ತನ್ನಭಕೆ
ವಿನರ[1]ಪೊ[1]ಡೆ ನಿರ್ಮಲತ್ವಮನಲ್ಲದೇ ಅಧಿಕ ಸೂನಂಗಳಿಲ್ಲದಂತೆ ೧೮

ಅಂತಾವ ಕುಲವನಾವರಿಸಿಕೊಂಡಿರ್ದೊಡಂ
ಮಂತೆ ಶಿವತೇಜಕ್ಕೆ ಪೆರ್ಚುಕುಂದುಗಳುಂಟೆ
ಸಂತತಂ ರಜ್ಜುವಂ ಕಂಡಹಿಪನೆಂದು ಶುಕ್ತಿಯ ಕಂಡು ಬೆಳ್ಳಿಯೆಂದು
ಅಂತೆವೊಲ್ ಸ್ಥಾಣುವಂ ಕಂಡು ತಸ್ಕರನೆಂದು
ಮುಂತಱಿಯದಜ್ಞಾನದೃಷ್ಟಿಯಿಂ ನೋಡಿಯೆ ಸ
ಮಂತು ಬಗೆವಂತೆಸ್ಮ ಭಕ್ತರಂ ಪಾಪದೃಕ್ಕಿಂ ನೋಡಲವರ ಕಣ್ಗೆ ೧೯

ಸಲೆ ಅಂತ್ಯಜರ ತೆಱದೆ ತೋಱುತಿರ್ಪರ್ ಮತ್ತೆ
ಲಲಿತ ಸಮ್ಯಗ್ದೃಷ್ಟಿಯಿಂ ನೋಡಲಾ ಸರ್ಪ
ನಲಘು ರಜತಂ ಚೋರನೆಂಬ ಭಾವಂ ಕೆಟ್ಟು ಸಹಜಸ್ವರೂಪನಾದ
ಸುಲಲಿತಂ ರಜ್ಜು ಶುಕ್ತಿ ಸ್ಥಾಣುಗಳೆಯೆನಿಸಿ
ನಲಿದು ತೋರ್ಪಂತೆ ಶೈವಜ್ಞಾನದೃಕ್ಕಿನಿಂ
ನಿಲೆ ನೋಡಲಂತ್ಯಜತ್ವಮನೆಯ್ದೆ ಬಿಟ್ಟು ಶಿವರೂಪದೊಳಗೆಸೆದಿರ್ಪರು ೨೦

ಸದಮಲಪ್ರಚುರವಿಶ್ರುತ ಪರಮಭಕ್ತಗಣ
ಪದಸರೋರುಹಸಾಂದ್ರ ಮಕರಂದಪಾನಸ
ಮ್ಮುದಿತ ಚಂಚಚ್ಚಂಚರೀಕಸನವರತ ಸಂಚಾಕ್ಷರೀಪ್ರಸಿತಹೃದಯಂ
ವಿದಿತಮಂಜುಳನೀಲಕಂಠಾಹ್ವಯಂ ಮನ್ನೋ
ಮುದದೆ ಪೇಳ್ದುರುತರಾರಾಧ್ಯಚಾರಿತ್ರದೊಳ
ಗಿದು ಸೂರಮಾಂಬೆ ವಿಪ್ರರ್ಗೊರೆದ ಪಿರಿಯ ಮಾಹೇಶ್ವರರ ಮಾಹಾತ್ಮ್ಯವು ೨೧

---

1 ಪ (ಗ)

# ಹತ್ತನೆಯ ಸಂಧಿ

## ಅಂತ್ಯಜಾಕಾರ ಭವಲಿಂಗಾಕಾರ ಕಥೆ

ಸೂಚನೆ: ಮನೆಗೆಯ್ದಿದಂತ್ಯಜಾಕಾರದಭವನ ತನ್ನ
ಮನದ ದೃಢದಿಂದೆ ಸೂರಾಂಬೆ ಲಿಂಗಂಮಾಡಿ
ದನುಪಮ ಕಥೆಯ ಸೂರಸಚಿವೇಂದ್ರ ಕೇಳ್ ಪೇಳ್ದಪೆಂ ಭಕ್ತರಾಲಿಪಂತೆ

ವಿದಿತ ಮೃದುಮಧುರ ಸುರಗಾನಂಗಳುಣ್ಮುತಿರೆ
ಪದದ ವೃಷ್ಟಂಭಭಾರದೆ ಧರಣಿ ತಗ್ಗುತಿರೆ
ತ್ರಿದಶಗಂಗಾಜಲಂ ಜಡೆಗಟ್ಟನಹಿಯ ಪೆಡೆ ರನ್ನಗೆಂಪಿನ ಘೃಣಿಯೊಳು
ಪುದಿದೆತ್ತಲುಂ ಸೂಸುತಿರೆ ಕಂಡು ಭೂತಗಣ
ಮೊದವಿದತಿಹ[1]ರ್ಷ[1]ದಿಂ ಶೋಣಿತಂಗೆತ್ತು ನೆಱೆ
ಪದೆದು ನೋಡುತ್ತಿರಲ್ ನರ್ತನಂಗೆಯ್ವ ವರಗುರುನೀಲಕಂಠ ಶರಣು 1

ಎಂದಿಂತು ವಿಪ್ರರ್ಗನಂತಭಕ್ತರ ಮಹಿಮೆ
ಯಂದಮಂ ಪೇಳುತ್ತೆ ಮತ್ತೆ ತನ್ನಯ ಮನದೊ
ಳೊಂದಂ ವಿಚಾರಿಸಿದಳಿಂತು ಪಿಂಗಥೆಗಳಂ ಪೇಳ್ದುದಱಿನೇನಾದುದು
ಮುಂದಿವರ್ಗೆ ದೃಷ್ಟಮಂ ತೋರ್ಪೆನೆನುತವರೊಡನೆ
ಮಂದಹಾಸಂ ಮೊಳೆಯುತುಸುರ್ದಳೆಲೆ ವಿಪ್ರರಿರ
ಮಂದಮತಿಗಳಿರೆನ್ನ ಶಿವನೆಂತು ನಿಮಗೆ ಗೋಚರಿಸುವಂ ಬಂದು ನೋಡಿ 2

ಎನುತೆ ಕರೆದೊಯ್ವುತಿಂತೆಂದಳಘನಾಶನಂ
ಮಿನುಪ ಮೂವತ್ತಾಱುತತ್ತ್ವಕ್ಕೆ ಶಿಖರಂ ದ
ಲೆನಿಪ ಶಿವಮೂರ್ತಿಯನನಾಮಯನನಜಹರಿಗಳ[2]ರ್ಬ[2]ರುಂ ಕಾಣ್ಬೆ[3]ನೆ[3]ನುತೆ
ಘನಗೃಧ್ರ [4]ಕಿಟಿ[4]ಗಳಾಗಿಯ್ದೆ ಕೋಟೀರಪದ
ವನಜಂಗಳಂ ತೋಱದವನಾದಿಮಧ್ಯಾಂತ
ವಿನಿಸಿಲ್ಲದವನುನ್ನತಾಮ್ನಾಯತತಿಯ ನುತಿಗೆಯ್ದರತಿಶಯಮೂರ್ತಿಯಂ 3

---

[1] ರುಷ (ಗ) [2] ಬ್ಬ (ಕ) [3] ಮೆ (ಕ) [4] ಕೀಟಂ (ಕ)

ಸನಕಾದಿಮುನಿ ಪುರಾಣೇತಿಹಾಸಂಗಳುಂ
ವಿನುತಿಸುತ್ತಿರ್ಪ್ಪ ಲಜ್ಜಾಯುದ ಮೂರ್ತಿಯುಂ ಶೇಷ
ನನುನಯದಿನಿ[1]ರ್ಭಾ[1]ಸಿರೊಳ್ಳಾಲಗೆಯನೆಯ್ದಿ ಪೊಗಳಲಜ್ಜಾಯುದ ಮೂರ್ತಿಯಂ
ಅನುವಿನಿಂ ಸದ್ಭಕ್ತಹೃತ್ಕಮಲಮಧ್ಯದೊಳ
ಗೆನಸುಂ ವಿರಾಜಿಸುವ ಸನ್ಮೂರ್ತಿಯಂ ನೀಚ
ಜನರೆಂತು ಕಾಣ್ಬರೆನುತುಂ ಮುನ್ನೆ ಭುಂಜಿಸಿದ ತಾಣದಾಸನನುನೊಸೆದು ೪

ಕೆಲಕೆ ನೂಂಕಲ್ ತೊಳಗಿ ಬೆಳಗಿ ಥಳಥಳಿಸುತ್ತೆ
ವಿಲಸದುಜ್ವಲ ದಿವ್ಯತೇಜಸ್ವರೂಪ ಸ
ಲ್ಲಲಿತ ಸ್ವಯಂಭುವಿನ ಸಾಕಾರಮಾಗಿರಲ್ ಕಂಡು ಜನರೆಯ್ದಿ ಪೊಗಳೆ
ಲಲಿತ ಸೂರಾಂಬಾ ಮನೋನಿಷ್ಠಮಾದ ನಿ
ರ್ಮಲ ಮೂಲಮಂತ್ರಮದು ಪೂಜಿಗಣ್ಗೆ ಪೊಣ್ಮಿಯಿ
ಯೆಲೆಯೊಳಗೆ ಮೂರ್ತಿಯುತಮಾಗಿ ಕಣ್ಗೆಡ್ಡಮಾದುದೊ ನಾಡೆ ಪೊಸತು ನೋಡೆ ೫

ನಿರುತದಿಂ ಸೂರಸಾನಾಂಬಾ ಶಿವಧ್ಯಾನ
ದುರುಸುಖಂ ಘಳಿಲನೆ ಘನೀಭೂತಮಾಯ್ತೊ ತ
ದ್ವರ ಕಾಮಿನಿಯ ಶಿವಾಚಾರವಲ್ಲರಿ ಕೆಚ್ಚುಗಟ್ಟಿ ಬಲಿದುದೊ ಭಾವಿಸೆ
ಭರದಿಂದೆ ತದ್ವನಿತೆ ಸಮೆದ ಪುಣ್ಯದ ರಾಸಿ
ಯಿರವು ನೆಲಿಕಿ ಕಠಿಣಮಾದುದೊ ತದಂಗನೆಯ ಭಾ
ಸುರಮಾದ ವಿಶ್ವಾಸಮಣಿಯುರಂ ಪರಿಜುವಡೆದುದೊ ರಸೆಯೊಳೊಸೆದು ಸೊಕದಿಂ ೬

ವಿಸುಪ ಸೂರಾಂಬಿಕೆಯ ಹೃದಯದೊಳ್ ಸಂತತಂ
ಮುಸಕದಿಂ ತೊಳಗುವ ಪರಂಜ್ಯೋತಿ ಪೊಜಿಪೊಣ್ಮಿ
ರಸೆಯೊಳುದ್ಭವಿಸಿತ್ತೊ ನಾಡೆ ತತ್ಸೌಭಾಗ್ಯಮತಿಶಯಂ ಗಜಿಗೊಂಡಿತೊ
ಎಸೆವ ತತ್ಕಾಮಿನಿಯ ಸದ್ಭಕ್ತಿ ಭೂಮಿಯೊಳ
ಗಸವಸಂ ಕರುಗಟ್ಟಿತೋ ಮತ್ತಮಿನಿತುದಿನ
ನೊಸೆದೆಸಗಿದಾ ಜಂಗಮಾರ್ಚನೆಯೆ ಭಾವಿಸಲ್ಕೀ ರೂಪನನುಕರಿಸಿತೊ ೭

[1] ಚ್ಛಾ (ಗ)

ಎನುತೆ ಭಕ್ತರ್ ತವೊಳ್ಳೋರೋರ್ವರಿಂತೆಂದ
ರನುನಯಂ ಸ್ವಭರ್ಘನು ನೀರೂಪನಾಗಿರುತೆ
ದಿನಪ ಚಂದರ್ಕಳಂ ಪಿಡಿದು ತನ್ನಯ ರೂಪನೊಸೆದು ತೋರ್ಪಂತೆ ಮತ್ತಂ
ಅನಿಲನುಂ ರೂಪುರಹಿತನುಮಾಗಿರುತ್ತೆ ತೊ
ಟ್ಟನೆ ರೇಣುತೃಣತತಿಯೊಳೊಡೆವೆರೆದು ತೋರ್ಪಂತೆ
ತನುವಿಲ್ಲದೀಶ್ವರಂ ಸೂರಸಾನಾಂಬಿಕೆಯ ಭಾವದಿಂ ರೂಪುಗೊಂ[1]ಡಂ[1] ೮

ಮುನ್ನೆ ಬಸವೇಶ್ವರನ ಮಹಿಮೆಯಂ ಭುವನದೊಳ್
ಸನ್ನಿದಂ ವಾರ್ತಾಕತತಿಗಳೆಲ್ಲಂ. ನೋಡೆ
ನನ್ನಿಯಿಂ ಬಾಣಲಿಂಗಂಗಳಾದುವು ಮತ್ತೆ ಬಳ್ಳೇಶಮಲ್ಲಯ್ಯನಾ
ಚೆನ್ನಮರ್ದ ಭಕ್ತಿಯಿಂ ಬಳ್ಳವೇ ಲಿಂಗಮೂ
ಯ್ಯುನ್ನತೋನ್ನತ ಕಾಟಕೋಟನ ಮಹತ್ವದಿಂ
ಸನ್ನುತಾಜದ ಹಿಕ್ಕೆ ಲಿಂಗಮಾದುದು ನೋಡ ಲೋಕದೊಳಗಿದು ಸಿದ್ಧವು ೯

ಲಲಿತ ಬಾಹೂರಬೊಮ್ಮಯ್ಯನಿಂ ಕರೆಯಲ್ಕೆ
ಸಲೆ ಜೋಳರಾಸಿ ಲಿಂಗಸ್ವರೂಪಮದಾಯ್ತು
ನಲಿದು ಸುರರೆಯ್ದೆ ಪೊಗಳುತ್ತಿರಲ್ ಚಂಡೇಶನುರುಭಕ್ತಿಯಿಂ ಸೈಕತಂ
ಲುಲಿತ ಲಿಂಗತ್ವಮಾದುದು ಮತ್ತೆ ಘಟಸರ್ಪ
ನೊಲವಿನಿಂ ಲಿಂಗಮಾದತ್ತು ದೇವಲದಾಸ
ನಲರ್ವ ಸದ್ಭಕ್ತಿಯಿಂದಾ ನಾಯಿನಾರಿಗಾ ವೃಷಭನೇ ಲಿಂಗಮಾಯ್ತು ೧೦

ಪಿರಿದು ಸಿಂ[2]ಧು[2]ಮರಾಜನುನ್ನತ ಕಳೇವರಮೆ
ವರಲಿಂಗಮಾಯ್ತೆಂದು ಪೂರ್ವವಚನಂಗಳಂ
ಭರದಿ ಕೇಳುತ್ತಿರ್ಪೆವಿಂದು ಸೂರಾಂಬಿಕೆಯ ಸದ್ಭಕ್ತಿಭಾವದಿಂದಂ
ಪರಮ ಜಂಗಮವೇ ಸ್ವಯಂಭುವಾಕಾರಮಂ
ಕರಮೆ ಧರಿಸಿದನೆಂದು ಸದ್ಭಕ್ತರೆಲ್ಲರುಂ
ಹ[3]ರಿಸ[3]ದಿಂ ಸೂರಸಾನಾಂಬೆಯಂ ಕೀರ್ತಿಸುತ್ತಿರ್ದರಚ್ಚರಿಪಡುತ್ತೆ ೧೧

ಆ ಸಮಯದೊಳ್ ಸೂರಸಾನಾಂಬೆ ನುಡಿದಳೊಸೆ
ದಾ ಸಭೆಗೆ ನೀವೆಲ್ಲರುಂ ನೋಡಿಮೆಂದೀಗ
ಕೋಸರಿಸದೆನ್ನ ಮನೆಗೆಳ್ತಂದು ಭೋಜನಂಗೆಯ್ದ ಜಂಗ[4]ಮವೀ[4]ತನು

---

[1] ಡು (ಕ) [2] ಥ (ಕ) [3] ರುಷ (ಗ) [4] ಮಾ (ಕ)

ಭಾಸುರಂ ಭವನೆನಿಸುತೀತನೀ ಲೋಕಮಂ
ಸಾಸದಿಂ ಪುಟ್ಟಿಸುವ ಬುದ್ಧಿವಂತಂ ಮತ್ತೆ
ಲೇಸೆನಿಪ ಮೃಡನೆನಿಸುತೀ ಜಗಮನೆಯ್ದೆ ರಕ್ಷಿಸುತಿರ್ಪ ಕರುಣಾಕರಂ ೧೨

ಹರನೆನಿಸುತೀ ಜಗತ್ರಯಮನುರಿಗಣ್ಣಿಂದೆ
ಭರದೆ ಸುಡುವ ಮಹಾಪ್ರತಾ[1]ಪಿ[1] ವೇದಂಗಳಿಂ
ದುರುತರ ಸ್ತೋತ್ರಯುಮಾನಂ ದಲೀತಂ ತ್ರಿಮೂರ್ತ್ಯಾದಿಯೆನಿಸುವನೀತನು
ಹರಿಸುರಜ್ಯೇಷ್ಠರೀರ್ವರ ಗರ್ವಮಂ ಮುರಿಯು
ತುರಿಲಿಂಗಮಾದ ವಿಶ್ವಾಧಿಕನುಮೀತನಂ
ತಿರದೆ[2]ತ್ತಿ[2]ದಾ ವ್ಯಾಸಹಸ್ತಂಗಳಂ ಗಾಳಿವಟ್ಟೆಯೊಳ್ ಕಿ[3]ಳ್ತ[3]ನೀತಂ ೧೩

ನಲಿಯುತಂ ಬಾನ್ಬೊಳಲ ಸುಟ್ಟಧಟನೀತನಂ
ದುಲಿಯುತಂ ಕೂರ್ಪುಳ್ಳ ಪೂಗಣೆಯ ಮೊನೆದೋರ್ಪ
ಲಲಿತ ರತಿಪತಿಯ ಪಣೆಗಣ್ಣ ವೇಗದಿಂದೆಱಿದು ನೋಡಿದೀಶ್ವರನೀತನು
ಸಲೆ ಅರ್ಧನಾರೀಶ್ವರಂ ನೋಡಿಮೀತನು
ತ್ಪಲಬಂಧು ಸೂರ್ಯಾಗ್ನಿನೇತ್ರನೀತಂ ದಕ್ಷ
ನಲಘುಮುಖಮಂ ಕಡಿಸಿ ದಕ್ಷಂಗೆ ಕುಱಿದಲೆಯನೊಲ್ದಿತ್ತ ವೀರನೀತಂ ೧೪

ಭರದಿನಂದದ್ವೈತಮಂ ನೆಮ್ಮಿ ಶೂನ್ಯಮಂ
ಪಿರಿದು ನುಡಿವಖಿಳ ಮುನಿಗಳ ಭಗ್ನ[4]ರಂ[4] ಮಾಡಿ
ಹ[5]ರಿಸ[5]ದಿಂದಂ ಶಿವಜ್ಞಾನಮಂ ಭಕ್ತರ್ಗೆ ಕುಡುವ ಕರುಣಾಬ್ಧಿಯಿಾತಂ
ನಿರುತಮುಂಟೇಶನೆಂಬಾ ಭಕ್ತಪುಂಗವರ್ಗೆ
ಪಿರಿದುಮಿಷ್ಟಾರ್ಥಂಗಳಂ ನಾಡೆ ಮನವೊಲ್ದು
ಕರೆದೀವ ದೇವತತಿ ಮುಕುಟಮಣಿಯೆನಿಪ ಶಿವನೀತನೀತಂ ಭಾವಿಸೆ ೧೫

ತನ್ನ ನೆಱಿಯುಱಿದಿರ್ದ ಶರಣರಂ ಭವವೆಂಬ
ಮುನ್ನೀರ ಕಡೆದಡಿಯನಣಿಯರಂ ದಾಂಟಿಸುವ
ಸನ್ನುತಾಮಲಕರ್ಣಧಾರನೀತಂ ಚತುರ್ವಿಧ [6]ಫಲಂ[6]ಗಳನಾವಗಂ
ನನ್ನಿಯಿಂ ಮಿಾಱಿ ವರ್ತಿಪ ನೀಲನೀತನ
ತ್ಯುನ್ನತೋನ್ನತ ಭಕ್ತಮಹಿಮನೊಸೆದೆಲ್ಲರುಂ
ಸನ್ನಿದಂಗಂಡಂತ್ಯಜಂ ನೋಡಿಮೀತನೆನುತಂ ತೋಱಿದಳ್ ಶಿವನನು ೧೬

[1] ಪ (ಕ) [2] ತ್ತ (ಕ) [3] ತ್ತ (ಗ) [4] ಮಂ (ಕ) [5] ರುಷ (ಗ) [6] ಪದಂ (ಕ)

ಕಡೆಗಣ್ಣ ಕುಡಿಯೊಳಾನಂದಾಶ್ರು ಪೊಣ್ಮುತಿರೆ
ಬಿಡದಡಸಿ ಮೆಯ್ವೊದಕೆ ರೋಮಾಂಚನಗಳೊಡನೆ
ನುಡಿ ತ[1]ಡಬಡಂ[1]ಗುಟ್ಟೆ ಮೆಯ್ಯೆಲ್ಲ ಬೆಮರಿಡಲ್ ತನು ಝೊಮ್ಮಿನೊಳ್ ಸೇರಲು
ನಡುಕಮುಣ್ಮಲ್ ಶಿವಾನಂದರಸಶರಧಿಯೊಳ್
ಬಿಡದೆ ತೇಂಕಾಡುತಾ ಸೂರಸಾನಾಂಬೆ ಮು
ತ್ತಡಿಗಡಿಗೆ ಕೈನೀಡಿ ತೋಱುತಿರ್ದಳ್ ಶಿವನ ಮೂರ್ತಿಯಂ ವಿಪ್ರತತಿಗೆ ೧೭

ಬಿಡದೆ ಶಿವಮೂರ್ತಿಯಂ ನಡೆನೋಡಿ ಸಂತಸಂ
ಬಡುತದ್ಭುತಂಗೊಳುತೆ ಸಂಭ್ರಮಂ ಪೊಣ್ಮುತ್ತೆ
ಸಡಗರದಿನರಸನುಂ ವಿಪ್ರರುಂ ಪ್ರಜೆಗಳುಂ ಶೈವನಿಧಿ ಸೂರಾಂಬೆಗೆ
[2]ಪೊ[2]ಡೆಗೆಡೆದು ವಂದನಂಗೆಯ್ದು ಕರುಣಾಂಬುಧಿಯೆ
ಕಡುದುರುಳರೆಮ್ಮ ವಂದಿಗರ ನೆಱಕಾವುದೆನು
ತಡಿಗಡಿಗೆ ಭೂಮಿಯೊಳ್ ಕೆಡೆದು ವಂದಿಸುತೆ ಪೊರಳ್ದರ್ ನಾಡೆ ಸಂತಸದೊಳು ೧೮

ಹರನ ನಾವೆತ್ತಲಱಿವೆವು ತಾಯೆ ಪಾರ್ವತೀ
ನಿರುತಮೆಮ್ಮೆಲ್ಲರ್ಗೆ ನೀನೆ ಗುರು ನೀನೆ ಭಾ
ಸುರ ಶಿವಂ ಜನಕನುಂ ಜನನಿಯುಂ ನೀನೆನುತೆ ಮತ್ತೆ ಪಲವಾತಡೇನು
ಧರಣಿಯೊಳಗೀ ಭಕ್ತಿಯಂ ಶ್ರದ್ಧೆಯಂ ದೃಢಮ
ನುರುಸಾಹಸಮನೊಸೆದು ವೇದಶಾಸ್ತ್ರಂಗಳೊಳ
ಗಿರದೆ ಕೇಳ್ದಱಿಯೆವಿನ್ನೆವ[3]ರೆಗಂ ಬಳಿಕೆ[3] ನಿಜಮಹಿಮೆಯಂ ಶಿವನಱಿವನು ೧೯

ನರರ್ಗಳಾವೆತ್ತಲಱಿವೆವು ದುರಾಚಾರಿಗಳ್
ನಿರುತ ಸನ್ಮಾರ್ಗದೂರರ್ ಛಾಂದಸರ್ ಕಾಲ
ನುರುದಂಡಪಾತ್ರರಾಮ್ನಾಯಮಂ ಪೊತ್ತಮಂದಿರ್ ಕರ್ಮ[4]ಚಾಂ[4]ಡಾಲರು
ಪರಮಪಾತಕಿಗಳಪರಾಧಿಗಳ್ ನರವೇಷ
ದಿರವಿನಿಂ ಬಂದ ಶಿವರೂಪನಱಿಯದೆ ಮಂದ
ತರ ಬುದ್ಧಿಯಿಂದಮಂತ್ಯಜನಂತ್ಯಜಂ ಎಂದು ನಿಂದಿಸಿದ ಪಾಪಯುತರು ೨೦

ವರ ವಿಪ್ರರೂಪದಂತ್ಯಜರೆಮ್ಮ ದೋಷಮಂ
ಪರಿಕಿಸದೆ ಕಾವುದೆನುತೆಲ್ಲಾ ದ್ವಿಜರ್ಕಳುಂ
ಭರದಿಂದೆ ಸೂರಮಾಂಬಿಕೆಯ ಚರಣಂಗಳ್ಗೆ ನಮಿಸಿದರ್ ಭಕ್ತಿಯಿಂದೆ

---

[1] ಡಂಬಡ (ಕ) [2] ಹೊ (ಗ) [3] ರಂ ಬಳಿಕ್ಕೆ (ಕ) [4] ಚಂ (ಕ)

ಧರಣಿಸನುಮಂತಿ ವಂದನೆಗೆಯ್ದುನಳ್ತಿಯಿಂ
ಪುರಜನಂ ಮತ್ತೆ ಮಸ್ತನ್ಯಸ್ತಹಸ್ತ ಸರ
ಸಿರುಹರಾಗುತ್ತಿರಲ್ಕಿತ್ತ ಭಕ್ತಾಳಿ ಸಮ್ಮುದದಿಂದೆ ನರ್ತಿಸುತ್ತೆ ೨೧

ಕೆಲಬರಾ ಸೂರಸಾನಾಂಬಿಕೆಯ ಪಾದಕ್ಕೆ
ನಲಿದು ವಂದಿಸುವರತಿಸಂತೋಷದಿಂದೆ ಕೆಲ
ಕೆಲಬರಾ ಸೂರಾಂಬಿಕೆಯ ಚರಣರಜದೊಳಗೆ ಪೊರಳುತಿರ್ಪರ್ ಕೆಲಬರು
ಸಲೆವೊಲ್ದು ಮುಂಡಾಡುವರ್ ಕೆಲಬರಳ್ತಿಯಿಂ
ತಲೆಗಳೊಳ್ ಮಿಣಿತೊಗಲ ಚೀರ ಸಂಬಳಿಗೋಲ್ಗ
ಳೊಲವಿನಿಂ ತಾಳ್ದು ಜಂಂಗಣಗುಣಿದು ತೊನೆದಾಡುತಿರ್ಪವರ್ ಪಲಕೆಲಬರು ೨೨

ಭರದಿನಾ ಸೂರಾಂಬಿಕೆಯ ಕೆರ್ಪುಗಳಿದುಕೊಂ
ಡುರುಮೋದದಿಂ ಶಿರದೊಳಾಂತು ಕುಣಿವರ್ ಕೆಲರ್
ಪಿರಿದುಮುವನಿರ್ಕುಳಿಗೊಳುತ್ತೆ ತಮ್ಮಯ ತಲೆಯೊಳಿರಿಸಿ ನರ್ತಿಸುತಿರ್ಪರು
ನಿರುತಮುವನಿ[1]ರ್ಕು[1]ಳಿಗೊಳುತ್ತೆ ಕೆಲಕೆಲಬರಿಂ
ತಿರದವಟಿ ರಜಮುಸಂಗದೊಳೆಯ್ದೆ ತಾಳ್ದು ಭೂ
ಸುರ ವಾದ್ಯರವಮುನಪಚಿತಿಗಳ್ ತೋಜಃ ಬಾಜಿಸುತೆ ಕುಣಿದಾಡುವರ್ ಸಂತತಂ ೨೩

ಬಸವದಂಡೇಶ್ವರನ ಗೀತಂಗಳಂ ಕೆಲಬ
ರುಸುರುತ್ತೆ ನಟಿಸುವರ್ ಕೆಲಬರ್ ಪುರಾತನರ
ಪೊಸತಪ್ಪ ಗೀತಮುಂ ಪಾಡುತಾಡುತ್ತಿರ್ಪರಲ್ಲಿ ವಾದ್ಯದ ಗಾನದ
ಎಸೆ[2]ವ ರವ[2]ಕನುಗುಣಂ ಬರ್ಪಂತೆ ರಯದೆ [3]ನ[3]
ರ್ತಿಸುವವರ್ ಕೆಲಬರುದ್ಘೋಷದಿಂ ಹೋ ಎಂದು
ಮಿಸುಪಭಕ್ತರ್ ಕೆಲರುಘೇ ಚಾಂಗು ಭಲರೆಂದು ಜಯಯೆಂಬವರ್ ಕೆಲಬರು ೨೪

ಇಂತು ಪರಮೋತ್ಸವದೊಳಾಳುತ್ತೆ ಸದ್ಭ[4]ಕ್ತ[4]
ಸಂತತಿ ಮನೋಮುದಂಬೆರಸಿ ಸಿತಭೂತಿಯಿಂ
ಸಂತತಂಪಳೆಯುತ್ತೆ [5]ನನಸು[5]ತ್ಸವಂ ಮಾಡಿ ಕೀರ್ತಿಸುತ್ತಿರೆ ಬಳಿಕ್ಕಂ
ಅಂತೆ[6]ಯ್ದೆ[6] ಬಂದು ತತ್ಪುರದೊಳಗೆ ರಾಜಿಸುವ
ನಂತ ಪಣ್ಯಾಂಗನಾಸಮಿತಿ [7]ಮುಂತಾದ ಜನ
ಸಂತತಿಯು[7] ಬಾಲವೃದ್ಧರ್ಕಳೆಲ್ಲರ್ ನಾಡೆ ತದ್ವನಿತೆಗೊಲ್ದು ನಮಿಸೆ ೨೫

1 ಳ್ಕು (ಕ) 2 ವಾರ (ಕ) 3 ವ (ಗ) 4 ಕ್ತಿ (ಕ) 5 ನಸುತೋ (ಗ) 6 ಯೇ (ಕ) 7 ಯುಂ ಸಹವಾಗಿ। ಮುಂತಾದ (ಕ)

ಅವರ ಪರಸುತ್ತೆ ಬೀಳ್ಕೊಟ್ಟು ತತ್ಸೂರಾಂಬೆ
ಭವರಹಿತೆ ಜಂಗಮಾರಾಧನಾನ್ವಿತೆ ಪುಣ್ಯ
ನಿವಹ ಸನ್ಮೃಗ್ಭೂಷೆ ಹೃತರೋಷೆ ಹರುಷಾಂಬುಧರನೇತ್ರೆ ಸಚ್ಚರಿತ್ರೆ
ತನೆ ಪುಳಕಿತಾಂಗೆ ಹರಗಣ ಸಮಾತತ್ಸಂಗೆ
ನವಭಸ್ಮವಿಲಸಿತಾಳಿಕೆ ಭಕ್ತಿತಿಲಕೆ ತನು
ಭವ ವಿಕೃತಿದೂರೆ ಗುಣವಿಸ್ತಾರೆ ಮುನ್ನಿನಂತೆಸೆದಿರ್ದಳಾ ಪುರದೊಳು - ೨೭

ಸದಮಲಪ್ರಚುರ ವಿಶ್ರುತಪರಮಭಕ್ತಗಣ
ಪದಸರೋರುಹಸಾಂದ್ರ ಮಕರಂದಪಾನಸ
ಮ್ಮುದಿತ ಚಂಚಚ್ಚಂಚರೀಕನನವರತ ಪಂಚಾಕ್ಷರೀಪ್ರಸಿತಹೃದಯಂ
ವಿದಿತ ಮಂಜುಳನೀಲಕಂಠಾಹ್ವಯಂ ಮನೋ
ಮುದದೆ ಪೇಳ್ದುರುತರಾರಾಧ್ಯಚಾರಿತ್ರದೊಳ
ಗಿದು ಸೂರಮಾಂಬೆ ನಿಜಗೃಹದೊಳ್ ಸ್ವಯಂಭುವಂ ಲಿಂಗವಂ ಪಡೆದ ಕಥನಂ ೨೭

# ಹನ್ನೊಂದನೆಯ ಸಂಧಿ

## ಲಿಂಗಾರ್ಚನಾವಿಧಿ

ಸೂಚನೆ: ಸಾತಿಶಯ ಭಕ್ತಪದಕಲಿತ ಪಾಂಸುಪ್ರತತಿ
ಪೂತ ಸುರುಚಿರಭಾಳ ಸೂರಸಚಿವೇಂದ್ರ ವಿ
ಖ್ಯಾತಪಂಡಿತವಿಭುವ ಲಿಂಗಾರ್ಚನಾವಿಧಿಯನೊರೆದಪೆಂ ಕೇಳ್ಕೆಜಂ

ವಾಶ್ವರ ಪತಾಕಾವಲೇಪ ವನದಾವನಿಭ
ಸಾಶ್ಚರ್ಯ ಸೌಂದರ್ಯ ಭಾಸುರಾರ್ಯಾಧಿಪತಿ
ದುಶ್ಚವನ ಮುಖ್ಯಲೇಖಾನೀಕ ಮಕುಟಾರುಣಾಶ್ಮೋಸ್ರಕಲಿತ ಚರಣಾ
ನಿಶ್ಚಲನತಾಘತಿವಿರಚ್ಛೇದನಾರ್ಕಸವು
ದುಶ್ಚರಿತ್ರಾನೇಕಪಾ ಸುರಮನೋಹರ ವ
ಪುಶ್ಚರ್ಮವಸನಧರ ರಕ್ಷಿಪುದು ಲೋಕವನಜಸ್ರಮುಂ ನೀಲಕಂಠ ೧

ಇತ್ತಲಿಂತೊಪ್ಪುತಿರೆ ಸೂರಸಾನಾಂಬೆ ಮ
ತ್ತತ್ತ ಭಕ್ತ್ಯೈಕ ಚೈತನ್ಯನುರುಮಾನ್ಯನ
ತ್ಯುತ್ತಮವದಾನ್ಯನಪಗತಮನ್ಯುವಿನನಮಿತ ಪರ್ಜನ್ಯನಧರೀಕೃತ
ಚಿತ್ತಭವಸೈನ್ಯ ವಿಸೃಷ್ಟ ಮಾತೃಸ್ತನ್ಯ
ನಾತ್ತ ಪಾದೋದಕೋದನ್ಯನುರುತರಮಾದ
ಚಿತ್ತದೊಳ್ ಲೋಭಗುಣಶೂನ್ಯನಪಹೃತ ಜಘನ್ಯನ [1]ವಿನ[1]ತ ಕಾಠಿಣ್ಯನ ೨

ಪಂಡಿತ ಸಮೂಹಪೂಜ್ಯನ ವಾದಿತಿಮಿರಮಾ
ರ್ತಾಂಡಸದೃಶನ ದಂಡಿತೇಂದ್ರಿಯನ ಬಂಧುರಾ
ಖಂಡ ಸದ್ಗುಣನಿಕರಯುಕ್ತ ಸಜ್ಜನಸರಿತ್ಪತಿಪೂರ್ಣ ತಾರೇಶನ
ಮಂಡಿತಾಕಾರ [2]ಸಂಧ್ಯಕ್ಷೂಣ[2]ಮಾನಸನ
ಪಂಡಿತಾರಾಧ್ಯ ಸದ್ಗುರುವರನ ಸದ್ಭಕ್ತಿ
ಷಂಡವಾರಾಸಿಯಸದೃಶಮಾಗಿ ದಿಗ್ನಭೋಮಂಡಲಂಗಳ ತೀವಲು ೩

---

[1] ನವಿ (ಗ) [2] ಸಮ್ಯಕ್ಪೂರ್ಣ (ಗ)

ಅವಿರತಾಂತರ್ನಿಹಿತ ಸಾಂಬೆಮುಘಗಿರಿ ಶಂಬೆ
ನವಗುಣಕದಂಬೆ ಸೂರಾಂಬೆ ವಿಶ್ರುತಮಾದ
ಸವಿನಯಾಂಭೋರಾಸಿ ಬೆಲ್ದೇವಿ ವೇಮನಾರಾಧ್ಯರ್ಕಳಾದಿಯಾದ
ಪ್ರವಿಮಲ ಸಮಸ್ತಜಂಗಮಪುಂಗವರ್ಬೆರಸಿ
ತವಕದಿಂದಲ್ಲಿನಡುತೆಯ್ತರುತಿರಲ್ಕಿತ್ತ
ಭುವನಪ್ರಸಿದ್ಧನತಿಮಾಹೇಶ್ವರಾಚಾರ ಪಟ್ಟಬದ್ಧಂ ವಿಬದ್ಧಂ ೪

ಶಿವಭಕ್ತಿಸಿದ್ಧನುನ್ನತ ಚಿತ್ಸಮುದ್ರನುರು
ಭವಗುಣಾನಬ್ಧನಪಗತಕೃದ್ಧನತಿಶುದ್ಧ
ನವಿಕಲಂ ಹತಜೈನ ಬೌದ್ಧನುಜಿತ ಶ್ರದ್ಧಾನಿಬದ್ಧಸಂಶುದ್ಧಹೃದಯಂ
ಸವಿಶುದ್ಧ ಬುದ್ಧಿಮಂತಂ ಖುತಸ[1]ಮೃ[1]ದ್ಧನಾ
ಶಿವಪದಧ್ಯಾನತತ್ಪರ ಪಂಡಿತಾರಾಧ್ಯ
ನವಿರತಾಧ್ಯಾತ್ಮವಿದ್ಯೇತರಾಗನುಸೂಕ್ತ ವಿಧ್ಯುಕ್ತಕರ್ಮನಿರತಂ ೫

ಪಿರಿದು ಮಧ್ಯಾಹ್ನಸಮಯೋದ್ದಿಷ್ಟಪೂಜೆಯಂ
ಹ[2]ರಿಸ[2]ದೆ ಶಿವಂಗೆ ರಚಿಸಲ್ ಮನಂದಂದು ಭಾ
ಸುರದಿನಾಜ್ಞೇಯಮೆಂದಾಚರೇದೆಂದು ತಸ್ಮಾದ್ಧಾರಣಂ ಎನುತ್ತೆ
ಭರದಿ ಮೃತ್ಯುಜ್ಯ ಎನುತುಂ ವೇದಮುಸುರುತಿರೆ
ವರಪುಣ್ಯತೀರ್ಥನಿಚಯಸ್ನಾನಮೆಯ್ದೆ ನೋ
ಡಿರದೆ ಭಸ್ಮಸ್ನಾನಫಲಸದೃಶಮಾಗದೆಂದಣಿಯರಂ ಭಾವಿಸುತ್ತೆ ೬

ಸಲೆ ವಿಭೂತಿಸ್ನಾನರಹಿತಮಾದಾ ಪುಣ್ಯ
ಜಲತತಿ ಸ್ನಾನಮೆಲ್ಲಂ ಭಾವಿಸಲ್ಕೆ ನಿ
ರ್ಮಳ ಗಜಸ್ನಾನದಂತೆವೊಲೆಯ್ದೆ ನಿಷ್ಫಲಂ ಜಗದೊಳಗೆ ಮುಳುಗಿರ್ದೊಡಂ
ಕಲುಮಸಂ ಕಿಡದು ಮಿಾನ್ ಕಪ್ಪೆ ಜಿಗುಳೆಗಳೊಲ್ದು
ಜಲದೊಳಗೆ ಪಗಲಿರುಳ್ ಸ್ಥೈತಿರ್ದೊಡಂ ಮತ್ತೆ
ಜಲಕನೇಂ ಶುಚಿಗಳಕ್ಕುಮೆ ಶಸ್ತ್ರ[3]ದೊಳ್[3] ಕೊಯ್ಯದ ತನುದೊಳೆಯೆ ಶುಚಿಯಕ್ಕುಮೆ ೭

ಪಿರಿದುಮಾ ಕೈಪೆಸೊಱಗಾಯ ಪೊಱದಂ ನಾಡೆ
ಭರದಿನಱುದಿಂಗಳೊರಸುತ್ತೆ ಕರ್ಚಲ್ಕದೇಂ
ನಿರುತದಿಂ ಮಧುರಂ ದಲಕ್ಕುಮೆ ಅದೆಂತಿರ್ಕೆ ಪೊಱಗಣ ಜಲಸ್ನಾನವು

---

[1] ಮು (ಕ) [2] ರುಷ (ಗ) [3] ದಿಂ (ಕ)

ವರಪುರಾತನ ಮತದಿನೀ ವಿಭೂತಿಯೆ ದಿಟಂ
ತುರಿತದಿಂ ಪೂಜಿಗೊಳಗುಗಳ ಶುದ್ಧನುಂ ಮಾಡು
ವಿರವುಳ್ಳದೆಂದು ಗುರುಮಲ್ಲಿಕಾರ್ಜುನಪಂಡಿತಾರಾಧ್ಯರೊಸೆದು ಬಳಿಕಂ ೮

ಭರದೆ ಭಸಿತಸ್ನಾನಮಂ ರಚಿಸಿ ಭಕ್ತಿಯಿಂ
ಪರಮತ್ರಿಪುಂಡ್ರಂಗಳಂ ಶಿರಶ್ಶಿಖಿಗಳೊಳ
ಗುರು ಬಾಹು ಕರ್ಣ ಕಂಠಂಗಳೊಳ್ ವಕ್ಷದೊಳ್ ಧರಿಸಿ ತತ್ತ್ವನುನಯದೊಳು
ವರ ಶಿವಪುರಾಣಂಗಳುಸುರ್ದಂತೆ ಧರಿಸಿದಂ
ಹ[1]ರಿಸ[1]ದಿಂ ರುದ್ರಾಕ್ಷಿಗಳ ಬಳಿಕಮಳ್ಕಱಿಂ
ದುರು ಪುರಾತನ ಗೀತ ಗದ್ಯ ಪದ್ಯಂಗಳಂ ಬಾಯಾಱಿ ಪಾಡುತೊಸೆದು ೯

ವೇದಿಕಾಸ್ಥಾನಮಂ ನೋಡಿ ಜಂತುಗಳಿರ್ದೊ
ಡಾದರದಿ ನೋಯದಂತವನೆಯ್ದೆ ನೂಂಕುತ್ತೆ
ಸಾದರದೆ ವೇದನಿಚಯಂ ಸರ್ವಕಾರ್ಯೇಷು ವಸ್ತ್ರ ಪೂತೋದಕಮೆನೆ
ಮೇದಿನಿಯೊಳಿದು ಸಿದ್ಧಮೆಂದು ಬಗೆಯುತ್ತೆ ಸ
ಮ್ಮೋದದಿಂ ಸಮ್ಮಾರ್ಜನಂಗೆಯ್ದು ವಸ್ತ್ರಪೂ
ತೋದಕದೆ ಬಳಿಕ ನಾನಾಬಂಧದಿಂ ರಂಗವಲ್ಲಿಯನೊಱಲ್ದು ರಚಿಸಿ ೧೦

ಹ[1]ರಿಸ[1]ದಿಂ ಸಕಲೋಪಕರಣಂಗಳಂ ಮುಂದೆ
ಪರುಠವಿಸಿ ದೇದೀಪ್ಯಮಾನ ದೀಪಂಗಳಂ
ವಿರಚಿಸಿಯನಂತಫಲಮಧಿಕಮಿ[2]ವು[2] ಪೊನ್ನಾರತಿಯಿನೆಂದು ಪಿ[3]ಟ್ಟ[3]ದಿಂದಂ
ಸರಳ ನೀರಾಜನಂಗೆಯ್ದು ಪಾತ್ರೆಯೊಳಿರಿಸಿ
ಪಿರಿದು ಹಸ್ತೋದಕ್ಕೆಂದು ಮುಂಗಡೆಯೊಳೊಸೆ
ದಿರಿಸಿ [4]ಸೀ[4]ತೋಷ್ಣೋದಕಂಗಳಂ ಶೋಧಿಸಿಯನಂತ ಸಂತೋಷದಿಂದಂ ೧೧

[5]ಪಳಪತ್ರ ಪುಷ್ಪಾಕ್ಷ[5]ತಾದಿಗಳ ಧೂಪಾದಿ
ಗಳ [6]ಗಂಧ[6] ಕಸ್ತೂರಿ ಮೊದಲಾದ ವರಸುರಭಿ
ವಿಳಿತ ಕರ್ಪೂರವೀಟಕೆಯ ಮತ್ತರ್ಪಣೀಯ ದ್ರವ್ಯಜಾತಂಗಳ
ಲಳಿತ ಪಾತ್ರಂಗಳಂ ವಾಮಭಾಗದೊಳಿರಿಸಿ
ವಿಳಸಿತ ತ್ರಿವಿಧವಾರಿಗಳನಿಂಬಿಡುವುದ
ಕ್ಕೆಳಸುತ್ತೆ ಪತದ್ಗ್ರಹಂಗಳನನುವಿನಿಂದಿರಿಸಿ ಪಿರಿದು ಸಂತೋಷದಿಂದಂ ೧೨

1 ರುಷ (ಗ) 2 ದು (ಗ) 3 ಷ್ಟ (ಗ) 4 ಖ (ಕ) 5 ವರಪತ್ರಪುಷ್ಪ (ಗ)
6 ಕರಗಂಧ (ಗ)

ಗುರು ಮುನ್ನೆ ಹಸ್ತಮಸ್ತಕಯೋಗದಿಂದೆ ಭಾ
ಸುರತರಾತ್ಮವಿಶುದ್ಧಿಯಂ ತನುವಿಶುದ್ಧಿಯಂ
ಭರದಿಂದೆ ಮಾಡಿದನದಂ ಬಿಟ್ಟು ಬಳಿಕಿನ್ನೆ ತನುಶುದ್ಧಿಯಂ ಮಾಳ್ಪುದು
ಕರಮನುಚಿತಂ ಭ್ರಾಂತಿಯಿಂ ತನುವಿಶುದ್ಧಿಯಂ
ಮರಳಿ ಮಾಳ್ಪೊಡವಂಗೆ ಗುರುವೆಲ್ಲಿದಂ ಇನ್ನೆ
ವರೆಗವಿಾಶ್ವರನ ಶುದ್ಧಶರೀರದೊಳ್ ನಾಡೆಯೆಂತು ಮನನೊಸೆದಿರ್ದನು ೧೩

ಶಿವನಿರ್ದ ತಾಣವೇ ಅವಿಮುಕ್ತಿಭೂಮಿ ನೋ
ಡವಿರತಮದೇ ಪೂಜ್ಯಮಾದ ತಾಣಂ ಸದಾ
ಶಿವಸನ್ನಿಹಿತದಿನೆಲ್ಲಾ ಪದಾರ್ಥಂಗಳುಂ ಶುದ್ಧಮುಕ್ಕುಂ ಭಾವಿಸೆ
ತವೆ [1]ಅಂತದಲ್ಲದಿರ್ದೊಡೆ ನರನೊಳಗೆ ರಾಜಿ
ಸುವ ಪಂಚವಿಧದಿಂದ್ರಿಯಂಗಳೆಲ್ಲಂ ನೋಡ
ಲವು ಕರಂ ಶುದ್ಧಂಗಳೆಂತಕ್ಕುಮನವರತಮಶುಚಿಗಳೆ ಆಗವೇಳ್ಕುಂ ೧೪

ಮನಮುಂ ವಿಶುದ್ಧಿಮಾಳ್ಪುದು ಭಕ್ತತತಿಗಾಗ
ದನಿಸಿದ್ಧ ಶುದ್ಧಪ್ರಸಿದ್ಧ ಪ್ರಬುದ್ಧ ಸ
ನ್ಮುನಿವಂದ್ಯ ವೇದಾಂತಸಂಸಿದ್ಧಲಿಂಗಮುಂ ಶುದ್ಧಮುಂ ಮಾಳ್ಪೆನೆಂದು
ಮನದೊಳಗೆ ನೆನೆವನಾವವನವನೆ ಮಿಗೆ ಜಡಂ
ಕನದಮಲ ಬುದ್ಧಿಹೀನಂ ನಾಡೆ ಭವಬದ್ಧ
ನೆನಿಸುವಂ ನೋಡದಜಂನೀ ಲಿಂಗಶುದ್ಧಿಗೆಯ್ವುದು ಭಕ್ತಕುಲಕಾಗದು ೧೫

ಅತುಳಿತಾ ಘೋರಪಂಚಾಕ್ಷರೀ ಮನುಪಾಶು
ಪತ ಪುರೋಗಮುಮಖಿಲ ಶೈವಮತಮಂತ್ರಸಂ
ತತಿ ನೀಲಕಂಠನಾಮಾಕ್ಷರಾತ್ಮಕಮುಕ್ಕುಮದನೆಯ್ದೆ ಶುದ್ಧಿಮಾಳ್ಪ
ನುತಮಂತ್ರಮಾವುದೆಲ್ಲಾ ಮಂತ್ರಶುದಿಯಂ
ಸತತಮಿಾ ಪಂಚಾಕ್ಷರೀಮಂತ್ರದಿಂ ಮಾಳ್ಪು
ದತಿಶಯಮೆನಲ್ಕದಜಂನೀ ಮಂತ್ರಶುದ್ಧಿಯಂ ಮಾಳ್ಪುದನುಚಿತಮೆನುತ್ತೆ ೧೬

ಇಂತು ನಿಶ್ಚೈಸಿ ಮನದೊಳ್ ಪಂಡಿತೇಶ್ವರಂ
ಸಂತತಂ ಪಂಚಶುದ್ಧಿಗಳನಿಳಿಕೆಯ್ದು ಮ
ತ್ತಂತೆ ಲಿಂಗೋದಕ ಪ್ರೋಕ್ಷಣ ಪ್ರಕ್ಷಾಳನೆ ಸ್ಪರುಶನೇಕ್ಷಣೆಗಳಿಂ

[1] ಅದಂತ (ಗ)

ಮುಂತೆ ತೋರ್ಪಖಿಲಪಸ್ತ್ವನೀಕಶುದ್ಧಿಯಂ
ಸಂತಸದೆ ಮಾಡಿ ಮತ್ತವನೆಯ್ದೆ ಬೇಗದಿಂ
ದಂ ತಗುಳ್ದು ಲಿಂಗಸಂಸ್ಕಾರಮುಮನಳ್ಕಱಿಂ ಮನದೊಸಗೆವೆರಸುಮಾಡಿ ೧೭

ನಿರುತಮಾ ಸ್ವಾರ್ಥಂ ಲಯಾಂಗ ಯೋಗಾಂಗಮೆಂ
ಬುರುಪೂಜೆಗಳನೊಡರ್ಚುವ ವೇಳೆಯೊಳಗಿರ್ದ
ಪರಮಭಕ್ತರ್ ಪಂಡಿತಾರಾಧ್ಯರಂ ನೋಡಿ ಸಂತುಷ್ಟಚಿತ್ತರಾಗಿ
ಪಿರಿದು ಲಿಂಗಾರ್ಚನಾವಿಧಿಗಂಡು ಸಂತತಂ
ಚಿರವಿಧಿನಿಷೇಧಂಗಳಿಂ ನೇತಿಗಳೆದ ಭಾ
ಸುರ ಭಕ್ತಿಪರರಾದ ನಿಜಶಿವಾಚಾರ ಸನ್ಮಾರ್ಗ ಪ್ರಯುಕ್ತರಾದ ೧೮

ವಿನುಪ ಸಕಲೇಂದ್ರಿಯಾಂತಃಕರಣವಿತತಿ ತೊ
ಟ್ಟನೆ ಸತ್ಪ್ರಸಾದಿಗಳೆ ಆದ ಶರಣರ್ಗೇಕೆ
ವಿನುತ ಸಕಲೀಕರಣದಾಯಾಸ ಮಾಸನಾದಿಗಳ ಸಾಯಸವದೇನು
ಘನಲಿಂಗಸಿಂಹಾಸನಾತ್ಮರ್ಗೆ ಸಂತತಂ
ವಿನಯದಿಂದಂ ಕರನ್ಯಾಸಾದಿಯೇತರ್ಕೆ
ಕನದಮಲ ಶಿವಭಕ್ತಿವಿನ್ಯಾಸಚಿತ್ತರ್ಗೆ ಭಕ್ತರ್ಗೆ ಪರಿಭಾವಿಸೆ ೧೯

ದಿಗಧೀಶವಂದ್ಯ ಭಕ್ತರ್ಗೆ ದಿಗ್ಬಂಧನದಿ
ನೊಗೆವ ಕರ್ಮವದೇನೊ ಅತಿದೋಷ ಶೋಷಣದ
ನೆಗಳ್ದ ಸದ್ಭಕ್ತಿಪೋಷಣಸಾರಿಗಳ್ಗೇಕೆ ಶೋಷಣಾದಿಕ್ರಿಯೆಗಳು
ಬಗೆಯೆ ಸದ್ಗುರುದಯಾಗತ ಚಿದಗ್ನಿಯನೊಸೆದು
ಮಿಗೆ ಸುಟ್ಟದೇಹಮುಳ್ಳರ್ಗೇಕೆ ಮತ್ತೆ ತೊ
ಟ್ಟಗೆ ದಹನಕರ್ಮವೆಂದತಿಮೋದದಿಂದೆ ನುಡಿಯುತ್ತೆ ಬಳಿಕಿಂತೆಂದರು ೨೦

ಅಲಘು ಪ್ರಸಾದಾಮೃತ[1]ಪ್ಲಾ[1]ವನರ್ಗೆ ಮ
ತ್ತೊಲವಿನಿಂ ಪ್ಲಾವನಕ್ರಿಯೆಗೆಯ್ಯಲೇಕೆ ನಿ
ರ್ಮಲ ಗುರುಪ್ರತಿಬಿಂಬಮುಪ್ಪ ನಿತ್ಯಸ್ವತಂತ್ರಂ ದಲೆನಿಸುವ ಲಿಂಗಮಂ
ನಲಿದಂಗದೊಳ್ ಧರಿಸಿಕೊಂಡಿರ್ದ ಮತಿಗೆಟ್ಟು
ಮಲಯುಕ್ತರೀಶ್ವರದ್ರೋಹಿಗಳ್ ಬೇಱೊಂದ
ನೊಲವಿನಿಂದಾ[2]ವಾಹನಂ[2]ಗೆಯ್ವರದು ಲಿಂಗಸಂಗಿಗಳ್ಗದು ದೂರವು ೨೧

---

[1] ಷ್ಟಾ (ಕ) [2] ಹ್ವಾನಮಂ (ಕ)

ಗುರುಕೃಪೆಯಿನಂಗದೊಳ್ ವಸಿಸಿರ್ದ ಲಿಂಗಮಂ
ಭರದಿಂ ವಿಸರ್ಜನಂಗೆಯ್ವ ಪಾತಕಿಗಳಂ
ಸುರುಚಿರ ಪ್ರಾಣಲಿಂಗಿಗಳವರಸೆಂತು ಕೈವಿಡಿವರತಿಸಂತೋಷದೆ
ಧರಣಿಯೊಳ್ ಬಂಟನಾಗಿರ್ದವಂ ತನ್ನೆಡೆಗೆ
ನರಪನಂ ಬರಿಸಿಕೊಂಡುಂತೆ ಪೋಗೆಂಬೊಡವ
ನರಸೊ ಬಂಟನೊ ನೋಡಿದಾಶ್ಚರ್ಯವಿಂತುಟಾ ವಾಹನಾದಿಗಳ ಶೆಲಿನು ೨೨

ಗುರು ವಸಿಸಿದಾ ಲಿಂಗಮೂರ್ತಿಯಂ ಮನದಂದು
ಪಿರಿದುಂ ವಿಸರ್ಜನಂಗೆಯ್ವ ಮಾನವನವಂ
ಹರನೊ ಪೆಱತೊರ್ವನೋ ಆವಙಿಯೆವದಱನಾವಾಹನ ವಿಸರ್ಜನಮಿವು
ನಿರುತಮೆಂದುಂ ಭಕ್ತತತಿಗಾಗದೆಂದು ಭಾ
ಸುರ ಪಂಡಿತಾರಾಧ್ಯರವನುಳಿದು ನಾಡೆ ಬಂ
ಧುರ ವೀರಶೈವೋಕ್ತ ಪೂಜೆಯನೊಡರ್ಚಿದರ್ ನೋಡಿಮೆಸುತೊಲ್ದು ಮತ್ತಂ ೨೩

ಪರಮೇಶ್ವರಂಗಪ್ರಧಾನಮಭ್ಯಂತರದೊ
ಳಿರದೆಸಗುವರ್ಚನಂ ಬಳಿಕ ಪ್ರಧಾನಮಾ
ವರ ಬಾಹ್ಯಮರ್ಚನಂ ಎನುತ ಪ್ರಧಾನಮಾದಂತರಂಗದ ಪೂಜೆಯಂ
ಪಿರಿದುಮಂಗೀಕರಿಸದಭ್ಯಾಸಯೋಗದುರು
ಸರಣಿ [1]ಸೋ[1]ಹಂಭಾವಮಾಗಿ ಸಲೆ ತೋಱುಗುಂ
ನಿರುಪಮದ್ರೋಹಂಗಳಕ್ಕುಮೆಂದವನುಳಿದು ಮುದ್ರಾದಿಗಳ[2]ನು ಬಿಸುಟು[2] ೨೪

ತವಕದಿಂ ವಾಯುವಂ ರೇಚಿಸುತೆ ಪೂರಿಸುತೆ
ತವೆ ಮೂಡದೆಸೆಯನೀಕ್ಷಿಸುತೆ ಮೈಮುರಿವುತ್ತೆ
ಸವಿನಯದೆ ಕಣ್ಮುಚ್ಚಿ ಜಪಮಣಿಗಳಂ ಪಿಡಿದು ಬಾಯ್ಮಿಡುಕುತತಿಶಯದೊಳು
ಅವಿರತಂ ಭುಂಜಿಸುತೆ ಬಳಿಕೆ ನೃಡನಂ ನೆನೆದು
ವಿವಿಧ ನುತಿಗಳ ಪಸರಿಪಲಸುಗಾಱರ ರಾಜಿ
ಸುವ ಮಾನಸಾರ್ಚನೆಗಳಂ ಪೀಠಪೂಜೆಗಳನಾ ಕರ್ಮಯೋಗ[3]ಫಲ[3]ವಂ . ೨೫

ಸಲೆ ಅಧಃಕರಿಪ ಸದ್ಭಕ್ತಿಯೋಗಕ್ಕೆ ನಿ
ರ್ಮಲಶಿವಂ ತೃಪ್ತನಪ್ಪಂ ನೋಡದೆಂತೆನಲ್
ನಲಿದು [4]ಚೇ[4]ರಮನ ಸದ್ಭಕ್ತಿಯೋಗಕ್ಕೆ ಸತ್ಪ್ರಕಟಮಾದಂತೆ ಮತ್ತೆ

---

[1] ಸಾ (ಕ) [2] ಬಿಸುಟ್ಟು (ಗ) [3] ಚಯ (ಗ) [4] ಚಾ (ಗ)

ಆಲಘು ಸಕಲೀಕರಣದವರ್ಗೆ ಶಿವನೊಸೆದು ಸ
ಲ್ಲಲಿತ ಮೂರ್ತಿಯ ತೋಱುಪೆಡೆಯುಂಟೆ ಭಾವಿಸ
ಲ್ಕೊಲವುಮಿಗೆ ಮಾನಕಂಜಾರನಂ ಮೆಱೆದಂತೆ ಮೆಱೆದನೇ [1]ಮಾ[1]ನಿಗಳನು ೨೬

ವರ ಕೇಶಿರಾಜನ ಶಿರೋವಾಸಿಯಾದಂತೆ
ಹರನ ದಾವಾಸನವಿದಿರ್ಕಳೊಡನೆಂದಿರ್ದ
ನುರುಭೋಗದೇವನೊಡನುರುಳ್ದಂತೆವೊಲ್ ನ್ಯಾಸದವರೊಡನದೆಂದೆಯ್ದಿದಂ
ಭರದಿಂದಮೋಹಿಲಂಗೀಶ್ವರಂ ಮನಮೊಸೆದು
ವರದನಾದಂತೆ ಮುದ್ರಾವಾಹನರ್ಗೆ ಶಂ
ಕರನಣಿಯರುಂ ವರದನಾದ ತಾಣಂಗಳೊಳವೇ ಧರಣಿಯೊಳಗೆ ನೋಡೆ ೨೭

ನಲಿದು ಬಲ್ಲಹನ ಮೆಲ್ನುಡಿಗೆ ನನೆದಂತೆ ಶಿವ
ನೊಲವಿನಿಂ ಶೋಷಣಪ್ಲಾವನಂಗಳನೆಯ್ದಿ
ನೆಲೆಯಾಗಿ ನನೆದುದಿಲ್ಲಾವಗಂ ಚಲ್ಲುವರ್ಘ್ಯಂಗಳಂ ಪರಿಭಾವಿಸೆ
ಲಲಿತ ಚೌಡಯ್ಯನೊಲ್ದಿತ್ತ ತುತ್ತುಗಳ ನಿ
ರ್ಮಲಶಿವನಂ ಭುಂಜಿಸಿದವೊಲ್ ಭುಂಜಿಸಿದನೆ ಸ
ಲ್ಲಲಿತೋಪವಾಸವಿಧಿಯುಳ್ಳ ನರರಿತ್ತ ತುತ್ತುಗಳನೀ ಭೂಮಿಯೊಳಗೆ ೨೮

ವನದೊಳಗೆ ದಿಂಗುಳದ ಪತ್ರಿಯಂ ನಾಡೆ ಆ
ರ್ಚನೆಗಳಂ ಮಾಡಿ ಪೆಟ್ಟಿಗೆಯೊಳಗೆ ಬಂಧಿಸುವ
ಮನುಜರೊಳಗಿರ್ಪನೇ ಶಿವನಮಲಸದ್ಭಕ್ತರೆಡೆಯೊಳೊಸೆದಿರ್ಪ ತೆಱದಿಂ
ಮಿನುಗುವತಿಕರ್ಮಭಾಗದ ಪೂರ್ವಪಕ್ಷಕ್ಕೆ
ಘನ[2]ಮಿತರ[2] ಮತ್ತ ಸುಜ್ಞಾನಭಾಗಮೆನಿಪ್ಪ
ವಿನುತ ವೇದಾರ್ಥಸಂಪಾದಿತಮೆನಿಪ್ಪ ಶೈವಾಗಮಾನ್ವಿತಮೆನಿಪ್ಪ ೨೯

ವರಭಕ್ತಿ ಸದ್ಭಾವನಾಯತಮೆನಿಪ್ಪ ಭಾ
ಸುರ ವೀರಮಾಹೇಶ್ವರಾಚಾರಮಪ್ಪ ಸುರು
ಚಿರ ಕೇವಲಾತಿಶಯ ಭಕ್ತಿಮಾರ್ಗಮನ್ನೈದೆ ಸಂಪ್ರತಿಷ್ಠಿಸಿ ಬಳಿಕ್ಕಂ
ಪಿರಿದು ನಾನಾ ಮಾರ್ಗದೊಳ್ ವರ್ತಿಸುತ್ತಿರ್ಪ
ನುರುತರ ಶ್ರೀಪಂಡಿತಾರಾಧ್ಯವಿಭುವೆಂದು
ಹ[3]ರಿಸ[3]ದಿಂ ಲಿಂಗಾರ್ಚನಾ ಕಾಲದೊಳಗಿರ್ದ ಭಕ್ತರುಱೆ ಪೊಗಳ್ದರೊಸೆದು ೩೦

1 ಮಾ (ಕ) 2 ತಿಮಿರ (ಕ) 3 ರುಷ (ಗ)

ಬಳಿಕಮಾ ಪಂಡಿತಾರಾಧ್ಯವಿಭು ಮನವೊಲ್ದು
ಲಲಿತಾಷ್ಟವಿಧದ ಪೂಜನೆಗಿತರಮಾದ ನಿ
ರ್ಮಲತರಾಷ್ಟಾಂಗ ಭಕ್ತಿಕ್ರಿಯೆಗಳೆಲ್ಲವುಂ ಸಾಂಗಮಾಗಲ್ ಶೋಭೆಯಿಂ
ವಿಳಸದಮಳ[1]ನ[1] ಷೋಡಶೋಪಚಾರಂಗಳೊ
ಬ್ಬುಳಿಯಿಂದೆ ನೃಪಪದುಪಚಾರನದು ಮಿಗಿಲೆಂದು
ಘಳಿಲನನುಕರಿಸಿ ಲಿಂಗೈಕನಿಷ್ಠಾ ಪರಂ ಸದ್ಭಕ್ತಿವರ್ಧನಕರಂ ೩೧

ಲಸಿತ ಲಿಂಗಾರ್ಚನೆಯ ಮಾಡಲಭಿಮುಖನಾಗಿ
ಮಿಸುಪ ಹೃದಯಾಂಭೋಜ ಕರ್ಣಿಕಾಂತರದಲ್ಲಿ
ವಸಿಸಿರ್ದ ಸತ್ಪ್ರಾಣಲಿಂಗಮಂ ಸೆಜ್ಜೆಯಿಂದುಪ್ಪರಿಸಿ ಥಳಥಳಿಸುತಿ
ಎಸೆವ ತಲ್ಲಿಂಗದುಜ್ವಲಮೂರ್ತಿ ಕಣ್ಮನಮ
ನೊಸೆದೆಯ್ದೆ ಮಾಧುರ್ಯದಿಂ ದಿವ್ಯತೇಜದಿಂ
ದಸಮಸಂಪತ್ತಿ[2]ನಿಂ[2] ರಮ್ಯಲಕ್ಷಣದಿಂದೆ ಸೆಂಪಿನಿಂ ಗುಂಪಿನಿಂದಂ ೩೨

ಖ್ಯಾತಿಯಿಂ ಕೋಮಲತ್ವದೆ ಸದ್ಗುಣಂಗಳಿಂ
ನೀತಿಯಿಂ ಮುಗ್ಧತ್ವದಿಂದ ವಿಶ್ರಾಮದಿಂ
ರೀತಿಯಿಂ ಸೌಂದರ್ಯದಿಂ ರೂಪುರೇಖೆಗಳಿಗತಿಶಯದ ಬಿಣ್ಪಿನಿಂದಂ
ಖಾತಿಯಿಂದಂ ಮಿಳಿತ ಕಾಂತಿಯಿಂದಂ ಮತ್ತೆ
ಭೂತಿಯಿಂ ಶಾಂತಿಯಿಂ ಸೊಂಪುದೋಱುತ್ತೆ ವಿ
ಖ್ಯಾತ ಗುರುಪಂಡಿತೇಶ್ವರನ ನಯನಂಗಳೊಳ್ ಪೊಳೆದುದನದೇವೊಗಳ್ವೆನು ೩೩

ಕರುಗಟ್ಟಿಯೆರೆದಂತೆ ನಯನದೊಳಗಜ್ಯೋತಿ
ದಿರವಿನಂತೆವೊಲೆಯ್ದೆ ಕಡೆದು ಕಂಡರಿಸಿದಂ
ತಿರಲದಱಿನಾ ಪಂಡಿತೇಶ್ವರನ ದೃಷ್ಟಿಗಳ್ ಮುಂಬರಿದು ಶಿವನನೆಯ್ದಿ
ಭರದಿಂದೆ ಸುತ್ತಿ ಮುತ್ತಿದುವು ನೆಱೆ ರಾಜಿಸುತೆ
ಕರುಳಕೇತಯ್ಯನೊಳ್ಗರುಳುಣ್ಮುತಿರೆ ಕಣ್ಣೊ
ಳಿರದೆ ಶಿವನಂ ನೋಳ್ಪ ತೆಱದಿಂದೆ ನೋಡುವಂ ಸಂತಸಗಡಲ್ ಪೊಣ್ಮಲು ೩೪

ಮಿನುಗುವನಿಮಿಷ ಕೇಶಿರಾಜನ ನಿಷೇಷ್ಪದಿಂ
ದನುನಯಂ ಲಿಂಗಮಂ ನೋಳ್ಪಂತೆ ನೋಡುವಂ
ವಿನಯದಿಂ ಗಜ್ಜೇಸು ಮಸಣಯ್ಯನಂಗಮಂ ಮಱೆದು ಲಿಂಗಂ ನೋಡುವ

---

[1] ಕ (ಕ) [2] ಯಿಂ (ಗ)

*ಅನುವಿನಿಂ ನೋಡುತುಂ ಪ್ರಭು ನಟ್ಟದಿಟ್ಟಿಯಿಂ
ಘನಲಿಂಗಮುಂ ನೋಳ್ಪ ಪಾಂಗಿನಿಂ ನೋಡುವಂ
ತನುಗುಣಂಗಳ್ಕಿಟ್ಟ ಭೃಂಗಿ ಶಿವನಂ ಸಾಂಗದಿಂ ನೋಳ್ಪವೊಲ್ ನೋಡುವಂ ೩೫

ಪಿಂಗದವಿನಾಭಾವದಿಂದೆ ನಂದೀಶನು
ತ್ತುಂಗ ಶಿವನಂ ನೋಳ್ಪವೊಲ್ ನೋಡುವಂ ಮತ್ತೆ
ಸಂಗಡಿಸಿ ನೋಡುವಂ ದಿಟ್ಟಿಯುಂ ಪಸರಿಸುವನಲ್ಲಿ ಸೈತಿಡುವನೊಸೆದು
ಮುಂಗಡೆಗೆ ಸಲಿಸುವಂ ಸಮಗೊಳಿಸುವಂ ಬಗೆಯೊ
ಳಂಗೈಸಿ ಸಂದಿಪಂ ಜೋಡಿಸುವನಂಟಿಸುವ
ಸಂಗಜಾರಿಯೊಳಿಂತು ದೃಷ್ಟಿಗಳ್ ಸಿಕ್ಕಿದುವದೆಂತೆನಲ್ ಪೇಳ್ವೆನದನು ೩೬

ಗುರು ಪೇಳ್ದ ಮೂಲಮಂತ್ರಂ ಶಿಷ್ಯಕರ್ಣದೊಳ್
ಪಿರಿದು ಸಿಲ್ಕಿದ ತೆಱದೆ ಸುರಕುಜಮನಮರಲತೆ
ಭರದೆ ಸುತ್ತಿದ ತೆಱದೆ ಸುತ್ತಿದುವು ವೇದಾದಿಗಳ್ ಶಿವನ ಪಾದಂಗಳ
ಧರಿಸಿದಂತೆವೊಲೊಲ್ದು ಧರಿಸಿದುವು ದಾನುಷ್ಕ
ನುರುಶರಂ ಗುಱಿಯನಂಟುವ ಮಾಳ್ಕೆಯಿಂದ ಪುರ
ಹರನನಂಟಿದುವು ಮಕ್ಕಳ್ ಪಿತನನಪ್ಪುವಂತಪ್ಪಿದುವು ಶಂಕರನನು ೩೭

ಮದಗಜಂ ಕಟ್ಟಿದುರುರಜ್ಜುವಂತೀಶ್ವರನ
ಪದಯುಗಂಗಳನೆಯ್ದೆ ಸುತ್ತಿದುವು ತುರಿತದಿಂ
ಮದನಕಲಹದೊಳೊಲ್ದು ಕೊಸಱು ಪೆಣಗುವ ಸತಿಯವೊಲ್ ಪೆಣಗಿದುವು ಶಿವನೊಳು
ಸದಮಲಾಂಬರವೆಯ್ದಿದೊಳ್ಗಂಪಿನಂತೆ ಮಿಗೆ
ಪುದಿದು ಯಿಶ್ವರನೊಳಬ್ಧಿಯ ಸಾರ್ದ ನದಿಯಂತೆ
ಪದೆದು ಬೆರೆದುವು ಶಿವನೊಳಗೆ ಪಾಲನೆಯ್ದಿದಂಬುವಿನಂತೆ ಕೂಡಿರ್ದವು ೩೮

ಮಿಗೆ ಕಾದ ಕಬ್ಬೊನ್ನನೆಯ್ದಿದುದಕದ ತೆಱದಿ
ನೆಗಳ್ದ ಶಿವನೊಳಗವಿದುಮವು ಚಲಿಸದತ್ತಿತ್ತ
ಸೊಗಯಿಸುವ ನೋಟಂಗಳಳವುಗುಂದದೆ ತವಕಮುಡುಗದೆ ವೊಲ್ಮೆ ಕೆಡದೆ
ನೆಗೆಯದಲ್ಲಿಂದ ತೊಲಗದೆ ಕೆಲಕ್ಕೆ ಸಾರದೆ
ಸೊಗಸಱತು ಕಡೆಗಣ್ಣ ನೋಟಕೆಳಸದೆ ತರಳ
ತೆಗೆ ಸಲ್ಲದುಱೆಸಿ ಸಿಡಿಮಿಡಿಗೊಳ್ಳದಾಲಸ್ಯಮುಣ್ಮದುನ್ನತೆ ಪೋಗದೆ ೩೯

* ಇಲ್ಲಿಂದ ಮುಂದಕ್ಕೆ (ಟ) ಪ್ರತಿಯನ್ನು ಬಳಸಿಕೊಳ್ಳಲಾಗಿದೆ.

9

ಪೆಡಮೆಟ್ಟದಡಿಗಡಿಗೆ ಮರಸಟ್ಟವೋಲಿರದೆ
ಕಡುಪಿನಿಂ ಕಣ್ಣೀರ್ ತುಳುಂಕದಲಸದೆ ಕಾಂತಿ
ಯೆಡೆಯುಡುಗದಾಲಿಗಳ್ ತಡಬಡಂಬೊಗದೆ ನುಳ್ಪಡುಗದುಳ್ಳಲರದೊಡನೆ
ಮಿಡುಕದೆನೆಗ[1]ಳ್ಗುಂಪು[1] ತಪ್ಪದಾಯತಿ ಕಿಡದೆ
ಪೊಡರದುಱೆ ಕಣ್ಣ ಱೆಪ್ಪೆಗಳೊಪ್ಪವಳಿಯದು
ಗ್ಗಡದ ಬಿಳ್ಪೊಳಸರಿಯದೊಯ್ಯಾರವಱೆಯದೆ ನಲವು ಮಿಗೆ ಪೈಸರಿಸದೆ ೪೦

ಸಂತತಂ ಪ್ರಾಣಲಿಂಗದೊಳಿಂತು ಕಾಸಿ ಜೆ
ಚ್ಚಂತಮರ್ದು ಪಂಡಿತಾರಾಧ್ಯ ದೃಷ್ಟಿಗಳೆಸೆಯು
ತಂತಿರದೆ ಮುಂತೆ ಶಿವನಂಗದೊಳ್ ಕೀಲಿಸಿದ ದೃಷ್ಟಿಗಳ್ ತಚ್ಛಿವಂಗೆ
ಸಂತಸದೆ ಮಜ್ಜನಾಂಬುಗಳಾದುವೆಯ್ದೆ ಬಳಿ
ಕಂ ತದಂಗದೊಳೆ ಲೇಪಿಸಿದ ಮಂಜುಲದೃಷ್ಟಿ
ಸಂತತಿಯೆ ನವಚಂದನಂಗಳಾದವು ನಿಹಿತದೃಷ್ಟಿಗಳ್ ಪೂವಾದವು ೪೧

ಕವಿದು[2] ದೃಷ್ಟಿಗಳೊಸೆದು ಧೂಪಧೂಮಂಗಳಾ
ದುವು ಪರ್ಬಿ ಪಸರಿಸಿದ ದೃಷ್ಟಿಗಳ್ ಸಂತತಂ
ಪ್ರವಿಲಸನ್ನೀರಾಜನಂಗಳಾದುವು ಬೆರೆದ ದೃಷ್ಟಿಗಳ್ ಶಂಭುವಿಂಗೆ
ತವಕದಿಂ ನೈವೇದ್ಯತತಿಗಳಾದುವು ರಾಜಿ
ಸುವ ವೀಳಯಂಗಳಾದುವು ಮಧುರದೃಷ್ಟಿಗಳ್
ವಿವಿಧ ಪುಷ್ಪಾಂಜಲಿಗಳಾದುವತಿಶೋಭಿಸುತೆ ಕೆದಱೆದೊಳ್ದಿಟ್ಟಗಡಣಂ ೪೨

ಇಂತು ನೋಟಂಗಳಿಂದೀಶಾರ್ಚನಂಗೆಯ್ದು
ಸಂತಸದೆ ಮಲ್ಲಿಕಾರ್ಜುನ ಪಂಡಿತೇಶ್ವರನ
ನಂತ ಹರ್ಷಂದಳೆದು ತತ್ಪ್ರಾಣಲಿಂಗಮಂ ಮುನ್ನೋಡಿ ಕಣ್ಗಳಿಂದಂ
ಸಂತತಂ ಮುಗುಳ್ದು ಮುಗಳ್ದಂಟುವಂ ಪ್ರೀತಿಯಿನ
ದೆಂತನಲ್ ಕರಿಣಿಯಂ ರತಿಲಂಪಟಂ ಗಜಂ
ಮುಂತೊಸೆದು ಮುಟ್ಟುವಂತಾ ನಂಬಿ ಪರವೆನಾಚಿಯ ಕುಚಂ ಸೋಂಕುವಂತೆ ೪೩

ಮರಳಿ ಬಾಹುಗಳಿಂದಮಾಲಿಂಗನಂಗೆಯ್ಯೆ
ಪರಲಿಂಗ ಸಂಸ್ಪರ್ಶನೋತ್ಸವದೊಳಂಗದೊಳ
ಗಿರದೆ ಬೆಮರಿಡೆ ಪುಳಕಮುಣ್ಮೆ ಕಂಪಂ ತೋಱೆ ಗದ್ಗದಂ ಪೊಱಪೊಣ್ಮಲು

---

1 ಳ್ಗುಪ್ಪು (ಗ)  2 ಡ (ಗ)

ಹರನ ಲೀಲಾಸುಪ್ರಸನ್ನವಾರ್ಧಿಯೊಳಿರ್ದು
ಹರಲೀಲೆಯೆಂಬ ನುತಿಯೊಳ್ ಶಿವನ ಕೀರ್ತಿಪಂ
ಪಿರಿದು ಮಹಿಮಸ್ತವದಿನೊಲ್ದು ಮಹಿಮಾಕರನ ಮಾಹಾತ್ಮ್ಯವಂ ವರ್ಣಿಪಂ ೪೪

ಮಲರಹಿತನಂ ನಾಡೆ ಮಲ್ಲಣಸ್ತೋತ್ರದಿಂ
ನಲಿದು ಪೊಗಳ್ದಂ ಮತ್ತನಾಮಯಸ್ತೋತ್ರದಿಂ
ಸುಲಲಿತ ನಿರಾಮಯನ ಕೊಂಡಾಡುವಂ ತ್ರಿಶೂಲಾಯುಧನನತಿಭಕ್ತಿಯಿಂ
ವಿಲಸಿತ ಹಲಾಯುಧಸ್ತವದಿಂದೆ ನುತಿಸುವಂ
ಲಲಿತ ಪಂಚಾಕ್ಷ ಪ್ರಪಂಚ ಪರಿವರ್ಜಿತನ
ನಲಘು ಪಂಚಾಕ್ಷರೀಪ್ರೀತನಂ ಪಂಚಗದ್ಯಂಗಳಿಂ ಸಲೆ ಪೊಗಳ್ವನು ೪೫

ಮಿಗೆ ರುದ್ರಮಹಿಮೆಯೆನಿಸುವ ಕೃತಿಯನೊಲ್ದು ತೊ
ಟ್ಟಗೆ ರುದ್ರನಂ ಕೀರ್ತಿಪಂ ನಾಡೆ ಸಂಸಾರ
ನಗಶಂಬಸನ್ನಿಭನ ಸಂಸಾರ ಮಾಯಾಸ್ತವದಿನೆಯ್ದೆ ಬಣ್ಣಿಸುವನು
ನೆಗಳ್ದ ಶಂಕರಗೀತದಿಂದೆ ಶಂಕರನ ನೆ
ಟ್ಟಗೆ ಪಾಡುವಂ ಮತ್ತಮಾನಂದಗೀತದಿಂ
ದಗಲದಾನಂದಮಯನಂ ಪಾಡುವಂ ಬಸವಗೀತಾಮೃತಂಗಳಿಂದಂ ೪೬

ವರ ಪುರಾತನ ನೂತನೇಶಭಕ್ತರ್ ಪೇಳ್ದ
ಪರಮಗೀತಂಗಳಂ ಪಾಡುತುಂ ಮನಸಂದು
ಪಿರಿದು ನಾಲಗೆಯ ಪಸವಳಿವಂತೆ ಗೀತಾಮೃತಂಗಳಿಂ ನುತಿಗೆಯ್ವುತೆ
ಇರುತಿರಲ್ಕದಱಿಂದೆ ಮುನ್ನೆ ಶಿವಸಾನ್ನಿಧ್ಯ
ದಿರವಿನಿಂದಗ್ನಿಯೊಳ್ ಜತು ಕರಗುವಂತೆ ಭಾ
ಸುರ ವಾರಿಯೊಳಗುಪ್ಪು ತವಿಪಂತೆವೊಲಬ್ಧಿಯೊಳ್ ಕರಕವೆಯ್ದುವಂತೆ ೪೭

ಮಿನುಪ ವಿಷಯಗುಣಂಗಳೊಡಗೂಡಿ ಶಿವನೊಳಗೆ
ತನು ಬೆರೆಯಲಾಗಳಾ ಪಂಡಿತೇಶನೊಳೊಗೆದ
ಘನತರಾನಂದಾಂಬು ಮಜ್ಜನೋದಕಮಾಗೆ ಮನದ ಕೊನೆ ವಸ್ತ್ರಮಾಗೆ
ಸನಯದಿಂ ಸತ್ಕ್ರಿಯಾರತಿ ಗಂಧಮಾಗೆ ತೊ
ಟ್ಟನೆ ಪುಳಕತತಿ ಪುಷ್ಪಚಯಮಾಗೆ ಧೂಪಮಾ
ತ್ಮನ ವಾಸನಾವಿಸರಮಾಗೆ ದೀಪಂ ಭಾಸುರಜ್ಞಾನಮಾಗೆ ನಿಸದಂ ೪೮

ವಿದಿತಂ ನಿವೇದಿತ ಪ್ರಾಣಪದಮತ್ಯಂತ
ಸದಮಲ ಪದಾರ್ಥತತಿಯಾಗೆ ಪರತಾಂಬೂಲ
ಮದು ಗತಹೃಷೀಕಾನುರಾಗಮಾಗಲ್ ಮಂಜುವಾಣಿ ಪೂವಲಿಯಾಗಲು
ಮದನಾರಿಗೀ ತೆಱದೊಳೊಂದು ಪೂಜೆಯನೆಸಗಿ
ಮುದದಿಂದೆ ಬಳಿಕೆ ತತ್ಪಂಡಿತೇಂದ್ರನ ಮನಂ
ಪದೆದು ಮತ್ತೊರ್ಮೆ ಪೂಜಾಸಮಯದಲ್ಲಿ ನಾನಾ ತೆಱನನೈದಿತೊಸೆದು ೪೯

ಹರನ ಮಜ್ಜನ ವೇಳೆಯಲ್ಲಿ ಜಲಮಾಯ್ತು ಭಾ
ಸುರ ಪೂಜೆಯಲ್ಲಿಯುರಲಾಯ್ತು ಲೇಪನದಲ್ಲಿ
ವರಗಂಧಮಾಯ್ತು ಧೂಪಮನೀವ ವೇಳೆಯೊಳ್ ವಾಸನಾಧೂಪಮಾಯ್ತು
ಪಿರಿದು ನೀರಾಜನಮದಾಯ್ತು ದೀಪಮನೊಲ್ದು
ಪುರಹರಂಗಿತ್ತ ವೇಳೆಯೊಳಂತೆ ರುಚಿಯಾಯ್ತು
ಗಿರಿಶಂಗೆ ನೈವೇದ್ಯಮೀವ ಪದದೊಳಗಿಂತು ಮನಮೊಂದು ಫಲಮಾದುದು ೫೦

ಮನುಜರ್ಗೆ ಮನಮೇ ಪ್ರಧಾನಮಾದಿಯೊಳೆಂದು
ನೆನೆದು ತತ್ಪಂಡಿತೇಂದ್ರ ಮಾಹೇಶ್ವರನಲ್ಲಿ
ಸನಯದೆ ವಿಲೀನಮಾದಾ ಲಗ್ನಮಾದ ಸದ್ಭಕ್ತಿಕಳೆಯಿಂದೆ ಬೆರೆದ
ಮನಮನತಿಭರದೆ ಬಾಹ್ಯಾಭ್ಯಂತರಾರ್ಚನೆಯೊ
ಳೆನಸುಂ ಪ್ರಧಾನಮಂ ಮಾಡಿಯದಱಿಂ ಬಳಿಕ
ಮನುನಯಂ [1]ದರ್ಶನ ಸ್ಪರ್ಶನಂ[1]ಗಳಿನೊಲ್ದು ಲಿಂಗಪೂಜೆಯನೆಸಗುತೆ ೫೧

ಗುರು ಪಂಡಿತೇಶ್ವರಂ ಹರ್ಷಮಂ ತಾಳ್ದು ಭಾ
ಸುರತರ ಪ್ರಾಣೇಶ ವಿಶ್ವತಶ್ಚಕ್ಷುವೆಂ
ದಿರದೆ ವೇದಂ ಪೊಗಳೆ ನಿನ್ನ ನೋಳ್ಪೆನಗೆ ಸಾಸಿರಲಕ್ಕ [2]ಕಣ್ಗಡಣಮಂ
ಭರದಿಂದೆ ವಿಶ್ವತೋಮುಖ ಎಂದು ಪೊಗಳುತಿರೆ
ಪಿರಿದು ನಿನ್ನಂ ನುತಿಸುವೆನಗೆ ಸಾಸಿರಮೊಗಮ
ನುರು ವಿಶ್ವತೋಬಾಹುವೆನೆ ನಿನ್ನ ಪೂಜೆಗೆಯ್ವೆನಗೆ ಸಾಸಿರ ತೋಳ್ಗಳಂ ೫೨

ನಾಡೆ ಜನಯಂ ದೇವ ಏಕ ಎನೆ ನಿನ್ನನುಱಿ
ಗಾಡಿಯಿಂ ನೆನೆಯಲ್ಕನಂತಚಿತ್ತಂಗಳಂ
ರೂಢಿ ಮಿಗೆ ಕರುಣಿಸು ಸದಾನಂದ ನೀಲಗಳ ಗುರುಲಿಂಗಮೂರ್ತಿ ಎನುತೆ

[1] ದರುಶನ ಸ್ಪರುಶನ (ಗ) [2] ಕಣ್ಗಡ್ಡ (ಗ)

ಕೂಡೆ ನುತಿಸುತೆ ಮತ್ತೆ ನಿನ್ನ ರೂಪಂ ಕರಂ
ನೋಡಲೀ ದೇಹಮೆಲ್ಲಂ ನಯನಮಪ್ಪಂತೆ
ಬೇಡುವೆನೆನುತ್ತೆ ನುತಿಸುತ್ತೆ ಶಿವನಂಗಮಂ ಕಣ್ಣಾರೆ ನೆಱೆ ನೋಡುವಂ ೫೩

ಒಡಲೆಲ್ಲವುಂ ಕೈಗಳಪ್ಪಂತೆ ಕರುಣಿಪುದು
ಮೃಡನೆ ಎನುತುಂ ಹಸ್ತದಿಂ ಪೂಜಿಪಂ ಬಳಿ
ಕ್ಕೆಡೆವಱಿಯದೆನ್ನಂಗಮೆಯ್ದೆ ರಸನೆಗಳಕ್ಕೆ ಮತ್ತೆ ಬಾಯಾರೆ ನುತಿಪಂ
ಬಿಡದೆ ಶಿವನಂಕಮಾಲೆಯಂ ಕೇಳಲೆ[1]ನ್ನೊ[1]ಡ
ಲ್ಗಡಣಮೆಲ್ಲಂ ಕಿವಿಗಳಕ್ಕೆನುತೆ ಸಂತಸಂ
ಮಡುಗಟ್ಟೆ ಪುರಹರನ ಸತ್ಕಥಾನೀಕಮಂ ಕೇಳ್ವನತಿಹರ್ಷದಿಂದೆ ೫೪

ನಿನ್ನ ನೆನೆಯಲ್ಕೆನ್ನ ಕಾಯಮೆಲ್ಲಂ ಮನಂ
ಮುನ್ನಾಗವೇಳ್ಕೆನುತೆ ಮನವಾರೆ ನೆನೆವನ
ತ್ಯುನ್ನತದಿನಿಂತು ಶಿವನಂ ನುತಿಸಿ ಮುಟ್ಟುತುಂ ನೋಡುತುಂ ಕೊಂಡಾಡುತೆ
ಸನ್ನಿದಂ ಶಿವಮಹಿಮೆಯಂ ಕೇಳುತುಂ ಜ್ಞಾನ
ಮುನ್ನೀರೊಳಾಳುತುಂ ಶಿವನ ಲೀಲಾಕಥನ
ಮನ್ನಿಸದಮಾಲಿಸುತೆ ಸಿಶ್ಚಲ ಸುಬುದ್ಧಿಯಂ ಶಿವನ ಸಲೆ ನೋಡಿ ನೋಡಿ ೫೫

ತೂಗಿ ತೊನೆದಾಡುತುಂ ಬಗೆಗೂಡುತುಂ ಮನೋ
ರಾಗದಿಂದಂ ಶಿವಸುಖಾಮೃತರಸಂಗಳಂ
ಬೇಗದಿಂ ಕೈದುಡುಗಿ ಮನವಾರೆಯಿಾಂಟುತುಂ ಲಿಂಗದರ್ಶ[2]ನ ಹರ್ಷ[3]ದಿಂ
ಬೀಗಿ ಪರವಶವಾಗುತುಂ ಲಿಂಗಸಂಯೋಗ
ಸಾಗರದೊಳಾಳುತೇಳುತ್ತೆ ಕೊರ್ಬುತ್ತೆ ಮ
ತ್ತಾಗಳೀಶ್ವರನ ಗಣನಾಥರಂ ಕಂಡವರ್ಗೆ ಭಕ್ತಿಯಿಂ ವಂದಿಸುತ್ತುಂ ೫೬

ತನಿಸೊಕದೆ ಸೋಲುತುಂ ಸಂಯೋಗದಿಂ ಕರಂ
ತನುಗುಣಕದಂಬಂಗಳಱತು ಸಲೆ ಬತ್ತುತುಂ
ಮಿನುಪ ಶಿವನೊಳಗಳ್ಕಱಿಂ ಪೊಕ್ಕು ವರ್ತಿಸುತೆ ಬಹಿರಂ[4]ತರಂ[4]ಗದಲ್ಲಿ
ಘನತರ ಪ್ರಾಣಲಿಂಗಮನೊಲ್ದು ಸೈತಿಡು
ತ್ತನಘ ಗುರುಪಂಡಿತೇಂದ್ರಂ ಲಿಂಗಪೂಜೆಯೊಳ
ಗನುರಕ್ತನಾಗಿರಲ್ ಕಂಡು ಗಣಪುಂಗವರ್ ಪೊಗಳ್ದರತಿಸಂತೋಷದಿಂ ೫೭

---

1 ನ್ನೊ (ಗ)  2 ರುಶ (ಗ)  3 ರುಷ (ಗ)  4 ಗರಾ (ಕ)

ಇಂ[1]ದ[1]ರನ ಸಾಸಿರಲರ್ಗಣ್ ಸರಿಯೆ ಭಾವಿಸಲ್
ಛಂದವಡೆದೀ ಪಂಡಿತಾರಾಧ್ಯಗುರುವಿನಾ
ನಂದರಸಪೂರ್ಣನಯನಂಗಳ್ಗೆ ರವಿಕರಸಹಸ್ರಂಗಳೇನು ದೊರೆಯೆ
ಅಂದವೆತ್ತೀ ಪಂಡಿತೇಶ್ವರನ ಕರಯುಗ
ಕ್ಕೆಂದಾದೊಡಂ ಗೆಡೆಯೆ ಭುಜಗಪರಿವೃಢನ ತಱು
ಸಂದ ಜಿಹ್ವಾಸಹಸ್ರಂಗಳೀ ಪಂಡಿತೇಂದ್ರನ ರಸನೆಗೊಂದ[2]ಕೆಣೆಯೇಂ[2] ೫೮

ಪಿರಿದು ನಾಲ್ಮೊಗನ ಕರ್ಣಾನೀಕವೆಯ್ದೆ ಭಾ
ಸುರ ಪಂಡಿತೇಶ್ವರನ ಕಿವಿಗಳ್ಗೆ ತೋಡೆ ಸುಂ
ದರಮಾದ ಸನಕಾದಿ ಯೋಗಿಗಳ ಚಿತ್ತಗತಿಯೀ ಪಂಡಿತಾರಾಧ್ಯರ
ಹರಭಕ್ತಿರಸವೊಸರ್ವ ಚಿತ್ತಕ್ಕೆ ಸಮವೆಂತೊ
ನಿರುತಮೀ ಪಂಡಿತೇಶ್ವರನಿಂದ್ರಿಯಪ್ರತತಿ
ಯುರಗಕಂಕಣನ ಕರ ಮತ್ತೆ ಮತ್ತಾ ಶಿವನ ಪಾತ್ರಂಗಳಲ್ತೆ ಮತ್ತಂ ೫೯

ಮೃಡಭಾಜನಂಗಳಕ್ಕುಂ ಶಿವನ ದೇಹಂಗ
ಳೆಡೆಯುಡುಗದಕ್ಕುಮೀಶನ ತೋಳ್ಗಳಕ್ಕುಮು
ಗ್ಗಡದಭವನಿಂದ್ರಿಯಂಗಳ್ ಸಮಂತಕ್ಕುಮೆನುತಂ ತುತಿ[3]ಸುತ್ತೊ[3]ಲ್ದು ನುತ್ತಂ
ಕಡುಪಿನಿಂದಱಿಯದಱಿಪಿದು ಮಱೆಯದಿರ್ಪ ತ
ನ್ನೊಡಲ ಮಱಪಿದ ನೆನಪುಗುಂದಿ ಮಿಗೆ ಬಿಡದಿರ್ಪ
ಕಡುನೇಹವಿದು ಕನಸುದೋಱದುರು ನಿದ್ರೆಯಿಲ್ಲದ ತುರ್ಯಮಿದು ಭಾವಿಸೆ ೬೦

ನಗೆಗೆಟ್ಟ ಕೂರ್ಮೆ ಕೈ[4]ವಿಡ[4]ದ ದಣಿವಾವಗಂ
ಮಿಗೆ ಬೆಳಸುದೋಱದುರುರಾಸಿ ತೊಲಗದ ಮೋಹ
ಮೊಗೆಯದೊಳ್ಗಲಹಮಾಲಿಸದ ಸಲೆ ಕೇಳ್ವ ಸಮವಲ್ಲದತಿಸಂಧಾನವು
ಬಗೆಯೆ ನೆನಪಿನಿತುದೋಱದ ನೆನಪು ಮತ್ತೆ ತೊ
ಟ್ಟಗೆ ಪಿರಿದುಮುಸುರಬಾರದ ತವಕಮಾವಗಂ
ಸೊಗಸಿನಿಂದೀ ಪಂಡಿತೇಂದ್ರಂಗೆ ಸೇರಿದಂತಾರ್ಗೆ ಕೈಸಾರ್ದುದೊಸೆದು ೬೧

ಎನುತಖಿಳ ಮಾಹೇಶ್ವರರ್ ನುತಿಸುತಿರೆ ಭಕ್ತಿ
ವನಧಿಯೊಳಗಾಳುತ್ತೆ ಪಂಡಿತೇಶ್ವರನೊಲ್ದು
ಘನಶುದ್ಧ ಲಿಂಗಾರ್ಚನಾಸ್ತೋಕ ಸತ್ಕ್ರಿಯಾರತಿ ಸಮನ್ವಿತನುಮಾಗಿ

---

[1] ದಿ (ಕ) [2] ಕನಿಶಂ (ಗ) [3] ಸದೊ (ಕ) [4] ವಿಡಿ (ಕ) ವಡೆ (ಗ)

ಸನಯದಿಂ ಮುನ್ನೆ ಸಂದ[1]ರ್ಶ[1]ನೋದ್ದಿಷ್ಟವೆಂ
ದೆನಿಪ ನೀರಾಜನಮನೆತ್ತಿ ಬಳಿಕವಸರದೊ
ಳನುನಯಂ ರಮ್ಯ ನೀರಾಜನಮನಿತ್ತು ಸಿಂಗರದ ನೀರಾಜನವನು ೬೨

ವರ ಮಹಾನೀರಾಜನಮನೆ[2]ಸಗಿ[2] ಮತ್ತೆ ಭಾ
ಸುರ ಧೂಪವಿತ್ತರ್ಘ್ಯಪಾದ್ಯಂಗಳಂ ಕೂಡೆ
ವಿರಚಿಸುತೆ ಕಾಲೋಚಿತಮನಱಿದು ಶೀತೋಷ್ಣ ಪರಿಮಳಾಂಭಸ್ಸಮಿತಿಯಿಂ
ಪಿರಿದುಮಭ್ಯರ್ಚನಂಗೆಯ್ದು ಚಂದನಪುಷ್ಪ
ಸುರುಚಿರಾಕ್ಷತೆಗಳಂ ಕೊಟ್ಟು ಲಿಂಗಕ್ಕೆ ಬಂ
ಧುರ ನೃಪವದುಪಚಾರದಲ್ಲಿ ಮೊದಲವಸರಮನೊಲ್ದಿಂತು ರಚಿಸುತಿರ್ದಂ ೬೩

ಸದಮಲಪ್ರಚುರವಿಶ್ರುತ ಪರಮಭಕ್ತಗಣ
ಪದಸರೋರುಹಸಾಂದ್ರ ಮಕರಂದಪಾನ ಸ
ಮ್ಮುದಿತ ಚಂಚಚ್ಚಂಚರೀಕನನವರತ ಪಂಚಾಕ್ಷರೀಪ್ರಸಿತಹೃದಯಂ
ವಿದಿತ ಮಂಜುಳನೀಲಕಂಠಾಹ್ವಯಂ ಮನೋ
ಮುದದೆ ಪೇಳ್ದುರುತರಾರಾಧ್ಯಚಾರಿತ್ರದೊಳ
ಗಿದು ಪಂಡಿತಾರಾಧ್ಯವಿಭುವ ಲಿಂಗಾರ್ಚನಾಕ್ರಮವರ್ಣನಂ ಭಾವಿಸೆ ೬೪

---

[1] ರುಶ (ಗ)  [2] ತ್ತಿ (ಗ)

# ಹನ್ನೆರಡನೆಯ ಸಂಧಿ

## *ಸೂರಾಂಬ ವೇಮನಾರಾಧ್ಯರ ಕಥೆ

ಸೂಚನೆ: ಸೂರಸಚಿವೇಂದ್ರ ಕೇಳ್ ಪಂಡಿತೇಶನ ಕಂಡು
ಸೂರಮಾಂಬಾ ವೇಮನಾರಾಧ್ಯ ಮುಖಭಕ್ತ
ವಾರಮತಿಸಂತೋಷದಿಂ ನುತಿಸುತಿರ್ದುದೆಂತೆನೆ ಪೇಳ್ವೆನಳ್ಕಱಿಂದಂ

ಸ್ತನದ ವೃತ್ತತೆ ಪೀಠಮಾಗೆ ತಚ್ಚೂಚುಕಂ
ಘನಲಿಂಗಮಾಗಲುಗುರ್ಗಲೆ ಬಾಲಶೀತಾಂಶು
ವನುವಾಗೆ ಬೆಮರ್ವನಿಗಳಾಕಾಶಗಂಗಾಂಬುಕಣ[1]ಮಾ[1]ಗೆ ಪರಿಭಾವಿಸೆ
ಮಿನುಪ ಲಿಂಗಾಕಾರಮಾದುರೋಜದೊಳಿರ್ದು
ಸನಯದಿಂ ಸೌಂದರಂಗಂಡು ಪಡಿವೊನ್ನಿತ್ತ
ಮನಸಿಜಹರಂ ನೀಲಕಂಠಲಿಂಗಂ ಪೊರೆಗೆ ಮೂಜಗಮನೋಜೆಯಿಂದಂ ೧

ಮತ್ತಮಾ ಪಂಡಿತೇಶ್ವರನಳ್ತಿಯಿಂದೆ ನಿಜ
ಚಿತ್ತಮಲರುತ್ತೆ ತಲ್ಲಿಂಗಕ್ಕೆ ಪರಿಮಳಂ
ಚಿತ್ತ್ರೋದಕದೆ[2] ಮಜ್ಜನಂಗೆಯ್ವ ವೇಳೆಯೊಳ್ ತನ್ನ ನೋಳ್ಪುಜ್ಜುಗದೊಳು
ಇತ್ತ ಸೂರಾಂಬೆಯುಂ ವೇಮನಾರಾಧ್ಯರುಂ
ಬಿತ್ತರದ ಜಂಗಮಶ್ರೇಷ್ಠರುಂ ಜಯಜಯ ಎ
ನುತ್ತೆ ಸಂಭ್ರಮದಿಂದೆ ಬ[3]ರ್ಪುದಂ[3] ತನ್ನ ಲಿಂಗದ ಮಧ್ಯದಲ್ಲಿ ಕಂಡು ೨

ಲಿಂಗದರ್ಪಣದಲ್ಲಿ ಜಂಗಮದ ಸನ್ಮೂರ್ತಿ
ಸಾಂಗಮಾಗಿರ್ಪುದದು [4]ಸಾ[4]ಜವೆನುತುಂ ಮತ್ತ
ಭಂಗ ಪಂಡಿತದೇಶಿಕಂ ನೋಡಿ ಸಂಭ್ರಮಾನ್ವಿತಚಿತ್ತನಾಗಿ ಬಳಿಕಂ
ಹಿಂಗದಾಲೋಕನೋತ್ಸುಕದಿಂದ ಜನಿಸಿದು
ತ್ತುಂಗ ಹರ್ಷಾಂಬುಧಿಯೊಳಾಳುತೇಳುತ್ತೆ ಮ
ತ್ತಂಗವಿಕ್ರಿಯೆಗಳಂ ವಿರಚಿಸಿದನಂತರಂಗದೊಳೊಱಲ್ದತಿಹ[5]ರ್ಷ[5]ದಿಂ ೩

---

[1] ವಾ (ಕ) [2] ತ್ರಜಲದಿಂ (ಗ) [3] ರ್ಪರಂ (ಕ) [4] ಸಹ (ಗ) [5] ರುಷ (ಗ)

* ಪಂಡಿತಾರಾಧ್ಯರು ಸೂರಸಾನಾಂಬೆ ವೇಮನಾರಾಧ್ಯರ ಕಂಡ ಕಥೆ (ಟ)

ಶಿವಪೂಜೆಗಾಂ ಮೊದಲೆ ಕುಳ್ಳಿರ್ದನೆನ್ನದು
ತ್ಸವದೆ ಲಿಂಗಕ್ಕೆ ಮಜ್ಜನವೆಸಗುವಡೆಯೆನ್ನ
ದವಿರಳಾನಂದದಿಂದೆನ್ನ ಕರಪೀಠದೊಳೆ ಲಿಂಗವಿರ್ದಪುದೆನ್ನದೆ
ತವೆ ಚಿತ್ತದ ವಿಧಾನಮಳಿಗುಮೆನ್ನದೆ ಕರಂ
ತವಕದಿಂ ಲಿಂಗಕ್ಕೆ ಪೀಠಮಾಗಿಯೆ ರಾಜಿ
ಸುವ ಹಸ್ತಮಂ ತೆಗೆದು ಲಿಂಗದೊಳ್ ಬಿಂಬಿಸುವ ಶರಣರ್ಗೆ ವಂದಿಸಿದನು ೪

ಭರದಿಂದೆ ತನ್ನ ಮಱಿತದೆಳ್ದು ಲಿಂಗದೊಳೆಸೆವ
ಚರಲಿಂಗ [1]ವಿಸರ[1]ಕ್ಕೆ ವಂದನಂಗೆಯ್ಯುತಿರ
ಲುರು ಕರಸ್ಥಲಲಿಂಗಮಂತರಿಕ್ಷದೊಳೊಪ್ಪುತಿರ್ದುದೆಂತೆನೆ ಭಾವಿಸೆ
ವರಲಿಂಗದೊಳ್ ಪೊಳೆವ ಜಂಗಮಾಕಾರಮೇ
ಪಿರಿದು ತಲ್ಲಿಂಗಕ್ಕೆ ಸಿಂಹಾಸನಮದಾಗೆ
ನಿರುತಮಾ ಶರಣತತಿಗಾ ಪಂಡಿತೇಶ ಸದ್ಭಕ್ತಿ ಪೀಠಂ ದಲಾಗಿ ೫

ಇರುತಿರ್ಪ ವೇಳೆಯೊಳ್ ವೇಮನಾರಾಧ್ಯ ಸುರು
ಚಿರ ಸ್ಮೂರಸಾನಾಂಬೆಗಳ್ ಮುಖ್ಯಮಾದ ಭಾ
ಸುರ ಜಂಗಮಪ್ರತತಿ ಸಾರ್ತಂದು ಶರಣಾರ್ಥಿ ಶರಣಾರ್ಥಿ ಎಂದು ನುಡಿದ
ನಿರುಪಮಾಲಾಪಮಂ ಕೇಳ್ದು ಬೆಚ್ಚಿದ ತೆಱದೆ
ಮರಳಿ ಪೆಱಗಂ ನೋಡೆ ತಚ್ಚರಣಜಾಲಮುಂ
ಪಿರಿದು ಲಿಂಗದೊಳೆ ಬಿಂಬಿಸುವ ರೂಪುಗಳುಮೊಂದೇತೆಱದೊಳೊಪ್ಪುತಿರಲು ೬

ಬಳಿಕಮಾ ಜಂಗಮಪ್ರಕರಮುಖದೊಳ್ ತನ್ನ
[2]ಸುಲಲಿತ ಪ್ರಾಣಲಿಂಗದ ರೂಪು ನೆಱತೋಱತ[2]
ಪುಳಕಿತಾಂಗನುಮಾಗಿ ಪಂಡಿತೇಂದ್ರಂ ತನ್ನ ಮನದೊಳಿಂತೆಂದು ತಿಳಿದಂ
ಅಳಘುಚರಲಿಂಗ ಪದಮಖಿಳತೀರ್ಥಂಗ[3]ಳ್ಗೆ[3]
ನಿಳಯಮಿದು ಘೋರತರಸಂಸಾರರೋಗಕ್ಕೆ
ಲಳಿತ ಭೇಷಜಮಿವನ ತಾಳಿಕನ್ಯಸ್ತ ದುರ್ವರ್ಣತತಿಪರಿಮಾರ್ಜ[4]ನಂ[4] ೭

1 ಸಂಘ (ಕ) 2 ಸುಳಳಿತ ಪ್ರಾಣಲಿಂಗದ... (ಕ) 3 ಳೀ (ಕ) 4 ಕಂ (ಗ)

ಮಿಱುಪ ಪೂಜಾವಿಧಾನದೊಳೆಯ್ದೆ ಪಾಸಟಿಗ
ಳುಱುವ ಶಿವಶಿರಕೆ ಜಂಗಮ ಪಾದಪದ್ಮಂಗ
ಳೆಱಗುವ ಜನಾಳಿಗಿಷ್ಟಾರ್ಥಸಿದ್ಧಿಗಳೀವ ಸುರಕುಜಂಗಳ್ ಸಂತತಂ
ತಱಿಸಂದ ಜಂಗಮಪದಾಂಬುಜಂಗಳ್ ನೋಡೆ
ನೆಱೆಇಯೆ ಸತ್ಪ್ರಾಣಲಿಂಗಾಂಘ್ರಿಗಳ್ ಶೋಭಿಸುವ
ಕಱೆಗೊರಲ ಶಿವನ ಪೀಠು ಜಂಗಮದ ವಾಮಕರತಳಂ ಪರಿಭಾವಿಸೆ ೮

ಚರಲಿಂಗ ವಾಮಕರಮೀಶಂಗೆ ಶೃಂಗಾರ
ದುರುಸದನಮಾವಗಂ ತತ್ಕರಂ ಪಶುಪತಿಗೆ
ಪಿರಿದುಮಾಸ್ಥಾನವೇದಿಕೆ ಜಂಗಮದ ಶ[1]ಸ್ತ[1] ದಕ್ಷಿಣಕರಾಂಭೋಜವು
ಹರನ ಜನ್ಮಸ್ಥಾನಮಂತೆವೋಲೀಶಂಗೆ
ಚರಲಿಂಗ ದಕ್ಷಿಣಕರಂ ಸೇವಕಂ ಮತ್ತೆ
ವರಮಿತ್ರನಾ ಜಂಗಮದ ಬಲದ ಹಸ್ತಮಭವಂಗೆ ಪೂಜಾರಿಯನಿಶಂ ೯

ಹರಶಿರದ ಪುಷ್ಪಂಗಳಾ ಜಂಗಮದ ಬಲದ
ಕರಮಂತೆ ಜಂಗಮದ ದೃಷ್ಟಿಗಳ್ ಶಿವನ ಬಂ
ಧುರ ಶಿರದೊಳಿಟ್ಟ ಬೆಳ್ದಾವರೆಯ ಮಾಲೆಗಳ್ ಶಿವನಗ್ರದೊಳ್ ಬೆಳಗುವ
ವರದೀಪತತಿಗಳಭವಂಗೆ ಮಜ್ಜನಕೆಯ್ದೆ
ಪಿರಿದು ಹರ್ಷಾಶ್ರುಜಲಪೂರ್ಣಕುಂಭಂಗಳುರು
ತರ ಮಹೇಶ್ವರನಂಗವೆಂಬ ಬಲ್ಗಣೆಗಳ್ಗೆ ಬತ್ತಳಿಕೆಗಳ್ ಭಾವಿಸೆ ೧೦

ಜಂಗಮದ ಜಿಹ್ವೆ ಶಿವಭೋಜನಾಮತ್ರಮು
ತ್ತುಂಗ ಶಿವನಾಮಾಂಕಲಿಖಿತ ಪುಸ್ತಕಮೀಶ್ವ
ರಂಗೆ ಸವಿಯಂ ಕಬಳನಂಗೆಯ್ದು [2]ತು[2]ಡುವ ಕೈ ಸತ್ಯ[3]ಮಿರ್ಪ[3] ಕರಂಡವು
ಮಂಗಳಶ್ರೀಬಸವನುನ್ನತ ಸುಗೀತ[4]ಮಂ[4]
ಸಾಂಗದಿಂ ಬಾಜಿಸುವ ಬೀಣೆ ಮತ್ಪ್ರಾಣೇಶ
ಲಿಂಗದಾಯತ ಜಿಹ್ವೆಯೆನ್ನದದನಂತಿಂತೆನಲ್ ಬರ್ಕುಮೇ ಭಾವಿಸೆ ೧೧

ಲಲಿತ ಜಂಗಮದ ಕರ್ಣಂಗಳೆಸೆವೀಶ್ವರನ
ಲುಲಿತ ತತ್ತ್ವಾಮೃತಂದಳೆದ ಕುಂಭಂಗಳತಿ
ವಿಲಸದಾಮ್ನಾಯಾದಿಗಳ ಕರ್ಣಪೂರಂಗಳಭವನಾಮಂಗ[5]ಳೆಂಬ[5]

---

[1] ಕ್ತ (ಗ) [2] ಕೊ (ಗ) [3] ವಿಪ್ಪ (ಗ) [4] ದಿಂ (ಕ) [5] ಳಿಲ್ಲ (ಗ)

ಅಲಘು ಗೃಹಮುದ್ರೆಗಳ್ ಭಾವಿಸಲ್ ಶಂಕರನ
ಸುಲಲಿತ ಶ್ರುತಿಗಳಕ್ಕುಂ ಮತ್ತೆ ಜಂಗಮದ
ಸುಲಭಮನನಮಂಗಜಾರಿಯ ವಿಹಾರಸ್ಥಲಂ ಶಿವನ ಸಂಕೇತಭವನಂ ೧೨

ಜಂಗಮ [1]ಘ್ರಾ[1]ಣಮದು ಪಶುಪತಿಯ ನಿರ್ಮಾಲ್ಯ
ಸಂಗಾತಾಮೋದ ಪ್ರಿಯಾಳಿ ಸರ್ವೇಶ್ವರನ
ಮಂಗಳಘ್ರಾಣಮುನ್ನತ ಜಂಗಮದ ಕಾಯಮತಿಶಾಂತಿ ಸಮುದಾಯವು
ಲಿಂಗದೇವನ ವಾಹನಂ ಲಿಂಗವಿಗ್ರಹಂ
ಜಂಗಮದ ವಾಕ್ಯಮೀಶ್ವರನ ವಾಕ್ಯಂ ಮತ್ತೆ
ಜಂಗಮದ ನುಣ್ಮೊಗಂ ಶಿವನ ಮೊಗಮುವರುದರಮದು ಶಿವನ ಪೊಡೆಯೆನಿಸುಗುಂ ೧೩

ಜಂಗಮದ ವಕ್ಷಸ್ಸು ಶಿವನ ವಕ್ಷಸ್ಸ್ಥಲಂ
ಜಂಗಮದ ಭೋಗಮದು ಶಂಕರನ ಭೋಗಮು
ತ್ತುಂಗ ಜಂಗಮತೃಪ್ತಿ ಚಂದ್ರಧರತೃಪ್ತಿ ಮತ್ತವರ ಮೂರ್ತಿಯೆ ಸಂತತಂ
ಲಿಂಗಸನ್ಮೂರ್ತಿ ಸತ್ಪ್ರಾಣಂಗಳೆಯ್ದೆ ನೋ
ಡಂಗಜಾರಿಯ ಹರಣಮಿದು ನಿಕ್ಕುವಂ ಮತ್ತ
ಭಂಗ ಜಂಗಮಮೂರ್ತಿಯಾಗಿ ಮೊದಲೊಳ್ ಬಂದು ತಾನೆ ಸದ್ಗುರುವಾದನು ೧೪

ಅದಱಿಂದೆ ಲಿಂಗರೂಪಾದ ಚರಲಿಂಗಸನೆ
ವಿದಿತ ಗುರುವೆಂದು ನಿಶ್ಚೈಸವೇಳ್ಕುಂ ಮತ್ತೆ
ಸದಮಲ ಶ್ರೀಗುರುಸ್ವಾಮಿಯನೆ ಪರಮಜಂಗಮಮೂರ್ತಿಯೆಂದು ತಿಳಿದು
ಮೊದಲೊಳೀ ಜಂಗಮಾರ್ಚನೆಗೆಯ್ವುದುತ್ತಮಂ
ತದನಂತರದೊಳಿಷ್ಟಲಿಂಗರೂಪೆಂದು ಸ
ನ್ಮುದದಿಂದೆ ಭಾವಿಪುದು ಮಧ್ಯಮಂ ಶಂಭುಶಾಸನಧಾರಿಗಳುಮೆನುತ್ತೆ ೧೫

ವಿದಿತ ಜಂಗಮಮೂರ್ತಿಯಂ ಕಾಣ್ಬುದಧಮಮಂ
ತದಱಿಂದೆ ಗುರುಮೂರ್ತಿಯಾದ ಜಂಗಮದ ಸ
ದ್ವದನದೊಳ್ ಶಿವಮೂರ್ತಿ ತೋರ್ಪುದೇಂ ಸೋಜಿಗಮೆ ಸಾಜಮೆನುತಂ ಬೀಗುತೆ
ಇದಿರ್ವಂದು ವೇಮನಾರಾಧ್ಯ ಸೂರಾಂಬೆಗಳ
ನೊದವಿದತಿಭಕ್ತಿಯಿಂದಾಲಿಂಗನಂಗೆಯ್ದು
ಮುದದೆ ವಂದಿಸಿ ಬಳಿಕ್ಕಾ ಜಂಗಮಪ್ರಕರಕಲ್ತಿಯಿಂ ಪ್ಪಡಮಟ್ಟನು ೧೬

---

[1] ದಘ್ರಾ (ಗ)

ಹುರಿಸಾದಿಂದಂ ಕ್ರಿಯೋಕ್ತಿಗಳನಾಚರಿಸುತ್ತೆ
ಮರಳಿ ಸಾಷ್ಟಾಂಗಪ್ರಣತನಾಗಿ ಭಕ್ತಿರಸ
ಶರಧಿಯೊಳಗಾಳುತೇಳುತ್ತಿರ್ದು ಪರವಶೀಭೂತನಾಗುತ್ತೆ ಮತ್ತೆ
ಭರದಿನೆಚ್ಚರ್ಗೊಸಗೆ ಮದ್ಭವಾಂಭೋಧಿಯೆಂ
ದಿರದೆ ಬಱಿಕೆಯ್ದು ಪೋದುದು ಮತ್ತಮೆನ್ನ ಬಂ
ಧುರ ಪಾಪವೊಳಸೋರ್ದುದೀ ಭಕ್ತಪದಪದ್ಮಮಂ ಕಂಡು ದೂಸಱಿಂದಂ ೧೭

ಲಲಿತ ಭಕ್ತರ ಪಾದಧೂಳಿಯಿಂದೆನ್ನ ಮೇ
ಲೊಲವಿನಿಂ ಬಿಳ್ದುದಱಿನತಿಧನ್ಯನಾದೆನಂ
ತಲಘು ಭಕ್ತರ್ಕಳಡಿಗೆರ್ಪೆನ್ನ ಶಿರದೊಳಿರ್ದುದಱಿನೀಶಪದಾಂಬುಪ
ನಲಿದು ಕೊಳಲ[1]ರ್ಹ[2]ನಾದೆಂ ಭಕ್ತಭುಕ್ತ ಸು
ಸ್ಥಲಗತಪ್ರಚುರಪ್ರಸಾದಮಂ ಕೊಂಡುದಱಿ
ನಲರ್ವ ಲಿಂಗಪ್ರಸಾದಂಗೊಳ್ವುದರ್ಕೆ ಸಾಹಸಮುಳ್ಳನಾದೆನಸಿಸಂ ೧೮

ಎನುತೆ ಕೀರ್ತಿಸುತೆ ಮತ್ತವರ ಪದಪದ್ಮಮಂ
ವಿನಯದಿಂ ಪ್ರಕ್ಷಾಳನಂಗೆಯ್ದು ತೀರ್ಥಮಂ
ಮನವಾರೆಯಿಂಟಿ ಸದ್ಭಕ್ತಿಯಿಂದರ್ಚಿಸುತೆ ಧೂಪಮಂ ಸಲಿಸಿ ಬಳಿಕಂ
ಮಿನುಪ ನೀರಾಜನಮನೊಲ್ದೆತ್ತುತಿರಲದಱ
ಘನತರ ಪ್ರಭೆಯೊಳಗೆ ಪಾರ್ಶ್ವದೊಳ್ ದೀಪಂಗ
ಳನುವಿನಿಂ ಬೆಳಗುತಿರಲಂತರಿಕ್ಷದೊಳವಱ ಮಧ್ಯದೊಳ್ [3]ಕಣ್ಗೊ[3]ಳಿಸುವ ೧೯

ಲಿಂಗಮಂ ತಜ್ಜಂಗಮಾಳಿ ಭರದಿಂ ಕಂಡು
ಹಿಂಗದತಿವಿಸ್ಮಯಾವಿಷ್ಟರಾಗುತ್ತಲು
ತ್ತುಂಗ ಗುರುಪಂಡಿತೇಶ್ವರನನೊ[4]ಲ್ದೀ[4]ಕ್ಷಿಸುತೆ ನುತಿಸುತ್ತೆ ನುಡಿದರವರು
ಲಿಂಗಪೂಜೆಯನೆಸಗಿಮೆನೆ ಕನಸುಗಂಡವನ
ಪಾಂಗಿನಿಂದೆಚ್ಚತ್ತು ಲಿಂಗದತ್ತಲ್ ತನ್ನ
ಮಂಗಳಕರಂ ನೀಡೆ ಹಸ್ತಮಂ ಲಿಂಗಮೆಯ್ದಿತ್ತು ತತ್ ಕ್ಷಣದೊಳೊಸೆದು ೨೦

ಎಲೆ ದೇವ ನಿನ್ನ ಕಂಡಾಗಳೇ ಜಗಮುಮಂ
ಸಲೆ ತನ್ನುಮಂ ಮಱೆಯವೇಳ್ಕು ವರಭಕ್ತರ್ಗೆ
ಲಲಿತ ಚರಲಿಂಗಮಂ ಕಂಡಾಗ ನಿನ್ನುಮಂ ಮಱೆಯವೇಳ್ಕೆಕೆಂದೊಡೆ

[1] ರುಷ (ಗ) [2] ರುಹ (ಗ) [3] ಕಂಗೊ (ಗ) [4] ಲಿದೀ (ಗ)

ಅಲಘು ಜಂಗಮವೆ ನೀನಾದಕಾರಣಮದಱಿಂ
ನೊಲವಿನಿಂ ಜಂಗಮಂಗಾಣುತ್ತೆ ಸೇವಿಸದೆ
ನಲಿದು ನಿನ್ನಂ ಪೂಜಿಸಿದ ಪೂಜೆಗಳ್ ವ್ಯರ್ಥವಕ್ಕುಮನಿಶಂ ಭಾವಿಸೆ ೨೧

ಚರಲಿಂಗಮಂ ಪೂಜೆಗೆಯ್ಯದಾತುರದಿಂದೆ
ಹರಪೂಜೆ ಶತಕೋಟಿಯಂ ಮಾಡೆ ನಿಷ್ಫಲಂ
ಚರಲಿಂಗಮಂ ಪೂಜಿಸದೊಡೆ ಶಿವಪೂಜೆಗಳನಂತಮಂ ರಚಿಸಿದನಿತು
ಪಿರಿದು ಫಲಮಕ್ಕುಮಾ ಜಂಗಮಂದೊಲಗಿ ಭಾ
ಸುರ ಲಿಂಗಪೂಜೆಯೊಂದಂ ರಚಿಸಿ ತತ್ಪೂಜೆ
ವಿರಳ ಕುಂಭಮನೆಯ್ದಿದುದಕದಂತೆವೊಲೆಯ್ದೆ ಕಿಡುಗುಮಿದು ಪರಮಾರ್ಥವು ೨೨

ಮಿಗೆ ಜಂಗಮಾರ್ಚನೆಯನೆಸಗೆ ಶಿವಪೂಜೆಯಂ
ಸೊಗಸಿನಿಂ ಸಮೆದ ಫಲಮಕ್ಕುಮದನೊಕ್ಕು ಕೆ
ಮ್ಮಗೆ ಲಿಂಗಪೂಜೆಯಂ ರಚಿಸಲದಱಿಂ ಜಂಗಮಾರ್ಚನೆಯ ಫಲಮೆಯ್ದದು
ಬಗೆಯಲೆಂತೆನೆ ಲಿಂಗಮದು ತಾನೆ ಜಂಗಮದ
ನೆಗಳ್ದ ರೂಪಾದ ಕತದಿಂ ಭಕ್ತದೇಹಮಿಂ
ಪೊಗೆವ ಶಂಕರಸಂಗಮಾದುದದಱಿನಾವಗಂ ಜಂಗಮಾರ್ಚನೆಯೆ ಮುಖ್ಯಂ ೨೩

ಲಿಂಗಮೇ ಪ್ರಾಣಪದಮೆನಿಕುಮತಿಶಯಮಾದ
ಜಂಗಮವೆ ಭಾವಿಸಲ್ ಪ್ರಾಣರೂಪಂ ಬಳಿಕೆ
ಲಿಂಗಾರ್ಪಣವೆ ಅಂಗಭೋಗಮೆನಿಕುಂ ಜಂಗಮಾರ್ಪಣ[1]ವೆ[1] ಭಾವಿಸುವೊಡೆ
ಲಿಂಗಭೋಗಮೆನಿಕ್ಕುಮಿದಱಿಂದೆ ಸಂತತಂ
ಜಂಗಮಾರ್ಚನೆಯಧಿಕಮಂತೆ ಸರಿಗಾಣ್ಬುದದು
ಪಿಂಗದತಿಮಃಧ್ಯಮಂ ಜಂಗಮಾರ್ಚನೆಯಿಕ್ಕಿ ಲಿಂಗಮಂ ಭಜಿಪುದಧಮಂ ೨೪

ಲಿಂಗಪೂಜೆಯದಂಗದುಪಚಾರಮೆನಿಸುಗುಂ
ಜಂಗಮಾರ್ಚನೆ ಕರಂ ಪ್ರಾಣೋಪಚಾರಮೆನೆ
ಜಂಗಮಾರ್ಚನೆ ಹೀನಮಾಗಿ ವಿರಚಿಸಿದ ಶಿವಲಿಂಗ ಪೂಜನೆ ನಿಂದೆಯಂ
ಹಿಂಗದೆಯ್ದುಗುಮೆಂತೆನಲ್ ಭುವನದೊಳ್ಗೆ ಸಬ
ದಂಗಕ್ಕೆ ನೇಹದಿಂ ತುಡಿಸಿದಾಭರಣನಿಕ
ರಂಗಳಂತಭವಪೂಜೆನೆಗೆಯ್ದು ಜಂಗಮಾರ್ಚನೆಗೆಯ್ಯದಿ[2]ರ್ಪಿರವದು[2] ೨೫

---

[1] ಮಂ (ಗ) [2] ಪ್ಪಿರವನು (ಗ)

ನಿರುತಮಾ ಜಂಗಮಂ ಲಿಂಗಮೆಂಬೀಯೆರಡು
ಪರಮೇಶ್ವರಂಗೆರಳ್ಮೊಗಮಕ್ಕುಮೆಂತೆನಲ್
ಧರಣಿಯೊಳ್ ಭೇರುಂಡನಂತೆಪೋಲದಱಿಂದಮೊಂದೆ ವದನದೊಳುಂಡೊಡೆ
ಪಿರಿದು ಸಂತುಷ್ಟಮಾಗದು ಹರಂಗದಱಿಂದೆ
ಚರಲಿಂಗಮೆಂಬ ಮೊಗದೊಳ್ ತೃಪ್ತನಕ್ಕುಮಾ
ಶ್ವರನದಂ ಬಿಟ್ಟು ಲಿಂಗಾಸ್ಯದೊಳ್ ಕುಡೆ ಶಿಲಾಹಿಂಗೆ ಪಾಲನೆಱೆದಂತದು ೨೬

ಫಲವೀವ ವೃಕ್ಷಮಂ ಬಿಟ್ಟು ನೀರಸ ದಾರು
ಕುಲಕಾಲವಾಲಮಂ ತಿರ್ದಿ ನೀರ್ವೊಯ್ವಂತೆ
ನಲಿದುಂಬ ಮೊಗಮಂ[1]ನಿಳಿಕೆ[1]ಯುದ್ದ ಪೆಡತಲೆಗೆ ತುತ್ತುಗಳೀವ ಗಾಂಪನಂತೆ
ಲಲಿತ ಮಂಗಲಮಾದ ಶಿರಮಿರಲ್ ಜಾನುವಿಂ
ಗೊಲವಿನಿಂದಕ್ಷತೆಯನಿಡುವ ಕಾಲುರಿಚನಂ
ತಲಘು ಜಂಗಮಮೆಂಬ ಮುಖಕೀಯದಾ ಲಿಂಗಮೆಂಬ ಮುಖಕೀವ ನರನು ೨೭

ಅದಱಿಂದೆ ಸದ್ಭಕ್ತರನೆ ನೀ[2]ನೆ[2]ಯೆಂದು ಸ
ನ್ಮುದದೆ ಕಾಣಲ್ವೇಳ್ಕು ನಿಕ್ಕುವಂ ಭಕ್ತರ್ಗೆ
ಪದೆದೆಸಗಿದಾ ಸೇವೆಯದು ನಿನ್ನ ಸೇವೆ ಭಕ್ತಪ್ರಸಾದಂ ಸಂತತಂ
ಮದನಾರಿಯೇ ನಿನ್ನ ಸುಪ್ರಸಾದಮದೆಂದು
ವಿದಿತಮಾಗಱಿದು [3]ಶ[3]ದ್ಭಕ್ತರನೆ ಪೂಜಿಸೆಂ
ಸದಮಲಾತ್ಮರ ಭಕ್ತರಾಲಯದ ಭೃತ್ಯನಾಂ ಎನಗೆ ಗತಿಮತಿಗಳವರು ೨೮

ವಿನಯದಿಂದವರ ಭಜಿಸಲ್ವೇಳ್ಕು ಸದ್ಭಕ್ತ
ರೆನಗೆ ತಾಯ್ತಂದೆಗಳ್ ಭಕ್ತಹೃತ್ಕಮಳಧಾ
ಮನೆ ಭಕ್ತದೃಕ್ಕೈಮುದೀಪಾನ ಸಮ್ಮುದಿತ ಚಂಚಚ್ಚಕೋರ ಗಿರಿಶಾ
ಮಿನುಪ ಭಕ್ತಾಸ್ಯದರ್ಪಣದಲ್ಲಿ ಮಾರ್ಪೊಳೆವ
ಘನರೂಪ ಭ[4]ಕ್ತಿ[4]ಚಿತ್ತಾಬ್ಜ ಷಟ್ಪದಭಕ್ತ
ಜನಮನಸ್ಸದನಸದ್ದೀಪ ಭಕ್ತಾತ್ಯಂಗ ವಿಲಸತ್ಪ್ರಾಣ ಸಮರೂಪನೆ ೨೯

ಗುರುವಿನ ಶರೀರಮದು ನಿನ್ನ ದೇಹಂ ಮತ್ತೆ
ಚರಲಿಂಗಮಾ ಶರೀರಕ್ಕೆ ಸತ್ಪ್ರಾಣಮಾ
ಸುರುಚಿರ ಪ್ರಾಣಲಿಂಗಾವತಾರಂ ನಿನ್ನ ಮೂರ್ತಿ ಜಂಗಮಮೂರ್ತಿಯೆ

---

[1] ನಿಳ್ಕೆ (ಕ) [2] ನು (ಗ) [3] ಸ (ಕ) [4] ಕ್ತ (ಕ)

ಪಿರಿದುಮಾಚಾರ್ಯಾವತಾರವೆನಿಕುಂ ನೋಡೆ
ಸರಿರದೊಳ್ ಕೂಡಿ ತೋರ್ಕುಂ ನಿನ್ನ ಮೂರ್ತಿ ಮ
ತ್ತಿರದೆ ಜಂಗಮಮೂರ್ತಿ ಹರಣದೊಡವೆರದಿರ್ಕುಮಾವಗಂ ಭಾವಿಸುವೊಡೆ ೩೦

ಸಾರಮಂತ್ರ ಕ್ರಿಯಾಧಾರಮಾಗಿರ್ಕುಮದು
ಚಾರುತರ ನಿನ್ನ ಸನ್ಮೂರ್ತಿ ಜಂಗಮಮೂರ್ತಿ
ಯಾರಯಲ್ ತಂತ್ರಕ್ರಿಯಾಧಾರಮಾಗಿರ್ಕುಮದು ಯೋಗಮುಜ್ಜನಕ್ಕೆ
ಓರಂತೆ ತಾಣಮಪ್ಪುದು ನಿನ್ನ ಮೂರ್ತಿ ಸುವಿ
ಚಾರಂಗೆಯಲ್ ಜಂಗಮದ ಮೂರ್ತಿಯಣಿಯರಂ
ಧಾರಿಣಿಯೊಳಗೆ ಭೋಗಮುಜ್ಜನಸ್ಥಾನಮೆನಿಕುಂ ಸಂತತಂ ಭಾವಿಸೆ ೩೧

ಕರತಳಸ್ಪ[1]ರ್ಶ[1]ಕ್ಕೆ ನಿನ್ನಯ ಶಿರಂ ಬಳಿಕೆ
ಶಿರದ ಪರಿಸನಕೆ ತಜ್ಜಂಗಮದ ಚರಣಮುರು
ತರಮಾದ ರೂಪಾರ್ಪಣಸ್ಥಲಂ ನಿನ್ನ ತನು ರುಚ್ಯರ್ಪಣಸ್ಥಾನವು
ಚರಲಿಂಗಮೂರ್ತಿ ಜೇತೋಗುಣ ನಿವೇದನಂ
ವರಲಿಂಗಮೂರ್ತಿ ಮತ್ತಾ ಜಂಗಮಾಕಾರ
ಮಿರದೆ ನಿಜತನು ಮನೋಧನನಿವೇದನಮುದಜೂನೆನ್ನ ಕಂಗಳ್ಗೆ ಸತತಂ ೩೨

ಗುರು ಜಂಗಮಂಗಳೊಂದೇ ಎಂದು ಕಾಣ್ಬ ಸುರು
ಚಿರ ಪುಣ್ಯಮಂ ಕುಡುವುದೆನ್ನ ಮನಕೆಯ್ದೆ ಸ
ದ್ಗುರುಮೂರ್ತಿಯಿದು ಜಂಗಮದ ಮೂರ್ತಿ ತಾನಿದೆಂಬೊಂದು ಬುದ್ಧಿಯನೀಯದೆ
ಎರಡುಮೊಂದೆಂಬ ಬುದ್ಧಿಯನಿತ್ತು ರಕ್ಷಿಪುದು
ಮರೆ[2]ಳೀತನೇ[2] ಜಂಗಮಂ ಲಿಂಗಮಿದುಯೆಂಬ
ದುರುಳ ಬಗೆಯಿಮಾಯದನಿಶಂ ನೀನೆಯೆಂದು ಬಗೆಯೊಳ್ಪುಗೆಯನೇಯಿಮಾಯ್ವುದು ೩೩

ಮತ್ತಮಾ ಸದ್ಭಕ್ತರೊಳ್ಗೋಷ್ಠಿಯಾಗಿರ್ಪ
ಚಿತ್ತಮನೆ [3]ಕು[3]ಡುವುದೆಂದೆರದಪೆಂ ಭೂಮಿಯೊಳ
ಗೊತ್ತಂಬದಿಂದೆನ್ನ ಪುಟ್ಟಪೊಡೆ ಭಕ್ತರುದರದೊಳೆ ಸಲೆ ಪುಟ್ಟಿಸುವುದು
ಮತ್ತದುಂ ದೊರಕದೊಡಮವರ ತೊ[4]ತ್ತಿರ್[4] ಬಂಟ
ರುತ್ತಮೋತ್ತಮ ಗರ್ಭದೊಳ್ ಬರಿಪುದುತ್ತಮಂ
ಮತ್ತದುಂ ತೀರದೊಡಮವರ ಬಾಗಿಲ್ಗಾವ ಶುನಕನಾಗಿರಿಸೆನ್ನನು ೩೪

1 ರುಷ (ಗ) 2 ಳಿತದನೇ (ಗ) 3 ಕೊ (ಗ) 4 ತ್ತಿರ್ (ಗ)

ಇನಿತುವರವೆರದಪ್ಪೆನಿನಿತಱಿಂ ನೀಂ ಕುಡುವ
ಘನಮುಕ್ತಿಯೆನಗೆ ಪೊಲ್ಲಮೆಗೆಯ್ಗುವುದಱಿಂದೆ
ಮನಸಿಜಾಂತಕ ಭವಭವಂಗಳೊಳೆನಗಿನಿತನಿತ್ತು ಸಲೆ ಪೊರೆವುದೆಂದು
ಮನಮುಣ್ಮೆ ಲಿಂಗಜಂಗಮಸಾಮರಸ್ಯಸುಖ
ವೆನಿಸುವಿಂಗಡಲೊಳಾಳುತೆ ನುತಿಸುತೀಶ್ವರನ
ಸನಯದಿಂ ಲಿಂಗಪೂಜೆಯ ತೀರ್ಚೆ ಪಂಡಿತೇಶ್ವರನಿರ್ದನತಿಮುದದೊಳು ೩೫

ಸದಮಲಪ್ರಚುರವಿಶ್ರುತ ಪರಮಭಕ್ತಗಣ
ಪದಸರೋರುಹಸಾಂದ್ರ ಮಕರಂದಪಾನ ಸ
ಮ್ಮುದಿತ ಚಂಚಚ್ಚಂಚರೀಕನನವರತ ಪಂಚಾಕ್ಷರೀಪ್ರಸಿತಹೃದಯಂ
ವಿದಿತ ಮಂಜುಲನೀಲಕಂಠಾಹ್ವಯಂ ಮನೋ
ಮುದದೆ ಪೇಳ್ದುರುತರಾರಾಧ್ಯಚಾರಿತ್ರದೊಳ
ಗಿದು ವೇಮನಾರಾಧ್ಯ ಸೂರಾಂಬೆಗಳ್ ಪಂಡಿತೇಶನಂ ಕಂಡ ಕಥನಂ ೩೬

# ಹದಿಮೂರನೆಯ ಸಂಧಿ

## *ಬಸವೇಶ್ವರೋದ್ಭವ ; ಶಿವಯೋಗನಿದ್ರೆ

ಸೂಚನೆ: ಬಸವೇಶ್ವರನ ಜನನಮಂ ಬಸವದಂಡೇಶ
ನೆಸೆವ ಶಿವಯೋಗನಿದ್ರೆಯನೊರೆದಪೆಂ ಕೇಳ
ಬಿಸಪಂದದಿಂದೆ ಸೋರಾಮಾತ್ಯ ಶರಣಜನವದನ ಕಮಲಾದಿತ್ಯನೆ

ಇಂಗಡಲೊಳೊಗೆದ ತಣ್ಗದಿರನಂ ಮುಡಿಯೊಳಗೆ
ತಾಂಗಿ ಮಂಗಲೆಯನಂಗದೊಳಿಟ್ಟು ಮತ್ತಮು
ತ್ತುಂಗಗಂಗೆಯ ತರಂಗಂಗಳಂ ಜಡೆಗಟ್ಟಿಯೊಳ್ ತಡೆದು ನಿಲಿಸಿ ಮುದದಿಂ
ಇಂಗಳಂ ಪಣೆಯ ನಡುಗಂಗಳೊಳ್ ಸಂಡಗಿಟ್ಟು
ಮಂಗಳಭುಜಂಗ ಮಂಗಳದೇಹದೊಳ್ ತಾಳ್ದು
ಪಿಂಗದೆ ವಿರಾಜಿಸುವ ನೀಲಕಂಠಂ [1]ಸಲಹುಗ[1]ತಿಶಯಂ ಭಕ್ತತತಿಯಂ ೧

ಇಂತು ಲಿಂಗಾರ್ಚನಂಗೆಯ್ದು ಸೊಕದಿಂದಿರ್ಪ
ನಂತ ಜಂಗಮವಿಸರದೊಡಗೂಡಿ ರಾಜಿಸುತೆ
ಮುಂತೆ [2]ಕಣ್ಗೊ[2]ಳಿಪ ತತ್ಪಂಡಿತೇಂದ್ರನ ಕಂಡು ಮನದೊಳಗೆ ಗುಡಿಗಟ್ಟುತೆ
ಸಂತಸದೆ ವೇಮನಾರಾಧ್ಯರುಂ ಸೋರಾಂಬೆ
ಮುಂತಾದ ಜಂಗಮಪ್ರವರರುಂ ಪೊಗಳ್ದರ
ತ್ಯಂತಹರ್ಷಾಂಬು ಕಡೆಗಣ್ಗಳಿಂದೊಸರುತಿರೆ ಭಾಪುರೇ ಪಂಡಿತೇಶ ೨

ನಿನ್ನ ಜಂಗಮಭಕ್ತಿನಿಷ್ಠೆಯಂ ಮಾಹಾತ್ಮ್ಯಮೆ
ಮನ್ನಿಸದಮಾಪಗಂ ಪೊಗಳ್ವೊಡಮಶಕ್ಯಮಾ
ಪನ್ನಗೇಶಂಗೆನಲ್ ಮತ್ತಿನವನಾವನುನ್ನತಮಾಗಿ ಪೊಗಳ್ವನೊಸೆದು
ನಿನ್ನ ಭಕ್ತಿಗೆ ನೀನೆ ತೋಡು ನಿನಗಾ ಭಕ್ತಿ
ಸನ್ನಿದಂ ಪಾಸಟಿಯದಕ್ಕುಮಲ್ಲದೆ ಪೆಱರ
ನನ್ನಿಯಿಂ ಸರಿಯೆನ್ನಬರ್ಕುಮೆ ಅಘತಿಮಿರಮಾರ್ತಾಂಡ ಪಂಡಿತೇಂ[3]ದ್ರ[3] ೩

---

[1] ಪೊರೆವುದ (ಗ) [2] ಕಂಗೊ (ಗ) [3] ದ್ರಂ (ಕ)

* ಬಸವೇಶ್ವರನ ಜನನ; ಬಸವೇಶ್ವರನ ಶಿವಯೋಗ ನಿದ್ರಾಮುದ್ರೆ (ಟ)

ಭಾಪುರೇ ಮಲ್ಲಿಕಾರ್ಜುನಪಂಡಿತೇಂದ್ರ ಮಝು
ಭಾಪುರೇ ಪಂಡಿತಾರಾಧ್ಯ ಸದ್ಭಕ್ತಕುಲ
ದೀಪ ಪಂಡಿತ ಶಿರೋಮಂಡಿತಾಮಲಪಾದ ಪುಂಡರೀಕಾ ಭಾಪುರೆ
ಭಾಪುರೇ ವೀರಶೈವಾಚಾರವಾರಾಸಿ
ಭಾಪುರೇ ಶರಣಶರನಿಧಿಶಶಧರಾ ಭಾಪು
ಭಾಪುರೇ ಜಂಗಮ ಶ್ರೀಚರಣಸರಸಿರುಹಮಕರಂದಪಾನಭೃಂಗ ೪

ಎಂದು ನುತಿಸುತೆ ಸಕಲಭಕ್ತರಿಂತೆಂದರಾ
ವೆಂದುಮಿಂತಪ್ಪ ಭಕ್ತ್ಯಾತಿಶಯಮುಮಂ ಕಂಡು
ದುಂ ದಿಟದಿನಿಲ್ಲ ಮುನ್ನಿನ ಕಥೆಗಳೊಳ್ ಕೇಳ್ದು ಬಲ್ಲೆವೀ ಧರಣಿಯೊಳಗೆ
ಚಂದವಡೆದಾ ವೀರಮಾಹೇಶ್ವರಾಚಾರ
ವೃಂದಕ್ಕೆ ಕರ್ತೃವೆನಿಸುವ ಬಸವದಂಡೇಶ
ನಂದು ತನ್ನಸುವ ಜಂಗಮದಲ್ಲಿ ಯೋಜಿಸಿದನೆಂಬುದಂ ಕೇಳ್ದಱವೆವು ೫

ನಲಿದಿಂದು ಕಂಡೆವಾ ಕಥೆಯೆಂತೆನಲ್ ಮುನ್ನೆ
ನಲಿನಾಕ್ಷ ಕಮಲಭವ ಮುಖ್ಯಾಷ್ಟತನುಗಳುಮ
ಖಿಲಜಗಂಗಳುಮುದಯಿಪುದಱಿಂದೆ ಗೌರೀವಿವಾಹಾದಿ ಕಾರ್ಯಂಗಳಿಂ
ಸುಲಲಿತ ಬ್ರಹ್ಮಾಂಡದುತ್ಪತ್ತಿಯಿಂ ಮೊದಲೊ
ಳಲಘು ಶಿವನೇಕಾದಿಯಾಗಿಯೇಕಾಂತದೊಳ
ಗೊಲವಿನಿಂದಿರುತೆರಡನೆಯ ಶಂಭುವೆಂಬ ವೃಷಭಸ್ವರೂಪಂದಾಳ್ದನು ೬

ಅದನೆಯ್ದೆ ವಾಹನಂಗೆಯ್ದು ಚರಿಸುತೆ ಮತ್ತೆ
ವಿದಿತ ಪ್ರಪಂಚನಿಚ್ಛಾಮಾತ್ರದಿಂ ಸೃಜಿಸಿ
ತದನಂತರಂ ಶಿಲಾದಂಗಯೋನಿಜನಾಗಿ ನಂದೀಶನಾಮದಿಂದಂ
ಮುದವಡೆದು ಸುತನಾದ ತಚ್ಛಿವಂ ಬಳಿಕ
ಮೊದವಿರ್ದ ವೀರಮಾಹೇಶ್ವರಾಚಾರ ಕಾರಣಂ
ಪದೆದು ಕರ್ಣಾಟದೇಶದೊಳೊಪ್ಪುವಿಂಗಳೇಶ್ವರ ಬಾಗವಾಡಿಯೊಳಗೆ ೭

ಮಂಡಗೆಯ ಮಾದಿರಾಜನ ಭಾರ್ಯೆ ಮಾದಾಂಬೆ
ಹಿಂಡುನೋಂಪಿಗಳಿಂದೆ ನಂದಿಯಂ ಭಜಿಸಲ್ಕೆ
ಖಂಡೇಂದುಧರಗಣ್ತವಟ್ಟಾಯಕಂಗೆ ತಾನೇ ಬಸವನೆಂಬ ಪೆಸರಿಂ

ಚಂಡಕರಸುತನಾದನೆಂತೆನಲ್ ವಸುಮತೀ
ಮಂಡಲದೊಳಗೆ ಲಿಂಗಮೂರ್ತಿ ಮೂಡುವವೋಲ
ಖಂಡಸಂಕದೆ ನಳಿನಮೊಗೆವಂತೆ ಕಲ್ಗಳೊಳ್ ಕಸವರಂ ಜನಿಸುವಂತೆ ೮

ಚರಲಿಂಗ ಶಿವಲಿಂಗ ಯೋಗಮುಳ್ಳುದಱಿಂದೆ
ಸಿರಿದು ಕೂಡಲಸಂಗಮೇಶನೆಂಬೀ ಪೆಸರ್
ಕರಮೆ ಸಾರ್ಥಕಮಾದ ಸಂಗಮೇಶ್ವರನೆ ಸತ್ಪ್ರಾಣಲಿಂಗಮದಾಗಿಯೆ
ಇರುತೆ ಜನಿಯಿಸಲೊಡನೆ ಭಕ್ತಿ ಪುಟ್ಟಿದುದು ಭಾ
ಸುರ ಮಹಿಮೆ[1]ಯು[1]ದಱಿಂದೆ ಮುಂ ಪುಟ್ಟಿದುದು ನೋಡೆ
ಮುಸುಗಗಂಪುಗಳಂತೆ ಮುಂತು ಪಿಂತೆಂಬುದರ್ಕಿನಿತು ತೆಱಪೆಡೆದೋಱದೆ ೯

ಲಲಿತ ಶಿವಲಿಂಗಸೌಖ್ಯಾನುಭವವೇ ತನಗೆ
ಮೊಲೆಯ ಪಾಲಾಗೆ ಗುರುಪದದ ಜ್ಞಾನವೆ ಬೆಣ್ಣೆ
ವಿಲಸದಾಮ್ನಾಯ ಸೂಕ್ತಂ ತೊದಳ್ನುಡಿಯಾಗೆಯಾದಿಮಾರ್ಗಂ ತಪ್ಪದೆ
ನಲಿದು ಚರಿಯಿಪುದೆ ದಟ್ಟಡಿಯಾಗೆ ಕೂಸಾಟ
ಮೊಲವಿನಿಂ ಲಿಂಗಪೂಜಾಕ್ರಿಯೆಗಳಾಗಲಿಂ
ತಲಘು ನಂದೀಶ್ವರಂ ಬಸವಾಭಿಧಾನದಿಂ ಬಳೆಯುತಿರೆ ದಿನದಿನದೊಳು ೧೦

ನನಸು ಸರ್ವಜ್ಞಮೂರ್ತಿಗೆ ಸಕಲ ವಿದ್ಯಂಗ
ಳನಿಸುಳಿಯದಾಗಲತಿವೇಗದಿಂದುಪನಯನ
ವೆನಿಪ ಕರ್ಮವನುಳಿದು ಪೂರ್ವಾಶ್ರಯಂದೊಱೆದು ವೀರಶೈವಾಚಾರದಿಂ
ಮಿನುಗುತಿರೆ ಬಲದೇವ ದಂಡನಾಥಂ ತನ್ನ
ತನುಜೆಯಂ ಗಂಗಾಂಬೆಯಂ ವಿವಾಹಂಮಾಡ
ಲನಿತಱೊಳ್ ತನ್ನ ಸತಿಯುಂ ತನ್ನ ಸೋದರ್ಯೆಯುಂ ತಾನುಮೊಲವಿನಿಂದಂ ೧೧

ನಡೆತಂದು ಚನ್ನಕೂಡಲಸಂಗಮೇಶ್ವರನ
ಗುಡಿಯನೆಯ್ದುತೆ ಸಂಗಮೇಶ್ವರಂಗಂಡು ತ
ನ್ನೊಡಲನೀಡಾಡಿ ಧರೆ[2]ಯೊಳ್ ವಂದನಂಗೆಯ್ದು[2] ನುತಿಸುತಿರೆ ಸಂಗಮೇ[3]ಶಂ[3]
ಕಡುಕೂರ್ಮೆಯಿಂದೆ ಗುರುಮೂರ್ತಿ ವೇಷಂದಾಳು
ತೊಡನೆಯ್ದಿ ವಂದು ಮೆಯ್ದಡವಿ ಕೈವಿಡಿದೆತ್ತಿ
ಬಿಡದೆ ಬೋಧಿಸಿದನುಱೆ ವೀರಶೈವಾಚಾರಮಾರ್ಗಮಂ ಸಂತಸದೊಳು ೧೨

---

[1] ಯಿ (ಕ) [2] ಯೊಳಂದಂಗನೆಯು (ಕ) [3] ಶ್ವರಂ (ಕ)

ಪಿರಿದು ಹ[1]ರಿಸಂ[1]ದಳೆದು ಬಸವೇಶನತಿಭಕ್ತಿ
ಭರದಿಂದೆ ಮೃದುಮಧುರ ತಾನಮಾನಂಗಳಿಂ
ಗುರುಮೂರ್ತಿಯಂ ಪಾಡಿ ಪೊಗಳುತ್ತೆ ಸುಖಶರಧಿಯೊಳ್ ತೇಂಕಿ ಮುಳುಗಾಡುತೆ
ಇರುತಿರಲ್ ಬಲದೇವಮಂತ್ರಿ ಸುರಸದನಮಂ
ಕರಮೆಯ್ದೆ ಬಿಜ್ಜಳೇಶಂ ಬಸವನಂ ಕರೆಸಿ
ತುರಿತದಿಂ ದಂಡೇಶಪದವಿಯಂ ಕುಡೆ ರಾ[2]ಜ್ಯ[2]ಪದವಿಯಂ ಮಿಗೆ ತಾಳಿದಂ ೧೩

ಜನಪತಿಯ ರಾಜ್ಯಭಾರಂದಳೆದು ಬಸವೇಶ
ನನುನಯದೆ ಲಿಂಗಜಂಗಮಪೂಜೆಯಂ ಕರಂ
ಮನವೊಸೆದೊಡರ್ಚುತಂ ಮೃಡನ ಪಡಿಯೆನಿಪ ಮಡಿವಳ್ಳಮಾಚಾರ್ಯ ವಿಭು[3]ವು[3]
ವಿನಯನಿಧಿ ಕಿನ್ನರಬ್ರಹ್ಮದೇವಾರ್ಯನುಂ
ಕನದಮಲ ಸಕಲೇಶಮಾದಿರಾಜಾರ್ಯಂಗ
ಳೆನಿಪಿವರ್ ಮೊದಲಾದ ಸದ್ಭಕ್ತತತಿಯನತಿಭಕ್ತಿಯಿಂದಂ ಭಜಿಸುತೆ ೧೪

ಚನ್ನಬಸವೇಶ್ವರಂ ಶಿಷ್ಯನಾಗಿರುತಿರಲ್
ತನ್ನ ನಿಜತನುಮನಧನಂಗಳಂ ಭಕ್ತರ್ಗೆ
ಮುನ್ನೊಸೆದು ನಿರ್ವಂಚಕತ್ವದಿಂದಿತ್ತು ವೀರವ್ರತಾಚಾರಮಾರ್ಗಂ
ಚನ್ನಮದರ್ಗೆ ತನ್ನೊಳೆಸೆಯುತ್ತಿರಲ್ ಭಕ್ತತತಿ
ಗುನ್ನತಧನಂಗಳಂ ಕುಡುತಿಂತು ಭಕ್ತಿಸಂ
ಪನ್ನತೆಯೊಳೆಯ್ದೆ ಚೊಕ್ಕಳಿಕೆಯಿಂ ರಾಜಿಸುತ್ತಿರಲೊಂದು ವಾಸರದೊಳು ೧೫

ಬಸವಣ್ಣನಂ ಬಂದಿವಿಡಿಯವೇಳ್ಕೆಂದು ಸಂ
ತಸದೆ ತಸ್ಕರರೆಯ್ದೆ ತಮ್ಮ ಕಂಠಂಗಳೊಳ
ಗೆಸೆವ ವಾರ್ತಾಕದೊಳ್ಮಿಡಿಗಳಂ ಧೌತವಸ್ತ್ರಂಗಳಿಂ ಕಟ್ಟಿಕೊಂಡು
ಮಿಸುಪ ಭಕ್ತರ ನಡುವೆ ಬಂದಿರಲ್ ಬಸವೇಶ
ನಸಮ ಭಾವಸ್ಪ[4]ರ್ಶ[4]ಮಾತ್ರದಿಂದವರೆಲ್ಲ
ರಸವಸದೆ ಭಕ್ತರಾದರ್ ಬಾಣಲಿಂಗಂಗಳಾದವಾ [5]ಕಾ[5]ಯ್ಗಳೆಲ್ಲಂ ೧೬

ಮಗುಳ್ದು ಜಂಗಮದೇವನೊರ್ವನೆಳ್ತಂದು ನೆ
ಟ್ಟಗೆಯಿಾಗಡಿನ ಲಿಂಗಪೂಜೆಯವಸರಕೆ ಸೊಗ
ಸೊಗೆವ ಮುತ್ತಿನ ರಂಗವಲ್ಲಿ ಬೇಕೆನೆ ತದಾಗಮನವೇ ಭಾವಿಸಲ್ಕೆ

1 ರುಷಂ (ಗ) 2 ಜ (ಗ) 3 ವುಂ (ಗ) 4 ರುಷ (ಗ) 5 ವಾ (ಟ)

ವಿಗೆ [1]ಸಾತಿವ[1]ಳೆಯಾಗೆ ತನ್ನ ಲೋಚನಯುಗ್ಮ
ಮೊಗೆದ ಸಿಪ್ಪುಗಳಾಗೆ ಜೋಳದುರುರಾಶಿ ತೊ
ಟ್ಟಿಗೆ ಮೌಕ್ತಿಕಂಗಳಾಗಲ್ ನೆರೆದ ಜಂಗಮಕ್ಕೊಲ್ದಿತ್ತನಲ್ಕಱಿಂದಂ ೧೭

ಬಳಿಕೆ ಜಂಗಮದೇವನೊರ್ವನೆರೆಯಲ್ ಪೊನ್ನ
ಘಳಿಲನಾ ಬಿಜ್ಜಳನ ಭಂಡಾರದೊಳಗಿರ್ದ
ಲಳಿತ ವಸ್ತುವನೀಯಲದನೆಯ್ದೆ ಬಿಜ್ಜಳಂ ಕೇಳ್ದು ಕಡುಗೋಪದಿಂದಂ
ತಿಳಿಯದೆನ್ನೊಡವೆಯಂ ಕುಡಿವೆನಲ್ ಮುಂದಿರ್ದ
ಪೊಳೆವ ಪೆಟ್ಟಿಗೆಗಳೊಳ್ ನಂದಿಯುಂಡಿಗೆಯು ಪೊ
ನ್ಗಳ ತೋಱೆ ಬಸವಮಾಹಾತ್ಮ್ಯಮಂ ಕಂಡು ಭಕ್ತರ್ ತುಷ್ಟರಾದರೊಸೆದು ೧೮

ಹರನೊಂದುವಾಸರಂ ಚರಲಿಂಗಮಾಗೆಯ್ದಿ
ನಿರುತಮಾಗೆನಗೊಂದು ನೊಸಲಕಣ್ಣಂ ಡುವುದೆನೆ
ದರಹಾಸಮುಣ್ಮುತ್ತೆ ಸಂಗಮೇಶ್ವರ ನಿನಗೆ ನೊಸಲಕಣ್ ಮುನ್ನೆವುಂಟು
ಪಿರಿದು ನೋಡಿಮೆನುತ್ತೆ ಕನ್ನಡಿಯ ತೋಱಿ ಸಡ
ಗರದಿಂದೆ ಪಣೆಗಣ್ಣ ಕಂಡು ತಚ್ಚಿವನಾಗ
ಭರದಿಂದೆ ನಿಜಮೂರ್ತಿಯಂ ತಳೆದನಕ್ಕಜಂಬಡೆ ಭಕ್ತನಿವಹಮೊಸೆದು ೧೯

ಬಸವಣ್ಣನೊಂದುದಿವಸಂ ಬಿಜ್ಜಳನ ಸಭೆಯೊ
ಳೆಸೆಯುತಿರೆ ಗುಂಡುಬೆ[2] ಕಾಳವ್ವೆಯೆಂಬೊಳ್ವೆಸರ್
ನಿಸದಮಾಗುಳ್ಳ ಗೊಲ್ಲಿತಿಯೊರ್ವಳಳೆಮಾಱಲಾಗಿ ಬೀದಿಯೊಳ್ ಬರುತ್ತೆ
ಕೆಸಱೊಳಡಿ ಜಾಱಿ ಬೀಳ್ವೆಡೆಯೊಳಸವಸದಿಂದೆ
ಬಸವ ಬಸವಾ ಎನಲ್ಕಲ್ಲಿ[3]ರ್ದು[3] ಕರಮೆತ್ತಿ
ಬಿಸವಂದದಿಂದಳೆಗೊಡಂ ನೆಲಕೆ ಬೀಳದಂತೊಸೆದಾಂತನಂಬರದೊಳು ೨೦

ಅದನೆಯ್ದೆ ಬಿಜ್ಜಳಂ ಕಂಡಕ್ಕಜಂಬಡುತೆ
ಪದೆದು ಬೆಸಗೊಳೆ ಬಸವನೆಂದುದಂ ಕೇಳುತ್ತೆ
ಮುದದಿನವಳಂ ಕರೆಸಿ ಕೇಳ್ದನತಿದೂರದೊಳಗಿರ್ದ ನಿನ್ನಳೆಗೊಡನನು
ಒದಗಿ ತಾನೆಂತು ಪಿಡಿದಂ ಬಸವನೆನೆ ಪೇಳ್ದ
ಳುದಿತಪ್ರಮೋದದಿಂ ತದ್ವನಿತೆ ಭೂಮಿಪಂ
ಗಿದು ಚೋದ್ಯಮೇ ಶಿವಂ ಭಕ್ತರ್ಕಳೆಲ್ಲಿರ್ಪರಲ್ಲಿ ಬಸವಣ್ಣನಿರ್ಪಂ ೨೧

---

1 ಸಾರಿವ (ಕ) ಸ್ವಾತಿಮು (ಗ) 2 ಡವೆ (ಟ) 3 ದ್ದು (ಗ)

ಇದು ಸತ್ಯವೆಂತೆನಲ್ ಕೇಳ ಬಿಜ್ಜಳರಾಯ
ಪಡೆದು ಮೊನ್ನಿನ ಸವಳ್ತಡೆ ಸೊನ್ನಲಿಗೆಗೆಯ್ದಿ
ಮುದದಿನಳಿನೂಱುವೆಡೆ[1]ಯೊಳ್ ಕೇಳ್ದಿ[1]ನಲ್ಲಿರ್ದ ಸಿದ್ಧರಾಮೇಶನೊಡನೆ
ವಿದಿತ ಭಕ್ತರ್ ನುಡಿದರೆಲೆ ಸಿದ್ಧರಾಮೇಶ
ಸದಮಲಾತ್ಮಕ ಬಸವನಿರವನುಸುರೆಮಗೆನ
ಲ್ಕದನೀಶನಿಂ ಕೇಳ್ದು ಬಂದು ಪೇಳ್ದಪೆನೆಂದು ಶಿವನೆಡೆಗೆ ಪೋದನೊಸೆದು ೨೨

ಶಿವನೆಯ್ದೆ ಸಿದ್ಧರಾಮಯ್ಯನೆಳ್ತಂದುದಂ
ತವೆ ಅಱಿದು ತನ್ನೊಡಲ ಬಗಿದು ಬಸವನ ತೋಱೆ
ಶಿವೆ ಬೆದಱೆ ವಿಸ್ಮಯಂಬಡೆ ಶಿವನ ಹೃದಯದೊಳ್ ಶಿವನನತಿ ನುತಿಸುತಿರ್ಪ
ಭವರಹಿತ ಬಸವನಂ ಪರಮೇಶ್ವರಂ ನುಡಿದ
ನವನಿಯೊಳ್ ಭಕ್ತರಾರೆಲೆ ಬಸವ ಪೇಳೆನಲ್
ಭುವನದೊಳಗಾನೊರ್ವನೇ ಭಕ್ತನುಳಿದ ಭಕ್ತರ್ ನಿನ್ನ ಸದೃಶವೆನಗೆ ೨೩

ಎನುತಿರ್ಪ ಬಸವ ಮಾಹಾತ್ಮ್ಯವಂ ಗಿರಿಸುತೆಗೆ
ವಿನಯದಿಂ ಶಿವನೊರೆದನತಿಶಯೋಕ್ತಿಗಳಿಂದೆ
ನನಸಾಗಿ ಯಸ್ಯ ವಕ್ತ್ರೇ ಸ್ಥಿತಂ ದೇವಿ ಬಸವೇತ್ಯಕ್ಷರತ್ರಯವೆನೆ
ಮಿನುಪ ಬಸವನ ಮಹಿಮೆಯಂ ಪೇಳ್ವುದೇಂ ಗಿರಿಜೆ
ಎನುತಿರ್ಪ ಶಿವನಿಂದೆ ಬೀಳ್ಕೊಂಡು ಸೊನ್ನಲಿಗೆ
ಗನು[2]ವಿನಿಂ[2] ಸಿದ್ಧರಾಮೇಶ್ವರಂ ಬಂದು ಶಿವನುಸಿರ್ದಂತೆ ಪೇಳ್ದನೊಸೆದು ೨೪

ಆದಱಿಂದೆ ಬಸವಮಾಹಾತ್ಮ್ಯಕಿದು ಸೋಜಿಗಮೆ
ವಿದಿತ ಬಿಜ್ಜಳರಾಯ ಎಂದು ಪೇಳಲ್ಕವಳ
ಮುದದಿಂದೆ ಕಳುಪಿ ಬಸವೇಶಂಗೆ ಬಿಜ್ಜಳಂ ವಂದಿಸಿದನಿತ್ತ ಮತ್ತಂ
ಪಡೆದು ಬಸವೇಶ್ವರನ ಸತಿಯ ಕಿವಿಯೊಳೆ ರನ್ನ
ಪುದುಗಿ[3]ರ್ಪ[3] ಕನ್ನವುರವಂ ಬೇಡೆ ಜಂಗಮಂ
ಸದಮಲಾತ್ಮಕ ಬಸವನಂಗನೆಯ ಕಿನಿಸಿ ಕಿವಿಯೋಲೆಗಳೆದಿತ್ತವರ್ಗೆ ೨೫

ಮುಗುಳ್ದೊಂದುವಾಸರಂ ವಿಪ್ರರೆಲ್ಲರ್ ನೆರೆದು
ನೆಗಳ್ದ ಶಿವನಾಗಮಯ್ಯನ ಹೀನಕುಲವೆನಲ್
ಸೊಗಸಿನಿಂದಾತನಂ ಕೈವಿಡಿದು ಕೊಂಡೊಯ್ದು ಬಿಜ್ಜಳ ಸಭಾಮಧ್ಯಮಂ

1 ಯೊಳೇಳ್ವ (ಕ) 2 ಸಯದೆ (ಕ) 3 ರ್ದ (ಗ)

ಪುಗುತಂದು ನುಡಿದನೆಲೆ ವಿಪ್ರರಿರ ಕೇಳಿಮಿ
ನ್ನೊಗೆದ ಭೂಸುರರ್ಗಿಂದ[1]ಮಿಾ[1] ಪರಮಪಾವನನೆ
ಮಿಗುವ ಕುಲವೆಂತೆನಲ್ ಪರುಸ[2] ಸೋಂಕಿದ ಲೋಹದಂತೆ ಪರಿಭಾವಿಸುವೊಡೆ ೨೬

ಸಲೆ ಶೈಲರತ್ನಾದಿ ಲಿಂಗಪ್ರತಿಷ್ಠೆಯಂ
ನಲಿದು ವಿಧ್ಯುಕ್ತದಿಂ ನಿಜಪೆ ಮತ್ತಾ ಲಿಂಗ
ಕುಲದೊಳಗೆ ಹೀನಾಧಿಕತೆಯುಂಟೆ ಕರ್ಮ[3]ಚಂ[3]ಡಾಲರಿರ ಕೇಳಿಮಿನ್ನು
ಮಲಯುಕ್ತ ವಿಗ್ರಹರ್ ವಿಪ್ರ[4]ರೀ[4] ಸದ್ಭಕ್ತ
ನಲಘು ಮಲಹರಸುಪ್ರಸಾದವಿಗ್ರಹನುಂತೆ
ಲುಲಿತ ಭವದುಃಖಿಗಳ್ ವಿಪ್ರರೀ ಸದ್ಭಕ್ತನಭವಭಕ್ತಂ ಸಂತತಂ ೨೭

ಗುರುಹಸ್ತಕಮಲಸಂಜಾತನಘಕುಲತಿಮಿರ
ಹರಿದಶ್ವನಭವಪ್ರಸಾದಾಮೃತಾಂಗನು ರು
ತರಮಪ್ಪ ಶಿವನಾಗಮಯ್ಯಂಗೆ ಸರಿಯೆ ಮತ್ತಿನ ಸಪ್ತಧಾತ್ವಂಗ[5]ರು[5]
ಇರದಿನ್ನೆ ದೃಷ್ಟವಮಂ ತೋಱುವೆನೆನುತ್ತೆ ಭಾ
ಸುರ ಬಸವನೊಯ್ಯನಾ ಶಿವನಾಗಮಯ್ಯಂಗ
ಳುರು[6]ಕರಮನೊತ್ತೆ[6] ದಿವ್ಯಾಮೃತಂ ದೆಸೆದೆಸೆಗೆ ಪಸರಿಸಿತ್ತೊಲವಿನಿಂದೆ ೨೮

ಬಸವ ಸದ್ಭಕ್ತಿಸುರಧೇನು ಸಮ್ಮೋದದಿಂ
ದೊಸೆದು ಸುಧೆಯಂ ಕರೆದನೋ ಎನಲ್ ಸಭೆಯೊಳಗೆ
ಬಿಸವಂದಮಾಗಿ ಪಾಲ್ ಮಡುಗಟ್ಟೆ ಬಿಜ್ಜಳಂ ಮೊದಲಾದವರ್ ಕಾಣುತೆ
ಒಸೆದು ನುತಿಸುತೆ ವಂದಿಸುತ್ತಿರಲ್ ಬಸವಂಗೆ
ಬಸವಳಿಯುತಾ ದ್ವಿಜರ್ ಪೊಡೆಗೆಡೆಯೆ ಭೂಮಿಯೊಳ್
ನಸುನಗುತೆ ಬಸವೇಶನೊಪ್ಪಿರ್ದನಾ ಭಕ್ತನೊಡನೆ ಮತ್ತೊಂದು ದೆವಸಂ ೨೯

ಮಿಗೆ ಮಿಂಡಜಂಗಮಂ ಬಂದು ಬಸವೇಶ್ವರನ
ಸೊಗಯಿಸುವ ಯುವತಿ ಗಂಗಾಂಬೆಯುಟ್ಟಿರ್ದ ಪೊಸ
ದುಗುಲ ಸೀರೆಯ ಬೇಡೆ ಬಸವೇಶ್ವರಂ ತೆಗೆದು ಕುಡುತಿರಲ್ ಬಸವೇಶನ
ನೆಗಳ್ದ ಕರಸಂಸ್ಪರ್ಶ[7]ದಿಂ[7] ಸೀರೆಗಳ ರಾಸಿ
ಬಗೆಯೆ ಪಿರಿದಾಗೆ ತತ್ಕಟಿಯೊಳೊಂದಂಬರಮ
ದಗುಲದಿರೆ ತಜ್ಜಂಗಮಂ ಮೊಟ್ಟೆಗಟ್ಟಿ ಕೊಂಡೊಯ್ದನಾ ಚೇಲಂಗಳಂ ೩೦

---

[1] ಯಾ (ಕ) [2] ರಿಸ (ಕಟ) [3] ಚಾಂ (ಗ) [4] ನೀ (ಗ) [5] ಳು (ಗ) [6] ತರಮನೋ (ಕ) [7] ನಂ (ಗ)

ಮರಳಿ ಮತ್ತೊಂದುದಿವಸಂ ಬೋವರೊಡಗೂಡಿ
[1]ನೆ[1]ರೆದು ಶಂಭುಪ್ರಸಾದಂ ತನಗೆ ತಕ್ಕುದೆಂ
ದುರವಣಿಸಿ ನುಡಿಯೆ ಚಂಡೋರಗಪ್ರಮುಖ ವಿಷನಿಕರಮಂ ಕೊಡಿಯವರ್ಗೆ
ಧರಿಸಿಮೆನುತುಂ ಕುಡಲ್ಕವರೆಯ್ದೆ ನೋಡಿ ಭಾ
ಸುರ ವಿಷಮಿದೇಂ ಮುನ್ನೆ ಶಿವನೊಸೆದು ಕಂಠದೊಳ
ಗಿರಿಸಿದ ವಿಷಂ ನಾಡೆ ಪೊಱಮಟ್ಟುದೋ ಲೋಕನಿಕರಮಂ ತವಿಸಲೆಂದು ೩೧

ಹರನ ಪಣೆಗಣ್ಣಗ್ಗಿಯೆಪ್ಪುಮಂ ಸುಡಲೆಂದು
ಭರದೆ ಕಿಡಿದೋಱಿದುದೊ ಜಲಧಿಯೊಳ್ ನೇರ್ವಟ್ಟು
ಕರಮೆಸೆವ ಬಡಬಾಗ್ನಿಯೆಮ್ಮೆಲ್ಲರಂ ಸುಡಲ್ ಪೊಱಮಟ್ಟುದೋ ಕೋಪದಿಂ
ನಿರುತಮಿದನೆಯ್ದೆ ನೆನೆದೊಡೆ ಕರುಳ್ ತುಂಡಿಪುದು
ಪಿರಿದು ಕೊಂಬವನಾವನೆನುತೆ ಬೇಡರ್ ಸರಿಯೆ
ಗರಳಮಂ ಲಿಂಗಾರ್ಪಣಂಮಾಡಿಕೊಂಡನಾ ಬಸವೇಶನಳ್ತಿಯಿಂದಂ ೩೨

ಬಳಿಕೆ ಬಸವೇಶ್ವರನ ರಾಣಿಯರ್ ಮನವೊಸೆದು
ಲಲಿತಗರಳಪ್ರಸಾದಂಗೊಂಡರಳ್ಕಱಿಂ
ದಳುಕದಲ್ಲಿರ್ದ ಭಕ್ತಪ್ರವರಮಿಾಂಟದುದು ಮನೆವಾರೆ ಭಕ್ತಿಯಿಂದಂ
ಇಳೆಯೊಳಗೆ ಬಸವದಂಡೇಶನಿಂತೆಸೆಯುತಿರ
ಲಳಘುಸದ್ಭಕ್ತಿ ಪಾದೋಧಿವೇಳೆಯ ದಾಂಟೆ
ಘಳಿಲನವನಿಯ ತಿಂಬೆ ಜಂಗಮಾರ್ಚನೆಗೆಯ್ವುತಿರುತೊಂದು ವಾಸರದೊಳು ೩೩

ಲಿಂಗಾರ್ಚನಕ್ರಿಯಾಸಕ್ತಿಯಿಂದೀಶ್ವರನ
ಹಿಂಗದಾ[2]ನಂದ[2]ರಸದೊಳೆ ಮುಳುಗುತೀಕ್ಷಿಸುತೆ
ಲಿಂಗಸುಖಸುಧೆಯನತ್ಯಾದರದಿನಾಸ್ವಾದನಂಗೆಯ್ದು ಮಿಗೆ ದಣಿಯುತೆ
ಲಿಂಗಮಂ ಪರಿಸನಂಗೆಯ್ದುಬ್ಬಿ ತೂಗಾಡು
ತಂಗಗುಣನಿಕರಮಂ ತೊಲಗನೂಂಕುತೆ ಮಹಾ
ಲಿಂಗದೊಳಗವಿದವಿದು ನಾಡೆ ತವಿಲಾಗುತ್ತೆ ಲೀಲಾಬ್ಧಿಯೊಳ್ ಮುಳುಗುತೆ ೩೪

ಪಿರಿದುಮೆಲ್ಲಾ ವಿಷಯುದೊಡಗೂಡಿ ಮನಮಂತೆ
ಭರದೆ ಲಿಂಗದೊಳವಿದು ನಿಶ್ಚಲತ್ವಂದಳೆಯೆ
ಕರಯುಗಂ ಮಾಳ್ಪ ಸತ್ಕ್ರಿಯೆಯುಱಿತಯೆ ಗದ್ಗದಂ ನುತಿವಿಸರಮಂ ಕಿಡಿಸಲು

---

[1] ವೆ (ಕ) [2] ಲಿಂಗ (ಗ)

ಸರಸಮಹರ್ಷಾಂಬು ತುಳ್ಕಾಡೆ ಕಡೆಗಣ್ಗ[1]ಳೊಳ್
ಸು[1]ರಿಯೆ ಬಲೆಸೇಣನೊಬ್ಬುಳಿಯಪ್ಪ ಜಾಲದಂ
ತುರುಕಿರಣವಿಸರಂಗಳೊಡಗೂಡಿಯಸ್ತಮಿಸ ಭಾನುವಿನ ಭಂಗಿಯಂತೆ ೩೫

ಲಿಂಗದೊಳ್ ಸರ್ವೇಂದ್ರಿಯಂಗಳೊಡಗೂಡಿಯು
ತ್ತುಂಗಮನಮಾಪಗಂ ಲಯಮಾಗೆ ತನ್ನು[2]ಮಂ[2]
ಮುಂಗಡೆಯೊಳಿಸೆವಾ ಜಗನ್ನಿಕರಮುಮನುಂತೆ ಮಱತದು ಸಲ್ಲೀಲೆಯಿಂದಂ
ತುಂಗ ಹೃದಯಾಷ್ಟದಳಕಮಳಕರ್ಣಿಕೆಯೊಳಗೆ
ಪಿಂಗದುಜ್ಜ್ವಲಿಪ ಸತ್ಪ್ರಾಣಲಿಂಗದೊಳೊಲ್ದ
ಡಂಗೆ ಬಾಹ್ಯಕ್ರಿಯಾಸಮುದಯಂ ಯೋಗಾನುಭವಸುಖದೊಳಿಸೆದಿರ್ದನು ೩೬

ಪಿರಿದೆಸೆವ ಶಿವಯೋಗನಿದ್ರಾನ್ವಿತನ ಬಸವ
ನುರುಭಾವಮಂ ಕಂಡು ಚನ್ನಬಸವೇಶ್ವರಂ
ಹ[3]ರಿಸ[3]ದಿಂದಂ ತುಳಿಲ್ಗೆಯ್ದು ನುತಿಸಿದನೀ ಶಿವಾನಂದಯೋಗಸುಖದ
ಶರನಿಧಿಯೊಳೋಲಾಡುತೆಸೆದಿರ್ಪುದೆನ್ನ ಸ
ದ್ಗುರುಮೂರ್ತಿಗಲ್ಲದಾರ್ಗುಂಟು ಮತ್ತಿನ ಯೋಗಿ
ವರರ್ಗೆ ಜಡನಿದ್ರಾಲುಗಳ್ಗೆ ದೊರೆಕೊಂಬುದೇ ಶಿವಯೋಗಸಾಮರಸ್ಯ ೩೭

ತೆರೆಯಡಂಗಿದ ಶರಧಿಯಂತೆ ಚರಿಯಿಸದಿರ್ಪ
ಮರುತನೆಂತಂತೆ ನಿರ್ಮೇಘಮಾದಾಕಾಶ
ದಿರವಿನಂತೆವೊಲಖಿಳ ದುಷ್ಟೇಂದ್ರಿಯಪ್ರತತಿಗಳ ಚಲನಮೆಯ್ದೆ ಅಱತು
ನಿರುಪಮಾನಂದಯೋಗದ ನಿದ್ರೆಗೂಡಿರ್ಪ
ಪರವಶೀಭಾವಮೋ ಅಲ್ತುಲ್ತು ಕರಪೀಠ
ಮುರುಕಱಣವೆಂದು ಶಿವಲಿಂಗಮಂ ಹೃದಯಾಬ್ಜದೊಳ್ ನಿಱಸಿದಿರವೊ ನೋಡೆ ೩೮

ಲಲಿತ ಶೀತೋಷ್ಣವಾರಿಗಳಿಂದೆ ಲಿಂಗಕ್ಕೆ
ನಲಿದು ಮಜ್ಜನಮೆಸಗೆ ಹಿತಮಲ್ತೆನುತ್ತೆ ನಿ
ರ್ಮಲ ಚಿದಂಬರ ಲಸಚ್ಚಂದ್ರನಿಂದೊಸರ್ವಮರ್ದಿನಿಂ ಮಜ್ಜನಮನಳ್ಕಱಿಂ
ಸಲೆ ಮಾಡುವಂದಮೋ ವೃಕ್ಷಕುಸುಮಂಗಳಿಂ
ದಲರ್ದು ಶಿವನಂ ಪೂಜೆಗೆಯ್ಯಲೊತ್ತುಗುಮೆನು
ತ್ತೊಲವಿನಿಂ ಚಿದ್ವ್ಯೋಮದಿಂದೊಗೆದ ಸಾಸಿರೆಸಳಂಬುಜದೆ ಪೂಜಿಪಿರವೋ ೩೯

---

1 ದೊಳ್।ಸ (ಗ)  2 ಮಂ (ಗ)  3 ರುಷ (ಗ)

ಮಿಗೆ ಧೂಪಧೂಮದಿಂ ಲಿಂಗತನುಕಾಂತಿ [1]ಕಂ[1]
ದುಗುಮೆನುತೆ ಚಿದ್ವಹ್ನಿಯಿಂ ದಶಾಂಗಮನುಳಿದು
ನೆಗಳ್ದು ಧೂಪಮನರ್ಪಿಸುವ ಪಾಂಗೊ ನೀರಾಜನಜ್ವಾಲೆಯುಷ್ಣಮೆನುತಿ
ಬಗೆಯುತಾತ್ಮಜ್ಯೋತಿಯಿಂದ ನೀರಾಜನಮ
ನಗಲದೆತ್ತುವ ಭಂಗಿಯೋ ಕ್ಷಾರಮಾಗಿ ತೊ
ಟ್ಟಗೆ ತೋರ್ಪ ನೈವೇದ್ಯಮಂ ಬಿಟ್ಟು ಪ್ರಾಣಂಗಳುಪಹಾ[2]ರವೀ[2]ವಂದಮೊ ೪೦

ಪೂಜೆಗೆ ಮಾಳ್ಪುಪಚಾರಸಮಿತಿಯೆಲ್ಲಂ ನೋಡೆ
ತಜಾಸಂದ ಪೂಜಗಣುಪಚಾರಮೆಂದವಸಿಕ್ಕಿ
ಮಿಜುಪಂತರಂಗಪೂಜೆಯನೀಶ್ವರಂಗೆ ಮದ್ಗುರು ಸಮೆಯುತಿರ್ಪಂದಮೊ
ಅಜಾಯೆನದುಮಲ್ಲದೆಯುಮಂತೆ ಶಮಿತೇಂದ್ರಿಯದ
ತೆಜನೆ ಯಮಮಾಗೆ ಶಿವನಲ್ಲದನ್ಯವನೇನ
ನಜಾಯದುದೆ ನಿಯಮಮಾಗಲ್ ಭಾವಿಸಲ್ಕೆ ಲೋಕದೊಳಿದುಂ ಮಿಗೆ ಚೋದ್ಯವು ೪೧

ಶಿವಯೋಗನಿದ್ರಾಸುಸಂಗತೇಚ್ಛಾಸನಮೆ
ತವೆ ಆಸನಮದಾಗೆ ಮತ್ತೆ ಮುದಶ್ವಾಸ
ನಿವಹಮೇ ನಾಡೆ ಪ್ರಾಣಾಯಾಮಮಾಗಲಂತ ಶರ್ವವಿಷಯವೃತ್ತಿಯಲ್ಲಿ
ತವಕದಿಂ ಪೂರಿತ[3]ಮು[3]ಮಾಗೆ ಪ್ರತ್ಯಾಹಾರ
ಮವಿರತಂ ತಾನದೆನಿಕುಂ ಲಿಂಗಮಂ ರಾಜಿ
ಸುವ ಜಂಗಮನನಂತರಂಗದೊಳಗೀಕ್ಷಿ[4]ಪುದೆ[4] ಬಳಿಕ ಮೂರ್ತಿಧ್ಯಾನ[5]ವ್ಮ[5] ೪೨

ಸಾರಾಂಗಲಿಂಗ ಪ್ರಸನ್ನಸದ್ಭಾವದಿಂ
ಸಾರೂಪ್ಯಮಾದ ಚಿಹ್ನಮೆ ಧಾರಣಮದಾಗೆ
ಚಾರುತರ ಶಿವಯೋಗನಿದ್ರೆಯೊಳಗಿರ್ದುದೆ ಸಮಾಧಿಯಾಗಲ್ ಭಾವಿಸೆ
ವೀರಶೈವಾಧೀಶ ಬಸವದಂಡೇಶನೀ
ತೋರಣದೊಳಷ್ಟಾಂಗಯೋಗ ಸದ್ಭಕ್ತಿಯಿಂ
ಕ್ರೂರಪ್ರಪಂಚನೀಕ್ಷಿಸದೆ ಲಿಂಗದೊಳಡಂಗಿರ್ಪಿರವೊ ತನ್ನ ಮಜಿಅದು ೪೩

ಅದುಮಿಲ್ಲದೆಯುಮಂತೆ ನೆನೆವ ತಾನುಂ ತನ್ನೊ
ಳೊದವಿರ್ದ ನೆನಪುಮಂತಯಾತ್ಮನಲ್ಲಿ ಸ
ಮ್ಮದದಿಂ ವಿಲೀನಮಾಗಲ್ ನೋಳ್ಪ ತಾನುಮಂತಾ ನೋಟಮುಂ ಬಳಿಕ್ಕಂ

---

[1] ಜುಂ (ಗ) [2] ರಂಗಳೀ (ಗ) [3] ಮ (ಗ) [4] ಸುತೆ (ಕಗ) [5] ವುಂ (ಕಗ)

ವಿದಿತ ದೃಶ್ಯದೊಳಡಂಗಲ್ ನುಡಿವ ತಾನುನುಂ
ತೊದವಿದೊಳ್ನುಡಿಗಳುಂ ವಾಚ್ಯನೆನಿಸುವ ಶಂಭು
ಪದದೊಳವಿಯಲ್ ಕಾಮಮುಂ ಕಾಮಿಸುವ ತಾನುಮಾ ಕಾಮ್ಯ ಶಿವನೊಳವಿಯೆ ೪೪

ಜ್ಞಾತೃವೆನಿಪಾತ[1]ನುಂ ಜ್ಞಾನಮುಂ ಜ್ಞೇಯಮೆನಿ
ಪಾತತಾಮಲ ಶಿವನೊಳಗೆ ಪುಗಲ್ ಭಾವಿಸಲ್
ಪ್ರೀತಿಯಿಂದಱಿವ ತನ್ನಂ ಮತ್ತಮಾ ಅಱಿವನಱಿತ ಮಱಿತದು ಬೆಳಗುವಡೆದು
ಸಾತಿಶಯದಿಂದಮಿರ್ಪಿರವೊ ತನ್ನಯ ದೃಷ್ಟಿ
ಯೋತು ಶಿವನಂ ನಟ್ಟು ನೋಡೆ ತದ್ದೃಷ್ಟಿಯ[2]ಭಿ
ಘಾತದಿಂದಂ ಶಿವಂ ನೋವನೆನುತುಂ ಭಾವದೃಷ್ಟಿಯಿಂ ನೋಳ್ಪಂದಮೊ ೪೫

ಕರದಿಂದೆ ಪರಿಸನಂ ಮಾಡೆ ಲಿಂಗಾಂಗಮದು
ಪಿರಿದು ನೋವ್ವುದೆನುತ್ತೆ ಮನದಿಂದೆ ಲಿಂಗಮಂ
ಹ[3]ರಿಸ[3]ದಿಂ ಪರಿಸನಂ ಮಾಳ್ಪ ಭಂಗಿಯೊ ರೋಮಪುಳಕಿತಾಂಗದಿನಪ್ಪಲು
ಹರನಂಗಮೆಯ್ದೆ ಕಂದುಗುಮೆನುತ್ತಾತ್ಮನಿಂ
ಭರದಿನಾಲಿಂಗಿಸುವ ಪರಿಯೊ ನುತಿವಿಸರದಿಂ
ದಿನದಕ್ಕರಂಗಳೊತ್ತುಗುಮೆನುತೆ ಶಿವನನುಸಿಕನೆ ನೆನೆವ ಪಾಂಗೊ ಮತ್ತಂ ೪೬

ಯುವತಿಯೊರ್ವಳ್ ಮುಳಿದು ತೊಲಗಿದಾತ್ಮೇಶ್ವರನ
ತವಕದಿಂದಾವಗಂ ಮನ[4]ಮಂ[4]ಟೆ ನೆನೆಯಲ್ಕೆ
ಯುವತಿತ್ವಮಂಡುಗಿ ಪುರುಷತ್ವಮೆಯ್ದುಗುಮಂತೆ ಭೃಂಗಕೀಟನ್ಯಾಯದಿಂ
ತವೆ ಅದಱಿನೆನಗೆ ರತಿಕೇಳಿ ಕಿಡುಗುಮೆನುತ್ತು
ಮವಿರತಂ ತನ್ನ ಮನದನ್ನನಂ ನೆನೆಯುತುಂ
ಸುವಿನಯದೆ ಮತ್ತೆ ನೆನೆಯಲ್ಕಂಜುತುಂ ಸ್ವತಂತ್ರದಿನಿರ್ಪ ಪೆಣ್ಗಳಿರ[5]ವಂ[5] ೪೭

ನೆನೆಯಲ್ಕೆವೇಡದಂತಿರ್ಕೆನ್ನ ಗುರುಮೂರ್ತಿ
ಮನದೊಳನಿಶಂ ಹರಸ್ಮರಣೆ ನೆಲೆಗೊಂಡುದಱಿ
ನೆನಸುಮಾ ರೂಪಪ್ಪೆನದಱಿಂದಮಣಿಯರು ಸ್ವಾಮಿಭೃತ್ಯತ್ವಮುಳಿಗುಂ
ಎನುತಲುಂ ನೆನಪು ಮಱವೆಗಳೆರಡನುಳಿದು-ತೊ
ಟ್ಟನೆ ನೆನಪುಗೂಡೆ ತಾಂ ಶಿವನೊಳಗೆ ವ್ಯೆಗಱಿತದು
ಮಿನುಗುತಿರ್ಪಂದಮೋ ಚೋದ್ಯಮಿದು ಭಾವಿಸಲ್ಕರಿದು ಮತ್ತಿದುಮಲ್ಲದೆ ೪೮

---

[1] ತೃ (ಗ) [2] ವಿ (ಕ) [3] ರುಹ (ಗ) [4] ವಂ (ಗ) [5] ವೊ (ಗ)

ಬಳಿಕೊರ್ವಳಂಗನೆ ಸುಸಿಲ್ಗಲಹದಿಂ ತನ್ನ
ನುಳಿದ ಕಾಂತನ ಕರೆಯಲಟ್ಟಿದೊಡೆ ತನ್ಮನಂ
ಘಳಿಲನಾ ರಮಣನೊಡಗೂಡಲ್ಕೆ ತತ್ಕಾಂತೆ ಕಿನಿಸುತ್ತೆ ಪಾಣಿನಿಯನು
ಪಳಿದಳ್ ನಪುಂಸಕಂ ಮನವೆಂದು ಪೇಳಲೆಂ
ತಳವಕ್ಕುವೆನುತಿರ್ಪ ವೇಳೆಯೊಳ್ ಮನವೆಯ್ದಿ
ತಿಳಿಯೊಳೀಪರಿ ಮುಗ್ಧೆಯರ ಕೂರ್ಮೆಯಿಂತಲ್ಲ ಮದ್ಗುರುವಿನಾ ನೇಹವು ೪೯

ಗುರುಮೂರ್ತಿಯಾದೀಶ್ವರನ ಕೂಟದಲ್ಲಿ ಭಾ
ಸುರ ಮನಮನೆಂತುಂ ನಪುಂಸಕಂ ಎನಲಾಗ
ದುರು ಪುನ್ನಪುಂಸಕಗುಣಂ ಮನಮದೆಂದು ಬಗೆವೊಡೆ ಕಾಮಿಯಪ್ಪೆನೆಂದು
ಪಿರಿದದಂ ಬಗೆಯದೇ ಗಂಡರ್ಗೆ ಗಂಡನ
ಪ್ಪಿರವುಳ್ಳ ಮತ್ಪತಿಯ ಕೂಟವಮಂ ಪುರುಷರೇ
ಕರವೆ ಬಯಸುತ್ತಿರ್ಪರೊಳ್ಪಿಂಡಿರೊಲ್ದು ನಲ್ಲರ ರತಿಯ ಬಯಸುವಂತೆ ೫೦

ಪುರುಷರ್ಕಳಿಂತು ಹರನೊಡನೆ ಕೂಡುವರೆನ
ಲ್ಕರಿದಾವುದೀ ಮನಂ ಶಿವನೊಡನೆ ರಾಗದಿಂ
ಬೆರಸುವುದೆನುತ್ತೆ ಮನದಿಂ ಮು[1]ನ್ನೆ[1] ವಿಭುವಿನೊಳಗವಿದು ನೆಲಸಿ ಮಗ್ನನಾಗಿ
ಪಿರಿದು ಪೊರಗಣಕಾರ್ಯ ನಿಕುರುಂಬನುಂ ತವಿಸಿ
ಹ[2]ರಿಸ[2]ದಿಂ ಮರವಟ್ಟು ತನ್ನ ಮೆಯ್ಮರೆದು ಬಂ
ಧುರ ಶಿವಾನಂದ ಪಾಥೋನಿಧಿಯೊಳೆಸೆದಿರ್ಪ ಪಾಂಗೊ ಮತ್ತದುಮಲ್ಲದೆ ೫೧

ಸಲೆನೋ[3]ಟ[3] ಚಿಂತೆ[4]ಗಳ್[4] ನಿಡಿದಾದ ನಿಶ್ವಾಸ
ಮಲಘುಜ್ವರಂ ಕಾರ್ಶ್ಯಮಾಹಾರವೊಲ್ಲದುದು
ಬಲಿದ ವಿಕಳತೆ ಮೌನ ಮೂರ್ಛೆಗಳ್ ಮೃತಿಯೆನಿಕುವಿವು ಪತ್ತವತೆಗಳೆನಿಕುಂ
ತೊಲಗಿರ್ದ [5]ಪೆಣ್ಗ[5]ಳೊಳ್ ಪುರುಷರೊಳಗಿವು ತೋರ್ಕು
ಮೊಲವಿನಿಂ ಪತಿಯನುಳಿಯದೆ ಸಾಯದೇ ಸತ್ತ
ಲಲಿತ ವಿಷಯಾವಸ್ಥೆಯಿದು ಭಾವಿಸಲ್ಕೆ ಮಿಕ್ಕರ್ಗೆಂತು ದೊರೆಕೊಂಬುದು ೫೨

ವಿವಿ[6]ಧ[6] ಜೀವನ್ಮುಕ್ತಿವಿಷಯೈಕಹೇತುವ
ಪ್ಪವಿರಳ ಸುಭಕ್ತಿಲಲನಾಪರವಶಂದಾಳ್ದು
ತವಕದಿಂ ನಿರುಪಾಧಿ ಶಿವಸುಖಾಸ್ತಮಿತೇಂದ್ರಿಯನುಮಾಗಿ ಬಳಿಕಮೊಸೆದು

---

[1] ನ್ನ (ಗ) [2] ರುಷ (ಗ). [3] ವು (ಗ) [4] ಯೊಳ್ (ಗ) [5] ಪೆಂಗ (ಗ). [6] ರ (ಕ)

ತವೆನೋಟ ಮೊದಲಾದವಸ್ಥೆಗಳನೆಯ್ದಿ ಮು
ನ್ನವೆ ತನ್ನ ಮಱೆದವಿಟ್ಟನ್ನಮಾಗೊಪ್ಪಿಪ್ಪ
ಶಿವಯೋಗಸಂಚಿತಾವಸ್ಥೆಯೊಳ್ ತಾನೆಂಬ ಕಾಂತನೆಂಬೆರಡುಗೆಟ್ಟು ೫೩

ಇರುತಿರ್ಪ ಬಗೆಯೊ ಸದ್ಭಕ್ತದೇಹಂಗೆ ತ
ನ್ನುರುದೇಹವುಂ ದೇಹಮಾಗಿತ್ತು ಸದ್ಭಕ್ತ
ವರರ್ಗೆ ಸಲೆ ಹರಣಮಾಗಿರ್ಪಂಗೆ ತನ್ನ ಹರಣಮನೆಯ್ದೆ ಹರಣಮಾಗಿ
ಹರಿಸದಿಂದಿತ್ತು ಸದ್ಭಕ್ತಕರಣಂಗೆ ನಿಜ
ಕರಣಮುಂ ಕರಣಮಾಗಿತ್ತು ಭಕ್ತೇಂದ್ರಿಯಂ
ಗಿರದೆ ತನ್ನಿಂದ್ರಿಯಂಗಳನಿಂದ್ರಿಯಂಗಳಾಗಿತ್ತು ರಾಜಿಸುತಿರ್ದನು ೫೪

ಎಂತೆನಲ್ಕೊಂದು ರಥಪರಿಕರಂಗಳ ಬಿರ್ಚಿ
ಸಂತತಂ ಬಳಿಕೊಂದು ರಥಕೆಯ್ದೆ ತುಡಿಸಲೋ
ರಂತೆ ಮುನ್ನಿನ ರಥಂ ಕಿಡುವಂತೆ ತನ್ನಯ ಗುಣಂಗಳೆಲ್ಲಮನಳ್ಕಱಿಂ
ಮುಂತುವರಿದಭವಂಗೆ ಕೊಟ್ಟು ತಾನೇಬುಡೆಂ
ತುಂ ತೋಱದಿರ್ಪಂದವೋ ಬಾಳೆಗಂಬಮುಂ
ಸಂತಸದೆ ನಾಡೆ ಪೊರೆಗಳೆಯೆ ಬಯಲಪ್ಪುದೆಂತಂತೆ ಮದ್ಗುರುನಾಥನು ೫೫

ಮನುಪ ದೇಹೇಂದ್ರಿಯ ಮನಃಪ್ರಾಣನಿಕರಂಗ
ಳನುವನೀಕ್ಷಿಸದೆ ತೆಗೆತೆಗೆದು ಶಿವಲಿಂಗಕ್ಕೆ
ಘನಭಕ್ತಿ[1]ಯಿಂ[1] ಕೊಟ್ಟು [2]ತಾಂ[2] ಕೆಟ್ಟು ಚಲಿಸದ ಶಿವಾನಂದಯೋಗದೊಳಗೆ
ತನುವಱಿಯದಿರ್ಪಿರವೊ ಬಳಿಕೆ ಶಿವಲಿಂಗಕ್ಕೆ
ಮನವಿತ್ತು ಸತ್ಪ್ರಸಾದಕ್ಕೆ ಕಾಯಂಗೊಟ್ಟು
ವಿನಯದಿಂ ಜಂಗಮಕ್ಕಾ ಪ್ರಾಣಮುಂ ಕೊಟ್ಟು ಶಿವನೊಳವಿದಿರ್ದ ತೆಱನೊ ೫೬

ಎನೆ[3]ತೆ[3] ಪಲವಂದದಿಂ ಚನ್ನಬಸವೇಶ್ವರಂ
ವಿನುತಿಸುತ್ತಿರೆ ಬಸವದಂಡೇಶನಂ ಬಳಿ
ಕ್ಕನಿತಱೊಳಗಿತ್ತ ಚರಲಿಂಗಮೊರ್ವಂ ನೂತನಂ ಬಸವನಂ ನೋಡಲು
ಸನಯದಿಂ ಬರುತಿರಲ್ ಬಾಗಿಲವರುಸುರ್ದ್ಪರೆಲೆ
ಮನುಪ ಜಂಗಮಮೂರ್ತಿಯೇ ಬಸವದಂಡೇಶ
ನನುನಯದೆ ಶಿವಯೋಗನಿದ್ರೆಯೊಳಗಿರ್ದಪಂ ಎನಲವರ್. ಮುಗುಳ್ನಡ್ಡೆ ಪೋಗೆ ೫೭

---

1 ಯಂ (ಕ) 2 ತಲ (ಗ) 3 ತ (ಗ)

ಬಸವೇಶ್ವರಂ ಜಂಗಮಪ್ರಾಣನಾದುದಱಿಂ
ನೆನೆವ ಜಂಗಮದ ಕೊಡೆಯಿದ್ದಿತ್ತುಮಸವಸದೆ
ಬಸವೇಶ್ವರನ ಹರಣಮದನಱಿಂದು ಸೇವಕರ್ ವಿಸ್ಮಯಾವಿಷ್ಟರಾಗಿ
ಬಸವಳಿದು ಪರಿದೆಯ್ದಿ ಭಕ್ತರಂ ಕರೆಯೆ ರಾ
ಜಿಸುವ ಶಿವಲಿಂಗನಿಷ್ಠಾಪರಂ ಸಂತತಂ
ಮಿಸುಪ ಸಕಳೇಶನಾದರಸಯ್ಯನಘದೂರ ಮಡಿವಳ್ಳಮಾಚಿದೇವಂ ೫೮

ಪಿರಿದು ಭವದೂರ ಲಿಂಗಾನುಭವಸೌಖ್ಯ ಭಾ
ಸುರ ಕಿನ್ನರಬ್ರಹ್ಮದೇವಯ್ಯನತಿಭಯಂ
ಕರವಾದಿ ತಿಮಿರಪ್ರಚಂಡಮಾರ್ತಾಂಡ ಸೊಡ್ಡಳಬಾಚಿದೇವಯ್ಯನು
ವರನಿಗ್ರಹಾನುಗ್ರಹೋದಗ್ರಭಕ್ತಿತ
ತ್ಪರ ಮೋಳಿಗೆಯ ಮಾರಿದೇವನಱಿ ನಿರ್ಧೂತ
ದುರಿತ ಕಲಕೇತಬೊಮ್ಮಯ್ಯನುರುಭಕ್ತದಿಕ್ಕುಂಜರಂ ಕಕ್ಕಯ್ಯನು ೫೯

ಅವಿರಳಂ ಶೌರ್ಯಾಧಿಕಂ ಸುರಗಿಚೌಡಯ್ಯ
ನವಿಚಾರಿ ಪಾ[1]ಷಂ[1]ಡಗಿರಿಷಂಡಕುದ್ದಂಡ
ಪವಿ ಮುಸುಡಿ[2]ಚೌಡಯ್ಯನೇಕಾಂತಭಕ್ತಿವಿಖ್ಯಾತನಶ್ರಾಂತ ಶಾಂತಂ
ವಿವಿಧ ಗುಣನೇಕಾಂತರಾಮಯ್ಯನವಿರಳ
ಪ್ರವಿಮಲ ಶಿವಜ್ಞಾನಪಾನೀಯನಿಧಿ ಸೋಮ
ಶಿವನಾಗಮಯ್ಯನತಿಭ[3]ಕ್ತಿಮಂಡನ ಕೊಂಡಗುಳಿಕೇಶಿರಾಜಯ್ಯನು ೬೦

ಪಿರಿದು ಸದ್ಭಕ್ತಿಕ್ರಿಯಾಂಗ ಭಾಷಾಂಗ ಭಾ
ಸುರ ಸಾಂಗವೃತ್ತಿಯುತನುತ್ತಮಾಂಗದ ಕೇಶಿ
ಸರಳ ನಾನಾವಿಕೃತಸದ್ಭಕ್ತಿವಿಖ್ಯಾತ ತೆಲುಗಜೊಮ್ಮಯ್ಯದೇವಂ
ಹರಗಣಮನೋರಥಸುಖಪ್ರದಂ ಧೀರನಾರು
ತರ ಕನ್ನದ ಬ್ರಹ್ಮದೇವಯ್ಯನಮಲತರ
ಗುರುಭಕ್ತಿಯುಕ್ತ ಪ್ರಸನ್ನನರ ಮಾನಸಾನ್ವಿತ ದಸರಿದೇವಯ್ಯನು ೬೧

ವರಭಕ್ತ ಪಾದಕಮಲಾಸಕ್ತೆ ಮುಕ್ತಗುಣೆ
ಗುರುಭಕ್ತೆ ಗುಡುಬೆ ಕಾಳವ್ವೆ ದುರಿತಘರಟ್ಟೆ
ಪರಮನಿಷ್ಠಾಯತ್ತಚಿತ್ತೆ ಪಿಟ್ಟವ್ವೆಯೆಂಬಿವರಾದಿಯಾಗಿ ಮಿನುಪ

---

[1] ಷಾಂ (ಗ) [2] ಚಾಂ (ಗ) [3] ಕ್ತಕುಂ (ಕ)

ಸರಳ ಕಲ್ಯಾಣಕಟಕದೊಳಭವಸದ್ಭಕ್ತಿ
ಶರಧಿವರ್ಧನಚಂದ್ರರೆನಿಪ ಭಕ್ತರ್ ನೋಡೆ
ಪಿರಿದು ಲಕ್ಕಂ ಬಳಿಕವೆಂಬತ್ತುಸಾವಿರದ ಲೆಕ್ಕಕ್ಕೆ ಸಲೆ ಸಂದರು ೬೨

ಶಿವಭಕ್ತಿತತ್ಪರಂ ಶಿವರಾತ್ರಿ ಭದ್ರಯ್ಯ
ನವಿರತಂ ಘಟಿಕಾವಸರದ ಪೆಸರೊಪ್ಪಿರ್ಪ
ಸುವಿನೀತ ಕಾಲಕಂಠಯ್ಯನುೞಿ ಕರ್ಪುರನಿವಾಳಿ ಸಂಗಯ್ಯದೇವಂ
ತವೆ ಕನಕನೀರಾಜನದ ವೀರಭದ್ರಯ್ಯ
ನವಿ[1]ಕಲಂ[1] ಪಟ್ಟುನೂಲ್ಬತ್ತಿಯಾ ತ್ರಿಪುರಾರಿ
ನವಮೌಕ್ತಿಕದೆ [2]ರಾ[2]ಜಿಸುವ ಪೊಚ್ಚಪೊಸರಂಗವಲ್ಲಿಯಾ ಮಾಯಣ್ಣನು ೬೩

ಮಿಸುಪ ಕತ್ತುರಿಯ ಸಾರಣೆಯುದ್ಭಟಯ್ಯನೆನ
ಲೆಸೆವಿವರ್ ಮೊದಲಾದ ಪರಮವ್ರತಸ್ಥರುಂ
ನಿಸದವೊಂಬತ್ತುಸಾವಿರಮಂತೆ ಸೋಯಿದೇವಂ ಮುಖ್ಯಮಾಗಿ ಮತ್ತೆ
ಪೆಸರ್ವಡೆದ ಚಲವಾದಿ ಶೀಲನಂತರ್ಕಳು
ಲ್ಲಸದಿನಿರ್ಪರ್ ಪಯಿಂಛಾಸಿರುಂ ಮತ್ತೆ ರಾ
ಜಿಸುವ ವಿಖ್ಯಾತ ವೀರಗಣಾಳಿ ಇ[3]ರ್ಪುದ[3]ಪರಾರೆಂಬೊಡಂ ಪೇಳ್ವೆವು ೬೪

ಮಿಗೆ ಮೂಱುವೇಳೆಯೊಳ್ ಕಣ್ಗಳಂ ಕಿತ್ತು ತೊ
ಟ್ಟಗೆ ಶಿವಂಗಿತ್ತೆರಳ್ಕಣ್ಣ ಬಳಿಕಂ ಪಡೆವ
ನೆಗಳ್ದ ಕಣ್ಗಳ ವಿರೂಪಾಕ್ಷದೇವಂ ರಸನೆಯುಂ ಕೊಯ್ದು ಪ್ರತಿದಿನದೊಳು
ಸೊಗಸಿನಿಂದೀಶನಂ ಪೂಜಿಸಿ ಬಳಿಕ್ಕಮಂ
ತೊಗೆದ ಪೊಸನಾಲಗೆಯಿನಿಂದುಶೇಖರನ ನೆಱೆ
ಪೊಗಳ್ವ ಶಿವಯೋಗಿದೇವಂ ಕರುಳದಂಡೆಯರ್ಚಿಪ ಕರುಳಪರ್ವತಯ್ಯಂ ೬೫

ಶಿರಮನುೞಿ ಮೂಱುದಿನಕೊರ್ಮೆರ್ಮೆ ಕೊಯ್ದು ಭಾ
ಸುರ ಶಿವಂಗರ್ಪಿಸಿ ಬಳಿಕ್ಕೆ ಪೊಸದಲೆವಡೆವ
ಪರಮಗೋವಿಂದಭಟ್ಟ ಪ್ರಮುಖ ವೀರರೇಳ್ನಾಸಿರೇಳ್ನೂಱು ಮತ್ತಂ
ಪಿರಿದು ಸುಜ್ಞಾನಾಗ್ನಿಯಿಂದೆ ದಗ್ಧಂಮಾಡಿ
ಯುರುವಿಷಯ ವಿತತಿಯಂ ಮುಗ್ಧಭಾವ[4]ದಿನಿ[4]ರ್ಪ
ಸುರುಚಿರ ಸ್ನಿಗ್ಧಸ್ವರೂಪನೆನಿಸುವ ಮುಗ್ಧಸಂಗಯ್ಯ ಜಂಗಮಾರ್ಯಂ ೬೬

---

[1] ರತಂ (ಗ) [2] ರಂ (ಗ) [3] ರ್ಪರ (ಗ) [4] ದೊಳಿ (ಗ)

ಸಲೆ ಜಾವಕೊರ್ವೊರ್ವರ್ಗೆ ವಸ್ತ್ರಕುಸುಮಂಗಳಂ
ತೊಲವಿನಿಂದಂ ತೊಡಿಗೆ ಪರಿಮಳದ ಲೇಪನಂ
ಲಲನಾಸುಸಂಗವುಂ ಜಾವಕೊರ್ವೊರ್ವರ್ಗಯಿಂತಿದೆ ನಿಯ[1]ಮುನಾ[1]ಗಿ ನಡೆವ
ಸುಲಲಿತಾಷ್ಟಪ್ರಹರ ಸೋಮನಾಥ ಪ್ರಮುಖ
ವಿಲಸದೀಪ್ಸಿತಭೋಗಮಂ ಲಿಂಗಮುಖಕಿತ್ತು
ನಲಿದು ತಾವುಪಭೋಗಿಸುವ [2]ಪಿಂ[2]ಡಜಂಗಮರ್ ಬಗೆಯೆ ಪನ್ನಿಚ್ಛಾಸಿರಂ ೬೭

ಉಳಿದ ವೀರವ್ರತೋದಾರ್ಯಸಂಪನ್ನ ಸ
ಲ್ಲಳಿತಸದ್ಭಕ್ತಿನಿಷ್ಠಾಸಮನ್ವಿತರಾಗಿ
ತೊಳಪ ಕಲ್ಯಾಣಕಟಕದೊಳಿರ್ಪ ಸದ್ಭಕ್ತರೆಲ್ಲರೆಯ್ತಂದು ಭರದಿಂ
ಮಿಳಿರ್ಪ ಸಂಧ್ಯಾಸಮಯ ಲಿಂಗಾರ್ಚನೆಯ ವೇಳೆ
ಯೊಳಗೆ ಕುಳ್ಳಿರ್ದ ಬಸವೇಶ್ವರನ ಭಾವಮಂ
ತಿಳಿದೀಕ್ಷಿಸುತ್ತಣಿಯರಂ ಸೋಜಿಗಂಬಡುತ್ತಿಂತೆಂದರವ[3]ರೆಲ್ಲರು[3] ೬೮

ಇದಱ ನೆವನಾವುದಿಂತಿದಱ ಕಾರ್ಯಮದೇನೊ
ಸದಮಲ ಪ್ರಸ್ತುತಂ ತಾನಾವುದೋ ಎಂದು
ಪದೆದಱಿಯವೇಳ್ಕು ತುರಿತದೆ ಕರೆಯಿಸಿಲ್ಲಿಯಾಪ್ತರ ವರನಿಯೋಗಿಗಳನು
ಪುದಿದಿರ್ದ ಸೀಯದರ ಕಾಪಿನವರಂ ಮತ್ತೆ
ಮುದದಿನಿಂದಿನ ಲಿಂಗಪೂಜಾವಸರದಲ್ಲಿ
ಯೊದಗಿರ್ದ ಹ[4]ರಿಸ[4]ದಿಂ ಮನಮಲರ್ದು ನುಡಿದನೋ ಲಿಂಗಸನ್ನಿಧಿಯೊಳೊಸೆದು ೬೯

ಮಿಸುಪ ಗೀತದೊಳಿಂದು ಪಿಡಿದ ಸುವ್ರತಮುಮಂ
ಮಸಕದಿಂ ನುಡಿದ ಭಾಷೆಗಳುಮಂ ಚಿಂತಿಪಂ
ನಿಸದಮಾ ಶ್ರುತಕೋಶದೊಳಗಿರ್ದ ಕವಳಿಗೆಗಳಂ ತರಿಸಿಮೆನುತೆ ಮತ್ತಂ
ಒಸೆದಿರ್ದರಾರಿಲ್ಲಿ ನಿಂದು ಬಂದವರುಂಟೆ
ಮಸಗಿ ಬಳಿಕಿಲ್ಲಿಂದೆ ಪೋದರುಂಟೇ ಬ[5]ಲ್ಲೊ
ಡು[5]ಸುರಿಮೆನೆ ಚನ್ನಬಸವೇಶ್ವರಂ ಕೇಳ್ದಿಳ್ದು ಭಕ್ತರ್ಗೆ ವಂದಿಸುತ್ತೆ ೭೦

ಹ[6]ರಿಸ[6]ದಿಂ ಬಿನ್ನೈಸಿದಂ ಮದ್ಗುರುಸ್ವಾಮಿ
ಭರದಿಂದೆ ಲಿಂಗಪೂಜಾನಂದಸುಖದೊಳಗೆ
ಪರವಶಂಬೆತ್ತು ಶಿವಯೋಗನಿದ್ರೆಯೊಳಿರಲ್ ನೂತ್ನಜಂಗಮಮುಳ್ಕಱಿಂ

---

1 ತವಾ (ಗ) 2 ಖಂ (ಕ) 3 ಣಿಯರಂ (ಳ) 4 ರುಷ (ಗ) 5 ಲ್ಲ|ರು (ಕ)
6 ರುಷ (ಗ)

ಪರಮಬಸವಣ್ಣನಂ ನೋಡಬರುತಿರೆ ಸೀಯು
ದರ ಕಾಪಿನವರಿಂದೆ ಶಿವಯೋಗನಿದ್ರೆಯೊಳ್
ವರ ಬಸವನಿರ್ದನೆಂಬುದನೆಯ್ದೆ ಕೇಳ್ದವರ್ ಮರಳಿ ಪೋದರ್ ಬೇಗದಿಂ ೭೧

ನಸಿದೇಂಕಾರಣಂ ನೋಳ್ಪೊಡಕ್ಕುಮೆ ಮತ್ತೆ
ವಿನಯದಿಂ ಮುನ್ನುಸಿರ್ದ ಭಾಷಾಸುಗೀತಮಂ
ನೆನೆಯೆ ಹೃದಯಂ ಸೀಳ್ವುದದನುಸುರೆ ರಸನೆ ಕರಿಮುರಿಯಾಗಿ ಬೆಂದುಪೋಕುಂ
ಇಸಿತು ಭಾಷೆಯು ನುಡಿದು ನಡೆಯಲೆಂತನ್ಯರ್ಗೆ
ಮನಮುಕ್ಕುಮಾ ವಚನವಿಂತೆಂದು ಬಿನ್ನೈಪೊ
ಡೆನಗೆ ಭಯಮುಣ್ಮುತಿದೆ ನಿಮ್ಮ ಕರುಣದೊಳುಸುರ್ವೆನದನೆಯ್ದೆ ಚಿತ್ತೈಪುದು ೭೨

ಗುರುಕರುಣದಿಂದಿತ್ತ ಲಿಂಗಮೇ ಭಕ್ತರ್ಗೆ
ಪಿರಿದುಂ ವಿಚಾರಿಸಲ್ ಪ್ರಾಣಲಿಂಗಮೆನಿಕ್ಕು
ಮುರುತರ ಪ್ರಾಣಲಿಂಗಕ್ಕೆಯುಂ ಗುರುವೆ ಸತ್ಪ್ರಾಣಲಿಂಗಮೆನಿಪ್ಪನು
ಗುರುಸಮಾನಂಬೆತ್ತ ಜಂಗಮವೆಯೆನಗೆ ಭಾ
ಸುರತರ ಪ್ರಾಣಲಿಂಗಂ ತಪ್ಪದಿಂತಿದ
[1]ಕ್ಕಿ[1]ರದೆ ಸಂಗಯ್ಯನೇ ಸಾಕ್ಷಿ ಮದ್ವ್ರತಮಿದೆಂದುಸುರ್ದನಾ ಬಸವೇಶ್ವರಂ ೭೩

ಎಂದು ಬಿನ್ನೈಸಿಯಾ ಚನ್ನಬಸವಣ್ಣನಿಂ
ತೆಂದು ನುಡಿದಂ ಭಕ್ತವಿತತಿಗೀ ಭಾಷೆಯಂ
ಮುಂದುವರಿದಾವನೊರ್ವಂ ನೆನೆಯಲಕ್ಕುಮೇ[2]ನೆಂ[2]ದೊಡಂ ನುಡಿಯಲಳವೆ
ಚಂದದಿಂ ನುಡಿದೊಡಂ ನಡೆಯಲಕ್ಕುಮೆ ಎನ್ನ
ವಂದಿಗರ್ಗೆನ್ನ ಗುರು ನೆನೆಯಲುಂ ನುಡಿಯಲುಂ
ಸಂದು ನಡೆಯಲ್ ಬಲ್ಲನೆಂತೆನಲ್ ನಿಮ್ಮ ತೊಳ್ತೆಂಬ ಬಿಂಕದ ಬಲ್ಮೆಯಿಂ ೭೪

ಬಸವೇಶ್ವರನ ಭಾಷೆಗಳೆ ಭಾಷೆಗಳ್ ಕರಂ
ಮಿಸುಪ ನಿಮ್ಮಯ್ಯ ಕವಳಿಗೆಗೆ ಸಲಿಸಿಕೊಳ್ವುದುಂ
ಸಸಿನೆ ಪಾರಮನೆಯ್ದೆ ಪುದುಮಣಿಯರಂ ನಿಮ್ಮ ಭಾರಮಾಗಿರೆ ಬಳಿಕ್ಕಂ
ಬಸವೇಶ್ವರಂಗಾವ ಭಾರಮಿಲ್ಲದಱಿಂದೆ
ನಿಸದಮಾ ಜಂಗಮವೆ ತನ್ನ ಹರಣಂ ಎನಿ
ಪ್ಪಸದಳದ ಭಾಷೆ ಸಂದುದು ನಿಮ್ಮ ಕಟ್ಟದಿರೊಳೆಂದು ಕೃತಕೃತ್ಯನಾದಂ ೭೫

1 ಕಿ (ಕ) 2 ನೆನೆ (ಟ)

ಎನುತೆ ತದ್ಭಕ್ತರ್ಗೆ ಸಾಷ್ಟಾಂಗದಿಂದೆ ವಂ
ದನೆಗೆಯ್ದು ಚನ್ನಬಸವೇಶ್ವರಂ ಕರಯುಗಮ
ನನುನಯದೆ ಮುಗಿದು ನಿಂದಿರೆ ಶರಣರೆಯ್ದೆ ಸಂತುಷ್ಟಚೇತಸ್ಕರಾಗಿ
ವಿನಯದಿಂ ಪಡಿಹಾಱುಗಳ ತಿಬ್ಬದಿಂ ಕರೆದು
ಘನಕಟಕದೊಳಗೆ ಸದ್ಭಕ್ತಸದನಂಗಳೊಳ
ಗನುವಿನಿಂದಿರ್ಪ ಪೊಸಜಂಗಮವನೊಡಗೊಂಡು ಬರ್ಪುದೆಂದವರ ಕಳುಪೆ ೭೬

ಭರದಿನವರೆಯ್ದಿ ಕಲ್ಯಾಣದೊಳಗಱಸಿ ಭಾ
ಸುರ ಜಂಗಮಂಗಂಡು ವಂದನಂಗೆಯ್ದು ತ
ಚ್ಚರ[1]ವೃಂದ[1]ಮಂ ವಿನಯದಿಂದೆ ಕರೆದೆಯ್ತರುತ್ತಿರೆ ಬಸವದಂಡೇಶನ
ಹರಣಮೊಡನೊಡನೆ ಬರುತಿರ್ದುದಾ ಜಂಗಮಂ
ಶರಣರಿರ್ದೆಡೆಗೆವರೆ ಜಂಗಮಪ್ರಾಣಿಯ
ಪ್ಪರು ಬಸವದಂಡನಾಥಪ್ರಾಣಮೆಯ್ದಿ ಸಮ್ಮದದಿಂದಮೊಸೆದಿರ್ದನು ೭೭

ಮಸಕದಿಂ ಶಿವಶರಣಸಂದೋಹಮೆಯ್ದಿ ರಾ
ಜಿಸುತೆ ಸಂತೋಷ ಪುಷ್ಕರರಾಶಿಯೊಳ್ ಮುಳುಗು
ತೊಸೆದು ಬೆಂಡೇಳುತ್ತೆ ಸುಖಸಂಕಥಾವಿನೋದದಿನಿರುತೆ ನುಡಿದರೊಸೆದು
ನಿಸದಮಾ ಕಿನ್ನರಬ್ರಹ್ಮದೇವ ಪ್ರಾಣ
ಮಸಮಸಂಬರೆ ತನ್ನ ಹರಣ ಬಂದಂತೆ ಮು
ನ್ನೆಸೆವ ಜಂಗಮ ಬರಲ್ಕೀಗ ಬಸವೇಶ್ವರನ ಹರಣ ಬಂದುದು ಭಾವಿಸೆ ೭೮

ಸದಮಲಪ್ರಚುರವಿಶ್ರುತ ಪರಮಭಕ್ತಗಣ
ಪದಸರೋರುಹಸಾಂದ್ರ ಮಕರಂದಪಾನ ಸ
ಮ್ಮದಿತ ಚಂಚಚ್ಚಂಚರೀಕನನವರತ ಪಂಚಾಕ್ಷರೀಪ್ರಸಿತಹೃದಯಂ
ವಿದಿತ ಮಂಜುಳನೀಲಕಂಠಾಹ್ವಯಂ ಮನೋ
ಮುದದೆ ಪೇಳ್ದುರುತರಾರಾಧ್ಯ ಚಾರಿತ್ರದೊಳ
ಗಿದಃ ಬಸವದಂಡನಾಥನ ಜನನಮಾ ಬಸವ ಶಿವಯೋಗಕಥನಮೆನಿಕುಂ ೭೯

---

1 ಲಿಂಗ (ಗ)

# ಹದಿನಾಲ್ಕನೆಯ ಸಂಧಿ

## ಕಿನ್ನರಬ್ರಹ್ಮಯ್ಯನ ಕಥೆ

ಸೂಚನೆ: ಕಿನ್ನರಬ್ರಹ್ಮದೇವನ ಕಥೆಯ ಕೇಳ್ಗೊಲ್ದು
ಸನ್ನುತಾಮಾತ್ಯ ಕೋಟೀರಚುಂಬಿತಚರಣ
ನನ್ನಿಮಂತನೆ ಸೂರಸಚಿವೇಂದ್ರ ಮಾರ್ಗಣಚಕೋರಶಾಬಾಳಿಚಂದ್ರ

ಗಿರಿಸುತೆಯು ಮಜ್ಜನಂಗೆಯ್ದು ಸಂಭ್ರಮದಿಂದೆ
ಸುರನದೀಕಾಂತೆಯೊಳ್ ನೆರೆವ ವೇಳೆಯೊಳೆಯ್ದೆ
ಪರಿಮಳಂ ತಿಂಬಿರಲ್ವೇಳ್ಕೆಂದು ರಜತದೊಳ್ ಮಂಕಿಯಂ ನೆಱೆ ವಿರಚಿಸಿ
ಶಿರದೊಳಗೆ ತಾಳ್ದಿರ್ದನೋ ಎಂಬ ತೆಱದೆ ಚಂ
ದಿರನ ಕಿಱುರೇಖೆಯೊಪ್ಪುತ್ತಿರಲ್ ಜಡೆಮುಡಿಯೊ
ಳರಿದಾದ ಕಾಂತಿಯಿಂ ಮೆಱೆವ ಗುರು ನೀಲಕಂಠಂ ಪೊರೆಗೆ ಸಜ್ಜನರನು ೧

ಕಿನ್ನರಬ್ರಹ್ಮಯ್ಯನಾ ಕಥೆಯದೆಂತೆನಲ್
ಮುನ್ನೆ ಬಸವೇಶ್ವರನ ಸತ್ಪ್ರಾಣಮಾಗಿರ್ದು
ದನ್ನೋಡವೇಳ್ಕೆಂದು ಶಂಭುವಾ ಕಿನ್ನರಬ್ರಹ್ಮಯ್ಯನಸುವನೊಯ್ಯೆ
ಸನ್ನುತ ಪ್ರೇಮದಿಂ ಬಸವದಂಡೇಶನಾ
ಸನ್ನಸ್ಥನಾಗುತ್ತೆ ಶೋಕಾಬ್ಧಿಯೊಳಗಾಳು
ತೆನ್ನ ಹರಣವೆ ಕಿನ್ನರಬ್ರಹ್ಮದೇವನಿನ್ನುಳಿದಾನದೆಂತಿರ್ಪೆನು ೨

ಎನ್ನಗ್ರಜನೆ ಎನ್ನ ತಾಯೆ ತವರೇ ಎನ್ನ
ಚೆನ್ನೆ ಎನ್ನಯೆ ಜಸವೆ ಎನ್ನ ಸನ್ಮಿತ್ರನೇ
ಎನ್ನ ಮೊಗಕ್ಕೈಪಿಡಿಯೆ ಎನ್ನ ಪರಿಷನ್ನಿಕೇತನಭಾಸುರಪ್ರದೀಪ
ಎನ್ನ ಮನದನ್ನನೇ ಎನ್ನಾಳ್ದನೇ ಎನ್ನ
ನನ್ನಿಯೋ ಎನ್ನಧಿಕ ಭಕ್ತಿಸುರಭೂರುಹ[1]ಮೊ
ಎನ್ನಯ ಮನೋರಥಮೆ ಬಱುಸೂಱೆವೋದೆಯಾ ಕಿನ್ನರ ಬ್ರಹ್ಮದೇವ ೩

---

[1] ವೆ (ಕ)

ಎನಗಿನ್ನೆ ಭಕ್ತಿಪದವಂ ತೋರ್ಪರಾರಿಲ್ಲಿ
ಎನಗೆ ಬಲವೋಳ್ ಮುಱಿದುಬಿಳ್ದ[1]ದಿಲ್ಲಿಗೆ[1] ಮು
ನ್ನಿನ ತೆಱದೊಳಾರೊಡನೆ ಸುಖಗೋಷ್ಠಿಯೊಳಗಿರ್ಪೆನಯ್ಯ ಪೇಳ್ ಬೊಮ್ಮದೇವ
ಎನಗೆರಳ್ಕಣ್ಣಿಂಗಿಪೋದುವಿಂದಿನ ದಿನದೊ
ಳೆನಗೆ ನಿನ್ನಯ ನೋಟವಱತುದೆಲೆ ಕಿನ್ನರಾ
ಎನಗೆ ಸಖರಾರ್ ಕಿನ್ನರಬ್ರಹ್ಮದೇವಯ್ಯ ನೀನೆನ್ನನಗಲಿ ಪೋದ ೪

ಎಂದಿಂತು ಬಸವೇಶ್ವರಂ ಪಲುಂಬುತ್ತಿರಲ್
ಮುಂದುವರಿದಲ್ಲಿರ್ದ ಪಡಿಹಾಱ ಬಾಚಯ್ಯ
ನಂದವಳಿವುತ್ತೆ ಮದನಾರಿ ಮುದಕರಿಯೆನಿಪ ಮಡಿ[2]ವಳ್ಳ[2] ಮಾಚಯ್ಯನ
ಮಂದಿರಮುನೆಯ್ದಿ ತದ್ವೃತ್ತಾಂತಮಂ ಪೇಳೆ
ಬಂದಿರ್ದ ಭಕ್ತರಾರೆಂದು ಕೇಳಲ್ ಕಯ್ಯ
ನೊಂದಿಸುತೆ ಮುಂಡೆಯೊಳ್ ಪಡಿಹಾಱ ಬಾಚಯ್ಯನುಸುರ್ದನತಿಭಕ್ತಿಯಿಂದೆ ೫

ಮಾದಿರಾಜಂ ಮೋಳಿಗೆಯ ಮಾರಿತಂದೆ ಮೊದ
ಲಾದ ಭಕ್ತರ್ ಬಂದರೆನೆ ಬಸವನಿರವನ
ತ್ತಾದರದೆ ಕೇಳೆ ಪೇಳ್ದಂ ಕಿನ್ನರಬ್ರಹ್ಮದೇವಯ್ಯನಳಿಯುಲೊಡನೆ
ಸಾದರದಿನಾ ಕಿನ್ನರಬ್ರಹ್ಮದೇವನಂ
ಭೇದಮಿಲ್ಲದ ತೆಱದಿನಾಲಿಂಗನಂಗೆಯ್ದು
ರೋದನಂಗೆಯ್ವುತಿರ್ದಪನೆನಲ್ ದರಹಸಿತವದನನಾಗುತ್ತೆ ನುಡಿದಂ ೬

ಪರಮಭಕ್ತರ್ ಬಂದರಂತೆ ಗಡ ಬಸವೇಶ
ನುರುದುಃಖದಿಂದಳುತುಮಿರ್ದಪಂ ಗಡ ಲೇಸು
ಧರುರೆ ಧರುರೇ ಜಂಗಮಪ್ರಾಣಲೀನ ಬಸವೇಶ ಮಝು ಭಾಪು ಭಾಪು
ಚರಲಿಂಗ ಸೌಖ್ಯಾನುಗತಚಿತ್ತ ಬಸವೇಶ
ವರಜಂಗಮಪ್ರಾಣಸಂಧಾನ ಬಸವೇಶ
ಸರಳತರ ಜಂಗಮಪ್ರಾಣ ಪ್ರಯಾಣ ಬಸವೇಶ ಮಝು ಲೇಸು ಲೇಸು ೭

ಪಿಡಿದ ಭಾಷೆಗಳೆಲ್ಲಿ ಮರಣಮಂ ಪೊರ್ದಿದವೊ
ನುಡಿದ ನುಡಿಯಾವೆಡೆಯೊಳೋಡಿತ್ತೊ ಭಕ್ತಿರಸ
ವೊಡನೆ ತಲೆಗೇಱಿಯೇಱಿಸಿ ನುಡಿವನಗ್ಗಳದ ಭಾಷೆಯಂ ಬಸವಣ್ಣನು

---

1 ದೀಲಿಂಗ (ಗ) 2 ವಾಳ (ಗ)

ಕಡೆಗೆ ನಡೆಯಿಸಲಱಿಯನೆಳಿದಿರಲ್ ಜಂಗಮಂ
ಬಿಡದೆ ಶೋಕಿಪುದುಚಿತಮೇ ತನಗೆ ಶಿವಶಿವಾ
ಸಡಗರದೆ ಕಲ್ಲಿನಾಥಂ ಮೆಚ್ಚುವನೆಯಿಃದಂ ಪೂಣಿಸಿದ ಸದ್ಭಾಷೆಯಂ ೮

ಬಱುವೆಸರ ಭಕ್ತನೇ ಕಿನ್ನರ ಬ್ರಹ್ಮಯ್ಯ
ನುಱುವ ಭಕ್ತಂ ಶಿವಂಗದುಕಾರಣಂ ಮುದದೆ
ಕಱಿಗೊರಲನೊಪ್ಪುಗೊಂಡಂ ಬಳಿಕ್ಕಾತಂಗೆ ಸಂಸಾರಿಗಳ ತೆಱದೊಳು
ನೆಱೆ ಅಳಲ್ವುದು ತಕ್ಕುದೇ ತನ್ನ ಭಾಷೆಯಂ
ಮಱೆದು ಬಸವಣ್ಣ[1]ನಳು[1]ತಿರಲಲ್ಲಿಗಾವೈದಿ
ಯೊಱಲಲಱಿಯೆವು ಜನಂ ಮೆಚ್ಚುವಂ[2]ತತೆ[2]ಶೋಕಿಸಲ್ ಮುನ್ನೆ ಅದನೆಱಿಯೆವು ೯

ಅದಱಿಂದವಾವೈದಿ ಮಾಳ್ಪ ಕಜ್ಜಮದೇನೊ
ಮುದದೆ ಮುಂಬಂದಿರ್ದ ಭಕ್ತರೇ ಸಾಲ್ವುದೆನು
ತೊದವಿದ ಮನೋವ್ಯಥೆಯನುಸುರ್ದು ಪಡಿಹಾಱ ಬಾಚಯ್ಯನಂ ಕಳುಪಲೊಡನೆ
ಪದೆದೆಯ್ದಿ ಭಕ್ತಸಭೆಯಂ ತುಳಿಲ್ಗೆಯ್ದು ಶಿವ
ಮದಕರಿಯೆನಿಪ್ಪ ಮಾಚಯ್ಯನೆಂದುದನಳುಕು
ತದಿರುತ್ತೆ ಬಿನ್ನಸಂಗೆಯ್ಯಲದನಱಿದು ಬಸವೇಶ್ವರಂ ಶೋಕಮುಡುಗಿ ೧೦

ಮಡಿವಳ್ಳ ಮಾಚಿತಂದೆಗಳುಸುರ್ದ ವಾಕ್ಯಮದು
ಬಿಡದೆನಗೆ ಗುರುವಚನಮೆನುತೆ ಬಸವೇಶ್ವರಂ
ಸಡಗರದೆ ಕಿನ್ನರಬ್ರಹ್ಮಯ್ಯನಡಿವಿಡಿಯಲೊಡನೆ ತತ್ಪ್ರಾಣಮೆಯ್ದಿ
ಬಿಡದಡಂಗಿತ್ತಾತನೊಳಗದಂ ನೆಱೆಕಾಣು
ತೊಡನೆ ವಿಸ್ಮಿತಚಿತ್ತರಾಗುತ್ತೆ ಭಕ್ತರು
ಗ್ಗಡದ ಬಸವನ ವಾರ್ತೆಯಂ ಮಾಚಿದೇವಂಗೆ ಪಡಿಹಾಱಿಯಿಂದಟ್ಟಲು ೧೧

ಭರದಿಂದೆ ಕೇಳ್ದು ಮಡಿವಳ್ಳಮಾಚಯ್ಯನುರು
ತರಹರ್ಷದಿಂದೆ ಪೊಗಳ್ದಂ ಭಾಪುರೇ ಬಸವ
ವರಜಂಗಮಪ್ರಾಣಸಂಧಾನ ಬಸವಣ್ಣ ಜಂಗಮಪ್ರಾಣಲೀನ
ಚರಲಿಂಗಸಂತತಪ್ರಾಣ ಭಾಪುರೆ ಭಾಪು
ಚರಲಿಂಗಮಂಗಳಪ್ರಾಣ ಭಾಪುರೆ ಭಾಪು
ಚರಲಿಂಗಸುಪ್ರಸಂತ್ರಾಣ ಮಝು ಭಾಪು ಭಾಪುರೆ ಭಾಪು ಬಸವದೇವ ೧೨

---

1 ನಿರು (ಗ)   2 ತಿರೆ (ಕ)

ಸಲೆ ಜಂಗಮಪ್ರಾಣ ಬಸವನೆಂಬೀ ವಾಕ್ಯ
ಮಲದೊರ್ಪ್ಪುಗುಂ ಸಲ್ಗುಮಾಪಗಂ ಭೂಮಿಯೊಳ್
ಗಲಘು ವಿಸ್ಮಯಮನೌಪಮ್ಯಮೆನುತಮುಂ ಕಲ್ಲಿನಾಥನ ಮದಾನೇಕಪಂ
ಲಲಿತ ಕಲ್ಲೇಶ್ವರನ ನಿಟಿಲನೇತ್ರನೆನಿಪ್ಪ
ವಿಲಸದಮಳಿನ ಮಹಿಮ ಮಡಿವಳ್ಳಮಾಚಯ್ಯ
ನೊಲವಿನಿಂ ಬರುತಿರ್ದನಮಮ ಪರವಾದಿಮದಗಜದಳನಕಂಠೀರವಂ ೧೩

ಪುರದ ಭವಿಜನವಿತತಿ ಕಣ್ಗೆಟ್ಟು ದೆಸೆದೆಸೆಗೆ
ಪರಿದೋಡುತಿರೆ ಪಾಪನಿಕುರುಂಬಮೊಳಸರಿಯೆ
ಪಿರಿದು ವಿಜಯತೆಗೆ ಶೂರತೆಗೆ ಶಂಕರನ ಮನಮಳ್ಕಾಡೆ ಪಹಿಲದಿಂದಂ
ಬರಬರಲ್ ಕಾಣುತ್ತೆ ಶರಣತತಿಯಿದಿರ್ವರಲ್
ಭರದಿನವರ್ಗೆಯ್ದೆ ವಂದಿಸಲವರ್ ಮರಳಿ ಭಾ
ಸುರ ಮುದದೆ ವಂದಿಸಲ್ಕತಿತುಷ್ಟದಿಂ ಶರಣಸಂಘದೊ[1]ಡನಿ[1]ರ್ದ ಮತ್ತಂ ೧೪

ಲಲಿತ ಭಕ್ತ್ಯಾಜ್ಞೆಯಿಂ ತದ್ಭಕ್ತವೃಂದಕ್ಕೆ
ನಲಿದು ವಂದಿಸುತೆ ಮತ್ತಾ ಪ್ರಮಥವರರ ಪದ
ಸಲಿಲಜಾನೀಕಕೀಲಿತ ಹೃದಯನಾಗುತ್ತೆ ಮಾಚಿದೇವಂ ನುಡಿದನು
ಎಲೆ ಸುರಾನೀಕ ವಂದಿತನೆ ಪ್ರತ್ಯಕ್ಷ ಭೂ
ತಲ ರುದ್ರಮೂರ್ತಿಯೆ ಕಿನ್ನರಬ್ರಹ್ಮಯ್ಯ
ವಿಲಸಿತ ಪ್ರಾಣಮಿತ್ರಂ ಬಸವನಂ ಬಿಟ್ಟು ನೀನಿಂತು ತೊಲಗಿಪೋದ ೧೫

ಬಸವೇಶ್ವರಂ ಮಹೇಶ್ವರನಾಣತಿಯುಮಿಲ್ಲ
ದೆಸುಗಳೆಯಲೆಂತಕ್ಕುಮಾ ಪ್ರಮಥರಱಿಯದೇ
ಎಸಕದಿಂ ತಾಂ ಬಂದ ಕಜ್ಜಮವನಿಯೊಳ್ ಸಂಪೂರ್ಣತ್ವಮಂ ಪಡೆಯದೆ
ಮಸಕದಿಂ ನಿಮ್ಮೊಡನೆ ಶಿವಪುರಿಯನೆಯ್ದುವುದು
ನಿಸದಮನುಚಿತಮಣಿಯರಂ ಬಸವನಿಲ್ಲದೊಡೆ
ರಸೆಯೊಳಗೆ ಭಕ್ತಿಶೂನ್ಯತೆವಡೆಗುಮದಱಿಂದೆ ನೀಂ ಪೋಪುದೆಂತುಚಿತವು ೧೬

ಬಸವನಿರ್ಪನ್ನೆವರೆಗಂ ಸೊಕದೆ ನೀಮುಮೀ
ವಸುಧೆಯೊಳಗಿರವೇಳ್ಕುಮೇಳಿಮೆನುತಮುಂ ಪಾದ
ಬಿಸರುಹಮನೊಯ್ಯನೊತ್ತಲ್ ಕಿನ್ನರಬ್ರಹ್ಮದೇವನುಱೆ ತನಿನಿದ್ದೆಯಿಂ

1 ಳಗಿ (ಗ)

ನಸುಗನಸುಕಂಡೇಳ್ವ ತೆಱದಿನೇಳುತ್ತೆ ಮುಂ
ದೆಸೆಯೊಳೆಸೆ[1]ದಿರ್ಪ ಮಾಚಯ್ಯನಂ ಬಿಗೆ[1] ಕಂಡು
ಮಸಕದಿಂ ವಂದನಂಗೆಯ್ವಸಿತಜಚೂಳಗಿತ್ತ ಬಸವನೆಳ್ತಂದು ಮುದದಿಂ ೧೭

ಮಡಿವಳ್ಳಮಾಚಯ್ಯದೇವಂಗೆ ಪೊಡಪಡಲ್
ಸಡಗರದಿನಾ ಮೂವರೆಳ್ತಂದು ಭಕ್ತಗಣ
ಕೊಡನೆ ಪೊಡವಿಯೊಳಡ್ಡಗೆಡೆದು ವಂದಿಸಿ ಭಕ್ತಸಮಿತಿಯಾ ಮಾಚಯ್ಯನಂ
ಕಡುನೇಹದಿಂ ಪೊಗಳ್ದುದಲೆ ಮಾಚಿದೇವಯ್ಯ
ಮೃಡನ ಸದ್ಭಕ್ತಿಯಂ ಪೊಡವಿಯೊಳ್ ಸ್ಥಾಪಿಸಲ್
ಕಡುಗಲಿಗಳೋಱರೆ ನಿನ್ನನ್ನರೆಲೆ ಭೂರುದ್ರ ವೀರಭದ್ರಾವತಾರ ೧೮

ಭರದಿಂದೆ ದುಷ್ಟರಂ ಶಿಕ್ಷಿಸಲ್ ತಕ್ಕರಂ
ಪಿರಿದು ರಕ್ಷಿಸಲವನಿಯೊಳ್ ಭಾವಿಸಲ್ ನಿನಗೆ
ದೊರೆಯುಂಟೆ ಶರಣಸಂದೋಹ ರತ್ನಕರಂಡ ಪರವಾದಿವಿಜಯಶೌಂಡ
ದುರಿತಸಮುದಯದೂರ ನಿರ್ಜಿತಾಹಂಕಾರ
ಶರಣನಿಕರೋತ್ಸುಕ್ಯ ಪರಮಹರಚರಣೈಕ್ಯ
ವರವೀರಮಾರ್ಗ ಭಾಸುರಭಕ್ತವರ್ಗ ನಿರ್ಜಿತಮದನ ಹಸಿತವದನ ೧೯

ಜಿತಕಾಲ ಧೃತಶೀಲ ಮಡಿವಾಳಮಾಚಯ್ಯ
ವಿತತ ಭಾಷೆಗಳನೆಚ್ಚಱಿಸಿ ನುಡಿಯಲ್ ಗಿರಿಶ
ನತಿಶಯಾಜ್ಞೆಯನವನಿಯೊಳ್ [2]ಪಾಲಿ[2]ಸಲ್ ಖಳರನಱಯಟ್ಟಿ ಮುಂಗೆಡಿಸಲು
ಅತಿದುಷ್ಟ ಬಿಜ್ಜಳೋರ್ವೀಪಾಲ ಗರ್ವಗಿರಿ
ಶತಕೋಟಿ ಸದೃಶಮಾಗಲ್ ಗಂಧಸಿಂಧುರೋ
ನ್ನತ ಕೋಪಮಂ ಮಗ್ಗಿಸಲ್ ಬಳಿಕ್ಕೆಮ್ಮನೀಕ್ಷಿಸಲೊಲ್ದು ರಸೆಗೆ ಬಂದ ೨೦

ಸುಲಲಿತ ಪ್ರಮಥೇಂದ್ರಮೂರ್ತಿ ನೀನೆಯ್ದಿ ಸ
ಲ್ಲಲಿತ ಬಸವೇಶಂಗೆ ಕಿನ್ನರಯ್ಯಂಗೆ ಮನ
ದೊಲವಿನಿಂ ಪ್ರಾಣಮಂ ಕೊಟ್ಟವನಿಯೊಳ್ ಕೀರ್ತಿವಡೆದಿರದನೇವೊಗಳ್ವೆ[3]ವು
ನಲಿದು ಕನ್ನಡಿದೋಱಲೇಕೆ ಕೈಗಂಕಣ
ಕ್ಕಲಘು ನಿಷ್ಠುರಮಾದ ನಿಮ್ಮ ನುಡಿಗಡಣಂಗ
ಳಲರ್ದು ಹಿತಮಕ್ಕುಮೆಂತೆನೆ ಭಕ್ಷಪಾಕಮದು ರಸನೆಗಿನಿದಪ್ಪ ತೆಱದೆ ೨೧

---

[1] ವೃತ್ತಿರ್ಪ ಮಾಚಯ್ಯನಂ (ಗ) [2] ಭಾವಿ (ಕ) [3] ನು (ಕ)

ಮಾಸಿದಂಬರಮನಸಗಂ ಕಲ್ಲ ಮೇಲೊಗೆದು
ಸಾಸದಿಂದಡಿಗಳಿಂ ತುಳಿದು ಘಟ್ಟಣೆಮಾಳ್ಪ
ದಾ ಸೀರೆ ಬಿಳಿದಪ್ಪುದರ್ಕಲ್ಲದೇ ಅದರ್ಕೆಯ್ದೆ ಕಿನಿಸುತ್ತೇಮಾಳ್ಪನೊ
ಆಸುರದೆ ಮಾಚಯ್ಯ ನುಡಿದ ನುಡಿಯುದಜಂತೆ
ಲೇಸೆನಿಸಿತೀ ಬಸವನಾ ಪ್ರತಿಜ್ಞೆಗೆ ಬಳಿ
ಕ್ಕೋಸರಿಸದೊಲ್ದು ನಿರ್ಮ್ಮಾರ್ವರೊಳ್ ನುಡಿಯುಮುದ್ರ್ಗಡಲೊಳಾಳಿದೆವೆಲ್ಲರು ೩೨

ಪರಮಮಾಹೇಶ್ವರರ ಚಿತ್ತಾಲವಾಲದೊಳ್
ಪಿರಿದು ನಿರ್ಮ್ಮಾರ್ವರೊಳ್ ನುಡಿಯುಮುದ್ರ್ವ ತಿಂಬಿ ಭಾ
ಸುರಶಿವಾನಂದ ಸುರಲತೆಯಲ್ಲಿ ಜನಿಸಿ ಪೊಳೆದೋಜಂ ದಾಂಗುಡಿಯಿಡುತ್ತೆ
[1]ಪ[1]ರಿದು ಕೋರಕಿತ ಕುಸುಮಿತ ಫಲಿತಮಾದುದಿಂ
ದುರು ಮುದದೊಳಿಂತಸಂಖ್ಯಾತಗಣಮಣಿಯರಂ
ವರ ಮಾಚಿದೇವನಂ ಪೊಗಳುತ್ತೆ ಬಸವನಂ ಸಾದರದೆ ನೋಡುತೊಸೆದು ೩೩

ಮಿಗೆ ಭಕ್ತಕರುಣಾಕಟಾಕ್ಷವೀಕ್ಷಣವೆಂಬ
ನೆಗಳ್ದ ವಾರಿಧಿಯಲ್ಲಿ ಬಸವನೀಸಾಡುತ್ತು
ಮಗಲದಾ ಭಕ್ತರೊಡನಿರ್ದನಿಂತೆಂದು ಮುನ್ನಿನ ಕಥೆಯನೊಸೆದುಸುರುತೆ
ಸೊಗಯಿಸುವ ಸಿಂಹಾಸನಸ್ಥರಾಗಿರುತೆ ತೊ
ಟ್ಟಗೆ ಬಸವನಂ ನೋಡುತೆಲ್ಲ ಗಣಪುಂಗವರ್
ಬಗೆದು ನುಡಿದರ್ ಮುನ್ನ ಕಿನ್ನರಯ್ಯನನೀಶನಿರಿಸಿಕೊಂಡಂ ತನ್ನೊಳು ೩೪

ಎಲೆ ಬಸವ ನೀನಾತನೊಡನೆ ಶಿವಪುರಿಗೆಯ್ದ
ಲೊಲವಿನಿಂ ಮಾಚಿದೇವಂ ನಿಮ್ಮುತ್ತೀರ್ವರಂ
ಗೆಲವಿನಿಂ ತಂದನಿದು ಚೋದ್ಯಮೇ ಈಗ ಜಂಗಮವೆಯ್ದಿ ತಿರುಗಲೊಡನೆ
ನಲಿದವರ ಕೂಡೆ ನಿನ್ನಯ ಹರಣವೆಯ್ದಿತ್ತು
ಸಲೆ ಜಂಗಮಂ ಬರಲ್ಕವರೊಡನೆ ಬಂದತ್ತು
ನೆಲೆಯನಜಂವನನೆಲ್ಲಿದಂ ನಿ[2]ನ್ನ[2] ಮಹಿಮೆಗಳ ಶೂಲಿ ತಾನೇ ಬಲ್ಲನು ೩೫

ಜಂಗಮಸ್ವೀಕೃತಪ್ರಾಣ ಬಸವಾಧೀಶ
ಜಂಗಮಾಶ್ರಿತ ಜೀವಿತಾ ಬಸವಗಣನಾಥ
ಜಂಗಮಾಯತ್ತ ಭಾಸುರ ನಿಜಪ್ರಾಣ ಕರುಣಾಸರಿತ್ಪತಿಯೆ ಬಸವ

---

[1] ಓ (ಕ) [2] ಮ್ಮ (ಗ)

ಅಂಗವಿಸಿ ಧನವನರ್ಪಿಸಬರ್ಕುಮಾವಗಂ
ಹಿಂಗದೀ ತನುವನರ್ಪಿಸಲಶಕ್ಯಂ ಬಳಿಕೆ
ಸಾಂಗದಿಂ ದಾಸಭಾವದೆ ತನುವನರ್ಪಿಸಲ್ಬರ್ಕುಮೆಂತಾದೊಡೊಸೆದು ೨೬

ಮನವನರ್ಪಿಪುದರಿದು ತನ್ಮನಮನೆಂತಾದೊ
ಡನುವಿನಿಂ ಸ್ನೇಹಭಾವ[1]ದಿನೀ[1]ಯಲಕ್ಕುಮಂ
ತನುನಯದೆ ಹರಣಂಗಳಂ ಕುಡಲ್ಬರ್ಕುಮೇ ಧಾರಿಣಿಯೊಳಾರ್ಗಮರಿದು
ಘನವೀರ ಭಕ್ತಿಯಿಂ ಪ್ರಾಣಂಗಳಂ ಕುಡಲಿ
ಮಿನುಪ ಜಂಗಮದಸುವಿನೊಡನೆ ತತ್ಪ್ರಾಣಮದು
ಮಿನಿಸುಮೆರವಿಲ್ಲದಂತೊಂದಾಗಿ ಬೆರೆದಿರ್ಪ ಭಾವಮದು ನಿನ್ನೊಳಾಯ್ತು ೨೭

ಮುನ್ನೆ ಕೇಳ್ದಱಿವೆವಾ ತಂಗಟೂರೊಳಗೆಸೆವ
ನನ್ನಿವಂತಂ ಮಾರತಂದೆವೆರಸಾ ಮೂವ
ರುನ್ನತದ ಭಾಷೆ ವಿಶ್ರುತಮಾಯ್ತು ಲೋಕದೊಳ್ ನುಲಿಯಚಂದಯ್ಯನವರ
ಚನ್ನೆಸೆವ ಭಾಷೆ ಸಲೆ ಸಂದುದೀ ಭೂಮಿಯೊಳ್
ಸನ್ನುತಂ ಕೊಂಡಗುಡಿಕೇಶಿರಾಜನ ಭಾಷೆ
ಸನ್ನಿದಮದಾಯ್ತು ಸತ್ಯೇಶಚಾಮಯ್ಯ ಪ್ರತಿಜ್ಞೆಯಿಾ ಧರಣಿಯೊಳಗೆ ೨೮

ಎಸೆವ ಕಮಲಾದೇವಿಯಾ ಭಾಷೆ ಲೋಕದೊಳ್
ಜಸವಡೆದುದಿಂತು ಲಿಂಗಪ್ರಾಣಿಗಳುಮಂತೆ
ಮಿಸುಗುವಾ ಪ್ರಾಣಲಿಂಗಿಗಳುಮುಂಟವನಿಯೊಳ್ ಪ್ರಾಣಲಿಂಗಿಗಳ ನಡುವೆ
ಮಸಕದಿಂ ಜಂಗಮವೆ ಹರಣಂಗಳುಂ ಪಿರಿದು
ಮಸವಸಂ ಪ್ರಾಣಲಿಂಗಮುಮೆಂಬ ಭಾಷೆಯು
ಲ್ಲಸದಿಂದೆ ಬಸವ ನಿನಗಾದುದೆಂದಖಿಳಭಕ್ತರ್ ಪೊಗಳ್ದರತಿಮುದದೊಳು ೨೯

ಬಸವೇಶ್ವರಂ ಜಂಗಮಪ್ರಾಣಿಯೆಂಬುದಂ
ಮಸಕದಿಂ ಕೇಳ್ದಱಿವೆವಿಂದು ಕಂಡಱಿದೆವೆಲೆ
ಯಸಮ ಪಂಡಿತವಿಭುವೆ ನಿನ್ನಲ್ಲಿ ಚರಲಿಂಗಪರವಶೋನ್ನತಭಕ್ತಿಯಂ
ಎಸಕದಿಂದಿಂತೆಂದು ವೇಮನಾರಾಧ್ಯರುಂ
ಮಿಸುಪ ಸೂರಾಂಬೆಯುಂ ಸದ್ಭಕ್ತನಿಕರಮುಂ
ನಿಸದಮಾ ಪಂಡಿತಾರಾಧ್ಯರಂ ಮನಮುಣ್ಮೆ ಪೊಗಳುತ್ತೆ ಸುಖಮಿರ್ದರು ೩೦

---

1 ದೊಳೀ (ಗ)

ಇಂತು ಬಸವಪುರಾಣವೆಂಬಮೃತವಾರ್ಧಿಯೊಳ್
ಸಂತತಂ ಪಂಡಿತಾರಾಧ್ಯರುಂ ಸೂರಾಂಬೆ
ಕಂತುಹರನಿಭ ವೇಮನಾರಾಧ್ಯರುಂ ಸಕಲ ಭಕ್ತಸಂತತಿಯುಮೊಸೆದು
ಸಂತಸದೆ ಮೂಡಿಮುಳುಗಾಡುತ್ತೆ ತೇಂಕಾಡು
ತಂತೊಪ್ಪುತಿರ್ದರೆಲೆ ಮಾರ್ಗಣಾಮರಭೂಜ
ಕಾಂತ ಸೂರಾಮಾತ್ಯ ಕೇಳ್ ಪ್ರಥಮ ದೀಕ್ಷಾಪ್ರಕರಣಮಿದು ಸಲೆ ಶುಭಕರಂ ೩೧

ಪಂಡಿತಾರಾಧ್ಯಪ್ರಬಂಧವಿಸ್ತಾರ ಗುರು
ಪಂಡಿತಾರಾಧ್ಯಪ್ರಬಂಧಸತ್ಕಾರ ಗುರು
ಪಂಡಿತಾರಾಧ್ಯಪ್ರಬಂಧೋರುಹಾರದೀಧಿತಿ ಚಾರು[1]ವ[1]ಕ್ಷಸ್ಥಲಾ
ಪಂಡಿತಾರಾಧ್ಯಪ್ರಬಂಧಾನುಸಾರ ಗುರು
ಪಂಡಿತಾರಾಧ್ಯಪ್ರಬಂಧಸುವಿಹಾರ ಗುರು
ಪಂಡಿತಾರಾಧ್ಯಪ್ರಬಂಧಚಿತ್ಸಾರ ಸೂರಾಮಾತ್ಯ ಜೀವಿ[2]ಸ[2]ನಿಶಂ ೩೨

ಸದಮಲಪ್ರಚುರವಿಶ್ರುತ ಪರಮಭಕ್ತಗಣ
ಪದಸರೋರುಹಸಾಂದ್ರ ಮಕರಂದಪಾನ ಸ
ಮ್ಮುದಿತ ಚಂಚಚ್ಚಂಚರೀಕನನವರತ ಪಂಚಾಕ್ಷರೀಪ್ರಸಿತಹೃದಯಂ
ವಿದಿತ ಮಂಜುಲನೀಲಕಂಠಾಹ್ವಯಂ ಮನೋ
ಮುದದೆ ಪೇಳ್ದುರುತರಾರಾಧ್ಯಚಾರಿತ್ರದೊಳ
ಗಿದು ಕಿನ್ನರಬ್ರಹ್ಮದೇವಯ್ಯ ಕಥನಮುಂ ದೀಕ್ಷಾಪ್ರಕರಣದೊಳಗೆ ೩೩

[3]ಬ[3]ಪ್ರಸೂನೊದ್ಭವ ಗೃಹಾಕಳೇವರ ಜನ್ಮ
ಯಪ್ರಕಾಂಡೋರು ಶಂಬರಧಿ ಕುಂಭೋದ್ಭೂತ
ಸುಪ್ರಸಿದ್ಧ ಶ್ರಾದ್ಧ ದೇವಾಚಲಾಜನಿರ್ದಹನ ವನಕಾಲ ಸರಣಿ
ಕ್ಷಿಪ್ರಪ್ರಕ್ಷುಣ್ಣ ವಿನಧ್ವಜಾಮೃತಜಾತ
ಜಪ್ರಬಲಮಾನ ಭೂಭೃತ್ಸಮುದಯಾವಿತತ
ಸುಪ್ರಮೋದಮನಿತ್ತು ರಕ್ಷಿಪುದು ನೀಲಕಂಠೇಶ ಭವನಾಶ ಗಿರಿಶ ೩೪

---

1 ವೃ (ಕ) 2 ಶ (ಗ) 3 ಬ್ರ (ಗ)

# ಮೊದಲನೆಯ ಸಂಧಿ

## *ವೆಲ್ಲಗೊಂಡದ ಮಹಾದೇವಯ್ಯಗಳ ಕಥೆ

ಸೂಚನೆ : ಸುರುಚಿರ ಪುರಾತನಪ್ರಕರಣದೊಳಗೆ ಮನೋ
ಹರ ಮಹಾದೇವನಡಿಗಳ ಪಂಡಿತೇಶ್ವರಂ
ಹ[1]ರಿಸ[1]ದಿಂ ಪಡೆದ ಕಥೆಯಂ ಕೇಳ ಸೂರಸಚಿವೇಂದ್ರ ಮನದೊಲವಿನಿಂದಂ

ಋಕ್ಷಪತ್ಯಾಶುಶುಕ್ಷಣಿ ವಾಸರೇಶಾಕ್ಷ
ನಿಕ್ಷುಕೋದಂಡೋರ್ಜಿತಾಭ್ರಪಟು ಪೃಷದಶ್ವ
ನಕ್ಷೀಣಕುಕ್ಷಿನಿಕ್ಷಿಪ್ತ ವಿಶ್ರುತವಿಶ್ವವಿಶ್ವಂಭರಾನೀಕನು
ಯಕ್ಷರಾಟ್ಸನ್ಮಿತ್ರನುಕ್ಷಪತಿವಾಹನಂ
ಭಕ್ಷಿತ ಕ್ಷ್ವೇಡನುತ್ಕ್ಷಿಪ್ತ ಕಮಲಾಕ್ಷಮದ
ನಕ್ಷರೈಶ್ವರ್ಯನಕ್ಷಯಮೋಕ್ಷಫಲದಾತೃ ರಕ್ಷಿಸುಗೆ ನೀಲಕಂ[2]ಠಂ[2] ೧

ಶ್ರೀವೃಷಾಧೀಶ ಸಮುದಂಚಿತ ದಯಾಪಾಂಗ
ಪಾವನಾಮಾತ್ಯಶೇಖರ ಸೂರಸಚಿವೇಂದ್ರ
ಸಾವಧಾನದೆ ಪಂಡಿತಾರಾಧ್ಯರೊಂದುದಿವಸಂ ಶಿಷ್ಯರೊಡನೆ ಸುಖದಿಂ
ತೀವಿದಾನಂದದೊಳಿರುತ್ತೆ ಮುಂಜಾವದೊಳ
ಗಾ ವೇಳೆಯೊಳಗೆಳ್ದು ನಕ್ಷತ್ರನಿಕರಂಗ
ಳೋವೋವೊ ಬಾನೆಡೆಯೊಳೆಯ್ದೆ ಪ್ಯೈಗರೆದಿರ್ಪುದರ್ಕಿಂದೆ ಮುನ್ನ ಮುನ್ನೆ ೨

ಮಿಸುಪ ಶಂಖಧ್ವಾನಮುಣ್ಮುವುದಱಂ ಮುನ್ನೆ
ಲಸಿತ ಶಿವಸದನಂಗಳೊಳಗೆ ಸೊಡರ್ಗುಡಿ ಬೆಳ್ಪ
ಪಸರಿಸದ ಮುನ್ನೆ ಜೊನ್ನಮನುಣ್ಬ ಪಕ್ಕಿಗಳ ಬಾಯ್ಗಳನಚ[3]ಚಿ[3]ದ ಮುನ್ನೆ
ಎಸೆವ ಕೌಮುದಿಯ ಸೊಂಪಳಿದು ಪೋಗದ ಮುನ್ನೆ
ಬಿಸುರುಹಚಯಂಗಳರಲದ ಮುನ್ನೆಯುಮಳ್ವಕ್ಕಿ
ಕುಸುಮಶರಹತಿಯ ಮಿಾಱದ ಮುನ್ನೆ ರವಿ ಮೂಡವೆಟ್ಟನಡರಿರದ ಮುನ್ನೆ ೩

---

1 ರುಷ (ಗ) 2 ಠಾ (ಗ) 3 ಳ (ಗ)

* ವೆಲ್ಲಕೊಂಡದ ಮಹಾದೇವರಡಿಗಳಂ ಪಂಡಿತೇಶ್ವರಂ ಕಂಡ ಕಥೆ (ಟ)

ಬಿದಿರ್ದು ಗಱಿಗಳ ಮೆಯ್ಯನು[1]ರ್ಬಿ[1] ಕಣ್ದೆಱೆದು ಮುಂ
ಪುದಿದ ತುಪ್ಪುಳ ಚುಂಚುವಿಂದೆ ನೇರ್ವಡಿಸುತ್ತೆ
ಮುದದೆ ಕಾಲ್ಗಳ ಮೇಲೆ ಪಕ್ಕಮಂ ಪಸರಿಸುತೆ ಕೊರಲೊಳಗನನುಮಾಡುತೆ
ಪದೆದು ಕಂಧರವೆತ್ತಿ ಪೊಟ್ಟೆಯಕ್ಕುಳಿಸುತ್ತು
ಮೊದವಿ ಮುಂಗೊೞಿಪ ಪರ್ವತನಾಥ ಕೊ ಎನು
ತ್ತೊದಱಿ ಕೂಗುವ ವೇಳೆಯಿಂ ಮುನ್ನೆ ಭರದೆ ತನ್ಮಯ ಪುಷ್ಪವಾಟಿಗೆಯ್ದಿ ೪

ಇನಿಸು ದಲದೊಳಗೀಶನಂ ಪೂಜೆಗೆಯ್ಯಲೊ
ಲ್ದಿನಸುಮಮರತ್ವಮಂ ಕುಡುವ ಕರವೀರಮಂ
ಮನವೊಸೆದು ಪರಿಪರಿದು ಪಿರಿದಾಗಿ ಕೊಯ್ದವಂ ಸೆಜ್ಜೆಯೊಳ್ ಬೈಚಿಡುತ್ತೆ
ಮಿನುಪ ಕರದಿಂ ಜಗುಳ್ದು ಪೂವೊಂದು ಬೀಳೆ ಗ
ಮ್ಮನೆ ಶಿವಂಗೆಂದ ತಜ್ಛ್ವ್ರತಂಗೆ ಮೋಕ್ಷಮಂ
ಸನಮುದಿಂದಿತ್ತ ಸೇವಂತಿಗೆಯ ಪುಷ್ಪಮಂ ನುಣ್ಪಿನಿಂದಂ ತಿಱಿಯುತೆ ೫

ಪಿರಿದು ದುರ್ಜಾತಿಯೆನಿಸುವ ಮಾನವಂ ಭಕ್ತಿ
ಭರದಿಂದೆ ಶಿವನ ಪೂಜಿಸೆ ಸುಜಾತಿಯ ಮಾಳ್ಪ
ಸರಳಜಾತಿಯ ಕುಸುಮಮಂ ತಿಱಿದುಕೊಳುತೆ ಬಂಧುರರೀತಿಗಳಿನಾವಗಂ
ಹರಿಸದಿಂ ಶಿವನ ಪೂಜಿಸೆ ಮುಕ್ತಿಯೊಳಗಿರಿಸು
ವಿರನಂತಿಗೆಯ ಕೊಯ್ದು ತನ್ನ ಕುಸುಮುಡೆ ಶಿವನ
ಚರಣಾ[2]ರ್ಚ[2]ನಂಗೆಯ್ಯೆ ತನ್ನಂತೆ ನಿರ್ಮಲಂ ಮಾಳ್ಪ ಮಲ್ಲಿಗೆಯ ತಿಱಿದು ೬

ಪಱಿಪಱಿದು ಶಿವನ ಮೇಲಿಟ್ಟ ಶಬರಾಧಿಪನ
ಮಿಱುಪ ಶಿವಪುರಿಗೆಯ್ದಿಸಿದ ಬಿಲ್ವಪತ್ರಮಂ
ತಿಱಿದರ್ಕಪದವಿಯಂ ಕುಡುವರ್ಕಪುಷ್ಪಮಂ ಭರದಿಂದೆ ಸೆಳೆದುಕೊಂಡು
ನೆಱೆ [3]ಕನಕ[3]ಪುಷ್ಪದ ಸಹಸ್ರಕೆಣೆಯಾಗಿ ಸಲೆ
ತಱಿಸಂದ ಕನಕಪುಷ್ಪಂಗಳಂ ಕೊಯ್ವುತಂ
ನೆಱೆವ ಪುಷ್ಪಫಲಂಗಳೆಲ್ಲಕ್ಕೆ ಮಿಗಿಲಾದ ಕರ್ನೈದಿಲಲರ ತಿಱಿದು ೭

ಎಲರಲೆದು ದಲಪಱಿಯದಳಿತುಳಿಯದುಳ್ಳಲರ
ದೊಲೆದು ಜೋಲದ ಕಂಪು ಸರಿದುಪೋಗದ ಪಸು
ರ್ನೆಲೆಗೊಳ್ಳದೆಸಳ್ಗಳೆಡೆಯುಡುಗಿ ಸುರ್ಕದ ಪಳೆಯ ಪೂವಲ್ಲದೊಳ್ಳಿತಾದ

---

[1] ರ್ಚಿ (ಕ) [2] ರ್ಪ (ಗ) [3] ಕನೀ (ಕ)

ಅಲರ್ಗಳಿಂ ಶಿವನ ಪೂಜಿಸಿಡೊಡಣಿಯುರಮಾದ
ಫಲಮಕ್ಕುಮೆಂದು ಶಾಸ್ತ್ರಂ ಪೇಳ್ಗುಮೆನುತೆ ಸ
ಲ್ಲಲಿತ ಕುಸುಮಂಗಳನೆ ತಿಱಿದು ಕರ[1]ಡ[1]ಗೆಯೊಳಗೆ ಸೈತಿಟ್ಟು ಸಂತೋಷದಿಂ ೮

ಪಿರಿದು ಬರ್ವಂಗಾಗಿ ತೊಡಳುಸಿರ್ದ ಕೇತಕಿಯ
ನಿರದಿಕ್ಕಿ ನಿರ್ಗಂಧಮಾದ [2]ಪುಷ್ಪಂ[2]ಗಳಂ
ಕರಮುಗ್ರಗಂಧಂಗಳುಳ್ಳ ಕುಸುಮಂಗಳಂ ಕಾಮಂಗೆ ಕೂರ್ಪಿನಿಂದೆ
ಸರಮಾದ ಮೊಲ್ಲೆವೂಗಳ ತಿಱಿಯದೊಂದೊಂದೆ
ಪರಮಪ್ರಸೂನಂಗಳಿಂ ಶಿವನನರ್ಚಿಸಲ್
ಪಿರಿದು ಫಲವೀವುದೆಗ್ಗಮಂಗಳಂ ತಿಱಿದುಕೊಂಡೊಯ್ದು ಬರುತಿರಲಿತ್ತಲು ೯

ಇಂತು ಪಂಡಿತವಿಭುವನಂತಪುಷ್ಪಂಗಳಂ
ಸಂತಸದೆ ತಿಱಿದುಕೊಂಡೈತರ್ಪ ವೇಳೆಯೊಳ್
ಕಂತುಹರಭಕ್ತಿಭರಿತಂ ವೆಲ್ಲಕೊಂಡದ ಮಹಾದೇವನೆಚ್ಚಱಿಸಗೆ
ಉಂತೆ ನಿದ್ರೆಯ ಭರದೆ ಮಱಿದಿರ್ದನೆನುತುಮ
ತ್ಯಂತಚಿಂತೆಯೊಳಿರುತ್ತಿನ್ನೆನರಮೂ ಪೂಗ
ಳಂ ತಿಱಿದುಕೊಳ್ವರಾರಾದೊಡಂ ಮತ್ತೆ ಬಿಱಿಗಾಳಿಯಿಂ ಮುಗುಳರಳ್ವುದು ೧೦

ಎಲರ ಬಳಿವಿಡಿದೆಯ್ದಿ ಮುಯ್ಯಾರಡಿಗಳ್ ಬಂದು
ನಲಿದು ಮೊಗವಿಟ್ಟಲುಗಿ ಕಮ್ಮನಿಪ್ಪೆಳೆಗಂಪ
ನೊಲವಿನಿಂದೀಂಟುವುವೊ ಬಲಿದ ಮುಗುಳ್ಗಳೊಳೆಯ್ದೆ ಮಱಿದುಂಬಿ ಮೇಲಱಿಯದೆ
ಅಲರ್ಗಳಂ ಬಾಯ ಬಾಕುಳಿಯಿಂದೆ ತುಳಿದು ಸ
ಲ್ಲಲಿತ ಕುಸುಮಾಮೋದಮಂ ಪೀರ್ವುವೋ ಬಳಿ
ಕ್ಕಲರ್ದ ಪೂಗಳ ಮರಂದಮನಳಿಗಳೊಲ್ದು ದಳದುಳಿಗೊಂಬುವೋ ಅಳ್ಕಱಿಂ ೧೧

ಸಿತಗ ತುಂಬಿಗಳೆಯ್ದಿ ಪುಷ್ಪರಸಮಂ ಪೀರ್ವ
ತತಿಲಂಪಟತ್ವದಿಂದೆಸಳ್ಗಡಣಮಂ ಕೊರಗಿ
ಸುತೆ ಪಕ್ಷಹತಿಯಿಂದೆ ನೋಯಿಸುವವೊ ನಾಡೆ ನಱುಗಂಪುದೋರ್ಪಲರ್ಗಳಂ
ಮತಿವಿಕಲನಾಗಿನಿತುಪೊಳ್ತು ಪಟ್ಟಿರ್ದನೆನ
ತತಿಶಯದಿನೆಳ್ದು ಪೂದೋಂಟಕ್ಕೆ ಪೋಪೆನೆನು
ತತಿವೇಗದಿಂದೆ ಪೋಪೆಡೆಯೊಳೀಶೋಪಕರಣಂಗಳಂ ಕಾಲ್ ಸೋಂಕಲು ೧೨

---

[1] ಡಿ (ಕ)  [2] ಕುಸುಮಂ (ಕ)

ಮಿನುಪ ಶಿವಪೂಜೋಪಕರಣಂಗಳಂ ಸೋಂಕಿ
ದನಿತರ್ಕೆ ಕಾಲ್ಗಳೆರಡಂ ಕೊಯ್ದು ಕೋಪದಿಂ
ಮನಸಿಜಾರಿಯ ಮುಂದೆ ವೀರತ್ವದಿಂದಿರಿಸಿ ಭನವಿತತಿಗೊಱೆಯ ಕಟ್ಟಿ
ಮನಮನುಱಿಯಾವರಿಸಿ ಶಿವಭಕ್ತಿ ಧೈರ್ಯತ್ವ
ಮನುನಯದೆ ತನುವನವಗವಿಸೆ ತಿರತನಮುಣ್ಮೆ
ಘನಭಾಷೆ ನೆಱೆತೀವಿತೋಱುವ ಮಹಾದೇವನಂ ಕಂಡು ಪಂಡಿತೇಂದ್ರಂ ೧೩

ಮಿಱುಪ ತದ್ವೃತ್ತಾಂತಮೆಲ್ಲಮಂ ಕೇಳ್ದಱಿದು
ಜೆಱಗೊಂದಿ ಮತ್ತೆ ಪರಮಾನಂದಯುತನಾಗಿ
ನೆಱೆ ಪೊಗಳ್ದನಾ ಮಹಾದೇವನಂ ಪಂಡಿತಾರಾಧ್ಯ ವಿಭುವಳ್ಕಱಿಂದಂ
ಉಱುವ ಭೃತ್ಯಾಚಾರ ಸದ್ಭಕ್ತಿಗಳ್ ಕರಂ
ಮೆಱೆವ ವೀರತ್ವ ಸದ್ವೃತ್ತಿಗಳ್ ಸಂತತಂ
ತಱಸಂದು ಧನ್ಯತ್ವ ಸೌಭಾಗ್ಯನಿಕರಂಗಳಿಂತೆಸೆದು ತೋಱವೇಡ ೧೪

ಕಂಡೆನೆನ್ನಯ್ಯನಂ ಕಂಡೆನೆನ್ನಾಳ್ದನಂ
ಕಂಡೆನೆನ್ನಯ ಕುಲಸ್ವಾಮಿಯಂ ಸಂತತಂ
ಕಂಡೆನಾಂ ಚಲದಾಳ್ಗನಂ ಭಾಷೆಯೊಡೆಯನಂ ಕಂಡೆನತಿಶಯ ಧೀರನಂ
ಕಂಡೆನಾಂ ಭಾಸುರೋದಗ್ರಭಕ್ತ್ಯೋಲ್ಲಸಿತ
ತುಂಡತಾಮರಸಮಾರ್ತಾಂಡನಂ ಭಕ್ತವನ
ಷಂಡಭಾಸುರವಸಂತನನೆಯ್ದೆ ಕಂಡೆನಾಂ ಕಂಡೆನೀಶ್ವರಭಕ್ತನಂ ೧೫

ವೀರ[1]ಭೃತ್ಯಾ[1]ಚಾರವಿಷಯೈಕವರ್ತಿ ಸುವಿ
ಚಾರ ಭೃತ್ಯಾಚಾರಸಂಪತ್ಪ್ರಪೂರ್ತಿ ವಿ
ಸ್ತಾರ ಭೃತ್ಯಾಚಾರಪದಚಕ್ರವರ್ತಿ ಸದ್ಧರ್ಮಸುವಿನೀತಕೀರ್ತಿ
ಘೋರತರಸಂಸಾರಭಂಜನನೆ ನಿನ್ನಂತೆ
ವೀರಭೃತ್ಯಾಚಾರದೊಳ್ ಮೆಱೆದರುಂಟೇ ಮ
ತ್ತೀ ರಸೆಯೊಳೆನುತೆ ಕೊಂಡಾಡುತ್ತೆ ಹರಭಕ್ತತತಿಗೆ ವಂದನೆಗೆಯ್ವುತೆ ೧೬

ಪರಮ ಸದ್ಭಕ್ತಿಶೂಕನನಮಿತ ಲೋಕನುತ
ತರದುರ್ಮತಾನೀಕಲುಂಟಾಕನತ್ಯಂತ
ವರಸದ್ಗುಣಸ್ತೋಮವಿಲಸತ್ಪತಾಕನತಿಲಲಿತಪುಣ್ಯಶ್ಲೋಕನ

---

[1] ಭಕ್ತಾ (ಗ)

ಸುರುಚಿರ ಕುಲಪ್ರದೀಪ[1]ಕನ[1] ಜಿತಚಾರ್ವಾಕ
ನರಿಭಯಂಕರನ ಶುಭಕರನ ಶಿವಗಣವದನ
ಸರಸಿರುಹರವಿ ಮಹಾದೇವನಡಿಗಳ ತುಂಡುಗಳನಭವನಿದಿರಿರ್ದವಂ ೧೭

ಬರಸೆಳೆದುಕೊಂಡು ಗುರುಪಂಡಿತೇಶಂ ತನ್ನ
ಕರಯುಗದಿನುರದೊಳಗೆ ಸಾರ್ಚಿಕೊಳುತುಂ ಮತ್ತೆ
ಹರಿಸದಿಂ ನಯನಂಗಳೊಳಗೊತ್ತಿಕೊಳುತೆ ಪಣೆಯೊಳ್ ತಾಳ್ದಿಕೊಳುತೆ ಭರದಿಂ
ಶಿರದೊಳಳವಡಿಸುತ್ತೆ ಸದ್ಭಕ್ತಿಪರವಶದೊ
ಳಿರದೆ ಕೊಂಡಾಡುತ್ತಮಿಾ ಪದಂಗಳನೊಸೆದು
ಶಿರದೊಳಗೆ ತಾಳ್ದಪಂ ಹರಪದವನಾವಗಂ ಶಿರದೊಳಗೆ ತಾಳ್ದಿರ್ದವಂ ೧೮

ಮಿನುಗುವೀ ಪದಕೆ ಪಂದಿಸಿದವಂ ಶಿವನ ಪದ
ವನಜಕ್ಕೆ ಪೊಡೆಗೆಡೆದವಂ ಮತ್ತಮಿಾ ಪದಕೆ
ವಿನಯದಿಂದಂ ತುಳಿಲ್ಗೆಯ್ದವಂ ಶಂಭುಪದಬಿಸರುಹಕೆ ಪೊಡಮಟ್ಟವಂ
ಎನಸುಮಿಾ ಪದರಜಮನೊಸೆದು ತಾ[2]ಳಿದವನಾ[2]
ಮನಸಿಜಾರಿಯ ಪಾದರೇಣುವಂ ತಳೆದಪಂ
ನನಸಿನಿಂದೀ ಪದದ ನುತಿಯೆ ಶಿವಪದನುತಿಯೆನಿಕ್ಕುಮಿಾ ಭೂಮಿಯೊಳಗೆ ೧೯

ಹರಿಯಱಿಸಿ ಕಾಣಲರಿದಾದ ಶಿವನಡಿಗಳಿವು
ಸರಸತಿಯ ಪತಿಭಕ್ತಿಯಿಂದೊತ್ತುವಾ ಶಿವನ
ಚರಣಂಗಳಿವು ವಿಧುವನವನಿಯೊಳ್ ನಿಟ್ಟೊರಸಿದೀಶ್ವರನ ಪದತಳಮಿವು
ಪರಗಯಾಸುರನ ಬೆನ್ನೆಡೆಯೊಳೆಸೆದಿರ್ಪ
ಪುರಹರನ ಪಾದಂಗಳಿವು ರಾವಣನ ಗೋಳಿಡಿಸಿ
ದುರುಪಾದಮಿವು ಕಾಳರಕ್ಕಸನ ವಕ್ಷಮಂ ತುಳಿದಂಘ್ರಿತಳಮಿವಲ್ತೆ ೨೦

ಮಿಱುಪ ಶಿವಭಕ್ತಿಪರಯೋಗಿಗಳ ಹೃದಯದೊಳ್
ನೆಱೆಶಿವ ಪಾದಂಗಳಿವು ವೇದವೇದಾಂತದೊಳ್
ತಱಿಸಂದು ವಿಸ್ಫುರಿಸುವಡಿಗಳಿವು ಪುಣ್ಯತೀರ್ಥಾನೀಕದೊಳಗೆ ಸತತಂ
ಉಱುವ ಚರಣಂಗಳಿವು ಪದ್ಮಾಕ್ಷನುರದೊಳಗೆ
ಕಱಿಕಗೊಂಡು ತೋರ್ಪನಘ ಗೌತಮ ದಧೀಚಿಗಳ
ನೆಱಿಕ ಪದತಳಂಗಳಿವು ಶಿವಶಿರೋಮಣಿಯಾದ ಕಣ್ಣಪ್ಪನಂಘ್ರಿಗಳಿವು ೨೧

---

1 ನವಿ (ಕ) 2 ಳ್ದಿರ್ದವಂ (ಗ)

ಮಿನುಗುವಾ ಕಣ್ಣಪ್ಪನಂಘ್ರಿಗಳ್ ಭಾವಿಸಲ್
ನನಸುಮಾ ಶಿವನ ಶಿರದೊಳಗೆಸೆವ ಪೂಜೆಗಳ
ವಿನಯದಿಂ ತೊಲಗಿಸುಗುಮಿಾ ಪದಯುಗಂಗಳೊಸೆದೀಗುವಾ ಭಕ್ತತತಿಗೆ
ಕನದಮಳ ಪೂಜೆಗಳನುದಜೆಂದಮಿಾ ಪಾದ
ವನಜಮಂ ಕಂಡಮಾತ್ರದೆ ಪಾಪತತಿ ಕಿಡುಗು
ಮನಿಶಮಿಾ ಪಾದಂಗಳಂ ತಾಳ್ದವಂ ಕರಂ ಸತ್ಕೀರ್ತಿಯುತನೆನಿಸುವಂ ೨೩

ಸತತಮಿಾ ಪಾದದ ರಜಃಪುಂಜಮಂ ಧರಿಸೆ
ವಿತತ ಸದ್ಭಕ್ತಿ ಜನಿಯಿಸುಗುಮಿಾ ಚರಣಮಂ
ನುತಿಸುವರೆ ಭಾಗ್ಯವಂತನ ಪುಣ್ಯಮಿನಿತೆಂದು ಪೊಗಳ್ವೊಡೆನಗರಿದಜಸ್ರಂ
ಅತಿಶಯದಿನಿಂತೆಂದು ತುತಿಸುತ್ತೆ ಪಾಡುತ್ತು
ಮತಿಮೋದದಿಂದಾಡುತೊಲ್ದೆಬಗುತಂ ಮತ್ತೆ
ಶಿತಿಕಂಠ ಮಜ್ಜನೋದಕಮೆಲ್ಲ ವಿಪತತಿಗೆ ಭೇಷಜಮದಕ್ಕುಮೆನುತೆ ೨೪

ಹರನ ಮುಂದಣ ದೀಪತೈಲಮೆಲ್ಲಾ ಶಸ್ತ್ರ
ದುರುತರ [1]ವ್ರ[1]ಣಮನುಜಿತ ಕಿಡಿಸುಗುಮೆನುತ್ತೆ ಭಾ
ಸುರ ಭಕ್ತಿಯಿಂದೆ ತತ್ತೀರ್ಥಜಲ ತದ್ದೀಪತೈಲಂಗಳಂ ಕೊಳುತ್ತೆ
ಚರಣಂಗಳಂ ಸೇರುವೆಯ ಮಾಡಿ ಮತ್ತೆ ಬಂ
ಧುರ ತೀರ್ಥಜಲ ದೀಪತೈಲಂಗಳಂ ಪೂಸಿ
ಹರಗಣ ಕರಸ್ಪರ್ಶ ಭೂತಿಯಂ ತಳೆದು ಸದ್ಭಕ್ತರ್ಗೆ ವಂದಿಸುತ್ತೆ ೨೫

ಎಲೆ ಮಹಾದೇವ ನಿನಗೊಲ್ದು ಸದ್ಭಕ್ತತತಿ
ಲಲಿತ ಚರಣಂಗಳಂ ದಯುಗೆಯ್ದರೇಳೆನು
ತ್ತೊಲವಿನಿಂದಾಲಿಂಗಸಂಗ್ರೈವುತೆಬ್ಬಿಸಲ್ ನಿಮಿರ್ದೆಳ್ದು ಸಂತೋಷದಿಂ
ನಿಲೆ ಶರಣಗಣಕೆ ವಂದನೆಗೆಯ್ವುದೆಂದು ಸ
ಲ್ಲಲಿತ ವಾಕ್ಯದೆ ಬೆಸಸೆ ಪಂಡಿತೇಂದ್ರಂ ಬಳಿ
ಕ್ಕಲರ್ದು ಶಿವಶರಣ ಪ್ರದಕ್ಷಿಣಂಗೆಯ್ದು ವಂದಿಸಲೊಸೆದು ಬರುತಿರ್ದನು ೨೬

ಭರದಿಂದಮದನೆಯ್ದೆ ಕಂಡು [2]ತ[2]ದ್ಭಕ್ತತತಿ
ಪಿರಿದು ಕೊಂಡಾಡೆ ನಭದೊಳ್ ನೋಡುತಿರ್ದ ಭಾ
ಸುರತರ ಪ್ರಮಥವರ ಚಿತ್ತದೊಳಗಾನಂದ ತುಳ್ಕಾಡೆ ಗಾಡಿಯಿಂದಂ

---

[1] ಪ್ರ (ಕ) [2] ಸ (ಕ)

ಪರನು ವೀರತೆದೋಱೆ ಪರವಾದಿಗಳ್ ಜಾಱೆ
ನಿರುತಮಘಸಮುದಯಂ ನೆಱೆಪಾಱೆ ಲೋಕದೊಳಿ
ಹರಿಸದಳವೇಱೆ ಭೂಸುರವಿಸರಮುಚ್ಛರಧಿ ಒಜತು ಪಂಕಂದೋಱಲು ೨೭

ಸುತನಿಕರಮೆಯ್ದೆ ಬೆದಱಲ್ ಪ್ರತ್ಯಯಂ ಮನೋ
ಹರಮಾಗಿ ತೋಱೆ ಪಂಡಿತವಿಭುವ ನೆಱೆ ಪೊಗಳೆ
ಪರಮಭೃತ್ಯತ್ವಮುಂ ಸತ್ಯಮುಂ ಭಾಷೆಯುಂ ಲೋಕದೊಳ್ ತವೆ ಪಸರಿಸಿ
ದುರಿತ ಹರಮೂರ್ತಿ ಸುರುಚಿರ ಪುಣ್ಯಕೀರ್ತಿ ಬಂ
ಧುರ ಮಹಾದೇವನಾ ಭಕ್ತವಿಸರಕ್ಕೆ ಭಾ
ಸುರಮಾದ ನಡೆಗಳಿಂದಂ ಪ್ರದಕ್ಷಿಣಮನೆಸಗಿದನಡೆಂತೆನೆ ಪೇಳ್ವೆನು ೨೭

ಮುನ್ನೆಸೆವ ಭಕ್ತರ್ಕಳೊಳ್ ನಡೆಗಳಿಂತೆಂದು
ಚನ್ನಮರ್ದು ನಡೆದು ತೋರ್ಪಂತೆ ನಡೆದಂ ಪಶುಪ
ನುನ್ನತೋನ್ನತ ಸುಪ್ರಸನ್ನತೆಯ ಪೂಣ್ದು ನಡೆಯಿಂತೆಂದು ತೋರ್ಪ ತೆಱ[1]ದಿಂ[1]
ಪನ್ನಿದಂ ನಡೆದನದ್ವೈತಿಗಳ ತಲೆಮೆಟ್ಟೆ
ಪನ್ನತಿಕೆಯಿಂದಿಂತು ನಡೆಯವೇಳ್ಕೆಂಬುದಂ
ಸನ್ನಿಯಿಂ ನಡೆದು ತೋರ್ಪಂತೆ ನಡೆದಂ ಮಹೋದ್ದಂಡಂ ಮಹಾದೇವನು ೨೮

ವಿಸುಪ ಕರ್ಮಂಗಳಂ ಮೆಟ್ಟೆ ಹುಡಿಹುಡಿಮಾಡು
ತೊಸೆದಿಂತು ನಡೆಯವೇಳ್ಕೆಂಬುದಂ ತೋಱುವಂ
[2]ತೊ[2]ಸೆದು ನಡೆದಂ ಭವಾಂಭೋಧಿಯಂ ಕಾಲ್ಗಳಿಂದೊದೆದಿಂತು ನಡೆಯವೇಳ್ಕುಂ
ನಿಸದಮೆಂದೆಯ್ದೆ ತೋಱುವ ಪಾಂಗಿನಿಂ ನಡೆದ
ನಸವಸದೆ ಮುನ್ನಡೆವ ಭಂಗಿ ತಪ್ಪದೆ ಕಾಲ್ಗ
ಳಸಿದಾಗದುಬ್ಬದೊಳವಾಗುದೋಱದೆ ಮತ್ತೆ ನಸುಗುಂಟುದೋಱದೆನಸಂ ೨೯

ಸಲೆ ಪೆರ್ಚು ಕುಂದುದೋಱದೆ ನೆತ್ತರೆಸಗದತಿ
ಲಲಿತತ್ವಮುಡುಗದೆ ಗುಜ್ಜುಗೊಂಡಿರದೆ ಕೊ
ಯ್ದಲಗು ಗಾಯಂ ತೋಱದಿರ್ದುದಂ ಕಂಡು ಗಣವಿಸರವಚ್ಚರಿಗೊಳುತ್ತೆ
ನಲಿದು ಹರ್ಷಾಶ್ರುವಾರಿಧಿಯೊಳಗೆ ಮುಳುಗುತ್ತು
ಮೊಲವಿನಿಂ ನುಡಿದರಿಂತಿರವೇಡವೇ ವ್ರತದ
ನೆಲೆ ವ[3]ನದ[3] ಬಲ್ಪು ಹರಣದ ಮೇಲಣಾಸೆಯಿಲ್ಲದ ಭಕ್ತಿನಿಷ್ಠೆಯನಿಶಂ ೩೦

---

[1] ದಿ (ಗ) [2] ತೊ (ಗ) [3] ದನ (ಕ)

ಪದೆಯುಗಂಗಳ ತಱಿದು ಶಿವನ ಮುಂದಿರಿಸಿ ಲೋ
ಕದೊಳಿಂತು ಕೀರ್ತಿವಡೆದವರುಂಟೆ ನಿನ್ನಂತೆ
ಸದಮಲ ಮಹಾದೇವ ನಿನ್ನ ವೀರವ್ರತವನೆಣಿಸಲ್ಕೆ ಫಣಿಪತಿಗೆಯುಂ
ಪದೆದೆಣಿಸಲಳವಲ್ತು ನಿನ್ನ ಭೃತ್ಯಾಚಾರ
ಕೊದವಿದತಿಶಯಭಕ್ತಿಗೆಣೆಯಿಲ್ಲ ಭೂಮಿಯೊಳ
ಗಿದು ನಿಕ್ಕುವಂ ನೋಡಲೆಂದು ಭಕ್ತಪ್ರವರರೊಸೆದು ನುತಿಸುತೆ ಮತ್ತೆಯುಂ ೩೧

ಪರಮಗುರು ಮಲ್ಲಿಕಾರ್ಜುನಪಂಡಿತೇಂದ್ರ ನಿ
ನ್ನಿರವಕ್ಕಜಂ ಭಾವಿಸಲ್ ಮಹಿಮೆಯುನ್ನತಿಗೆ
ದೊರೆಯುಂಟೆ ಭೂಮಿಯೊಳ್ ಪ್ರತ್ಯಕ್ಷ ಭೂರುದ್ರ ನಿನ್ನ ಮಹಿಮೆಯ ಪೊಗಳಲು
ಪುರಹರಂಗಳವಲ್ತು ಮತ್ತಿನವರ್ಗಿಂತು ನೋ
ಡಿರದೆಯುದ್ದುಗುಮೆಯೆನುತೆ ಸಂತೋಷದಿಂ ಭಕ್ತ
ವರರೆಯ್ದೆ ಪೊಗಳುತ್ತೆ ಮುನ್ನಿಂತು ಮೆಱೆದ ಭಕ್ತರ ಕಥೆಯ ಪೇಳ್ದರೊಸೆದು ೩೨

ಸದಮಲಪ್ರಚುರವಿಶ್ರುತ ಪರಮಭಕ್ತಗಣ
ಪದಸರೋರುಹಸಾಂದ್ರ ಮಕರಂದಪಾನ ಸ
ಮ್ಮುದಿತ ಚಂಚಚ್ಚಂಚರೀಕನನವರತ ಪಂಚಾಕ್ಷರಿ[illegible]ದಯಂ
ವಿದಿತ ಮಂಜುಲನೀಲಕಂಠಾಹ್ವಯಂ ಮನೋ[illegible]
ಮುದದೆ ಪೇಳ್ದುರುತರಾರಾಧ್ಯ ಚಾರಿತ್ರದೊಳ
ಗಿದು ವೆಲ್ಲಕೊಂಡದ ಮಹಾದೇವನಡಿಗಳಂ ಪಡೆದ ಕಥನಂ ಶುಭಕರಂ ೩೩

# ಎರಡನೆಯ ಸಂಧಿ

## ಕಲಿಕಂಬ ಪಿಳ್ಳೈನ್ನೈನಾರ ಕಥೆ

ಸೂಚನೆ : ಕಲಿಕಂಬ ಪಿಳ್ಳೈನಾಯ್ನಾರಿಗಳ ಕಥೆಗಳಂ
ನಲಿದು ಕೇಳಿಲೆ ಪಾಲ್ಕುಱಿಕೆ ಸೋಮಗುಣಹಾರ
ಲಲಿತಭಕ್ತಸ್ವಾಂತ ಸಾರಸಾಮೋಲ ಸೋಮ ನಿರ್ಧೂತ ಪಾಪವಾರಾ

ಮಿನುಪ ಕೆಂಜೆಡೆಗೆಂಪು ಕಿಸುಸಂಜೆಯಂ ಪೋಲೆ
ಕನದಭ್ರಗಂಗಾಕಣಾನೀಕಮಾಱಿಲಂ
ಸನಯದಿಂದನುಕರಿಸಿ ಕೊರಲೆಡೆಯೊಳೆಸೆವ ಗರಳಂ ಕೞ್ತಲೆಯನೇಳಿಸೆ
ತನಿನೇಹದಿಂದೆಡದ ತೊಡೆಯನೆಡೆಗೊಂಡು ಮಿಗೆ
ಮಿನು[1]ಕ[1]ದೋಱುವ ಶಿವೆಯ ನುಣ್ಮೊಗಂ ಚಂದಿರನ
ನೆನಸು [2]ಪಳಿಯ[2]ಲ್ಕಿರುಳ ತೆಱದೆ ರಾಜಿಪ ನೀಲಕಂಠನೆಮಗೀಗೆ ಶುಭಮಂ ೧

ಮುನ್ನಿನಱುವತ್ತುಮೂವರೊಳೊರ್ವನತಿಭಕ್ತಿ
ಗುನ್ನತಂ ಕಲಿಕಂಬಗಣನಾಥನತ್ಯನ್ನ
ತೋನ್ನತಂ ಜಂಗಮಂ ತನ್ನಯ ಗೃಹಕ್ಕೆ ಬರೆ ಸಾಕ್ಷಾಚ್ಛಿವಂ ದಲೆಂದು
ನನ್ನಿಯಿಂ ಭಾವಿಸುತ್ತವರ ಪಾದಾಬ್ಜಮಂ
ಸನ್ನಿದಂ ನಿಜಭಕ್ತಿಯಿಂ ತೊಳೆದು ಪಾದಾಂಬು
ವನ್ನಲಿದು ಸೇವಿಸುವನೀಶಪಾದಾಂಬುವಿಂ ಮಿಗಿಲೆಂಬ ಭಾವದಿಂ[3]ದಂ[3] ೨

ಇಂತು ಚರಲಿಂಗಪೂಜೆಯನಳ್ಕಱಿಂ[4]ದೊಲ್ದು[4]
ಸಂತತಂ ಮಾಡುತುಂ ಭಕ್ತಪಾದೋದಕವ
ನಂತ ಭವಗದವಿತತಿಗೌಷಧಮನಾದಿಯ ಮಲತ್ರಯಂಗಳ ಕಿಡಿಪುದು
ಉಂತೆ ಧಿಕ್ಕರಿಸುಗುಂ ಪಾಪಸಂತತಿಯನ
ತ್ಯಂತ ಪುಣ್ಯಾಲಯಮದಕ್ಕುಮಜ್ಞಾನಮಂ
ಮುಂತುವರಿದಱಿಯಟ್ಟುಗುಂ ಸಕಲಸಂಪದಂಗಳ್ಗೆ ತಾಯ್ಮನೆಯೆನಿಪುದು ೩

1 ಗು (ಕ)  2 ಮಿಳಿಸ (ಗ)  3 ದ (ಗ)  4 ದೆಯ್ದೆ (ಗ)

ಚರಲಿಂಗ ಪಾದೋದಕಂ ಮತ್ತೆ ಭಾವಿಸಲ್
ಪಿರಿದು ದೃಷ್ಟಾದೃಷ್ಟ ಫಲಸಾಧನಂ ಸರ್ವ
ಪರಿರಕ್ಷೆ ಭಾಸುರಾಮಲಪುಣ್ಯತೀರ್ಥೌಘಮೊಗೆದ ಮಾತೃಸ್ಥಾನವು
[1]ಪರಪುಣ್ಯತೀರ್ಥನಿಚಯದೊಳೆ ಮುಳುಗುವುದಱಂ
ದುರುಪುಣ್ಯಮಕ್ಕುಮೀ ಪಾದಾಂಬುವಿಂತಲ್ಕೆ
ಭರದಿನಪವರ್ಗಫಲಮಂ ನಿರಾಯಾಸದೆ ಕುಡುಗುಂ ಸಂತತಂ ನಿಕ್ಕುವಂ ೪

ಧರಣಿಯೊಳ್ ಕ್ಷೀರೋದಕನ್ಯಾಯಮೆಂಬುದಂ
ಪರಿಭವಿಸಿತೀ ಭಕ್ತಪಾದಾಂಬುವೆಂತೆನಲ್
ಪಿರಿದು ತನ್ನಂ ಕೊಂಡವನ ತಾಯ ಮೊಲೆವಾಲನುಂತೆ [2]ಕಿಡಿಸುಗುಮಣಿಯರಂ
ಹರಭಕ್ತ ಪಾದಾಂಬುವೇ ಅಧಿಕ ಶುಭಕರಂ
ಹರನ ಪಾದಾಂಬುವಿಂತೆಂದು ಶ್ರುತಿಗಳ್ ಬಿಡದೆ
ನಿರತಮುಲಿಯುತ್ತಿರ್ಪುವಱಂದೆ ಹರಭಕ್ತಪಾದಾಂಬು ಸರ್ವಶುಭದಂ ೫

ಹರ[3]ಭಕ್ತಪಾದ[3]ಜಲಮಾವನಂ ಧನ್ಯನಂ
ಪಿರಿದು ಮಾಡುಗುಮಾವನಿಂದೆ ಸೇವಿಸಪಡುಗು
ಮಿರದೆ ಮತ್ತಾವಂಗೆ ಹೃದ್ಯತ್ವಮಕ್ಕು ಮತ್ತಾವನತ್ತಣಿನಾವಗಂ
ಕರಮುನ್ನತಿಯನೆಯ್ದುಗುಂ ಮತ್ತೆ[4]ಮಾವ[4]ನುರು
ತರ ಶುಭೇಷ್ಟಾರ್ಥಮಂ ಕುಡುಗು ಮತ್ತಾವನೊಳ್
ಹ[5]ರಿಸ[5]ದಿಂದಿರ್ಪುವವನೇ ಶಂಭುವಾತನೊಳ್ ಶಿವನಣಿಯರಂ ರಾಜಿಕುಂ ೬

ಅದಱಂದಮೀ ಪಾದಸಲಿಲಕ್ಕೆ ತೋಡು ಲೋ
ಕದೊಳುಂಟೆ ಎಂದು ಮನದೊಳ್ ಬಗೆದು ಹರಭಕ್ತ
ಪದಜಲಮನೆಲ್ಲಾಗಳೀಂಟುವುದೆ ನೇಮವಾಗಿಯೆ ತನಗೆ ಚಲಿಸುತಿರಲು
ಪಡೆದು ಭಕ್ತರ್ ತನ್ನ ಮನೆಗೊಂದುದಿನ ಬರಲ್
ಮುದಮಲರ್ದು ಭಕ್ತಿಯಿಂದಡಿದೊಳೆವ ವೇಳೆಯೊಳ್
ಪದಮನೊಯ್ಯನೆ ನೀಡೆ ತನ್ನ ಮನೆದೊಳ್ತ್ತಣಿಉಗಂ [6]ಮ[6]ಲ್ಲನೆಂಬನೊರ್ವಂ ೭

ಶಿವಮುದ್ರೆಯುಳ್ಳನಾವಂ ಭಾವಿಸಲ್ಕವಂ
ಶಿವನೆ ಅಪ್ಪಂ ತಪ್ಪದೆಂಬ ಸದ್ಭಾವದಿಂ
ತವೆ ಪದಪ್ರಕ್ಷಾಳನಂಗೆಯ್ವುತಿರಲುದಕವೆಱತವ ತದ್ಭಾರ್ಯೆ ನೋಡಿ

---

[1] ಪ (ಕ) [2] ಕೆ (ಗ) [3] ಪಾದಭಕ್ತ (ಗ) [4] ಮವನ (ಗ) [5] ರುಷ (ಗ)
[6] ಬ. (ಗ)

ತವಕದಿಂ ನೀರೆಱೆಯದಿಂತೆಂದಳವಳಾಗ
ಳಿವನೆಮ್ಮ ಸಿರಿಗಿಯಣ್ಣಂಗಂ ಮಲ್ಲನೀ ಭಕ್ತ
ನಿವಹದೊಳ್ ಬಂದನಱಿ ಶಿವಭಕ್ತನಂದದಿಂದೆಂದು ಬಿಱುನುಡಿಯ ನುಡಿದು ೮

ಮನೆಗೆಲಸವಂ ಮಾಡಲಾಱದಾಸತ್ತ ಗ
ಮ್ಮನೆ ತಲೆಯ ಬೋಳ್ಮಾಡಿಕೊಂಡು ಬರಲಿವನೆಯ್ದೆ
ಮಿನುಪ ಜಂಗಮವೆ ಇವನಡಿಗಳಂ ತೊಳೆದಪ್ಪ ವಿಕಳತ್ವಮೆಡೆಗೊಂಡುದೊ
ಎನಸುಮೀ ಮಲ್ಲನಡಿಗರ್ಚಲಪವರ್ಗಮೇ
ನೆಮಗೊಳ್ಗ[1]ಮೋ[1] ಮಲ್ಲನಡಿದೊಳೆದು ಜೋಳಸಂ
ತನಘ ಶಿವಪುರಮುನೀತನುವೆರಸಿ ನಾಡೆ ಪೊಕ್ಕಪೆಯೊ ಮತ್ತಂ ಭಾವಿಸೆ ೯

ತಿರುನೀಲಕಂಠನಂತೊಲ್ದು ಸತಿಯೊಡಗೂಡಿ
ಭರದೆ ಕೈಲಾಸಕ್ಕೆ ಪೋದಪೆಯೊ ಮತ್ತಮಾ
ಸಿರಿಯಾಳನಂತೆವೋಲೇಳ್ಕೋಟಿಗಳ್ಗೂಡಿ ಶಿವಪುರಕ್ಕೆಯ್ದಿದಪೆಯೊ
ಪರಿಜನಂಗೂಡಿ ಚೇರಮರಾಜನಂತೆ ಪುರ
ಹರನ ಪಟ್ಟಣಕೆಯ್ದಿದಪೆಯೊ ನಿನ್ನಯ ಭಕ್ತಿ
ಯಿರವಿಂತುಟಲ್ಲದಱಯಲ್ಬಾರದೇ ಲೋಕವೆಯ್ದೆ ನಗುಗುಂ ಸಂತತಂ ೧೦

ಎಸಗುವಶ್ಮಂತ ಭಸಿತವನ್ನೊರೆದುಕೊಂಡು ಮಿಗೆ
ಪಸುಗೂಸುಗಳ ತೆಱದೆ ತಲೆಯ ಬೋಳಿಸಿಕೊಂಡು
ಮಿಸುಕಾ[2]ತೀ[2] ಜಂಗಮದ ತೆಱದಿನಿರ್ಪುದಿದಾವ ಬಾಧೆಯಿಂತಾದಡೊಲ್ದು
ಅಸವಸದೆ ಮನೆದೊಂಡರೆಲ್ಲರೀ ತೆಱದಿಂದೆ
ನಿಸದಮನಿಶಂ ಬರ್ಪರೇಕೆ ಬಹುವಾಕ್ಯಂಗ
ಳೊಸೆದಿವನ ಕಾಲ್ಗೆ ನೀರೆಱೆಯೆ ನಾಂ ನೀನೆ ತೊಳೆವುದೆನುತ್ತೆ ನುಡಿದು ಮತ್ತಂ ೧೧

ಇವನಡಿಗೆ ನೀರೆಱೆದೊಡೆನ್ನ ಬಂಧುಗಳನಿಶ
ಮವನಿಯೊಳ್ ಮಿಗೆ ನಗುವರೆನುತೆ ಪೊಂಗಳಸವಂ
ತವಕದಿಂ ನೆಲಕಿಕ್ಕಿ ನಿಂದಿರ್ದ ನಿಜಸತಿಯ ನುಡಿಗೇಳಿ ಕಲಿಕಂಬನು
ಕಿವಿಗಳಂ ಮುಚ್ಚಿಕೊಳುತಂ ಕಿನಿಸಿ ಭರದಿಂದೆ
ಶಿವಶಿವೆನುತುಂ ನುಡಿದನಾ ಕಾಮಿನಿಯನೆಲೆಗೆ
ಶಿವಮೂರ್ತಿಯೀತನೆನಸುಂ ಕಂಡುದಿಲ್ಲ ನೀಂ ಬಱದೆ ಗಳಪಲ್ ಬರ್ಕುಮೆ ೧೨

---

1 ಮೇ (ಕ) 2 ತಿರ (ಗ)

ವಿನುತ ಸಾಕ್ಷಾಲ್ಲಿಂಗಮೂರ್ತಿಯಂ ಕಾಣುತ್ತೆ
ಮನಸಿಜಾಂತಕರೂಪನಂ ರುದ್ರಸಾಕಾರ
ನೆನಿಪನಂ ಕಾಣುತ್ತುಮೆಲೆ ಮೂಢೆ ಸಿತಗೆ ಮಾನವನೆನಲ್ ತಕ್ಕುದೆಂ[1]ತು[1]
ಮನುಜಂಗದೆಲ್ಲಿತ್ತೊ ಮಲ್ಲಿಕಾಶುಭ್ರದಂ
ತನಿಶಮೆಸೆದಿರ್ಪ ಬಾಂದೊಱೆ ಮೃಣಾಳಾಂಶುವಂ
ಘನಮೇಳಿದಂಗೆಯ್ವ ಚಂದ್ರಕಲೆಯುರಗಪತಿಯಂಗುಲೀಯಕಮಾವಗಂ ೧೩

ಸಿತವಾರಿಧರ ಮಧ್ಯಗತ ತಟಿಲ್ಲತೆಯಂತೆ
ನುತಲಲಾಟದೊಳಗ್ನಿನೇತ್ರಮುಂಟೇ ನರರ್ಗೆ
ವಿತತ ಜಂಬೂಫಲೋಪಮ ವಿಷಂ ಕಂಠದೊಳ್ ಮನುಜರ್ಗದೆತ್ತಲುಂಟು
ಶಿತಿಕಂಠಚಿಹ್ನಂಗಳಂ ಕಂಡು ಕಂಡು ಮಿಗೆ
ಮತಿಗೆಟ್ಟು ಮರಳಿ ಮಲ್ಲಂ ಮಲ್ಲನೆನುತುಮು
ದ್ಧತನಾದದಿಂ ನುಡಿಯಲಕ್ಕುಮೇ ಶ್ರೀಶೈಲಮಲ್ಲಿಕಾರ್ಜುನರೂಪನಂ ೧೪

ಎಲೆ ಯುವತಿ ನಿನ್ನ ನೀನಱಿಯದೇ ಮೈಮಱೆದು
ಸಲೆ ಅಭವಮೂರ್ತಿಯಂ ಜಡನೆಂದು ಶಠನೆಂದು
ನಲಿದು ದಾಸೀಪುತ್ರನೆಂದು ಬಗೆದಂಘ್ರಿಗಳಿಗೊಲ್ದು ಜಲಮಂ ನೀಡದೆ
ತೊಲಗಿರ್ದ ಪಾತಕಂ ದುರ್ನೀತಿಯನ್ಯಾಯ
ಮಲಘು ದುರ್ಮಾರ್ಗಮೆಂಬಿವು ನಿನ್ನ ಕೊಂದುವೆಂ
ದುಲಿಯುತುಂ ನಿಜಸತಿಯ ಕರಯುಗಮಂ ನಡೆಗಿಕ್ಕಿ ತಱಿದು ಬಿಸುಟಂ ಕೋಪದಿಂ ೧೫

ಹರಭಕ್ತಪಾದಾರ್ಚನೆಗೆ ಸಲಿಲವೆಱೆಯದಿ
ರ್ದುರುಪಾತಕಿಯ ನೋಡಿ ಮನದಳಲ್ ಪೋಗದತಿ
ಭರದಿಂದೆ ಮುಂದಲೆಯಂ ಪಿಡಿದೆಳೆದುಕೊಂಡೊಯ್ದು ಪಿಂತಿಲೊಳ್ ಬೀಸಾಡಿದಂ
ವರಯುವತಿಯೆಂದು ಬಗೆಯದೆ ಕೂರ್ಮೆಯವಳೆಂದು
ಪಿರಿದು ನೆನೆಯದೆ ಕೈಗಳಂ ತುಂಡಿಸಿಕ್ಕಿದಂ
ಧರಣಿಯೊಳ್ ಕಲಿಕಂಬನಿದು ಚೋದ್ಯಮೆನುತೆ ಪೊಗಳ್ದರ್ ಭಕ್ತರತಿಶಯದೊಳು ೧೬

ಭಲರೆ ಕಲಿಕಂಬ ನಿ[2]ನ್ನನ್ನ[2]ರಾರೀ ಧರೆಯೊ
ಳಲಘು ವಿಶ್ವಾಸಮುಳ್ಳವರೆಂದು ಕೀರ್ತಿಸು
ತ್ತೊಲವಿನಿಂ ಮುನ್ನೆ ಕೇಳ್ದಱಿವೆವಿಂತಪ್ಪ ಕಥೆಗಳನೆಂದು ಭಕ್ತರೆಯ್ದೆ

---

[1] ದು (ಕ) [2] ನ್ನಿಂದ (ಗ)

ನಲಿದು ನುಡಿಯುತ್ತೆ ಮುನ್ನಿಂತು ಮಿಗೆ ಮೆಱೆದ ಸ
ಲ್ಲಲಿತ ಭಕ್ತರ ಕಥೆಗಳಂ ಪೇಳ್ದರಿಂತೆನಲ್
ಸಲೆ ಸೈಕತದೆ ಲಿಂಗಮಂ ಮಾಡಿ ಚಂಡೇಶನತ್ಯಂತಭಕ್ತಿಯಿಂದೆ ೧೭

ನುತಿಸುತುಂ ಕ್ಷೀರಾಭಿಷೇಚನಂಗೆಯ್ವುತ್ತು
ಮತಿಹರುಷದಿಂ ಪಶುಗಳಂ ಕಾವುತಿರಲಲ್ಲಿ
ಗತಿವೇಗದಿಂದೆ ತತ್ಪಿತನೆಯ್ದಿ ಬಂದು ಸೈಕತಲಿಂಗಮಂ ಕಾಣುತೆ
ಸುತನ ನುಡಿಗಂ ಮಳಲಗುಪ್ಪೆಗೀ ಪಶುಗಳಂ
ಸತತಮುಂ ಕಱೆದು ಪಾಲೆಱೆದು ಪಾಳ್ಗೆಡಿಪ ಎಂ
ದತುಳ ಕೋಪದಿನಿದಱೀನೇನಪ್ಪುದೆಂದು ತಲ್ಲಿಂಗಮಂ ಕಾಲೊಳೊದೆಯೆ ೧೮

ಮನದೊಳಗೆ ನೊಂದು ಚಂಡೇಶನೆನ್ನಯ ಹರಣ
ವೆನಿಪ ನಿಜಲಿಂಗಮೂರ್ತಿಯ ಕಾಲ್ಗಳಿಂದೊದೆದ
ಘನ ಪಾತಕಿಯನೆನ್ನ ತಂದೆಯೆನಲಕ್ಕುಮೇ ಎನುತೆ ಕಡುಗೋಪದಿಂದಂ
ಎನಸುಮೊಂದಂ ವಿಚಾರಂಗೆಯ್ಯದವನಡಿಯ
ನನುನಯದೆ ಕೊಯ್ದನಱಿ ಚಂಡೇಶನಂದು ಮು
ನ್ನಿನ ಕಥೆಯದಂತಿರ್ಕೆ ಕಲಿಕಂಬ ಕಂಡೆವೀಗಳ್ ಸಿನ್ನನೆನುತೆ ಮತ್ತಂ ೧೯

ಮಿಸುಗುವಾಡಿನ ಹಿಕ್ಕೆಯಂ ಲಿಂಗವೆಂದು ಭಾ
ವಿಸಿಯಜಕ್ಷೀರದಿಂದಭಿಷೇಚನಂಗೆಯ್ವ
ತೆಸೆದಿರಲ್ಕನಿತಱೊಳಗವನ ಪಿತನೆಳ್ತಂದು ನುಡಿದನಾ ಸುತನ ಕಿಸಿಸಿ
ಒಸೆದಜಕ್ಷೀರಮಂ ಮಿಱುಪ ಹಿಕ್ಕೆಯ ಮೇಲೆ
ನಿಸದಮೆಱೆದಪೆಯೆನುತ್ತಾ ಲಿಂಗಮಂ ಕಾಲೊ
ಳಸವಸದಿನೊದೆಯಲ್ಕೆ ತತ್ಪಿತನನೀಕ್ಷಿಸುತೆ ಕಾಟಕೋಟಂ [1]ರೋಷ[1]ದಿಂ ೨೦

ನುಡಿದನೆನ್ನಯ ಲಿಂಗಮಂ ತನ್ನ ಕಾಲೊಳಗೆ
ತಡೆಯದೊದೆದಾ ಪಾಪಿಯಂ ಕ್ರೂರಕರ್ಮಿಯಂ
ಮಿಡುಕಲೀಯದೆ ಪುಚ್ಚಳಿಸುವೆನಿಲ್ಲಿಯೆನುತ್ತೆ ಸಾಹಸಂ ಬಿಚ್ಚಳಿಸಲು
ಕೊಡಲಿಯಿಂ ಖಂಡಿಸಿದನಾತನ ಶಿರಸ್ಸನಂ
ತಡಿಗಳಂ ತುಂಡಿಸಿದನಾ ಕಾಟಕೋಟನಂ
ದುಡುಪಧರನಂ ನಿಂದಿಸಿದ ತಂದೆಯಂ ಕೊಂದನಿದು ಸಿದ್ಧಲೋಕದೊಳಗೆ ೨೧

---

[1] ಕೋಪ (ಗ)

ಮತ್ತೊರ್ವಳಭವನಪದಭಕ್ತೆ ಸಚ್ಚಾರಿತ್ರೆ
ಯುತ್ತಮಾಚಾರಸಂಪನ್ನೆ ನಿಂಬವ್ವೆ ಸ
ದ್ವೃತ್ತಿಯಿಂದೊಪ್ಪಿರ್ಪಳೊಂದುದಿನಮೀಶಂಗೆ ನೈವೇದ್ಯಮಂ ವಿರಚಿಸಿ
ಬಿತ್ತರದೆ ಜತನದೊಳಗಿಂಬಿಟ್ಟು ಶೀಘ್ರದಿಂ
ದೊತ್ತಿನ ಗೃಹಕ್ಕೆಯ್ದೆ ಬರ್ಪನಿತಱೊಳಗೆ ಬಳಿ
ಕಿತ್ತ ತನ್ನಯ ಸುತಂ ಪೂಜಿಗಣಿಂ ಬಂದೊಂದಪೂಪಮಂ ತೆಗೆದು ಮೆಲಲು ೨೨

ಅನಿತಱೊಳೆ ಬಂದದಂ ಕಂಡು ಪೊಲ್ಲಮೆಗೆಯ್ದೆ
ಘನಪಾತಕಿಯೆ ಶಿವಂ ಭುಂಜಿಪುದಱಿಂ ಮುನ್ನೆ
ಮನಮೆಳಸಿ ಸವಿದೆಯೆನುತಂ ತನ್ನ ಮನಧನ್ನನಪ್ಪಣುಗನಂ ಕೋಪದಿಂ
ಮಿನುಪ ಮುಸಲದೊಳೆಯ್ದೆ ಪೊಯ್ದು ಕೊಂದಳ್ ಮುನ್ನೆ
ಮನಸಿಜಾರಿದ್ರೋಹರಂ ಕೊಂದರೊಳರಿಂತು
ಮುನಿದು ಜಂಗಮನಿಂದೆಗೆಯ್ದ ಸದ್ವನಿತೆಯಂ ಕೈವಱಿದನರ್ಪಂಚವು ೨೩

ಬಳಿಕಮೀಶ್ವರಭಕ್ತನುನ್ನತ ಮಹಾಯುಶಂ
ಲಳಿತ ಚೋಳಕ್ಷಿತೀಶಂ ಪರಾಪ್ತದ ರಾಜ
ಕುಳಮನಳಱಿಸಿ ಕಪ್ಪಮಂ ಕೊಳಲ್ ದಂಡೆತ್ತಿ ಪೋದ[1]ನಿತ್ತಣ್ಗೆ ಣೆಪುರಂ[1]
ಮಿಳಿರ್ವ ತನ್ನಯ ದೇಶದೊಳಗೆ ದುರ್ಭಿಕ್ಷಮೆ
ಯ್ದೆಳಸೆ ಪರಮೇಶ್ವರನ ಕಣಜಂಗಳೊಳಗಿರ್ದ
ಕಳಮರಾಶಿಯ ಕಿಳ್ತು ತಚ್ಚೋಳರಾಯನಂಗನೆ ತನ್ನವರ್ಗೆ ಕುಡಲು ೨೪

ಅವಳ ಪಿತೃಗಳ್ ಬಂಧುವರ್ಗಂಗಳೊಲವಿಂದೆ
ತವಕದಿಂ ತಂತಮ್ಮ ಸದನದೊಳೆ ನೆಲ್ಗಳಂ
ಸವಿನಯದೆ ತುಂಬಿಕೊಳೆ ಚೋಳನಿರ್ದೆಡೆಗೆ ಶಿವನತಿಭರದಿನೆಯ್ದಿ ನುಡಿದಂ
ಭುವನಪತಿ ಚೋಳ ಕೇಳೆಮ್ಮ ಕಣಜದೆ ರಾಜಿ
ಸುವ ನೆಲ್ಗಳಂ ತೆಗದು ನಿನ್ನ ಸತಿ ತನ್ನ ಬಾಂ
ಧವರ್ಗೆ ಸೂಱೆಯನಿತ್ತಳೆಂದು ಪೇಳಲ್ ಕೇಳ್ದು ಮುಗುಳ್ದೆಯ್ದಿದಂ ಪುರವನು ೨೫

ಕರಸಿ ತನ್ನಯ ಪಟ್ಟದರಸಿಯಂ ಕೇಳ್ದನೆಲೆ
ತರುಣಿ ಕಣಜದೊಳಿರ್ದ ನೆಲ್ಲನಾರ್ಗಿತ್ತೆಯೆನೆ
ಪಿರಿದು ಪೆಳಱುತ್ತೆ ನುಡಿದಳ್ ಕ್ಷಾಮಮೆಯ್ದಲೆನ್ನಯ ಬಂಧುವರ್ಗಮೆಲ್ಲಂ

[1] ನತ್ತಲುಮಿತ್ತಲುಂ (ಗ)

ಭಯದಿಂದಮೆನ್ನ ತಾಯ್ತಂದೆಗಳ ಕೂಡೊಲ್ದು
ಕರಮೆ ದುರ್ಭಿಕ್ಷದಿಂ ನೊಂದೆನ್ನ ಬಂದೆಯ್ದಿ
ನಿರತಮೇಳಿದಗೆಯ್ಯಲಪಯಶಂ ನಿಮಗೆ ಬಂದಪುದೆಂಬ ಶಂಕೆಯಿಂದೆ ೨೬

ಅವರೆಲ್ಲರುಂ ಬರ್ದುಕೆ ಕೀರ್ತಿ ನಿಮಗಕ್ಕುಮೆಂ
ದವರ್ಗೆ ಧಾನ್ಯಮನಿತ್ತೆನೆನೆ ಕೇಳಿ ತದ್ಭೂಪ
ನವಳೊಡನೆ ನುಡಿದನೊಳ್ಳಿತಗೆಯ್ದೆ ನೀಂ ಲೋಕದೊಳರೆ ನಿನ್ನ ಬಾಂಧವಚಯಂ
ತವೆ ದರಿದ್ರತ್ವದೊಳ್ ನೋಯಲೇನವರ್ಗಳಂ
ತವಕದಿಂ ಕರೆಸವರ್ಗಿಂದ್ರಪದವಿಯ ಮಾಳ್ಪೆ
ನವನಿಗಳನಿತ್ತೆನಲ್ ಹ[1]ರಿಸ[1]ದಿಂ ಕರೆಸಿದಳ್ ತನ್ನ ಬಂಧುಗಳೆಲ್ಲರಂ ೨೭

[2]ನರಪನವರೆಲ್ಲರು ನೋಡಿ ಸಂತಸಪಟ್ಟು
ಕರೆಸಿಯೊಂದೇಕಾಂತಗೃಹಕೆ ಕೋಪಂದಳೆದು
ಪರಮೇಶ್ವರನ ಕಣಜದೊಳಗಿರ್ದ ಧಾನ್ಯಮಂ ಸೂಱೆಗೊಂಡಾ ಸಿತಗರಂ
ಉರುತರ ದ್ರೋಹಿಗಳ ತತ್ತಱಿಂದಱಿದು ನಿ
ಟ್ಟುರದೆ ಸಿಳ್ಳನೆ ಸೀಳಿ ಬಿಸುಟು ಮತ್ತಂ ಮನೋ
ಹರೆಯಪ್ಪ ವನಿತಾಶಿರೋಮಣಿಯೆನಿಪ್ಪ ಗರ್ಭಿಣಿಯಾಗಿ ತೋರ್ಪ ತನ್ನ ೨೮

ವನಿತೆ[3]ಯಂ[3] ಪೊಡೆಯ ಸೀಳ್ವೆಡೆಯೊಳೆಡೆವೊಕ್ಕು ಶಿವ
ನನುವಿನಿಂ ನುಡಿದನೆಲೆ ಚೋಳಭೂಪ ಭ್ರೂಣ
ಹನನಮಂ ಮಾಳ್ಪುದೇಂ ಕಜ್ಜಮೆನುತಂ ಹರಂ ಪ್ರತ್ಯಕ್ಷನಾದನಂದು
ಮಿನುಗುವಿಂತಪ್ಪ ಕಥೆಗಳ ಕೇಳ್ದು ಬಲ್ಲೆಮೆಲೆ
ಘನಮಹಿಮ ಕಲಿಕಂಭ ನಿನ್ನಿರವ ಕಂಡೆವೀ
ಗೆನುತೆ ಭಕ್ತರ್ ನುಡಿವುತೊಸೆದು ಮುನ್ನಿನ ಕಥೆಗಳಂ ಮತ್ತಮಿರದುಸಿರ್ದರು ೨೯

ದ್ರವಿಡಮಂಡಲ ಚಕ್ರವರ್ತಿಯೀಶ್ವರಭಕ್ತ .
ನವಿರತಂ ವಲ್ಮೀಕನಾಥಪದಸೇ[4]ವಕಂ[4]
ಭವದೂರನುನ್ನತಂ ನರಸಿಂಗಮೊನೆಯಾರ್ ಸುಖದೆ ಭೂಮಿಯಾಳುತಿರುತೆ
ತವಕಮಿಗೆ ಒಂದುದಿವಸಂ ಶಿವನ ನೋಡುವು
ತ್ಸವದಿಂದೆ ವಲ್ಮೀಕನಾಥನಾಲಯಕೆ ತ
ದ್ಭುವನಪತಿ ಪಟ್ಟದಂಗನೆವೆರಸು ನಡೆತಂದನತಿಭಕ್ತಿಭರಿತನಾಗಿ ೩೦

---

1 ರುಷ (ಗ) 2 ಧರಣಿಪತಿಯೆ (ಗ) 3 ಯರ (ಕ) 4 ವಿತಂ (ಗ)

ಪರಮೇಶ್ವರಂಗೆ ವಂದಿಸಿ ಸುಖದಿನಿರಲಿತ್ತ
ಹರನ ಪೂಜಾರ್ಥಮಾಗಿರಿಸಿರ್ದ ಕಲ್ಹಾರ
ವರಕುಸುಮದೊಳಗೊಂದು ಪೂಗಳೆದುಕೊಂಡು ತನ್ನೃಪ[1]ರಾಣಿ[1] ಮಿಗೆ ವಾಸಿಸೆ
ನಿರತದಿನದಂ ಕಂಡು ತಮ್ಮಡಿ ಕನಲ್ದು ನಿ
ರ್ಭರದಿಂ ತದಂಗನೆಯ ಘ್ರಾಣಮಂ ಕೊಯಿದ್ದಿಡಲ್
ನರಪನಿದನಜಿಂದು ಮುಟ್ಟಿದ ಹಸ್ತಮಿರ್ದಂತೆ ಕೊ[2]ಯ್ವರೇ[2] ನಾಸಿಕಮನು ೩೧

ಎಲೆ ಪಾರ್ವ ಎನುತೆ ಕೋಪದೆ ತದಂಗನೆಯ ಸ
ಲ್ಲಲಿತ ಕರಮಂ ಕೊಯ್ದು ಬಿಸುಡನೇ ತದ್ಭೂಪ
ನೊಲವಿನಿಂ ಸದ್ಭಕ್ತರೆಂತು ಕೇಳ್ವರೊ ಲಿಂಗಜಂಗಮದ ನಿಂದೆಗಳನು
ಸಲೆ ತಂದೆತಾಯ್ಗಳಾದೊಡಮಧಿಕ ನಿಂದಿತರ್
ನಲಿದವರ ಕೊಲೆ ದೋಷಮಿಲ್ಲೆಂದು ಸದ್ವಾಕ್ಯ
ಮುಲಿಗುಮತಿಶಯದಿಂದೆ ಮಾತರಃಪಿತರಶ್ಚ ಎಂದು ಭಾಸುರನಾದದಿಂ ೩೨

ಇಂತು ಕಲಿಕಂಬನಂ ಸದ್ಭಕ್ತರತ್ಯಂತ
ಸಂತೋಷದಿಂ ಕೀರ್ತಿಸುತಿರ್ಪ ವೇಳೆಯೊಳ್
ಕಂತುಹರಮೂರ್ತಿ ವಿಶ್ರುತಕೀರ್ತಿ ವಿಧಿನಿಷೇಧಾತಿದೂರಂ ಧೀರನು
ಸಂತತಂ ವೀರಶೈವೋದ್ಧಾರನಿ[3]ತರ[3]ರಾ
ದ್ಧಾಂತ ಸಧ್ವಾಂತ ಸಪ್ತಾಶ್ವಸದೃಶಂ ಸದಾ
ಭ್ರಾಂತ ಬೌದ್ಧಾದಿಮತ ಕುಂಭಿವಿದಳನ ಪಂಚಲಪನನನುಪಮ ವೀರನು ೩೩

ಎನಿಪ ಗುರುಪಿಳ್ಳೈನಾಯ್ನಾರ್ ಬರುತ್ತಿರ್ದನುರು
ಕನಕಸಿಂಹಾಸನಂ ನಾಡೆ ಶೋಭಿಸುವ ಮು
ತ್ತಿನ ಮಂಟಪಂ ಸಿತಚ್ಛತ್ರಮಿಂದುಪ್ರಭೆಯುಸಿಳಿಕೆಯ್ವ ಬಿಳಿಯ ಚವರಂ
ಘನತರ ವೃಷಧ್ವಜಾನೀಕಂಗಳುಂ ಮತ್ತ
ಮೆನಸುಮೊಪ್ಪುವ ವಾತಪೂರಣಂಗಳುಮೆಸೆಯೆ
ವಿನುತ ಭೂರುದ್ರನಿದೆಬಂದನುನ್ನತಸಾಪವನಸಿಕರಮಹ್ನಿ ಬಂದಂ ೩೪

ಶ್ರುತಿಬಾಹ್ಯ ಪರಸಮಯಜಲಧಿವಡಬಂ ಮಹೋ
ನ್ನತಶೈವಶರಧಿಚಂದ್ರಂ ಬಂದನೆಂದು ಮುಂ
ದತಿಹರುಷದಿಂ ಘೋಷಿಸುವ ಶಂಖರವಮುಣ್ಮೆ ಕೇಳ್ದು ಕಲಿಕಂಬನೊಸೆದು

---

[1] ನಸತಿ (ಗ) [2] ಯ್ವುದೇ (ಗ) [3] ರತ (ಕ)

ವಿತತ ಪ್ರಮೋದದಿಂದಿದಿರ್ವಂದು ವಂದಿಸುತೆ
ನುತಿಸುತಂ ತನ್ನ ಸದನಕ್ಕೆ ಕೊಂಡೊಯ್ದು ವಿ
ಶ್ರುತಭಕ್ತಿಯಿಂ ತುಳಿಲ್ಗೆಯ್ದವರ ಪಾದಪದ್ಮಂಗಳಂ ತೊಳೆದನೊಲ್ದು ೩೫

ಬಳಿಕೆ ಶುಭಕರಮಪ್ಪ ತತ್ಪಾದಸಲಿಲಮಂ
[1]ಘು[1]ಳಿಲನೊಲ್ದಿಂಟೆ ಕಲಿಕಂಬನತಿಹರ್ಷಮಂ
ತಳೆದಿರ್ಪ ವೇಳೆಯೊಳ್ ಭಕ್ತರ್ಕಳಿಂ ತದಂಗನೆಯ ವಾರ್ತೆಯನೆಲ್ಲಮಂ
ತಿಳಿದು ತತ್ಪಿಳ್ಳೆನಾಯ್ನಾರ್ ಸಂತಸಂಬಡೆದು
ಲಳಿತ ಕಲಿಕಂಬನಂ ಮುಂಡಾಡಿ ಕೊಂಡಾಡು
ತಳಘುಹರ್ಷಾಶ್ರುಗಳ್ ಸೂಸುತಿರಲಮರ್ದಪ್ಪಿಕೊಂಡನತಿಮೋದದಿಂದಂ ೩೬

ಸತಿಯು ಕರೆಯಿಸಿ ಪಿಳ್ಳೆನಾಯ್ನಾರಿ ಭಕ್ತರ್ಗೆ
ನುತಭಕ್ತಿಯಿಂ ತುಳಿಲ್ಗೆಯ್ದು ಭಕ್ತವ್ರಜದ
ವಿತತ ಹಸ್ತಸ್ಪರ್ಶಭೂತಿಯಂ ಕೈಕೊಂಡು ತಱೆದುಬಿಸುಟಾ ಹಸ್ತಮಂ
ಅತಿಶಯದೆ ತರಿಸಿ ಕೂನಾದ ಕೈಯೊಳಮರ್ಚೆ
ಮತಿವಂತನಾ ಪಿಳ್ಳೆನಾಯ್ನಾರ್ ಪ್ರಮೋದದಿಂ
ಸಿತ[2]ವಿ[2]ಭೂತಿಯು ತಳೆದು ಭಕ್ತರ್ಗೆ ಕೈಗಳಂ ಮುಗಿಯೆನಲ್ಕವಳಳ್ತಿಯಿಂ ೩೭

ಎ[3]ರಡು[3] ಹಸ್ತಂಗಳಂ ಮುಗಿದು ಪಣೆಯೊಳ್ ಸಾರ್ಚೆ
ಭರದಿನೆಂದಿನ ತೆಱದಿನತ್ಯಂತಭಕ್ತಿಯಿಂ
ಪರಮಭಕ್ತರ್ಗೆ ಬಲವಂದು ವಂದಿಸೆ ಶರಣಕುಲಮೆಯ್ದೆ ಕಂಡು ಮುದದಿಂ
ಪಿರಿದು ಕೊಂಡಾಡಿ[4]ದರ್[4] ಪಿಳ್ಳೆನಾಯ್ನಾರ ಭಾ
ಪುರೆ ಶರಣರಕ್ಷಕನೆ ಭಕ್ತಸತ್ಪ್ರಾಣನೇ
ಶರಣಜನಚಿತ್ತಸಹಕಾರವನಮಧುಮಾಸ ಎಂದು [5]ಮನದೊಲವಿನಿಂದಂ[5] ೩೮

ಮಿಗೆ ಸರ್ವಸಮಯಿಗಳ್ ಪ್ರೀತಿಯಿಂ ಕರವೆತ್ತಿ
ಯೊಗೆದ ಹ[6]ರಿಸ[6]ದೊಳೆ ವಂದಿಸುತಿರಲ್ ಪುರಜನಂ
ಪೊಗಳುತಿರೆ ಸದ್ಭಕ್ತತತಿ ನುಡಿಯುತೀ ಪಿಳ್ಳೆನಾಯ್ನಾರ ನಿಜಮಹಿಮೆಯಂ
ಬಗೆಯಲಿದು ಚೋದ್ಯಮೇ ಷಣ್ಮುಖಾಂಶಂ ನಲಿದು
ಜಗದೊಳಗೆ ಪುಟ್ಟಿತ್ತು ಬಳಿಕೆ ಗಿರಿಸುತೆಯೊಲ್ದು
ಮಿಗುವ ಮೊಲೆವಾಲ್ಗುಡಲ್ ಸರ್ವಜ್ಞತೆಯುಮೊದಗಿತದಟ ಬಲ್ಮೆಯಿನಾವಗಂ ೩೯

---

1 ಗ (ಕ) 2 ದ (ಕ) 3 ರೆದು (ಕ) 4 ತ್ತು (ಗ) 5 ತನತನಗೆನಿಸದಂ (ಗ)
6 ರುಷ (ಗ)

ಸಲೆ ಜೈನ ಚಾರ್ವಾಕ ಬೌದ್ಧಾದಿ ಸಮಯ ಗಿರಿ
ಕುಲಿಶನೆಂಬತಿಧೌತಕೀರ್ತಿ ವರ್ತಿಸುತಿರಲ್
ನಲಿದು ಮಧುರಾಪುರಿಗೆ ಬರ್ಪೆಡೆಯೊಳೊರ್ವ ಕುಡಿಯನ ಮನೆಯೊಳೊರ್ವನೊಸೆದು
ಲಲನೆಯೊರ್ವಳ ಬಯಸಿಯುಪ್ಪನ ಮನೆಯಳಿಯತನ
ಕೊಲವಿನಿಂದಿರುತಪನ ಮನೆಗೆಲಸ[1]ವೆಲ್ಲನುಂ[1]
ನಿಲವಿಲ್ಲದೆಯ್ದೆ ಗೆಯ್ಯುತ್ತಿರಲ್ಕ ಧನುವೃತ್ತಿಯೊಳಿಂತು ಪಲವುದಿವಸಂ ೪೦

ನಿನಗಿವಳನಿತ್ತಪೆಂ ಮಗಳನೆನುತುಂ ನುಡಿಯು
ತನುನಯದಿನವಳ ಮತ್ತೊರ್ವಂಗೆ ಕುಡುವನೀ
ತನುಜೆಯಂ ನಿನಗಲ್ಲದಾರ್ಗೀಯೆನೆನುತೆ ಪುತ್ರಿಪಳನೊರ್ವಂಗೆ ಕುಡುವಂ
ಇನಿದು ನುಡಿಗಳ ನುಡಿಯುತಿಂತು ಕೆಲಸಂಗೊಳುತೆ
ಮಿನುಗುವೇಳ್ಮಕ್ಕಳಂ ಪೆರ್ಗಿತ್ತುಮಿಾ ಜೊಸ
ನೆನಸುಮಿತ್ತಪೆನೊಲ್ದು ನಿನಗೆಂದು ಕಿರಿಯ ಮಗಳಂ ತೋರಿ ಕೆಲಸಗೊಳುತೆ ೪೧

ಇರುತಿರಲ್ಕಾ ಕಿರಿಯ ಮಗಳಿವನ ಪೊರೆಗೆಯ್ದಿ
ನಿರುತವಮಂ ನುಡಿದಳಿನ್ನುಯ ತಂದೆ ನಿನಗೆನ್ನ
ಪಿರಿದು ಕುಡಲರಿಯನಳಿಯಾಸೆಯಂ ತೋರಿ ಮನೆಗೆಲಸವಂ ಕೊಳ್ವನೊಸೆದು
ಭರದಿನೆನ್ನಂ ಕೊಂಡು ಪೋಗೆಲ್ಲಿಗಾದೊಡೆನೆ
ಹರಿಸ[2]ವಂ ತಾಳ್ದವಂ ತಮ್ಮುತಿರ್ವರ್ ಕೂಡಿ
ಕರವೆ ಪೊರವಮಟ್ಟು ಕಳ್ತಲೆಯೊಳಗೆ ಪೋಗುತ್ತೆ ಗಹನವೊಂದಂ ಸಾರ್ದರು ೪೨

ಮಿನುಗುವಾ ವನದೊಳಗೆ ಸರ್ಪನಿಂದವನಳಿಯೆ
ವನಿತೆಯೊರ್ವಳೆ ಪಲುಂಬುತ್ತಿರಲ್ಕಾಯೆಡೆಯೊ
ಳನಘ ಗುರು ಪಿಳ್ಳೈನಾಯ್ನಾರ್ ಬರುತ್ತಾ ರವಮನಾಲಿಸುತಲ್ಲಿಗೆಯ್ದಿ
ಘನ ಕರುಣದಿಂದಿದೇನೆಂದು ಕೇಳಲ್ಕವಳ್
ವಿನಯದಿಂ ತತ್ಪ್ರಪಂಚಮನೆಲ್ಲಮಂ ಪೇಳೆ
ಮನ ಕರಗಿ ಭೂತಿಯಂ ತಳಿದು ಕುಡಿಯನನೆತ್ತನೇ ಮತ್ತಮದುಮಲ್ಲದೆ ೪೩

ಮರಳಿ ವಾಗೀಶನಾಯ್ನಾರೆಂಬ ಹರಭಕ್ತ
ನಿರುತಿರ್ಪನವನೊರ್ವ ಮಗಳ ಶಿವನಿಂ ಪಡೆದು
ನಿರುತಮಿಾ ತನುಜೆಯಂ ಪಿಳ್ಳೈನಾಯ್ನಾರ್ಗಲ್ಲದಾರ್ಗೆ ಕುಡೆನೆಂದು ನುಡಿದು

---

[1] ವೆಲ್ಲವಂ (ಗ) [2] ರುಷ (ಗ)

ಹರಿಸದಿಂದಿರ್ಪನಿತಱತೞಗವಳ್ ಸಾಯ[1]ಲ್ಕೆ[1]
ಪಿರಿದೆನ್ನ ಭಾಷೆಗೂಣಯುಮಾಗದಂತಿವಳ
ಸುರುಘಟದೊಳಿರಿಸುವೆಂ ಪಿಳ್ಳೆನಾಯ್ನಾರ್ ಬರ್ಪ ವಾಸರಂಬರಮೆನುತ್ತೆ ೪೪

ಪೊಸಘಟದೊಳಾ ಶಬಮನತಿಯತ್ನದಿಂದಿರಿಸಿ
ಮಸಕದಿಂದಿರುತಿರಲ್ ಪಲವು ದೆವಸಕ್ಕೆ ಸಾ
ಹಸ ಪಿಳ್ಳೆನಾಯ್ನಾರ್ [2]ಬರಲ್ ಭಕ್ತಿಯಿಂದೆ ಕಿವಿಗಿನಿದಾಗಿ[2] ಸತ್ಕಾರಮಂ
ಎಸಗಿ ಬಳಿಕೊಂಬತ್ತುಬರಿಸಮುರುಘಟದೊಳಗೆ
ಬಿಸವಂದಮಾಗಿರ್ದ ಶಬಶಲ್ಯಮುಂ ತಂದು
ವಿಸುಪ ತತ್ಸಭೆಯ ನಡುವಿರಿಸಿ ನುಡಿದಂ ಭಕ್ತಿಯಿಂದೆ ಕಿವಿಗಿನಿದಾಗಲು ೪೫

ಎಲೆ ಪಿಳ್ಳೆನಾಯ್ನಾರೆ ನಿನಗೆಂದು ಪಡೆದೆ[3]ನೀ[3]
ಲಲಿತಾಂಗಿಯಂ ಸುತೆಯನಿಂದು ನಿನಗೊಪ್ಪಿಸಿದೆ
ನಲಘುತರಮಾಗಿ ಪೂರ್ಣ್ದೆನ್ನ ಸದ್ಭಾಷೆ ನೆರಪಣಿಗೆವಡೆದು ರಸೆಯೊಳು
ನಲಿದು ನಿಮ್ಮಯ ಚಿತ್ತವೆಂತಿರ್ದುದಾ ತೆಱದೊ
ಳೊಲವಿನಿಂ ಮಾಡಿಮೆನುತಂ ನುಡಿಯೆ ನಸುನಗುತೆ
ಲುಲಿತ ಭಕ್ತರ ಕರಸ್ಪರ್ಶನಂಗೆಯ್ದು ಭೂತಿಯ ಘಟದ ಮೇಲೆ ತಳಿಯೆ ೪೬

ಘಳಿಲನಾಕ್ಷಣದೊಳಗೆ ಭನ್ಯಲಾವಣ್ಯದೊಡ
ನೆಳಸುತ್ತೆ ಸುರುಚಿರಾಮಲ ಕಾಯದಿಂದೆ ತೊಳ
ತೊಳಗುತ್ತೆ ಕನ್ಯಕಾರತ್ನಮಾ ಘಟದಿಂದೆ ಪೊಱಮಡಲ್ ಕಂಡು ಜನರು
ಪುಳಕಿತಾಂಗರುಮಾಗುತಂದು ಕೀರ್ತಿಸಿದರೀ
ಲಳಿತ ಗುರುಪಿಳ್ಳೆನಾಯ್ನಾರ ಮಾಹಾತ್ಮ್ಯಕ್ಕೆ
ತಿಳಿದು ನೋಡಲ್ಕಿದೇಂ ಸೋಜಿಗಮೆ ಈ ವಧುಗೆ ಕೈಗಳಂ ನೀಱಿ ಕೊಟ್ಟುದು ೪೭

ಅಂದು ಕಲಿಕಂಬನಾ ಸತಿಗೆ ಕರಯುಗಳಮಂ
ಚಂದಮಪ್ಪಂತೆ ಗುರು ಪಿಳ್ಳೆನಾಯ್ನಾರಿತ್ತ
ನೆಂದು ಮುನ್ನಿನ ಕಥೆಯ ಕೇಳ್ದಱಿವೆವೀಗಳಿಲೆ ಪಂಡಿತೇಶ್ವರ ನಿಮ್ಮಯ
ಸಂದ ಮಾಹಾತ್ಮ್ಯಮಂ ಕಂಡಱಿದೆವಿಂತು ಮುದ
ದಿಂದೆ ಮಾದೇವನಡಿನಿಷ್ಠೆಯಿಂದಂ ಮನಂ
ದಂದು ಮಾದೇವನಡಿಗಳನಿತ್ತುದಂ ಎಂದು ಪೊಗಳ್ದು ಮತ್ತಿಂತೆಂದರು ೪೮

1 ಶೇ (ಕ) 2 ಬರುತ್ತಿರಲ್ ಭಕ್ತಿಯಿಂ ವಂದನಂಗೆಯ್ದು (ಕ) 3 ಯೋ (ಗ)

ಸದಮಲಪ್ರಚುರವಿಶ್ರುತ ಪರಮಭಕ್ತಗಣ
ಪದಸರೋರುಹಸಾಂದ್ರಮಕರಂದಪಾನ ಸ
ಮ್ಮುದಿತ ಚಂಚಚ್ಚಂಚರೀಕನನವರತ ಪಂಚಾಕ್ಷರೀಪ್ರಸಿತಹೃದಯಂ
ವಿದಿತ ಮಂಜುಲನೀಲಕಂಠಾಹ್ವಯಂ ಮನೋ
ಮುದದೆ ಪೇಳ್ದುರುತರಾರಾಧ್ಯ ಚಾರಿತ್ರದೊಳ
ಗಿದು ವಲಂ ಕಲಿಕಂಬ ಪಿಳ್ಳೆನಾಯ್ನಾರಿಗಳ ಕಥನಮಘಶರಧಿಮಥನಂ ೪೯

# ಮೂರನೆಯ ಸಂಧಿ

## ದಸರಯ್ಯಗಳ ಕಥೆ

ಸೂಚನೆ : ಅಸಮಾಕ್ಷ ಸದ್ಭಕ್ತನಸಮೇಷುಗುಣರಹಿತ
ನಸಮ ದಸರಯ್ಯನಾ ಕಥೆಗಳಂ ಮನಮೊಸೆದು
ಮಸಕದಿಂ ಸೂರಸಚಿವಾನೀಕ ಪಾಥೋಜ ಸುರುಚಿರಾಮಲ ಸೂರನೆ

ಗಿರಿಜೆ ಸಂಭೋಗಲೀಲಾಕಲಹದೊಳ್ ಕಿನಿಸಿ
ಸಿರಿದುಮಾತ್ಮೋತ್ತಂಸನೂಗಿರ್ದ ಕರ್ನೆಯ್ದಿ
ಉರುದಾಮದಿಂ ತಾಡನಂಗೆಯ್ಯಲದು ಪಱಿದು ಮತ್ತದಱ ನುಣ್ಣಿಸಳ್ಗಳು
ಕರಮೆ ಕಂಧರದೆಡೆಯ ಪತ್ತಿ[1]ದರ್ವೋ[1] ಎಂಬ
ಪರಿಯೊಳೆಸೆದಿರ್ಪ ಪೊಸಬಿಸದ ಪೇರ್ಗಱಿತಯಿಂದೆ
ನಿರತಮಾಗೊಪ್ಪಿರ್ಪ ಗುರುನೀಲಕಂಠನೊಲ್ದೀಗೆಮಗೆ ಸಂಸಿದ್ಧಿಯಂ ೧

ಬಳಿಕೊರ್ವನಭವಭಕ್ತಂ ಜಿತೇಂದ್ರಿಯನಧಿಕ
ನಳಘುಭಕ್ತಿಕ್ರಿಯಾ ಧೌತೇಯನಘದೂರ
ನಳಿಕಲೋಚನನಿಭಂ ಪೀತಸಂಸಾರನುರುತರಕೃಪಾಕೂಪಾರನು
ಬಳವಂತನತಿತೃಣೀಕೃತ ಜಗಜ್ಜನಸಮಿತಿ
ಉಳಿತಸದ್ವರ್ತನಂ ಹಿಂಸೇತರಂ ಭಕ್ತ
ನಳಿನಪ್ರಭಾಕರಂ ಗುರುಲಿಂಗಜಂಗಮಾರ್ಚನಯುಕ್ತನೆನಿಸಿ ಮೆಱೆಪ ೨

ದಸರಯ್ಯನೊಂದುದೆವಸಂ ಶಂಭುಪೂಜೆಗೆಂ
ದೊಸೆದು ಪುಷ್ಪಂಗಳಂ ತರಪೋಪ ಸಮಯದೊಳ್
ಮಸಕದಿಂ ದುರ್ಜನರ್ ನೆರೆದೀತನುಗ್ಗಡದ ಶೂಲಿಸದ್ಭಕ್ತಂ ಗಡ
ಎಸೆವ ಜಿತಕೋಪಂ ಗಡಾ ಸರ್ವಜೀವರೊಳ್
ನಿಸದಂ ದಯಾಪರತ್ವಾನ್ವಿತಂ ಗಡ ಮತ್ತ
ಮುಸುದೋರ್ಡಾರಾದೊಡಾ ಮಾತಿನಿಂ ನೋವರೆನುತಂ ಮಾತನಾಡಂ ಗಡ ೩

---

[1] ದ.ದೋ (ಗ)

ನಡೆವೆಡೆಯೊಳಡಿಸೋಂಕಿ ಜಂತುನಿಕುರುಂಬಂಗ
ಳೊಡನೆ ಹರಣಂಗಳಿವುವೆನುತೆ ನೆಲನಂ ನೋಡು
ತಡಿಗಡಿಗೆ ಪಜ್ಜೆಯಂ ಮೆಲ್ಲನಾರಯ್ದುತ್ತುಮಿಡುವಂ ಗಡಾ ತೋಳ್ಗಳಂ
ನಡೆವೆಡೆಯೊಳಲುಗಿಸಲ್ಕವಜೀಕರ್ ಸೋಂಕಲುಂ
ಬಿಡದೆ ಮಡಿಗುಂ ಪ್ರಾಣಿತತಿಯೆನುತೆ ತೋಳ್ಗಳಂ
ನಡೆವೆಡೆಯೊಳಲ್ಲಾಡಿಸಂ ಗಡಾ ಮತ್ತಿವೆಯುಂವೋ ಸೋಜಿಗಂ ಭಾವಿಸೆ ೪

ಮುನ್ನೆ ಪೂಗೊಯ್ವವೇಳೆಯೊಳೊಂದು ಪೂಗಿಡು ಕ
ರಸ್ನೊಂದೆನಯ್ಯೊ ದಸರಯ್ಯ ಎನೆ ಕರವುಳಿಜಿ
ನನ್ನಿಯಿಂ ಪೂಗೊಯ್ದ ತಾಣಮಂ ನೋಡೆ ಕರ್ನೆತ್ತರೊಸರುತ್ತುಮಿರಲು
ಸನ್ನಿದಂಗಂಡಿನ್ನಿವರ್ಕೆ ದುಕ್ಕಂ ಘೂಡ
ಲುನ್ನತಂ ಹಿಂಸೆಗೆಯ್ದಂದಮೆನುತಂ ನೊಂದು
ಚನ್ನ ಪೂಗಿಡುಗಳಡಿಯಂ ಸಾರಣಂಗೆಯ್ದನಂ ಗಾಳಿ ಸೋಂಕದಂತೆ ೫

ತರಿಸಿ ಕಟನಿಕರಂಗಳಂ ಸುತ್ತಲುಂ ಕಟ್ಟಿ
ಪಿರಿದು ಪೂಗೊಯ್ಯಲೊಲ್ಲದೆ ಬಿಳ್ದ ಪೂಗಳಂ
ಭರದಿಂದೆ ತಂದೀಶಪೂಜೆಮಾಳ್ಪಂ ಗಡಾ ಎಂತು[1]ಟೋ[1] ಅನುಕಂಪವು
ಕರಮಹಿಂಸಾಪರತೆಯೆಂತುಟೋ ಭಾವಿಸಲ್
ಪರಮಶಾಂತತೆಯೆಂತು[1]ಟೋ[1] ರಸೆಯೊಳಿಂತಪ್ಪ
ವರ ನಾವು ಕಂಡಜಿದುದಿಲ್ಲಿನ್ನೆವರೆಗಮೆಂದೊಸೆದು ಕಟಕಿಯುನಾಡುತೆ ೬

ಎರಡು ಕಯ್ ಕುನ್ನಮಾಗಿರ್ದೊರ್ವ ಭಂಡನಂ
ಕರಸಿ ತಲೆಗಿರಿಸಿ ಮುಪ್ಪುರಿಗೂಡಿ ರಾಜಿಸುವ
ಪಿರಿಯುದೊಂದುಡಿದಾರಮಂ ಕಟ್ಟಿ ಸಾಂದ್ರಮಾಗೊರೆದು ಭೂತಿಯ ಮೈಯೊಳಂ
ಶಿರದೊಳಂ ಮೊಗದೊಳಂ ಮತ್ತವನ ಕಾಲ್ಗಳಂ
ಭರದಿಂದೆ ತೊಳೆದು ಮೂರೇಖೆಯಂ ಭಸಿತದಿಂ
ಬರೆದು ಮತ್ತಾತಂಗೆ ರುದ್ರಾಕ್ಷೆಯಂ ಸ್ಫಟಿಕಮಂ ಕೋಡು ಕೊರಲೊಳಿಕ್ಕಿ ೭

ಮಿಗೆ ಪಲ್ಗಳಂ ಬೆಳ್ಪುಮಾಡಿ ಒಜಿ[2]ಸೆ[2]ಜ್ಜೆಯಂ
ಸೊಗಸಾಗಿ ಕೊರಲೊಳಿಕಲಿಕ್ಕಿಯಾ [2]ಸೆ[2]ಜ್ಜೆಯಂ
ಬಿಗಿದೊಂದು ಧೌತವಸ್ತ್ರದೆ ಕಟ್ಟಿ ಜಂಗಮಾಕಾರಮಂ ನೆಜಿ ವಿರಚಿಸಿ

---

[1] ಬಾ (ಗ) [2] ಗೆ (ಕ)

ನೆಗಳ್ದ ದಸರಯ್ಯನಂ ತೋಱಿಯಾತನ ಶಿರವು
ನಗಲದೇ ನಿನ್ನೆರಡು ಮೋಟುಗೈಗಳಿನೆಯ್ದೆ
ತಗುಳ್ದು [1]ಬಡಿಯೆಂದು ಕಳುಪಲ್ ಜನಂ ವಿಸ್ಮಯಂಬಡೆ ಮಲೆಯುತೆಯಿರ್ದನವಂ ೮

ಪಿರಿದುಮುಬ್ಬುತೆ ಕೊಬ್ಬುತುಂ ಮೋಟಮಲ್ಲಯ್ಯ
ನಿರದೆಯ್ದಿ ದಸರಯ್ಯನಂ ನುಡಿದನೆಲೆ ದಸರ
ಭರದಿನೆಲ್ಲಿಗೆ ಪೋದಪೈ [2]ಎ[2]ನ್ನ ನುಱಿಕದೆಯಾ ಎನುತೆ ಬೆಂಬಿಡದೆ ಬರುತೆ
ಧರೆಯೊಳಗೆ ಪೆಸರ್ವಡೆದ ಮೋಟಮಲ್ಲಯ್ಯನಂ
ಕರಮೆಯಿಳಿಕೆಯ್ದು ಪೋದಪ್ಪೆ ಎಮ್ಮನೆಯ್ದೆ
ತಿರಿಗಿ ನೋಡಲ್ ಕಿಡುಗುಮೋ ನಿನ್ನ ಪಿರಿಯತನ ಗರುವಿಕೆಗಳುಂ ಸಂತತಂ ೯

ಶರಣೆನಲ್ ಕುಂದುವುದೆ ನಿನ್ನಾಯು ಪರ್ವತೇ
ಶ್ವರನ ಮುದ್ದಿನ ಕಂದನಾಂ ಬರುತ್ತಿರೆ ಮತ್ತೆ
ಪರಿಕಿಸದೆ ನೀಂ ಪೋಪುದುಚಿತಮೋ ನಿನ್ನ ಭಕ್ತಿಯನಧಿಕಶಾಂತತೆಯನು
ಪಿರಿದು ನೋಡಲ್ ಬಂದ ಫಲಮೆಯ್ದಿತೆ[3]ಮ್ಮ[3]ನೆಂ
ದುರುಕೋಪದಿಂ ದಸರಿದೇವಯ್ಯನವರ ಬಂ
ಧುರ ಶಿರಮನುಱಿ ಪಿಡಿದು ಕುನ್ನಗೆಯ್ಯೆರಡಱಿಂ ತಾಡನಂಗೆಯ್ವನೆಯ್ದೆ ೧೦

ಮುನಿಸಿನಿಂದಡಿಗಡಿಗೆ ಬಡಿಯುತಿರೆ ದಸರಯ್ಯ
ನಿನಿಸು ನೊಂದಪುದೆನ್ನ ಶಿರಮೆನ್ನದೇ ಬಱಿದೆ
ಕಿನಿಸಿ ಕೊಲ್ಲದಿರೆಂದು ನುಡಿಯದೇ ಭಂಡನುದ್ದಂಡತೆಯಿನೆನ್ನನೀಗ
ತನಿ ಮೋಟುಗಯ್ಯಿಂದೆ ಕೊಲ್ವನೇತರ್ಕೆನ್ನ
ಘನಸಭೆಯ ಮುಂದೆನ್ನದೇ ಶಂಭುಲಾಂಛನಮ
ನನುನಯದೆ ಶಿವನೆಂದೆ ಭಾವಿಸುತ್ತಿಲೆ ಸಾಮಿ ನಿನ್ನ ಮೃದುಹಸ್ತ[4]ದೆನ್ನ[4] ೧೧

ಶಿರದಸ್ಥಿಗಳ್ ತಾಗಿ ನೋವುಮತಿಶಯಮಾಗಿ
ನರಚಮರ್ಗೆ [5]ಪುದುಗಿರ್ದ[5] ಭೂರುದ್ರ ಸೈರಿಪುದು
ಪಿರಿದುಮಜ್ಞಾನಿಯಾಂ ಕಾಮುಕರನಂತನಾಂ ಜಡನಧಮ ದುಶ್ಚರಿತ್ರಂ
ಕರುಣಾಬ್ಧಿ ನೀನೆನ್ನ ತಪ್ಪುಗಳ ಸೈರಿಪುದು
ಹರಸದೃಶಮೂರ್ತಿ ಎನ್ನಯ ದುರ್ವಿಕಾರಮಂ
ಕರಮೆ ಸೈರಿಪುದೆಂದು ಚರಣತಳಕಡಿಗಡಿಗೆ ಪೊಡಮಡುವನತಿಭಕ್ತಿಯಿಂ ೧೨

---

1 ಬಿ (ಕಗ) 2 ನ (ಟ) 3 ನ್ನ (ಗ) 4 ಮೆನ್ನ (ಗ) 5 ಮಂ ತಾಳ್ದ (ಗ)

ಮಿನುಪ ಶಿರಮೆಯ್ದೆ ಗೋಳೆಯನೊಲ್ದು ಕಲ್ಗಳಿಂ
ದೆನಸುಮಿನಿಸಿನಿಸಾಗಿ ತದಕಿದಂತೆವೊಲಾಗೆ
ಮನದೊಳಳುಕದೆ ನೊಂದೆನಯ್ಯೊಯೆನ್ನದೆ ರಕ್ತಮೊಸರ್ದುಸುರ್ದಪುದೆನ್ನದೆ
ನಿನಗೇನನಾಂ ಪೊಲ್ಲಮೆಯನೊಡರ್ಚಿದೆನೆನ್ನ
ದಿನಿತಜಂ ಮೇಲೆನ್ನ ಕೊಲಲಾಗದೆನ್ನದೇ
ಮನಸಿಜಾಂತಕನೆಯ್ದೆ ಬಂದೆನ್ನ ರಕ್ಷಿಪೊಡೆ ತಲೆಯೊಳಗೆ ಕಯ್ಯನಿಟ್ಟಂ ೧೩

ಸಲೆ ಮುನ್ನೆ ಶಿರದೊಳಗೆ ಕಯ್ಯಿಟ್ಟು ನಾಡೆ ದು
ರ್ಮಲ ಕಾಯಮಂ ಕಿಡಿಸಿದದುಮೆಯ್ದೆದೀಗ ಸ
ಲ್ಲಲಿತ ಭಕ್ತನ ಮಾಡೆ ಪರಶಿವಂ ಬಂದೆನ್ನ ಶಿರದೊಳಗೆ ಕೈಯಿಟ್ಟನು
ನಲಿದು ಶಿವಭಕ್ತರ್ಗೆ ವಂದಿಸಿದ ಶಿರಮಾದೊ
ಡೊಲವಿನಿಂದಿದು ಶಿವನ ಕರತಳಕ್ಕೀಗ ಕೋ
ಮಲ ಕಮಲದಂತಾಗಬೇಡವೇ ನಾಡೆ ಕಠಿನತ್ವಮಂ ಕೆಡಿಸಿ ಮತ್ತಂ ೧೪

ಶಿರಮಿದೆನ್ನದೆ ಆದೊಡೊಲ್ದೆನ್ನ ಶಿರದೊಳಗೆ
ಕರಮಿಟ್ಟ ಮೃಡಮೂರ್ತಿ ಪಾ[1]ಣಿ[1]ಪದ್ಮಂಗಳ್ಗೆ
ಪಿರಿದುಂ ಶಿರೀಷದಂತೆವೊಲೆಸೆದು ಮೃದುವಾಗ[2]ವೇ[2]ಡವೇ ಮತ್ತಮೆಯ್ದೆ
ಹರನುಮಂ ಜಂಗಮುಮನೊಂದೆಯೆಂದೇ ಕಾಣ್ಬ
ಪರಮಬುದ್ಧಿಯದೆನ್ನೊಳುಂಟಾದೊಡೀ ಶಿರಂ
ಚರಲಿಂಗ ಕರಕಮಲಯುಗಳಕ್ಕೆ ಕುಂದದಲರಂತೆ ಮೃದುವಾಗ[2]ವೇ[2]ಡ ೧೫

ಮಿನುಪ ಮೃದುವಾದ ಜಂಗಮದ ಕರತಳವೆನ್ನ
ಘನಕಠಿನಮಾದ ಶಿರದಸ್ಥಿಯಂ ಸೋಂಕಿ ತೊ
ಟ್ಟನೆ ನೋಗುಮೆನುತಳಲುತುಂ ಪೊಡಸಿಕೊಳುತೆ ತಜ್ಜಂಗಮದ ಪದಯುಗಕ್ಕೆ
ವಿನಯದಿಂ ನಮಿಸುತ್ತೆ ಮತ್ಸ್ವಾಮಿ ಮೃದುವಾದ
ತನುವಿರಲ್ ಕಠಿನಮಾದೀ ಶಿರಮನಸವಸದಿ
ನೆನಸುವತಿಕೋಮಲತ್ವಮನಾಂತ ಹಸ್ತದಿಂ ತಾಡನಂಗೆಯೆ ಕೈಗಳು ೧೬

ಪಿರಿದು ನೊಂದಪುವೆನುತೆ [3]ಮೋ[3]ಟಮಲ್ಲಯ್ಯನುರು
ಕರಕಮಲಮಂ ತನ್ನ ಕೈಗಳಿಂದೊತ್ತುತ್ತೆ
ಹ[4]ರಿಸ[4]ದಿಂದಮರ್ದಪ್ಪಿಕೊಳುತೆ ದಸರಯ್ಯನುನ್ನತಭಕ್ತಿಯಿಂದೆ ನಲಿದು

---

1 ದ (ಕ) 2 ಬೇ (ಕ) 3 ತೋ (ಕ) 4 ರುಷ (ಗ)

ಒರಸುತ್ತೆ ಮುಗುಳ್ದು ಮತ್ತೊತ್ತುತ್ತೆ ಕೈಗಳಿಂ
ದಿರದೊಸರ್ವ ಕರ್ನೆತ್ತರಂ ಕೂಡೆ ಕೈಗಳಿಂ
ಮರಳಿ ತೊಡೆಯುತ್ತೆ ಮತ್ತಂ ಹಸ್ತಮರ್ದನಮನೆಸಗುತಿರೆ ತತ್ಕ್ಷಣದೊಳು ೧೭

ಮೊಳಕೆದೋಱುದುವೆರಡು ಕುನ್ನಾದ ಹಸ್ತಂಗ
ಳಲಘು ದಸರಯ್ಯ ಸದ್ಭಕ್ತಿಯಂಕುರಿಸಂತೆ
ಲಲಿತ ಕರಪಲ್ಲವಂಗಳ್ ಶೋಭಿಸಿದುವು ಶಿವನಾಚಾರಕೊಲ್ದು ಭರದಿಂ
ಪೊಳೆವ ಶೃಂಗಂಗಳೊಗೆದಂತೆವೊಲ್ ಭಾವಿಸ
[1]ಲ್ಕಳವಿನಿಂ[1] ಭಟ್ಟಬಾಣಂಗೀಶಪೂಜೆಯಂ
ಘಳಿಲನೆಸಗಲ್ ಕರಯುಗಂ ಜನಿಸಿದಂತೆವೊಲ್ ಭೂತಳದೊಳಂದು ನಿಸದಂ ೧೮

ಮಿಸುಪ ಮೊರಟದ ಒಂಕಿದೇವಂಗೆ ಮುನ್ನೆ ರಾ
ಜಿಸುವ ಕೋಡಂಕುರಂಪಳಿದಂತೆ ದಸರಯ್ಯ
ನೆಸೆವ ಭಕ್ತಿಯಿನೆಯ್ದೆ ಮೋಟಕೈಗಳ್ ಚಿಗುರ್ದುವಂತುಮಲ್ಲದೆ ಭಾವಿಸೆ
ದಸರಯ್ಯ ಶಿವನೆಂಬ ಸುರಧೇನು ರಾಗದಿಂ
ದೆಸೆವ ಬಂಧುರ ಹಸ್ತವತ್ಸಂಗಳಂ ನಾಡೆ
ಬೆಸನಾದುಮೊ ಮತ್ತಮುವನ ಭಕ್ತಿಸರಸಿಯೊಳ್ ಕರಕಮಲ[2]ಮೊ[2]ಗೆತಂದುವೊ ೧೯

ಹರಿಸದಿಂ ಚನ್ನಯ್ಯನೆಸೆವ ನಾಲಿಗೆಗೆ ಸುಂ
ದರ ಕರಯುಗಂ ಪುಟ್ಟಿದುವೊಯೆಂಬವೊಲ್ ಮತ್ತ
ಮುರು ದಸರದೇವಯ್ಯ ಸದ್ಭಕ್ತಿಕಲ್ಪತರು ಮೊಳಕೆದೋಱುದ ಪಾಂಗಿನಿಂ
ಪಿರಿದು ದೋಷ್ಕಲದಲ್ಲಿಯಂಗುಲಿಗಳೊಪ್ಪಿದವು
ವರಭಕ್ತಿಕಾಂತೆಯಾನನದರ್ಪಣಂಗಳಂ
ತಿರದೆಸೆದುವಲ್ಲಿ ತೋರ್ಪುಗುರ್ಗಡಣಮಾ ಮೋಟಮುಲ್ಲಿನಾಥಂಗೆ ಸತತಂ ೨೦

ಪಿರಿದುಮಾಜಾನುಬಾಹುಗಳಾಗಿ ನಳನಳಿಸಿ
ಕರಯುಗಂ ಕಾಂತಿವಡೆದುವು ಶೈವತಂತ್ರದಂ
ತುರು ಸತ್ಪದಂಗಳಂ ಶೋಭಿಸುಗುಮಿಾಶಪೂಜಾಫಲದವೊಲ್ ಭಾವಿಸೆ
ನಿರುಪಮಾಗಣ್ಯಪುಣ್ಯಾನ್ವಿತಂಗಳ್ ಮತ್ತೆ
ಪರಮ ತ್ರಿಪುಂಡ್ರದವೊಲಳಿಕಮಧ್ಯದೊಳಿರ್ದ
ಸರಸಿಜಾಸನ ಲಿಖಿತ ವರ್ಣಂಗಳಂ ನಾಶಮಂಮಾಳ್ಕುಮತಿಶಯದೊಳು ೨೧

---

[1] ಲ್ತೊಳಗುತ್ತೆ (ಗ)   [2] ವೊ (ಕಗ)

ಶಿವಹಸ್ತದಂತಭಯುದಾನಯುಕ್ತಂಗಳೊ
ಪ್ಪುವ ಮೂಲಮಂತ್ರದಂತೆವೊಲಾವಗಂ ಶಿಷ್ಯ
ನಿವಹಾಶ್ರಯಂಗಳೆನಿಸಂ ಪರಿಸದಂತೆವೊಲ್ ಪೂ[1]ರ್ವ[1]ವರ್ಣವಿನಾಶನಂ
ತವಕದಿಂದಂ ಮಾಡುಗುಂ ಪರಿಕಿಸಲ್ ಮತ್ತೆ
ಶಿವನಾಗಮೂರ್ಯ ಕರೆದಂತಮೃತಸಾರದೊಳ
ಗವಿರತಂ ಸಯ್ಯ್ಯುತಂಗಳ್ ಪೋಟಿಮಲ್ಲಯ್ಯನುರುಕರಂಗಳ್ ಧರೆಯೊಳು ೨೨

ಹರಭಕ್ತ ಕಣ್ಣಪ್ಪನಡಿಗೆರ್ಪಿನಂತೆ ಪುರ
ಹರ ಶಿರೋಮಣಿಗಳಾದುವು ಮತ್ತೆ ಕಂಠದೊಳ್
ನಿರುತಮೆಸೆದಿರ್ಪ ಬಲುಸೆಜ್ಜೆ ಲಿಂಗಾನ್ವಿತಮುಮಾಯ್ತು ದಸರಯ್ಯನೊಸೆದು
ಪರಿಸಂಗೆಯ್ಯಲ್ಕೆ ಮೋಟಮಲ್ಲಯ್ಯನುರು
ತರ ರಾಗದಿಂ ಬಂದ ಕಯ್ಗಳಂ ಕಂಡು ಭಾ
ಸುರ ಕಂಠದೊಳಗಿರ್ದ ಲಿಂಗಮಂ ಮುಟ್ಟಿನೋಡುತೆ ವಿಸ್ಮಯಂಬಡುತ್ತೆ ೨೩

ದಸರಯ್ಯನಂ ಮಗುಳ್ದು ನೋಡುತಂ ಭೀತಿಗೊಳು
ತೊಸೆದದ್ಭುತಂಬಡುತೆ ಸಂತಸಂದಾಳುತ್ತೆ
ವಿಸುಪ ಹಸ್ತಂಗಳಂ ನೋಡಿ ಬೀಗುತೆ ಮುನ್ನೆ ತಾಂ ಸಮೆದ ತಪ್ಪುಗಳನು
ನಿಸದಂ ಕರಂ ಸ್ಮರಿಸುತಂಗುಷ್ಠದಿಂ ಧರೆಯ
ನುಸಕದಿಂ ಬರೆಯುತಂ ತಲೆವಾಗಿ ಮತ್ತೆ ಲ
ಜ್ಜಿಸುತೆ ದಸರಯ್ಯನುರುಭಕ್ತಿಯಂ ನೆನೆಯುತಂ ತಜ್ಜಂಗಮಂ ಮುಂದಿರೆ ೨೪

ಪರಮ ಮಹಿಮಾಕರಂ ದಸರಯ್ಯನೊಸೆದು ಭಾ
ಸುರ ಹ[2]ರಿಸ[2]ದಿಂದೆ ತಜ್ಜಂಗಮದ ಕಯ್ಗಳಂ
ಪಿರಿದುಮೊ[3]ರಸ[3]ತ್ತಣಿಯರಂ ಬೆರಳ್ಗಳ ಚಿಟಿಕುದೆಗೆಯುತುಂ ಭಕ್ತಿಯಿಂದಂ
ಮರಳಿ ವಂದಿಸುತಿರಲ್ಕೀ ವಾರ್ತೆಯಂ ಭಕ್ತ
ವರರೆಯ್ದೆ ಕೇಳುತೆಳ್ದಂದು ದಸರಯ್ಯಂಗೆ
ಭರದೆ ವಂದಿಸುತೆ ದಸರಯ್ಯ ನಿನ್ನಯ ಮಹಿಮೆಯಂ ಪೊಗಳ್ವನಾವನನಿಶಂ ೨೫

ಬಸವ ಪಾದಾಂಬುಜಾಮೋದ ಭಾಸುರತೇಜ
ದಸರಯ್ಯ ನಿನ್ನ ತಲೆಯೊಳ್ ಜನಿಸಿತೀ ಚೋದ್ಯ
ಮೊಸೆದು ಬಸವೇಶ್ವರನ ಭಾವದಿಂ ಚೋರ ಚೇಲಾಗ್ರದೊಳ್ ಕೋಳಗುತಿರ್ಪ

---

[1] ರ್ಣ (ಗ) [2] ರುಷ (ಗ) [3] ಸರ: (ಗ)

ಮಿಸುಪ ವಾರ್ತಾಕಫಳ[1]ವಿಸ್ತರಂಗಳೆಯ್ದೆ ರಾ
ಜಿಸುತಿರ್ಪ ಬಾಣಲಿಂಗಂಗಳಾದುವು ಮುನ್ನೆ
ನಿಸದಮಿಾಗಳ್ ನಿನ್ನ ಭಾವದಿಂದಂಗಹೀನಂಗೆ ಕರತಳಯುಗಳಮುಂ ೨೬

ಬಱಸೆಜ್ಜೆಯೊಳಗೆ ಶೋಭಿಸುವ ಶಿವಲಿಂಗಮುಂ
ಮೆಱೆದುವೀ ನಿನ್ನ ದೋರ್ದಂಡ ಸಂಗತದಿಂದೆ
ನೆಱೆವಣಿಗೆವಡೆದೊಗೆದ ಹಸ್ತಸಂಯೋಗಮುಂ ಪಡೆದ ನಿನ್ನಯ ಮಸ್ತಕಂ
ಮಿಱುಪ ಶಿವಮಸ್ತಕಂ ತಪ್ಪದಂತಾದೊಡಂ
ತಱಸಂದು ನೋಡೆ ಶಿವಶಿರದಿಂದ ನಿನ್ನ ತಲೆ
ನೆಱೆ ಮಿಗಿಲದೆಂತೆನಲ್ ಸಾಂಖ್ಯನಿಡೆ ಗಾಯವಡೆಯಿತ್ತು ಶಿವಮಸ್ತಕಮದು ೨೭

ನಿರುತಮಾ ಪಿಟ್ಟವ್ವೆ ಕುಱತು ಪೊಱೆಯಂ ಪೊಱಲ್
ಪಿರಿದು ತಲೆ ಪುಣ್ಣಾಯ್ತು ಕಣ್ಣಪ್ಪನಡಿಗೆರ್ಪು
ಭರದಿನೊರಸಲ್ ಸಮ್ಮವಡೆದು ಪೋದುದು ಭೋಗವಿಭುವಿನೊಡನುರುಳ್ದು ಪೋಗೆ
ಧರೆ ತಾಗಿ ಶಿರವೊಡೆದು ರಕ್ತ ಮುಸಗಿತ್ತು ಮಿಗೆ
ಪರಮ ಚಿಱತೊಂಡಂಗೆ ನೆರವಾಗಿ ಕರ್ವುಗಳ
ಭರದಿಂದ ಪೊರೆ ಕರ್ವುವೊತ್ತಿ ತಲೆಕುಣಿಯಾದುದಿನಿತು ಸಾಯಸಮಿಲ್ಲದೆ ೨೮

ಮಿಗೆ ಗಾಯವಡೆದು ತಲೆ ಪುಣ್ಣಾಗಿ ಮತ್ತೆ ತೊ
ಟ್ಟಗೆ ಸಮ್ಮವಡೆದು ಶಿರವೊಡೆದು ರಕ್ತಂ ಮುಸಗಿ
ತಗುಳ್ದು ತ[2]ಲೆ[2] ಕುಣಿಯಾಗಿ [3]ತೋರ್ಪ ಕತದಿಂದಂತುಮಲ್ಲದೆಯುಮ[3]ವನಿಯೊಳಗೆ
ನೆಗಳ್ದ ಶಿವ ಶಿರವೊಂದೆ[4]ತೆಱನಾ[4]ಗಿ ತೋರ್ಕುಮಾ
ವಗಮಾ ಶಿರಕ್ಕೆ ಸರಿ ನಿನ್ನ ತಲೆ ಮತ್ತೆ ಸ
ಗ್ಗಿಗರೊಳಗ್ಗದಾ ತಲೆಯೆನಿಸಿ ಬಾಳ್ವನ ತಲೆಗೆ ತೋಡು ನಿನ್ನಯೆ ಮಸ್ತಕಂ ೨೯

ನಿರುತಂ ಸಹಸ್ರಶೀರ್ಷಾಃ ಪುರುಷ ಎಂದು ಬಂ
ಧುರ ವೇದಮಾವನ ಶಿರಸ್ಸಮಿತಿಯಂ ಪೊಗಳ್ಗು[5]
ಮಿರದವನ ಶಿರಮೆ ನಿನ್ನಯ ಶಿರಂ ಭಾವಿಸಲ್ ಪದಿನಾಲ್ಕುಲೋಕದೊಳಗೆ
ಪಿರಿಯ ತಲೆಯೊಂದೆಯ್ದೆಯೆನಿಸಿ ಬಾಳ್ವನ ಶಿರಂ
ಪರಿಕಿಸಲ್ ನಿನ್ನ ತಲೆ ಪೋ[6]ಕ್ಕು[6] ಬರವುಗಳಿಲ್ಲ
ದುರುತರ ಸ್ಥಾಣುವೆಂತಿರ್ಪವನ ತಲೆ ನಿನ್ನ ತಲೆಯೆಲಮ ದಸರಿದೇವ ೩೦

---

[1] ನಿಕ (ಗ) [2] ರಿ (ಕ) [3] ತೋಱದಿರ್ಪುದಱಂದೆ ಮತ್ತಮಿಾಯ (ಗ) [4] ಶಿರಮಾ (ಗ) [5] ಮನನಿಶಂ ಪೊಗಳ್ದು (ಗ) [6] ಗು (ಕ)

ಶಿವವಿಲ್ಲದೇ ಬರ್ದುಕುತಿರ್ಪವನ ತಲೆ ನಿನ್ನ
ಶಿವನುಂತೆ ತಲೆಗಡಣದಿಂದೆ ಮೇಲೊಂದು ತಲೆ
ಕರಮೆಸೆದು ತೋರ್ಪವನ ತಲೆ ನಿನ್ನ ತಲೆ ಲೋಕದೊಳಗೆ ಪರಿಭಾವಿಸುವೊಡೆ
ಸಕಳ ಚತುರಾನನನ ನಾಲ್ಕುತಲೆ ಷಣ್ಮುಖನ
ಶಿವವಾಱು ದಶಕಂಧರನ ಪತ್ತುತಲೆಯುರಗ
ಪರಿವೃಢನ ಸಾಸಿರ ಶಿರಂ ನಿನ್ನ ಶಿರಕೆ ಪಾಸಟಿಯುಲ್ತು ದಸರಿದೇವ ೩೧

ಶಿವನ ಶಿರಮೊಂದೆ ಪಾಸಟಿ ನಿನ್ನ ಶಿರಕೆ ನೋ
ಡುವೊಡೆಮಗೆ [1]ನೀಂ[1] ಶಂಕರಂ ನೀನೆ ಗುರುವೆಮಗೆ
ಭುವನದೊಳ್ ಪರಿಕಿಸಲ್ ಶಾಂತಿ ಖಡ್ಗದೆ ಕೋಪವೆಂಬ ಬಲ್ಪಗೆಯನನಿಶಂ
ತವಕದಿಂ ಕೊಲ್ವನಾವನವನೇ ಅಣಿಯರಂ
ತವೆ ಶೂರನವನೆ ಮುನಿಯವನೆ ಮಾಂತ್ರಿಕನೆಯ್ದೆ
ಅವನೆ ಬುಧನವನೆ ಸಿದ್ಧಾಂತಶಾಸ್ತ್ರಜ್ಞನೆನಿಕುಂ ಸಕಲಜನತತಿಯೊಳು ೩೨

ಉಳಿದವರ್ ಭುವನದೊಳ್ ಜನಿಸಿ ಫಲವೇನೊ ಸ
ಲ್ಲಳಿತ ದಸರಯ್ಯ ನಿನ್ನನ್ನರೊಳರೇ ದಯಾ
ಜಳಧಿಯೇ ಕರಮಹಿಂಸಾ ಎನುತೆ ಬಳಿಕೆ ಪರಮೋಧರ್ಮ ಎಂದು ನುಡಿನ
ಲಳಿತ ಸದ್ವಾಕ್ಯಮುಸಿರ್ದಂತೆ ನಡೆವವನಾವ
ನಿಳೆಯೊಳಗೆ ನಿನ್ನಂತೆವೋಲೆಂದು ನುತಿಸಿದುದು
[2]ಘುಳಿಲನಾ ಸದ್ಭಕ್ತವಿತತಿ ದಸರಯ್ಯನಂ ಮನದಣಿಗಿನಿಂ ಸಂತತಂ ೩೩

ಮಿಗೆ ನ ಹಂತವ್ಯಃ ಪ್ರಯತ್ನತಃ ಎಂದು ತೊ
ಟ್ಟಗೆ ನುಡಿವ ವಾಕ್ಯಾರ್ಥಮೆಸೆದತ್ತು ನಿನ್ನಲ್ಲಿ
ಜಗದೊಳಗೆ ಮತ್ತಿನ ದುರಾತ್ಮಕರ್ಗಳಲ್ಲಿ ತೋಱುಗುಮೆಯಿಾ ಸದ್ವರ್ತನಂ
ಬಗೆಯೆ ಚರಮಚರಮೆಂಬಿರ್ತೆಱದೆ ತೋಱುಗುಂ
ಸೊಗಯಿಸುವ ಲಿಂಗಮಂತದಱೊಳಗೆ ಪರಿಕಿಪೊಡೆ
ಸುಗಮ ಜಂಗಮವೆ ಚರಲಿಂಗಮೆನಿಕುಂ ಬಳಿಕಮಚರಲಿಂಗಂ ಪಾರ್ಥಿವಂ ೩೪

ಇವರೊಳಗೆ ಪೆರ್ಚು ಕುಂದಂ ನೋಡಲಾಗದೆಂ
ದವಿರತಂ ಪೇಳ್ಗುಮಾಗಮಮೆಂತೆನಲ್ ನೋಡೆ
ತವಕದಿಂದವಿಚಾರ್ಯ ಎನುತಂ ಶಿವಾಜ್ಞಯಾ ಎನುತೆ ಮತ್ತಂ ಭಾವಿಸೆ

---

[1] ನೀ (ಕ) [2] ಗ (ಕ)

ಸುವಿನಯದಿದೆ ಲಿಂಗದ್ವಯಂ ಸಮಾಖ್ಯಾತಮೆನು
ತವೆ ಚರಂ ಚಾಚರಮೆನುತ್ತುಮಿಾ ವಾಕ್ಯಾರ್ಥ
ಮವನಿಯೊಳ್ ನಿನ್ನಲ್ಲಿಯೇ ಸಾರ್ಥಮಾದುದೆಲೆ ದಸರಯ್ಯ ಸುಗುಣಶಯ್ಯ ೩೪

ವರಧರ್ಮಮಾರ್ಗಾನುಪಾಲ ಭಕ್ತವಿಲೋಲ
ಚರಲಿಂಗಸುಖಜಾಲ ಸದ್ಭಕ್ತಿಕುಜಮೂಲ
ನಿರತಿಶಯಸುಗುಣಾಲವಾಲ ಸುಕೃತೋತ್ತಾಲ ಭಕ್ತಹ[1]ರ್ಷಾ[1]ನುಕೂಲ
ನಿರುಪಮಸುಶೀಲ ಸಂಹೃತಕಾಲ ಸುವಿಶಾಲ
ಪರಿಭವಪ್ರತಿಕೂಲ ಎಂದು ಭಕ್ತರ್ ಮಗುಳ್ದು
ಪಿರಿದು ಪೊಗಳ್ದರ್ ಪೌರಜನಮೆಯ್ದೆ ಭಕ್ತಿಯಿಂ ಜಯ ಎನುತ ವಂದಿಸಿದರು ೩೬

ಮುನ್ನೆ ಕೌಟಿಲ್ಯಲಾಂಛನೆಧರನ ಕಳುಪಿಯ
ತ್ಯನ್ನತಾಹಿತಮನೆಸಗಿದ ಖಳರ್ ಭೀತಿಯಿಂ
ಸನ್ನಿದಂ ದಸರಯ್ಯನಡಿಗೆಱಗಿ ಗುಣಮಣಿಯೆ ಕರುಣಾಂಬುಧಿಯೆ ಎಮ್ಮುಮಂ
ನನ್ನಿಗೆಡುಕರನಮಲ ಪುಣ್ಯಹೀನರನನೃತ
ಸನ್ನಿಹಿತರಂ ಪಾಪಕರ್ಮರತರಂ ಕಾವು
ದಿನ್ನೆನುತ್ತೊಸೆದು ನುಡಿದರ್ ನಿಮ್ಮ ಮಹಿಮೆಯಂ ಶಿವನಱಿಪನುಳಿದರಳವೆ ೩೭

ದಸರಯ್ಯ ಮುನ್ನೆ ನಿಮಗಾಂ ಮಾಡಿದಹಿತಮಂ
ನಿಸದಮುದನೆಯ್ದೆ ನೆನೆಯದೆ ನಿಮ್ಮ ಸುಗುಣ[2]ಮನೆ[2]
ಎಸಗವೇಳ್ಕುಂ ನಿಮ್ಮ ತಾಡನಂಗೆಯ್ದಂಗಹೀನಂಗೆ ಕೈವ್ವಂದವು
ಮಸಕದಿಂದವನ ನಿಮ್ಮೆಡೆಗೆ ಚೋಷ್ಟಿಸಿ ಕಳುಪಿ
ದಸಮುಖಳರ್ಗೆಮಗೆ ಮತ್ತವನಿಂದಮಧಿಕಫಲ
ವಿಸರಂಗಳಂ ನೀವು ಕರುಣಿಸಲ್ವೇಳ್ಕೆನುತೆ ಮಗುಳ್ದೆಱಗಿ ನುಡಿದರವರು ೩೮

ಖಲರ ನೇಹದೆ ಸಾಧುಗಳ ವೈರಮೊಳ್ಳಿತೆಂ
ದುಲಿವ ವಾಕ್ಯಾರ್ಥಮಂ ನಿನ್ನಲ್ಲಿಯೇ ಕಂಡೆ
ವೆಲೆ ದಸರಿದೇವಯ್ಯ ಚಂದನಂ ಕೊಱೆದು ಸಣ್ಣಿಸಿ ಕಲ್ಲಮೇಲೊರಸಲು
ತೊಲಗದು ಗಡಂ ತನ್ನ [3]ತಣ್ಪಿ[3]ನೆನೆ ಸತ್ಪುರುಷ
ರಲಘುತರಮಾದ ತಮ್ಮಯ ಗುಣಂ ತೊಲಗುವರೆ
ನೆಲದೊಳಗೆ ದುರ್ಜನರ್ಕಳ ಬಾಧೆಯಿಂದೆನುತೆ ಪೊಗಳ್ದರಾ ದಸರಯ್ಯನಂ ೩೯

---

[1] ರುಷಾ (ಗ) [2] ಮಂ (ಗ) [3] ಕಂಪ (ಕ)

ಪುರಜನಂಗಳ್[1] ಸರ್ವರೊಸೆದು ಬಿಸವಂದವಂ
ಧರಿಸುತೆಮ್ಮಯ ದಸರದೇನಯ್ಯನತಿಶಯದೆ
ಪಿರಿದು ತನ್ನಯ ಶಿರವನೊಡೆಬಡಿದ ಮೋಟವುಲ್ಲಯ್ಯಂಗೆ ಕರಯುಗಳವಂ
ಹೊರಿಸ[2]ದಿಂದಿತ್ತಂ ಗಡೊಸೆದು ಕಾಲ್ಗೆಱಗಲ್ಕೆ
ಭರದಿನೆಮಗೇನನೀಯನೊ ಎನುತೆ ನುಡಿಯುತ್ತೆ
ಪರಿತೋಷದಿಂ ಮಹಾದೇವನೆನುತೆ ಚಿತ್ತದೊಳ್ ನಲಿದು ವಂದಿಸುತಿರ್ದರು ೪೦

ಸದಮಲಪ್ರಚುರವಿಶ್ರುತ ಪರಮಭಕ್ತಗಣ
ಪದಸರೋರುಹಸಾಂದ್ರ ಮಕರಂದಪಾನ ಸ
ಮ್ಮುದಿತ ಚಂಚಚ್ಚಂಚರೀಕನನವರತ ಪಂಚಾಕ್ಷರೀಪ್ರಸಿತಹೃದಯಂ
ವಿದಿತ ಮಂಜುಳನೀಲಕಂಠಾಹ್ವಯಂ ಮನೋ
ಮುದದೆ ಪೇಳ್ದುರುತರಾರಾಧ್ಯ ಚಾರಿತ್ರದೊಳ
ಗಿದು ದಸರದೇನಯ್ಯ ಚಾರಿತ್ರನುತಿಚಿತ್ರಮಘಶರಧಿವರಬಹಿತ್ರಂ ೪೧

[1] ನರ್ಕಳ್ (ಕ) [2] ರುಷ (ಗ)

# ನಾಲ್ಕನೆಯ ಸಂಧಿ

## ಗುರುಭಕ್ತ[1]ನ ಕಥೆ[1]

ಸೂಚನೆ : ಗುರು ಬೆಸಸೆ ನಿಶಿತಶೂಲಮನೇಱಿ ರಾಗದಿಂ
ಧರಣಿಯೊಳ್ ಮೆಱೆದ ಗುರುಭಕ್ತಚಾರಿತ್ರಮಂ
ಸರಳಮಾಗೊರೆದಪೆಂ ಸೂರಸಚಿವೇಂದ್ರ ಕೇಳ್ ಮನದಣಿಗಿನಿಂದಣಿಯರಂ

ಸುರನಿಕರವರಮುಕುಟಮಣಿಕಿರಣಲಹರಿತತಿ
ಪರಿಕಲಿತ ಪರಚರಣಸರಸಿರುಹಭಜಕಕುಲ
ದುರಿತ ಸಮುದಯರುಚಿರ ಮದಕರಟದಳನಪಟು ಹರಿಸದೃಶನತನುರಹಿತಂ
ಕರಿಲಪನಸಿತನಮಲಶತ[2]ತರಣಿ[2]ಘೃಣಿ ವಿಸರ
ಪರಿಭವ ವಿಲಸಿತ ತನು ಫಣಿಪಕರಕಟಕನುರು
ತರಗರಳಸರಳಗಳನನವರತಮವನಿಯಂ ಪೊರೆಗೆ ಗುರುನೀಲಕಂಠಂ ೧

ಇಂತು ಮುನ್ನಿನ ಕಥೆಗಳಂ ಕೇಳ್ದು ಬಲ್ಲೆವಾ
ವಿಂತು ಕಂಡಱಿಯೆವೆಲೆ ಪಂಡಿತೇಂದ್ರಾ ಎನುತೆ
ಸಂತೋಷದಿಂ ಮತ್ತಮಿಂತಪ್ಪ ಕಥೆಗಳಂ ಪೇಳಲುದ್ಯುಕ್ತರಾಗಿ
ಕಂತುಹರಭಕ್ತರಿಂತೆಂದು ನುಡಿದರ್ ಮುನ್ನೆ
ಕಾಂ[3]ತ[3] ಸದ್ಗುರುಭಕ್ತಿ ವಿಬುಧಪ್ರತತಿ ದಯಾ
ಕ್ರಾಂತಚಿತ್ತಂ ಪರಮಗುರುಪಾದಪರವಶೀಭೂತನನಘಂ ನಿಶ್ಚಲಂ ೨

ಗುರುಭಕ್ತಿಪೀಯೂಷ ನಿಮ್ನಗಾಧವನಮಲ
ಗುರುಭಕ್ತಿ ಲೇಖಾಚಲಾಜನುನ್ನತ ವಿಮಲ
ಗುರುಭಕ್ತಿ ಗೀರ್ವಾಣಧೇನು ಗುರುಭಕ್ತಿ ಪದವೀಪಟ್ಟಬದ್ಧನನಿಶಂ
ಗುರುಭಕ್ತಿನಿಧಿ ಪರಮಗುರುಭಕ್ತಿವಿಶ್ರುತಂ
ಗುರುಭಕ್ತನೆನಲ್ ನೆಗಳ್ದನಭವಭಕ್ತಂ ಧರೆಯೊ
ಳಿರುತಿರ್ಪನರಿದಾದ ವರ್ತನದೊಳಾವಗಂ ಚರಿಸುತ್ತೆ ಸಂತಸದೊಳು ೩

---

1 ಚಾರಿತ್ರ (ಗ) 2 ತರಂಗಿಣೀ (ಗ) 3 ತಿ (ಗ)

ಶ್ರುತಿ ಯೋ ಗುರುಸ್ಸ ಶಿವ ಎನುತೆ ಪ್ರೋಕ್ತಃ ಎನುತು
ಮತಿಶಯಂ ಯಶ್ಶಿವಃ ಸ ಗುರುಃ ಸ್ಮೃತಃ ಎನುತೆ
ಶ್ರುತಿನಾಸ್ತಿ ತತ್ತ್ವಂ ಗುರೋಃ ಪರಮೆನುತ್ತೆ ಬಂಧುರನಾದದಿಂದಮುಲಿಗುಂ
ಸತತಮಾಯರ್ಥದೊಳೆ ನಡತೆಯುಂ ಮತ್ತೆ ವಿ
ಶ್ರುತವೇದ[1]ಮೊರೆ[1]ದಂತೆವೊಲ್ ತ್ರಿಸಂಧ್ಯಾಸು ಎನು
ತತಿಮೋದದಿಂ ಗುರೋಃ ಪೂಜಾ ಎನುತ್ತುಮಾಯರ್ಥದೊಳೆ ಚರಿಸುತಿರ್ಪಂ ೪

ಪಿರಿದುಂ ತ್ರಿಸಂಧ್ಯೆಯೊಳಗಿಂತು ಗುರುಪೂಜೆಯಂ
ಭರದಿನೆಸಗುತ್ತೆ ತದ್ಗುರುಪಾದಪದ್ಮಬಂ
ಧುರರೇಣುವಂ ತನ್ನ ಶಿರದೊಳಗೆ ತ[2]ಳಿ[2]ಕೊಳುತಂ ನುತಿಸಿ ವಂದಿಸುತ್ತುಂ
ಗುರು[3]ಪಾ[3]ದಪ್ರಕ್ಷಾಳನಂಗೆಯ್ದು ತಜ್ಜಲಮ
ನುರುಭಕ್ತಿಯಿಂ ಶಿರದೊಳಂ ತನುವೊಳಂ ಮತ್ತೆ
ಭರದಿಂದೆ ಸೇಚನಂಗೆಯ್ವುತಂ ತತ್ಪದದ್ರವಮನೊತ್ತುತೆ ವಸ್ತ್ರದಿಂ ೫

ಪರಚಂದನಮನಳ್ತಿಯಿಂ ಲೇಪನಂಗೆಯ್ದು
ಪರಿಮಳದರಲ್ಗಳಿಂ ಪಾದಪೂಜೆಯನೆಸಗಿ
ಮರಳಿ ಸಮ್ಯಗ್ಧೂಪದೀಪಾದ್ಯನೇಕೋಪಚಾರಂಗಳಂ ವಿರಚಿಸಿ
ಸರಳ ಮೃದುನಾದದಿಂದಂ ಪುರಾತನರ ಭಾ
ಸುರ ಗೀತತತಿಗಳಂ ಪಾಡುತ್ತೆ ಸಂತಸದೆ
ಗುರುಪಾದಪಾಥೋಜಮಂ ಶಿರೋಭಾಳ ವಕ್ಷಸ್ಸುಗಳೊಳೊತ್ತಿಕೊಳುತಂ ೬

ಒಸೆದು ಸದ್ಭಕ್ತಿಯಿಂದಂಜಲೀಕೃತಪಾಣಿ
ಯೆಸೆಯೆ ವಂದಿಸಿ ಬಳಿಕೆ ಪುಷ್ಪಾಂಜಲಿಯನೆಸಗಿ
ಮಸಕದಿಂ ಮಸ್ತಕನ್ಯಸ್ತಹಸ್ತನುಮಾಗುತತಿಶಯದೆ ನುತಿಗೆಯ್ವುತೆ
ಮಿಸುಪ ಗುರುವಿನ ಪದಂಗಳ್ಗೆ ವಂದಿಸುತೆ ಸಂ
ತಸದಿಂ ಪ್ರದಕ್ಷಿಣಂಗೆಯ್ದು ಬಳಿಕಂ ಪಾದ
ಬಿಸರುಹಕೆ ನಮಿಸುತಾವಗಮಿಂತು ಗುರುಪೂಜೆಯಂ ಮಾಡುತೊಸೆದು ಮತ್ತಂ ೭

ಗುರುಪದಾಂಬುಜಭಕ್ತಿ ಗುರುಕಾರ್ಯಯುಕ್ತಿ ಬಂ
ಧುರ ಗುರೂಕ್ತಿಗಳಿಂದೆ ಗುರುದಾಸತಾಸಕ್ತಿ
ಯಿರವಿನಿಂ ದೇಹಧರ್ಮಂಗಳಂ ಮಱೆದು ವರ್ತಿಸುತಿರ್ಪನೆಂತೆಂಬೊಡೆ

---

[1] ಮುಳಿ (ಗ) [2] ಳ್ದಿ (ಗ) [3] ಪಾ (ಗ)

ಪಿರಿದಪ್ರತರ್ಕ್ಯನನುಪಮನಪ್ರಮೇಯನನುರು
ತರಮಸಾಧ್ಯಮಭೇದ್ಯಮಪ್ರಮಾಣಂ ಪರಂ
ನಿರತಿಶಯಮಪ್ರಚಾರಂ ಪ್ರಪಂಚಾತೀತಮಪ್ರಚಿಂತ್ಯಂ ದಲೆನಿಸಿ ೮

ತೊಳಪ ಶಿವತತ್ತ್ವಮೇ ಪರಮೇಶ್ವರಂ ಶಿವಂ
ಸುಲಲಿತೇಶಾನನಾರ್ಯಾಧನಂ ಶಂಕರಂ
ಲಲಿತಮೀಶ್ವರನೆಂಬ ಪೆಸರುಳ್ಳುದಾಗಿ ಭಕ್ತಾನುಗ್ರಹಾರ್ಥಮಾಗಿ
ಪೊಳೆವ ಗುರುಮೂರ್ತಿಯಂ ಮುನ್ನೊಸೆದು ಧರಿಸಿಯು
ಗ್ಗಳದ ಭವಪಾಶಮಂ ಪಱಿದು ಮೋಕ್ಷಾರ್ಥಿಗಳ
ನಿಳೆಯೊಳಗೆ ಬೋಧಿಸುವ ಬವಸೆಯಿಂ ಘನದಯಾಮೃತಕರಾಂಬುಜನಾಗುತೆ ೯

ಪಿರಿದು ತಾನೇ ತನ್ನ ತೋಱಿಸಲ್ ಬಗೆದು ನಿಜ
ಗುರುವಾಗಿ ವಾಙ್ಮನಕಗೋಚರನೆನಿಪ್ಪ ಬಂ
ಧುರ ಮಹಾದೇವನಂ ಶಿವನನಱಿತ ಚಿತ್ತಗತನೆನಿಸಿ ಬಳಿಕಂ ಭಾವಿಸಿ
ಸರಳ ಸರ್ವಗತತ್ವ ಮುಖ್ಯಗುಣನಿಕುರುಂಬ
ದುರುಕಳೇವರವಿಲ್ಲ[1]ದಭವನಂ ಮಾಡಿ ಬಂ
ಧುರ[1] ಶಿಷ್ಯನಂ ಬಳಿಕ್ಕವನಹಂಕಾರಾದಿಗಳನೆಯ್ದೆ ತವಿಸಿ ಮುದ[2]ದೆ[2] ೧೦

ಮಿನುಗುತಿರ್ಪುಭಯಸಂ[3]ಸ್ಕಾರಯುತನಂ[3] ಮಾಡಿ
ಘನತರಾಮೂರ್ತಿ ಪರತತ್ತ್ವಲಿಂಗಮನೊಸೆದು
ವಿನಯದಿಂ[4]ದಂ ಶಿಷ್ಯಕರ[4]ದೊಳಗೆ ಸ್ಥಿತಿರಿಸಿ ತಲ್ಲಿಂಗಮಂ ಬಳಿಕ್ಕಂ
ಅನುನ[5]ಯಂ[5] ಪ್ರಾಣದೊಳ್ ನೆಲೆಗೊಳಿಸಿಯಾತ್ಮನೊಳ
ಗಿನಿಸು ಪೆಱಪಿಂಗದಂತಾತ್ಮನಂ ಪೊರ್ದಿಸು
ತ್ತನುವಿನಿಂ ಶಿಷ್ಯಂಗೆ ಪರಿಮಿತದಿನಭವನಂ ಕೊಟ್ಟು ಗುರುದಕ್ಷಿಣೆಯನು ೧೧

ಕುಡತಕ್ಕ ವಸ್ತುವೊಂದಿಲ್ಲ ಲೋಕದೊಳೆಯ್ದೆ
ನುಡಿಗುಮಾಮ್ನಾಯಂ ಶರೀರಮರ್ಥಂ ಎನುತೆ
ಬಿಡದೆ ಪ್ರಾಣಾಂಶ್ಚ ಎನುತಂ ಸದ್ಗುರುಭ್ಯೋ ನಿವೇದಯೇದೆನುತೆ ಸತತಂ
ಕಡುಪಿನಿಂದೀಯರ್ಥಮಂ ನಿಶ್ಚಯಂಗೆಯ್ದು
ಸಡಗರದೆ ತನ್ನ ಸುಶರೀರಮರ್ಥಂಗಳಂ
ಪೊಡವಿಯೊಳ್ ಗುರುಗಿತ್ತು ಲಿಂಗಸಾನ್ನಿಧ್ಯಮಂ ಪಡೆದು ಸುಖದಿಂದೆ ಮತ್ತಂ ೧೨

---

[1] ದಂತಭವನಂ ಮಾಡಿ।ವರ (ಗ) [2] ದಿಂ (ಗ) [3] ಸಾರಂಗಳಂ (ಕ) [4] ಶಿಷ್ಯಕರತಳ (ಗ) [5] ಯ (ಕ)

ಒಸೆದು ಜಂಗಮಭಕ್ತಿಯಿಂ ತತ್ಪ್ರಸಾದಮಂ
ನಿಸದವೆಲ್ಲಾಗಳುಂ ಪಡೆದು ವರ್ತಿಸುವುದೇ
ಮಿಸುಪ ಗುರುಭಕ್ತಿಯಿಂದನುಳಿದುದರಪೋಷಣದೆ ಭಾಷೆಯಂ ತಪ್ಪಿ ನಡೆದು
ಎಸೆವ ಗುರುಸದೃಶ ಜಂಗಮಕೆ ತದ್ಗುರುಗೆ ರಾ
ಜಿಸುವ ಲಿಂಗಕ್ಕೆ ನಿಜವಸ್ತು ದೇಹಾಸುಗಳ
ಮಸಕದಿಂ ಕುಡದೆ ವಂಚಿಸಿ ಬಾಳ್ವ ದುಷ್ಟಂಗೆ ಗುರುಭಕ್ತಿ ದೊರೆಕೊಂಬುದೆ ೧೩

ಪಿರಿದುಂ ಮೊದಲ್ಗಿಡಲ್ಕಾ ಲಾಭಮುಱಿ ಕಿಡುಗು
ಮಿರದೆಂಬ ನಾಣ್ಣುಡಿಗಳಂತೆ ಮೂಲಪದಾದ
ಗುರುಭಕ್ತಿಕಿಡೆ ಲಿಂಗಜಂಗಮಂಗಳಭಕ್ತಿ ಮೊದಲೆ ಕಿಡುಗುಂ ನಿಕ್ಕಿಪಂ
ಗುರುಭಕ್ತಿಯಿಲ್ಲ ತನುವಂಚಕಂಗಾಪಗಂ
ವರಲಿಂಗಭಕ್ತಿ ನೆರೆಯದು ಪ್ರಾಣವಂಚಕಂ
ಗೊರೆಯ ಜಂಗಮಭಕ್ತಿ ಧನವಂಚಕಂಗಿಲ್ಲ ಸಂತತಂ ಲೋಕದೊಳಗೆ ೧೪

ಗುರುಲಿಂಗಜಂಗಮಂಗಳ್ಗೆಂದು ಗುರು ಮುನ್ನೆ
ಭರದೆ ತನುಚಿತ್ತಕನಕಂಗಳಂ ಕಲ್ಪಿಸಿದ
ನಿರದೆ ಮತ್ತಾ ತ್ರಿವಿಧಮಂ ತ್ರಿವಿಧಲಿಂಗಕ್ಕೆ ಕುಡದವಂಗಾ ತ್ರಿಪ[1]ದ[2]ವು
ದೊರಕಲಱಿಯದು ಬಳಿಕ್ಕಾ ಗುರು ಸುಭಕ್ತಿಯಾ
ಪರಮಮಾಹಾತ್ಮ್ಯಮಂ ತದ್ಗುರುವೆ ಬಲ್ಲನೀ
ಶ್ವರನುಮಱಿಯಲ್ ಶಕ್ತನಲ್ತು ತದ್ಗುರುಭಕ್ತಿ ಮೋಕ್ಷಸಾಧನಮಾವಗಂ ೧೫

ಗುರುಭಕ್ತಿದುರಿತಕಾದಂಬಿನೀಮಾರುತಂ
ಗುರುಭಕ್ತಿಯಜ್ಞಾನಧರಣೀಜಗಣಪರಶು
ಗುರುಭಕ್ತಿದುಃಖಕಾನನಧೂಮಕೇತು ದುರ್ಭವಶರಧಿಬಡಬಾನಳಂ
ಗುರುಭಕ್ತಿಕರ್ಮಸಿಂಧೂರಮೃಗಾಧೀಶ್ವರಂ
ಕರಮೆನಿಕುಮಿನ್ನದೇತರ್ಕೆ ಪಲವಾತುಗಳ್
ಗುರುಭಕ್ತಿ ಮಱುವುಟ್ಟುಗೆಡಿಸುಗುಂ ತಾಯ್ತಂದೆ ತಾನೆನಿಕ್ಕುಂ ಧರೆಯೊಳು ೧೬

ಬಲವೆನಿಸುಗುಂ ಭ್ರಾತೃವಂತೆ ಸದ್ಗುರುಭಕ್ತಿ
ನಲಿದು ರಕ್ಷಿಪುದು ನೆಱಿಧಾತೃವಂತೆವೊಲೈದೆ
ಲಲಿತ ಭೇಷಜನಂತೆ ಭವರುಜೆಗಳಂ ತವಿಕುಮಾರ್ಯನಂತೆವೊಲಾವಗಂ

---

[1] ಥ (ಗ) [2] ಕ್ಯ (ಕ)

ಅಲರ್ದು ಬೋಧಿಸುಗುಮಾ ಗುರುಭಕ್ತಿ[1]ಯದನೊಲ್ದು[1]
ಸಲೆ ಅಭವಭಕ್ತಿಗೆಯ್ಯಲ್ ನಿಷ್ಪಲಕ್ಕೆ ಮಿಗೆ
ನೆಲೆಯುಕ್ಕುಮಿಾಶಭಕ್ತಿಗೆ ಕುಣಿಕೆಯೆನಿಕುಮಾ ಗುರುಭಕ್ತಿ ಲೋಕದೊಳಗೆ ೧೭

ಗುರುಭಕ್ತಿಯೇ ಹರನ ಭಕ್ತಿಗೆ ಸಮಂ ಮತ್ತೆ
ಗುರುಭಕ್ತಿಯೇ ಹರನ ಭಕ್ತಿಗಾಶ್ರಯಮೆನಿಕು
ಮತರೆ ಗುರುಭಕ್ತಿಯೇ ಹರಭಕ್ತಿಗಾದಿಕಾರಣಮೆನಿಕುಮನವರತವು
ಗುರುಭಕ್ತಿ ಸಕಲಸಂಪದ್ಭಕ್ತಿ ಮುಕ್ತಿಪುರ
ಪರಭಕ್ತಿ ಸಂಸಿದ್ಧಿಗಳ್ಗೆ ಕಾರಣಮಕ್ಕು
ಮೊರೆಯಲಿದು ನಿಕ್ಕುವಮೆನಿಕ್ಕುವುದುಕಾರಣಂ ಗುರುಭಕ್ತಿಯೇ ಶುಭಕರಂ ೧೮

ಇದು ನಿಮಿತ್ತಂ ಪ್ರಾಣದೇಹಾರ್ಥ ನಿಕರಮಂ
ಸದಮಲ ಶ್ರೀಗುರುಪದಾರ್ಪಿತಂಗೆಯ್ದು ಸ
ಮ್ಮದದೆ ಗುರುಪರಿಚರಿಯೆಯಲ್ಲಿ ತತ್ಪರನಾಗಿ ಗುರುಭಕ್ತನಿರೆ ಕಾಣುತೆ
ಪದೆದು ಗುರುಭಕ್ತರೆಲ್ಲರ್ ತನ್ನ ಪೊಗಳುತಿರೆ
ಸದಯ ಗುರುಭಕ್ತನತಿಸಾತ್ವಿಕಸುಭಕ್ತಿಯಿಂ
ವಿದಿತ ಗುರುಭಕ್ತಿಯನಜಸ್ರಮಿಂತೆಸಗುತಿರ್ಪಂ ಮನೋಮುದದೆ ಮತ್ತಂ ೧೯

ಗುರುಪದಸ್ಮರಣವೇ ತಪಮಾವಗಂ ತನಗೆ
ಗುರುಪಾದವಶವರ್ತನಂ ಮತಂ ತನಗೆ ತ
ದ್ಗುರುಪಾದ ತಂತ್ರಕೃತ್ಯಂ ತನಗೆ ನಿತ್ಯತಂತ್ರಂ ಗುರುಪದಧ್ಯಾನವೇ
ವರ ಜಪಂ ಗುರುದಿವ್ಯಮಾರ್ಗಾನುಚರಿತಮೇ
ಪರಮನೇಮಂ ಗುರುಪದಾರ್ಚನಂ ಹೋಮಮುರು
ತರ ದೇಶಿಕೇಂದ್ರ ಪದತನುಸಮರ್ಪಣಮೆ ದಾಸೋ[2]ಪ[2]ದಾಗಿ ಚರಿಸುತಿರಲು ೨೦

ಮುಗುಳ್ದೊಂದುವಾಸರಂ ಗುರುಪೂಜೆಯಂ ಮಾಡ
ಲೊಗೆದ ಹ[3]ರಿಸ[3]ದೆ ಕುಸುಮವಿಸರಂಗಳಂ ತರ್ಪ
ಬಗೆಯಿಂದೆ ಪೋಗುವೆಡೆಯೊಳಗೆ ಗುರುಪಾದುಕೆಗಳಂ ಸೋಂಕೆ ತನ್ನ ಚರಣಂ
ಸುಗಿದು ಮನದೊಳ್ ನೊಂದು ಗುರುಭಕ್ತನಿಂತೆಂದ
ನಗಲದೆನಗಿಂತಪ್ಪ ಪಾಪಮೆಯ್ದಿತ್ತು ಹಾ
ನಗಜಾಧಿಪತಿಯೆ ಕೆಟ್ಟೆಂ ಕೆಟ್ಟೆನೆಂದೆನುತೆ ಬಾಯಳಿದನತಿಶಯದೊಳು ೨೧

---

[1] ಯಿದನೊಕ್ಕು (ಗ) [2] ಮ (ಗ) [3] ರುಷ (ಗ)

ಪಿರಿದುಮಿಾ ಪಾತಕಮನೆಂತು ಕೆಡಿಪೆಂ ಶಿವಾ
ಭರದಿಂದೆ ಪಾದುಕಾಽಸನ ಎನಲ್ ಶಯ್ಯಾದಿ
ಗುರುಣಾ ಎನಲ್ಕೆಯದಧಿಷ್ಠಿತಂ ಎನೆ ನಮಸ್ಕುರ್ವೀತ ಎನಲಾವಗಂ
ಕರಮೆ ತತ್ಸರ್ವಂ ನ ಸಂಸ್ಪೃಶೇತ್ ಕ್ವಚಿದೆನಲ್
ಗುರುವಿನಡಿಗೆರ್ಪಾಸನಂ ಶಯ್ಯೆ ಮೊದಲಾದ
ಪರಿಕರಂಗಳ್ಗೆ ವಂದಿಪುದುಚಿತವಡಿಸೋಂಕೆ ಮಿಗೆ ಪಾತಕಂ ಸಾರ್ವುದು ೨೨

ಎನುತೆ ತದ್ಗುರುಭಕ್ತನೀ ಗುರುದ್ರೋಹದಿಂ
ದೆನಸುಮಘತತಿ ಲೋಕದೊಳ್ ಪಿರಿದುವಿಲ್ಲ ತೊ
ಟ್ಟನೆ ಪಾಪಮಿದನೆಂತು ಸೈರಿಪೆಂ ಸೈರಿಸಿದೊಡೆನಗಂತಕನ ಪುಯ್ಯಲು
ಎನಸುಮಿರದೆಯ್ದುಗುಮದಂ ತಾಳಲಾಱನೀ
ಘನಮಾದ ತಪ್ಪುಗೆಯ್ದಡಿಗಳಂ [1]ತುಂ[1]ಡುಗೆ
ಯ್ದನುನಯದೆ ತದ್ರಕ್ತಸರ್ಪಿಯಿಂದಾಯುಷ್ಠಿಸಮಿಧಂಗಳಿಂದೆ ಮುದದಿಂ ೨೩

ಪರಮೇಶ್ವರಾಗ್ನಿಗಾಹುತಿಗೆಯ್ವೆನೀ ದ್ರೋಹ
ಕಿರ[2]ದಿದೇ ವಿಧಿಯೆಂದು[2] ಬಗೆದು ತನ್ನಡಿಗಳಂ
ಭರದಿಂದೆ ತುಂಡಿಸಲ್ಕಿದನೆಲ್ಲಮಂ ಕೇಳ್ದ ಖಂಡಸತ್ಕೀರ್ತಿಯುತನು
ಪಿರಿದು ದಂಡಿತಪಾಪನುದ್ದಂಡಗುರುಮೂರ್ತಿ
ಹರಸದೃಶನಮರಗುಂಡದ ಮಲ್ಲಿಕಾರ್ಜುನಂ
ಹರಗಣಕುಲಂಬೆರಸಿ ತನ್ನೆಡೆಗೆ ಬರುತಿರಲ್ ಕಂಡು ಗುರುಭಕ್ತನೊಸೆದು ೨೪

ಹ[3]ರಿಸ[3]ದಿಂ ಭೀತಿಯಿಂದಿರದೇಳ್ವ ಸಂಭ್ರಮಂ
ಬೆರಸಿ ತಡಬಡಗೊಳುತ್ತೆ[4]ಳ್ದು[4] ಸಾಷ್ಟಾಂಗದಿಂ
ಕರಮೆ ವಂದಿಸುತಿರಲ್ಕನಿತಱೊಳೆ ಗುರುಕೃಪೆಯಿನೆರಡು ತಚ್ಚರಣಂಗಳು
ಭರದಿಂದೆ ಮೂಡಿದವು ಗುರುಕೃಪಾಪೀಯೂಷ
ಸರಸಿಯೊಳಗಂಘ್ರಿಕಮಲಂಗಳೊಗೆತಂದಂತೆ
ಗುರುಭಕ್ತಿಗೊಲ್ದು ಪದತಳಜನಿಸಿದಂತಾಗೆ ಭಕ್ತಿಯಿಂ ಗುರುಗೆಱಗಿದಂ ೨೫

ಮಿನುಪ ಕರತಳಯುಗಳಮಂ ಸಾರ್ಚಿಯಳಿಕದೊಳ
ಗನುನಯದೆ ಮುಗುಳ್ದು ಗುರುಪದತಳಕೆ ವಂದಿಸು
ತ್ತನಘಗುರುಭಕ್ತನತಿಭಕ್ತಿಯಿಂ ಗುರುವ ನುತಿಸುತ್ತಿರಲ್ ಭ್ಯವಿಗಳ್ ತತಿ

---

[1] ಕಂ (ಕ) [2] ದೆ ವಿಧಿಯೆಂದು ತಾ (ಗ) [3] ರುಷ (ಗ) [4] ರ್ದು (ಗ)

ವಿನಯದಿಂ ನುಡಿದರೀ ಗುರುಭಕ್ತಿಮಹಿಮೆಗಿದು
ಘನತರಾಶ್ಚರ್ಯಮೇ ನಿನ್ನೆಯಿಾ ಗುರುಭಕ್ತ
ನನುವನುನ್ನತ ಗುರುವ ಪದಪಾರತಂತ್ರ್ಯಮಂ ಗುರುಚರಣದಭಿರತಿಯನು ೨೬

ಉಳಿದ ಶಿಷ್ಯರ್ಗೆ ತೋಱಲ್ವೇಳ್ಕುಮೆನುತೆ ಸ
ಲ್ಲಳಿತ ತಳ್ಪನಿಯುಕ್ತ ಪರಿಯಂಕಮಂ ಮಹೋ
ಜ್ವಳರಾಗದಿಂದೆ ಗುರು ತನ್ನಿದಿರೊಳಿರಿಸಿಕೊಂಡೆಲ್ಲ ಶಿಷ್ಯರ ಕರೆಯಿಸಿ
ಪೊಳೆವ ಮಂಚದ ಮೇಲೆ ಕುಳ್ಳಿರೆನೆ[1]ತೋರೊ[1]ರ್ವ
ರಳಘುಶಿಷ್ಯರ್ಗೆ ಗುರು ಬೆಸಸೆ ತದ್ವಾಕ್ಯಮಂ
ಘಳಿಲನಾ ಶಿಷ್ಯರ್ಕಳೆಯ್ದೆ ಕೇಳುತ್ತೆ ಕಿವಿಯಂ ಮುಚ್ಚಿಕೊಳುತೆ ಬೆದಱಿ ೨೭

ಪಿರಿದುಮಿಂತಪ್ಪ ವಿಪರೀತಮುಂಟೆ ನೋಡೆ
ಕರಮುನ್ನತಾಸನಾದಿಗಳಲ್ಲಿ ಎಂತು ಕು
ಳ್ಳಿರಬರ್ಕುಮೊಲ್ದು ಗುರುಸನ್ನಿಧಿಯೊಳೆನುತೆ ಶಿಷ್ಯಾಳಿ ಹಾಸ್ಯಂಗೆಯ್ಯಲು
ಗುರುಚರಣಪೂಜಾನುರಕ್ತನಂ ಶಿಷ್ಯನಂ
ಗುರುಭಕ್ತನಂ ನೋಡಿ ತನ್ಮಂಚದಲ್ಲಿ ಸು
ಸ್ಥಿರನಾಗಿ ಕುಳ್ಳಿರೆನೆ ತದ್ವಾಕ್ಯಮಂ ಶಿರದೊಳಾಂತು ಸದ್ಭಕ್ತಿಯಿಂದಂ ೨೮

ಮಿಗೆ ಗುರೋರಾಜ್ಞಾನಲಂಘಯೇದೆಂಬ ತೊ
ಟ್ಟಗೆ ಗುರೋರಾಜ್ಞಾನುವರ್ತನಂ ಎಂಬ ಸೊಗ
ಸೊಗೆವ ವಾಕ್ಯಮೆ ನಿಜಪ್ರಾಣಪದಮಾಗಿ ತದ್ಗುರುವಾಕ್ಯಮಂ ಮಿಾಱದೆ
ನೆಗಳ್ದ ಗುರುಚರಣಕ್ಕೆ ವಂದನಂಗೆಯ್ದು ನೆ
ಟ್ಟಗೆ ಮಂಚದಗ್ರದೊಳ್ ಕುಳ್ಳಿರ್ದು ಗುರುಭಕ್ತ
ನಗಲದಿರೆ ನೋಡಿ ನುತ್ತಿನ ಶಿಷ್ಯರೆಯ್ದೆ ಕಿಸುಗಣ್ಣಿ ನುಡಿದರ್ ತುರಿತದಿಂ ೨೯

ಗುರುವಿನಿದಿರೊಳ್ ಮಂಚಮೇಱಿ ಪಾತಕನೆಂಬ
ಪರವಾಕ್ಯದರ್ಥಕ್ಕೆ ಪೆಳಱದೇ ಮತ್ತೆ ಸ
ದ್ಗುರು ಮನಂ ನೋಡಲೆಂದೊಲ್ದು ಬೆಸಸಿದನೆಂದು ಸುಗಿಯದೇ ಮನದೊಳನಿಸುಂ
ಗುರು ಮುನ್ನೆ ಕರೆದೆಮ್ಮನೀ ಮಂಚದಗ್ರದೊಳ್
ಭರದಿ ಕುಳ್ಳಿರಿಮೆನಲ್ ಸೆಡೆದೆವಾವೆಲ್ಲರುಂ
ಪಿರಿದುಮೆಮ್ಮಂತಪ್ಪ ಮುಖ್ಯರಳಱಲ್ಕೆ ನೋಡಿವನಗಿಯದೇ ಇರ್ದಪಂ ೩೦

---

[1] ತೊರ್ವೊ (ಟ)

ಸಿತಗತನದಿಂದಮಾಯುಧಸುನಳಿದೆ ಮಹೋ
ನ್ನತಮುಂಚದಗ್ರದೊಳ್ ಕುಳ್ಳಿರ್ದಪಂ ನೋಡ
ಲತಿವಿಸ್ಮಯಂ ಗುರುವಿನಿದಿರೊಳಗ್ರಾಸನದೊಳಿರೆ ದೋಷಮೆಂದಱಯದೆ
ಅತುಳ ಮುದದಿಂದೆಮ್ಮನೆಲ್ಲರಂ ಗಣಿಯಿಸದೆ
ಮತಿವಿಕಲನಾಗಿರ್ದ ದೇಶಿಕದ್ರೋಹಿಯಂ
ಹತಮನೆಯ್ದಿಪುದೆ ಕಜ್ಜಮಿದೆಂದು ಘುಡುಘುಡಿಪ ಶಿಷ್ಯರಂ ಗುರು ಕಾಣುತೆ ೩೧

ಗುರುಭಕ್ತನತ್ಯಂತ ಗುರುಭಕ್ತಿಯಂ [1]ನಾಡೆ[1]
ಧರಣಿಯೊಳ್ ಮೆಱಸುವೆನೆನುತುಂ ಗುರುಸ್ವಾಮಿ ತ
ದ್ಗುರುಭಕ್ತನಂ ಕರೆಯೆ ಪರ್ಯಂಕದಿಂದಿಳಿದು ಗುರುಗೆಱಗಿ ಮುಂದೆ ನಿಲಲು
ಗುರುವರಂ ನಿಶಿತಶೂಲಮುನೋದನಳ್ಕಱಂ
ತರಿಸಿ ತನ್ನಿದಿರೊಳಗೆ ನೆಡಿಸಿ ತಚ್ಛಿಷ್ಯರಂ
ಕರೆದಪಂ ನೀಚನುನ್ನತಗುರುದ್ರೋಹಿಯುವನಂತಿರ್ಕೆ[2]ನುತ್ತೆ[2] ನುಡಿದು ೩೨

ವಿತತ ಗುರುಭಕ್ತಿವರ್ಧನರವನಿಯೊಳ್ ನೀವು
ಹಿತರೆಮಗೆ ನಿಮ್ಮ ಗುರುಭಕ್ತಿಯಂ ನೋಡಿದಪೆ
ನತಿಶಯದಿನೀ ಶೂಲಮಂ ಭರದಿನಡರಿಮೆನೆ ತಚ್ಛಿಷ್ಯರೆಲ್ಲರೊಸೆದು
ನುತಿಸುತ್ತೆ ಗುರುಗೆಱಗಿ ನುಡಿದರೊಳ್ಪಿತ್ತಾಯ್ತು
ನುತ ಶೂಲಮಡರಿಮುರುಪರ್ಯಂಕಮೋಱಮೆನು
ಶತಿಹರುಷದಿಂ ನುಡಿವಿರಿಂತಪ್ಪ ಗುರುಭಕ್ತಿಯುಂಟೆಂಬಿ ಲೋಕದೊಳಗೆ ೩೩

ಮಿಸುಪ ಪರ್ಯಂಕಮಂ ಮುನ್ನಡರಿದಂತೆ ರಾ
ಜಿಸುವ ಶೂಲಮನಾತನೇ ಏಱದಪನೀಗ
ಳುಸುರವೇಡೆಮಗೆ ನಿಮ್ಮಸದಳದ ಭಕ್ತಿಗಂಜುವೆವೆನುತುಮವರೆಲ್ಲರು
ಗಸಣಿಗೊಳುತಿರೆ ಕರೆದು ಗುರುಭಕ್ತನಂ ಸಮು
ಲ್ಲಸಿತ ಕರುಣಾಮೃತರಸಾನ್ವಿತಕಟಾಕ್ಷದಿಂ
ದೊಸೆದೀಕ್ಷಿಸುತೆ ಸುಪ್ರಸಾದ ತಾಂಬೂಲಮಂ ಕರುಣಿಸಲ್ ಕರದೊಳಾಂತು ೩೪

ಸವಿದು ಮಿಕ್ಕುದನಂಗದಲ್ಲಿ ಲೇಪಂಗೆಯ್ದು
ಸವಿನಯದೆ ಮುಂದೆ ನಿಂದಿರ್ದ ಗುರುಭಕ್ತಂಗೆ
ಭವರಹಿತಗುರು ನಿರೂಪಿಸಿದನೀ ಶೂಲಮಡರೆಂದು ಮನ ನೀರೇಱುತೆ

[1] ದಮಂ (ಗ) [2] ಯೆನುತೆ (ಕ)

ತವಕದಿಂದಾ ವಾಕ್ಯಮಂ ಶಿವದೊಳಾಂತು ಸಂ
ಭವಿಸಿದಾನಂದದಿಂ ಗುರುಗೆಱಗಿ ರನ್ಯಶೂ
ಲವನೇಱಿದಂ ಮುನ್ನೆ ಪರ್ಯಂಕಮಂ ಮನೋಮುದದಿನೇಱಿದ ಪಾಂಗಿನಿಂ ೩೫

ಮಿಸುಪ ಶೂಲಾಗ್ರದೊಳ್ ಕುಳ್ಳಿರಲ್ ನೆತ್ತಿಯೊಳ್
ಪೊಣೆದೋಱಿದತ್ತು ಮತ್ತದನಱಿಯದೊಲ್ದು ತೊ
ಟ್ಟನೆ ನಮಸ್ಸದ್ಗುರುಭ್ಯೋ ಎನುತೆ ಗುರುಗೆ ವಂದಿಸುತಿರ್ದನತಿಮುದದೊಳು
ಸನಯದಿಂ ಶೂಲಮಂ ನುಂಗಿರುತೆ ಭಾವಿಸಲ್
ಘನಶೂಲನುಂ ನುಂಗಿಡಂತೆ ಬೆರತಿರದೆ ತೊ
ಟ್ಟನೆ ವಿಮಲಭಕ್ತಿಯಿಂ ಕರಕಮಲಮಂ ಮುಗಿದು ಗುರುವೆ ಶರಣೆನುತಿರ್ದನು ೩೬

ಮಿಸುಪ ಶೂಲಾಗ್ರದೊಳಗಿಂತೊಪ್ಪುತಿರ್ಪ ಸ
ಲ್ಲಸಿತ ಗುರುಭಕ್ತನಂ ಗುರುಸಕ್ತನಂ ಸಮು
ಲ್ಲಸದಮಲ ಗುರುದಯಾಸಿಕ್ತನಂ ಗುರುಕೃತಾಜ್ಞಾಪ್ರಾಣನಂ ಸುಗುಣನಂ
ಎಸೆವ ಗುರುವಾಕ್ಯಪ್ರಮಾಣನಂ ಗುರುಪಾದ
ಬಿಸರುಹಧುರೀಣನಂ ಗುರುಮತತ್ರಾಣನಂ
ನಿಸದಮುನ್ನತ ಗುರುಪದಾಬ್ಜಕಲ್ಯಾಣನಂ ಗುರುಭಜನಪಾರೀಣನಂ ೩೭

ಅಸ್ತಮಿತ ದುಷ್ಕೃತಾನೀಕನಂ ಸಂತತ ನಿ
ರಸ್ತದೇಹನಿಕೃಷ್ಟಗುಣಸಮುದಯನನಮಲ
ಮಸ್ತಕನ್ಯಸ್ತಹಸ್ತನನಧಿಕ ಗುರುಮೂರ್ತಿ ವಿಶ್ರುತಸ್ತವಪರನನು
ಶಸ್ತತರ ಬುಧಜನಸ್ತುತಿಪಾತ್ರನಂ ಲೋಕ
ವಿಸ್ತರ ಸುಕೀರ್ತಿಯುತನಂ ಗುರುರವಿದಯಾಗ
ಭಸ್ತಿ ದೂರೀಕೃತಾಂತರ್ಮಲಾಳ್ಯಂಧತಾಮಸನನತಿಗುಣವಾಸನಂ ೩೮

ವರಚಿತ್ರಭಾಕರನ ಸದ್ಗುಣಾಕರನನುರು
ತರ ಭವವಿತಾನವಿಜಯಾಸಕ್ತನಂ ಶೂಲ
ಸರಳ ಭಾಸುರನನುನ್ನತಶೂಲ ಸಂಧಾನನಚಲಶೂಲಾನ್ವಿತನನು
ಪರಮಶೂಲಾಗ್ರಾಸನಸ್ಥನಂ ಹೃತ್ಕಮಲ
ನಿರತಿಶಯ ನಿಹಿತಶೂಲಿಯನಹಿತಜನ ಶಿರ
ಸ್ಸುರುಚಿರಸ್ಥೂಲಶೂಲನನೀಕ್ಷಿಸುತ್ತಮರಗುಂಡ ಮಲ್ಲೇಶನೊಸೆದು ೩೯

ಮಿಸುಪ ತನ್ನ[1]ಯ[1] ಶಿಷ್ಯವಿಸರಕ್ಕೆ ನುಡಿದನೆಲೆ
ಪಿಸುಣರಿರ ನೀವೀತನಂ ಕಂಡಸಹ್ಯದಿಂ
ಗಸಣಿಗೊಳುತಿರ್ಪಿರೀತನ ಸದಾಚಾರಮಂ ಗುರುಭಕ್ತಿ ಸನ್ನಿಷ್ಠೆಯಂ
ಮುಸಕದಿಂ ನೋಡಿಮೆನುತುಂ ಮತ್ತಮಿಂತೆಂದ
ನಸಮೇತಿಹಾಸಾದಿ ಶಾಸ್ತ್ರಂಗಳಲ್ಲಿ ರಾ
ಜಿಸುವ ನೂತನ ಪುರಾತನ ಭಕ್ತತತಿಯೊಳಿಂತಪ್ಪನಂ ಕೇಳ್ದಱಿವಿರೆ ೪೦

ಸತತಮಿಂತಪ್ಪ ವಿಕ್ರಮಭಕ್ತಿಯಂ ಲೋಕ
ವಿತತಿಯೊಳ್ ಕಂಡಱಿವಿರೇ ಬಳಿಕ ನೀವೆಲ್ಲ
ರತಿಶಯದಿಸುಂತೆ [2]ಮೇಳಿ[2]ಲಱಿಯದೀತನ ನೋಡಿ ಕೂಳ್ಗುದಿಯುತಿರ್ಪಿರೆಯ್ದೆ
ಮತಿವಿಕಲರಿರ ನೋಡಿಮೆಮಗೆ ನೀವೆಲ್ಲರುಂ
ನುತ ತಿತಿಕ್ಷಾಪಾತ್ರರೀತನೋರ್ವನೆ ಕೃಪೋ
ನ್ನತ ಪಾತ್ರನೆಮ್ಮಾಜ್ಞೆಯಿತಂಗೆ ಹರಣಮದು ನಿಮಗೆ ಹಾಸ್ಯಾಸ್ಪದಮದು ೪೧

ಮಿಗೆ ಮದೀಯೇಚ್ಛಾನುಸಾರಿಯೀತಂ ನಾಡೆ
ಸೊಗಸಿನಿಂದಂ ತ್ವದೀಯೇಚ್ಛಾನುಸಾರಿಗಳ್
ಬಗೆಯೆ ನೀವೆಲ್ಲರೀತಂಗೆ ಪಾಸಟಿಯಲ್ತು ಪರ್ವತಾಣುಗಳ ತೆಱದೆ
ನೆಗಳ್ದ ಮಂಚಮನೇಱದಾಗ ಮತ್ತೀಗ ತೊ
ಟ್ಟಗೆ ಶೂಲವೇಱುವೆಡೆಯೊಳ್ ಮಂಚಮದು ಭೀತಿ
ಯೊಗೆವ ಶೂಲಮಿದೆಂಬುದಂ ಮನದೊಳಿನಿತನಱಿಯಂ ಕರಂ ಪರಿಭಾವಿಸೆ ೪೨

ಮಿಸುಗುವೆಮ್ಮಯ ವಾಕ್ಯವೇ ಪ್ರಮಾಣಂ ತನಗೆ
ನಿಸದಮಿದು ಪಟ್ಟಮಂಚಮನೇಱದುದೆ ಮತ್ತೆ
ಬಿಸಮಂದಮಪ್ಪ ಶೂಲಮನೇಱದುದೆ ದೃಷ್ಟಮಿ ಜಗಕ್ಕೆಯ್ದೆ ಸತತಂ
ಅಸಮಸಂ ನೋಡಿಮಿಡೌನೆಯ್ದೆ[3] ನೀವೆಲ್ಲರೆಂ
ದೊಸೆದು ಗುರು ಗುರುಭಕ್ತನಂ ತೋಱ ನುಡಿಯುತ್ತೆ
ಮುಸಕದಿಂ ಕರುಣಾಕಟಾಕ್ಷದಿಂ ಗುರುವರಂ ನೋಡಿ ತದ್ಗುರುಭಕ್ತನಂ ೪೩

ಎಲೆ ಸುಗುಣಗುರುಭಕ್ತ ನಿನ್ನ ಸದ್ಗುರುಭಕ್ತಿ
ಲಲಿತ ತನ್ನಿಷ್ಠೆ ಗಣಪುಂಗವರ ಕವಳಿಗೆಗೆ
ಸಲೆಸಂದುದೆನ್ನಾಳ್ದ ಶೂಲದಿಂದಿಳಿದು ಬಾ ಬಾರೆಂದು ಕರೆಯಲೊಡನೆ

---

1 ಯೆ (ಟ) 2 ಮೌನ (ಕ) 3 ನೊಲ್ದು (ಗ)

ಒಲವಿನಿಂ ಗುರುವಾಕ್ಯಮಂ ಕೇಳಿ ಸಂತಸದೊ
ಳಲಘುಶೂಲದ ಫಲಕದೊಳ್ ತನ್ನ ಕೈಗಳಂ
ನಲಿದೂಱಿಯುರ್ಬೆಳ್ದು ಪುಟನೆಗೆದು ಭೂತಲಕ್ಕವತರಿಸಿ ತತ್‌ಕ್ಷಣದೊಳು ೪೪

ಗುರುವಿನಡಿದಾವರೆಗೆ ದಂಡಪ್ರಣಾಮಮಂ
ವಿರಚಿಸಲ್ ಗುರುಮೂರ್ತಿ ಸಂತೋಷದೆಸಕದಿಂ
ಕರಯುಗಳದಿಂದೆ ಪಿಡಿದೆತ್ತಿ ಗಾಢಾಲಿಂಗನಂಗೆಯ್ದು ಗುರುಭಕ್ತನಂ
ಪಿರಿದು ಕೀರ್ತಿಸುತೆ ತನ್ನ[1]ಯ[1] ಕೃಪಾಪೀಯೂಷ
ಶರನಿಧಿಯ ಮಧ್ಯದೊಳಗೋಲಾಡಿಸುತ್ತೆ ಭಾ
ಸುರಮಾದ ಕೈರದಂಬುಲ ಪಸದನಂಗೊಟ್ಟು ಪೈಡಡವಿದಂ ಪ್ರೀತಿಯಿಂ ೪೫

ಬಸಿದ ಶೂಲದ ಗಾಯಮಿನಿತು ತನುವೊಳ್ ತೋಱ
ದೊಸರ್ವ ಕ[2]ರ್ನೆತ್ತರಿಲ್ಲದೆ ರಂಧ್ರವಿಲ್ಲದೆ
ಮಸಕವಳಿದಂಗರುಚಿ ತೋಱದುಚ್ಛೂನಮಾಗದೆ ಭಾವಿಸಲ್ ಪ್ರತ್ಯಯಂ
ನಿಸದಮಾಗಲ್ ಕಂಡು ವಿಸ್ಮಯಂಬಡುತೆ ಜೃಂ
ಭಿಸುತಿರ್ಪ ಶಿವಸಹೋದರರೆಲ್ಲರೆಯ್ದೆ ಸಂ
ತಸವಟ್ಟಸಹ್ಯಮಂ ಬಿಟ್ಟು ಕೀರ್ತಿಸಿದರಾ ಗುರುಭಕ್ತನಂ ಭಕ್ತಿಯಿಂ ೪೬

ಸರಳ ಗುರುಭಕ್ತ ನಿನ್ನಯ ಮಹಾಮಹಿಮೆಯುಂ
ಗುರುಭಕ್ತಿಯುಂ ಲೋಕವಿತತಿಯೊಳಗಾರ್ಗುಂಟು
ನಿರತದಿಂದುಂ ಗುರುವ್ಯಪಗತಾಶೇಷವಸ್ತ್ವಸೀಕದೂರ ಶೂರ
ಗುರುಪಾದಪದ್ಮಸೇವಾಸಕ್ತ ಗುರುಯುಕ್ತ
ಗುರುಕಾರ್ಯನಿರ್ವಾಹ ಸದ್ಗುಣಸಮೂಹ ಬಂ
ಧುರಮಪ್ಪ ನಿನ್ನ ದೃಷ್ಟಪ್ರತ್ಯಯಂ ನೂಳಮಾದುದೀ ಜಗವಱಿಯಲು ೪೭

ಇಂತಪ್ಪ ಗುರುಭಕ್ತಿಯುಕ್ತನಂ ಭೂಲೋಕ
ಸಂತತಿಯೊಳಾವನೊರ್ವಂ ಕಂಡುದಿಲ್ಲ ನೋ
ಡಿಂತೆಂದು ಶಿವಸಹೋದರರೆಲ್ಲರೊಸೆದು ತನ್ನಂ ಕೀರ್ತಿಸುತ್ತಮಿರಲು
ಸಂತತಂ ಗುರುಚರಣಸೇವಾಂಬುನಿಧಿಯೊಳ
ತ್ಯಂತಸಂತೋಷದಿಂದಾಳುತ್ತುಮೇಳುತ್ತೆ
ಸಂತ ಗುರುಭಕ್ತನಿರ್ದಂ ತನ್ನ ಚಿತ್ತದೊಳ್ ಗುರುಮೂರ್ತಿಯಂ ನೆನೆಯುತೆ ೪೮

---

[1] ಯೆ (ಟ) [2] ನ್ನೆ (ಕಗ)

ಅಂದು ಗುರುಕೃಪೆಯಿಂದೆ ಗುರುಭಕ್ತನೆಯ್ದಿ ಸಾ
ನಂದದಿಂ ತನ್ನಡಿಗಳಂ ಪಡೆದೆನೆಂಬುದಂ
ಚಂದಮಪ್ಪಂದೆ ಕೇಳ್ದ ಜೀವೆವಾವೆಲ್ಲರುಂ ಸತ್ಕಥಾಸೀಕದೊಳಗೆ
ಇಂದೀಗ ವೆಲ್ಲಕೊಂಡದ ಮಹಾದೇವನಾ
ನಂದಮಯ ಮಲ್ಲಿಕಾರ್ಜುನಪಂಡಿತಾರಾಧ್ಯ
ರಿಂದೆ ತನ್ನಯ ಕಾಲ್ಗಳಂ ಪಡೆದುದಂ ಕಂಡೆವೆಂದುದಾ ಗಣಸಮೂಹಂ ೪೯

ಸದಮಲಪ್ರಚುರವಿಶ್ರುತ ಪರಮಭಕ್ತಗಣ
ಪದಸರೋರುಹಸಾಂದ್ರ ಮಕರಂದಪಾನ ಸ
ಮ್ಮುದಿತ ಚಂಚಚ್ಚಂಚರೀಕನನವರತ ಪಂಚಾಕ್ಷರೀಪ್ರಸಿತಹೃದಯಂ
ವಿದಿತ ಮಂಜುಳನೀಲಕಂಠಾಹ್ವಯಂ ಮನೋ
ಮುದದೆ ಪೇಳ್ದುರುತರಾರಾಧ್ಯಚಾರಿತ್ರದೊಳ
ಗಿದು ವಲಂ ಗುರುಭಕ್ತಚಾರಿತ್ರಮಭವಭ[1]ಕ್ತ್ಯಂ[1]ಗನಾ ಕರ್ಣಪತ್ರಂ ೫೦

[1] ಕ್ತ್ಯಂ (ಟ)

# ಐದನೆಯ ಸಂಧಿ

## ಗುರುಭಕ್ತಾಂಡಾ[1]ರಿ[1] ಕಥೆ

ಸೂಚನೆ : ನೆಗಳ್ದ ಗುರುಪಾದಸದ್ಭಕ್ತಿಯುಕ್ತನ ಬಂಧು
ರ ಗುರುಭಕ್ತಾಂಡಾರಿಯೊಳ್ಗತೆಯ ಕೇಳ್[2] ಪರ
ಮ ಗುರುಸೇವಕ ಸೂರಸಚಿವೇಂದ್ರ ಗುಣಸಾಂದ್ರ ಪರವಾದಿಕಮಲಚಂದ್ರ

ಕರಮೆ ರಾಜಿಸುವ ತಿಹುರಂಗಳಂ ಕ[3]ಣೆಗಿರ್ಚಿ[3]
ನುರಿಯಿಂದೆ ಸುಟ್ಟು ಸಗ್ಗಿಗರ ಮನದದವಳಲ
ನೊರಸಿ ಮೂಜಗಕೆ ನಿಷ್ಕಂಟಕತ್ವಮನಿತ್ತು ಪರಿರಕ್ಷಿಸುತ್ತೆ [4]ಮುದದಿಂ[4]
ಸಿರಿಗಂದನಂ ಪಣೆಯ ಕಣ್ಣಗ್ಗಿಯಿಂ ದಹಿಸಿ
ಕರಟದಾನವನ ತೊತ್ತಳದುಳಿದು ಕೊಂದು ಮು
ಪ್ಪುರಿಯಾದ ಪನ್ನತಿಕೆಯಿಂದೆ ಶೋಭಿಸುತಿರ್ಪ ಗುರುನೀಲಕಂಠ ಜಯತು ೧

ಬಳಿಕವಿಂತಪ್ಪ ಕಥೆಗಳ ಪೇಳ್ವ ಬವಸೆಯಿಂ
ದಳಘು[5]ಗ[5]ಣಪುಂಗವರ್ ಪೇಳ್ದರಿಂತೆಂದು ಸ
ಲ್ಲಳಿತ ಗುರುಭಕ್ತಿತತ್ಪರನಮಲ ಪುಣ್ಯಾಧಿಕಂ ವಿಶುದ್ಧಂ ಸಂತತಂ
ವಿಳಸಿತ ಶ್ರೀಗುರೂನ್ನತ ಪಾದಭಕ್ತಿಗು
ಜ್ವಳಪಾತ್ರನತ್ಯಂತ ಗುರುಭಕ್ತಿವಿಶ್ರುತಂ
ಲುಳಿತ ಗುರುಭಕ್ತಿಲಕ್ಷಣಯುತಂ ಗುರುಭಕ್ತಿಕೃತ್ಯಸಂಪ[6]ನ್ನಿ[6]ಕಾಯಂ ೨

ಗುರುಭಕ್ತಿಪಾಲನರತಂ ಮತ್ತಮಾವಗಂ
ಗುರುಭಕ್ತಿವಿಜ್ಞಾನಯುತನೆಯ್ದೆ ಗುರುಭಕ್ತಿ
ಪರವಮಪಾಶಾಭಿಯುಕ್ತಂ ವಲಂ ಗುರುಭಕ್ತಿರಸನಿಷಿಕ್ತಂ ಸಜ್ಜನಂ
ಗುರುಭಕ್ತಿವಿವಶಗಾತ್ರಂ ಸಚ್ಚರಿತ್ರ[7]ನಟಿ[7]
ಗುರುಭಕ್ತಿಕಲ್ಪತರುಗಾಲವಾಲಂ ವಿನುತ
ಗುರುಭಕ್ತಿಲೋಲುಪಂ ಗುರುಭಕ್ತಿವರ್ಧನಕರಂ ಭವ್ಯರೂಪಯುತನು ೩

---

[1] ರನ (ಕ) [2] ಳೆ (ಕ) [3] ಕಣ್ಗಚ್ಚಿ (ಗ) [4] ಸುರರಿಂ (ಗ) [5] ಗು (ಕ)
[6] ನ್ನ (ಕ) [7] ನತಿ (ಗ)

ನೆಗಳ್ದ ಗುರುಭಕ್ತಿಸೌಭಾಗ್ಯನೆನಿಸುವ ಬಂಧು
ರ ಗುರುಭಕ್ತಾಂಡಾರಿಯೆನಿ[1]ಪ ಭಕ್ತನದೊರ್ವ[1]
ನೊಗೆದ ಹ[2]ರಿಸ[2]ದೊಳೊಂದುವಾಸರಂ ಪಣ್ಯಾಂಗನಾವೀಧಿಯೊಳ್ ಬರುತಿರೆ
ಮೃಗಶಾಬನೇತ್ರೆಯೊರ್ವಳ್ ಪ್ರೌಢವತಿಯೆಂಬ
ಮಿಗುವ ಪೆಸರುಳ್ಳ ಲಾವಣ್ಯವತಿ ವನಿತೆಯರ
ಮೊಗದ ಕೈಪಿಡಿಯೆನಿಪ ಬೆಲೆವೆಣ್ ಮನೋನ್ನುದದೆ ತನ್ನ ಮನೆವಾಗಿಲಲ್ಲಿ ೪

ಎಸೆದಿರ್ದಳವಳ ಕಣ್ಗುಡಿನೋಟಗದಿರ್ಗಳಂ
ನಿಸದಮಿಾಕ್ಷಿಸಿ ಧನಿಕವಿಟಮಿಾನನಿಕರವಂ
ಸುಸಿಲೆಂಬ ಸೊರ್ಕಿಕ್ಕಿ ಬರಸೆಳೆವ ಬೀಸುವಲೆಗಳೊ ಬೊಜಗಮಿಗಗಡಣವುಂ
ಮಿಸುಕಲೀಯದೆ ಕಾಲ್ಗಳಂ [3]ಸುತ್ತಿಕೊಂಡು ರಾ
ಜಿಸುತಿರ್ಪ ತೊಡಕುವಲೆಗಳೊ ವಿಟರ ಮನವೆಂಬ
ಪೊಸತಪ್ಪ ಸೊ[4]ರ್ಕಾ[4]ನೆಗಂಕುಸಂಗಳೊ ಅದಂ ಬಂಧಿಸುವ ರಜ್ಜುತತಿಯೊ ೫

ಮಿಗೆ ಕಾರಕುಡಿಮಿಂಚುಗಳ ಬಳಗವೋ ಮತ್ತ
ಮೊಗೆದ ರತಿಪತಿ ಕಿರಾತಂ ಕಾಮಿಗಳುವೆಂಬ
ಮಿಗೆ ಗಡಣಮೆಸೆಯಲ್ಕೆ ಗಂಟೆನೆಂಟಿಯೊಳಿಟ್ಟ ಸೊಡರ್ಗುಡಿಯ ನುಣ್ಗದಿರ್ಗಳೊ
ನೆಗಳ್ದ ಕಾಮಿಗಳ ಗಳವೋಹವಾಶಂಗಳೋ
ಬಗೆಯೆ ಪುಷ್ಪಪ್ರದರನಿಷುಮಯೂಖಂಗಳೋ
ಸೊಗಸುವೀ ಪ್ರೌಢವತಿಯಲರ್ಗಣ್ಣ ಕಾಂತಿಗಳೊ ಎಂದೊಸೆದು ಕೊಂಡಾಡುತೆ ೬

ಈ ಸತಿಯ ನಗೆಗಣ್ಣ ಕಾಂತಿನದಿಯೊಳಗೆನ್ನ
ಭಾಸುರಮನಂ ಸಿ[5]ಲ್ಕಿ[5]ತೇವೆಸೀ ಪದದಲ್ಲಿ
ಯೋಸರಿಸದಿವಳ ಕಡೆಗಣ್ಣ ನುಣ್ಗದಿರ್ಗಣೆಯಿನೆಚ್ಚಪಂ ಕಾಮದೇವಂ
ಗಾಸಿಯಾದಪೆನದಱಿನಡಿಯಿಡಲ್ಕಳವಲ್ತು
ಬೀಸರಂಬೊಂದಿತ್ತು ಮನದೆಸಕಮಾವಗಂ
ಪೈಸರಿಸಿತತಿಧೈರ್ಯವಂತೆ ನಾಣ್ಪಿಂಗಿತ್ತೆನುತ್ತೆ ಮನದೊಳ್ ನೋವುತೆ ೭

ನೆನೆದೊಂದನಾಲೋಚನಂಗೆಯ್ದನೀ ವನಿತೆ,
ಮಿನುಪ ಬೆಲೆವೆಣ್ ಬಳಿಕೆ ಶಿವಭಕ್ತೆ ದೋಷವೋ
ನನುವಿನಿಂದಿಂದ್ರಿಯಂ ಸೋಂಕದಂತೆಲ್ಲ ಸುಖವಂ ಶಿವಾರ್ಪಣಮೆಸಗುವ

[1] ಪೂರ್ವ ಸದ್ಭಕ್ತ (ಗ) [2] ರುಷ (ಗ) [3] ಮು (ಕ) [4] ಕ್ಕಾ (ಟ) [5] ಕ್ಕಿ (ಗ)

ಮನದ ಬಲ್ಪಿಂಟಾದೊಡಿಂತೆಂದು ಪೇಳ್ಗುಮತಿ
ವಿನಯದಿಂದಂ ಮೈಥುನೇ ರತೇ ಎನುತೆ ಮ
ತ್ತಮನನಯಂ ಯಚ್ಛಿವಾರ್ಪಿತ ಎನುತೆ ಚೇತಸ್ಕ ಎನುತೆ ಶೈವೋಕ್ತಿ ಸತತಂ ೮

ಬಳಿಕಮೀಯರ್ಥಮಂ ಸೂತಸಂಹಿತೆ ಪೇಳ್ಗು
ಮಳಘುತರದಿಂದ್ರಿಯಾದಾಗತಂ ಎನುತೆ ಸ
ಲ್ಲಳಿತದಿಂ ಯತ್ಸುಖಂ ತತ್ಸಮರ್ಪಿತಮೆನುತೆ ತತ್ತತ್ಪ್ರಸಾದಮೆನುತೆ
ವಿಳಸಿತದೆ ಭೋಕ್ತವ್ಯಮೆನುತೆ ಮತ್ತಂ ಕೂಡೆ
ಘಳಿಲನೆ ತದಿಂದ್ರಿಯ ಮುಖೇನ ಚ ಎನುತ್ತಮು
ಜ್ವಳನಾದದಿಂದಿಂತು ವಾಕ್ಯಂಗಳಿರಲಾನುಮೆಂಗ್ದಿ ದುರ್ವಿಟನುಮುಲ್ತು ೯

ಮಠಸಮಾಧಿನಿಯುಕ್ತದಿಂ ಮುಮುಕ್ಷುಗಳಿಂದೆ
ಪರಮಸದ್ಭಕ್ತಿಮಾರ್ಗದೊಳಿಂತುಮೊಂದು ಬಂ
ಧುರ ಪಕ್ಷಮುಂಟೆಂದು ನುಡಿಯಪಟ್ಟುದು ಸಂದೆಗಂಬೊಂದಲೇಕೆನುತ್ತೆ
ಪಿರಿದು ನಿಶ್ಚೈಸಿ ತನ್ನಯ ಮನದೊಳಾ ಭಕ್ತ
ನುರುತರಪ್ರೇಮದಿಂ ತನ್ನ ಸಖನಂ ಕರೆದು
ಭರದಿನವಳೆಡೆಗೆಯ್ದಿ ಪೊನ್ಗಂಟನಿತ್ತು ಪದಗೆಯ್ಯೆಂದು ಕಳುಪಲೊಡನೆ ೧೦

ನುಡಿದಳಾ ಪ್ರೌಢವತಿಯುವನೊಡನೆ ತಮಗೆಮಗೆ
ಸಡಗರದಿನೊಡವೆರೆವುದನುವಲ್ತೆನಲ್ಕಮಂ
ಕಡುಪಿನಿಂ ಮಗುಳ್ದು ಬಂದಾ ವಾರ್ತೆಯಂ ಪೇಳೆ ಪಿರಿದು ಪೊನ್ನಿತ್ತು ಮತ್ತಂ
ಒಡನೆ ಕಳುಪಲ್ಕ[1]ವಳ್[1] ಕಿಸುಗಣ್ಚಿ ಪೋಗೆಲವೊ
ಬಿಡದೆ ಮತ್ತಡಿಗಡಿಗೆ ಬಂದಪೆಯದೇತರ್ಕೆ
ಮಡುವಿನೊಳಗೀಡಾಡು ನಿನ್ನ ಪೊನ್ಗಂಟನೆನುತ್ತಂ[2] ಕಳುಪೆ ಮರಳಿ ಬಂದು ೧೧

ಇದನೆಲ್ಲಮಂ ಪೇಳೆ ಕೇಳ್ದು ಕಡುತವಕದಿಂ
ಮುದಮುಲರ್ದು ತಾನೆಯ್ದಿ ಬಂದಿದೇತರ್ಕೊಲ್ಲೆ
ಸುದತಿಯೆನ್ನಂತಪ್ಪ ವಿಟರಿಲ್ಲ ಲೋಕದೊಳ್ ಧನಮೆಯ್ದದೆಂ[3]ದೊ[3]ಡೀಗ
ಪಡೆದು ನಿನ್ನುದ್ದ ಪೊನ್‌ರಾಸಿಯಂ ಸುರಿಸುವೆಂ
ವಿದಿತ ಭವಿಯೆಂಬೊಡಾಂ ಪರಮಶಿವಭಕ್ತನುಬಿ
ಪುದಿದ ರೂಪಿಲ್ಲೆಂಬೊಡೆನ್ನನೀಕ್ಷಿಸು ನಿನ್ನ ನಗೆಗಣ್ಣೊಳೊಸೆ[4]ದು ನಿಸದಂ[4] ೧೨

---

[1] ಲ್ಕೆ (ಗ) [2] ತಂ (ಕ) [3] ಬೊ (ಟ) [4] ದನಿಸಮುಂ (ಗ)

ತಕ್ಕನಿವನಲ್ಲೆಂ ಪೊಡಾಂ [1]ಸದಾ[1] ಪುರುಷಾರ್ಥಿ
ಮಿಕ್ಕ ಹರೆಯವನುಳ್ಳನೆಂಬೊಡೆವಿನ್ಮಾರ್ವರ್ಗೆ
ಸಕ್ಕಸಮನೆನಿಸುಗುಂ ಹರೆಯಮತಿಕುಶಲನಲ್ಲೆಂಬೊಡೆನ್ನಯ ಮಾತಿನ
ಚೊಕ್ಕಳಿಕೆಯಿಂದ ತಿಳಿ ಬೇಱುರ್ವ ಬೊಜ[2]ಗಂಗೆ
ಸಿಕ್ಕಿರ್ದೊಡೆನ್ನ ರತಿಸುಖಮನೀಕ್ಷಿಸು ಬಳಿ
ಕ್ಕಕ್ಕಜಂಬಡವೇಳ್ಕು ನೀನೆನುತ್ತಿರ್ದುಮಲ್ತು ಕೇಳೆನ್ನ ಸತ್ಪ್ರೌಢಿಯಂ ೧೩

ವಿದಿತ ಗುಣಜಾತೀಷ್ಟಿಗಳ್ ಭಾವವಿಂಗಿತಂ
ಪುದಿದ ಚಿತ್ತಂ ಪ್ರೌಢಿ-ಲಕ್ಷಣಂಗಳ್ ಮತ್ತ
ಮೊದವಿದ ವಯೋಗತಿಯಸಂಗಮಂದಿರ ದಂಡ ಹೀನಾಧಿಕಂಗಳೆಯ್ದೆ
ಸದೆದ ನೀಚೋಚ್ಚರತ ಸಮರತಂಗಳ್ [3]ನಾ[3]ಡೆ
ಯೊದಗಿದಾಸನಕರಣ ಕಾಲಕ್ರಮಂಗಳೆಂ
ಬುದಿತ ರತಿಲೀಲಾಪ್ರಪಂಚಮಂ ಬಲ್ಲನೆಲ್ಲಿದನೆನ್ನ ತೆಱದೊಳಿಲ್ಲಿ ೧೪

ಅಂಗುಷ್ಠ ಪದ ಗುಲ್ಫ ಜಾನು ಗುಹ್ಯಂಗಳೊಳ್
ಪೊಂಗಿದ ಸುನಾಭಿವಕ್ಷಃ ಕುಚದ್ವಂದ್ವ ಕ
ಕ್ಷಂಗಳೊಳ್ ಕಂಠ ಗಂಡಸ್ಥಲಾಧರ ನೇತ್ರ ಭಾ[4]ಳಂ[4]ಗಳೊಳ್ ಶಿರದೊಳು
ಸಂಗಮಾಗಿರ್ದ ಕಳೆಗಳ ಶುಕ್ಲಪಕ್ಷದೊಳ್
ಸಿಂಗದಾರೋಹ[5]ದಿಂ[5] ಬಲಗಡೆಯೊಳಂತೆಯುಂ
ತ್ತುಂಗತರ ಕೃಷ್ಣಪಕ್ಷದೊಳಗನರೋಹದಿಂದೆಡಗಡೆಯೊಳಿರ್ಪ ಕಳೆಯಂ ೧೫

ನಿರುತಮಱಿದಂಗನೆಯ ಕೇಶಮಂ ಪಿಡಿದು ಭಾ
ಸುರ ನಯನಯುಗಳಮಂ ಭಾಳಮಂ ಚುಂಬಿಸಿಯ
ಧರಮನಱಿ ದಂತೋಷ್ಠದಿಂ ಪೀಡನಂಗೆಯ್ದು ನಾಭಿ[6]ಯಂ[6] ಕೈಸೋಂಕಿಸೆ
ಗುರುಕುಚದೊಳುಗುರ್ಗಲೆಯ ತೋಱು ಮನ್ಮಥಪುರದೊ
ಳುರು ಕರಿಕರಕ್ರೀಡೆಯಂ ಮಾಡಿ ತನ್ನ ಸೌಂ
ದರ ಶರೀರಂಗಳಿಂದಮರ್ದಪ್ಪಿ ತತ್ಕಲೆಯನಿರದುಂಟುಮಾಡಿ ಬಳಿಕಂ ೧೬

ಸುದತಿಯರ ನಾಣ್ಡಳಂ ನಾಂದು ತುಳ್ಕಾಡುವಾ
ಪದನಱಿದು ಸುಸಿಲನೆಸಗಲ್ವೇಳ್ಕು ಮತ್ತೆ ಸ
ಮ್ಮುದದಿನಾಲಿಂಗನೋಚಿತ ಸರಸವಾಕ್ಯಸುಕದಿಂದುಟ್ಟ ನಿಱು ಸಡಿಲಲು

---

[1] ಪರಮು (ಗ) [2] ಗನೊಳ। ಪೊ (ಗ) [3] ಸೋ (ಕ) [4] ಗಂ (ಕ) [5] ದೊಳ್ (ಗ)
[6] ಯಿಂ (ಗ)

ಪುದುಗಿ ಕಣ್ಣರೆನುಗಿದು ಮೆಯ್ಯೞಯದಿರ್ಪಂತೆ
ಪದೆದೆಸಗುವದು ಚದುರರೋಜರೆಸಗುವ ಕಾರ್ಯ
ಮಿದನೆಲ್ಲಮಂ ಸಿನ್ನೊಳೆಸಗಿ ತೋಱದೊಡಾಂ ಪರಾಜಿತಂ ನಿನಗೆಂದನು ೧೭

ಇಂತಿವುಂ ಮೊದಲಾದ ಬರ್ದುನುಡಿಗಳ ನುಡಿಯ
ಲಂತೆಲ್ಲಮಂ ಕೇಳ್ದು ದರಹಾಸಮೊಗೆಯಲೋ
ರಂತೆ ನುಡಿದಳ್ ಪ್ರೌಢನತಿ ಮತ್ತೆ ನಿನಗೆನಗೆ ಭಕ್ತಿವಿಷಯದೊಳಾವಗಂ
ಎಂತುವುಂ ಸಂಭೋಗನಾಗದೆನೆ ಮೇಣ್ ಚದುರ
ನಂತೆವೊಲ್ ನುಡಿದ ನುಡಿಯಿಂದೇನೊ ಭಾವಿಸಲ್
ಸಂತರಾಗಿರ್ದಪರ್ ಪರರಿಂಗಿತಂಗಳಂ ಪಿರಿದಱಯವೇಳ್ಕುಮನಿಶಂ ೧೮

ರಸಿಕನಾದೊಡೆ ಬೆಟ್ಟುವಾತುಗಳ ಕೇಳಿ ಮು
ತ್ತೊಸೆದು ರತಿಗೆಳಸಲಕ್ಕುಮೆ ಭಾವಕಂ ನೀನೆ
ನಿಸದಮಾದೊಡೆ ಬಳಿಕ್ಕೆನ್ನಯ ವಿರಾಗನಂ ಕಂಡು ಪೆಡಮೆಟ್ಟವೇಡಾ
ಎಸೆವ ರತಿತಂತ್ರದೊಳ್ ಕುಶಲನಾದೊಡೆ ನಿನ್ನ
ನೆಸವಸಂ ಕಂಡಾಗ ರತಿಪುಟ್ಟದುದನಱದು
ಮುಸಕವಳಿಯದೆ ತೊಲಗವೇಡವೇ ವಿಟನಾದೊಡಿಂತು ಬರಲೆಂತು ಯೋಗ್ಯಂ ೧೯

ಸಂತತಂ ಲಿಂಗಾವಧಾನಿಯಾದೊಡೆ ಬಳಿ
ಕ್ಕಿಂತನಂಗಾತುರದೆ ಧೃತಿಗೆಡುವುದೆತ್ತ ನೀಂ
ಕಂತುಹರಭಕ್ತನತ್ಯಂತಗುರುಚರಣಾನುರಕ್ತನಕಟೇಕೆ ಬಱಪೆ
ಮುಂತುವರಿದೀ ಕಾಮಸುಖಕೆಳಸಿ ಕಿಡದಿರೋ
ರಂತೆ ಪೆಡೆಮುಗುಳೆಸಲ್ ನುಡಿದನಾತಂ ಮುಗುಳ್ದು
ಕಾಂತೆಯುಸಿಕನೆ ಪೋಪನಲ್ಲ ನೀನೊಲ್ಲದಿರ್ಪಿರವನೆನಗುಸುರವೇಳ್ಕುಂ ೨೦

ಉಸುರದಿರ್ದೊಡಮೆನ್ನ ಸುರತಕೆಳಸಲ್ಲದೊಡೆ
ಮಿಸುಪ ಬೆಲೆವೆಣ್ಣನಮನಿಕ್ಕಿಂದು ಮೊದಲಾರ
ನೊಸೆದು ಕರೆಯದ ತೆಱದೆ ಭಾಷೆಯಂ ನುಡಿಯದಲ್ಲದೊಡೆ ಮತ್ತೀಗಳೆಯ್ದೆ
ನಿಸದಮುಡುತಡಿ ಮಹಾದೇವಿಯಕ್ಕಂಗಳಂ
ತಸವಸದೆ ವಿಷಯಪ್ರಪಂಚಮಂ ಬಿಡು ಮಹೋ
ಲ್ಲಸದೆ ತಿಲಕವ್ವೆ ಪುರುಷತ್ವಮಂ ತಳೆದಂತೆ ಗಂಡಾಗು ಪಲವದೇನು ೨೧

ಬೆಲೆವೆಣ್ಣ ಳೊಳಗೆ ಸದ್ಭಕ್ತಿಯುಳ್ಳವಳಾದೊ
ಡೊಲವು ಮಿಗೆ ವೀರಚೋಳವ್ವೆಯಂದದೆ ನಾಡೆ
ನಲಿದು ಭೀಮೇಶ್ವರನ ಪುರಕೆ ಪೋಗು ನಿಷ್ಕಾರಣದಿನೆನ್ನ ಸೊಲ್ಲೆ ನೆನಲು
ತೊಲಗಲೀಯೆಂ ನಿನ್ನನೆನೆ ಲೇಸು ಲೇಸೆಲವೊ
ಲಲನಾಮನೋಜ್ಞನೇ ಸದ್ಭಕ್ತನೇ ಸುವಿಟ
ತಿಲಕನೇ ನಿನ್ನನ್ನ ಚದುರರೀ ಲೋಕದೊಳಗಾರುಂಟು ಪರಿಭಾವಿಸೆ ೨೨

ಪಿರಿದು ಗೋಪಾಲಕಂ ತಾನಾದೊಡೊಲ್ಲದಿ
ರ್ಪರಸನೊಲ್ಲದ ವಾರವನಿತೆ[1]ಯಂ[1] ದೂರದೊಳ್
ಪರಿಹರಿಸುವಂ ಮತ್ತಮೊಲ್ಲದರಸನಮೊಲ್ಲದಿರ್ಪ ವಾರಸ್ತ್ರೀಯರಂ
ಹ[2]ರಿಸ[2]ದಿಂ ಸೇವಿಸಲ್ ಬಯಸುವಂ ಲೋಕದೊಳ್
ಕರಮೆ ಗೋಪಾಲನಕ್ಕುಂ ವಾರವನಿತೆಯರ
ಸರಳಚಿತ್ತಮನರಿಯದಿರ್ಪ ಗೋಪಾಲಕನೆ ಪೋ ಪೋಗು ಪೋಗೆನುತ್ತೆ ೨೩

ನುಡಿದು ಮತ್ತಿಂತೆಂದಳತನುಶರಪಾತಮಂ
ಪಡೆವನೇ ವಿಟರ ತಲೆಯೊಳ್ ಪುಲ್ಲ ಪೊರಿಸವೇ
ಡುಡುಗದಿರು ಧೈರ್ಯಮಂ ವಿಟನಾದೊಡಿಂತು ನುಡಿವನೆ ಪಾಳಿಗೆಟ್ಟ ನುಡಿಯಂ
ಕಡುಜುಗುಪ್ಸೆಯ ಮಾತನಾಡದಿರ್ ಭಂಡತ್ವ
ದೊಡವೆರೆಯದಿರ್ ಬೊಜಗರೆಂಬ ಪೆಸರಂ ನಾಡೆ
ಸಡಗರದೆ ವಿಟರಲ್ಲಿ ಸಾರ್ಥ[3]ಕಂ[3] ಮಾಡದಿರ್ ಗುರುಭಕ್ತನೆಯ್ದೆ ನೀನು ೨೪

ಇನಿತು ಕಳವಳಿಸುವರೆ ಭಕ್ತರಾದರ್ ಮತ್ತೆ
ಮನದೊಳಳಿಯಾಸೆಯಂ ಬಿಟ್ಟುಕಳೆ ನೀನಿಂತು
ಕಿನಿಸಿ ನುಡಿಯಲದೇಕೆ ನಿನಗೆನಗೆ ಸಂಬಂಧವುಂಟೆ ಮುನ್ನೆಂದಾದೊಡಂ
ನನಸು ಮೋಹಿಯನಿಕ್ಕಿದವನೊ ಎನ್ನಂ ಮತ್ತೆ
ಘನತರ ಕ್ಷಾಮದೊಳ್ ಪೊರೆದವನೊ [4]ಚಿಕ್ಕಂದು[4]
ಧನವನಿತ್ತೆನ್ನೊಳಗುಮಾಡಿಕೊಂಡವನೊ ಸೋದರದವನೊ ಬಳಿಕೆ ನೀನು ೨೫

ವರ ವಸ್ತ್ರಕನಕಂಗಳಂ [5]ಎ[5]ನಗೆ ಕೊಟ್ಟವನ್ಗೊ
ಪಿರಿದು ನನ್ನಯ ಗೃಹಕೆ ಕರೆದುಕೊಂಡೊಯ್ದು ಭಾ
ಸುರ ಭೂಷಣಂಗಳಂ ತುಡಿಸಿದವನೋ ಮತ್ತೆ ಪಳೆಯ ಬೊಜಗನೊ ಭಾವಿಸೆ

---

1 ಯರ (ಗ) 2 ರುಷ (ಗ) 3 ಮಂ (ಗ) 4 ನೀಂ ಕಂಡು (ಗ) 5 ತ (ಕ)

ಭರದಿನುತ್ಸವದಿನಂಗಳೊಳೆನಗೆ ಪೊನ್ನಿತ್ತು
ಹರಿಸವಂ ಮನ್ಮನಕೆ ಮಾಡಿದವನೋ ಬಳಿಕೆ
ನಿರುತದಿಂ ಸುಸಿಲಸೊಗದಿಂದೊಲಿಸಿಕೊಂಡವನೊ ನಿನಗೆನಗೆ ತೊಡಕಕಡೇನು ೨೬

ಒಸೆದೆನ್ನ ಕನ್ನೆತನವಂ ಕಿಡಿಸಿದವನೊ ರಾ
ಜಿಸುವ ಮೆಲ್ನುಡಿಗಳಂ ಕಲಿಸಿದವನೋ ಮತ್ತೆ
ಕುಸುಮಾಸ್ತ್ರತಂತ್ರಂಗಳಜುಪಿದವನೋ ಎನ್ನ ಬಂಧುಗಳ ನಡಪಿದವನೊ
ಮಿಸುಪ ಬೇಟವನೆನಗೆ ತೋಱಿದವನೋ ಎನ್ನ
ಜಸಮನೀ ವಾರಾಂಗನಾನಿವಹದೊಳಗೆ ಶೋ
ಭಿಸುವಂತೆ ರಚಿಸಿದವನೋ ಕೇಳಿಕೂಟಕ್ಕೆ ಸಂದಿರ್ದವನೊ ಸಂತತಂ ೨೭

ಎನ್ನ ಬಂಧುಗಳ ಋಣಮಂ [1]ತಿರ್ದಿ[1]ದವನೊ ಸಂ
ಪನ್ನತೆಯನೊಸೆದೆನಗೆ ಕೊಟ್ಟವನೊ ಶಿವಭಕ್ತಿ
ಯನ್ನಿಸದವೆನಗೆ ಬಿಚ್ಚಳಿಸಿದವನೋ ಎನ್ನ ಚಿತ್ತವಱಿದವನೊ ನಿಚ್ಚಂ
ನಿನ್ನ ಮನೆಯೊಳಗೆನ್ನ ಸಾಕಿದವನೋ ಮತ್ತೆ
ನಿನ್ನ ಸಜ್ಜ[2]ನವೊ ನಾಂ[2] ನಿರ್ಬಂಧನಂಗೆಯ್ವೊ
ಡಿನ್ನುಸಿಕನಿರದೆಯ್ದು ಕಾಮಿ ದೋಷವುನಱಿಯನೆಂಬುದಂ ಕಂಡೆನೀಗ ೨೮

ಮಿಡುಮಿಡನೆ ಮಿಡುಕಿ ಬಾನುದ್ದಕ್ಕೆ ನೆಗೆದು ಮು
ಕ್ಕೊಡನೆ ಪೊಡವಿಗೆ ಬಿಳ್ದರೇಂ ಬರ್ಪರೇ ನಾಡೆ
ಮುಡದಿಯರ್ ಮನಬಾರದಿರ್ದಡೆಗೆ ನೀನಿನಿತುಗಂಡು ತೊಲಗುವುದುಚಿತವು
ಕಡುಮೂರ್ಖನಲ್ತು ಮತ್ತಿನರಂತೆ ನೀಂ ನೋಡೆ
ಮೃಡಭಕ್ತನತಿಚತುರನುನ್ನತಪ್ರಭುವ ಜಡ
ನೆಡೆಯುಡುಗದವಿರತಂ ಗುರುಪಾದಸೇವಕಂ ನೀತಿಯುಕ್ತಂ ಸಂತತಂ ೨೯

ಬೆಲೆವೆಣ್ಗಳೊಳಗಾವಗಂ ವಿಚಾರಂಗೆಯ್ವೊ
ಡೊಲವಿನಿಂದೆನಗೆ ಗೆಡೆಯಿಲ್ಲೆನ್ನ ಲಿಂಗಮಿ
ತ್ರಲಘು ಕಾಯಕಮಿದಂ ನಡೆಸುತಿರ್ಪೆಂ ಭವಿಗಳೊಡನೆ ಮಾತಾಡೆನೆಂದುಂ
ಲಲಿತ ಮೃಡಭಕ್ತರಲ್ಲದೆ ಕನಸಿನೊಳಮೆಯ್ದೆ
ನಲಿದೊರ್ವರುಮನಱಿಯೆನುದರಾರ್ಥಿಯಾಗಿಯಾಂ
ಸಲೆ ನಡೆವುದಿಲ್ಲದಱನೊದಗಿದ ಧನಂ ಜಂಗಮಂಗಳ್ಗೆ ಸಲುತಿರ್ಪುದು ೩೦

---

[1] ತೀರ್ಚಿ (ಕ) [2] ಮೆಯೆನ್ನ (ಗ) ನಮೆ ಅಂ (ಟ)

ಇದನೆನ್ನ ವರ್ತನವನೀ ಪೊಳಲ ಭಕ್ತತತಿ
ಮುದದಿಂದೆ ನಿಚ್ಚಮಱುವೃತ್ತಿಪು-ದುಱೆ ನಿಸದ
ಮಿ[1]ದ[1] ನಿನ್ನ ನಾನೆಂದು ಕಂಡಱಿಯೆನುಂತೆ ಕೇಳ್ದಱಿಯೆನನಿ[2]ಶಂ ಭಾವಿಸೆ[2]
ಪದೆದು ಬಲ್ಮೆಯಿನೆನ್ನ ನೀನೆಯ್ದುವುದುಮಾಗ
ದಿದಱಿಂದೆ ಹಾನಿ ನಿನಗಕ್ಕುಮೀಯಾಸೆಯಂ
ಬುಡನುಳಿದು ನೀಂ ಪೋಗು ಭಕ್ತರ್ಗೆ ಸಲ್ಲದಿನಿತಾತುರಂ ಧರಣಿಯೊಳಗೆ ೩೧

ಅತಿಮೋಹದಿಂ ಮಾನಹಾನಿಯಕ್ಕುಂ ವಲಂ
ವಿತತ ಮೋಹಮನುಳಿದು ಮಾನಮಂ ಕಾವುದೆಂ
ದತಿಶಯದಿನುಲಿಯುತಿರ್ಕುಂ ಮಾನಮಾಚಂದ್ರತಾರಕಂ ಎಂಬ ವಾಕ್ಯಂ
ನುತ ಮಾನಮಂ ಬಿಟ್ಟು ಮೋಹಮಂ ಪಿಡಿವುದು
ನ್ನತ ಮಾರ್ಗಮೇ ಶಂಭುಭಕ್ತರ್ಗೆ ಸಂತತಂ
ಹಿತಮಾದೊಡಾ ಮೋಹಮೆಯ್ದೆ ನಿನಗಾನಲ್ಲದಿಲ್ಲವೇ ಬೆಲೆವೆಣ್ಗಳು ೩೨

ಪಿರಿದುಮೀ ಪುರದೊಳಾನೊರ್ವಳಲ್ಲದೆ ನಿನಗೆ
ವರಯುವತಿಯರ್ ಮಂಚಮೆ ಎಲ್[3]ವೋ[3] ಗುರುಭಕ್ತ
ಪರರಿಂಗಿತಮನಱಿವುದಿನಿತಾದೊಡಂ ನಿನಗೆ ಬೇಡವೇ ಅಕ್ಕಟೆಂತು
ಸರಿರಮಂ ಮಱೆದು ನಾಣಿಲಿತನದೆ ಮುಂಗೆಟ್ಟು
ಭರದಿನೆನಗಾಸೆಯಂ ಮಾಡದಿರ್ ಪೋಗೆಂದು
ಕರಮೆ ನುಡಿಯಲ್ ನಿನ್ನೊಱಂಟುತನಮಂ ಮಾಣೆಯೇವೆನಾನೆನುತೆ ಮತ್ತೆ ೩೩

ನೆನೆದಳೊಂದಂ ಮನದೊಳೀ ಮೂರ್ಖನೇನೆಂದೊ
ಡಿನಿತಱಿಯನೀತಂಗೆ ರತಿಸುಖಜುಗುಪ್ಸೆಯಂ
ಮಿನುಪ ವೇಶ್ಯಾವಿಡಂಬನಮನೊರೆದಪೆನದಱೆತೂಳಾದಡಂ ತೊಲ[4]ಗಲೆ[4]ನುತೆ
ಮನಸಿಜಾರ್ಥಿಯೆ ಕೇಳು ರತಿಸುಖದೊಳೇನುಂಟು
ವನಿತೆಯರ ನುಣ್ಮೊಗಂಗಳ್ ಭಾವಿಸಲ್ ನಾಡೆ
ನನಸು ಲಾಲಾಜಲಾಗಾರಂಗಳಾವಗಂ ಕೇಳಿನ್ನೆ ಮತ್ತಮವರ ೩೪

ನುತ ನಾಸಿಕಂಗಳಾವಾಸಂಗಳಾ ಶ್ಲೇಷ್ಮ
ತತಿಗೆ ಪೊಡೆಗಳ್ ಪುರೀಷದ ಬೀಡುಗಳ್ ಕಣ್ಗ
ಳತಿ ಬಾಷ್ಪಯುಕ್ತಂಗಳಲಘುಜಘನಂಗಳಘಸಂಗದೊಬ್ಬುಳಿಯಣಿಯರಂ

---

[1] ದುನೋಡೆ (ಗ) [2] ಶಂ (ಗ) [3] ಮು (ಟ) [4] ಗುಗೆ (ಗ)

ರತಿಸಧಾವಂಗಳಾವಗವೊಸರ್ವ ಮೂತ್ರದಿಂ
ದತಿಶಯಂ ತೋರ್ಪ ಬಗರಗೆಗಳಿಂದುಂ ಮುಚ್ಚ
ದತಿಶೋಭಿಸುವ ಕಳೇವರದ ಪುಣ್ಣಲೆಗಳತಿದುರ್ಗಂಧಕೂಪಂಗಳು ೩೫

ತರಳ ಕಾಮಾಂಧರುಱತ ಬೀಳ್ವ ವಿವರಂಗಳುರು
ತರ ಶುಕ್ಲ[1]ಲೋಹಿ[1]ತ ಕರಂಡಂಗಳಾವಗಂ
ಪಿರಿದು ಕುಲಹೀನ ಕುಲಜರ್ ಕೂಡಿ ಪೋಪ ದುರ್ಮಾರ್ಗಂಗಳೆನಿಕುಮವಱಂ
ನಿರುತವೊದಗಿದ ಸುಖಂ ಪವನಾಭಿಘಾತವಂ
ತುರಿತದಿಂದೆಯ್ದಿ ದಶ್ವತ್ಥಪರ್ಣಾಗ್ರದೊಳ್
ಕರವೆ ಶೋಭಿಪ ವಾರಿಕಣದಂತೆವೋಲಾಗಳಂತೆ ನಾಶಂಬೊಂದುಗುಂ ೩೬

ಇದನಱಯದಿಳೆಯೊಳಗೆ ವಾರಸತಿಯರ ರತಿಯ
ಪುದುಗೆಳಸುವಂಗೆ [2]ವುಂ[2] ಮಾನಭಂಗವುದೊಂದು
ವಿದಿತ ದೀನತೆಯೆರಡು ನಾಣಿಲಿತನಂ ಮೂಱು ಹಾಸ್ಯವೆಯ್ದುವುದು ನಾಲ್ಕು
ಹೃದಯದುಃಖಮುದೈದು ಧನಹಾನಿಯಾಱು ಮ
ತ್ತೊದವಿದ ವಿಶುದ್ಧಶಿವಭಕ್ತಿಹೀನತೆ ಏಳು
ಪದೆದು ವೇಶಿಯರೊಳೀ ಏಳಱಂದೆಯ್ದೆ ನರಕಮನೆಯ್ದುವರ್ ಪುರುಷರು ೩೭

ರತಿಸುಖವುದಲ್ಪಮಾದೊಡಮವರ ಮೆಯ್ಮೇಳ
[3]ದತಿ[3]ಗುಣೋತ್ಕರುಷತತಿಯಾವಗಂ ಮನಕೆ ಸ
ನ್ನುತ ಹರುಷಮಂ ಕುಡುಗುಮೆಂಬೊಡಮದಂ ಪೇಳ್ದಪೆಂ ಕೇಳ ವಿಟತಿಲಕನೆ
ಅತಿಕುಟಿಲಮಾದ ಡಂಬಕದ ವೈಸಿಕದೆ ಸಂ
ತತವೆಸೆವ ವಾರಸತಿಯರ್ ಚಪಳೆಯರ್ ನಾಡೆ
ಸಿತಗೆಯರ್ ಕಾಮುಕಿಗಳಿಚ್ಛೆಗಾರ್ತಿಯರನೃತಭಾಷೆಯರ್ ವಂಚಕಿಯರು ೩೮

ಪರಿಹಾಸಧಾಮೆಯರ್ ಕಪಟತತ್ಪರೆಯರುರು
ತರ ಜುಗುಪ್ಸಾನ್ವಿತೆಯರಪಸರೆಯಕಾರ್ತಿಯರ್
[4]ದು[4]ರುಳೆಯರ್ ದುಷ್ಟೆಯರ್ [5]ವಂಚಕಿತಿ[5]ಯರ್ ಮನದ ಗಂಟುಗೊಯ್ಕೆಯರಾವಗಂ
ಪಿರಿದು ಕಲಹಪ್ರಿಯರ್ ಕುಲಗೇಡಿಯರ್ ಮತ್ತೆ
ವರ ಕಾಂಚನಾಸಕ್ತೆಯರ್ ಕೃಪಣೆಯರ್ ಕ್ರೂರ
ತರಚಿತ್ತೆಯರ್ ಪಾಪಸಂದೋಹಸದನೆಯರ್ ಮಿಳ್ತು[6]ಗ[6]ನ್ನಿಕೆಯರವರು ೩೯

---

[1] ಶೋಣಿ (ಕ) [2] ಯ್ದೆ (ಕ) [3] ಮತಿ (ಗ) [4] ಮ (ಕ) [5] ಪಿಸುಣಗಿತ್ತಿ (ಗ)
[6] ಕ (ಗ)

ಎಸೆವ ತಸ್ಕರ ಜನಾಧಾರೆಯರ್ ಸಿಟ್ಟುರೆಯು
ರೊಸೆದಗ್ರಜಾನುಜಾದಿಗಳೆಲ್ಲರಂ ತಮ್ಮ
ಸುಸಿಲಸೊಗಕೊಲ್ದು ಕರೆವರ್ ಮಾಯಕಾರ್ತಿಯರ್ ಗೋಣ್ಕೊಯ್ಕೆಯರ್ ಸಂತತಂ
ಕಸವರದ ತೃಷೆಯಿಂದೆ ಚಂಡಾಲರಾದೊಡಂ
ಮಿಸುಪ ಪಳ್ಕಿಗೆ ಕರೆವರವಿಚಾರಿಗಳ್ ಮತ್ತೆ
ಪೊಸ ಕಾರಕುಡುಮಿಂಚಿನಂತೆ ಚಂಚಲೆಯರಸಿಯಂತೆ ಕೂರಿದರವರ್ಗಳು ೪೦

ಪಿರಿದು ವಾರಾಂಗನಾ ಕೈತವಂಗಳ್ ನಾಡೆ
ನಿರುತದಿಂ ಬಲೆದೊಡಕುಗಳ್ ಪಾಪಮಾರ್ಗವೆಂ
ಬುರುಬೀಜದಂಕುರಂಗಳ್ ಮೋಹರಾಸಿಗಳ್ ಪಕ್ಷಪಾತದ ನೆಲೆಗಳು
ಕರಮೆ ಮುಳಿಸಿನ ಬೆಳಸುಗಳ್ ವಿಟರ ಮನವೆಂಬ
ಕರಿಯ ಪದರಜ್ಜುಗಳ್ ಮಾಯಾವಿಗಳ್ ಮಾನವರ
ಮರುಳ್ಗೊಳಿಪ ಸೊರ್ಕಿನ ಮದ್ದುಗಳ್ ನೇಹದಾಲಯಂಗಳ್ ಭಾವಿಸೆ ೪೧

ಬೆಲೆವೆಣ್ಗಳಲರ್ಗಣ್ಣನೋಟಂಗಳಾವಗಂ
ಲಲಿತಾಂಗಜನ ಮೋಹಪಾಶಂಗಳುಪತಾಪ
ನಿಲಯಂಗಳೊರ್ವನಂ ನೋಡುತ್ತೆ ಮತ್ತೊರ್ವನಲ್ಲಿ ಕುಡಿನೋಟಂಗಳಂ
ಸಲೆ ಪಸರಿಸುತ್ತಿರ್ಪ [1]ಕುಟಿಲಂ[1]ಗಳಶುಚಿಗಳ್
ನಲಿದಿವರ್ಗೊಲ್ದು ಸತತಂ ರಾಜಿಸುತ್ತಿರ್ಪ
ನಲಘುತರ ನರಕಪಾರಾವಾರದೊಳ್ ಶೋಭಿಸುತ್ತಿರ್ಪನನಿಶಮೆನಸುಂ ೪೨

ಮಿನುಪ ವೇಶಿಯರ ಮಾತುಗಳಾವಗಂ ನೋಡೆ
ಸನಯಂಗಳನೃತಂಗಳೆಯ್ದೆ ಕುಟಿಲಂಗಳಂ
ತನುನಯಂಗಳ್ ವ್ಯೈಸಿಕಂಗಳಪ್ರಸ್ತುತಂಗಳ್ ಮುಂಡುಗಳ್ ನೋಳ್ಪೊಡೆ
ಕನದಹಂಕಾರಾನ್ವಿತ ಗಳುಪಹಾಸ್ಯಕ್ಕೆ
ಘನ[2]ವಿಕಾರಂ[2]ಗಳತಿಮಾತ್ಸರ್ಯ ವಾಸಂಗ
ಳೆನಸುಮಿಂವಕೊಲ್ದವಂ ಪಾಪನೀರಧಿಯೊಳಗೆ ಬಿಳ್ದವಂ ಮುಂಗಾಣದೆ ೪೩

ಮಿಸುಪ ವೇಶಿಯರ ಹೃದಯಂಗಳತಿಕಠಿನ್ನಂಗ
ಳೊಸೆದು ನೋಡಲ್ ನೀರಸಂಗಳಾವಗಮೆಯ್ದೆ
ನಿಸದಂ ನಿಷಿದ್ಧಂಗಳಘಕುಲಂಗಳ್ ಕಪಟವಿತತಿಗಳ್ ಕ್ಷಣಿಕಂಗಳು

---

[1] ನೋಟಂ (ಕ) [2] ಕಾರಣಂ (ಗ)

ಎಸೆವ ಪಟುಗಳ್ ಪಕ್ಷಪಾತಂಗಳಣಿಯರಂ
ಬಿಸವಂದಮಪ್ಪ ಕೃಪಣತ್ವಕಾವಾಸಂಗ
ಳಸವಸದಿನೀ ಮನಂಗಳ್ಗೆ ಸಿಲ್ಕಿದ ನರಂ ಪಾಮರಂ ಧರಣಿಯೊಳಗೆ ೪೪

ಸತತಮಿಾಯಂದದೊಳೆ ರಾಜಿಸುವ ವೇಶಿಯು
ಗ್ರತಿಮನಂಗೊಟ್ಟವಂ ಕೆಟ್ಟವಂ ಭೂಲೋಕ
ವಿತತಿಯೊಳ್ ಮತ್ತ್ತಸರ್ ಬೆರೆದರೆಪವಿಲ್ಲದಂತೆಂದು ನಂಬಲ್ಕಾಗದು
ನುತಮಾಸರಂ ತೈಲದೊಡನೆ ಬೆರೆದಂತಿರ್ಕು
ಮತಿಶಯದಿನೆನ್ನ ಪಿಡಿದಿರ್ದರೆಂದೆನವೇಡ
ಹಿತಮಲ್ತದುಂ ಜಿಗುಳೆ ಪಿಡಿದಂತೆ ಪಿಡಿವರಾ ಬೆಲೆವೆಣ್ಗಳತಿಶಯದೊಳು ೪೫

ಬಗೆಯಲೊಂದೇ ತೆಱದ ಗುಣಮುಳ್ಳರಿವರೆಂದು
ಮಿಗೆ ನಚ್ಚಲಾಗದೂಸರವಳ್ಳಿಗಳ ತೆಱದೆ
ಸೊಗಸಿನಿಂದೊಂದೊಂದು ಪರಿಯಪ್ಪರೆಯ್ದೆ ಮುಂದಿರ್ದರೆಂದತಿಹರ್ಷದಿಂ
ತಗುಳ್ದು ನಂಬಲ್ಕಾಗ ನೀರ ಸುಳಿಯೊಳೆ ತೋರ್ಪ
ನೆಗಳ್ದ ಮಿಾ[1]ನ್ಗಳ[1] ಭಂಗಿಯಂತೆ ಪೊಳೆದೆಯ್ದುವರ್
ನಗೆನುಡಿಗಳಿಂದೆ ಕೈಯೊಳಗಾದರೆನವೇಡ ಪಾಱುವರ್ ಶ್ಯೇನನಂತೆ ೪೬

ಅನುರಕ್ತೆಯಾದಳಿವಳೆಂದು ಮನದೊಳ್ ನಲಿದು
ವನಿತೆಯರ ನಚ್ಚಲಾಗದು ಮತ್ತನೊರ್ವಂಗೆ
ವಿನಯದಿಂ ಕೈನೀಡುವರ್ ಲತೆಯ ಪಾಂಗಿನಿಂದೊಡವೆಯಂ ಬೇಡಿದನಿತಂ
ಅನುವಿನಿಂದಿತ್ತೆನೆಂದಿರವೇಡ ಮತ್ತೊರ್ವ
ನನುನಯದೆ ನೆಲ್ಲಸಿತನಿತ್ತೊಡವನತ್ತ [2]ಘು[2]
ಮ್ಮನೆ ಬಾಗುವರ್ ತರಸಿನಂದದಿಂ ಬೆಲೆವೆಣ್ಗಳಾವಗಂ ಮನದೊಲವಿನಿಂ ೪೭

ಭರದಿಂದಮೊಲ್ದರಂಗನೆಯರೆನವೇಡ ಬಂ
ಧುರತರಸ್ನೇಹಮದು ಕಾರ್ಯಾಂತರದೆ ತೋರ್ಕು
ಮಿರದಿಂತು ಲಲನೆಯರ ದೃಷ್ಟಿಭಾವಂಗಳುಂ ಮಾತುಗಳುಮೆಯ್ದೆ ಸತತಂ
ಕರಮೆ ದೇಹದೆ ತೋರ್ಪ ಸೌಂದರ್ಯನಿಕರಂಗ
ಳಿರವಿದೆಲ್ಲಂ ಹೇಯಮೆಂದು ಭಾವಿಸದೆ ಭೌ
ಸುರಮನಂಗೊಟ್ಟಂತು ಸುಸಿಲಸೊ[3]ಗ[3]ಕೆಳಸುವರೆ ಸದ್ಭಕ್ತರಾದರೊಸೆದು ೪೮

---

[1] ನಿನ (ಗ) [2] ಗ (ಕ) [3] ಕ (ಟ)

ಸುದತಿಯರ ಸುರತಸೌಖ್ಯಮನೆಯ್ದೆ[1] ಬಯಸುವರೆ
ಮದನಾರಿಭಕ್ತರಾದವರೊಸೆದು ಮತ್ತವರ
ಪೊದೆದು ನೋಡುವರೆ ಲಿಂಗಾಂಗಸಂಗಿಗಳಾದ ಸದ್ಭಕ್ತವೃಷಭರ್ಕಳು
ವಿದಿತ ವಾರಾಂಗನೆಯರೊಡಗೂಟಮಾವಗಂ
ಸದಮಲಸ್ವಾಂತ ಶಿವಭಕ್ತರ್ಗೆ ಯೋಗ್ಯಮೇ
ಒದವಿದವರೊಳ್ನುಡಿಗಳವರ ನಗೆನೋಟಂಗಳಭವಭಕ್ತರ್ಗೆ ಹಿತಮೆ ೬೯

ಲಲಿತ ವೇಶ್ಯಾಡಂಬರಂಗಳತಿಕುತ್ಸಿತಂ
ಗಳುಮಕ್ಕುಮವನೊಣರ್ದು ಶಿವಭಕ್ತರಾದವರ್
ತಿಳಿದುಮಿಗೆ ದೂರದೊಳ್ ಬಿಡವೇಳ್ಕು ಮತ್ತವುಂ ಮೋಕ್ಷಕಾರಣಮೆ ಸತತಂ
ಪಳಿಗಂಜುಮ ನೀನುಮನವರತ ಗುರುಭಕ್ತ
ಕುಳದೊಳೆಸೆವಂ ಭಕ್ತಿತತ್ಪರಂ ಭಕ್ತಿಯೊಳ್
ತೊಳಗುವಂ ನಿನ್ನ ನೀನಱಿಯದಿರಲೇಕೆ ನೀನಱಿಯದುರು ಕಳೆಗಳುಂಟೆ ೫೦

ಪಿರಿದು ಕಾಮುಕಿಯರತಿನೀಚೆಯರ್ ಶಿವಭಕ್ತಿ
ಯಿರವನೇನೆಂದಱಿಯದೆವ್ಮಿಂದೆ ಭಾವಿಸಲ್
ಕರಮೆ ನೀವಱಿಯದವರೇ ಹೀನರೇ ಭಕ್ತಿಸಂಪನ್ನರೆಯ್ದೆ ನೀವು
ಗುರುಭಕ್ತರಾವಗಂ ನಿಮ್ಮಿರವ ನೀವಱಿಯ
ದಿರಲದೇತರ್ಕೆಂದು ವೇಶ್ಯಾವಿಡಂಬಮುಂ
ಪರಮಭಕ್ತಿಸ್ಥಿತಿಯನೊರೆಯಲದನೇನೆಂದು ಬಗೆಯದೇ ಮುನ್ನಿನಂತೆ ೫೧

ಮತಿಗೆಟ್ಟು ಸುರತಸುಖಕೆಳಸುತ್ತೆ ಪೋಗದಿರೆ
ಧೃತಿಗುಂದಿದವನ ಕಾಣುತ್ತೆ[2]ವಂ ನೀತಿಯುಂ
ನುತಭಕ್ತಿಯುಂ ಮಱೆದನೇವೆನೆನುತಾ ಲಲನೆ ಮಂತಣಂಗೆಯ್ದು ಳೊಂದಂ
ಸತಿಯರೊಳ್ನುಡಿಗೇಳಿ ಶಿವಪದಮನೆಯ್ದಿದು
ನ್ನತ ಪುರಾತನರ ಕಥೆಗೇಳ್ದಾದೊಡಂ ಬಳಿ
ಕ್ಕತಿಶುದ್ಧಬುದ್ಧಿಯಿಾತಂಗೆ ಪುಟ್ಟಡೆ ಎನುತೆ ನಿಶ್ಚಯಿಸಿ ನುಡಿದಳೊಸೆದು ೫೨

ಪಿರಿದುಮಾಪ್ತರ ನುಡಿಗಳಂ ಕೇಳ್ದವರ್ಗೆ ಬಂ
ಧುರಸುಖಂ ಕೈಸಾರ್ಗುಮಿಂಗಿತವನಱಿವನುರು
ತರಮುತ್ತಮಂ ಪೇಳಲಱಿವನುಱೆ ಮಧ್ಯಮಂ ಪೇಳಲಱಿಯದವನಧಮಂ

[1] ನಿಂತು (ಗ) [2] ತಲಿ (ಗ)

ನಿರುತಮಿದು ಹಿತರ ನುಡಿಗೇಳಿದರ್ಗಾವಗಂ
ಪರಮಸುಖಮೆಯ್ದುಗುಮದೆಂತೆನಲ್ ಶ್ವೇತನಂ
ವರರಂಭೆ ಬೋಧಿಸಲ್ ಕೇಳಿ ಸುಖದಿಂದಿರ್ದನದನುಸುರ್ವೆನೆಯ್ದೆ ಕೇಳು ೫೩

ಸದಮಲಪ್ರಚುರವಿಶ್ರುತ ಪರಮಭಕ್ತಗಣ
ಪದಸರೋರುಹಸಾಂದ್ರ ಮಕರಂದಪಾನ ಸ
ಮ್ಮದಿತಚಂಚಚ್ಚಂಚರೀಕನನವರತ ಪಂಚಾಕ್ಷರೀಪ್ರಸಿತಹೃದಯಂ
ವಿದಿತ ಮಂಜುಲನೀಲಕಂಠಾಹ್ವಯಂ ಮನೋ
ಮುದದೆ ಪೇಳ್ದುರುತರಾರಾಧ್ಯಚಾರಿತ್ರದೊಳ
ಗಿದು ವಲಂ ಗುರುಭಕ್ತನೆನಿಸುವಾಂಡಾರಿಯ ಕಥಾವರ್ಣನಂ ಪರಿಕಿಸೆ ೫೪

# ಆರನೆಯ ಸಂಧಿ

## ಶ್ವೇತನ ಕಥೆ*

ಸೂಚನೆ: ಶ್ವೇತನಾ ರಂಭೋಪದೇಶನುಂ ಕೇಳಿ ವಿ
ಖ್ಯಾತಗಣಪದವಿಯಂ ಪಡೆದ ಕಥೆಯಂ ಕೇಳ
ನೀತಿವಿದ ಸೂರಸಚಿವೇಂಪ್ರ ಪೇಳ್ದಪೆನೊಸೆದು ಸದ್ಭಕ್ತರಾಲಿಸಂತೆ

ಹಿಮಕುಂದಚಂದ್ರಗೋಕ್ಷೀರಫೇನಪ್ರಭಾ
ಸಮಕಾಂತಿಭಸ್ಮಲಿಪ್ತಂ ಕಾಮನಂ ಸುಟ್ಟ
ದಮನಾಂಬಕಂ ಸುರಜ್ಯೇಷ್ಠೇಂದ್ರ ಮುಖ್ಯ ನಿರ್ಜರಯೂಥವರ ನುತಿಪರಂ
[1]ಕಮನೀಯ[1] ಋಗ್ವೇದ ಶಾಖಾಮಯಂ ಕರಮೆ
ವಿಮಲ ಸದ್ಯೋಜಾತಮುಖವೊಪ್ಪುತಿರಲೆಸೆವ
ರಮಣೀಯ ನೀಲಕಂಠಂ ಪೊರೆಗೆ ಸದ್ಭಕ್ತತತಿಯನತಿಸಂತೋಷದಿಂ ೧

ಸದಮಲಾವೃತ ಕಳೇವರೆ ನಿರ್ಜರಾಂಗನಾ
ವಿದಿತ ಸೀಮಂತಮಣಿಯಪ್ಸರೋಜನವಂದ್ಯೆ
ಮದನಶರನಿಭನೇತ್ರೆ ರಂಭೆ ತನ್ನಯ ಪೊರೆಯೊಳಂಗಜವಿಕಾರಕೆಳಸಿ
ಮುದದಿನೆಸೆದಿರ್ದ ತಚ್ಛ್ವೇತನಂ ಮಿಗೆ ನೋಡಿ
ವದನದೊಳ್ ನಗೆಯೊಗೆಯೆ ಕಂಡದಂ ಕೇಳ್ದನೆಲೆ
ಸುದತಿ ನಿರ್ನೆರಮಿಾಗ ನಿನಗೆ ದರಹಾಸಮುಣ್ಮಿತ್ತದೇಕೆಂದು ನಿಸದಂ ೨

ಮನದೊಳಗೆ ನೆನೆದಳಾ ರಂಭೆ ಮತ್ತೀಗವನ
ನನುವಿನಿಂ ಬೋಧಿಪೆನೆನುತ್ತೆ ನುಡಿದಳ್ ಕೇಳ
ಘನಪಾತಕಿಯೆ ದುರಿತಸಂತಾನಕಾಲಯನೆ ನಿನ್ನ ಚಾರಿತ್ರಮೆಯ್ದೆ
ನೆನೆವೊಡಮಶಕ್ಯವೆಂತೆನೆ ನಿನ್ನ ನೀನಱಿದ
ದಿನದಿಂದೆ ನಿನ್ನಿಚ್ಛೆಯಲ್ಲಿ ಸೊರ್ಕಾನೆಯಂ
ತನವರತಮುನ್ಮತ್ತವೃತ್ತಿಯಿಂ ಕೊರ್ಬಿ ಮೇಲಱಿಯದವಿಚಾರಿಯಾಗಿ ೩

[1] ಪ್ರಮುದಿತಂ (ಗ)

* ಶ್ವೇತನಾ ರಂಭೋಪದೇಶ (ಗ).

ಪಗಲಿರುಳ್ ಕಾಮಿನಿಯರೊಡನಾಟದೊಳ್ ಸಿಲ್ಕಿ
ಮೃಗಧರಧರಾವಾಸಕೆಂದಾಡೊಡಂ ಪೋಪ
ಬಗೆಯುಟ್ಟದಭವಂಗೆ ವಂದಿಸಂಗೆಯ್ದುದಿಲ್ಲಿಯೆ ಗುರುವ ನೀನೆಂದುಮಿಲ್ಲಿಯೆ
ಮಿಗೆ ಭಕ್ತಗಣಕೆ ಪೊಡಮಟ್ಟಿಲ್ಲಿಯೆ ಕನಸಿನೊಳ್
ನೆಗಳ್ದ ಬುಧಜನಕೆ ಪೊನ್ನಿತ್ತಿಲ್ಲಿಯೆ ಭಾಳದೊಳ್
ಸೊಗಸುವ ವಿಭೂತಿಯಿಟ್ಟಿಲ್ಲಿಯೆ ರುದ್ರಾಕ್ಷಿಗಳ ತೊಟ್ಟಿಲ್ಲಿಯೆ ಕಂಠದೊಳಗೆ ೪

ಪುಟ್ಟಿದಂದಿಂದುವರೆಗಂ ದುಶ್ಚರಿತ್ರದೊಳ್
ಕಟ್ಟಕ್ಕಜಂಬಡೆದು ವರ್ತಿಸುತ್ತಿರ್ಪಯುಚಿ
ವಟ್ಟೆಯೆಂತಪ್ಪುದೆಂದಿಲ್ಲಿಯೆ ಮನದೊಳ್ ಕರ್ಮಮೇ ಧರ್ಮಮೆಂದ್ದೆ ನಿನಗೆ
ನೆಟ್ಟನೆ ದುರಾಳಾಪವೇ ಮಂತ್ರವೊಸೆದು ಬಾ
ಯ್ವಿಟ್ಟು ಬೆಲೆವೆಣ್ಗಳೊಳ್ನುಡಿಯ ನುಡಿಯೇ ಜಪಂ
ಕೆಟ್ಟ ದುಷ್ಕಾಮವೇ ನೇಮಮನುನಿಶಂ ಭೋಗಮೆಸೆವ ಯಾಗಸ್ಥಾಪನಂ ೫

ಮಿಗೆ ಕಪಟವೃತ್ತಿಯೇ ತಪಮಾವಗಂ ನಿನಗೆ
ಸೊಗಸಿನಿಂದಿಂತು ವರ್ತಿಸುತಿರಲ್ಕೊಂದು ಪಗ
ಲೊಗೆದ ಹರಿಸದೆ [1]ವಾರನಾ[1]ಯರ್ಗೆಂದು ಪೂಮಾಲೆಯಂ ಕಳೆದುಕೊಂಡು
ಸುಗುಡತನದಿಂ ಪೋಪ ಪಥದೊಳೊಂದರಲಲ್ಲಿ
ಜಗುಳ್ದು ಕಯ್ಯಿಂ ಬೀಳಲುಚ್ಛಿಷ್ಟ ಭೂಮಿಯೊಳ್
ತೆಗೆದುಕೊಳೆ ತೆಗಳಪ್ಪುದೆಂದೇಳಿಲದೆ ಶಿವಾರ್ಪಣಮಸ್ತುವೆಂದು ನೆನೆಯೆ ೬

ಆ ನೆನಪಿನಿಂ ಪೂರ್ವಜನ್ಮದೊಳ್ ಸವೆದ ಪು
ಣ್ಯಾನೀಕದೊಳ್ ಬೆರೆಯಲದರ ಫಲದಿಂದೀಗ
ಸಾನುರಾಗಂ ಮಿಗಲ್ ಸುರಪತಿಯ ಪದವೆಯ್ದಿತೊಂದಿರುಳ್ ಸಂತೋಷದೆ
ನೀನೆನ್ನ ರತಿಸುಖಮನನುಭವಿಸಿ ನಾಳೆ ಮ
ತ್ತಾ ನರಕವಹ್ನಿಯೊಳ್ ಬೀಳ್ವದರ್ಕೆಯ್ದೆ ಮಿಗೆ
ನೀನಲ್ಲಿಯ[2]ದಂ[2]ತೆ ಮತ್ತನುಮಾದುದರ್ಕೆನಗೆ ಚಿಂತೆನಗೆಗಳ್ ಮೊಳೆತವು ೭

---

[1] ವಾರಾಂಗನೆ (ಕ) [2] ಡಂ (ಕ)

ಎನಲಿದೇತರ್ಕೆಯ್ದೆ ಚಿಂತೆ ನಗೆಗಳ್ ಕಾಂತೆ
ನಿನಗೆ ಬೇಡೆನ್ನನೆಲ್ಲಾಗಳುಂ ಕಾಮಿಸೀ
ಜನಮಾತನೇ ಕಲಿಯುಗಕ್ಕೆ ಕಂದರ್ಪನೆಂತೊಸೆದು ಕೊಂಡಾಡುತಿರಲು
ಎನಸುಂ ವಿಟರ್ ಬಳಿಕ್ಕೀತನೇ ಪ್ರೌಢನೆಂ
ದನವರತಮೊಲ್ದು ಕೀರ್ತಿಸುತಿರಲ್ ಭೂಮಿಯೊಳ್
ಘನತೇಜದಿಂದೆ ಬರ್ದುಕಿದೆನೀಗಳಿಂದ್ರಪದಮಣಿಯರಂ ಕೈಸಾರ್ದುದು ೮

ಸುರನಧೂನಿಕರದೊಳ್ ಸುರತಕೇಳಿಯೊಳಿರ್ದೆ
ನುರುತರಾಮರಕಾಮಿನೀನಿಕರದೊಳಗೆ ನೀ
ನೊರೆಯಿಲ್ಲದಮಲ ಶುಂಭತ್ಕೀರ್ತಿಯುಳ್ಳವಳ್ ನಿನ್ನೊಡನೆ ಕಾಮಸುಖಮಂ
ಪಿಡಿದುನುಭವಿಸಲಾಸನ್ನನಾಗಿರ್ಪೆಂ
ತ್ವರಿತದಿಂದಾಂ ವಿಜಯಿಯಾದೆನೆನ್ನಂತಪ್ಪ
ನರರೊಳರೆ ರಂಭೆ ನಾಳಿನ ನರಕಮಂ ಗಣಿಸುವೆನೆ ಎನುತ್ರ[1]ವಿಂ[1]ತ್ರೆಂದನು ೯

ನಿರುತಮಾ ಕುಸುಮಫಲದಿಂದಿಂದ್ರಸಂಪನ್ನಿ
ಕರಮೆಯ್ದಿತುಂಟಾದೊಡಾ ಕುಸುಮಮಂ ಶಿವಂ
ತುರಿತದಿಂ ಕೈಕೊಂಡನಾದೊಡೀ ಪದಮೇಕೆ ಕಿಡುಗುಮನುಭವಂ ಕೊಟ್ಟುದು
ತಿರಮಲ್ಲವೇ ಕ್ಲೇಶಮಂ ಬಿಟ್ಟುಕಳೆ ರಂಭೆ
ಹ[2]ರಿಸ[2]ದಿಂದೆನ್ನ ಶಯ್ಯೆಗೆ ಬಾರೆನಲ್ಕವಳ್
ಮರಳಿ ನುಡಿದಳ್ ನಿನ್ನ ಬಿಟ್ಟು ಮತ್ತೊರ್ವನೆಡೆಗೆಯ್ದೆನಂಜದಿರೆನುತ್ತೆ ೧೦

ಅಕ್ಕಟಾ ಎನ್ನಿದಿರೊಳಿರ್ದು ನಾಳಿನದಿನಂ
ಪೊಕ್ಕು ನಾರಕಮೆಂಬ [3]ಪೊ[3]ಕ್ಕರಣೆಯಂ ಬಳಿ
ಕ್ಕಕ್ಕಜಂ ವ್ಯಥೆಪಡುವುದಂ ನೋಡಲಾಱೆನಾಂ ಭ್ರಾಂತಿಯಂ ಬಿಟ್ಟು ಮತ್ತೆ
ಮೊಕ್ಕಳಂ ಎನ್ನ ನುಡಿಗೇಳ್ ನಿನಗೆ ಸುರನಿಕರ
ಮೊಕ್ಕಿಂದ್ರನಂ ಬಿಸುಟು ನಳಕೂಬರಾದಿಗಳ
ನಿಕ್ಕಿಯಾಂ ಮೊದಲಾದ ಸುರಸತಿಯರೆಯ್ದೆ ಮೈಯಿಕ್ಕುವಂದಮನೆಸಗುವೆಂ ೧೧

ಬಳಿಕಮವರೊಳ್ ಕಾಮಸಾಮ್ರಾಜ್ಯಲಕ್ಷ್ಮಿಯಂ
ಘಳಿಲನನುಭವಿಸಲಕ್ಕುಂ ಪಿರಿದು ಕಾಲಮು
ಜ್ವಲಹರುಷದಿಂದಮಾಗರ್ಧರಾತ್ರಂ ಸಂದುದಿನ್ನೊಂಡೆಜಾವಮೆಯ್ದೆ

---

1 ಲಿಂ (ಟ) 2 ರುಷ (ಗ) 3 ಪ (ಕ)

ಉಳಿಗುಮಂಗಜಸುಖಕ್ಕದಱಿಂ[1]ದೆ ಮೇಲೆ[1] ದು
ರ್ಬಳನಾಗಿ ನರಕದೊಳ್ ಬೀ[2]ಳಬೇಡೆಂ[2]ದು ಸ
ಲ್ಲಳಿತವಾಕ್ಯವ ರಂಭೆ ಬೋಧಿಸಲದಂ ಕೇಳ್ದು ರತಿವಿಮುಖನಾದನವನು ೧೨

ಒಸೆದು ತಚ್ಛ್ವೇತಂಗೆ ಭೂತಿರುದ್ರಾಕ್ಷಿಗಳ
ನೆಸೆವಂತೆ ಧರಿಸಿ ಕಾಮಾರಿಗೃಹಮಂ ಪೊಱ
ಸಿಸದಮಾ ರಂಭೆ ಕಳುಪಲ್ ಶ್ವೇತನಲ್ಲಿಗೆಯ್ದಾ ರಂಭೆ ಪೇಳ್ದ ತೆಱ[3]ದೆ[3]
ಅಸಮಾಕ್ಷನಾಲಯದ ಕಸಗಳೆದು ಸಾರಣೆಯ
ನೆಸಗಿ ವರ್ಣಕಮಂ ನಿಮಿರ್ಚಿ ಬಂಧುರಮಾದ
ಕುಸುಮಪತ್ರಫಲಂಗಳಂ ಚಿತ್ತಮಲರುತ್ತೆ ಕೊಯ್ತಂದು ಮತ್ತೆ ನಲಿದು ೧೩

ಸುರನದೀಸಲಿಲಮಂ ತಂದು ಶಶಿಜೂಟಂಗೆ
ಹ[4]ರಿಸ[4]ದಿಂದಭಿಷೇಕಮಂ ಮಾಡಿ ಪೂಜೆಯಂ
ವಿರಚಿಸುತ್ತಿಂಡೆ ದಂಡೆಗಳಿಂದೆ ಕಣ್ಗೆಡ್ಡಮಪ್ಪಂತೆ ಮನದೊಲವಿನಿಂ
ವರದಶಾಂಗಾಕಲಿತ ಧೂಪಮಂ ಮುಂದಿಟ್ಟು
ಸರಳನೀರಾಜನಮನೆತ್ತಿ ಬಲವಂದು ಹರ
ಚರಣಕ್ಕೆ ವಂದನಂಗೆಯ್ದು ನುತಿಸುತ್ತೆ ನರ್ತಿಸುತೆ ಪಾಡುತ್ತೆ ಮತ್ತಂ ೧೪

ಸಲೆ ಷೋಡಶೋಪಚಾರಂಗಳಿಂದಿಂತು ಸ
ಲ್ಲಲಿತ ಶಿವರಾತ್ರೀ ಕ್ರಮದೊಳಂತಕಾಂತಕನ
ನಲಿದು ಪೂಜಿಸುತೆ ಪಂಚಾಕ್ಷರೀಮನುವ ಜಪಿಸುತ್ತಿರಲ್ ಬಳಿಕಿತ್ತಲು
ಒಲವಿನಿಂ ಶ್ವೇತನಘಮಳಿದು ಪೋಪಂತೆ ನೆೞ
ತೊಳಗೆ ಕಳ್ತಲೆ ಸೂರ್ಯನಿಂದ್ರಾಶೆಯೊಳ್ ತನ್ನ
ಲಲಿತಕಿರಣಂಗಳಂ ಬೀಱಿದಂ ಸರಸಿಜಂಗಳ ದುಃಖಮಂ ತೂಱಿದಂ ೧೫

ಇಂತು ಬೆಳಗಾಗೆ ತತ್‌ಕ್ಷಣದೊಳೆಯ್ತಂದು ಸುರ
ಕಾಂತೆಯ ನಿವಾಸಕ್ಕೆ ಯಮನ ಕಿಂಕರರ್ಗಳ
ತ್ಯಂತರವದಿಂ ನುಡಿದರಿಂದ್ರಪದಮಂ ಪಡೆದು ನಿನ್ನಿರುಳ್ ನಿನ್ನ ಕೂಡೆ
ಸಂತಸದೊಳಿರ್ದವಂ ತಾನೆಲ್ಲಿದಂ ರಂಭೆ
ಇಂತೆಂದು ಕೇಳೆ ರಂಭೆಯ ದಾಸಿಯೊರ್ವಳೋ
ರಂತೆ ನುಡಿದಳ್ ದೇಗುಲದೊಳಿರ್ದಪಂ ಪೋಗಿಮೆನಲೊಡನೆ ಕೇಳುತವರು ೧೬

---

[1] ದವೊಲೆಲೆ (ಗಟ) [2] ಳುವರಿಯೆಂ (ಕ) [3] ದಿಂ (ಗ) [4] ರುಷ (ಗ)

ಮರಳಿ ಶಿವನಾಲಯಕೆ ಬಂದು ಕಂಡರ್ ನಾಡೆ
ಹರಪೂಜನಾಸಕ್ತನಂ ಭರ್ಗಭಕ್ತಿಭಾ
ಸುರನಿರರ್ಗಳಸದಮಲೈಶ್ವರ್ಯನಂ ವರತಪಃಪ್ರಭಾನ್ವಿತರೂಪನಂ
ಸುರುಚಿರಶ್ವೇತನಂ ಕಾಣುತ್ತೆ ಗೆಂಟಜಿತೊಳ್
ಭರದಿಂದೆ ಪುಂದಕಡಿಯಿಟ್ಟವನ ಪಿಡಿದೆಳೆಯ
ಲರಿದೆಮಗೆನುತ್ತಂಜಿ ಗಡಗಡನೆ ನಡುಗುತ್ತೆ ಮರಳಿದರ್ ಜವನಾಳ್ಗಳು ೧೭

ಪಿರಿದುಮಾ ಶ್ವೇತನಿರವೆಲ್ಲಮಂ ಕಾಲಂಗೆ
ಚರರೊಸೆದು ಬಿತ್ತರಿಸೆ ಕೇಳ್ದು ಕೋಪಂದಳೆದು
ಕರದಿಂದೆ ತನ್ನಂಕಮಂ ಪೊಯ್ದುಕೊಳುತೆ ನುಡಿದಂ ಮದೋದ್ರೇಕದಿಂದಂ
ಹರನನಾ ಶ್ವೇತನರ್ಚಿಸಿದಪನೆ ರಂಭೆ ಮ
ತ್ತಿರದೆ ಬೋಧಿಸಿಯವನ ಶಿವನಿಳಯಕಟ್ಟದಳೆ
ಕರಮರಿದು ಲೇಸು ಲೇಸಾಂ ಪೋಗಿ ಬಿಡದೆಳೆದು ಕಟ್ಟ ತಪ್ಪೆಂ ಪಾಶದಿಂ ೧೮

ಮದನಹರ[1]ನಡ್ಡ [1]ವಾಯ್ದು ಪನನಿಳ್ಕುಳಿಗೊಂಡೊ
ಡದಿರದೆನ್ನಧಿಕಾರವಂ ಹರಂಗೊಪ್ಪಿಸುವೆ
ನಿದು ನಿಕ್ಕುವಂ ನೋಡೆನುತ್ತೆ ಕಲ್ಪಾಭ್ರರವದಂತೆ ಘುಡುಘುಡಿಸಿ ಮೊರೆದು
ಒದಗಿ ಬಂದಭವನಾಲಯದೊಳಗೆ ಶಿವನ ಸ
ಮ್ಮದದಿಂದೆ ಪೂಜಿಸುವ ತಚ್ಛ್ವೇತನಂ ಕಂಡು
ಪುದಿದ ಕೋಪದೆ ಪಾಶಮಂ ಬೀಸಿ ಬರಸೆಳೆಯಲನಿತಱೊಳಗಾ ಶ್ವೇತನು ೧೯

ಹರಹರ ನಮಶ್ಶಿವಾ ಎನುತೆ ಶೂಲಿಯ ನೆನೆಯೆ
ಪರಮೇಶ್ವರಂ ಭಕ್ತವತ್ಸಲಂ ಕಾರುಣ್ಯ
ಶರಧಿಯತಿರೌದ್ರಯುತನಾಗಿ ತೀಕ್ಷ್ಣಶೂಲದಿಂದೆ ಮುನಿದಾ ತೂಣನ
ಉರಮನಿಱಿದೆಯ್ದೆ ಕೊಂದಾ ಶ್ವೇತಮುನಿಗೆ ಭಾ
ಸುರತರ ಪ್ರಮಥಾಧಿಪತ್ಯಮಂ ಕೊಟ್ಟು ನಿ
ರ್ಜರರುಘೇ ಎಂದು ಕೀರ್ತಿಸುತಿರಲ್ ಕಾಯ್ದನಿದು ಲೋಕಪ್ರಸಿದ್ಧಮನಿಶಂ ೨೦

ಮಗುಳ್ದು ಕಾಲಂಗೆ ಹರಣವನಿತ್ತು ಶಂಕರಂ
ಸೊಗಸಿಂದೆ ನುಡಿದನೆಲೆ ವೈವಸ್ವತಾ ಎಮ್ಮ
ನೆಗಳ್ದ ಭಕ್ತರನಿಂದುಮೊದಲಂಟಬೇಡೆಂದು ಬುದ್ಧಿವೇಳ್ದತಿಹರುಷದಿಂ

[1] ನಂಡ (ಕ)

ಅಗಲದಿರ್ ನಿನ್ನಾಧಿಪತ್ಯದಿಂದೆಂದವನ
ಬಗೆಗೆ ಸಂತಸವಿತ್ತು ಕಳುಹಿದಂ ಶ್ವೇತಂಗೆ
ಸುಗನುದಿಂ ರಂಭೋಪದೇಶವಿತ್ತುದು ಮೋಕ್ಷ[1]ಮಾರ್ಗ[1]ಮಂ ಲೋಕವಱಿಯೆ ೨೧

ಇದುಕಾರಣಂ ಹಿತಪರಾದ ಕಾಂತೆಯರ ನುಡಿ
ಪಡೆದು ತೋಱುಗುಮಖಿಳ ಸುಖಮುಮಂತಾವಗಂ
ವಿದಿತಾಪವರ್ಗಮಾರ್ಗಕ್ಕೆ ಕಾರಣಮಕ್ಕು ಮದಱಿಂದೆ ಸುಪ್ರೌಢರು
ಸದಮಲಾಪ್ತರ ವನಿತೆಯರ ಮಾತುಗೇಳೆ ಸಂ
ಪದವೊಸೆದು ತೋರ್ಕುಮಲ್ಲದೆ ಹಾನಿಯೆಯ್ದದಿಂ
ತಿದುಮಲ್ಲದೆಯುಮಂಗನೆಯರ ನುಡಿಗೇಳೆ ಸೊಗಮಿರ್ದಪಂ ಕೇಳಕ್ಕಟಿಂ ೨೨

ಸದಮಲಪ್ರಚುರವಿಶ್ರುತ ಪರಮಭಕ್ತಗಣ
ಪದಸರೋರುಹಸಾಂದ್ರ ಮಕರಂದಪಾನ ಸ
ಮ್ಮುದಿತ ಚಂಚಚ್ಚಂಚರೀಕನನವರತ ಪಂಚಾಕ್ಷರೀಪ್ರಸಿತಹೃದಯಂ
ವಿದಿತ ಮಂಜುಲನೀಲಕಂಠಾಹ್ವಯಂ ಮನೋ
ಮುದದೆ ಪೇಳ್ದರುತರಾರಾಧ್ಯಚಾರಿತ್ರದೊಳ
ಗಿದು ಭಾವಿಸಲ್ ಶ್ವೇತಮುನಿಚರಿತ್ರಂ ಪಾಪವನನಿಕರವೀತಿಹೋತ್ರಂ ೨೩

[1] ದಾಗ (ಕ)

# ಏಳನೆಯ ಸಂಧಿ

## ಮ[1]ಲ್ಲ[1]ಣನ ಕಥೆ

ಸೂಚನೆ: ಪರಮಸದ್ಭಕ್ತ ಮಲ್ಲಣನ ಕಥೆಯಂ ಕೇಳ
ಸುರುಚಿರಾಮಾತ್ಯ ಕೋಟೀರಮಾಣಿಕ್ಯಭಾ
ಸುರಕಾಂತಿಯುತಪಾದನಖರರಂಜಿತ ಸೂರಸಚಿವೇಂದ್ರ ಗುಣಸಮುದ್ರ

ಗಿರಿಸುತಾನಯನ ಪ್ರಭಾಪಟಲಸಂಗಕ್ಕೆ
ವರ ಚಂದನಾಮಲಕ್ಷೋದದಂತಾಗಲುರು
ತರಜಟಾಜೂಟಕ್ಕೆ ಹರಿಣಸಲಿಲಜಮಯ ಸ್ರಗ್ವಿಸರದಂತಾಗಲು
ವರ ಬಾಹುಯುಗಳಕೆ ಮೃಣಾ[2]ಳಾಂಗಹಾರ[2]ದಂ
ತಿರೆ ಮೇನಕಾತ್ಮಜಾನ್ವಿತನಾಗಿ ಶೋಭಿಸುವ
ಗುರುನೀಲಕಂಠನೆಮ್ಮಂ ರಕ್ಷಿಸುತ್ತಿರ್ಕೆ ಮನಕೆ ಮಂಗಳಮನಿತ್ತು ೧

ಬಳಿಕೆ ಮುನ್ನೊರ್ವನೀಶ್ವರಭಕ್ತ ಮಲ್ಲಣಂ
ಲಲಿತ ಕವಿರಾಜಶೇಖರನಮಳವಿಟವೃಷಭ
ನಳಘುಗುಣನಿಳಯ ಮಾನಸನೊರ್ವ ವೇಶಿಯುಂ ತಾಸುಮನ್ಯೋನ್ಯರತಿಯಿಂ
ಮಿಳಿತ ಸೌಖ್ಯಂಗಳುಱ ಕೊನರುತಿರೆ ರಾಗಂಗ
ಳಳವು ಮಿಗೆ ಪೆರ್ಚಿ ಪರ್ತಿಸುತಿರ್ಪ ವೇಳೆಯೊಳ
ಗಿ[3]ಳಿಗೆ[3] ಗಗನಕೆ ಸೂತ್ರಮಿಡಲಂಬಿಲದೊಳಮಲ ನವನೀತಮಂ ತೆಗೆಯಲು ೨

ಪಿರಿದುಂ ಮರೀಚಿಕಾಜಲಮನೀಂಟಲ್ ಪಿಡಿದ
ಸರಳ ಮುಸಲದೊಳಂಕುರಂಬಡೆದು ಕೊಯ್ಯಲತಿ
ಭರದೆ ಪೆಳವನನೋಡಿಸಲ್ ಮಳಲೊಳಗೆ [4]ಎಣ್ಣೆ[4]ಯಂ ಪೊಸೆದು ತೋಱಲನಿಶಂ
ಸಿರುತಮೊರ್ಕುಡಿತೆ ನೀರೊಳ್ ಮುಳುಗಲಾಗಸದೊ
ಳಿರದೆ ಚಿತ್ರಂಬರೆಯಲಿರುಳ ಪಗಲಂ ಮಾಡ
ಲರರೆ ಪಗಲಿರುಳ ಮಾಡಲ್ ಬಯಲಿನಾಕಾರಮಂ ಮಾಡಿ ತೋಱಲೆಸೆದು ೩

---

[1] ಲ್ಲಾಹ (ಗ) [2] ಳಾ್ದಂಗನಾರ್ಯ (ಗ) [3] ಳಿಯೆ (ಕ) [4] ಬೆಂಟೆ (ಕ)

ಗಗನದರಲಂ ನಿಲ್ಕಿ ಕೊಯ್ಯಲಿಂದರವಿಲ್ಲ
ಮಿಗೆಯೇಱಿಸಲ್ ಬೊಂಬೆಗಳ್ಗ ಸುವನೀಯಲಂ
ತೊಗೆದ ಸಱಿಯೊಳ್ ನಾರ ಪಡೆಯಲಾ ಕಣ್ಣಾಲಿಯೊಳ್ ತೋರ್ಪ ಹಾಹೆಗಳೊಳು
ಬಗೆದು ಸೂಳ್ನುಡಿಗೇಳಲೊಪ್ಪುವ ಶಟಲ್ಲತೆಯ
ಸೊಗಸಿನಿಂ ಪಿಡಿದುಯ್ಯಲಾಡಲೊಪ್ಪುವನೆರ
ಳ್ಚಗೆಯಾಗಿ ಮಾಡಲುನ್ನತಚಂದ್ರಿಕೆಯನಂಬರಂ ಮಾಡಿ ಸಲೆ ಪೊದೆಯಲು ೪

ಪುಲಿಯ ಗಿಣ್ಣಂ ಮಾಜಲಕ್ಷ್ಮಿಯಿಲ್ಲದ ನಟನ
ನಲಿದು ಕಜ್ಜಳಲಿಪಿಯನೋದಿಸಲ್ ಮಂಜುಗಳ
ನೊಲವಿನಿಂದಳಿಯಲಾವಗಮೆಯ್ದೆ ತನ್ನ ನೆಳಲಂ ತಾನೆ ಮಿಗೆ ದಾಂಟಲು
ಸಲೆ ಸತ್ತು ಪುಟ್ಟಲುಱಿ ಬಲ್ಲ ಕಡುಜಾಣೆ ಸ
ಲ್ಲಲಿತ ವೇಶ್ಯಾಮಾತೃ ತನ್ನಳಿಯನಿರ್ದೆಡೆಗೆ
ಲಲಿತ ಮಂದರಯಾನದಿಂ ಬಂದು ನುಡಿದಳೆಲೆ ದುರ್ವಿಟನೆ ಕೇಳೆನುತ್ತೆ ೫

ಕಿಱುವರೆಯ ಮೊದಲೆನ್ನ ತನುಜೆ ನಿನ್ನಯ ತೋಳೊ
ಳೊಱಗಿ ಬಳೆದಳ್ ನಿನ್ನನಲ್ಲದೇ ಮತ್ತಾರ
ನಱಿಯಳಿವಳೆಂದು ರೂಢಿಸಿದ ಕವಿಯಾನೆನಗೆ ಸೋಲ್ತಳಿವಳೆಂದು ಮತ್ತಂ
ತಱಿಸಂದ ಬೊಜಗರೆನ್ನಿಂದಧಿಕ[1]ವಿ[1]ಲ್ಲೆಂದು
ಬಱಿಯ ಬೇಟಂದೋಱಿ ಮಗಳ ಮಚ್ಚಿಸಿಕೊಂಡು
ಬೆಱಿತಿರಲ್ ಸ[2]ರಿ[2]ಯ ವಿಟರೆಯ್ದೆ ಹಾಸ್ಯಂಗೆಯ್ವರೇ ನಿನ್ನನೆಲೆ ಕುವಿಟನೆ ೬

ನಿನ್ನ ಕವಿತಾಪ್ರೌಢಿಯಿಂ ನಿನ್ನ ದೊರೆತನಮು
ಮೆನ್ನ [3]ಗಳಗೆಯ ಭತ್ತವಹುದೆ ನೆಱೆ[3] ಭಾವಿಸಲ್
ನಿನ್ನ ಚತುರತ್ವಮೆನ್ನಯ ಸುತೆಗೆ ಮಣಿದೊಡವಕ್ಕುಮೋ ನೋಡೆ ಮತ್ತಂ
[4]ನಿನ್ನ[4] ಬರ್ದಿನ ನುಡಿಗಳೆನ್ನ ತನುಜೆಗೆ ನಾಡೆ
ಪೊನ್ನ ಜಾಳಿಗೆಗಳಕ್ಕುಮೋ ನಿನ್ನ ಭಕ್ತಿ ತಾ
ನುನ್ನತ ಸುಮುಕ್ತಿಯಂ ಕುಡುವುದೇ ಬಳಿಕೆಮಗೆ ಪೊನ್ನೀಯ[5]ದುಂ[5]ತೆ ನೀನು ೭

---

1 ಠ (ಕ) 2 ವಿ (ಕ) 3 ಮಗಳಿಗೆಯು ಭರ್ತವಹುದೆ (ಕ) 4 ನನ್ನಿ (ಗ)
5 ದಂ (ಕ)

ಇರುವುದರಿಂದೆಮ್ಮಾಲಯದೊಳೀಗ ಪೊಱಗಣ್ಗೆ
ಸರಿದು ಪೋಗೆನುತೆ ಬಿಱುನುಡಿಗಳಂ ನುಡಿದು ಮ
ದ್ವರಸುತೆಗೆ ಪೊನ್ಗಂಟನಿತ್ತು ನಿನ್ನೆರ್ದೆಯಾಱಿತೇ ನಿನಗೆ ಹೇವಮಿಲ್ಲ
ಪಿರಿದುಮೇನೆಂದೊಡಂ ಮಗಳ ಬಿಡಿ ಪರ್ವದೊಳ
ಗುರುಧನಂಗಳನಿತ್ತೆಯಾ ಮುನ್ನೆ ಮಗಳೊಸೆದು
ಪರಮ ವೀರೇಶ್ವರನ ಯಾತ್ರೆಯಂ ಮಾಡಿದಳ್ ಪದಕವಂ ಮಾಱಿ ಮತ್ತಂ ೮

ಪಿರಿಯ ಹಾರಮನಡವನಿಟ್ಟೆನ್ನ ಸುತೆಯೊಲ್ದು
ಪ[1]ರಿಸ[2]ದಿಂ ಶಿವರಾತ್ರಿಯಲ್ಲಿ ಶಿವಗಣತತಿಗೆ
ಕರಮೆ ಆರಾಧನೆಗಳಂ ಕೊಟ್ಟು ಮನ್ನಿಸಿದಳಾ ವಸಂತೋತ್ಸವದೊಳು
ಕರಕಟಕಮಂ ಮಾಱಿ ಗುರುಪೂಜೆಗೆಯ್ದುಳುರು
ತರದಮನಪೂರ್ಣಿಮೆಯೊಳಂದು ನೇವಳವನೊ
ತ್ತಿರಿಸಿ ಶಿವಭಕ್ತರ್ಗೆ ಸಂತುಷ್ಟಿಯಂ ಮಾಡಳೇ ಮತ್ತಮದುಮಲ್ಲದೆ ೯

ಮಿನುಪ ನೂಪುರಮನೊತ್ತಿಟ್ಟೆನ್ನ ಮಗಳೊಂದು
ಸೆನೆಯದಿಂ ನೂಲಹುಣ್ಣಿಮೆಯ ಮನ್ನಿಸಳೆ ಮ
ತ್ತನುವಿನಿಂ ದೀಪಾವಳಿಗೆಯಲ್ಲಿ ಪೊನ್ನೂಲ ಮಾಱಿ ಶಿವಸದನದಲ್ಲಿ
ಘನ ದೀಪಮಾಲಿಕೆಯನೆತ್ತಿಸಳೆ ಮತ್ತೀಗ
ಮುನಿದ ಪುಲಿಯಂತೆ ಶಿವರಾತ್ರಿ ಬಂದಿತ್ತು ತೊ
ಟ್ಟನೆ ಅದರ್ಕೆನ್ನ ಮಗಳಿತ್ತಟ್ಟಿದಳ್ ಪಾಯವಟ್ಟವಮಂ ಒಟ್ಟೆಯ್ಸಲು ೧೦

ನೀನೆಂದು ಪೊನ್ಗುಡುವುದೆಂದು [2]ತಿರ್ದುವು[3]ದೆಮ್ಮ
ನೂನಮಣಮಕ್ಕಟಾ ಮಗಳ ಭಂಡಾರಮಿನಿ
ಸೇನುಮುಳಿಯದೆ ಪೋಯ್ತು ನೀನೆಱಿದುಮಱಿಯದಂತಿರ್ದಪ್ಪಯದುಮೊಳ್ಳಿತು
ಮಾನ[3]ವಂ[3] ಬಿಟ್ಟ ದುರ್ವಿಟ[4]ನೆ[4] ಭೂಮಿಯೊಳಗೆ
ತ್ತಾನುಮುಂಟೇ ಬಿಟ್ಟ ಬೆಲೆವೆಣ್ ಭುಜಂಗರ್ಗ
ದೇನೊ ಪುಟ್ಟಿಸಿ ಸುಸಿಲ್ಗಲಹವಂ ಮತ್ತೆ ಗೆಲವಂ ಕೊಟ್ಟು ಮನಮನಱಿದು ೧೧

ಮುನಿದು ಮತ್ತಾಗಳೇ ಸೋಲ್ತವನ ಭಂಗಿಯಂ
ಮನವಿತ್ತು ಬಳಿಕಿನಿತರ್[5]ಪೊಳ್ತಗಲ್ದೊಡ್[5] ಕೂಡೆ
ತನಿನೇಹದಿಂ ಮೇಲೆಬಿಳ್ದು ಮುದ್ದಿಸಿ ಪೊಯ್ದೊಡೊಡಲಿತ್ತು ರತಿಸುಖಕ್ಕೆ

---

[1] ರುಷ (ಗ) [2] ತೀದವು (ಕ) [3] ವನು (ಕ) [4] ನೊ (ಗ) [5] ಪೊಗಳ್ತಗುಳ್ದಡೆ (ಕ)

ವಿನಯದಿಂದೆಳಸಿದೊಡೆ ರತಿಗೆಯ್ದು ಮೂರ್ಛೆಯೊಳ
ಗಿನಿಸೊಂದಿಸುತ್ತೆ ಬಳಿಕ್ಕೆಚ್ಚಱಿಸಗಲ್ ಬೆವರ
ಪನಿಗಳಂ ಬಿಜ್ಜಣಿಗೆಯುಲರಿಂದವಾಱಿಸುತ್ತೂರುಗಳನೊ[1]ತ್ತುತೊ[1]ಸೆದು ೧೨

ಇನಿದುಸುಡಿಯಿಂದೊಲ್ಮೆಯಂ ತೋಱಿ ಮೇಳದೊಳ
ಗನುಗೊಳಿಸಿ ಚಿತ್ತವಂ ಸೂಱೆಗೊಟ್ಟವನಂತೆ
ವಿನಯದಿಂ ನಡೆಯುತ್ತೆ ಗುಡುಬೆಲೆವೆಣ್ಣಂತೆ ಕೂಡೆಯೊಲ್ದೊಲಿಸಿಕೊಂಡು
ಘನಕವಿತ್ವದ ಪೆರ್ಮೆಯಿಂ ಕಾಮಶಾಸ್ತ್ರಮಂ
ನನೆಸುಮಱಿದಪೆನೆಂಬ ಗರ್ವದಿಂ ಠಕ್ಕಿನಿಂ
ದೆನಸುಮತಿಮಾಯೆಯಿಂ ಮರ್ದಿನಿಂದೆನ್ನ ಮಗಳಂ ವಶಂಗೆಯ್ದೆಂಬ ೧೩

ಬಗೆಯಿಂದೆ ವಸ್ತುವಂ ಕೊಡಲೊಲ್ಲೆಯೋ ನಿನ್ನ
ಸುಗುಡತನವಂ ಎನ್ನ ಮಗಳ ಮಂಚದ ಕಾಲೊ
ಳಗೆ ಕಟ್ಟಿಸುವೆನೆಲವೊ ಪೊಱಮಟ್ಟು ಪೋಗೆನುತೆ ಮಲ್ಲಣಿಯ ತಾಯ್ ಕಿನಿಸುತೆ
ಮಿಗೆ ಭಂಡುಗೆಲೆಯುತ್ತೆ ಮಲ್ಹಣನ ಪೊಱಮಡಿಸಿ
ನೆಗಳ್ದರಸು ಬೊಜಗನೊರ್ವನ ಹಕ್ಕೆಗೊಲ್ದು ತೊ
ಟ್ಟಗೆ ಕಳುಪೆ ಮಲ್ಹಣಿಯನಿತ್ತ ಮಲ್ಹಣನಂಗಜಾಗ್ನಿಯಿಂ ಮಿಗೆ ಬೇಯುತೆ ೧೪

ತನ್ನ ತನುಧರ್ಮಂಗಳೆಲ್ಲವಂ [2]ನೆಱೆವಱೆದು[2]
ಖಿನ್ನನಾಗುತ್ತೆ ತನ್ನಯ ಮನದೊಳಾವಗಂ
ಭಿನ್ನವಿಲ್ಲದ ತೆಱದೆ ಮಲ್ಹಣಿಯ ರೂಪನಾಲಿಂಗಸಂಗೆಯ್ದು ಮತ್ತಂ
ಮುನ್ನವಳ ಕೂಡಿರ್ದ ರೀತಿಯಂ ಜಾನಿಸಂ
ಸನ್ನಿದಂ ಬಿಂಬಾಧರದ ಚಲ್ವನಾವಗಂ
ನನ್ನಿಯಿಂ ನೆನೆವನುನ್ನತ ಮನೋಹರ ರೂಪನಳ್ಕಱಿಂದಂ ಚಿಂತಿಪಂ ೧೫

ಅವಳ ದರಹಾಸಮಂ [3]ನೇ[3]ಹಮಂ ನೋಟವಂ
ಸವಿನುಡಿಗಳಂ ಕಾಯಕಾಂತಿಗಳನೆಯ್ದೆಯೊ
ಪ್ಪುವ ಕಠಿನವೃತ್ತಸ್ತನಂಗಳಂ ಘನಜಘನಮಂಡಲಂಗಳ ಚಲ್ವನು
ತನೆಯದಂ[4]ದ[4]ಮನೀವ ಗಂಭೀರನಾಭಿಯಂ
ನವಚಂಚರೀಕನಿಭಕೇಶಂಗಳಂ ರಾಜಿ
ಸುವ ಬಾಲಚಂದ್ರನಂತೆವೊಲೆಸೆದು ತೋರ್ಪಳಿಕವಂ ನೆನೆವನತಿಶಯದೊಳು ೧೬

---

1 ತ್ತಿಯೊ (ಕ) 2 ಮಱೆದುಸೆಱೆ (ಕ) 3 ನೆನ (ಗ) 4 ಗ (ಕ)

ಸಿರಿದವಳ ನಗೆಗಣ್ಣ ಬೆಳಗುಗಳ ಗಾಡಿಯುಂ
ಸ್ಫಳ ಬರ್ಹಂಗಳಂತೆಸೆವ ಕಚಭಾರಮುಂ
ಸರಸವಲ್ಯಗ್ರದಂತಿರ್ಪ ಬಡನಡುವನಸಿಯಾದ ಬಾಸೆಯ ಶೋಭೆಯುಂ
ಸುರತದೊಳ್ ನಾನಾಪ್ರಬಂಧಂಗಳಂ ತೋಱಿ
ಕರಮೆ ಕೂಡುವ ಸುಸಿಲ ಸವಿಯುನ[1]ತಿ[1]ಭಾವಮುಂ
ಸುರುಚಿರಪ್ರಭೆದೋರ್ಪ ದಂತಪಙ್ಕ್ತಿಯನೆಯ್ದೆ ಮಲ್ಲಣಂ ನೆನೆವನೊಸೆದು ೧೭

ಅವಳ ನವಕಂಬುಕಂಧರ ಮಯೂಖಂಗಳಂ
ತವೆ ನೆನೆವನಿಂತು ಜಾನಿಸುತೆ ಸೈರಿಸಲಾಱ
ದವಳ ನುಡಿಗಳನಾದೊಡಂ ಕೇಳ್ವೆನೆನುತೆ ಧೃತಿಮಾನಂಗಳಂ ಬಿಸುಟ್ಟು
ಅವಳ ಮಂದಿರದ ಮುಂದೆಸೆಯ ಕೀಳಿಲೊಳೊಂದಿ
ತವಕದಿಂ ಮಲ್ಲಣಿಯ ದನಿಯ ಸಲೆ ಕೇಳುತಿ
ರ್ಪವಸರದೊಳವಳೊರ್ವ ನರಬೊಜಂಗನ ಕೂಡೆ ರತಿಸುಖದೊಳಿರ್ದು ಮತ್ತಂ ೧೮

ಭರದಿಂ ಕವಾಟಮುಂ ತೆಗೆದು ನೀರ್ಮುಕ್ಕಳಿಸಿ
ಸರಸಿಜಾನನೆ ರಾತ್ರಿಯೊಳ್ ಮಲ್ಲಣನ ಮೇಲೆ
ನಿರುತಮುಗುಳಲ್ ತತ್ಕ್ಷಣದೊಳೆ ಜಲಕನೆ ಮಿಂಚಲದಱ ಬೆಳಗಿಂದೆ ಕಂಡು
ಇರುಳಿಂತುಬರ್ಪುದುಚಿತಮೆ ಮಲ್ಲಣಾ ನಿನಗೆ
ಕರಮೆ [2]ಕಾರ್ಗ[2]ತ್ತಲೆಯೊಳಱಿಯದಾನುಗುಳ್ದೆನೆಂ
ದುರುದುಃಖದಿಂ ನುಡಿಯುತುಟ್ಟ ಹುಟ್ಟಗೆ ಸೆಱಂಗಿನೊಳೆ ಮೆಯ್ಯಂ ತೊಡೆದಳು ೧೯

ಬಳಿಕೆ ಕಯ್ಯಂ ಕೊಟ್ಟು ಕರೆದೊಯ್ದು ಬೇಱಿಕೊಂದು
ನಿಳಯಕ್ಕೆ ಮಲ್ಲಣನ ಬೋಳೈಸಿ ಸುರತಸುಖ
ಕೆಳಸಿ ಮೇಲ್ವಾಯ್ವ ಮಲ್ಲಣಿಗೆ ನುಡಿದಂ ಪ್ರೌಢಕುಲಶಿರೋಮಣಿ ಮಲ್ಲಣಂ
ಲಳನೆ ನಿನ್ನಂ ನೋಡಿದಲ್ಲದೆನ್ನಯ ಮನದ
ಕಳವಳಂ ಬಿಡದದರ್ಕೊಲ್ದು ನಿನ್ನಂ ನೋಡಿ
ಘಳಿಲನೆಯ್ತಂದೆನಲ್ಲದೆ ನಿನ್ನ ರತಿಸುಖಕ್ಕಾ[3]ಟಂ[3]ದು ಬಂದನಲ್ತು ೨೦

ಸದನದೊಳಗೊರ್ವನೊತ್ತಿಟ್ಟು ಬಂದಿರ್ದಪಂ
ಮುದದಿನಿಂದಿನದಿನದೊಳವನೆ ನಿನಗಾಣ್ಮನಾಂ
ಮದನಾತುರದೆ ನೆರೆವುದನುಚಿತಂ ನಿನ್ನ ಕಂಡೆಂ ನಿನ್ನ ಮಾತುಗೇಳ್ದೆಂ

---

1 ಸಿ (ಗ) 2 ಕಗ್ಗ (ಟ) 3 ೨ಂ (ಕ)

ಪಡೆದು ನಿನ್ನಂಗಮಂ ಸೋಂಕಿದೆಂ ಕೇಳಿದೆಂ
ಪುದಿದ ಸರ್ವಸುಖಂ ದಲೆನಗೆನುತ್ತಡಿಯಿಡುವ
ವಿದಿತ ಮಲ್ಲಣನೊಡನೆ ನುಡಿದಳೊಂದಂ ಹಿತೋಪೇತವಚನಮನಳ್ಕಱಿಂ ೨೧

ಪಿರಿದುಮನುರಾಗಮುಂಟೆನಗೆ ನಿನ್ನಲ್ಲಿ ಬಿ
ತ್ತರಮಾದ ರಾಗಮುಂಟೆನ್ನಲ್ಲಿ ನಿನಗೆ ಕೂ
ಡಿರಲೀಯಳೆಮ್ಮಿರ್ವರಂ ಧನದ ಕಾಂಕ್ಷೆಯಿಂದೆಮ್ಮ ತಾಯ್ ನಿಟ್ಟುರಗಿತಿ
ನಿರುತಮೆಮ್ಮಿರ್ವರೆಂದೆಂದುಮಗಲದೆ ಮನೋ
ಹರರಾಗದಿಂದಿರ್ಪುದಕ್ಕುಮಾಗೆನ್ನ ಮೇ
ಲರಿದಾದ ಮೋಹಮೆನಿತುಂಟನಿತನೀಶ್ವರನ ಪದಯುಗದೊಳಿರಿಸಿ ಮತ್ತಂ ೨೨

ತೊಳಪ ಕೈಪಿಡಿಯ ಮೇಲುರ್ದುರುಳ್ವ ಪೊಳ್ತು ತಿರಿ
ಸುಳಿಯನೇಕಾಗ್ರಮಾನಸದೆ ನೆನೆ ನಿನ್ನ ಸ
ಲ್ಲಲಿತ ಕವಿತಾಪ್ರೌಢಿಯಿಂದೆ ನುತಿಸೆನ್ನ ನಿನಗೀವನೀಗಳೆ ಶಂಕರಂ
ತಳರ್ದು ಪೋಗೀಗಳೆಮ್ಮಿರ್ವರ್ಗೆ ಭುಕ್ತಿಯುಂ
ಮಿಳಿರ್ವ ಮುಕ್ತಿಯುಮೆಯ್ದೆ ಕೈಸಾರ್ಗುಮೆಂದು ಗಳ
ಗಳನೆ ನುಡಿದಾ ಮಲ್ಲಣಿಗೆ ಮಲ್ಲಣಂ ನುಡಿದನೊಂದು ಮಾತಂ ಹರಿಸದೆ[1] ೨೩

ಎಲೆ ಯುವತಿ ನೀನೆನ್ನ ಪಿಂಗಡೆಯನೆಯ್ದಿ ನಿ
ನ್ನಲಘು ಕುಚಚೂಚಕಯುಗಂಗಳೆನ್ನಯ ಬೆನ್ನ
ಸಲೆ ಸೋಂಕುವಂತೆ ಗಾಢಾಲಿಂಗನಂಗೆಯ್ದು ಕೊಂಡಿರ್ದೊಡೊಂದೆ ನಿಮಿಷಂ
ಮಲಹರನನೊಂದೆಪದ್ಯಮನೋದಿ ಮೆಚ್ಚಿಪೆಂ
ನೆಲೆಯಿಡೆನೆ ಮಲ್ಲಣಿಯದಕ್ಕೊಡಂಬಟ್ಟು ಮನ
ಮಲರುತ್ತೆ ನಾಳೆ ಬಂದಪೆನೀಶನಾಲಯಕ್ಕೆಂದವನ ಬೀಳ್ಕೊಟ್ಟಳು ೨೪

ಅಂತು ಮಱುದಿವಸಂ ಸವಳದೆ ಶಿವನಾಲಯಕೆ
ಸಂತಸದಿನವರೀರ್ವರುಂ ಬಂದು ಹರನಿದಿರೊ
ಳಂತರಂಗವಿಶುದ್ಧಿಯಿಂದಿರ್ಪ ಮಲ್ಲಣನ ಪಿಂಗಡೆಯನಪ್ಪಿಕೊಂಡು
ಕಾಂತೆ ಸುಖದಿಂದಿರಲುಮೇಶನಂ ನೋಡುತ್ತೆ
ಕಾಂತಾಕಚಪ್ರಚಯ ಎಂಬ ಪದ್ಯಾದಿಯಾ
ಗಿಂತು ಮೂವತ್ತಾಱುಪದ್ಯಂಗಳಂ ರಸಾಲಂಕಾರಯುಕ್ತಮಾಗಿ ೨೫

---

[1] ರುಷ (ಗ)

ಪರಮ ವಿಜಯೇಶ್ವರನ ಮಲ್ಲಣಂ ನುತಿಸೆ ಭಾ
ಸುರ ಶಿವಂ ಮೆಚ್ಚಿ ತನ್ಮಲ್ಲಣಂಗಾ ವಧುವ
ನಿರದಿತ್ತು ಬಳಿಕೆ ಮಲ್ಲಣನನಾ ಮಲ್ಲಣಿಯುನವಳ ಮುಂಗೈಯ ಗಿ[1]ಳಿ[1]ಯಂ
ನಿರುತಮಾ ಮಲ್ಲಣಿಯ ತಾಯನಿವರೆಲ್ಲರಂ
ಪುರಹರಂ ಕೈಲಾಸಪುರಕೆ ತನುವೆರಸೊಯ್ದು
ನುರುತರ ಪ್ರೀತಿಯಿಂ ಸುರರೆಯ್ದೆ ಕೀರ್ತಿಸಲ್ ಕಂಡು ಮೂಲೋಕಮುಚ್ಚೆಯೆ ೨೬

ಇದುಕಾರಣಂ ಪರಮಹಿತರಾದ ಕಾಂತೆಯರ
ವಿದಿತ ಶುಭವಾಕ್ಯಂಗಳಂ ಕೇಳಿ ಸಾದರದಿ
ನೊದವಿದಪವರ್ಗಮಾರ್ಗಂ ಸಾರ್ಗಮಾವಗಂ ಭುವನದೊಳಗಿದು ನಿಶ್ಚಯಂ
ಮದನಾರಿಭಕ್ತರಾದವರಿಂತು ಧೃತಿಗೆಟ್ಟು
ಸದಮಲ ವಿವೇಕಮಂ ಮುಂಬಿಟ್ಟು ರತಿಪತಿಯ
ಕದನಕೊಳಗಪ್ಪುದತ್ಯಧಮಮಿನ್ನುಂ ಕೇಳ ನೀನೆನುತ್ತಿಂತೆಂದಳು ೨೭

ಮಿಗೆ ನೀಲನಭವಭಕ್ತಂ ಸುಗುಣನಿಧಿ ಭಾಸು
ರ ಗುರುಭಕ್ತಾಂಡಾರಿ ನೀನಾವಗಂ ಸಾಧು
ಬಗೆಯೆ ಗುರುಭಕ್ತಿಸಾಮ್ರಾಜ್ಯಧೌರೇಯನಪಗತಪಾಪನಿಕುರುಂಬನು
ಸುಗು[2]ಣ[2]ನುನ್ನತಕಳಾಭಿಜ್ಞನಿಂತಕಟಕಟ
ಬಗೆಗೆಟ್ಟು ರತಿಗೆಳಸುವರೆ ಕೇಳ ನೀಂ ಬಳಿಕೆ
ಮೃಗಲೋಚನೆಯರ ನುಡಿಗೇಳಿ ಮೋಕ್ಷಮನೆಯ್ದಿದವನ ಕಥೆಯಂ ಪೇಳ್ದಪೆಂ ೨೮

ಸದಮಲಪ್ರಚುರವಿಶ್ರುತ ಪರಮಭಕ್ತಗಣ
ಪದಸರೋರುಹಸಾಂದ್ರ ಮಕರಂದಪಾನ ಸ
ಮ್ಮುದಿತ ಚಂಚಚ್ಚಂಚರೀಕನನವರತ ಪಂಚಾಕ್ಷರೀಪ್ರಸಿತಹೃದಯಂ
ವಿದಿತ ಮಂಜುಲನೀಲಕಂಠಾಹ್ವಯಂ ಮನೋ
ಮುದದೆ ಪೇಳ್ದುರುತರಾರಾಧ್ಯಚಾರಿತ್ರದೊಳ
ಗಿದು ಮಲ್ಲಣನ ಕಥಾವರ್ಣನಂ ಸದ್ಭಕ್ತಕರ್ಣಕುಂಡಲಮಣಿಯರಂ ೨೯

---

[1] ಣ (ಗ) [2] ಡ (ಗ)

# ಎಂಟನೆಯ ಸಂಧಿ

## ಕುಮಾರಪಾಲ ಗುರ್ಜರನ ಕಥೆ

ಸೂಚನೆ : ಸಾರಶಿವಭಕ್ತಿಸಂಪೂರ್ಣಾಂತರಂಗಂ ಕು
ಮಾರಪಾಲಕ ಗುರ್ಜರನ ಕಥೆಯ ಕೇಳೊಸೆದು
ಸೂರಸಚಿವೇಂದ್ರ ನಿಖಿಲೈಶ್ವರ್ಯಯುಕ್ತದೇವೇಂದ್ರ ಸದ್ಗುಣಸಮುದ್ರ

ಅಸಿತವಾರಿದ ಷಟ್ಪದಾಂಜನದ್ಯುತಿನಿಭಂ
ಲಸಿತಪಿಂಗೇಕ್ಷಣಮಥರ್ವಣಾವಾಸಮು
ಲ್ಲಸದಹಿಫಣಾನಿಕರಮಣಿಗಳಿಂದಂ ಕಪಾಲಾವಳಿಗಳಿಂದಮೆಸೆವ
ಮಿಸುಪ ಬಾಲೇಂದುಸಮದಂಷ್ಟ್ರಯುಗದಿಂದೆ ರಾ
ಜಿಸುವ ಘೋರಾನನಂ ಪೊಸತಪ್ಪ ರೌದ್ರಮಂ
ಪಸರಿಸುತಿರಲ್ ನೀಡಲಿ ಗುರುನೀಲಕಂಠನೊಸೆದೀಗೆಮಗೆ ಸಂಸಿದ್ಧಿಯಂ ೧

ಬಳಿಕೆ ಶಿವಭಕ್ತರಣಕದೆ ನುಡಿದ ನುಡಿಗಡಣ
ಪಳಘುತರ ಹಿತವಕ್ಕುಮೆಂತೆಂಬೊಡಂ ಕೇಳ
ಮಳಹರನ ಸದ್ಭಕ್ತನನಘನುನ್ನತವೀರಮಾಹೇಶ್ವರಂ ಧೀರನು
ಲಳಿತಂ ಕುಮಾರಪಾಲಕ ಗೂರ್ಜರಂ ಎನಿಸು
ವಿಳೆಯೆಡೆಯನೊಂದುದಿವಸಂ ತನ್ನ ಸತಿಯೊಡನೆ
ಘಳಿಲನೊಸೆದಾಡುತಿರ್ದಂ ನೆತ್ತಮಂ ಮನೋಮುದದೊಳತ್ಯಾಶ್ಚರ್ಯ[1]ದಿಂ[1] ೨

ಮನವೊಂದು ಬಾಹ್ಯೇಂದ್ರಿಯಂಗಳೀರೈದು ಮ
ತ್ತನುನಯದಿನಂತಃಕರಣಚತುಷ್ಟಯದೊಳಗೆ
ಮಿನುಪ ಬುದ್ಧ್ಯಾದಿತ್ರಯಂ ಮೋಹಮೊಂದಿಂತು ಪದಿನೈದು ಪರಿಭಾವಿಸೆ
ವನಿತೆಗಂ ಪುರುಷಂಗಮಿವೆ ಲೋಕಕನುಸಾರಿ
ಯೆನಿಪ ಸಾರಿಗಳಾಗೆ ಸುಪ್ರಸಾದಿಗಳೀರ್ವ
ರನುವಿನಿಂ ಪ್ರಾವೀಣ್ಯಮಂ ಪಲಗೆಯಂ ಮಾಡಿಯತಿಹರ್ಷ[2]ದೆಸಕದಿಂದೆ ೩

---

[1] ದಿ (ಕ) [2] ರಸ (ಕ) ರುಷ (ಗ)

ಮಿಗೆ ಇಹಪರಂಗಳೆಂಬಿರ್ಕೇರಿಯೊಳ್ ಮತ್ತೆ
ಸೊಗಸಿನಿಂದಾ ಸಾರಿಗಳನೊಸೆದು ನಿಜಂಸಿ ತೊ
ಟ್ಟಗೆ ಪುಣ್ಯಪಾಪಂಗಳೆಂಬಕ್ಷಯುಗಳವಂ ಪಾಯ್ಕುಲವಜಂಂದೆ ಬಂದ
ನೆಗಳ್ದ ಫಲದಾಯದೊಳಗೀರಯ್ದು ಬರೆ ಮನದೊ
ಳಗೆ ನಲಿವನೀರಯ್ದು ಕೆಱನಾದ ಸದ್ಭಕ್ತಿ
ಸುಗಮದಿಂದೆನ್ನ ಕೈಸಾರ್ದುದೆನುತುದ್ಭಟಾಧೀಶ್ವರಂ ಸಚ್ಚರಿತ್ರಂ ೪

ಪಿರಿದುಮಿರ್ದುಗವೆಯ್ದೆ ಬೀಳಲಿಹಪರದೊಳಗೆ
ಹರಭಕ್ತಿ ಪೊರ್ದಿತೆನುತಾ ದಾಯವಾಡುವಂ
ನಿರುತದಿಂದಿರ್ತಿಗಂ ಬೀಳೆ ಲಿಂಗತ್ರಯಕೆ ತ್ರಿವಿಧಾರ್ಪಣಮನೆಸಗಲು
ಕರಮುಳ್ಳಿಯಿಂದಾಡುವಂ ಚೌಕಮುಃಜಿ ಬೀಳೆ
ವರ ಸತಿಯೆ [1]ನಿ[1]ನಗೆ ಚೌಕದ ಮಾತು ಬೇಡೆನುತೆ
ಹರಿಸದಿಂದಾಡುವಂ ಚೌಕದುಗವಂ ಬೀಳೆ ಷಡ್ವರ್ಗಮಳಿಗುಪೆಂಬಂ ೫

ಮಿನುಗುವದು ಚೌಕದಾಯಂ ಬೀಳ[2]ಲ[2]ಷ್ಟಮದ
ವನಿತೋಚ್ಚತಂ ಕೆಟ್ಟುದೆಂದಾಡುವಂ ಭ[3]ದ್ರೆ[3]
ಯೆನಿಪ ದಾಯಂ ಬೀಳೆ ವೀರಭದ್ರನೆ ಗತಿಯೆನುತ್ತಾಡುವಂ ಸಂತತಂ
ಅನುವಿನಿಂ[4]ದಂ ಪಂಚ[4] ಬೀಳೆ ಪಂಚೇಂದ್ರಿಯಕೆ
ನೆನಸು ಶಿವಲಿಂಗಪ್ರಸಾದಮಂ ಹಂಚಿಕ್ಕು
ತೆನಸುಮಾಡುವನಾವಗಂ [5]ತನ್ನ ಸತಿ[5]ಗೂಡಿಯುದ್ಭಟಾಧೀಶನೊಸೆದು ೬

ಪಿರಿದು ತೀವಂಚ ದಾಯಂಬರಲ್ ತ್ರಿಮಲವುಂ
ಸುರುಚಿರಕ್ಲೇಶಪಂಚಕಮುಮಳಿಗುಮೆನುತ್ತೆ
ಭರದಿಂ[6]ದ[6]ಮಾಡುವಂ ನೆಟ್ಟಿಯೆಂದೆಂಬ ದಾಯಂ ಬೀಳೆ ತಾಪತ್ರಯಂ
ಇರದಳಿಗುಮಾ ಚತುರ್ವರ್ಗಮುಣ್ಮುವುದೆನುತೆ
ಕರಮಾಡುವಂ ನಾಡೆ ಚೌವಂಚಿ ಬರೆ ನಾಲ್ಕು
ಪರಿಯ ಮೋಕ್ಷಂ ಪಂಚವರ್ಣಮನುವುಂ ಸಾರಿದಂತಾಡುವಂ ನೆತ್ತ[7]ಮಂ[7] ೭

ಇಂತು ನೆತ್ತಮನಾಡಲಕ್ಕುಮೇ ಭಾವಿಸಲ್
ಕಂತುಹರಕೃಪೆವಡೆಯದಿರ್ದ ಭಕ್ತರ್ಗೆನು
ತ್ತಂತೆ ಸದ್ಭಕ್ತರಲ್ಲಲ್ಲಿ ಕೊಂಡಾಡುತಿರೆ ವಿಮಲಸದ್ಭಕ್ತಿಗೆಯ್ದೆ

---

[1] ನ (ಗ) [2] ಲಿ (ಕ) [3] ಪ್ರ (ಕ) [4] ಪಂಚಕಂ (ಕ) [5] ಸಂತಸದಿ (ಕ)
[6] ದೆ (ಗ) [7] ವಂ (ಕ)

ಸಂತತಂ ಶತ್ರುವೆನಿಪೀ ದ್ಯೂತಕರ್ಮವೆ ನಿ
ರಂತರಂ ಭ[1]ಕ್ತಿ[1]ಲೀಲಾಕರ್ಮವಾಗಿಯೋ
ರಂತಾಡುತಿರ್ದು ತನ್ನೃಪತಿ ನಗೆವೊಗನಾಗಿ ನೋಡಿದಂ ತತ್ಸತಿಯನು ೮

ನೋಡೆ ತನ್ನೃಪಸಂಗನಾರತ್ನಮಣಿಯುರಂ
ನೋಡಿದಳ್ ನಾಲ್ದೆಸೆಯ ನಾವಿರ್ಬರಲ್ಲದೇ
ಕೂಡೊರ್ವರಿಲ್ಲೊಂದುಕಾರ್ಯಮಣಮಿಲ್ಲ ಬಳಿಕಾವಕಾರಣಮುಮಿಲ್ಲ
ಗಾಡಿಯಿಂದೆನ್ನನೀಕ್ಷಿಸಿ ನಿರ್ನಿಮಿತ್ತದಿಂ
ನಾಡೆಱಯನಪ್ಪೆನ್ನ ಪತಿಗೆ ದರಹಾ[2]ಸ[2]ಮಿದು
ಮೂಡಿ ಮೊಗದೊಳ್ ತೋಱುವತ್ತೆನುತೆ ಲಜ್ಜೆಯಿಂ ಮುಖಸರಸಿಜಂ ಕೊರಗುತೆ ೯

ಪಲಗೆಯೊಳ್ ಪಾಸಂಗಿಗಳನುಸಿಕನಿರಿಸಿ ಮನ
ಮಲರ್ದಾಡುತಿರ್ಪ ಜೂದಂಬಿಟ್ಟು ಕೇಳಿದಳ್
ನಲಿದಾತ್ಮಪತಿಯನೆಲೆ ಗೂರ್ಜರಾಧಿಪ ನಿನಗೆ ನಗೆತೋಱಿತೇಂಕಾರಣಂ
ಸಲೆಯೆನ್ನ ಹೃದಯದೊಳ್ ಸಂಶಯಂ ಪುಟ್ಟುತಿದೆ
ತೊಲಗಿತೆಂದೋ ಎನಗೆ ಬಾಹ್ಯಾಂತರಾರ್ಪಿತದ
ಲಲಿತಾವಧಾನಸೌಖ್ಯಾನಂದದತಿಶಯಂ ಕಂಡೆಯೋ ಎನ್ನೊ[3]ಳಿಗ್ಗಂ[3] ೧೦

ಪಿರಿದು ಜೂದಾಡುವುದು ಭಕ್ತರ್ಗೆ ಸನ್ಮಾರ್ಗ
ದಿರವದಲ್ಲೆಂದೊ ಸಾರಿಗಳನೊಯ್ಯಾರದಿಂ
ದಿರಿಸಲಿಸಳೆಂದೊ ಪಾಸಂಗಿಗಳ ದೂರದೊಳ್ ಬೇಱೆ ಬೇಱಿಟ್ಟಳೆಂದೊ
ಕರವೊಂದು ಪಲಗೆಯುಂ ಗೆಲ್ದುದಿಲ್ಲಿವಳೆಂದೊ
ಗುರುಕುಚಂಗಳ ಮೇಲುದಱ ಸೆಱಂಗಿ[4]ಲ್ಲಿ[4]ಯೋ
ಸರಿಸಿತೆಂದೋ ಸರಸವಾತಿನೊಳ್ ಪಾಳಿ ತಪ್ಪಿತ್ತೆಂದೊ ನಗೆ ಮೂಡಿತು ೧೧

ಬಳಿಕೆ ಪೋದಿಸಳ ರತಿ ನೆಱಯದಿರೆ ನೊಂದು ಮನ
ದೊಳಗೀಗ ಸುಸಿಲಸೊಕಕಿಚ್ಚೆ ತೋಱುತ್ತೆಂದೊ
ಫಳಿಲನೆನ್ನಯ ಸಾರಿಯುಂ ಕೊಂದೆನೆಂದೊ ದುಗುಣಂ ಮಾಡಿತೆಂದೊ ಮತ್ತಂ
ತೊಳಗುವೆರಡನೆಯ ಮನೆ ಕಟ್ಟಿತೆಂದೋ ವದನ
ದೊಳಗೆ ನಗೆ ತೋಱುತ್ತು ನಿಮಗೆ ನಿಮ್ಮಡಿಯಾಣೆ
ತಿಳಿವವೋಲೆನಗಿದಂ ಪೇಳಿಮೆನೆ ತತ್ಕಾಂತೆಗೊಲ್ದು ನುಡಿದಂ ಗೂರ್ಜರಂ ೧೨

---

[1] ಕ್ತ (ಕ) [2] ಸ್ಮ (ಗ) [3] ೞೀಗಂ (ಕ) [4] ನಲಿ (ಕ)

ವನಿತೆ ಕೇಳ್ ಸೌರಾಷ್ಟ್ರಸೋಮೇಶ್ವರನ ಭಕ್ತ
ನನಘನೋಹಿಲದೇವನಭವಸೇವಾಪರಂ
ಮಿನುಗುವಾತನ ಚರಿತ್ರಂಗಳೆಂತೆಂಬೊಡಂ ಪೇಳ್ದಪೆಂ ಬಲ್ಲನಿತ್ತಂ
ಮನಸಿಜಾಂತಕನಾಜ್ಞೆಯಿಂ ಭೂಮಿಗೆಯ್ದಿ ತೊ
ಟ್ಟನೆ ಭಕ್ತವತ್ಸಲನೆನಿಪ್ಪ ಸೌರಾಷ್ಟ್ರಪತಿ
ಯೆನಿಪ ಸೋಮೇಶ್ವರನ ಕಂಡು ತತ್ಪದಯುಗಕೆ ನಮಿಸಿಯತಿಸಂತೋಷದಿಂ ೧೩

ಜನಿತ ಸಾನಂದಾಶ್ರುಪೂರ್ಣನಯನನುಮಾಗಿ
ಘನಪುಳಕಯುತ ಶರೀರನುಮಾಗಿ ಯಾವಗಂ
ಮಿನುಪ ಗದ್ಗದಕಂಠದಿಂದುಣ್ಮುತಿರ್ಪ ನುತಿವಿಸರಸಮ್ಮಿಳಿತನಾಗಿ
ಮನಮೊಲ್ದು ಸೋಮೇಶ್ವರನ ಕೀರ್ತಿಸುತ್ತೆ ತೊ
ಟ್ಟನೆ ವಿಮಲರುದ್ರಾಕ್ಷಮಾ[1]ಲೆ[1]ಗಳ ತೊಟ್ಟು ಸ
ದ್ವಿನಯದಿಂ ಭಸಿತಾವಲಿಪ್ತದೇಹನುಮಾಗುತಾತನತಿಶಯಭಕ್ತಿಯಿಂ ೧೪

ಪಿರಿದುಂ ಸಹಸ್ರಕಲಶಾಭಿಷೇಕಮನೆಸಗಿ
ಶರಧಿಜಲದಿಂ ಸೋಮನಾಥಂಗೆ ಮತ್ತೆ ಭಾ
ಸುರಮನೋಹರ ಬಿಲ್ವಪತ್ರಂಗಳಿಂದರ್ಚನಂಗೆಯ್ದು ವಿಮಲಮಪ್ಪ
ಪರಮ ಮಹಿಷಾಕ್ಷಿಗು[2]ಗ್ಗು[2]ಳಧೂಪಮಂ ನಾಡೆ
ಹರಿಸದಿಂದಂ ಸಮರ್ಪಿಸಿ ಮಂಗಳಾರತಿಯ
ನಿರದೆತ್ತಿ ಪಂಚಭಕ್ಷ್ಯಾದಿ ನೈವೇದ್ಯಮಂ ನಲಿದರ್ಪಣಂ ವಿರಚಿಸಿ ೧೫

ಪಲವು ಸೂಳ್ ಬಲವಂದು ನಾಲಗೆಯ ಬಲನೆಯ್ದೆ
ತೊಲಗುವಂದದೆ ಸೋಮನಾಥನಂ ನುತಿಗೆಯ್ದು
ನಲಿದಾದಿನಂಮೊದಲ್ ತನ್ನ ತೂಕದ ಪವಣ ಮಹಿಷಾಕ್ಷಿ ಧೂಪತತಿಯಂ
ಲಲಿತ ಸೋಮೇಶಂಗೆ ನಿಚ್ಚಂ ಸಮರ್ಪಿಸುವೆ
ನೊಲವಿನಿಂದೆನಗಿದೇ ವ್ರತಮೆನುತ್ತೋಹಿಲಂ
ಮಲಹರನನರ್ಚಿಸುತ್ತಿರೆ ಕೆಲವು ದೆವಸಕ್ಕೆ ವಿತ್ತಮೆಲ್ಲಂ ಸಮೆಯಲು ೧೬

ಮಿನುಪ ಸುವ್ರತಕೆ ಬರ್ಪುದು ಹಾನಿ ಬಿಟ್ಟೊಡಿದ
ನೆನುತೋಹಿಲಂ ಮನದ ಬಲ್ಪಿನಿಂದಾವಗಂ
ನೆನೆಯುದೇನಂ ದಿವಸಮಿದು ರಾತ್ರಿಯಿದು ಕಾಲಮಿದು ಕಾಲಮಲ್ತಿದೆಂಬ

[1] ಲಿಕೆ (ಕ) [2] ಗುರ್ಗ (ಕ)

ನೆನವುದೋಱದೆ ವಿಪಿನಕೆಂತು ಪೋಗುವೆನೆಂಬ
ಘನವಿಚಾರಂ ಪುಟ್ಟದತಿ ದಕ್ಷನಾಗಿ ತೊ
ಟ್ಟನೆ ಪಶ್ಚಿಮಾಂಬುಧಿಯ ತೀರಸ್ಥ ಕಾಂತಾರ ಘೋರತರದುರ್ಗಂಗಳಂ ೧೭

ಭರದಿಂದಮೆಯ್ದಿ ಗು[1]ಗ್ಗು[1]ಲ ಭೂರುಹಂಗಳಂ
ಪರಿದಱಿಸಿ ಕಂಡು ಮಹಿಷಾಕ್ಷಿಯುಂ ಕೂಡಿ ನಿ
ರ್ಭರದೆ ಶೋಧಿಸಿ ತಂದು ಮನನೊಸೆಯುತುಂ ಕಂಬಿಯಿರ್ದೆಸೆಯೊಳಿಟ್ಟು ಮತ್ತಂ
ಪರಿಮಳಂಬೆತ್ತ ಚಂದನದ ಪೊಸಸೆಕ್ಕೆಗಳ
ನರಿದು ಕಂಬಿಯ ಮೇಲೆ ಸ್ಥಿತಿಟ್ಟು ನಾಡೆ ಸುರು
ಚಿರಮಾದ ಮೃದುವಾದ ನುಣ್ಪಾದ ಬಿಲ್ವಪತ್ರೆಯ ತಿಱಿದು ಸಂತೋಷದಿಂ ೧೮

ಕರಡಗೆಯೊಳಗೆ ತುಂಬಿ ಕೌಂಕುಳೆಡೆಯೊಳ್ ಬಯ್ತು
ಸಿರಿಯ ಕಂಬಿಯು ಪೆಗಲೊಳಾಂತು ಬರುತಿರೆ ನೋಡಿ
ಹರುಷದಿಂ ಜನನಿಕರಮೆಯ್ದೆ ಕೀರ್ತಿಸುತಿರಲ್ ಶಿವಭವನಕೆಯ್ದಿ ಮಂದು
ಭರದಿನದಱಿಂ ಮುನ್ನೆ ಸೋಮೇಶ್ವರಂಗೆ ಪೊಸ
ಪರಿಯ ಪೂಜೆಗಳನಲರ್ಗಡಣದಿಂ ಕೈಗೆಯ್ದು
ಕರಮೆ ಬಾಹತ್ತರನಿಯೋಗದೊಡಗೂಡಿ ತಾಪಸರ್ಗಳೋಲೈಸುತಿರಲು ೧೯

ಅವಸರಮಿದನವಸರಮೆಂಬುದಂ ಪರಿಕಿಸದೆ
ತವಕದೊಳೆ ಹರನ ಪೂಜಿಸುವತಿಪ್ರೇಮದಿಂ
ಶಿವಸದನಮಂ ಪೊಕ್ಕು ರಂಗಮಂಟಪದಲ್ಲಿ ವಿವಧಮನಿರಿಸಿ ಬಳಿಕ್ಕಂ
ಪ್ರವಿಮಲಾಂಬುಧಿವಾರಿಯಂ ತಂದು ಮುನ್ನೆಸೆವ
ವಿವಿಧ ಪೂಜೆಗಳನೆಲ್ಲಮನೊತ್ತಲಿಕ್ಕಿಯು
ತ್ಸವದಿಂದಮಭಿಷೇಕಮಂ ಮಾಡಿ ವಸ್ತ್ರದಿಂದಾ ದ್ರವಮನೊತ್ತಿ ಮತ್ತಂ ೨೦

ಸಿರಿಗಂಧಮಂ ಶಿವಾಂಗದೊಳಂಕೆಗೆಯ್ದು ಭಾ
ಸುರ ಬಿಲ್ವಪತ್ರದಿಂದಭ್ಯರ್ಚನಂಗೆಯ್ದು
ಕರಮೆ ತನ್ನಯ ಪವಣ ಮಹಿಷಾಕ್ಷಿ ಧೂಪಮಂ ಕೊಟ್ಟು ದೇವಾಧಿದೇವ
ಸ್ಮರಮದಾಂಬುಧಿಬಾಡಬಾಗ್ನಿ ಕಾರುಣ್ಯಸಾ
ಗರನೆ ಸೌರಾಷ್ಟ್ರಪತಿ ಸೋಮನಾಥಾ ಮನೋ
ಹರ ಧೂಪಮಂ ಸ್ವೀಕರಿಪುದೆನುತೆ ಭೂಮಿಯೊಳ್ ವ್ಯೆಯಿಕ್ಕಿ ಪೊಡಮಡುತ್ತೆ ೨೧

[1] ಗ್ಗು (ಕ)

ಕರಕಮಲಯುಗಳಮಂ ಮುಗಿದು ಪಣೆಯೊಳ್ ಸಾರ್ಚಿ
ಪಿರಿದುಮಾನಂದದಿಂದಂಘೆಯುಂಘೋ ಜಯ ಎಂತೆ
ಸರಳ ಘಂಟಾರವಮನೆಸಗುತ್ತೆ ಶಿವಗಣಾವಳಿಗಳಂ ಪಾಡುತೊಸೆದು
ಭರದೆ ಕೈಪಱಿಗುಟ್ಟಿ ಕುಣಿದಾಡುತುಂ ನೃತ್ಯ
ಹರ ದಂಡಪಾಣಿ ಮಾರ್ತಾಂಡಮಂಡಲಗಿಳನ
ವರ ವಿಧುಂತುದ ಸೋಮ ಸೋಮಾರ್ಧಶೇಖರನೆ ಸೋಮಾರ್ಕವಹ್ನಿನಯನ ೨೨

ಲಲಿತ ಸೌರಾಷ್ಟ್ರಪತಿ ಸೋಮೇಶ್ವ[1]ರಾ[1] ಪಾಪ
ಕುಲವಿಪಿನಮೆಲ್ಲಮೀ ಧೂಪಾಗ್ನಿಕೀಲದಿಂ
ಸಲೆ ಭಸ್ಮಮಕ್ಕೆನುತ್ತಾ ಧೂಪಮಂ ಸಮರ್ಪಿಸಿಯುಳಿದ ಪೂಜೆಗಳನು
ನಲಿದು ಸದ್ಭಕ್ತಿಯಿಂ ಮಾಡುತಿಂತನುದಿನಂ
ಮಲಹರನ ಪೂಜಿಸುತ್ತಿರಲೋಹಿಲಾರ್ಯನಂ
ಕಲುಷಹೃದಯರ್ ಗೌಳತಾಪಸರ್ ನೋಡಿ ಸೈರಿಸಲಾಱದಿಂತೆಂದರು ೨೩

ಪರನೊರ್ವನಿವನೆಲ್ಲಿದನೊ ಬಂದು ಸೌರಾಷ್ಟ್ರ
ಪುರದೊಳಗೆ ಪೊಸತನೆಸಗುತ್ತಿರ್ದಪಂ ಒಳಿ
ಕ್ಕಿರವದತಿವಿಸ್ಮಯಂ ಮುನ್ನಾರುಮಿವನ ಕಂಡವರಿಲ್ಲ ಕೇಳ್ದರಿಲ್ಲ
ಪಿರಿದುಮಿಂತಪ್ಪ ನಿಯಮಮನೆಲ್ಲಿಯುಂ ಕಾಣೆ
ಮರಿದಿದತಿ ಶುಷ್ಕದಾರುಗಳನಡವಿಯೊಳಿರ್ಪ
ಮರದ ಹಗಿನಂ ಪೊತ್ತುಕೊಂಡಭವಸದನಮಂ ಪೊಕ್ಕು ನಿರ್ಭೀತಿಯಿಂದಂ ೨೪

ಮುನ್ನೆ ರಚಿಸಿದ ಶಿವನ ಪೂಜೆಯಂ ನೂಂಕಿ ಮಿಗೆ
ತನ್ನ ನಚ್ಚಿನ ಪೂಜೆಯಂ ಮಾಳ್ಪನನುದಿನಂ
ಚೆನ್ನಮದರ್ಮ ಮುನ್ನೆಸೆವ ಪೂಜೆಯಂ ತೊಲಗಿಪೊಡಿವಂ ನೋಡೆ ಹರಿ ಮುಖ್ಯರು
ಮುನ್ನೆ ಶಿವನಂ ಪೂಜೆಗೆಯ್ದ ಪೂಜೆಯ ನೂಂಕಿ
ಪನ್ನಗಾಭರಣನಂ ಪೂಜಿಸುವ ಭೃಂಗಿಯೋ
ಬಿನ್ನಣದೆ ಸೆಲದಿ ಪೂಜಿಸಿದ ಪೂಜೆಯನಳಿದು ಮಗುಳ್ದು ಪೂಜಿಸುವಾನೆಯೊ ೨೫

ವರತಪೋಧನನಳ್ತಿಯಿಂ ಪೂಜೆಗೆಯ್ದುದಂ
ಭರದಿಂದೆ ನೂಂಕಿ ಪೂಜಿಸುವ ಕಣ್ಣಪ್ಪನೊ
ನಿರುತ ಮುದನೂರೊಳಗೆ ಭೂಸುರರ್ ಮುದದಿಂದೆ ವಿರಚಿಸಿದ ಮೃಡಪೂಜೆಯಂ

1 ರನೆ (ಕ)

ಕರಮಳಿದು ಪೂಜಿಸುವ ದಾಸಯ್ಯನೋ ಮನೋ
ಹರಪೂಜೆಯಂ ಕೆಡಿಸಿ ಕಲ್ಲಿಂದೆ ಪೂಜಿಸುವ
ಪರಮ ಸಾಂಖ್ಯನೊ ಬಳಿಕ್ಕವಸರಮಿದನವಸರಮೆಂಬುದಂ ಪರಿಭಾವಿಸಂ ೨೬

ತನಗಿನಿತು ಸಲುಗೆಯಂ ಕೊಟ್ಟರಾರ್ ದುಷ್ಟಂಗೆ
ಮನಸಿಜಾರಿಯ ಸದನಮಂ ಪುಗುವ ವೇಳೆಯೊಳ
ಗಿನಿತಡ್ಡಗೋಲಿಲ್ಲದೇ ಪೋಪ ಭೃಂಗಿ ವೃಷಭರ್ಕಳೋ ದೂರ್ವಾಸನೊ
ಮಿಸುಗುಮುಪಮನ್ಯುವೋ ಬಳಿಕೆ ಶಿವಗಣಪುಂಗ
ವನೊ ಇವಂ ಶಿವನನೋಲಗಿಪ ಕಾಲದೊಳೊಲ್ದು
ದನುಜರಿಪು ಶುಕನಾಸದಲ್ಲಿರ್ಪ ಶಿವಸಮಯಮಂ ಕಾದು ಭೀತಿಯಿಂದಂ ೨೭

ಶಿವನವಸರಮನೊಸೆದು ಕಾದುಕೊಂಡಜನೆಯ್ದೆ
ಸವಿನಯಮಡೆ ನುತಿಸುತ್ತೆ ಕಡೆಯ ಬಾಗಿಲೊಳಿರ್ಪ
ರವಿ ಸರಸಿಜಂಗಳಂ ಪಿಡಿದು ಹರಸಮಯಮಂ ನೋಡುತ್ತೆ ತಿರುಗುತಿರ್ಪಂ
ತವೆ [1]ವೇಳೆಯುಪ್ಪನ್ನೆವರೆಗ[1]ಮೆವೆಮೆಯಿಕ್ಕದೇ
ತವಕದಿಂ ನೋಡುತಿರ್ಪಂ ಪಾಕಶಾಸನಂ
ಪ್ರವಿಮಲ ಸುಧಾಕರಂ ಮೃಡನ ಬರವಂ ಪಾರ್ದು ಮೌಳಿಯೊಳಗಿರುತಮಿರ್ಪಂ ೨೮

ಇಂತಿವರ್ ಮೊದಲಾದ ದೇವತಾನೀಕಕ್ಕೆ
ಕಂತುಹರಸಮಯಮತ್ಯಂತ ದುರ್ಘಟಮಿಮಂ
ಸಂತತಂ ಪುಗುತಿರ್ಪನೇತರ್ಕೆ ಮಿಗೆ ಬಂದು ಶಶಿಜೂಟನಾಲಯಮನು
ಇಂತೆಂದು ಗೌಳಮುನಿಗಳ್ ನುಡಿಯುತಿಂದು ಮೊದ
ಲಿಂತಪ್ಪ ಪರದೇಶಿಗಳ್ ಶಿವನ ಗೃಹದೊಳೋ
ರಂತಿರಲ್ವೇಡ ಮುನ್ನಿನವರಲ್ಲದೆ [2]ಮತ್ತಿನರ್[2] ಪೊಕ್ಕೊಡಪರಾಧವು ೨೯

ಹರಸೇವೆಯಲ್ಲಿ ರತಿಯುಳ್ಳವಂ ಶಿವನ ಮಂ
ದಿರದ ಪೊಱಗಿರ್ದು ಭಜಿಸುತ್ತುಮಿರಲೆಂದು ನಿ
ಷ್ಠುರ ಗೌಳಮುನಿಗಳೋಹಿಲನಭವಸದನಮಂ ಪುಗಲೆಯ್ದೆ ಪುಗದ ತೆಱದೆ
ಕರಮೆ ಕಾಪಿಟ್ಟಿರುಳ್ ಪುಗದಂತೆ ದೃಢಮಾಗಿ
ಪಿರಿಯರ್ಗಳಂ ಬಲಿದು ಶೂಲಿಯಾಲಯಕೆ ಬಂ
ಧುರಹರುಷದಿಂ ಗೌಳಮುನಿಗಳೆಯ್ದಿದರಿರುಳ್ ತಮ್ಮ ಮನೆಗಳ್ಗಿತ್ತಲು ೩೦

---

1 ವೆ ಕೇಳಿಯ ಪನ್ನೆವರೆಗ (ಕ)   2 ಮಿಕ್ಕವರ್ (ಕ)

ಎಂದಿನಂದದಿನೋಹಿಲಂ ರಾತ್ರಿಯೊಳ್ ಮುದದೆ
ಬಂದು ಶಿವಭವನವಂ ಸೇರೆ ಸೋಮೇಶನಾ
ನಂದದಿಂ ತತ್ಕವಾಟಂಗಳಂ ತೆಱೆಯಲೊಳಪೊಕ್ಕು ಮುನ್ನಿನ ರೀತಿಯಿಂ
ಚಂದಮಪ್ಪಂತರ್ಚನೆಯ [1]ಮಾಡಿ[1] ನುತಿಸುತ್ತೆ
ವಂದಿಸುತೆ ಪೋಗಲನಿತಱೊಳೆ ಬೆಳಗಾಗಲಾ
ಸಂದ ಗೌಳಮುನೀಂದ್ರರೆಲ್ಲಂದು ತತ್ಪ್ರಪಂಚಮನಱಿದು ಬೆಱಗಾದರು ೩೧

ಶಿವಗೃಹದ್ವಾರವಂ ತೆಱೆದರಾರೀತಂಗೆ
ಸವಿನಯದಿನಭವನೇ ತೆಗೆದನೆಂಬೊಡೆ ಮುನ್ನೆ
ಭವರಹಿತ ದಾಸಿಮಯ್ಯಂಗೆ ಮುದನೂರೊಳಗೆ ರಾಮೇಶನಳ್ಕಱಿಂದಂ
ತವೆ ಕವಾಟಂ[2]ದೆಗೆ[2]ದನಂದು ಕಲ್ಯಾಣದೊಳ್
ವಿವಿಧದಿಂ ತ್ರಿಪುರಾಂತಕಂ ಕಿನ್ನರಯ್ಯಂಗೆ
ಭುವನವಱಿಯಲ್ ಕದಂದೆಗೆದನತಿವಿಸ್ಮಯಂಬಡೆ ಲೋಕವಿತತಿ ಸತತಂ ೩೨

ತಿರುವ[3]ಡ[3]ಕ್ಕಡೆಯೆಂಬ ಪಟ್ಟಣದೊಳತ್ಯಂತ
ಭರದಿಂದ[4]ವೊಡೆ[4]ಯ ಪಿಳ್ಳೈಗೆ ಕದಂದ[5]ಱೆ[5]ದನಾ
ಪುರಹರಂ ಬ್ರಹ್ಮೇಶ್ವರಂ ಮತ್ತಮಾ ನಿಂಬಿಯಕ್ಕಂಗೆ ಪರಮೇಶ್ವರಂ
ಹ[6]ರಿಸ[6]ದಿಂದೇಳ್ವಗಲ್ವರಮೆಯ್ದೆ ತನ್ನ ಭಾ
ಸುರ ಪುರದ ಬಾಗಿಲಂ ತೆಱೆದನಾ ಗೊಲ್ಲಳಂ
ಗುರುತರಪ್ರೇಮಧಿಂ ಶಂಭು ಕೈಲಾಸದುರ್ಗದ ಕವಾಟಂದೆಗೆದನು ೩೩

ಮ[7]ತ್ತಿನಿ[7]ನ್ನೊರ್ವಂಗೆ ಪರಮೇಶ್ವರಂ ಕದವ
ನೊತ್ತಂಬದಿಂದೆಗೆದನೆಂಬುದದು ತೊದಳೆಯ್ದೆ
ಸುತ್ತೆನೋ ಕ[8]ಪ[8]ಟವೃತ್ತಿಯಿನಿವಂ ರಾತ್ರಿಯೊಳ್ ಬಂದು ಶಿವಸದನದೊಳಗಂ
ಚಿತ್ತಮಲರುತೆ ಪೊಕ್ಕು ಮತ್ತೆಂದಿನಂದದಿಂ
ಚಿತ್ರಜಾರಿಯನಲ್ತ್ರಯಿಂ ಪೂಜೆಗೆಯ್ದು ತಾ
ನೆತ್ತಪೋದನೊ ದಿಟಂ ಬಿಡದಿಲ್ಲಿಗೆಯ್ದುವುದು ಸತ್ಕಾರ್ಯಮಲ್ತಜಸ್ರಂ ೩೪

ಸಿತಗ[9]ನಿ[9]ವಸಂ ಬಳಿಕ್ಕಿಲ್ಲಿಂದೆ ಪೊಱಮಡಿಪು
ದತಿಕಾರ್ಯಮಕ್ಕುಮೆನುತಾ ಗೌಳಮುನಿಗಳು
ನ್ನತಬುದ್ಧಿಯಿಂ ಮುಂತಣಂಗೆಯ್ದರೀತಂಗೆ ಭಿಕ್ಷಮಂ ನೀಡದಿರಲು

---

1 ನೆಸಗಿ (ಕ) 2 ತೆಗೆ (ಕ) 3 ರ (ಕ) 4 ಮತೆ (ಕ) 5 ಗೆ (ಕ) 6 ರುಷ (ಗ) 7 ತ್ತಮಿ (ಕ) 8 ವಾ (ಕ) 9 ಶಿ (ಗ)

ಧೃತಿಗೆಟ್ಟು ತಾನೆ ಪೋದಪನಿದೇ ಸನ್ಮತಂ
ಹಿತಕಾರ್ಯವೆಂದು ಬಗೆದಾ ಮುನಿಗೆ[1]ಳೊಗ್ಗಾಗಿ[1]
ಶಿತಿಕಂಠಸದ್ಭಕ್ತನೋಹಿಲಯ್ಯಂಗೆ ಭಿಕ್ಷನುನಿಕ್ಕಲೀಯದಿರಲು ೩೫

ಇದಱ ವೃತ್ತಾಂತವೆಲ್ಲಮನೋಹಿಲಂ ತಿಳಿದು
ಮದನಾರಿಭಕ್ತರ್ಕಳೊಲ್ದು ಮುನ್ನುದಕಮುಂ
ವಿದಿತ ದಳಕಣಪವನ ಕಂದಮೂಲಂಗಳಂ ಭಕ್ಷಿಸಿ ತಪಂಗೆಯ್ವುತೆ
ಹೃದಯಶುದ್ಧದಿನೀಶನಂ ಭಜಿಸಿದರ್ ಗಡಾ
ಪದೆದಾಸುಮಂತೆ ಪವನಾಹಾರಮುಂ ಕೊಂಡು
ಮುದದಿನೀ ವ್ರತಮನೆಯ್ದಿಪೆನೆನ್ನ ಹರಣಮಿಾಯೊಡಲೊಳಿರ್ಪನ್ನೆವರೆಗಂ ೩೬

ಪಿರಿದು ಭುಕ್ತ್ಯರ್ಥಮಾಗೀ ವ್ರತಮನಿಕ್ಕಿದೊಡೆ
ಪರಮೇಶ್ವರಂ ಹಾಸ್ಯಮಂ ಮಾಡನೇ ಎನುತೆ
ಭರದಿಂ ದೃಢತ್ವಮಂ ಕೈಕೊಂಡು ಮುನ್ನಮಿಾತನು ಮಾತೃಕಾಸ್ತನ್ಯದಿಂ
ಪರಿವರ್ಧಿಸದೆ ಬಳಿಕ್ಕಿನಿತು ನವನೀತಮಂ
ಹ[2]ರಿಸ[2]ದಿಂದುಂಡು ಬಳೆಯದೆ ಮತ್ತಮಾವಗಂ
ಪರಿಮಿತಾಹಾರದಿಂ ದಿನದಿನದೊಳಭಿವೃದ್ಧಿವಡೆಯದೇ ತಿಳಿದುನೋಡೆ ೩೭

ಮನದೊಳಶನದ ಮೇಲಣಿಚ್ಛೆ ಕಿಡಲುಣಿಸಿಚ್ಛೆ
ತನಿ[3]ಕೆ[3]ಟ್ಟುಪೋ[4]ಕು[4]ಮಾ ಚಿತ್ತದೊಳಶನೇಚ್ಛೆ
ವಿನಯದಿಂ ತೋಱಲುಂಬಿಚ್ಛೆ ತೋಱುಗುಮಂತೆ ಮನಮೆಂತು ಪರಿಣಾಮಿಕುಂ
ತನು[5]ವಂ[5]ತೆ ಕಾಮಿಸುಗುಮಲ್ಲದೇ ಬೇಱತೊಂದ
ನಿನಿಸ[6]ನೀತನು[6] ಬಯಸದದಱಿನೆನ್ನಯ ಮನದೊ
ಳನಯಂ ತೋಱುತಿರ್ಕುಂ ಭಿಕ್ಷೆಯುಂ ಮಾಳ್ಪುದಂ ಬಿಡಲ್ವೇಳ್ಕುಮೆಂದು ೩೮

ಎನ್ನ ಮನದೊಳಗಿರ್ದುದಂ ಸೋಮನಾಥನೇ
ಮುನ್ನಱಿದು ಬಿಡಿಸಿದಂ ಸೌರಾಷ್ಟ್ರಪತಿಯ ಸಂ
ಪನ್ನ ಕೃಪೆಯೆನ್ನ ಮೇಲುಂಟೆಂಬುದಂ ತಿಳಿದೆ ನಾನಿಂದು ಕೃತಕೃತ್ಯನು
ಸನ್ನಿದಂ ಖಳರೆಸಗಿದಾ ಕಜ್ಜಮೇ ಎನಗೆ
ನನ್ನಿಯಿಂ ಹಿತಮಾಯ್ತು ತಿರಿದುಂಬ [7]ಕೋ[7]ಟಲೆಯ
ದುನ್ನಿಸದಮಂತಡಂಗಿತು ಬಳಿಕ್ಕಿನ್ನವರ್ ಮಾಳ್ಪ ಕಜ್ಜಮದಾವುದು ೩೯

1 ಳೊಂದಾಗಿ (ಗ) 2 ರುಷ (ಗ) 3 ಗೆ (ಗ) 4 ಗು (ಕ) 5 ಮಂ (ಗ) 6 ನಿತ್ತನು (ಗ) 7 ಮೋ (ಕ)

ಮುನಿದಸಿಯುಕಲ್ಲ ಮಜಸಲ್ ಮದುವೆ ಕೆಡುವುದೇ
ಬಿನ್ನಗರೀ ಗೌಳಮುನಿಗಳ್ ತಿರಿವುದಂ ಬಿಡಿಸಿ
ಘನಭಕ್ತಿ ಕಿಡುವುದೇ ಉದರಾರ್ಥದಿಂ ಭಿಕ್ಷಕೆಯ್ದ ವೇಳ್ಕೆಂದು ನೆನೆಪ
ಮಿನುಪ ನೆನಪೆಯ್ದೆ ಶಿವನಂ ನೆನೆವುದಕ್ಕು ಮೇ
ಮನೆಮನೆಯನುಂತೆ ತಿರುಗುವುದು ಶಿವಭವನವುಂ
ವಿನಯದಿಂದಂ ಪ್ರದಕ್ಷಿಣಮನೆಸಗಿದುದಕ್ಕು ಮೇ ಸಂತತಂ ಭಾವಿಸೆ ೪೦

ಪಿರಿದುಮಾತ್ಮಾರ್ಥದಿಂದನ್ನಮಂ ಯಾಚಿಪುದು
ಗಿರಿಶನಂ ಸದ್ಭಕ್ತಿಯುಂ ಬೇಳ್ಪುದಪ್ಪುದೇ
ಭರದೆ ಮನೆಮನೆಗೆಯ್ದಿ ಭಿಕ್ಷಮುಂ ತರ್ಪುದೀಶಂಗೆ ನವಪುಷ್ಪಂಗಳಂ
ತ್ವರಿತದಿಂ ತರ್ಪಂದಮಪ್ಪುದೇ ತ[1]ದ್ಭ[1]ಕ್ತಿ
ಹರಪದಧ್ಯಾನಪೀಯೂಷರಸದಿಂದೆಸೆವ
ಪರಮಸದ್ಭಕ್ತಿಯಪ್ಪುದೆ ಲೋಕಸಂತತಿಯೊಳಾವಗಂ ತಿಳಿದು ನೋಡೆ ೪೧

ಸತತ ಬಾಹ್ಯಾಂತರಾರ್ಪಿತ ಸಾವಧಾನದಿಂ
ಹಿತಸನ್ನಿಹಿತ ಜನಿತಸೌಖ್ಯಮಂ ಕಡುವ ವಿ
ಶ್ರುತಮಾದ ಸತ್ಪ್ರಾಣಲಿಂಗಪ್ರಸಾದಪ್ರಶಸ್ತಾನುಭವಮೆಯ್ದದ
ಮತಿಹೀನಮಾನವಂ ತಿರಿದುಂಬನಲ್ಲದೇ
ವಿತತ ಶಿವಭಕ್ತಿಯುಳ್ಳವನೆಯ್ದೆ ತಿರಿವನೆ
ಸಿತಗಿರಿವರೆಸಗಿದುದೆ ಲೇಸಾಯ್ತೆನುತ್ತೆ ದರಹಸಿತಮುಖಕಮಲನಾಗಿ ೪೨

ನುಡಿದನೀ ದೇಹರಕ್ಷಾರ್ಥಮಾಗಾವುದಂ
ಪಡೆದವನ ಹರಣಮಪ್ಪು ತತ್ವಮಂ ನೆಱೆಪಡೆವು
ದೊಡನೆ ಬಿಡದಾವುದಂ ಸೇವಿಪನವಂಗೆ ಸಾರ್ವುದು ಸುಪ್ರಸಾದಸೌಖ್ಯಂ
ಸಡಗರದಿನಾ[2]ವುದಂ[2] ಭೋಗಿಪನವಂಗೆ ಮು
ತ್ತಡಿಗಡಿಗೆ ಬುದ್ಧಿ ನಿರ್ಮಲವಾಗಿ ತೋಱುಗುಂ
ಕಡುಪಿನಿಂದಾವುದಂ ಭುಂಜಿಸುವನವನ ಮನದೊಳಗೀಶನೊಸೆದಿರ್ಪನು ೪೩

ಆವುದಂ ಭೋಗಿಪನವಂ ಪೂಜ್ಯನವನಿಯೊಳ
ಗಾವುದಂ ಸೇವಿಸುವನವನ ಮನ[3]ವ[3]ಭವಮುನ
ವಾವುದಂ ಸವಿವನವನೇ ಪ್ರೌಢನುನ್ನತಂ ಕೋವಿದಂ ಪರಿಭಾವಿಸೆ

---

[1] ದ್ಭ (ಕ) [2] ವಗಂ (ಗ) [3] ನ (ಗ)

ಆವುದಂ ಭುಂಜಿಸನವಂ ಪ್ರಸಿದ್ಧಂ ಮತ್ತ
ದಾವುದಂ ಭಕ್ಷಿಸುವನನನೆ ಪುಣ್ಯಶ್ಲೋಕ
ನಾವುದಂ ಸ್ವೀಕರಿಪನವನೆ ಸದ್ಭಕ್ತನೆನಿಪಂ ಭಕ್ತವಿತತಿಯೊಳಗೆ ೪೪

ಆ ವಿಮಲಸನ್ಮುಕ್ತಿಮೂಲ್ಯಮನಮೂಲ್ಯಮಂ
ವಾ[1]ವದೂ[1]ಕಾದಿ ರಿಪುಹೃತ್ಛಲ್ಯಮಂ ದತ್ತ
ಕೈವಲ್ಯಮಂ ಪ್ರಮಥ[2]ಲಾ[2]ಲ್ಯಮಂ ಕಲ್ಯಾಣರೂಪಮಂ ನೈರ್ಮಲ್ಯಮಂ
ಭಾವಿಪೊಡೆ ಚಿತ್ಸುಧಾಕುಲ್ಯಮಂ ಶಿವಭಕ್ತಿ
ಸಾವಧಾನಾನುಕೂಲ್ಯಮನಾವಗಂ ಪುದದೆ
ಭಾವಜಾಂತಕನ ನಿರ್ಮಾಲ್ಯಮನೆ ಭಕ್ಷಿಸುತೆ ಸೇವಿಪಂ ಶಂಭುಪದನಮಂ ೪೫

ಎಂದು ನಿಶ್ಚೈಸಿ ಮನದೊಳ್ ಮೊದಲ ವಾಸರದೊ
ಳಿಂದುಧರಪೂಜೆಯನೊಡರ್ಚಿ ಕೆಲಕೊತ್ತಿಟ್ಟ
ಸಂದ ನಿರ್ಮಾಲ್ಯಮಂ ಕಳಕೊಂಡು [3]ಸುಪ್ರ[3]ಸಾದವಿದೆಂ[4]ಬ[4] ಸದ್ಭಾವದಿಂ
ಮುಂದುವರಿದೋಹಿಲಂ ಭಕ್ತಿಯೊಡಗೂಡಿ ಸಾ
ನಂದದಿಂ ಸೇವಿಸುತ್ತೆಂದಿನಂದದೆ ಶಿವನ
ಚಂದಸಡೆದರ್ಚಿಸುತ್ತಿರಲದಂ ಗೌಳತಾಪಸರಱಿಂದು ಕುಪಿತರಾಗಿ ೪೬

ನುಡಿದರಿಂತೆಂದು ಭಿಕ್ಷವನಿಕ್ಕದಿರಲಿಪಂ
ಕಡುಪಿನಿಂದೊಂದು ಬುದ್ಧಿಯನೆಣಿಸಿ ಪತ್ರಿಗಳ
ನಡಿಗಡಿಗೆ ಭಕ್ಷಿಸುತೆ ಬರ್ದುಕಿರ್ದಪಂ ಬಳಿಕ್ಕಾ ಪತ್ರಿಗಳನೆಲ್ಲಮಂ
ಸುಡಲಿವಂ ತಾನೆ ಪೋದಪನೆಲ್ಲರನುಮತಂ
ಕಡೆಗಿದೇ ಎನುತೆ ಪತ್ರಿಗಳನೆಲ್ಲಂ ಕೂಡಿ
ಕಡುತವಕದಿಂ ಸುಟ್ಟು ಬೂದಿಯಂಮಾಡೆ ಕಂಡದನೋಹಿಲಂ ಹ[5]ರ್ಷಿ[5]ಸಿ ೪೭

ಮನದೊಳಿಂತೆಂದು ನಿಶ್ಚೈಸಿದಂ ಮುನ್ನೆ ಸೋಂ
ಪಿನ ಪರಮನಿರ್ಮಾಲ್ಯಮಿಾಗಳೊಸೆದೆನ್ನ ಸೈ
ಪಿನ ಪೆರ್ಚಿನಿಂದೆ ಸಿತಭಸಿತಮಾದುದು ನೋಡೆ ಶಿವನ ಕೃಪೆ ತಾನೆಂತುಟೊ
ಮುನಿದೊಡೆಯಲರಳೆವಾಸಿನ ಮೇಲೆ ಬಿಳ್ದ ಫಾಂ
ಗೆನಗಾದುದುಪ್ಪೊಕ್ಕು ಭೂಮಿಯೊಳಗಿರ್ಮಡಿಸಿ
ದನುವಾಯ್ತು ಕೈ[6]ತ[6]ಪ್ಪಿ ತುಪ್ಪ ಪರಮಾನ್ನ ಮಧ್ಯದೊಳೊಕ್ಕ ತೆಱನಾದುದು ೪೮

---

1 ವುದೂ (ಕ) 2 ಬಾ (ಕ) 3 ತತ್ಪ್ರ (ಗ) 4 ದು (ಗ) 5 ರುಷಿ (ಕ) 6 ದ (ಗ)

ಮಿಗೆ [1]ತೆಲ್ಲಿ[1]ಗಂಗೆಳ್ಪು ಬೆಳೆದಂದಮಾಯ್ತು ಘ
ನ್ಮಗೆ ಗೋವುಗಳ್ ನೆನೆದ ತಾಣದೊಳ್ ಪುಲ್ಮೊಳಕೆ
ಯೊಗೆದ ತೆಱನಾಯ್ತು ಮೀಯಲ್ ಬಯಸುತಿರ್ಪ ತತ್ತೀರ್ಥಮಿದಿರ್ವಂದ ಪಾಂ[2]ಗಿಂ[2]
ನೆಗಳ್ದ ಸೋಮೇಶ್ವರನ ಕೃಪೆಯಿಂದ[3]ಮೆನೆ[3]ಗಾಯ್ತು
ಬಗೆಯಲೆನ್ನಯ ವರ್ತನಕ್ಕೆ ತಕ್ಕಶನಮನೆ
ಸೊಗಸಿನಿಂ ಸೌರಾಷ್ಟ್ರಪತಿ ಸಮೆದುಕೊಟ್ಟನೆನುತೊಸೆದು ಸಂತಸಪಟ್ಟನು ೪೯

ಸರಳ ಶಾತಾತಪಸ್ಮೃತಿಯೊಸೆದು ಪೇಳ್ದ ಭಾ
ಸುರಮಾದ ಭಸ್ಮಾಶನಂ ಭಸ್ಮಶಯ್ಯೆಯುಂ
ದೊರಕಿತೆನಗಿಂದು ಸಲೆ ವೃದ್ಧ ಶಾತಾತಪಸ್ಮೃತಿಯುಸುರ್ದ ಮಾಳ್ಕೆಯಂತೆ
ಪರಮ ಭಸ್ಮಚ್ಛನ್ನತೆಯುಮೆಯ್ದಿತೆನಗೆ ಸುಂ
ದರ ಯಜುರ್ವೇದಂ ತ್ರಿಯಾಯುಷಮೆನುತ್ತೆ ಬಂ
ಧುರನಾದದಿಂ ನುಡಿದುದುಂ ಸಾರ್ದುದೆನಗೆ ಸೌರಾಷ್ಟ್ರದೊಡೆಯನ ಕರುಣದಿಂ ೫೦

ಕಾಲಾಗ್ನಿರುದ್ರೋಪನಿಷದೆಂದ ರೀತಿಯಿಂ
ಮೂಲಮಾಯ್ತೆನಗೆ ಭಸ್ಮಪ್ರಶಂಸನ[4]ಮೆ[4]ಯ್ದೆ
ಮೇಲೆ ಜಾಬಾಲ ಕೈವಲ್ಯ ಶಾಖಾದಿಗಳ್ ಪೇಳ್ದ ಭಸಿತೋತ್ಕರ್ಷವು
ಲೀಲೆಯಿಂ ಕೈಗೂಡಿತೆನಗಿಂದು ಸಂತತಂ
ಕಾಲಹರ ಕೃಪೆಯಿಂದೆ ಪರಮಶೈವಸ್ಕಾಂದ
ಮಾ ಲಲಿತ ವಾಯುವೀಯಂ ಬ್ರಹ್ಮಕೈವರ್ತನಂ ವಾಮನಂ ಭಾವಿಸೆ ೫೧

ಗರುಡ ಮಾರ್ಕಂಡೇಯ ಭಾಗವತ ಮತ್ಸ್ಯಂಗ
ಳುರು ಭವಿಷ್ಯದ್ಬ್ರಹ್ಮವೈಷ್ಣವಾಗ್ನೇಯಂಗ
ಳುರುತರ ಬ್ರಹ್ಮಾಂಡ ಕೂರ್ಮ ಪದ್ಮಂಗಳಾ ಲೈಂಗ್ಯ ವಾರಾಹಂಗಳು
ನಿರುತಮಷ್ಟಾದಶಪುರಾಣಂಗಳೆನಿಸುಗುಂ
ಪಿರಿದುಮಿವಱೊಳ್ ಪೇಳ್ದ ಭಸಿತೈಕ ಸೇವೆಯೇ
ದೊರಕಿತೆನ್ನಯ ಜನ್ಮ ಸಫಲಮಾಯ್ತಾಂ ಬರ್ದುಂಕಿದೆನೆನುತೆ ಸಂತೋಷದಿಂ ೫೨

ಸಿತಭಸಿತಮಂ ದೇಹದೊಳಗೆ ಲೇಪಿಸಿಕೊಂಡು
ನುತ ವಿಭೂತಿಯನೊಸೆದು ಸೇವಿಸುತ್ತೋಹಿಲಂ
ಸತತಮಾ ಭಸ್ಮದೊಳ್ ಪಟ್ಟಿರುತ್ತೀಶನಂ ಭಜಿಸುತಿರಲೆಂದಿನಂತೆ

---

1 ತೈಲಿ (ಕ) 2 ಗು (ಗ) 3 ವೆಮ (ಗ) 4 ನೆ (ಕ)

ಸಿತಗರಪ್ಪಾ ಗೌಳತಾಪಸರ್ ಕಂಡಿದಂ
ಕ್ಷಿತಿಯೊಳಾವೆಲ್ಲಿಯುಮಂ ಕೇಳ್ದಱಿಯೆವೆನುತೆ ಮ
ತ್ತತಿಶಯದೆ ತಮ್ಮೊಳಿಂತೆಂದು ನುಡಿದರ್ ಭಸ್ಮಭೋಜನಂ ಕರಮೆ ಚೋದ್ಯಂ ೫೩

ಭಸಿತಮಂ ಭಕ್ಷಿಸಿ ಬದುರ್ಕಿರ್ಪುದಿದು ಪೊಸತು
ಮಿಸುಪಮರ್ದಿನ ಬಲ್ಪೊ ಮಂತ್ರತಂತ್ರಂಗಳಿಂ ।
ದೆಸೆವ ಸಾಮರ್ಥ್ಯಮೋ ಅಭ್ಯಾಸಯೋಗಸಾಧನೆಯೊ ಕಪಟಾಚಾರಮೊ
ನಿಸದಮೊರ್ವರುಮಱಿಯದಂತನ್ನಮಂ ತಂದು
ಮುಸಕದಿಂದೀವನೊರ್ವನುಮುಂಟೊ ಭೇದಿಸ
ಲ್ಕಸದಳಮೆನುತ್ತೆ [1]ಸೋಡಂಬಾಡಬಾ[1] ಮುನಿಗಳತಿವಿಸ್ಮಯಂದಾಳುತೆ ೫೪

ಬಳಿಕಮಿಂತೆಂದರೀಶಾರ್ಚನಾಸಕ್ತರ್ಗೆ
ತಿಳಿಯೆ ನಿದ್ರಾಹಾರ ಭಯಸಂಕುಳಂಗಳುಂ
ತೊಳಗುವ ವಿಕಾರಂಗಳುಂ ಪೊರ್ದವೆನುತಿರ್ಪರೆಯ್ದೆ ಸತ್ಪುರುಷರನಿಶಂ
ತಿಳಿದು ನೋಡಲ್ಕಿದೇ ಸತ್ಯಮೆನುತವರೊಸೆದು
ಘಳಿಲನೇನಂ ನುಡಿಯದೇ ಮಟ್ಟಮಿರಲಿತ್ತ
ಮಳಹರನ ಭಕ್ತನೋಹಿಲನೊಂದು ಪಗಲೆಂದಿನಂತರಣ್ಯಕ್ಕೆ ಪೋಗಿ ೫೫

[2]ಸಿರಿಖಂಡ[2] ಸೆಕ್ಕೆಗಳನಾಯ್ದು ಪತ್ರೆಯ ಕೊಯ್ದು
ಭರದೆ ಗುಗ್ಗುಳಮನೊದಗಿಸಿ ಕಂಬಿಯಿರ್ದೆಸೆಯೊ
ಳಿರದವಂ [3]ತಿಂ[3]ಬಿ ಪೆಗಲೊಳ್ ತಾಳ್ದು ವೇಗದಿಂ ಬರುತಿರಲ್ಕಡವಿಯಲ್ಲಿ
ಪಿರಿದು ಕೂರಿತ್ತಾದ ದಸಿ ತಾಗಿಯುಂಗಾಲ
ಮರಳೆ ಮೇಗಾಲ್ಗೆ ಮೊನೆದೋಱಿ ತತ್ಕ್ಷಣದಲ್ಲಿ
ಚರಣದ ನರಂಗಳೆಲ್ಲಂ ಸುರ್ಕೆ ಕಾಲ್ನೀಡಿ ನಡೆಯಲನುವಲ್ಲದಿರಲು ೫೬

ಧೃತಿಕೆಡದೆ ಮನದ ಬಲ್ಪುಡುಗದೇ ಪಿಮ್ಮಡದೊ
ಳತಿಧೈರ್ಯದಿಂ ನಡೆದು ಪೋಪನದು ನೋಯೆ ಮ
ತ್ತತಿಶಯದೆ ತುದಿಗಾಲೊಳಿನಿತುದೂರಂ ಪೋಪನದು ನೋಯಲೋರೆಯಡಿಯಿಂ
ಮತಿವಿಕಳನಾಗದಡಿಯಿಡುತೆ ನಡೆಯುತ್ತಿರಲ್
ಶಿತಿಕಂಠನೀಶ್ವರಂ ಕರುಣಾಕರಂ ಭಕ್ತ
ವಿತತಿ ಯೋಗಕ್ಷೇಮಕರನೆನಿಪ ಸೌರಾಷ್ಟ್ರಸೋಮೇಶ್ವರಂ ಶಂಕರಂ ೫೭

---

[1] ಮುಸುಡಂ ಬಾಡಲಾ (ಕ) [2] ಶಿತಿಕಂಠ (ಕ) [3] ತುಂ (ಕ)

ಹ[1]ರಿಸ[1]ದಿಂ ಶಬರವೇಷಂದಾಳ್ದು ಬಂದಪಂ
ಹರಭಕ್ತಚಿಹ್ನಂಗಳಂ ತೋಱುತಿನಿಸಿನಿಸ
ನುರುಪಿಹಿತವಸ್ತ್ರದೊಳ್ ಪುದುಗಿರ್ದ ಶೊಳಪ ಮಾಣಿಕದಂತೆ ಬೂದಿ ಪೊರೆದ
ಸುರುಚಿರಾನಲನಂತೆ ಕಾರ್ಮುಗಿಲ್ ಮುಸುಕಿರ್ದ
ಸುರನತ್ನ[2]ದಂ[2]ತೆ ಶುಕ್ತ್ಯಾವರಣದೊಳಗಿರ್ದ
ಸರಳ ಮೌಕ್ತಿಕದಂತೆ ಶೈವಾಲಸಂಚ್ಛನ್ನ ಗಂಗಾಂಬುವಿರವಿನಂತೆ ೫೮

ಮಿಗೆ ಶಬರಚರ್ಮಾವೃತಂ ದಲಾಗಲ್ ಪಾದ
ಯುಗದ ಪಜ್ಜೆಗಳನಾಘ್ರಾಣಿಸುತ್ತೆಯ್ದಿವರೆ
ನೆಗಳ್ದ ವೇದಶ್ವಾನನಿಕರಂಗಳಂದು ಕಾಮೋದ್ರೇಕದಿಂದವೊಸೆದು
ಮಿಗರೂಪ[3]ನೆಯ್ದಿ[3] ಕೊರ್ಬಿದ ಬರ್ಮನಂ ನೋಡಿ
ಸೊಗಯಿಸುವ ಸರಲಿಂದೆ ತಲೆಪಱಿಯಲೆಚ್ಚು ತೊ
ಟ್ಟಗೆ ಬಿಸುಟ ಶಬರೇಶ್ವರನೊ ಇಂದ್ರಕೀಲದೊಳ್ ಶಬರನಾಗೆಸೆದ ಶಿವನೊ ೫೯

ನಿಸದಮುದ್ರಿಕ್ತಸದ್ಭಕ್ತಿಯುಕ್ತಂ ಕರಂ
ಮಿಸುಪ ಹೊನ್ನಯ್ಯನೀಶ್ವರಭಕ್ತಪುಂಗವಂ
ಮುಸಕದಿಂದುರ್ಬುತ್ತೆ ತುಂಗಭದ್ರೋದಕಮನಳ್ತಿಯಿಂ ಪೊತ್ತುಕೊಂಡು
ಅಸವ[4]ಸದೆ[4] ಬಂದು ಮಿಗೆ ವಾಸಿತಂಗೆಯ್ದು ರಾ
ಜಿಸುವ ಶೈತ್ಯಾಂಬುವಿಂ ಪುಲಿಕರಾಧೀಶ್ವರಂ
ಗೊಸೆದು ಸೋಮೇಶಂಗೆ ಮಜ್ಜನಂಮಾಳ್ಪನಿದು ತನಗೆ [5]ಸುವ್ರ[5]ತಮಾಗಲು ೬೦

ಬಿಡದಿಂತು ತೊಂಬತ್ತುಬರಿಸಮಿಾ ನೇಮಮಂ
ನಡೆಯಿಸುತ್ತಿರ್ದನಾಂ ವೃದ್ಧನಾದೆಂ ಬಳಿ
ಕ್ಕಡಿಯಿಡಲ್ ಸತ್ವಮಿಲ್ಲೆಂದು ಬಿಟ್ಟಿದುಮಿಲ್ಲ ಮನದ ನೆಱೆ ಬಲ್ಪಿನಿಂದಂ
ಕಡಗಿ ಮತ್ತೊಂದುದಿವಸಂ ತುಂಗಭದ್ರೆಯಿಂ
ಜಡಿವ ಪೂರ್ಣವಿವಥಂಬೊತ್ತುಬರುತಿರೆ ಮಾರ್ಗ
ದೆಡೆಯೊಳಿರ್ದೊಂದು ಕುಲ್ಯಂ ದಾಂಟೆ ವಿವಥದಾ ಭಾರದಿಂ ನಡುಮುಱಿಯಿತು ೬೧

ಅನಿತಱೊಳಗಾ ಕಂಬಿ ಬೀಳದಂತೆವೊಲೆಯ್ದೆ
ಮಿನುಪ ಪೆಗಲೊಳಗೌಂಕಿಕೊಳುತೆ ಸೋಮೇಶ್ವರಾ
ತನುವಿನೊಳಗಸುವುಳ್ಳವರೆಗಮಿಾ ವ್ರತಮನಾಂ ಬಿಡೆನೆನುತ್ತೆಳ್ವದರ್ಕೆ

---

1 ರುಷ (ಗ) 2 ನಂ (ಕ) 3 ಮೆಯ್ದಿ (ಕ) 4 ಸಂ (ಕ) 5 ಸೂರ (ಕ)

ಎನಸುಮುಜ್ಜುಗಗೆಯ್ಯಲೊಡನೆ ಪುಲಿಗೆಱಯರಸ
ನನಿತಱೊಳ್ ಶಬರವೇಷಂದಾಳ್ದು ಬಂದು ಘ
ಮ್ಮನೆ ಕಂಬಿಯಿಂ ಬೀಳದಂತೆತ್ತಿದಾ ಶಂಕರನು ಮತ್ತಮದುಮಲ್ಲದೆ ೬೨

ಮಿಸುಪ ಚೆಂಚಿತಿಯರೊಡಗೂಡಿ ಶಬರಾಕೃತಿಯೊ
ಳೆಸೆದಿರ್ಪ ಮಲ್ಲಿಕಾರ್ಜುನನೊ ಮತ್ತಲ್ತು ಮೃಗ
ವಿಸರಮಂ ಬೇಂಟೆಯೊಳ್ ಕೊಂದು ಶಿವಪುರಿಗೆಯ್ದಿಸುವ ತೆಲುಗಜೊಮ್ಮಯ್ಯನೊ
ಒಸೆದು ತಿರುಕಾಳಹಸ್ತಿಯೊಳಾವಗಂ ವಿರಾ
ಜಿಸುವ ಶಬರಾಕೃತಿಯ ಕಣ್ಣಪ್ಪನೋ ಅಲ್ತು
ಪುಸಕ ಮಿಗೆ ಶಿವರಾತ್ರಿ ಫಲದೆ ಶಿವಪುರಮೆಯ್ದಿದಾ ಶಬರನೋ ತಾನಿವಂ ೬೩

ಎನಲೆಸೆಮತೋಹಿಲನ ಪೊರೆಗೆಯ್ದಿ ನುಡಿದನೆಲೆ
ಮನುಜ ನಿನ್ನಂಗಾಲೊಳಗೆ ನೆಟ್ಟ ದಸಿಯನಾ
ನಿನಿಸು ನೋಳ್ಪೊಡೆ ಭಯಂ [1]ತೋ[1]ಱುತಿದೆಯಕ್ಕಟಾ ನೀನೆಂತು ಸೈರಿಪೆಯಿದಂ
ನಿನಗಡಿಯಿಡಲ್ ಬಾರದೆಂತು ಪೋದಪ ನಿನ್ನ
ಮನದ ಬಲ್ಪೆಂತುಟೋ ಇಂತುಟಂ ಕಂಡಱಿಯೆ
ನೆನಸುಮಾತ್ಮಾಭಿಘಾತಕಮೊಳ್ಳಿತಲ್ತು ನಿನಗೇನನಿತ್ತಪನಭವನು ೬೪

ಛಲವ ನುಡಿಗೀ ದೋಷಮಂ ಕಾಣಲಕ್ಕುಮೋ
ನೆಲದ ಮೇಲಿಳುಪು ಕಂಬಿಯನಡಿಯ ದಸಿಯನಂ
ತಲಘು ಧೈರ್ಯದೆ ಕಿಳ್ತಡಂ ಬೇಡ ನೀನಂಜುವೊಡೆ ಕಾಲನೀಡಿತ್ತಲು
ಸಲೆ ನೋಯದಂತೆ ಕಿಳ್ತಿಕ್ಕುವೆಂ ನೋಡೆನುತೆ
ನಲಿದೆಳ್ತರುತ್ತಿರಲ್ ಮುಟ್ಟಬೇಡೆಲೆ ಶಬರ
ತೊಲಗು ನಿನ್ನೊಳಗೀಶಲಾಂಛನಂ ತೋಱುತಿದೆ ಬಱುವೆಸರ ಶಬರನಲ್ತು ೬೫

ಹರಭಕ್ತಿತತ್ಪರಂ ನೀನೆನ್ನ ಕಾಲ್ಮುಟ್ಟಿ
ಪಿರಿದುದೋಷಂ ಶಿವನ ಕಂಬಿಯಂ ಸೋಂಕುವೀ
ಕರದಿನಾಂ ಕಾಲನಂಟುವದತಿದ್ರೋಹವೀ [2]ವಿವಿಧತೆಯ[2]ನವನಿಯಲ್ಲಿ
ಇರಿಸುವುದದುಂ ಪಾತಕಂ ಬಿಯದ ನೀಂ ಪೋಗು
ಕರಮೆನಗೆ ನೋವೇನುಮಿಲ್ಲೀಶ್ವರಾಲಯಕೆ
ಭರದಿನೀಗಳ್ ಪೋಪೆನೆನೆ ಕಿರಾತಂ ಮಗುಳ್ದು ನುಡಿದನೋಹಿಲನನೊಸೆದು ೬೬

---

[1] ದೋ (ಗ) [2] ವಿವಧಮು (ಟ)

ಭಲರೆ ಸಾಹಸಶಿರೋಮಣಿಯೆ ನಿನ್ನಯ ಕಾಲ
ನಲಿದು ಮುಟ್ಟಿಂ ಪೆಗಲ ಕಂಬಿಯಂ ನೀನೊಲ್ದು
ನೆಲಕಿಳುಪ ಬೇಡ ಸಂದಂಶದಿಂ ಪಿಡಿದು ದಸಿಯಂ ಕೀಳ್ವೆನೀಮರನನು
ಬಲಿದು ಪಿಡಿ ನೀನೆನುತೆ ತಂಡಸದಿನಾ ದಸಿಯ
ನಲುಗಿ ಕೀಳಲ್ಕೆ ಮುನ್ನಾರೋಗಿಸಿದ ಭೂತಿ
ನಿಲವಿಲ್ಲದೇ ಚಿಮ್ಮಿ ಪಾಯುತಿರೆ ಕಂಡು ಶಬರಾಕೃತಿಯ ಪರಮೇಶ್ವರಂ ೬೭

ಮನದೊಳತಿಸಂತೋಷಿಸುತೆ ನುಡಿದನೆಲೆ[1]ಮ[1] ನೀ
ನನುವಳಿಯದಿರು ಧೀರನಾಗೆನುತೆ ಬಳಿಕ ತೊ
ಟ್ಟನೇ ತೆಗದೆಲೆದಂದು ಗಾಯುಮಂ ಕಟ್ಟಿ ನಸುನಗುತೆ ನೀಂ ಪೋಗು ನಿನಗೆ
ಮನಸಿಜಹರಂ ಸೋಮನಾಥನಾನಂದದಿಂ
ಘನಕೃಪಾಪೀಯೂಷವರ್ಷಮಂ ಕರೆಸನೆನು
ತನಿತಱಿಂಳದೃಶ್ಯ[2]ಮಾ[2]ಗಲ್ ಬಿಯದನೋಹಿಲಂ ಬಿಸವಂದಮಂ ತಾಳುತೆ ೬೮

ನುಡಿದನಾ ಸೌರಾಷ್ಟ್ರ ಸೋಮೇಶ್ವರನೆ ಎನ್ನ
ಸಡಗರದೆ ಸಲಹಲೀ ಶಬರವೇಷಂದಾಳ್ದು
ಪಡಪಿನಿಂ ಬಂದನಲ್ಲದೆ ಮಿಕ್ಕ ಶಬರರ್ಗದೃಶ್ಯತ್ವಮೆತ್ತಲುಂಟು
ಪೊಡವಿಯೊಳಗೆನುತೋಹಿಲಂ ಮನದೊಳುಬ್ಬುತ್ತೆ
ನಡೆತಂದು ದೇಗುಲಕ್ಕೆಂದಿನಂದದೆ ನಿಲ
ಲ್ಕುಡುಪತಿಧರಂ ಕವಾಟಂದೆಱಿಂಯಲೊಳಪೊಕ್ಕು ಕಂಬಿಯಂ ಕೆಲದೊಳಿರಿಸಿ ೬೯

ಹರಪೂಜೆಯಂ ವಿಧಾನದಿನೆಸಗಿ ವಹ್ನಿಯಂ
ಪಿರಿದು ಧೂಪಾರ್ಥಮಾಗೊಸೆದು ಪಾತ್ರೆಯೊಳಿರಿಸಿ
ಹ[3]ರಿಸ[3]ದಿಂ ಪಟುಮಾಡಿ ಘಂಟೆಯಂ ತರಲೆಯ್ದಲನಿತಱಿಂಳಗಾ ಧೂಪದ
ಪಿರಿಯ ಕಂಬಿಯ್ಸನೊಯ್ದು ಮಱಿಸಿಟ್ಟರಾ ನೀಚ
ಪರರಾದ ಗೌಳ ತಾಪಸರಿತ್ತ[4]ಲೋ[4]ಹಿಲಂ
ತಿರಿಗಿ ಬಂದಾ ಗುಗ್ಗುಲಂಗಾಣದಿದು ಸೋಮನಾಥನ ನಿರೂಪಮೆನುತೆ ೭೦

ಮನಗುಂದದೆನ್ನಯ ಶರೀರಮೇ ಗುಗ್ಗುಲಂ
ಮನಸಿಜಹರಂಗೆಂದು ದೃಢಭಕ್ತಿಯಿಂದೊಲ್ದು
ಮಿನುಪ ಕೀಲಾಲಿಗಳ ಪಸರಿಸುತೆ ಮಿಗೆ ದಗದ್ಧಗಿಲೆನುತ್ತುಲಿಯುತೆಯ್ದೆ

---

1 ಪೊ (ಕ)  2 ನಾ (ಕ)  3 ರುಷ (ಗ)  4 ರೋ (ಗ)

ಘನವಿಸ್ಫುಲಿಂಗಂಗಳಂ ಕೆಲಕೆ ಕೆದಱುತ್ತೆ
ಕನದಭವಭಾಳನೇತ್ರಾಗ್ನಿ ಮಿಳಿರ್ವಂದದಿಂ
ನನಸು ಶೋಭಿಸುತಿರ್ಪಪರ್ಬುಧನನೋಹಿಲಂ ಕಂಡು ತನುವಳಱಿದಿಂತು ೭೧

ನಯನಂಗಳಳ್ಕಿ ಮುನಿಯದೆ ಚಂಚಲಂಗಳಂ
ಭಯದಿಂದೆ ಧರಿಸದೆ ಹೃಷೀಕಂಗಳಾವ[1]ಗಂ[1]
ನಯಮಳಿದು ತಡಬಡಂಬೊಂದದೇ ನುಡಿಗಡಣಮಂಜಿ ಕಳವಳಮೆಯ್ದದೆ
ರಯದಿನಾತ್ಮಂ ಪ್ರಜ್ಞೆಗಳ್ ಮಗುಳ್ದು ಪೆಡೆಮೆಟ್ಟ
ದಯಶಕ್ಕೆ ಪಕ್ಕಾಗದೇ ಛಲಂದೊಲಗದತಿ
ಶಯಧೈರ್ಯದಿಂ ನುಡಿದನೆನ್ನೊಡೆಯ ಸೋಮೇಶ ಚಿತ್ತೈಸೆನುತ್ತೆ ಮುದದಿಂ ೭೨

ಮಿನುಪೆನ್ನ ದೇಹಮೇ ಆಂ ನಿಮಗೆ ಮುನ್ನೀವ
ಘನಗುಗ್ಗುಲದ ಪರಿಮಳಂ ತೋಱಿದಿರ್ದೊಡೆ
ನ್ನನುಪಮ ದೃಢವ್ರತಕೆ ಭಂಗಮಕ್ಕುಂ ಭಕ್ತನಲ್ಲ ನಿನಗಾಂ ಬಳಿಕ್ಕಂ
ಸನಯದಿಂದೆಮ್ಮ ಧೂಪದ ಮಾಚಿದೇವಾರ್ಯ
ನನಘನನುದಿನಮೊಂದುಪಲ ಗು[2]ಗ್ಗು[2]ಳಮನೊಸೆದು
ಮನಸಿಜಾರಿಗೆ ಮೂಱುವೇಳೆಯೊಳಗರ್ಪಿಸುವೆನೆಂದು ನೇಮಂಗೊಂಡನು ೭೩

ಪಿರಿದಿಂತು ನಡಸಿದಂ ಪಲವುದಿನಸಂಬರಂ
ದೊರಕದಿರಲೊಂದುಕಾಲಂ ಗುಗ್ಗುಳಂ ತನ್ನ
ಶರಿರದೊಳ್ ಖಂಡಂಗಳಂ ಕೊಯ್ದು ಕೊಯ್ದೊಂದುಪಲದನಿತನಗ್ನಿಯೊಳಗೆ
ಭರದಿಂದಮಿರಿಸಲದು ದುರ್ಗಂಧಮು[3]ಣ್ಮ[3]ದೇ
ಪರಮೇಶ್ವರಂಗೆ ಗುಗ್ಗುಳದ ಪರಿಮಳದಂತೆ
ಕರಮೆ ಮೂಱವಸರದೊಳೆಂತು ಸಂದಿತ್ತದಱ ಪರಿಮಳದ ರೀತಿಯಂತೆ ೭೪

ಬಳಿಕೆ ಶ್ರೀಗಿರಿ ವೀರಶಂಕರಾರ್ಯಂ ಎಂಬ
ಲಳಿತಭಕ್ತಂ ಕಾಯ್ದುಯಃಕಂದುಮಧ್ಯದೊಳ
ಗಳವಿನಿಂ ಕುಳ್ಳಿರ್ದು ಶಸ್ತ್ರಸಂತತಿಯಿಂದೆ ತನ್ನಂಗಮಂ ಖಂಡಿಸಿ
ತೊಳಗುವಾ ಕಾಯ್ದ ಕಬ್ಬುನದ ಕಾವಲಿಯಲ್ಲಿ
[4]ಘು[4]ಳಿಲನಾ ಖಂಡಂಗಳಂ ಬೈತೊಡದಱ ಹೊಗೆ
ಮಳಹರಂಗೆಂತು ದುರ್ಗಂಧಮುಣ್ಮದೆ ಸುಗಂಧಮದಾಗಿ ತೋಱಿದಂತೆ ೭೫

---

[1] ಗುಂ (ಕ) [2] ಗುರ್ (ಕ) [3] ಳ್ಮ (ಗ) [4] ಗ (ಕ)

ಮಿನುಪ ಗು[1]ಗ್ಗು[1]ಳದ ಕಲಿಯಾರಿಯೆನಿಸುವ ಭಕ್ತ
ನನಘನೊರ್ವಂ ಮುನ್ನೆ ತನ್ನ ತೂಕದೊಳೆಸೆವ
ಕನದಮಲ ಮಹಿಷಾಕ್ಷಿಯುಂ ಶಿಸಂಗರ್ಪಿಸುವೆನನುದಿನಂ ತಪ್ಪದೆನುತೆ
ವಿನಯದಿಂ ನಡೆಯುತಿರಲೊಂದುದಿನಮಾ ಧೂಪ
ಮಿನಿತುಮೊದಗದಿರಲ್ಕೆ ತನ್ನ ಶಿರವರಿದು ಘ
ಮ್ಮನೆ ಧೂಪಪಾತ್ರೆಯೊಳಗಿಡಲದುವೆ ಸೌರಭ್ಯಮಾಗಿ ಸಲೆ ಸಂದ ಪಾಂಗಿಂ ೭೬

ಮುನ್ನೆ ಕಡ[2]ವಲನಂಬಿ[2] ಶಿವನಿದಿರೊಳಾವಗಂ
ಚನ್ನಮರ್ದು ಬೆಳಗುತಿರ್ಪಖಿಳದೀಪಾದಿಗಳ್
ಸನ್ನಿದಂ ತೈಲವಿಲ್ಲದೆ ಕಿಡುತಿರಲ್ ತನ್ನ ತಲೆನವಿರ್ಗಳನೆ ಪತ್ತಿಸಿ
ನನ್ನಿಯಿಂ ದೀಪವಂ ಬೆಳಗಲವು ದುರ್ಗಂಧ
ಮನ್ನಿಸದಮುಣ್ಮಲೀಯದೆ ಸೌರಭಂಗಳಾ
ಗುನ್ನತಪ್ರಜ್ವಲಿಸಿದಂತೆನ್ನ ದೇಹಮಿದು ಪರಿಮಳಂಗುಡದಿರ್ದೊಡೆ ೭೭

ಮಿಸುಗುವಣುಮೂರ್ತಿಯೆಂಬಭವಭಕ್ತಂ ಮುನ್ನೆ
ಶಶಿಧರಂಗಾವಗಂ ತನ್ನ ಮುಂಗೈಯ ಸಂ
ತಸದಿಂದೆ ಸಾಣೆಗಲ್ಲೊಳ್ ತೇದು ಗಂಧಮಂ ಮಾಡಿಕುಡಲಾ ಗಂಧವು
ಎಸೆವ ಸಿರಿಗಂಧದೊಳ್ಗಂಪಿಂಗೆ ತೋಡಾಗಿ
ಮಸಕದಿಂ ತಳುಸಂದು ಸಂದಿತೆಂತಂತೆ ರಾ
ಜಿಸುವೆನ್ನ ದೇಹಮಾ ಗುಗ್ಗುಳದ ಸೌರಭಕೆ ಸರಿಬಾರದಿರ್ದೊಡನಿಶಂ ೭೮

ಪಿರಿದು ದುರ್ವಾಸನೆಯೊಳೊಂದಿದೊಡೆ ತನುಕಾಂತಿ
ನಿರುತಮಳಿದೊಡೆ ದೇಹರಸಮಿಂಗಿದೊಡೆ ಕಳೇ
ವರದಸ್ಥಿಚರ್ಮಂಗಳುರುಪರಿಮಳಂ ಧೂಪಗಂಧಕ್ಕೆ ಸಮವೆನಿಸದೆ
ಕರಮೆ ಬೇಱೊಂದು ಕಂಪೆಸಗಿದೊಡೆ ಶೋಭಿಸುವ
ಹರಣಮುಱೆ ಬೆದಱೆದೊಡೆ ಕಂಪವಂಕುರಿಸಿದೊಡೆ
[3]ಹರಿಸ[3]ಮಾನನದೊಳಱತೊಡೆ ಕಣ್ಗಳೆಯ್ದೆ ಕೊಕ್ಕರಿಸಿ ನಸು ಮುಗಿದಿರ್ದೊಡೆ ೭೯

ಭರದೆ ಪೈತ್ಯ ಶ್ಲೇಷ್ಮತತಿ ರಂಧ್ರನಿಕರದಿಂ
ಕರಮೊಸರ್ದು ಪೊಱಗಣ್ಗೆ ಸೂಸಿದೊಡೆ ಲೋಹಿತಂ
ಸರಿಸದಿಂ ಬಾ[4]ನ[4]ಲಾದೊಡೆ ಧೂಮದಿಂ ಬಾಷ್ಪಮುಣ್ಮಿದೊಡೆ ನಯನಂಗಳಿಂ

---

[1] ಗುರ್ (ಕ) [2] ಮಲನಮ್ಮಿ (ಕ) [3] ...ಸ (ಕ) ಹರುಷ (ಗ) [4] ರ (ಗ)

ಪಿರಿದು ಶೈತ್ಯಂದೋಱೆ ತದ್ಧೂಪಧೂಮದಂ
ತುರುಪರಿಮಳಂ ಪೊಣ್ಮಿದಿರ್ದೊಡೀ ದೇಹಮಿ
ಯ್ಯುರಿಯೊಳಗೆ ಕರಗುವರೆಗಂ ಕರದ ಘಂಟಾರವಂ ನಾಡೆ ನಸಿದಿರ್ದೊಡಂ ೮೦

ಮಿನುಪ ನಿನ್ನ ಗಣಂಗಳಾಣೆ ನಿನ್ನಾಣೆಯಾಂ
ನೆನಸು ನಿನ್ನಯ ಭೃತ್ಯನಲ್ತು ನೀಂ ನೋಡೆನ್ನ
ಮನಸಿಜಾಂತಕನೆ ಸೌರಾಷ್ಟ್ರಪತಿ ಸೋಮೇಶ ಭಕ್ತವತ್ಸಲನೆ ಎನುತೆ
ಮನದೊಳಗೆ ಗಣವರರ ಪದಸರಸಿಜಂಗಳಂ
ನೆನೆದೋಹಿಲಂ ಧೂಪಪಾತ್ರೆಯೊಳ್ ಕುಳ್ಳಿರ್ದು
ನೆನಸುಮಂಗದ ಧೂಪಪರಿಮಳಂ ಶಿವನಂಗದೆಲ್ಲೆಡೆಯನಾವರಿಸಲು ೮೧

ಮೃಡನಾಗಳೊಲ್ದೋಹಿಲಂಗೆ ತನ್ನಯ ರೂಪ
ನೆಡೆವಿಡದೆ ತೋಱೆ ಮೆಯ್ದಡವಿ ಕರುಣಾಮೃತದ
ಕಡಲೊಳಾಳಿಸಿ ತಳ್ಕಿಗೆಯ್ದು ಗುಣಸಂದೋಹದೋಹಿಲನನತಿಶೀಲನಂ
ಕಡುಗುವಘಸಂಘ[1]ಕೋಲಾಹಲ[1]ನನಾವಗಂ
ಬಿಡದೆಸೆವ ಸಕುತೂಹಲನನೋಹಿಲನನೆಯ್ದೆ
ಕಡುಪಿನಿಂ ಪ್ರಮಥನಾಯಕಪಟ್ಟಬದ್ಧನಂ ಮಾಡಿ ಸಾರೂಪ್ಯವಿತ್ತಂ ೮೨

ಬಳಿಕಮಾಯೋಹಿಲಂ ಕರದ ಘಂಟಾರವಂ
ಘಳಿಲನೆ ವಿಜೃಂಭಿಸುತ್ತಿರೆ ಹರಿನ್ನಿಕರದೊಳ
ಗೆಳವು ಮಿಗೆ ಕೈಲಾಸಕೆ[2]ಯ್ದುತಿರ್ದಪ್ಪ[2]ನೊರ್ವನೆ ಅಭವನಾಜ್ಞೆಯಿಂದಂ
ಲಳಿತ ಮಂಗಳನಾದಮುಣ್ಮುತಿರೆ ಭಕ್ತತತಿ
ಪುಳ[3]ಕಿತಾಂಗರು[3]ಮಾಗಿ ನೋಡುತಿರೆ ಸೌರಾಷ್ಟ್ರ
ದೊಳಗೆ ಸಂತೋಷವಾರಿಧಿ ವೇಳೆಯಂ ಮಿಱೆ ದೆಸೆದೆಸೆಗೆ ಪರಿವುತಿರಲು ೮೩

ಪಿರಿದು ತೀವಲ್ ಧೂಪಧೂಮ್ರತತಿ ದಿಕ್ಕುಗಳ
ನರರೆ ಪಾಪಂ ತಾಪಮುಂ ಪಡೆಯುತಿರೆ ನಾಡೆ
ಪರವಾದಿಗಳ್ ಖೇದಮುಂ ತಾಳ್ದು ಮುಟ್ಟಮಿರೆ ದೂಷಕರ್ [4]ಶೋ[4]ಷಿಸುತಿರೆ
ಹರನಿದಿರೊಳುಸಿರ್ದ ಸದ್ಭಾಷೆ ಸಂದತ್ತೆನುತೆ
ವರಭಕ್ತರುಘೋಷಘೋ ಎಂದು ಕೀರ್ತಿಸುತಿರಲ್
ಕರಮೆ ಮುಮ್ಮುಳಿದಿರ್ದ ಗೌಳತಾಪಸರೆಯ್ದೆ ಭೂಮಿಯೊಳ್ ಪೊಡೆಗೆಡೆ[5]ಯು[5]ತೆ ೮೪

---

[1] ಕಾಲಾನಲ (ಗ) [2] ಯ್ದಿದೋರ್ಪ (ಕ) [3] ಕಾಂಕಿತರು (ಕ) [4] ಘೋ (ಗ)
[5] ವು (ಗ)

ಮಿಗೆ ಸತ್ಯನಿಧಿ ಶಾಂತಚೇತಸ್ಕ ಜಯಜಯತು
ನೆಗಳ್ದ ಕಲ್ಮಷದಾವ ಜಯಜಯತು ಜಯಜಯತು
ಸುಗಣಮಣಿಕಿರಣಾವಲಿಪ್ತಾಂಗ ಜಯಜಯತು ಮಹಿತ ಸಚ್ಚರಿತಯುಕ್ತ
ಅಗಣಿತ ಶಿವಾನಂದಪೂರಿತಾಮಲಚಿತ್ತ
ವಿಗತಾನ್ಯದೈವ ಕಾರುಣ್ಯಯುತಭಾವ ತೊ
ಟ್ಟಿಗೆ ರಕ್ಷಿಸೆಮ್ಮನೆನುತ್ತೆ ಕೀರ್ತಿಸುತಿರಲ್ಕನಘನೋಹಿಲನೊರ್ವನೆ ೮೫

ಕರದ ಘಂಟೆಯ ಬಾಜಿಸುತ್ತೆ ಕೈಲಾಸಕ್ಕೆ
ತುರಿತದಿಂ ಪೋಗುತಿರ್ದಪನಾತನಂ ಕಂಡು
ದರಹಾಸಮುಣ್ಮಿತ್ತು ಕಾಂತೆ ಕೇಳಂತಪ್ಪ ಘೋರತಪಮಂ ವಿರಚಿಸಿ
ಪಿರಿದು ವೀರವ್ರತಂಗಳನೊಲ್ದೊಡರ್ಚಿ ದು
ಸ್ತರ ದುಃಖನಿಕರಂಗಳಂ ನಾಡೆ ಅನುಭವಿಸಿ
ಗಿರಿಶನಂ ಸಂತುಷ್ಟನಂ ಮಾಡಿ ತಾನೊರ್ವನೇ ಪೋಗುತಿರ್ದಪ್ಪನು ೮೬

ಧರಣಿಯೊಳ್ ಕೆಲವೂರ್ಗಳಿಲ್ಲವೇ ತತ್ಪುರದ
ನರರ್ಗಳಿಲ್ಲವೆ ಅಕ್ಕಟಾ ದೈನ್ಯವೃತ್ತಿಯಿಂ
ಭರದೆ ತಾನೊರ್ವನೇ ಪೋದಪ್ಪನೆನುತೆ ಮಗುಳ್ದೀಕ್ಷಿಸಿ ನಗುತ್ತುಮಿರಲು
ಹರಿಸದಿಂದಾ ರಾಜನರಸಿಯೆವೆಯಿಕ್ಕದಂ
ಬರದೆಡೆಯೊಳೋಹಿಲನ ನೋಡಿ ಕಾಣದೆ ಪತಿಯು
ಚರಣಕ್ಕೆ ನಮಿಸಿ ಬೆಸಗೊಂಡಳಿನ್ನಯ ಮನೋನಾಥ ಸದ್ಗುಣಯೂಥನೆ ೮೭

ಆವೆಡೆಯೊಳಾವ ಜಲಧರಸಮೂಹದ ಮುಂದ
ದಾವ ದಿಕ್ಕಿನೊಳೆನಿತುದೂರದೊಳಗೋಹಿಲಂ
ಸಾವಧಾನದೆ ಪೋದಪಂ ತೋಱುಮೆನಗೆಂದು ಕೇಳ್ದ ಸತಿಗಾ ರಾಜನು
ಶಿವಿದಾನಂದದಿಂ ನುಡಿದನೀಕ್ಷಿಸು ಕರದೊ
ಳಾವಗಂ ದನಿಗೆಯ್ವ ಘಂಟೆವಿಡಿದೀ ಮೇಘ
ದಾವಲಿಯ ಮುಂದೆ ಪೋದಪನೆಂದು ತೋಱಿ ಕಂಡಾ ಯುವತಿ ಸಂತೋಷದಿಂ ೮೮

ಪುರಹರಂಗಂಗಮುಂ ಧೂಪಮಾಗಿತ್ತು ಬಱ
ಧುರ ತದಂಗಂ ನಾಡೆ ದುರ್ಗಂಧಮುಣ್ಮದೇ
ಪರಮೇಶ್ವರಂಗೆ ಸಮ್ಯಗ್ಧೂಪವಾಸನೆಯನಿತ್ತುದಾ ದೇಹದಿಂದೆ

ನರ[1]ರೆ[1]ಯ್ದೆ ಪೊಗಳುತಿರೆ ಹರಗಿರಿಯನೆಯ್ದುವುದು
ಕರಮೆ ಚೋದ್ಯಂ ಎಂದು ಕೀರ್ತಿಸುತೆ ಧರಣಿಯೊಳ್
ಭರದಿಂದೆ ಪೊಡೆಗೆಡೆದು ವಂದಿಸುತ್ತೋಹಿಲಾರ್ಯಂಗೆ ಮಿಗೆ ಭಕ್ತಿಯಿಂದಂ ೮೯

ಅತಿಶಯದ ತಪವಂ ನಿಮಿರ್ಚಿ ಪರಮೇಶ್ವರನ
ನುತಿಸಿ ಕೈಲಾಸಕ್ಕೆ ತನುವೆರಸಿ ಪೋಪುದಿಂ
ತತಿದುರ್ಘಟಂ ನುಡಿಯಲಕ್ಕುಮಲ್ಲದೆ ನಡೆಯಬಪ್ಪುದೇ ಧರಣಿಯೊಳಗೆ
ಸತಿಯುಸುರಲಿಂತೆಂದು ಪತಿ ಕೇಳ್ದು ನುಡಿದನು
ನ್ನತ ವಿಸ್ಮಯಂ ಬೇಡಿದರ್ಕೆ ಪರಮೇಶ್ವರಂ
ಪತಿಕರಿಸಿ[2]ಕೊಂ[2]ಡಾದ್ಯರಗ್ಗಳಿಕೆಯಂ ಕೇಳ್ದುಮಱೆಯ ನೀನೆಲೆ ಕಾಂತೆಯೆ ೯೦

ಜ್ವಲನನೇಂ ಶಿವಭಕ್ತರಿಂದಗ್ಗಳಮೆ ಮುನ್ನೆ
ನಲಿದೊರ್ವ ವೀರಗಣಪುಂಗವನುಷರ್ಬುಧನ
ಲಲಿತ ರಸನೆಯ ಕೊಯ್ದು ಕೈಗಳಂ ಮುಱಿದಿಟ್ಟನೆಂದು ಬಡಬಾನಲನನು
ತಿಲಕದಂದದೆ ಪಣೆಯೊಳಗೆ ತಾಳ್ದು ಮೆಱೆದನಾ
ಕಲಿಗಣೇಶ್ವರನೊರ್ವನಂತೆ ಮತ್ತೊರ್ವನಾ
ಪ್ರಲಯವಹ್ನಿಯನಳಿಕದೊಳಗಿರಿಸಿಕೊಳ್ಳನೇ ತನ್ನ ಸಾಹಸದಿನನಿಶಂ ೯೧

ಸಂತತಂ ವ್ಯಾಘ್ರಪಾದಾದಿನಂದನನನು[3]ಟಿ[3]
ಮುಂತೆಯ್ದೆ ಬಂದು ತಾನೇನನೆಸಗಿತ್ತು ಮ
ತ್ತಂತುಮಲ್ಲದೆ ರಿಪುಗಳಗ್ನಿಯೊಳ್ ವಾಗೀಶ್ವರನ [4]ನೊಂಕಲಾ[4] ವಹ್ನಿಯೆ
ಉಂತೆ ತಣ್ಣಿತ್ತಾದ ಕಾಸಾರಮಾದುದೋ
ರಂತೆ ಶಂಕರದಾಸನಳಿಕದೊಳ್ ನಯನಮಾ
ಯ್ತಂತುಮಲ್ಲದೆ ಯುವತಿ ಕೇಳಿನ್ನುಮಭವಭಕ್ತರ ಮಹಾಸಾಮರ್ಥ್ಯಮಂ ೯೨

ಹರನೊರ್ವನೇ ಕರ್ತೃ ತದ್ಭಕ್ತರೇ ಶಿಷ್ಟ
ರುರು ಮಹಾತ್ಮರ್ಕಳಿಂದಾ ವಾದಿಗಳ್ಗೊರೆದು
ನಿರುತದಿಂದಗ್ನಿಯಂ ಚೇಲಾಗ್ರದೊಳ್ ಕಟ್ಟಿ ಮಡಗರೇ ಮುನ್ನ[5]ಲೊ[5]ಸೆದು
ಭರದೆ ಸಿರಿಪತಿಪಂಡಿ[6]ತರ್[6] ಪಿಳ್ಳೆನಾಯ್ನಾರ್ರಿ
ಯರ ಸದನಮಂ ಮಧುರೆಯಲ್ಲಿ ಜೈನರ್ ಮುಳಿದು
ಕರಮೆ ಸುಡಲವರನೇಗೆಯ್ದಿತಾ ವಹ್ನಿ ಭಕ್ತರ್ಗಂಜುಗುಂ ದಹನನು ೯೩

---

1 ನೆ (ಗ) 2 ಕಂ (ಕ) 3 ಡಿ (ಕ) 4 ನೀಂಕಟಾ (ಕ) 5 ವೊ (ಕ) 6 ತಂ (ಕ)

ತನು ಧೂಪದಾಮೋದಮಾದುದದ್ಭುತವೆಂದು
ವನಿತೆ ನುಡಿಯದಿರಭವಭಕ್ತರೇನಂ ನೆನೆದ
ರನಿತು ಕೈಸಾರ್ಗುಮೆಂತೆನೆ ಮುನ್ನೆ ಕೋಱಡಿನೊಳ್ ಕಿಸಲಯಂಬಡೆದನೊಸೆದು
ಮಿನುಪ ಮೊರಟದ ಬಂಕಿದೇವಯ್ಯನತಿಶಯದೆ
ಮನವೊಲ್ದು ತಿಲಕವ್ವೆ ಗಂಡಾದಳೆಯ್ದೆ ತೊ
ಟ್ಟನೆ ಮುಟ್ಟೆ ಮಣ್ಣ [1]ಪೊನ್[1]ಮಾಡಿದಂ ಕಲಕೇತ ಬಮ್ಮಿದೇವಂ ನಿಕ್ಕುವಂ ೯೪

ಸಡಗರದೆ ಮೋಳಿಗೆಯ ಮಾರಯ್ಯನಿಂಧನವ
ನೊಡನೊಡನೆ ತುಂಡುಗೆಯ್ದು ಪುಲಕನಕಂ ಮಾಡಿ
ಮೃಡನ ಶರಣರ್ಗೀಯನೇ ಇಟ್ಟವಣ್ಗಳಂ ಕಡುವಿನಿದುಮಾಡಿ ಮುದದಿಂ
ನಡೆಯುತೆ ಮುಸುಂಡಿ ಚೌಡಯ್ಯನುಱಿ ಭಕ್ತರ್ಗೆ
ಪಡಪಿನಿಂದೀಯನೇ ಏಣಾದಿನಾಥನೀ
ಪೊಡವಿಯೊಳ್ ಸುರಗಿಯುಂ ಪೂಮಾಲೆಯುಂ ಮಾಡನೇ ಭಕ್ತಿಯೊಸಕದಿಂದಂ ೯೫

ಮಿಸುಪ ವಲ್ಮೀಕ ರಂಧ್ರದೊಳೆಯ್ದೆ ಕೈಯಿಕ್ಕಿ
ಬಸವಪುತ್ರಂ ತೆಗೆದು ಕೃಷ್ಣಸರ್ಪನನಂದು
ಪೊಸ [2]ಆ[2]ರಮಂ ಮಾಡನೇ ಮ[3]ತ್ತೆ ಏ[3]ಲೇಶಕೇತಯ್ಯನತಿನಿಷ್ಠೆಯಿಂ
ನಿಸದವೊಳ್ಪಿತ್ತೆಲ್ಲ ಬೂದಿಯಾಗಿರೆ ನೋಡಿ
ಮಸಕಗುಂದದೆ ಬಿತ್ತಿಬೆಳೆಯನೇ ನರಿಗಳಂ
ಎಸೆವ ಕುದುರೆಗಳ ಮಾಡನೆ ಕುಲಚ್ಚಱಿಯಾರಿ ಸದ್ಭಕ್ತಿಸಾಮರ್ಥ್ಯದಿಂ ೯೬

ಸಲಿಲದಿಂ ಸಾಯಿರ ಸೊಡರನೆತ್ತಿ ನಮಿನಂದಿ
ಮಲಹರನ ಪೂಜೆಗೆಯ್ಯನೆ ಇಂತನಂತ ಸ
ಲ್ಲಲಿತ ರಾಜ್ಞಾಸಿದ್ಧಿಯುಳ್ಳ ಸದ್ಭಕ್ತರೀ ಭೂಮಿಯೊಳಗುಂಟು ಪಿರಿದುಂ
ಲಲಿತಾಂಗಿ ಕೇಳ್ ಶರೀರಂಬೆರಸು ಮುನ್ನೊರ್ವ
ನಲಘು ಕೈಲಾಸಕ್ಕೆ ಪೋದರಿಲ್ಲಿದು ಪೊಸತು
ವಲವೇದು ನುಡಿಯದಿರ್ ದೇಶಾದಿಗಳನೊಯ್ದರುಂಟು ಕೈಲಾಸಗಿರಿಗೆ ೯೭

ಧರಣಿಪಂ ಜೇರಮಂ ರುದ್ರಾಕ್ಷಿಯಿಂ ತೊಳಗು
ಉರುಪಕ್ಷರಕ್ಷೆಯುಳ್ಳಶ್ವಮೆಂಬತ್ತುಸಾ
ಸಿರದಿಂದೆ ದಾಳಿಟ್ಟನುಂತೆ ಕೈಲಾಸಕ್ಕೆ ಹರಭಕ್ತ ಸಾಮವೇದಿ

---

[1] ಪಣ್ (ಕ) [2] ಹಾ (ಗ) [3] ತ್ತಮೋ (ಕ)

ಭರದೆ [1]ಛತ್ರೀಸಪುರವಂ[1] ಕೊಂಡುಪೋದನಾ
ವರ ಹಲಾಯುಧನಳ್ತಿಯಿಂ ತನ್ನ ನವಪುರವನು
ನಿರದೊಯ್ದನಂದು ಶಿವವಾಸಕ್ಕೆ ಮೆಱೆವ ಕೈಲಾಸಕ್ಕೆ ಸಂಭ್ರಮದೊಳು ೯೮

ಪುರಜನಂಗಳ್ವೆರಸಿ ಪಿಳ್ಳೆ[2]ನಾಯ್ನಾ[2]ರಿ ಭಾ
ಸುರ ಶಿವಪುರಕ್ಕೆಯ್ದಿದಂ ಕಾಂಚಿಯೆಂಬ ಪುರ
ವರದೊಳಗೆ [3]ಚಿಱುತೊಂ[3]ಡನೇಳ್ಕೇರಿಗಳ್ಗೂಡಿ ಪೋದನಾ ಹರಪುರಕ್ಕೆ
ಪರಮಭಕ್ತಂ ಮಳೆಯರಾಜನಾ ಕೈಲಾಸ
ಪುರಕೆ ಪುರಜನದೊಡನೆ ಪೋಗನೇ ಮುನ್ನೆ ಸ
ತ್ಪುರುಷ ಮೆಱೆವಿಂಡನುತ್ಸವಕೆ ಪೋಪಂತೆ ಭಕ್ತರ್ಗೂಡಿ ಪೋದನಂದು ೯೯

ಮಗಳಳಿಯ ಪೆಂಡಿರ್ಗಳೊಡಗೂಡಿ ಮುನ್ನೆ ತೊ
ಟ್ಟಗೆ ಮಾನಕಂಜಾರನಭವಪುರಕೆಯ್ದನೇ
ಸೊಗಸಿನಿಂದೇಳ್ನೂಱು ಭೂತಂಗಳೊಡಗೂಡಿಯುದ್ಭಟಂ ಶಿವನ ಪುರಕೆ
ನೆಗೆದುಪೋಗನೆ ಸಿಬ್ಬ ನಿಬ್ಬೇಳ್ಮೃಗಂಗಳಂ
ನೆಗಳ್ದ ಕೈಲಾಸಕ್ಕೆ ಕಳುಪನೇ ಮುನ್ನೆ ಸಾ
ಸಿಗ ತೆಲುಗಜೊಮ್ಮಯ್ಯನಿನ್ನುಮೊಸೆದಾಲಿಸೆಲೆ ವನಿತೆ ಭಕ್ತರ ಕಥೆಗಳಂ ೧೦೦

ಬೆಲೆವೆಣ್ಣೊಳೊಡಗೂಡಿಯುನಳ ಕಾಯಂ ಶುಕನ
[4]ನೊ[4]ಲವಿನಿಂ ಶಿವಪುರಕೆ ಕೊಂಡುಪೋಗನೆ ಅಂದು
ಲಲಿತ ಮಲ್ಹಣನುಂತೆವೋಲ್ ನಂಬಿದೀರ್ವರಬಲೆಯರೊಡನೆ ಸಂತೋಷದಿಂ
ನಲವೇಱಿ ಬಂಧುಜನದೊಡಗೂಡಿ ನಿಟಿಲಾಕ್ಷ
ನಿಲಯ ಕೈಲಾಸಕ್ಕೆ ಪೋಗನೇ ಇಂತು ನಿ
ರ್ಮಲಭಕ್ತರೊಳರನಂತರ್ ಕಾಂತೆಯೋಹಿಲನದೇನಧಿಕನವನಿಯೊಳಗೆ ೧೦೧

ಪರಿಜನಂಗಳ್ ಪುರಜನಂಗಳೊಡಗೂಡಿ ಭಾ
ಸುರಪುರಂಗಳ್ವೆರಸಿ ಶಿವಭಕ್ತಪುಂಗವರ್
ಧರಣಿಯೊಳ್ ಮುನ್ನೆ ಕೈಲಾಸಕ್ಕೆ ಪೋದರಪರಿಮಿತರೊಳರೀಯೋಹಿಲಂ
ಭರದಿನೊರ್ವನೆ ಪೋಗುತಿರ್ದಪನಿದೇನರಿದು"
ತರಳಲೋಚನೆಯೆಂದು ನುಡಿದ ತತ್ಪತಿಗೆ ಶಶಿ
ಧರವದನೆ ನುಡಿದಳಿಂತೆಂದು ಕೇಳೆಲೆ ಭೂಪ ಬಱಿದೆ ಧಿಕ್ಕರಿಸಲೇಕೆ ೧೦೨

---

[1] ಛತ್ರಿಚಾಮರಂ (ಕ) [2] ನೈನಾ (ಗ) [3] ಜಯಕೋದಂ (ಕ) [4] ನ (ಗ)

ಅನಿಶಮುಂ ಕಾಮಿನೀನಾಥನೇ ನಿಷ್ಕಾಮಿ
ಮನುಜಪತಿ ನೀಂ ಭೋಗಿಯಾತನೇ ಶಿವಯೋಗಿ
ವಿನುತಪಣದುರ್ವ್ಯಸನಿ ನೀನಾತನೀಶಪೂಜಾವ್ಯಸನಿ ಪರಿಭಾವಿಸೆ
ನನಸು ನೀಂ ಸಂಸಾರರಕ್ತನಾತಂ ವಲಂ
ಮಿನುಪ ಸಂಸೃತಿವಿರಕ್ತಂ ಮಂತಣಂಗೆಯ್ಯ
ಲನುನಯಂ ನರಲೋಕಚರನಾವಗಂ ನೀನೆ ಹರಲೋಕಚರನೋಹಿಲಂ ೧೦೩

ಮಿಗೆ ನೇಹಮುಂಟಾದೊಡೋಹಿಲಯ್ಯನ ಕರಂ
ಪೊಗಳಿಮಲ್ಲದೊಡುಸಿಕನಿರಿಮೆಂದು ನುಡಿದ ತ
ನ್ಮೃಗನಯನೆಗವನಿಪಂ ಬಿತ್ತರದಿನುಸಿರ್ದನೆಲೆ ಕಾಂತೆ ಕೇಳ್ ಮನದಣಿಗಿನಿಂ
ನೆಗಳ್ದ ಕಾಮಿಗಳಲ್ಲದಿರ್ದ ನಿಷ್ಕಾಮಿಗಳ್
ಸೊಗಸಿನಿಂ ಕಾಮಿಸಿ ಶಿವನನೆಯ್ದಲೆಂತಕ್ಕು
[1]ಮು[1]ಗಲಿಟ್ಟು ಕಾಮಿಯೆಂದಾ ನಂಬಿಯುಂ ಶಿವಂ ನಿಷ್ಕಾಮಿಗಳ ಜೆರೆದನೆ ೧೦೪

ಪಿರಿದು ಭೂಮ್ಯರ್ಥಂಗಳಿಲ್ಲದೇ ಭಕ್ತರ್ಗೆ
ಪರಿಚರ್ಯೆಮುಂ ಮಾಡಲೆಂತಕ್ಕುಮವನಿಯೊಳ್
ಕರಿಕಾಲಚೋಳರಾಜೇಂದ್ರ ಚೋಳೋತ್ತುಂಗಚೋಳ ವಿಕ್ರಮಚೋಳರಂ
ಕರವೂರ ಚೋಳನುನ್ನತ ವೀರಚೋಳನಂ
ಹರನುಳಿದು ನಿರ್ಧನರನಿಂಬಿಟ್ಟುಕೊಂಡನೇ
ಅರಸುಗಳ್ ಭಕ್ತಿಮಾರ್ಗಕ್ಕೆ ದೂರರೆ ಕಮಲವದನೆ ಪೇಳ್ ಪೇಳೆಂದನು ೧೦೫

ವಿನುತಮಿಾ ಜೂದು ನಿಂದ್ಯಮೆ ಹರವಿನೋದಾರ್ಥ
ಮೆನಿಸುವಂತಾಡಿಯರ್ಪಿಸ ಬಲ್ಮೆಯುಂಟಾದೊ
ಡನಘ ಶಿವತುಷ್ಟನಪ್ಪಂ ಮತ್ತಮದಱಿಂದೆ ನಿಂದೆಯಲ್ತೀ ದ್ಯೂತವುಂ
ವನಿತೆ ಕೇಳ್ ಮೂರ್ಖನಾಯ್ನಾರಿಯೆಂಬೊರ್ವನೀ
ಶನಭಕ್ತನಾವ ಕಜ್ಜಂಗೆಯ್ಯಲಱಿಯದೇ
ಮಿನುಪ ಜೂದಾಡಿಯದಱಿಂ ಗೆಲ್ದ ಧನದಿಂದೆ ಜಂಗಮಾರ್ಚನೆಗೆಯ್ವುತೆ ೧೦೬

ಇರುತಿರಲ್ಕೊಂದುದಿನಮಿಾಶನವನೊಡನೆ ಭಾ
ಸುರತರದ್ಯೂತಮಾಡಲ್ ಗೂಢರೂಪಮಂ
ಧರಿಸಿ ಬಂದಾಡಿ ಸೋಲ್ತಾ ಧನಮನೀಯದಿರೆ ಮೂರ್ಖನಾಯ್ನಾರಿ ಕೆರಳಿ

---

[1] ಮೊ (ಕ)

ಪರಮೇಶನುಷ್ಣೀಷಮಂ ಕಳೆದುಕೊಂಡು ತ
ಚ್ಚರಣಯುಗಮಂ ಗಾಢಮಾಗಿ ಬಂಧಿಸೆ ಶಿವಂ
ಭರದಿಂದೆ ನೆನೆದನೊಂದಂ ಮೂರ್ಖನಿವನೆನ್ನ ಬಿಡಲಱಿಯನೇವೆನೆಂದು ೧೦೭

ಉಡಿಯೊಳೆಸೆದಿರ್ಪ ಶಿವಸೂತ್ರಮಂ ತೋರ್ಪೆನೆನು
ತೊಡನೆ ನಿಶ್ಚೈಸಿ ಶಿವಸೂತ್ರಮಂ ತೋಱಿ ಕಂ
ಡಡಿಗಡಿಗೆ ಬೆದಱಿ ಪಾಪಂ ಪೊರ್ದಿತೆನುತುಮಾ ಮೂರ್ಖನಾಯ್ನಾರಿ ಪೆಳಱಿ
ಕಡುನೊಂದು ಶಿವ ಶಿವೆನುತುಂ ಶಿವನ ಸದ್ಭಕ್ತ
ನಡಿಗಳಂ ಕಟ್ಟಿದೆನೆನುತ್ತುಮಾ ಚಿಂದಿಯೊಳೆ
ಸಡಗರದೆ ತನ್ನ ಶಿರಮಂ ಕೊಯ್ದುಕೊಳಲುಜ್ಜುಗಂಗೆಯ್ವ ವೇಳೆಯೊಳಗೆ ೧೦೮

ಭರದಿಂದೆ ಶಂಕರಂ ಪ್ರತ್ಯಕ್ಷನಾಗುತಿ[1]ಲೆ
ಶರಣ ನಿನ್ನಿಷ್ಟಾರ್ಥಮಂ ಬೇಡು ಕೊಡುವೆನೆನು
ತೊರೆಯಲಾಂ ಗೆಲ್ದ ಧನಮಂ ಕುಡದು ಜಂಗಮಾರ್ಚನೆಯ ವಸ್ತುವೆಂದು ಬೇಡೆ
ನಿರುತಮನಿತೊಡಮೆಯಂ ಕುಡಲಾ ಧನಂಗಳಂ
ಹರಿಸ[2]ದಿಂ ಜಂಗಮಾರ್ಚನೆಗೆಯ್ದು ಶಿವಪುರಿಗೆ
ತೆರಳನೇ ಮೂರ್ಖನಾಯ್ನಾರಂದು ಮೂಲೋಕಮಱಿಯೆ ಜೂದಾಡಿ ನಲವಿಂ ೧೦೯

ಮಿಗೆ ಜೂದುಗಾಱನಿಂ ಶಿವಪುರಿಗೆ ಬರ್ಪುದದು
ಸೊಗಸಾಗದೆಂದು ಶಿವನಿಕ್ಕಿ ಪೋದನೆ ಮುನ್ನೆ
ಮೃಗನಯನೆ ಕೇಳ್ ಧರ್ಮಜಪ್ರಮುಖರೆಯ್ದೆ ಕೆಟ್ಟರ್ ವ್ಯಸನದಿಂದೆ ಜೂದಂ
ಬಗೆದಾಡಿ ಮೂರ್ಖನಾಯ್ನಾರಿ ಭಕ್ತ್ಯರ್ಥದಿಂ
ನೆಗಳ್ದು ಜೂದಾಡಿ ಶಿವನೊಳಗೆ ಸಂದಿರ್ದನಿದು
ಜಗದೊಳಗೆ ನಿಕ್ಕುವಂ ಶಿವಭಕ್ತರಾಟವೆಲ್ಲಂ ಶಿವನನಂಟಿರ್ಪುದು ೧೧೦

ಮಿಸುಪ ಸಂಸಾರದಲ್ಲಿಯ ವಿರಕ್ತಿಯುಮಂತೆ
ಮುಸಕದನುರಕ್ತಿಯುಮಿವೆರಡೇಕರೂಪಮಂ
ತೆಸೆದು ತೋಱುಗುಮಾವಗಂ ಕೇಳ ನೀನವಱ ಕೀಲ ಮನದಳ್ತಿಯಿಂದಂ
ಪಶುಪತಿಗೆ ಸಲ್ಲದ ಸುಖಂಗಳೊಳ್ ವಿಮುಖತೆಯೆ
ನಿಸದಂ ವಿರಕ್ತಿಯೆನಿಕುಂ ಶಿವಾನರ್ಪಿತದೊ
ಳಸವಸಂ ರಕ್ತಿಯಪ್ಪುದೆ ವಲಂ ಸಂಸಾರದನುರಕ್ತಿ ಭಾವಿಸುವೊಡೆ ೧೧೧

---

[1] ಗಿಯೆ (ಗ)  [2] ರುಷ (ಗ)

ಸಲೆ ಶಿವಾರ್ಪಿತಸುಖದೊಳಗೆ ಪುಟ್ಟುವನುರಕ್ತಿ
ಯಲಘು ಸಂಸೃತಿ ವಿರಕ್ತಿಯೆನಿಸ್ಕುವೆಯ್ದೆ ನಿ
ರ್ಮಲ ಶಿವಾರ್ಪಿತಸುಖದೊಳೊಗೆದು ತೋಱುವ ವಿರಕ್ತಿಯೆ ಲೋಕದೊಳಗೆ ನಿಸದಂ
ಲಲಿತ ಸಂಸಾರಾನುರಕ್ತಿಯೆನಿಸುಗುಮಿವಱ
ನೆಲೆಯನಱಿದಾಚರಿಸುತಿರ್ಪ ಸದ್ಭ[1]ಕ್ತಿ[1]ಸಂ
ಕುಲವೊಸೆದು ಸಂಸಾರದೊಳಗಿರ್ದೊಡಾವಗಂ ಬೆರಸದದನೆಂತೆಂಬೊಡೆ ೧೧೨

ಜಲದೊಳಿರುತುಂ ಜಲವನೊಂದದಂತಿರ್ಪಬ್ಜ
ದಲದಂತೆ ಮತ್ತಿನರ ಕಣ್ಗೆ ಬೆರೆದಂತಿರ್ಕು
ಮುಳಿಯದಿರ್ ಕಾಂತೆ ಸದ್ಭಕ್ತರೀ ಲೋಕದೊಳ್ ಬೆರೆದು ಬೆರೆಯರ್ ಸಂತತಂ
ಪಲವಾತದೇತರ್ಕೆ ವಿಗತಲೋ[2]ಕರ್ಭಕ್ತ
ರೊಲವಿನಿಂ ನರಲೋಕವಿದು ಹರನ ಲೋಕಮಿದು
ನೆಲೆಯೆಂಬ ಬುದ್ಧಿ ಬೇಡವರಿರ್ದುದೇ ಶಿವನ ಲೋಕಮೆನಿಕುಂ ಭಾವಿಸೆ ೧೧೩

ತರಳೆ ಭಕ್ತಿಯ ಸಕೀಲಂಗಳಂ ನೀನಱಿಯ
ಪಿರಿದು ಮಾತುಗಳಿಂದವೇನಪ್ಪುದೆಂದು ನಿ
ರ್ಭರದಿಂದೆ ನುಡಿದ ಪತಿಗಿಂತೆಂದಳಾನಱಿಯೆನತಿಭಕ್ತಿಯಂ ನಿಕ್ಕುವಂ
ಪಿರಿದು ನೀವಱಿದಪ್ಪಿರಾಯೋಹಿಲನ ತೆಱದೆ
ಹರನ ಪುರಿಗೀಗಳೇ ಪೋಗದಿರಿರೆಂದು ನಗೆ
ವೆರಸಿ ನುಡಿದಾ ಯುವತಿಗಿಂತೆಂದನಾ ಭೂಪನತಿಹರುಷವಮುಣ್ಮುತಿರಲು ೧೧೪

ಶಿವಪುರಿಗೆ ಪೋಪುದೇಂ ಚೋದ್ಯಮೆನಲಾವಾಗ
ಳವನಿಪತಿ ಏತೆಱದೊಳೆನಿಬರೊಡಗೂಡಿಯೆನೆ
ಯುವತಿ ಕೇಳಿಂದೆ ಈತೆಱದೊಳಗಣಿತಜನಂಬೆರಸಿ ಪೋದಪನೆನಣಿಯರಂ
ತವಕದಿಂ ಮೂದಲಿಸಿ ನುಡಿದ ನುಡಿಯಂ ಕೇಳ್ದು
ಶಿವಭಕ್ತರುಸಿಕನಿರ್ಪುದು ಸಲ್ಲದಬಳೆ ನೀಂ
ಲವಲವಿಕೆಯಿಂ ನೋಡೆನುತ್ತೆ ಪಡಿಹಾಱರಂ ಕರಸಿ ಮುದದಿಂ ಗೂರ್ಜರಂ ೧೧೫

ಮಿನುಪ ಕೈಲಾಸಪ್ರಯಾಣಕ್ಕೆ ಬರ್ಪುದೆಂ
ದೆನುನಯದೆ ಸಾಱಿಸಲ್ಕಾ ರವಂಗೇಳ್ದು ತೊ
ಟ್ಟನೆ ತನ್ನ ನಾಡವರ್ಗಳೆಲ್ಲರ್ಬೈತರೆ ಕಂಡಲಂಕರಿಸಿಕೊಂಡು ತಾನು

---

[1] ಕ್ತ (ಗ) [2] ಕೋ. (ಗ)

ವಿನುತ ತುರಗಾರೂಢನಾಗಿ ತನ್ನರಸಿಯರ್
ತನುಜರ್ ಸುಹೃತ್ಪರಿಜನಾದಿಗಳ್ವೆರಸಿ ಭೂ
ಜನಸಮಾವೃತನಾಗಿ ಭಕ್ತಚಯಮೆಯ್ದೆ ಜಯಜಯ ಎಂಬ ದನಿಗಳೊಡನೆ ೧೧೬

ತರತರದೆ ಪಿಡಿದಾತಪತ್ರಧ್ವಜಂಗಳುರು
ತರ ಚಾಮರಂಗಳೆಸೆಯುತ್ತಿರಲ್ ಸಂಗೀತ
ವರ ಮಂಗಳಾನಕಂಗಳ ರವಂ ಶೋಭಿಸಲ್ ಸುರದುಂದುಭಿಧ್ವಾನವು
ಪಿರಿದೆಸೆಯೆ ಪೂಮಳೆಗಳೆಲಗೆ ಧರೆಯೊಳ್ ನಾಡೆ
ನೆರೆಯೂರ್ಗೆ ದೇವಕಾರ್ಯಕ್ಕೆ ಪೋಪಂತೆ ಪು
ಷ್ಕರವದಿರೆ ಸುರಸಮಿತಿ ಪೊಗಳಲುದ್ದೀಪಿತೋನ್ನತ ಮಹಿಮೆ ಕಡುಮೆಱೆಯಲು ೧೧೭

ಹರಗಣಾವಳಿಯಾಜ್ಞೆಯಂ ಶಿರದೊಳಾಂತು ತ
ಚ್ಚರಣ ಕೃಪೆವಡೆದು ವಿಸ್ಫುರಿತ ಭಕ್ತಿಪ್ರಭಾ
ಸ್ಫುರದಮಲಕೀರ್ತಿವಿಸ್ಫೂರ್ತಿ ಕೈಲಾಸಕ್ಕೆ ಪೋದನತಿಸಂತೋಷದಿಂ
ನಿರುತಂ ಕುಮಾರಪಾಲಕ ಗೂರ್ಜರಂ ಮುನ್ನೆ
ಕರಮುದಜಿುನತಿಹಿತವರಾದ ವನಿತೆಯರ ಬಂ
ಧುರವಾಕ್ಯಮಂ ಕೇಳಿದರ್ಗೆ ಲೇಸಕ್ಕುಮೆಲೆಯೂಂಡಾರಿ ಪಿಂಗು ನೀನು ೧೧೮

ಸದಮಲಪ್ರಚುರ ವಿಶ್ರುತಪರಮಭಕ್ತಗಣ
ಪದಸರೋರುಹಸಾಂದ್ರ ಮಕರಂದಪಾನ ಸ
ಮ್ಮುದಿತ ಚಂಚಚ್ಚಂಚರೀಕನನವರತ ಪಂಚಾಕ್ಷರೀಪ್ರಸಿತಹೃದಯಂ
ವಿದಿತ ಮಂಜುಲನೀಲಕಂಠಾಹ್ವಯಂ ಮನೋ
ಮುದದೆ ಪೇಳ್ದುರುತರಾರಾಧ್ಯಚಾರಿತ್ರದೊಳ
ಗಿದು ವಲಂ ರಾಜಿಪ ಕುಮಾರಪಾಲಕ ಗೂರ್ಜರನ ಕಥಾಮೃತಸಾರವು ೧೧೯

# ಒಂಬತ್ತನೆಯ ಸಂಧಿ

## *ಗುರುಭಕ್ತಾಂಡಾರಿ ಕಣ್ಗಳಂ ಕಿಳ್ತಿಕ್ಕಿ ಮರಳಿ ಪಡೆದ ಕಥೆ

ಸೂಚನೆ: ನೆಗಳ್ದ ಭಕ್ತಾಗ್ರೇಸರಂ ಭಕ್ತನಿಧಿ ಭಾಸು
ರ ಗುರುಭಕ್ತಾಂಡಾರಿ ಕಣ್ಗಳಂ ಕಿಳ್ತಿಕ್ಕಿ
ಮಿಗೆ ಪಡೆದ ಕಥೆಯನಾಲಿಸು ಸೂರಸಚಿವೇಂದ್ರ ಪೇಳ್ದಪೆಂ ಸಂತಸದೊಳು

ಕಡಗಿ ತಲೆಯೆಡೆಯೆಡೆಯೊಳಡಿಯಿಡುವ ಬಾಂದೊಱೆಯೆ
ಕಡಲೊತ್ತುವಿಡಿದ ಕೆಂಜೆಡೆಗಡಣವೇ ಪವಳ
ಗುಡಿಗಳೆಳದಿಂಗಳುಱೆತೆರೆಯಿಂದೆ ಮೇಲ್ತೇಲಿ ಮಿಱುಪ ಪೊಸೆಮುತ್ತುಸಿಂಪ
ನಡುಗಣ್ಣುರಿಯೆ ಪಾಯ್ವ ಪೆರ್ದೆರೆಯಿನಿರದೆ ಕಡೆ
[1]ಸಿ[1]ಡಿದ ಕೆಮ್ಮಣಿಯಾಗಿ ಕಣ್ಗೆಡ್ಡಮಾಗಿ ಚೆ
ಲ್ವಿಡಿದ ಕರುಣಾಬ್ಧಿ ತಲೆದೋಱದಂತಿರ್ದ ಬಿಸಗೊರಲನೆಮಗೀಗಿಷ್ಟಮಂ ೧

ಸುಗುಡರಾದರ್ ವನಿತೆಯರ ಮಾತುಗೇಳೆ ತೊ
ಟ್ಟಗೆ ಸುಖಮನನುಭವಿಸುವರ್ ಸಂತತಂ ಬಂಧು
ರ ಗುರುಭಕ್ತಾಂಡಾರಿ ಎನ್ನಮಾತಂ ಕೇಳ್ದು ಪೆಱಪಿಂಗು ಲೇಸಪ್ಪುದು
ಮಿಗೆ ನಾಣ್ಗೆಡಲ್ವೇಡ ನೀನೆಂದು ಬೋಧಿಸಲ್
ನೆಗಳ್ದ ಭಕ್ತರ ಚರಿತ್ರಂಗಳಂ ಪೇಳಲವೆ
ತಗುಳ್ದವಂಗುರಿಯೊಳಗೆ ತುಪ್ಪವೆರೆದಂತೆ ಪಿರಿದೆಯ್ದಿಸಿದುವತಿತಾಪಮಂ ೨

ಭರದಿಂದಿವಂ ತಿಳಿಯಬೇಕೆಂದು ಬಿತ್ತರದೆ
ವರಮಲ್ಲಣಾದಿಗಳ ಕಥೆಯ ಸತ್ಪ್ರೌಢಿಯಿಂ
ದೊರೆಯೆ ಕಣ್ಬೇಟದಿಂ ಕಿವಿವೇಟಮೆಯ್ದೆ ಪಿರಿದಾಯ್ತು ಮತ್ತೀಗ ನೋಡೆ
ಪಿರಿದು ಶಾಂತಿಯ ಮಾಡೆ ಬೇತಾಳವೊಗೆದ ತೆಱ
ನಿರದಾಯ್ತು ಮತ್ತಮುಜ್ಜುಗಿಸುತಿರ್ದಪನೆನ್ನ
ಹರಣಕ್ಕೆ ಮುನಿಯಲಿನ್ನೇವೆನೀ ಕಾಮಾಂಧನೇನೆಂದೊಡಱಿಯನಕಟ ೩

---

[1] ಗಿ (ಕ)

* ಗುರುಭಕ್ತಾಂಡಾರಿ ಕಣ್ಗಳ್ತ ಕಥೆ (ಕ)

ಮುಂದಿನ್ನಿನಂಗೆ ಶಿವಕೃಪೆಯದೆಂ[1]ತ[1]ಪ್ಪುದೋ
ಎಂದು ನೋವುತ್ತೇನನೊರೆದೊಡಂ ಕೇಳನಿವ
ನಿಂದುಧರನೇ ಬಲ್ಲನೆನುತೆ ನುಡಿದಳ್ ಕೇಳ ಕಾಮಾಂಧ ಭಾವಿಸುವೊಡೆ
ಒಂ[2]ದುತೆಱದಾ[2]ಚರಣೆ ಗುರುವೆಡೆಯೊಳೆನಗೆ ನಿನ
ಗೊಂದಿತೋಱುಗುವುದಱಿನೆನ್ನ ಮನೆಗೊಲವಿನಿಂ
ದೊಂದಿರುಳ್ ನಿನ್ನ ಸದ್ಗುರುದೇವರೆಯ್ತಂದು ಸುಖಮಿರ್ದು ಪೋದರೆನಲು ೪

ತುರಿತದಿಂದಾ ಮಾ[3]ತುಗೇ[3]ಳಲೊಡನಾಗಳೇ
ಪಿರಿದು ನೋವುತ್ತಿಂಗಳಂ ಮೆಟ್ಟಿದಂತೆ ನಿ
ರ್ಭರದೆ ಮಱುಗುತ್ತವನಿಯೊಳ್ ಬಿಳ್ದು ಪೊರಳುತ್ತೆ ವದನಮಂ ಪೊಯ್ದುಕೊಳುತೆ
ಉರುಶೋಕಸಂಕ್ರಾಂತಚೇತಸ್ಕನಾಗುತ್ತೆ
ಪರವಶಂಬೊಂದಿ ಮಗುಳ್ದೆಚ್ಚತ್ತು ಹಾ ಗುರುವೆ
ಗುರುನಾಥ ಮತ್ಸ್ವಾಮಿ ಹರಮೂರ್ತಿ ಕೆಟ್ಟೆ ನಾನೆಂದೊಱಲುತಳವಳಿ[4]ಯು[4]ತೆ ೫

ಎನಗೆ ಗತಿಯಾವುದೆಲೆ ತಾಯೆ ಪೇಳ್ ನೀನೆನು
ತ್ತನುನಯಂ ಪ್ರೌಢವತಿಯಡಿಗೆಱಗಿ ನಿನ್ನನಾಂ
ವಿನಯದಿಂ ನೋಡಿದತಿದೋಷವೊಳಸೋರ್ವುದೆಂತೆನಗೆ ಪೇಳೆನ್ನ ತಾಯೆ
ನಿನಗೆಳಸಿದಪರಾಧಮೆಂತು ಪೋಪುದು ತಾಯೆ
ನಿನಗೆ ಕಡುಮಱಿದ ಪಾತಕಮೆಂತು ಕಿಡುಗುಮಱಿ
ನಿನಗೆ ಮೇಲ್ವಾಯ್ದೆನ್ನ ತಪ್ಪು ತಾನೆಂತಳಿವುದೆಲೆ ತಾಯೆ ಪೇಳ ನೀನು ೬

ನಿನ್ನ ರತಿಗೆಳಸಿದಾ ದ್ರೋಹಕ್ಕೆ ನಿನ್ನ ತನು
[5]ವನ್ನಲಿದು[5] ತಳ್ಕೈಸಬಯಿಸಿದಘಸಂಘಕ್ಕೆ
ನಿನ್ನೊಡನೆ ಹಾಸ್ಯಮಂ ಮಾಡಿದಾ ಪಾತಕಕೆ ಬಿಡುಗಡೆಯದೆಂತು ತಾಯೆ
ಸನ್ನಿದಂ ಪೊಡವಿಯೊಳಗೆಂತಪ್ಪ ಪಾಪಿಯಾಂ
ಮುನ್ನಿನ ಭವಂಗಳೊಳಗೆನ್ನನೀ ದುಷ್ಕರ್ಮ
ಪನ್ನಗಂ ಪಿಡಿದಡಸಿ ನುಂಗಿ[6]ತ್ತಿ[6]ದರ್ಕೆ ಮರ್ದಂ ಪೇಳ್ವುದೆನ್ನ ತಾಯೆ ೭

[1] ದ (ಕ) [2] ದೆರಡರಾ (ಕ) [3] ತಕೇ (ಗ) [4] ವು (ಗ) [5] ವನ್ನಱಿದು (ಗ)
[6] ತ್ತ (ಕ)

ಪಿರಿದು ತ್ರಿಸಂಧೆಯೊಳಗೀಶನರ್ಚನೆಗಳಂ
ಕರಮುಳ್ಳಿತ್ತಿಯಿಂ ಮುನ್ನೆ ಮಾಡದಾದೆನೊ [1]ವೆಱಿಂ[1]
ಹ[2]ರಿಸ[2]ದಿಂ ದ್ವೈತಬುದ್ಧಿಯಿಂದರ್ಧೇಂದುಧರನನೀಯಾತ್ಮನೆಂದು
ಭಗದೆ ನೆನೆದೆನೊ ಶಂಭುವೊಡೆಯನಾನಾಳೆಂಬ
ಸರಳಮತಿ ದೊರಕಲಾಯ್ತೋ ನಾಡೆ ಭಾವಿಸಲ್
ಪರಮೇಶ್ವರನ ಷೋಡಶೋಪಚಾರಂಗಳಿಂದರ್ಚಿಸಲ್ ನೆಱೆ ಮಱೆದೆನೊ ೮

ಮಿಸುಪ ರಾಜೋಪಚಾರಂಗಳಂತಾವಗಂ
ಶಶಿಧರಂಗುಪಚಾರನಿಕರಂಗಳಂ ಕರಂ
ಯೆಸಗದಾದೆನೊ ಮುನ್ನೆ ಫಲಚಯಂಗಳ ಬಯಸಿ ಪೂಜಿಸಿದೆನೋ ಶಿವನನು
ಎಸೆವ ಪರಶಾಸ್ತ್ರ[3]ಳಿ[3]ಗಳನೊಸೆದು ದುರ್ಬುದ್ಧಿ
ವಿಸರದಿಂದಾಲೋಚಿಸಿದೆನೊ ಮತ್ತಪಸರನು
ನೊಸೆದಾಲಿಸದೆ ಬಂದ ಭಕ್ತರಂ ಧಿಕ್ಕರಿಸಿ ನೂಂಕಿಸಿದೆನೋ ಬಳಿಕ್ಕಂ ೯

ಪಿರಿದುಮಷ್ಟಾಂಗಪ್ರಮಾಣಮಂ ಮನವೊಸೆದು
ಚರಲಿಂಗಮಂ ಕಂಡು ಮಾಡದಾದೆನೊ ಮುನ್ನೆ
ಹರಭಕ್ತರಂ ಕಂಡುದಾಸೀನದಿಂದುನ್ನತಾಸನದೊಳೆಸೆದಿರ್ದೆನೊ
ಶರಣರೆಯ್ತರಲುಚಿತ ಸತ್ಕ್ರಿಯೆಗಳಂ ಮಾಡ
ದುರುಗರ್ವವೃತ್ತಿಯಿಂದಿರ್ದೆನೋ ಭಕ್ತಿಯಿಂ
ಕರಮರ್ಚನೆಯನೆಸಗಿತಿಲ್ಲವೋ ಜಂಗಮಾಳಿಗೆ ಪೇಳ ತಾಯೆಯಾನು ೧೦

ಮಿಗೆ ದೀನವೃತ್ತಿಯಿಂ [4]ಪಂಕ್ತಿ[4]ಭೇದಂಗಳಂ
ಬಗೆದು ಭಕ್ತರ್ಗೆ ಮುನ್ನೇಂ ಮಾಡಿದೆನೊ ಮತ್ತೆ
ನೆಗಳ್ದ ಭಕ್ತರ ಕುಲಮನವಿಚಾರದಿಂ ವಿಚಾರಿ[5]ಸಿದೆನೋ ವ್ಯೆಯಱಿಯದ್[5]
ತಗುಳ್ದು ಭವಿಗಳ ಬೆರಸಿದೆನೊ ಮನೋರಾಗದಿಂ
ದಗಲಲಾದೆನೊ ಅಸಂಸ್ಕಾರ ಪಾತಕಗಳಂ
ಮಿಗುವ ಶರಣರೊಳೆಗ್ಗುಗಳನೆಯ್ದೆ ಪಿಡಿದೆನೋ ನಾಣ್ಗೆಡಿಸಿದೆನೊ ಭಕ್ತರಂ ೧೧

ಶಿವನ ತತ್ತ್ವಾನುಭವಗೋಷ್ಠಿ ಪ್ರಸಂಗ[6]ದೊಳ್[6]
ಭವಭಕ್ತರೊಡನೆ ಪೋರ್ದೆನೊ ಶಂಭುಸೇವೆಯೊಳ್
ತವಕಮುಡುಗಿದೆನೊ ಗುರುವಿದ್ಯಾಶಿವರ್ಕಳೊಳ್ ಭೇದಬುದ್ಧಿಯ ನೆನೆದೆನೊ

---

[1] ವಲಂ (ಕ) [2] ರುಷ (ಗ) [3] ದಿ (ಗ) [4] ಭಕ್ತಿ (ಕ) [5] ಸದೆವ್ಯೆಮಱೆದೆನೊ (ಕ) [6] ಗಳ (ಗ)

ಅವಿರತಂ ಗುರುವ ಜಾನಿಸೆನೊ ಗುರುಪದಪದ್ಮ
ಕವಸರದೆ ಶಿವನನೊಲ್ದೆಱಗಿಸೆನೊ ಗುರುವಂಶ
ನಿಸಹವಂ ಮನ್ನಿಸೆನೊ ಪರವಾದಿಗಳ್ಗೆ ಪೆಳಱಿದೆನೊ ಮುನ್ನಿನ ಭವದೊಳು ೧೨

ಅಱಿಯೆನೋ ಶಿವಧರ್ಮ[1]ವ[1]ರ್ಮವಂ ಸಂಸ್ಕೃತಿಯ
ಜಱೆಯೆನೋ ನಿಜ ಹೃಷೀಕಾಳಿ ತರುನಿಚಯಮಂ
ಮುಱಿಯೆನೊ ಭ್ರಮಿಸಿ ಲಿಂಗಾನರ್ಪಿತದ ರುಚಿಗೆ ರಸನೆಯಂ ತೆಱಿಪಿತ್ತೆನೊ
ತೊಱೆದೆನೋ ಸದ್ಭಕ್ತ ಸದ್ಗೋಷ್ಠಿಯಂ ಮುನ್ನೆ
ತಱಿಸಂದು ಖಳರೊಡನೆ ಗೋಷ್ಠಿಯೊಳಗಿರ್ದೆನೋ
[2]ಉಱುಶ್ಶೈವದಾ[2]ಜ್ಞೆಯಂ ಮೀಱಿದೆನೊ ಅನ್ಯದೈವಕ್ಕೆಱಗಿದೆನೊ ಸಂತತಂ ೧೩

ಮಿನುಪ ನಿಯಮಾಚಾರ ಭಾಷೆಗಳ ಜಱೆದೆನೋ
ವಿನಯಮಂ ಸಭ್ಯಜನದೊಳ್ ಬೀಱದಿರ್ದೆನೋ
ಮನಸಿಜಾಂತಕ ಭಕ್ತ[3]ವ[3]ರ್ಗಂಗಳಂ ಮುಂದೆ ದೂಱಿದೆನೊ ಹ[4]ರಿಸ[4]ದಿಂದಂ
ವಿನುತ ಶಿವಲಾಂಛ[5]ನಿಯರಂ[5] ಭವಿಗಳಾವಾಸ
ಕನುನಯದೆ ಮಾಱಿದೆನೊ ಲಿಂಗಪ್ರಸಾದಮಂ
ಮುನಿದು ಬಿಸುಟೆನೊ ನೆಲಕೆಯೆಡಗಿರ್ದನಿಕ್ಕಿದೆನೊ ಕೂಡಿರ್ದ ಶಿಷ್ಟರೆಡೆಗೆ ೧೪

ನುಡಿದೆನೋ ಪಕ್ಷಪಾತದೊಳನೃತಮಂ ಮುನ್ನೆ
[6]ಸಡಿಲಿ[6]ದೆನೊ ದೃಢಭಕ್ತಿಯಂ ವ್ರತಮನುಡುಗಿದರ
ಬಿಡದೆ ಕಂಡೆನೊ ಪರಾಂಗನೆಗೆಳಸಿದೆನೊ ಅಭವನಿಂದೆಯಂ ಮಿಗೆ ಕೇಳ್ದೆನೊ
ಸಡಗರದೆ ಶಿಷ್ಟರಂ ದೂಷಿಸಿದೆನೋ ನಾಡೆ
ಕಡುಗಮ್ಮೆ ಕಾಮಾಂಧನೇಂ ಧೂರ್ತನೆಂದಮ್ಮೆ
ಗಿಡುಕನೆಂ ದುರ್ವ್ಯಸನಿಯಾನೆನಗೆ ಗುರುಕಲ್ಪಿತ ದ್ರೋಹಮೆಯ್ದಿತಯ್ಯೊ ೧೫

ಗುರುಭಾರ್ಯೆ ಗುರುವೊಸೆದು ನಡಪಿದವಳುಂ ತನ್ನ
ಗುರು ಕೊಂಡವಳುಮಂತೆ ಗುರುವೊತ್ತೆವಿಡಿದವಳು
ಮಿರದೊರ್ವೆ ಗುರು ರಮಿಸಿದವಳುಮಿಂತೈವರುಂ ಗುರುಸತಿಯ ಸದೃಶರನಿಶಂ
ಪರಮಶಿಷ್ಯಂಗಿದುವೆ ಸಿದ್ಧಾಂತಮೀಯರ್ಥ
ದಿರವನೇ ಸದ್ವಾಕ್ಯಮುಸು[7]ಗರ್ಮ[7]ದಱಿಂದೆನಗೆ
ಗುರುದಾರಗಮನಮೆಯ್ದಿತ್ತಬ್ಬೆ ಕೆಟ್ಟೆನಾನೆಂತಪ್ಪ ಕಡುಗಾಮಿಯೊ ೧೬

---

[1] ಮ (ಕ) [2] ಉರುವ ಶಿವನಾ (ಗ) [3] ಮ (ಕ) [4] ರುಷ (ಗ) [5] ನಗಳಂ (ಕ) [6] ಪಡಿಪಿ (ಕ) [7] ರುವ (ಕ)

ಇದನೆಂತು ನೀಗುವೆಂ ತಾಯೆ ಮುನ್ನಡಿದುದನೆ
ಒದಱುತ್ತುಮಿರ್ಕುಮಂಢಾ ಧೃತಾಚ ಎನುತ್ತೆ
ಮುದದೆ [1]ಕ್ರೀತಾಚ ಮನೌಲ್ಯೇನ ಚ[1] ಸಮಾವೃತಾ ಎನುತೆ ಮತ್ತಂ ಸಂತತಂ
ಪದೆದುಂ ಸಕೃತ್ಕಾಮು ಎನುತುಂ ಗತಾವಾಪಿ
[2]ಇದು ಪಲಮೆನುತ್ತೆ ಮಿಗೆ ಪಂಚಧಾ ಎನುತುಮಂ
ತೊಡಗಿ ಗುರುಯೋಷಿತಃ ಎನುತೆ ಸದ್ವಾಕ್ಯಮಿವರ್ಕೈವರುಂ ಗುರುಸತಿಯರು ೧೭

ಗುರುವಿನತ್ತಿಗೆ ನಾದಿನಿಯರುಮಂತಾ ಪರಮ
ಗುರುವಿನವರುಂ ಮುನ್ನೆ ಗುರುವಿರಿಸಿಕೊಂಡಿರ್ದ
ಮರಳಿ ಬಿಟ್ಟಾ ವಾರನಾರಿಯರುಮಾವಗಂ ಗುರು ಕೂರ್ತ ಬೆಲೆವೆಣ್ಗಳುಂ
ಗುರುವೊ[3]ತ್ತೆ[3]ಯುಂ ಕೊಟ್ಟ ವಾರಾಂಗನೆಯರುಮಾ
ಗುರುವೊರ್ವ ನೆರೆದ ಪಣ್ಯಾಂಗನೆಯರುಂ ಬಳಿಕೆ
[4]ನಿರುತಮಿಾಯೈವ[4]ರುಂ ಗುರುಸತಿಯ ಸದೃಶವಲ್ಲಾ ತಾಯೆ ಕೆಟ್ಟೆನೆನುತೆ ೧೮

ಮಗುಳ್ದವಳ ಚರಣದೊಳ್ ಪೊಡೆಗೆಡೆವನೆಲೆಯಬ್ಬೆ
ತೆಗಳೆನ್ನ ಪೊರ್ದಿತೀ ಘೋರತರಪಾತಕಮು
ನಗಲಿರ್ಪುದಕ್ಕೆನಗೆ ಮಾರ್ಗಮಾವುದು ಬೆಸಸೆನುತ್ತೆ ಶೋಕಾಗ್ನಿಯೊಳಗೆ
ಅಗುಳ್ದು ಭೂಮಿಯೊಳೆ ಪೊರಳುತ್ತೇಳುತುಂ ಮತ್ತೆ
ಬಗೆಗೆಟ್ಟು ಚಿಂತಿಸುತೆ ಶಿರವೊಡೆವ ಪಾಂಗಿನಿಂ
ದೊಗೆದೆಳಲೊಳವನಿಯೊಳ್ ತಾಟಸಿಕೊಳುತ್ತೆ ಪೊಡೆಯುಂ ಪೊಸೆದು[5]ಕೊಳುತಳುತ್ತೆ[5] ೧೯

ತನುವಂ ಪರಿಚ್ಛೇದಿಸಲ್ ಬಗೆವನೆಯ್ದೆ ತೊ
ಟ್ಟನೆ ಲಿಂಗಗರ್ಭಮಂ ಪುಗುವುದಕ್ಕನುಗೆಯ್ವ
ನನುನಯದೆ ತನ್ನ ದೇಹಮನರಿದು ಖಂಡಂಗಳಂ ನಾಡೆ ದಿಗ್ಬಲಿಯನು
ಮನವೊಸೆದು ಮಾಡಬಗೆವಂ ತನ್ನ ಕಾಯಮಂ
ಘನ ಶಿಲೋಲೂಖದೊಳಗಿಟ್ಟು ಮುಸಲದೊಳೊಲ್ದು
ಸನಯದಿಂ ತುಳಿತುಳಿದು ಪರಿವ ಸದ್ಯೋಪಕದೊಳಗೆ ಬೆರಸಬಗೆವನನಿಶಂ ೨೦

ಪಿರಿದು ಕರ್ಬೊನ್ನ ಕಂದುವಿನಲ್ಲಿ ದೇಹಮಂ
ಭರದಿನಿನಿಸಿನಿಸಾಗಿ ಕೊಯ್ದಿರಿಸಿ ಸುಡಬಗೆವ
ನಿರದವಳ ನಿಟ್ಟಿಸಿದ ಕಣ್ಗಳಂ ಕಿಳ್ತಿಕ್ಕ ನೆನೆವನನವಳಿರ್ದ ಬಳಿಗೆ

1 ಕ್ರೀಡಾಚ ಮಲ್ಲೀನಚ ಮಲ್ಲೀನಚ (ಕ) 2 ದು (ಕ) 3 ತ್ರಿ (ಗ) 4 ನಿರುತೆ ಯಿಾಯೇಳ್ವ (ಗ) 5 ಬೀಳುತ್ತೇಳುತೆ (ಕ)

ಹರಿಸದಿಂ[1] ನಡೆದು ಬಂದಡಿಗಳಂ ಮತ್ತವಳ
ವರಶರೀರಮನಪ್ಪಬಯಸಿದ ಕರಂಗಳಂ
ತುರಿತದಿಂದವಳೊಡನೆ ನುಡಿದ ರಸನೆಯನಿವೆಲ್ಲಮನುರಿಪಲಿಚ್ಛೈಸುವಂ ೨೧

ಪಡಪಿನಿಂದವಳೊಡನೆ ನಕ್ಕ ವದನಮನೊಲ್ದು
ಸುಡಲಂಘನಿಸುವನವಳಂ ನೋಡಿ ಪುಳಕಿಸಿದ[2]
ನಿಡುವೊಡಲ ಕಜಿಂತಜಿಂದು ಭೂಮಿಯೊಳ್ ಬಿಸುಡಲನುಗೆಯ್ವನಂತಾಗಳೊಸೆದು
ಕಡುಗೊರ್ಬಿದುನ್ನತಕುಚಂಗಳಾಲಿಂಗನವು
ನಡಿಗಡಿಗೆ ಬಯಸಿದಾ ವಕ್ಷವುಂ ನೆಜಿತ ಸೀಳಿ
ಪೊಡವಿಯೊಳಗರುಣಜಲವುಂ ಸೂಸಲಿಚ್ಛೈಪನದುನುಲ್ಲದೆಯುಮಾವಗಂ ೨೨

ಬಸುಜಿನಿರ್ಬಗಿಮಾಡಿಯೊಳ್ಗರುಳ್ಗಳ ಕಿಳ್ತು
ಮಿಸುಗುವೀಶಾಲಯುವುನಳ್ತಿಯಿಂದಂ ವಿರಾ
ಜಿಸುನ ತಂತುವ ಸುತ್ತುವಂತೆ ಮಿಗೆ ಸುತ್ತಕಟ್ಟಲ್ ನೆನೆವನಿಂತಲ್ಲದೆ
ನಸಿದು ಬಜಿುಕಯ್ಯದೀ ಪಾಪವೆನುತಾವಗಂ
ಬಸವಳಿವುತತ್ಯಂತದುಃಖಾಗ್ನಿ[3]ನಯುನದೊಳ್
ನುಸಕದಿಂ ತಿಂಬಲ್ಕೆ ತಾನಿದಿರುವೆಂಬುದಂ ಮಜಿತದು ವಿಭ್ರಾಂತನಂತೆ ೨೩

ಗಳಗಳನೆ ಪೊಳಲ ಪೊಜಿಮಟ್ಟು ಪೋಪಂ ಮತ್ತೆ
ಘಳಿಲನೊಡನೈತರ್ಪನಭವಾಲಯಂಬುಗುವ
ನಳವುಗಿಡುವಂ ಬೀಳ್ವನೇಳ್ವನಡವಿಗೆ ಪೋಗಿ ಮಿಗೆ ಪಲುಂಬುವನಜಸ್ರಂ
ಮಿಳಿರ್ವ ಶೋಕಾಗ್ನಿಯಿಂ ಬೆದಬೆದನೆ ಬೇಯುತ್ತೆ
ಬಳಲುತ್ತೆ ಕಲುಷಿತಸ್ವಾಂತನಾಗುತ್ತೆಲೆಲೆ
ತೊಳಪ ಚೂತವೆ ಪೂತನೆಂತಪ್ಪೆನಾನೆನಗೆ ಬುದ್ಧಿಯಂ ಪೇಳಸವಸಂ ೨೪

ಎಲೆ ನಾರಿಕೇಳವೇ ಈ ನಾರಿಗುರುನಾರಿ
ಸಲೆ ತಪ್ಪದೆಂಬುದಂ ಮಜಿತದು ಕೆಟ್ಟೆಂ ಮತ್ತೆ
ವೊಲವಿನಿಂ ಮಂದಮತಿಯಾದೆ ನಾಂ ಪೇಳೆನಗೆ ಪೀಚು ಮಂದವೆ ಬುದ್ಧಿಯಂ
ಸುಲಲಿತಾಶೋಕವೇ ಈ ಶೋಕಮೆನಗೆಂದ್ಕು
ತೊಲಗುವುದು ಚಂದನವೆ ಎನ್ನ ಪಾಪಂ ನಾಡೆ
ಮಲರ್ವ ಚಂದವುನೆನಗೆ ಪೇಳ್ ಬಸುರಿ ಶಿವನ ಬಸುಜಿಂ ಪುಗುವೆನೆಂ[4]ತೊ ಅ[4]ನು ೨೫

---

1 ರುಷ (ಗ) 2 ಸುವ (ಕ) 3 ಷ್ರು (ಕ) 4 ತುನಾ (ಕ)

ಮಿನುಪ ಘನಸಾರವೇ ಈ ಘನಾಘಂ ಎನಗೆ
ನನಸುವೋಘಂ ದಲೆಂದಪ್ಪುದೋ ಭ್ರಮರವೇ
ಎನಸುಮೆನ್ನೀ ಭ್ರಮೆಗೆ ಪುಚ್ಚಳಿಯದೆಂತಕ್ಕುಮೋ ನುಡಿವ ಗಿಳಿಯೆ ನೀನು
ವಿನಯದಿಂ ನುಡಿಯೆನ್ನ ಪಾಪಮಳಿವಂದಮಂ
ವಿನುತ ಪ್ರಲಾಪಿಸುವ ಪರಪುಟ್ಟಮೇ ಎನ್ನ
ಮನದೊಳ್ ಪ್ರಲಾಪಿಸುವುದೆಂದಳಿವುದೋ ನಿನ್ನ ಸುಗತಿಯಕ್ಕೆನಗಂಜೆಯೆ ೨೬

ಪುರವೈರಿನಗರಿಯಂ [1]ಪಾ[1]ರ್ದುಕೊಂಡಿರ್ಪನಾಂ
[2]ಭರ[2]ದೆ ಕಾಲನ ಘೋರಪುರಮನೈದಿದೊಡೆನ್ನ
ಹರಭಕ್ತರೆಯ್ದೆ ನಗರೇ ನಗರದೇ ಪ್ರಮಾದಿ ಪ್ರಮಾದಂ ಬಳಿಕ್ಕಂ
ನಿರುತ[3]ಮಗಲ[3]ರ್ಪುದರ್ಕಾವ ಪವಣೆಲೆ ವಪ್ರ
ಪಿರಿದು ಪೇಳೆನಗೆ ಮಿಗೆ ನಂದಿಮಹಕಾಳರಿರ
[4]ಪರಕಾಳಕಂಠನೆನೆ[4]ಗೆಂದು ಕೃಪೆಯಪ್ಪನೀ ಮೊಱೆಯಿನತಿಸಂತೋಷದಿಂ ೨೭

ತೊಳಪ ರುದ್ರನ ಮಿಱುಪ ಮುಖಭದ್ರವೇ ಕೇಳ
ಮಿಳಿರ್ದ ಭದ್ರಂ ದಲಾದಿಯುಪದ್ರವಹುದೆಂದು
ಘಳಿಲನೆನ್ನಂ ಪಿಂಗಿ ಪೋಪುದೆಲೆ ವೀರಭದ್ರಾ ಕರುಣಿಸೆನಗೆ ನಲಿದು
ಲಳಿತ ವೀರತ್ವಮಂ ಪ್ರಥಿತ ಸತ್ವಮಥ[5]ರಿರ[5]
ಬಳೆದ ಪಾಪನೀಕಮಥನಮಂ ಮಾಳ್ಪದ
ರ್ಕಳಘುಮತಮಾವುದೆನಗೊಲ್ದು ಪೇಳಿರೆ ಎಂದು ಬಾಯ್ಬಿಡುವನನವರತವು ೨೮

ಎಲೆ ಪುರಾತನರಿರಾ ಈ ಪಾಪಮೆನಗೆಂದು
ತೊಲಗುವುದು ಮಟ್ಟಮಿರದುಸುರಿ ಎನುತುಂ ನುಡಿವ
ನಲಘುತರ ವೀರಮಾಹೇಶ್ವರಿರಸಂಖ್ಯಾತರಿರ ಪುಯ್ಯಲಿಡೆ ಕೇಳದೆ
ಸಲೆಯುಸಿಕನಿರ್ಪರೇ ನೀವೆನುತೆ ಪಲುಬುತ್ತೆ
ಪಲವಾತನುಸುರಲೇನಭವ ಚಿತ್ತೈಸೆನ್ನ
ಲಲಿತದೇಹಂ ಬಿಟ್ಟು ಶುದ್ಧನಾಗೆನುತೆ ಗುರುಭಕ್ತಿಯಾಂಡಾರಿ ಬಳಿಕಂ ೨೯

ಮನದೊಳಳುಕದೆ ತನ್ನ ಕಣ್ಗಳೆರಡಂ ದಸಿಯ
ಮೊನೆಯಿಂದೆ ನಿರ್ಭರದೆ ಚುಚ್ಚಿ ಮೀಂಟಕ್ಕಿ ತೊ
ಟ್ಟನೆ ಬಳಿಕ್ಕಂ ದೇಹಮಂ ಛೇದಿಸಲ್ಕುಜ್ಜುಗಂಗೆಯ್ಯಲನಿತಱೊಳಗೆ

---

[1] ಸಾ (ಕ) [2] ಬರಿ (ಕ) [3] ಮಘುಮಿ (ಗ) [4] ವ ಕಳಕಂಠಯೆನ (ಕ) [5] ರಲಿ (ಕ)

ವಿನುತಮಿಾ ವಾರ್ತೆಯಂ ಕೇಳುತೆ ಸುವ್ರತ್ತನ
ತ್ಯನುಪಮ ಸುಚಿತ್ತನುನ್ನತಚಿತ್ಸುಖಾಯತ್ತ
ನನಘಗುಣಪುಂಗನಂ ಸ್ವಗುರುಹಸ್ತಾಗ್ರಜಂ ತನ್ನನುಜನಲ್ಲಿಗೆಯ್ದಿ ೩೦

ಭರದಿಂದೆ ತನ್ನನಂ ಕಂಡಕ್ಕಜಂಬಡು
ತ್ತಿರೆ ವಿನಯ ಭಯಭಕ್ತಿಯಿಂದಗ್ರಜನ ಪಾದ
ಸರಸಿಜಂಗಳೊಳೆಯ್ದೆ ಬಿಳ್ದು ಪೊರಳುತ್ತಳು[1]ತ್ತಿ[1]ರ್ದವನ ನೋಡಿ ಕೃಪೆಯಿಂ
ಹ[2]ರಿಸ[2]ದೊಳ್ ನುಡಿದನಂಜದಿರಂಜದಿರು ನಿನ್ನ
ಗುರುಭಕ್ತಿಗೆಣೆಯುಂಟೆ ಗುರುಭಕ್ತಿಶೃಂಗಾರ
ಗುರುಭಕ್ತಿತಿಲಕ ಸದ್ಗುರುಭಕ್ತಿವರ್ಧನನೆ ದುಃಖಮುಡುಗೇಳೆನುತ್ತೆ ೩೧

ತವಕದಿಂ ಕಯ್ಗಳಂ ಪಿಡಿದೆತ್ತಿ ಬಿಗಿಯಪ್ಪಿ
ತವೆ ನಿನ್ನ ಗುರುಭಕ್ತಿ ಸಲೆ ಸಂದುದಾ ಪ್ರಮಥ
ನಿವಹಮಂ ನೀಕರಿಸಿ ತಳೆದಿರ್ದ ಶಾಪಮಂ ಕೆಲಸಾರ್ಚೆನುತ್ತೆ ಬಳಿಕಂ
[3]ಸವಿನಯದಿನಾ[3]ತನ ಶಿರಮನುರದೊಳೊತ್ತಿಕೊಳು
ತವೆ ಕಣ್ಗಳಿಂ ಸುರಿವ ರಕ್ತಧಾರೆಯ ರಾಜಿ
ಸುವ ತನ್ನ ಕಯ್ಗಳಿಂ ತೊಡೆಯುತ್ತೆ ಗುರುಚರಣಮಂ ಮನದೆ ನೆನೆಯುತಿರಲು ೩೨

ಅನಿತಱೊಳಗಾಂಡಾರಿಯಾ ಕಣ್ಗಳೆರಡು ಮು
ನ್ನಿನ ಮಾಳ್ಕೆಯಿಂ ಬರಲ್ ಶಿವಗಣಂಗಳ್ ನೋಡಿ
ಮನದೊಳಗೆ ಹ[4]ರ್ಷಿ[4]ಸುತ್ತಿರ್ದರೆಂಬುದನೊಸೆದು ಕಥೆಗಳೊಳ್ ಕೇಳ್ದುದೀವು
ಮಿನುಪ ಮಹದೇವಯ್ಯನವರ ಪಾದಂಗಳಂ
ಸನಯದಿಂ ಪಂಡಿತಾರಾಧ್ಯರಿಂದೀಗ ಘ
ಮ್ಮನೆ ಪಡೆದುದಂ ಕಂಡೆವೆಂದು ಕೀರ್ತಿಸಿದರಾ ಸದ್ಭಕ್ತರಳ್ತಿಯಿಂದಂ ೩೩

ಸದಮಲಪ್ರಚುರವಿಶ್ರುತ ಪರಮಭಕ್ತಗಣ
ಪದಸರೋರುಹಸಾಂದ್ರ ಮಕರಂದಪಾನ ಸ
ಮ್ಮುದಿತ ಚಂಚಚ್ಚಂಚರೀಕನನವರತ ಪಂಚಾಕ್ಷರೀಪ್ರಸಿತಹೃದಯಂ
ವಿದಿತ ಮಂಜುಲನೀಲಕಂಠಾಹ್ವಯಂ ಮನೋ
ಮುದದೆ ಪೇಳ್ದುರುತರಾರಾಧ್ಯಚಾರಿತ್ರದೊಳ
ಗಿದುವೆ ಗುರುಭಕ್ತಿಯಾಂಡಾರಿಯಾ ಸತ್ಕಥನಮಘಸರಿತ್ಪ[5]ತಿ[5]ಮಥನವು ೩೪

[1] ತನಿ (ಕ) [2] ರುಷ (ಗ) [3] ತವಕದಿಂದಾ (ಕ) [4] ರುಷಿ (ಗ) [5] ಪ (ಕ) ಕ (ಗ)

# ಹತ್ತನೆಯ ಸಂಧಿ

## ವೇಮನಾರಾಧ್ಯರ ಕಥೆ

ಸೂಚನೆ: ವೇಮನಾರಾಧ್ಯಪುಂಗವರ ಕಥೆಯಂ ಕೇಳ
ಕಾಮಹರಸದ್ಭಕ್ತ ಸೂರಸಚಿವೇಂದ್ರ ನೀಂ
ಪ್ರೇಮದಿಂದೆನುತೆ ಪಾಲ್ಕುರಿಕೆ ಸೋಮೇಶ್ವರಂ ಪೇಳ್ದನದನಾಲಿಸುವುದು

ಘುಸೃಣಪಿಂಜರ ಘೃಷ್ಟಿತಿಲಕಾಭಿರಾಮಮು
ಲ್ಲಸಿತಗೌರಾಭನುನ್ನತ ಪಾಂಡುಗಂಡನಂ
ತೊಸೆದ ಕುಡುವುರ್ಬುಗಳ ವಿಕ್ಷೇಪದೊಡೆವೆರೆದ ಕಡೆಗಣ್ಣನೋಟಮುಳ್ಳ
ವಿಸುಪ ಯಾಜುರ್ವೇದಶಾಖಾಮಯಂ ಸಿದ್ಧ
ವಿಸರ ಯಕ್ಷಾಳಿ ನಮಿತಂ ವಾಮದೇವಮುಖ
ಮೆಸೆಯೆ ರಾಜಿಸುತಿರ್ಪ ಗುರುನೀಲಕಂಠನೆಮ್ಮಂ ಪೊರೆಗೆ ಸಂತೋಷದಿಂ ೧

ಮತ್ತಮಿನ್ನುಂ ಕೇಳ ಪರಮೇಶ ಸದ್ಭಕ್ತಿ
ಮತ್ತವಾರಣನೆನಿಪ ಬೆಲ್ದೇವಿ ವೇಮನಾ
ರ್ಯೋತ್ತಮಂ ಶ್ರೀಶೈವಸಮಯೈಕದೇಶಿಕೋತ್ತಮನನಘನಮಲಚಿತ್ತಂ
ಬಿತ್ತಿಗಂ ಪಾಶಮೋಚನದೊಳಾವಗಮೆಯ್ದಿ
ಯುತ್ತಮಾಗಮಸಮೂಹಾರ್ಥವಿದನುನ್ನತಂ
ಬೆತ್ತಿಸೆವ ವೇದಪಾರಗನಜಸ್ರಂ ಧರ್ಮಸುಪ್ರತಿಷ್ಠಿತ ಯಶಸ್ಕಂ ೨

ಪರಮಪಂಚಾಕ್ಷರೀಮಂತ್ರಸಿದ್ಧ ಸಹಜ
ಕರುಣಾಕಟಾಕ್ಷವೀಕ್ಷಣ ಸುಧಾವಾರಿನಿಧಿ
ವರವೀರಮಾಹೇಶ್ವರಾಚಾರವಿಸ್ತಾರನತಿಗುಣಾಧಾರನನಿಶಂ
ಸರಳ ಬಸವಪದಾಂಬುರುಹಪಾವನಸ್ವಾಂತ
ನುರುನಮ್ರಜನಮೃತ್ಯುಹರಣಪ್ರಭಾವನುಟಿತ
ಚರಣನತಜನರ್ಗೆ ಪುನರಾಯುಃಪ್ರದಾತೃ ಶಾಪಾನುಗ್ರಹಪ್ರಬಲನು ೩

ಮೃಗ ಸರ್ಪ ವೃಶ್ಚಿಕ ವ್ಯಾಘ್ರ ಮಾರುತ ಜಲಾ
ದಿಗಳ ನೃಪಚೋರ ವಹ್ನಿಗಳ ಗರ್ವೇಭಕ್ಕೆ
ನೆಗಳ್ದ ಪಂಚಾನನನಿಭಂ ಸಕಲಜನಹರ್ಷಕರನೆನಿಸಿ ಪರ್ತಿಸುತಿರೆ
ಸೊಗಸಿನಿಂದೋರ್ವ ನರಪತಿ ಮದುವೆಯಾಗಿ ತೊ
ಟ್ಟಗೆ ತಾನುಮರಸಿಯುಂ ಬರುತಿರಲ್ ಕಟ್ಟೆದಿರೊ
ಳಗೆ ಪೂಗಳಂ ಕೊಯ್ವುತೆಸೆದಿರ್ಪ ವೇಮನಾರಾಧ್ಯರಂ ಕಂಡು ಮುದದಿಂ ೪

ಕರವೆತ್ತಿ [1]ಜೋಹಾರೆನುತ್ತೆ ವಂದಿಸಿ[1] ನೋಡಿ
ವರರಥಾರೂಢನಂ ನೃಪತಿಯಂ ಕಂಡು ಭಾ
ಸುರ ಭೂತ ವರ್ತಮಾನಾದಿ ಕಾಲಜ್ಞಾನನಂತನಾದುದಱನೆಯ್ದೆ
ಧರಣಿಪಂಗಲ್ಪಾಯುವೆಂದಱಿದು ಕೆಮ್ಮನತಿ
ಭರದೆ ಮತ್ತೊಂದೆಡೆಗೆ ಪೂಗೆಯ್ಯೆ ಪೋಗಲ್ಕೆ
ನರಪನುಱಿಸೊಂದು ನಮಿಸಲ್ ಪರಸರಿವರೆನ್ನನಿದ ನೋಡಿ ಸತಿ ನಗುವಳು ೫

ಎನುತೆ ಲಜ್ಜಿಸಿ ನಮಸ್ಕಾರವೆಂಬೀ ನುಡಿಯ
ನಿನಿಸು ಕೇಳಿತ್ತಿಲ್ಲವೋ ಮುಗಿದ ಕೈಗಳಂ
ನಯದಿಂ ಕಂಡುದಿಲ್ಲವೊ ಇದಱ ನೆಲೆಯನಾಂ ನಿಶ್ಚೈಸಿ ನೋಡಿದಪೆನು
ಎನಸುಮಿದನೆಂದು ರಥದಿಂದಿಳಿದು ವೇಮನಾ
ರ್ಯನ ಸಮ್ಮುಖಕ್ಕೆಯ್ದಿ ಕೈಗಳಂ ಮುಗಿಯುತ್ತೆ[2]
ಘನಘೋಷದಿಂ ನಮಸ್ಕಾರಂ ನಮಸ್ಕಾರವೆಂದು ನರಪಂ ನುಡಿಯಲು ೬

ಮರಳಿಯಾಶೀರ್ವಾದಮಂ ಮಾಡದುಸಿಕನೇ
ಯಿರಲಿನಿಸು ಕೋಪತ್ರಪಾಭಕ್ತಿಯುತನಾಗಿ
ಪಿರಿದು ನುಡಿದಂ ಧರಾಧಿಪನಾರ್ಯರೇ ನೀವು ಶಿವವೇಷಧರರಮಲರು
ದುರಿತದೂರರ್ ಜ್ಞಾನಪರರುತ್ತಮರ್ ಮಹಿತ
ಹರ ಪದಾಚಾರ್ಯರುನ್ನತವೀರ್ಯರತ್ಯಂತ
ಸರಳ ಸನ್ಮಾರ್ಗಿಗಳ್ ಭೂಸುರಶ್ರೇಷ್ಠರೆಂದೊಸೆದಾಂ ನಮಸ್ಕರಿಸಲು ೭

1 ಜೋಹರೆನುತಂ ವಂದಿಸಲ್ (ಗ) 2 ವುತ್ತೆ (ಗ)

ಪರಸದೇ [1]ಮುಟ್ಟಿಮಿ[1]ರ್ಪುದು ನಿಮಗೆ ಯೋಗ್ಯಮೇ
ಗರುವಿಕೆಯೆ ಉಚಿತಮೇ ಸದ್ಗುಣಮೆ ಸದ್ಭಕ್ತಿ
ಯಿರವೆ ಸನ್ಮಾರ್ಗಮೇ ಪೆಂಪೆ ಪೂಜ್ಯಮೆ ಪುರುಷತನಮೆ ಸತತಂ ಭಾವಿಸೆ
ಪಿರಿದುಮಿಾ ವೇಷಮಿಾ ಮಹಿಮೆಯಿಾ ಸನ್ಮೂರ್ತಿ
ನಿರತಮುಳ್ಳವರ್ಗೆ ನಿಮಗೇಕಿನಿತಹಂಕಾರ
ದುರುವೃತ್ತಿ ನೀವೊಲ್ದು ಪರಸದಿರೆ ಕುಂದುವುದೆ ಆಯು[2]ಸಂ[3] ನರರ್ಗಳಿಯೊಳು ೮

ಒಸೆದು ಪರಸಲ್ ಪೆರ್ಚುವುದೆ ಆಯು[3]ಸಂ[3] ನರರ್ಗೆ
ನಿಸದಂ ಬರ್ದುಂಕದವ[4]ರಂ[4] ನಿಮ್ಮ ಪ[5]ರಕೆ[5]ಯಿಾ
ವಸುಧೆಯೊಳ್ ಬರ್ದುಕಿಸುವುದೇ ಮಿಳ್ತು ನಿಮ್ಮ ಮನೆದೊಳ್ತೆ ಪರಿಭಾವಿಸುವೊಡೆ
ಬಿಸಜಾಸನಂ ಮುನ್ನ ನೊಸಲೊಳಗೆ ಬರೆದ ಲಿಪಿ
ನಸಿದು ಪೋಪುದೆ ಪೂರ್ವಲಿಖಿತಮುಂ ತೊಡೆಯಲುಂ
ಮುಸಕದಿಂ ರಕ್ಷಿಸಲುಮಾಧಾತೃಗಾಗದೆನೆ ನರ[6]ತಳವೆ[6] ಲೋಕದೊಳಗೆ ೯

ಧರೆಗೆ ನೀವೊರ್ವರೇ ಗುರುಗಳಪ್ಪಿರೆ ನಿಮ್ಮ
ದೊರೆಯ ಪಿರಿಯರ್ ಲೋಕದೊಳಗನಂತರ್ಕಳೊಳ
ರುರುಭಕ್ತಿಯಿಂ ವಂದಸಂಗೆಯ್ಯೆ ಪರಸಿದೊಡೆ ಕಿಡುವುದೇ ನಿಮ್ಮ ಪೆರ್ಮೆ
ನಿರುತಮಿದನೊಪ್ಪುವರೆ ಸತ್ಪುರುಷರೆಲೆಯಯ್ಯ
ಭರದಿನಾಂ ಪೊಡಮಡಲ್ ಪರಸದಾರ್ಯರ್ ಮತ್ತೆ
ಧರೆಯೊಳಗೆ ನೀವೋರ್ವರಲ್ಲದಿಲ್ಲಾ ಎಂದು ನಿಟ್ಟುರಂ ನುಡಿದನರಸಂ ೧೦

ಮುಂದಱಿಯದುಸುರ್ದಪನಿಪಂಗೆ ವೇಮನಪಂಡಿ
ತಂ ದಯಾನಿಧಿ ನುಡಿದನೆಲೆ ಭೂಮಿಪಾಲ ನೀಂ
ನೊಂದು ನುಡಿಯಲ್ವೇಡ ನಾಳೆ ಮಧ್ಯಾಹ್ನಕ್ಕೆ ಮೃತಿಯಕ್ಕುಮೆಯ್ದೆ ನಿನಗೆ
ಸಂದೆಗಮು[7]ಣಂ ಬೇಡ[7] ನಿನ್ನ ಸಾವಂ ತಿಳಿದು
ಮಂದಮತಿಗಳ ತೆಱದಿನಾಂ ಪರಸಬಲ್ಲನೇ
ಸಂದ ಶರಣರ್ಕಳಲ್ಪಾಯುಷ್ಯರಂ ಪರಸರೆಲೆ ಭೂಪ ಲೋಕದೊಳಗೆ ೧೧

ಶಿವಶರಣರೊಲ್ದು ಪರ[8]ಸಿ[8]ದೊಡೆ ದೀರ್ಘಾಯುಮಿಂ
ಭುವನದೊಳ್ ಬರ್ದುಕಿರಲ್ವೇಳ್ಕು ನರರಾವಗಂ
ಶವಿಲಾಗಲದಱಿಂದೆ ನಿನ್ನ ಪರಸಲ್ಕೆನ್ನ ರಸನೆ ಮುಂಬರಿಯದನಿಶಂ

---

1 ಮುಟ್ಟದಿ (ಗ) 2 ಷ್ಯ (ಗ) 3 ಷಂ (ಗ) 4 ರುಂ (ಗ) 5 ದಕೆ (ಗ) 6 ರೊಳಗೆ (ಗ) 7 ನೊಂದದಿರು (ಕ) 8 ಸ (ಕ)

ತವೆ ನಿನ್ನ ಮುನ್ನಿನ ಕನತ್ಕರ್ಮವೆಂತುಟಾ
ಭವನೆ ಬಲ್ಲಂ ನಾಳೆ ಸಾವು ತಪ್ಪದೆನುತ್ತೆ
ತವಕದಿಂ ವೇಮನಾರಾಧ್ಯರೊಸೆದಾಸುರಕ್ಕೆ ಕಿಸುಗಣ್ಣೆ ನೃಪತಿ ನುಡಿದಂ ೧೨

ಎಲ[1]ವು[1] ನೀಂ ಲೋಕಕ್ಕೆ ದೈವಮೇ ಭಾವಿಸಲ್
ನಲವಿನಿಂ ರಕ್ಷಿಸಿದನೇ ತನ್ನ ಸುತನಪ್ಪ
ಲಲಿತ ಮನ್ಮಥನನಾ ವಿಷ್ಣು ಮತ್ತಾ ಜಲಂಧರನ ವಧಿಸಿದನೆ ಮುನಿದು
ಸಲಿಲಜೋದ್ಭವ[2]ನಂ[2]ದು ಕಾದುಕೊಂಡನೆ ತನ್ನ
ತಲೆಯನತ್ಯಂತ ಕೋಪಿಸಿ ಕೊಂದನೇ ಬಳಿ
ಕ್ಕಲಘುಕರಟೇಂದ್ರಾರಿಯಂ ಮುನಿದು ಕೊಲಲೊಲ್ದು ರಕ್ಷಿಸಲ್ ಶಿವನೆ ಕರ್ತಂ ೧೩

ಹರಿಸುರರ್ [3]ಜ್ಯೇಷ್ಠರ್ಗೆ ಕೊಲ್ವುದಂ[3] ರಕ್ಷಿಪುದು
ಮರಿದೆಂದೊಡಾಳಿದ ಮನುಜರ್ಗಳವೆ ನಿನ್ನಲ್ಲಿ
ಹರ[4]ಲಾಂಛನಂ[4]ಗಳಿರೆ ಕಂಡ ಜನರೊಲ್ದು ವಂದಿಸಿದ ಮಾತ್ರದೊಳೆ ನೀನು
ತರುಣೇಂದುಧರನ[5]ಪ್ಪೆಯಾ ನಾಳೆ [5]ಮೃತಿಯೆನಗೆ
ದೊರಕಿದೊಡೆ [6]ನಿನ್ನ[6] ತೋಡಾದಾರ್ಯರೆಲ್ಲಿಂಪುಂ
ಕರಮೆ ದುರ್ಲಭವೆಂದು ಗರ್ವದಿಂ ಹಾಸ್ಯಮಂ ನುಡಿಯುತ್ತೆ ಪೋದನರಸಂ ೧೪

ಬಳಿಕೆ ಮಱುದಿವಸಮರಸಿಯುಮರಸನುಂ ಪ್ರಿಯದೆ
ಲಳಿತ ಶಯ್ಯಾಗೃಹದೊಳಂಗಜಕ್ರೀಡೆಯಿಂ
ಬಳಲುತ್ತೆ ಸುರತಾವಸಾನಜನಿತಾನಂದಪರವ[7]ಶೀ[7]ಭೂತರಾಗಿ
ಘಳಿಲನೊಱಗಿರೆ ತೂಗುಮಂಚದೊಳಗಳವಳಿದು
ಪೊಳೆವಡಱ ಸರಪಣಿಯ ಜೆಂಬಳಿಯೊಳಿರದೆಯಿದ್ದಿ
ಮಿಳಿರ್ವ ಪನ್ನಗನೊಂದು ಬಂದು ತದ್ಭೂಪಕರದಂಗುಷ್ಠಮಂ ಕರ್ಚಲು ೧೫

ಅನಿತಱೊಳಗಾ ವನಿತೆ ನಿದ್ರೆತಿಳಿದೆ[8]ಳ್ದು[8] ತೊ
ಟ್ಟನೆ ಪತಿಯ ಕರ್ಚಿ ಪೊರಳಿರ್ದ ಸ[9]ರ್ಪಂಗಂಡು[9]
ಮನದೊಳಳ[10]ಱು[10]ತ್ತೆ ಹಾಹಾ ಪತಿ ಎನುತ್ತಳಲ್ಕಾ ದನಿಯ ಕೇಳ್ದು ನೃಪನು
ತನಿನಿದ್ರೆ ಪಿಂಗಿ ಕಣ್ತೆರ್ದು ಕಾಣುತೆ ಕರದೊ
ಳೆನಸು[11]ಮುಣ್ಮ್ವ[11] ರಕ್ತಧಾರೆಯಂ ಮುಂದಿರ್ದ
ಘನತರಕ್ರೂರೋರಗನನಂತೆ ಮೂರ್ಛೆಯೊಳ್ ಸಂದು ಮರಣಂಬೆತ್ತನು ೧೬

---

1 ವೊ (ಕ) 2 ನೊಂ (ಕ) 3 ಶಿಷ್ಟರ್ಗೆ ಕಾಯ್ವುದುಂ (ಕ) 4 ನಾಂದಲಂ (ಕ) 5 ಪ್ಪೆನಾಳ್ಗೆ (ಕ) 6 ನೀಂ (ಗ) 7 ಸಿತ (ಕ) 8 ದ್ದು (ಗ) 9 ರ್ಪನಕಂ (ಕ) 10 ಲು (ಕಗ) 11 ಣ್ಮುವಾ (ಕ)

ತುರಿತದಿಂ ಬೆಜ್ಜರುಂ ಶಾಸ್ತ್ರಿಗಳು[1]ಮಂತೆ[1] ಭಾ
ಸುರ ಗರುಡಮಂತ್ರಜ್ಞರುಂ ಬಂದು ಮಂತ್ರದಿಂ
ದುರುತಂತ್ರದಿಂ ವಿಚಾರಂಗೆಯ್ದು ನೋಡಿ ಶಕ್ಯ[2]ಮಿ[2]ದಾಗದೆಮಗೆನುತ್ತೆ
ತಿರುಗಿದರ್ ಬಳಿಕೊರ್ವನತಿಕುಶಲನಪ್ಪ ಬಂ
ಧುರ ಗರುಡಮಂತ್ರಸಿದ್ಧಂ ಬಂದು ಸಡಗರದಿ
ಪಿರಿಯುರಗನೆಯ್ದೆ ಕರ್ಚಿದ ಪಲ್ಗಳಿಯು ನಡೆನೋಡಿ ನಿಶ್ಚೈಸಿ ನುಡಿದಂ ೧೭

ಭರದಿನುಗ್ರೋರಗಂ ಕರ್ಚಿತೀತನನಕಟ
ಹರಹರಾ ಎನುತೆ ಕಾಲಂ ತುಂಬಿತೀತಂಗೆ
ಪರಿಹರಿಪುದಾಗದಿದನಾವಂ[3]ದ[3]ದೊಳ್ ಸರ್ಪಜಾತಿಯೊಳ್ ಪರಿಗಣಿಸಲು
ಪರಿವ[4]ರ್ತ[4]ಕಂ ಹೇಮ ಶಂಖನಖಮುರುಪಂಚ
ಕರ ಧನಂಜಯ ಹವ್ಯಕರ್ಣ ವಾಮನ ಮಹೋ
ದರ ಹ[5]ವಿ[5]ರ್ಮುಖ ಶಬ[6]ಲ[6] ಕುಮುದಪ್ರವೇಕನಾಗಂಗಳ್ ಸಹಸ್ರಮುಂಟು ೧೮

ಅವಱೊಳುರಗೇಂದ್ರರ್ಕಳೆಂಟುತೆಱನಾಗಿ ತೋ
ಱುವುವವರ್ಕೊಂದೊಂದು ಜಾವವತಿಕಲ್ಪಿತಂ
ತವೆ ತಮ್ಮ ಜಾವದೊಳ್ ಕರ್ಚಿದೊಡವರ್ಕೆಯ್ದೆ ಗರುಡಮಂತ್ರಗಳಿಂದಂ
ಸವಿನಯದೆ ತಂತ್ರೌಷಧಂಗಳಿಂ ಕಾಲಮೃ
ತ್ಯುವದಲ್ಲದಿರ್ದೊಡೆ ವಿಷಂದೊಲಗಿಸಲ್ ಬರ್ಕುಂ
ಮವನಿಯೊಳಗಿವುಮಲ್ಲದೆಯು[7]ಮಂತೆ[7] ನಿಜಕಿಲ್ಬಿಷ ಸರ್ಪನಿಕರಮುಂಟು ೧೯

ಕುಲಿಕ ಗಜಮಿತ್ರಾರಿ ದುರ್ಮುಖಂಗಳ್ ಮತ್ತೆ
ಲಲಿತ ರೇಣುಕ ದಂಡಿ ಪಾದಂಗಳಾದಿಯಾ
ದಲಘು ದುಷ್ಟೋರಗಂಗಳ್ ಕರ್ಚಿದೊಡೆ ಮಂತ್ರದಿಂದೆ ಗಾರುಡಕರ್ಮದಿಂ
ತೊಲಗಿಸಲ್ ಬರ್ಕುಮದಱಿಂ ವಿಷಂ ಕೆಡದಿರ
ಲ್ಕೊಲವಿನಿಂ ಮಂತ್ರೌಷಧಂಗಳಿಂ ಗರಳಮಂ
ಸಲೆ ತವಿಸಲಕ್ಕುಮಿಾ ಭೂಭಾಗದೊಳ್ ಗಾರುಡಿಗನ ಸಾಮರ್ಥ್ಯದಿಂದಂ ೨೦

ಮುನ್ನೆ ಪೇಳ್ದಷ್ಟ[8]ಕುಲನಾಗಂಗಳೆಯ್ದೆ ತಾ
ವುನ್ನಸು ತಮ್ಮ ವೇಳೆಯ ಮಿಾಱಿ ಕರ್ಚಿದೊಡೆ
ಸನ್ನಿದಂ ನೆಟ್ಟ ಪಲ್ಗಳನೆಣಿಸಿಕೊಂಡು ಕರ್ಚಿದ ಜಾವಮಂ ಪರಿಕಿಸೆ

---

[1] ಮತ್ತೆ (ಕ) [2] ಮ (ಗ) [3] ಗ (ಗ) [4] ತ್ರ (ಗ) [5] ಠ (ಕ) [6] ರ (ಗ)
[7] ಮತ್ತೆ (ಕ) [8] ಳ್ದಿರ್ಪ (ಕ)

ಪನ್ನಗಮಿದೀ ಜಾತಿಯೆಂದಱಿದು ಮಾಂತ್ರಿಕಂ
ಸನ್ನಿಹಿತನಾಗಿ ಗಾರುಡಮಂತ್ರ[1]ಸಂಸ್ಕಾರ[1]
ದಿನ್ನೆರೆಯೆ ಪಾವು ಕರ್ಚಿರ್ದವನನಾ ವೇಷದೊಳಗೊಂದಿಸುತ್ತೆ ಮುದದಿಂ ೨೧

ನುಡಿಯಿಸಲ್ ಕಾಲಮೃತ್ಯುವದಾದೊಡಂ ಬಿಡುವ
ನೆಡೆನರಿಯದೆಲ್ಲ ಪಲ್ಗಳ್ ನೆಟ್ಟೊಡಂ ಸಮಂ
ತೊಡನೆ ತೊಲಗುವನಿವಂ ಬರ್ದುಕನೆನುತೊಂದು ಪಲ್ನೆಟ್ಟೊಡವನೆಯ್ದೆ ನೋಡಿ
ಸಡಗರದಿನಪಮೃತ್ಯುವೆಂದೊಡಂ ಮಾಂತ್ರಿಕಂ
ನಡುದಲೆಯ ಮೇಲೆ ಭಾಂಡದೊಳಗ್ನಿಯಿರಿಸಿ ತವೆ
ಬಿಡದೆ ಸಲಿಲಾಭಿಷೇಕಮನೆಸಗುತುಂ ವಿಷಮನಪಹರಿಸುವಂ ನಿಕ್ಕುವಂ ೨೨

ಎರಡುಪಲ್ ನೆಟ್ಟೊಡಾ ವಿಷಮನ[2]ತಿ[2]ಮಂತ್ರದಿಂ
ದುರುತಂತ್ರದಿಂ ಶಮನಮಂ ಮಾಳ್ಪನವನೆಯ್ದೆ
ಭರದೆ ಪಲ್ ಮೂಱು ನೆಟ್ಟೊಡೆ ಮಂತ್ರತಂತ್ರೌಷಧಂಗಳಂ ರಚಿಸಿ ನಿಸದಂ
ಗರಳಮಂ ಪರಿಹರಿಪುದತಿಬಾಧೆ ಮಾಂತ್ರಿಕಂ
ಗರಿದು ಪಲ್ ನಾಲ್ಕು ನೆಟ್ಟೊಡೆ ಗರಂದೊಲಗಿಪುದು
ವರಮಂತ್ರತಂತ್ರಾದಿಗಳ್ ವ್ಯರ್ಥಮವನ ಕಾಯಲ್ಕಜಂಗಾಗದನಿಶಂ ೨೩

ನರಪನಂ ಕರ್ಚಿದೀ ಕ್ರೂರೋರಗಂ [3]ಪ[3]ಲಂ
ಸರಳ ಕರ್ಕೋಟಕಾಂಶಂ ತೀವ್ರದಂತಂಗ
ಳಿರದೆ ನಾಲ್ಕುಂ ನೆಟ್ಟುವಿವನ ರಕ್ಷಿಸುವೊಡಾ ಭಾಳನೇತ್ರಂ ಶಂಕರಂ
ಉರಗಪತಿಕಂಕಣಂ ಕಾಲಕಂಠಂ ಕಾಲ
ಹರನೆಯ್ದೆ ಶಕ್ತನೊ ಅಶಕ್ತನೋ ಭಾವಿಸಲ್
ಕರಮರಿದು ಮತ್ತಿನವರ್ಗೆನುತಮಂ ಪೋಗಲಾರ್ತರನಂ ಪಿರಿದೆ[4]ಸಗಿ[4]ತು ೨೪

ಪರಿಜನಂ ಪುರಜನಂ ಬಂಧುಜನಮೊಱಲುತ್ತೆ
ಪರಿಶೋಕಿಸುತ್ತಿರಲ್ಕಾ ನೃಪನ ಕಾಂತೆ ನಿ
ರ್ಭರಶೋಕದಿಂ ತನ್ನ ವರನ ಶಬಮಂ ನೋಡುತಾಯಯ್ಯ ನುಡಿದ ನುಡಿಯೆ
ನಿರುತಮಾಯ್ತೆಂದದಱ ವೃತ್ತಾಂತಮಂ ತನ್ನ
ವರ ಕೂಡೆ ಪೇ[5]ಳಲದನೆ[5]ಲ್ಲಮಂ ಕೇಳ್ದು ತ
ನ್ನರಪ ಜನನೀಜನ[6]ಕ ಬಾಂಧ[6]ವಾದಿಗಳೆಲ್ಲರಿದು ಸತ್ಯವೆಂದು ತಿಳಿದು ೨೫

---

1 ಸತ್ಕಾರ (ಕ) 2 ಹಿ (ಕ) 3 ಚ (ಕ) 4 ನಿಸಿ (ಕ) 5 ಳಿದಡೆ (ಕ) 6 ಪಬಂಧು (ಗ)

ಕಡುದುಃಖಮಂ ತವಿಸಿ ನಾವೆಲ್ಲರಾಯಯ್ಯ
ನೆಡೆಗೆ ಭರದಿಂದಮಿಾ ನೃಪಶಬಮನೊಯ್ದು ಘೋ
ಳಿಡುತವರ ಮುಂದೆಸೆಯೊಳಿಡೆ ದಯೆಗೆಯ್ವರೆನುತಾ ಪೆಣನನೆತ್ತಿಕೊಂಡು
ಸಡಗರದೆ ಬಂದು ತದ್ವೇಮನಾರ್ಯನ ಮುದು
ಗಡೆಯೊಳಿರಿಸೊಱಲುತ್ತೆ ನುಡಿದರವರೆಲ್ಲರೀ
ಪೊಡವಿಯೊಡೆಯಂ ನಿನ್ನೆ ನಿಮ್ಮ ಪರಕೆಯ ಕೊಳ್ಳದಿಂದು ಮಡಿದಂ ಸರ್ಪನಿಂ ೨೬

ತಕ್ಕರೊಳ್ನುಡಿಗಳೇತರ್ಕೆ ತಪ್ಪುವವಯ್ಯ
ಮಿಕ್ಕವರ ನುಡಿಯಂತೆ ನೀವೆಂದಮಾಳ್ಕೆಯಿಂ
ನಿಕ್ಕುವಂ ಮರಣವೊಂದಿತ್ತೆನುತ್ತವರಡಿಯೊಳವರೆಯ್ದೆ ಪೊರಳುತಳುತೆ
ಅಕ್ಕ[1]ಜದ[1] ಶೋಕಾಗ್ನಿಯೊಳ್ ಕರಂ ಬೇಯುತ್ತು
ಮಕ್ಕಟಾ ವೇಮನಾರಾಧ್ಯಪುಂಗವ ನಿಮ್ಮ
ಲೆಕ್ಕಿಸದೆ ಫಣಿಗೆ ಭೋಜನ[2]ಮಾದವನನವೊ[3]ಸೆದು ಕಾವು[4]ದೆಲೆ[4] ಕರುಣನಿಧಿಯೆ ೨೭

ವರಭಕ್ತಹೃದಯ ಶತಪತ್ರಶಯ್ಯಾ ಮನೋ
ಹರ ಕೃತಾಶೀರ್ವಾದವಚನನಿಪುಣ ಸದಾ
ಪರಿಚಿತಾನಂತಾರ್ಥಯುತವೇದ ಚಿತ್ಸುಧಾನಂದ ಸಂಪೂರ್ಣಚಿತ್ತ
ನಿರತಿಶಯದಾನಪ್ರವೀಣ ಪಶುಪತಿಸಮಯ
ಶರಧಿವರ್ಧನ ಶರ್ವರೀನಾಥ ವಿತತಬಂ
ಧುರವೀರಶೈವಸಮಯಾಗ್ರಗಣ್ಯಾ ಸರ್ಪದಷ್ಟನಂ ಸಲೆ ಪೊರೆವುದು ೨೮

ಮಿಗೆ ಭಯಾ[4]ರ್ತ್ತ[4]ರ್ಗೆಮಗೆ ನೀವೆ ಗತಿಯಲ್ಲದಾರ್
ವಿಗತದುಷ್ಕರ್ಮ ವೇಮನಪಂಡಿತಾರಾಧ್ಯ
ಸೊಗಸಿನಿಂ ನೋಡಿ ರಕ್ಷಿಪುದುರಗದಷ್ಟನಂ ನಿಮ್ಮ ಕೃಪೆವಡೆಯದವನಂ
ಸುಗಮದಿಂ ನೀವೊಲ್ದು ಪರಸದಿರ್ದೊಡಮವಂ
ನೆಗಳ್ದ ವಾಕ್ಯದೆ ನಿಮಗೆ ಜೋಹಾರವೆಂದ ಫಲ
ಮಗಲಿ ಪೋಪುದೆ ನತಜನಾಯುಷ್ಯದಾನಪ್ರವೀಣ ಕರುಣಾಶರಧಿಯೆ ೨೯

ನಿರುತದೆ ಮುಸುಂಡಿಚೌಡಾರ್ಯೋತ್ತಮಂ ತನಗೆ
ಭರದಿನೆಲಗಿದ ಬಾಲೆಯಂ ಪರಸನೇ ಬಳಿ
ಕ್ಕಿರದವಳ್ ದೆವಸದೊಳ್ ಮೃತಿಯನೆಯ್ದಲ್ಕೆ ಕಂಡು ಚೌಡಾರ್ಯನೊಸೆದು

---

1 ಜಂ (ಗ) 2 ವಾದವನನ್ನೊ (ಕ) 3 ದೈ (ಕ) 4 ರ್ತF (ಕ)

ತರುಣಿಗೇಯನೆ ಮುನ್ನೆ ಹರಣಮಂ ತದ್ವನಿತೆ
ಶರಣೆಂದೊಡಲ್ಕಾಯುವೆಂದು ಚೌಡಾರ್ಯನುಜಿ
ಪಸಪದಿರ್ದನೆ ವೇಮನಾರಾಧ್ಯ ಶಿವಭಕ್ತರಿರವಿಂಗ[1]ದಾವುದರಿಂದಃ[1] ೩೦

ಎನುತೆ ಮಗುಳವರೆಯ್ದೆ ವೇಮನಾರ್ಯಂಗೆ ಸ
ದ್ವಿನಯದಿಂ ಪೊಡಮಟ್ಟು ಕಾರುಣ್ಯದೃಷ್ಟಿಯಿಂ
ಘನಸರ್ಪದಷ್ಟನಂ ನೋಡಿವೆನುತೊಲ್ದು ಭಯಭಕ್ತಿಯಿಂ ಕೀರ್ತಿಸುತ್ತೆ
ಮಿನುಪ ಶರಣಾಗತಜನಾಳಿಗಳನಾವಗಂ
ಸನಯದಿಂ ಪಾಲಿಪುದು ನಿಮ್ಮ ಬಿರುದೆಯ್ದೆ ತೊ
ಟ್ಟನೆ[2]ಯದಂ[2] ಮರೆಯಲಕ್ಕುಮೆ ನತಜನಾಧಾರ ಸದ್ಭಕ್ತಿಸುವಿಚಾರನೆ ೩೧

ಅದಿರ್ದ ಭಯಮಂ ಬೇ[3]ಡೆ[3] ಕಡದಿರ್ಪುದೇಂ ಪೆಂಪೆ
ವಿದಿತ ಭಯನಂತರ್ಕಳೊಸೆದು ಮಱೆಯಂ ಪುಗಲ್
ಸದಯ ಭಕ್ತರ್ ಕಾಯದೇ ಮಟ್ಟಮಿರ್ಪುದಿದು ಯುಕ್ತಮೇ ಪರಿಭಾವಿಸೆ
ಪದೆದೆಮಗೆ ನೀವು ದಿಕ್ಕುಂ ದೆಸೆಯುಮೆನುತಿರಲ್
ಮದದಿಂದೆ ಕೇಳದಂತಿರ್ಪುದಿದು ಯೋಗ್ಯಮೇ
ಪುದಿದ ತಾಯ್ತಂದೆಯುಂ ನೀವೆನಗೆನುತ್ತಿರಲ್ಕುಸುರದಿರ್ಪುದು ನೀತಿಯೆ ೩೨

ಗತಿಮತಿಯು [4]ನೀವಲ್ಲದಿನ್ನಾರುಮಿಲ್ಲೆನು[4]
ತ್ತತಿಶೋಕಿಸುತ್ತಿರಲ್ ಸುಮ್ಮನಿರ್ಪುದು ನಾಡೆ
ಹಿತಮೆ ಶಿವಭಕ್ತಿಮಾರ್ಗದ ಮತವೆ ದುಃಖಿತರನೆಮ್ಮನಂ ನಿಟ್ಟಿಸಯ್ಯ
ವಿತತ ಕರುಣಾಕರನೆ ಎನುತೆ ಸದ್ಭಕ್ತಿಯಿಂ
ನುತಿಸುತಡಿಗಡಿಗೆ ವಂದಿಸುತೆ [5]ಮೊದಲಿ[5]ಸುತ್ತೆ
ನತರಾದರಂ ಪ್ರಾಣದಾನಮಂ ಬೇಳ್ಪರಂ ಪ್ರೀತಿಯಿಂದೊಸೆದು ನೋಡಿ ೩೩

ಗುರುವೇಮನಾರಾಧ್ಯರೊ[6]ಸೆದು ಶಿವಸದ್ಭಕ್ತಿ[6]
ಯಿರವನಾಲಿಸುತಾವನೊರ್ವನತಿಭಕ್ತಿಯಿಂ
ಪಿರಿದುಂ ಶರಣ್ಬುಗಲ್ ಪಾಲಿಪುದು ಮೊದಲಿಸಿ ನುಡಿಯಲದನೇ ಮಾಳ್ಪುದು
ಪರಮಭಕ್ತರ ಮಾರ್ಗಮರ್ಪುಮಿದೆ ಪಲ ಎಂದು
ಹ[7]ರಿಸ[7]ದಿಂ ನಿಶ್ಚೈಸಿಯೊಡೆಯ ಬೆಸಸಲ್ಕೈದಿ
ಪರಬಲಂಗೊಂಡು ಪೆಡಮೆಟ್ಟುವುದು ವೀರತ್ವಕದು ಹಾನಿಯದಱ ತೆಱದಿಂ ೩೪

---

[1] ದರಿದಾವುದಿರದು (ಕ) [2] ಆಂದು (ಕ) [3] ರೆ (ಕ) [4] ವೆಮಗೆ ನೀವಲ್ಲದಾರಿಲ್ಲೆನು (ಗಟ) [5] ಮೂದರಿ (ಕ) [6] ಲ್ದೊಸೆದು ಶಿವಭಕ್ತಿ (ಕ) [7] ರುಷ (ಕ)

ಅಸುಗುಡುವುದೆಂದಿವರ್ ಭಕ್ತಿಯಿಂ ನುಡಿಯುತ್ತೆ
ಮುಸಕದಿಂ ಶಿವಭಕ್ತಿಯಂ ಮೂದಲಿಸುತೆ ಮು
ತ್ತೊಸೆದು ನುಡಿಯುತ್ತಿರ್ದಪರ್ ಕೇಳಿಯಾನಿದಂ ಪ್ರಾಣಮಂ ಕುಡದಿರ್ದೊಡೆ
ನಿಸದಮೆನ್ನಯ ವೀರಭಕ್ತಿಗಿದು ಹಾನಿ ಸಂ
ತಸದಿಂದೆ ಲಿಂಗಾಭಿಮಾನಿಗಳ್ ಮೆಚ್ಚುರೆನು
ತಸಮಸಂ ವೇಮನಾರಾಧ್ಯ ಗುರುಪುಂಗಮಂ ಮನಮೊಸೆಯುತಳ್ತಿಯಿಂಪಂ ೩೫

[1]ಪ್ರೌ[1]ಢಭಕ್ತವಿತತಿಯಂ ಬರಿಸಿ ಸಾಷ್ಟಾಂಗದಿಂ
ಪೊಡಮಟ್ಟವರ್ಗೆ ಸದ್ಭಕ್ತಿಪೂರ್ವಕದಿಂದೆ
ಸಡಗರದೆ ಸಿಂಹಾಸನಾಸೀನರಂ ಮಾಡಿ ಜಯಜಯಧ್ವನಿ ಪೊಣ್ಮಲು
ಬಿಡದೆ ಕವಿಪಾಠಕರ್ ಪೊಗಳುತಿರೆ ವಾದ್ಯಂಗ
ಳೊಡನೊಡನೆ ಘೋಷಿಸುತ್ತಿರಲಾ ಗಣಶ್ರೇಷ್ಠ
ರಡಿಗರ್ಚಿ ತತ್ಪಾದಪಾನೀಯಮಂ ಕಲಶದೊಳ್ [2]ತಿಂ[2]ಬಿಯತಿಹರುಷದಿಂ ೩೬

ಶಿವಗಣಸಭಾಮಧ್ಯದಲ್ಲಿ ತತ್ಕುಂಭಮಂ
ಸವಿನಯದಿನಿರಿಸಿ ಗಂಧಾಕ್ಷತಾದಿಗಳಿಂದೆ
ತವಕದಿಂದಾ ಕುಂಭಮಂ ಪೂಜೆಗೆಯ್ದು ಬಳಿಕಾ ಭಕ್ತಸಂತತಿಯನು
ನವಪುಷ್ಪ ಸ್ರಗ್ವಿಸರ ಧೂಪದೀಪಾದಿಯಿಂ
ದವಿರತಂ ನಲಿದರ್ಚನಂಗೆಯ್ದು ಘಂಟಾದಿ
ವಿವಿಧ ವಾದ್ಯರವಂಗಳೆಸೆಯುತಿರೆ ಭಸ್ಮತಾಂಬೂಲಮಂ [3]ಮುಂದಿಡುತ್ತೆ[3] ೩೭

ಒಲವಿನಿಂ ಪುಷ್ಪಾಂಜಲಿಯ ಭಕ್ತತತಿಗೆಸಗಿ
ನಲವಿನಿಂ ಮೂಮೆ ಬಲವಂದು ಸದ್ಭಕ್ತಿಯಿಂ
ಲಲಿತ ವೇಮನಪಂಡಿತಾರ್ಯಗಷ್ಟಾಂಗಪ್ರಣಾಮಮಂ ಮಾಡಿ ಬಳಿ[4]ಕಂ[4]
ಸಲೆ ಭಕ್ತರಾಜ್ಞೆಯಂ ತನ್ನ ಶಿರದೊಳ್ ತಾಳು
ತಲಘುತರವೀರಭಕ್ತಿಯಿನೊಪ್ಪುತಂ ಮಹೋ
ಜ್ವಲಕಾಂತಿಯಿಂ ನೃಪಶಬಮನತಿವೇಗದಿಂ ತರವೇಳ್ದು ಕಳುಪಲೊಡನೆ ೩೮

ಅರೆಮುಗಿದ ಕಣ್ ಬಿಟ್ಟ ಬಾಯಿಂದಮೊಗುವ ನೊರೆ
ಸೆರೆ ಬಿಗಿದ [5]ಕೊ[5]ರಲುರ್ಬಿ ತೋರ್ಪ ನರತತಿ ಕೆಲಕೆ
ಸರಿದ ಶಿರವೊಪ್ಪುಗೆಟ್ಟಿರ್ಪ ಮುಹ್ಮೊಗವಱತು ಬತ್ತಿರ್ಪ ತೆಳ್ಗಲ್ಲವು

---

[1] ದೃಢ (ಕ) [2] ತುಂ (ಕ) [3] ಮುದದಿಂ ಕುಡುತ್ತೆ (ಕ) [4] ಯಿಂ (ಗ) ಯುಂ (ಟ)
[5] ತೊವ (ಕ)

ಪಿರಿದು ಪಸುರೇಱಿರ್ದ ಪಲ್ಗಳುಱೆ ತೆಱೆದಿರ್ದ
ಪರರಂಧ್ರತತಿಗಳುಚ್ಛೂನಜಠರಂ ಕೆಡಱಿ
ಪುರುಶಿರೋರುಹವಿತತಿ ಸುರಿವ ಲಾಲಾಜಲಂ ನೀರಕ್ತ ಚರ್ಮನಿಚಯಂ ೩೯

ಪಿರಿದು ದುರ್ಗಂಧ ದೆಸೆದೆಸೆಯನಾವರಿಸುತಿರೆ
ಪರಿದೆಯ್ದಿ ಮಕ್ಷಿಕಂಗಳ್ ಮುಸುಱಿ ಮುತ್ತುತಿರೆ
ನೆರೆಯ ಜನರೆಲ್ಲರುಂ [1]ಗೋ[1]ಣವುಂ ಮುಚ್ಚಿಕೊಳುತುಗುಳುತ್ತುಮಿರೆ ಪೇಸುತೆ
ಭರದಿ ಜನಪತಿಯ ಶಬವುಂ ತಂದು ಶಿವಭಕ್ತ
ವರರ ಸತ್ಸಭೆಯ ಮುಂದಿರಿಸೆ ನೆಱೆಕಾಣುತ್ತೆ
ಗುರುವೇಮನಾರಾಧ್ಯರಾ ಕುಣಪವುಂ ಮುನ್ನೆ ಕೊಡನೊಳಿರ್ದಾ ತೀರ್ಥ[2]ದಿಂ[2] ೪೦

ಜಲಕ[3]ನೆ[3]ಪ್ಪಂತದಱ ದುರ್ಗಂಧವೆಲ್ಲಮುಂ
ನಲಿದು ಕರ್ಚಿಮೆನುತ್ತುಮರಸನಾಳ್ಗಳ್ಗೆ ಸುರೆ
ಲಲಿತ ವೇಮನಪಂಡಿತಾರ್ಯನ ನಿರೂಪದಿಂ ತೊಳೆಯಲವರೆಯ್ದೆ ಮುದದಿಂ
ಒಲವಿನಿಂ ಭಕ್ತಾಂಘ್ರಿ[4]ರಜವು[4]ನಾ ಭಕ್ತಪದ
ಜಲ[5]ವಿ[5]ಮಿಶ್ರಂ ಮಾಡಿ ಭಕ್ತಹಸ್ತಸ್ಪರ್ಶ
ವಿಲಸಿತ ವಿಭೂತಿಯೊಳ್ ಕೂಡಿ ಭಕ್ತಾನುಮತದಿಂ ವೇಮನಾರಾಧ್ಯರು ೪೧

ಅವನಿಪ ಕಳೇವರದೊಳನುಲೇಪನಂಗೆಯ್ದು
ತನಕದಿಂ ವಿಧ್ಯುಕ್ತದೊಳ್ ತ್ರಿಪುಂಡ್ರಮನಿಟ್ಟು
ಶಿವಭಕ್ತಿ ನಿರ್ಮಾಲ್ಯಕುಸುಮಮಂ ತದ್ದೇಹದೊಳ್ ಶಿರದೊಳಳವಡಿಸುತೆ
ಭವರಹಿತ ವೇಮನಾರಾಧ್ಯಗುರುಪೂಗವುಂ
ಗವನಸಂಖ್ಯಾತ ಶಿವಭಕ್ತಸಂದೋಹಕ್ಕೆ
ಸವಿನಯದೆ ಪೊಡಮಟ್ಟು ತದ್ಭಕ್ತರಾಜ್ಞೆಯಂ ಮುಂದಲೆಯೊಳಾಂತು ಮುದದಿಂ ೪೨

[6]ಮುಗುಳ್ದ[6]ವರ ಚರಣಕಮಲಂಗಳ್ಗೆ ವಂದಿಸುತೆ
ನೆಗಳ್ದ ರುದ್ರಪ್ರಮಥಗಣ ಪುರಾತನರ ಪದ
ಯುಗಳಂಗಳಂ ನೆನೆದು ಭವ್ಯಪಂಚಾಕ್ಷರೀಮಂತ್ರಮಂ ಸಲೆ ಜಪಿಸುತೆ
ಮಿಗುವ ಭಕ್ತಾರ್ಪಿತೋನ್ನತಭೂತಿಯಂ ಮುದದೆ
ನಗುತೆ ವೇಮನಪಂಡಿತಾರಾಧ್ಯರಾ ಶವದ
ಮೊಗದೊಳಂಗದೊಳೆಯ್ದೆ ತಳಿದೊಸೆದು ಭೂಪ ನೀನೇಳೇಳೆನುತ್ತೆ ನುಡಿದು ೪೩

---

1 ಘ್ರಾ (ಗ) 2 ಮಂ (ಗ) 3 ಮ (ಕ) 4 ರಂಜ (ಕ) 5 ವ (ಕ) 6 ನೆಗಳ್ದ (ಕ)

ಭರದೆ ಕೈವಿಡಿದೆತ್ತಲನಿತಱೊಳಗಾ ಭೂಮಿ
ವರನೊಸೆದು ನಿದ್ರೆತಿಳಿದೆ[1]ಳ್ದ[1]ವನ ಪಾಂಗಿನಿಂ
ನಿರುತಂ ನಿರಸ್ತ ಯಮಭಯನಾಗಿ ಕುಳ್ಳಿರುತ್ತಾ ವೇಮನಾರಾಧ್ಯರ
ಚರಣಸರಸಿಜಕೆ ವಂದಿಸುತೆ ಸಾಷ್ಟಾಂಗದಿಂ
ದಿರೆ ಭಕ್ತಿಯುಂ ಕೀರ್ತಿಯುಂ ಕೃಪೆಯುಮವನಿಯೊಳ್
ಪಿರಿದು ಪೆರ್ಚುತ್ತಿರಲ್ಕಾ ನೃಪಂಗೊಲವಿನಿಂ ಶಿವದೀಕ್ಷೆಯಂ ವಿರಚಿಸಿ ೪೪

ಬಳಿಕಮವನಿಪನೊಡನೆ ವರ ವೇಮನಾರಾಧ್ಯ
ರಳಘುತರಭಕ್ತಿಯಿಂ ತಾವಿರ್ದರಾ ಭಕ್ತ
ಕುಳಕೆ ಸಾಷ್ಟಾಂಗದೊಡಗೂಡಿ ವಂದಿಸಲಾ ಮಹೇಶಭಕ್ತರ್ ಮುದದೊಳು
ತಳಿತ ವೇಮನಪಂಡಿತಾರಾಧ್ಯ ಭಲರೆ ನಿ
ರ್ಮಳಸುಗುಣಗಾಂಭೀರ್ಯ ಜಲಧಿ ಭಲರೇ ಮಹೋ
ಜ್ವಳ ಭಕ್ತಪಾದಪದ್ಮಾಂಕಿತ ಶಿರೋಭಾಗ ಭಲರೆ ತತ್ವಾರ್ಥವಿದನೆ ೪೫

ಹರಶರಣಚರಣಸರಸಿರುಹ ನಿರ್ಗತರಜಃ
ಪರಿಪೂತ ಭಾಳತಳ ಭಲರೆ ವರ ಮಾಹೇಶ್ವ
ರರ ಶಿರಃಪರಿಕಲಿತ ರತ್ನಕೋಟೀರ ಭಲರೇ ಸಜ್ಜನಾಬ್ಜಮಿತ್ರ
ಪರಮಭಕ್ತಪದಾಂಬುಜಾಮಲಮರಂದ ಸಂ
ಪರಿ[2]ವೃತ[2]ಲಸತ್ಕಳೇವರ ಭಲರೆ ಭಕ್ತ ಭಾ
ಸುರಪಂ ನಳಿನ[3]ಸ[3]ಖರ ಮುಕುರಬಿಂಬಿತ ಮನೋಹರವದನಕಮಲ ಭಲರೆ ೪೬

ಭಲರೆ ಸದ್ಭಕ್ತ ಪದನಖಕಾಂತಿ ಕೌಮುದೀ
ವಿಲಸಿತ ಚಕೋರಾಭರ್ಗ[4]ಕಾ[4] ದುಷ್ಟಮತವಿಸರ
ಸಲಿಲಜೋಕ್ಷಿಪ್ತ ಮದದಂತಾಪ[5]ಲಾ[5] ಭಲರೆ ಪಾಪೌಘತಿಮಿರದಿನಪ
ಭಲರೆ ವಿಧಿಲಿಖಿತಭಾಳಾಕ್ಷರಧ್ವಂಸನೇ
ಭಲರೆ ಭಲರೇ ವಿಷ್ಣು ಮಾಯೋಪಸಂಹಾರ
ಭಲರೆ ಪಶುಪಾಶಮೋಚನಕಲ್ಯ ಪರಸಮಯವಾದಿಜನಚಿತ್ತಶಲ್ಯ ೪೭

ಪರಮಚಿದ್ವಿದ್ಯಾಸುದಾನಪ್ರವೀಣ ಬಂ
ಧುರಭವಾನೀಕಸಂ[6]ಕ್ಷೀಣ[6] ಶಿವತತ್ತ್ವಭಾ
ಸುರಕಲಾಢ್ಯಾ ವಿಗತಮೌಢ್ಯ ಬಸವೇಶ್ವರಧ್ಯಾನಮಹಿತಾ ಸುಚರಿತ

---

1 ದ್ದ (ಗ) 2 ತರುತ (ಕ) 3 ಮು (ಗ) 4 ಕನೆ (ಕ) 5 ಳನೆ (ಕ) 6 ಕ್ಷಿಪಣ (ಕ)

ಉರುದಂಡಧರ ಮಹೋದ್ದಂಡನಿರ್ಹರಣ ಭಾ
ಪುರೆ ಮೃತ್ಯುವಿಷಮದಂಷ್ಟ್ರೋತ್ಪಾಟನ ಪ್ರಥಿತ
ನಿರುಪಮಿತ ದುಷ್ಟಜಿಂಹಗಗರಳ ವಿಧ್ವಂಸ ವೇಮನಾರಾಧ್ಯ ಭಾಪು ೪೮

ಎನುತೆ ಶಿವಶರಣತತಿ ಕೊಂಡಾಡಿ ಮುಂಡಾಡು
ತನಘ ವೇಮನಪಂಡಿತಾರ್ಯೋತ್ತಮನ ತನ್ನ
ಘನದಯಾಂಭೋಧಿಯೊಳಗೋಲಾಡಿಸುತ್ತಿರಲ್ ಮಗುಳ್ದವರ್ಗೆ ವಂದಿಸುತ್ತೆ
ವಿನಯದಿಂದಿರದೆತ್ತಿಯೊರ್ವರೋರ್ವರ್ ನಾಡೆ
ಮಿಸುಗುವಾಲಿಂಗನಮನೆಸಗುತ್ತೆ ಸಂತಸಂ
ಕೊನರುತ್ತಿರಲ್ ನುಡಿದರೆಲೆ ವೇಮನಾರಾಧ್ಯ ಸರ್ವಜ್ಞ ಮಹಿಮೋನ್ನತ ೪೯

ಲೇಸಲೇ ವೇಮಯ್ಯ ಮಹಿತಕರುಣಾಕ[1]ರಾ[1]
ಲೇಸು ವೇಮಯ್ಯ ಸಾನಂದಮೂರ್ತಿಯೆ ಲೇಸು
ಲೇಸು ಶಿವಧರ್ಮಮಾರ್ಗಪ್ರವೃತ್ತಿಯೆ ಲೇಸು ವೇಮಯ್ಯ ನಿನ್ನನ್ನ[2]ನು[2]
ಆಸುರ ಪ್ರಾಣದಾನಂಗುಡಲ್ತಕ್ಕನಂ
ಸಾಸಿಗ[3]ನದೊ[3]ರ್ವನುಂಟೇ [4]ತೂಣನೊ[4]ಳ್ವಸುಱಿಹೂ
ಳೋಸರಿಸದಿ[5]ರ್ದ[5]ವನನೀಳ್ದುಕೊಳ್ವುದು ವಿಷ್ಣುವಿಧಿಗಳ್ಗೆ ಶಕ್ಯಮಲ್ತು ೫೦

ಈ ಮಹಾವೀರತ್ವಮುಂ ಧೀರತೆಯುಮೆಯ್ದೆ
ಈ ಮಹಿಮೆಯುಂ ಮಹಾಸಾಮರ್ಥ್ಯಮುಂ ಬಳಿ
ಕ್ಕೀ ಮಹಾಸದ್ಭಕ್ತಿಯುಂ ವಿನಯಮುಂ ಮತ್ತಿನವರ್ಗುಂಟೆ ನಿನಗಲ್ಲದೆ
ಭೂಮಿಯೊಳ್ ವೇಮನಾರಾಧ್ಯ ಸದ್ಗುಣಧಾಮ
ಧೀಮಣಿಯೆ ಎಂದು ನುತಿಸುತ್ತಿರಲ್ ಕಂಡು ಗುರು
ವೇಮನಾರ್ಯಂ ನೃಪನ ಹರಣಮಂ ಭಕ್ತಕೃಪೆಯಿಂ ಪಡೆದು ಸುಖಮಿರ್ದನು ೫೧

ಎಂದು ಮುನ್ನಿನ ಕಥೆಗಳೊಳ್ ಕೇಳ್ದು ಬಳ್ಳಿವಾ
ವಿಂದು ಗುರುಮಲ್ಲಿಕಾರ್ಜುನಪಂಡಿತೇಶ್ವರಂ
ಚಂದಮಪ್ಪಂತೆ ಮಾದೇವನಡಿಗಳಂ ಪಡೆದುದಂ ಕಂಡೆವೆಂದು ಮುದದಿಂ
ಸಂದ ಶರಣರ್ ಕೀರ್ತಿಸುತ್ತಿರ್ದರೆಂದು ಸಾ
ನಂದದಿಂ ಪಾಲ್ಕುಱಿಕೆಸೋಮೇಶ್ವರಂ ಮನಂ
ದಂದು ಸೂರಾ[6]ರ್ಯಂಗೆ[6] ಪೇಳ್ದನೀ ಕಥೆಯನೊಲ್ದಾಲಿಪುದು ಸದ್ಭಕ್ತರು ೫೨

---

1 ರನೆ (ಕ) 2 ರು (ಕ) 3 ರೊಳೊ (ಕ) 4 ಕಣ್ಣನೊ (ಕ) 5 ರ್ಪ (ಕ)
6 ರ್ಯಾ (ಕ)

ಸದಮಲಪ್ರಚುರವಿಶ್ರುತ ಪರಮಭಕ್ತಗಣ
ಪದಸರೋರುಹಸಾಂದ್ರ ಮಕರಂದಪಾನ ಸ
ಮ್ಮುದಿತ ಚಂಚಚ್ಚಂಚರೀಕನನವರತ ಪಂಚಾಕ್ಷರೀಪ್ರಸಿತಹೃದಯಂ
ವಿದಿತ ಮಂಜುಳನೀಲಕಂಠಾಹ್ವಯಂ ಮನೋ
ಮುದದೆ ಪೇಳ್ದುರುತರಾರಾಧ್ಯಚಾರಿತ್ರದೊಳ
ಗಿದು ವೇಮನಾರಾಧ್ಯವಿಭುವಿನ ಚರಿತ್ರಮಘನಿಕರ ವನನಿಧಿಬಹಿತ್ರಂ ೫೩

# ಹನ್ನೊಂದನೆಯ ಸಂಧಿ

## ಚಿಕ್ಕಮಾದಣ್ಣನ ಕಥೆ

ಸೂಚನೆ: ಚಿಕ್ಕಮಾದಣ್ಣನ ಕಥಾರಚನೆಯಂ ಕೇಳ
ಚೊಕ್ಕಳಿಕೆಯಿಂ ಸೂರಸಚಿವೇಂದ್ರ ನೀನೆನು
ತ್ತಕ್ಕಜಂ ಪಾಲ್ಕುಜೀಕೆ ಸೋಮೇಶ್ವರಂ ಪೇಳ್ದನದನಾಲಿಪುದು [1]ಶರಣರು[1]

ಗಿರಿಸುತಾತುಂಡ ಫುಲ್ಲಾರವಿಂದಮರಂದ
ಸುರುಚಿರಾಮಲಪಾನಗೋಷ್ಠೀವಿಲಾಸ ಭಾ
ಸುರ ತರಳಚಂಚರೀಕಂ ಪಾರ್ವತೀನಯನಕುಮುದಸಂಪೂರ್ಣಚಂದ್ರಂ
ನಿರುಪಮಾಂಭೋತ್ತುಂಗ ಪೀವರಕುಚಾಚಲಾ
ಧರ ನರ್ತನಪ್ರೀತ ಭಾಸನ್ಮಯೂರನತಿ
ವರದನಕ್ಕೆಮಗೆ ಗುರುನೀಲಕಂಠಂ ದಶಾನನಕಂಠ[2]ಕುಂ[2]ಠೀಕೃತಂ ೧

ಮತ್ತೆಯುಂ ಮನಮೊಸೆದು ಭಕ್ತಸಂತತಿ ಮುದಂ
ಬೆತ್ತು ಮುನ್ನಿನ ಮಹಾಗಣರ ಸಾಮರ್ಥ್ಯಮಂ
ಚಿತ್ತಮಲರುತ್ತೆ ಪೇಳುತ್ತಿರ್ದರೆಂತೆನಲ್ ಧರಣಿಯೊಳ್ ಮಿಗೆ ಶೋಭಿಪ
ಉತ್ತಮಂ ಸಕಲೇಶಮಾದಿರಾಜಂ ಭಕ್ತಿ
ವೃತ್ತಿ ಸಂಪನ್ನನೂರ್ಜಿತಕೀರ್ತಿವಂತನತಿ
ಕೃತ್ತಿವಾಸಾಮಲಪದಾಬ್ಜಭಕ್ತಂ ವೀರಶೈ[3]ವಮಾರ್ಗಾನು[3]ರಕ್ತಂ ೨

ಸಂತತಂ ಕಾಲನ್ನುತ್ಯುವಿನ ಕಣ್ಗಳೊಳೆಯ್ದೆ
ಸಂತಸದೆ ಸಣ್ಣಮಣಲಂ ಪೊಯ್ದು ಕಾಲನ
ತ್ಯಂತೋರುವದನನುಂ ತಾಡನಂಗೆಯ್ದುವನಿಯೊಳ್ ವಿಧಿಕ್ರಮವನೊಲ್ದು
ಉಂತೆ ತಾಟಿಸಿ ಬಿನದದಿಂದೆ ಸಲೆ ವಿಷ್ಣುಮಾ
ಯಾಂತಕಂ ವಲವೆಂಬ ಕಹಳೆಗಳ್ ಮೊರೆಯಲೋ
ರಂತೆ ಲಿಂಗಾರ್ಚನಾಸಕ್ತಚಿತ್ತಂ ನಷ್ಟ[4]ನಿ[4]ಖಿಳೇಂದ್ರಿಯಾನುವೃತ್ತಂ ೩

---

[1] ಸುಜನರು (ಕ) [2] ಪಂ (ಗ) [3] ವಾನುಮಾರ್ಗ (ಗ) [4] ನ (ಗ)

ಮಿಗೆ ಶತಾಯುರ್ವೈ ಪುರುಷ ಎಂದು ಘೋಷಿಸುವ
ನಿಗಳ್ದ ವೇದದ ಬಾಯನೊಡೆದು ಭೂತಳದಲ್ಲಿ
ಸೊಗಸಿನಿಂದೇಳ್ನೂಱು[1]ಬರಿಸಂ[1]ಬರಂ ಜಂಗಮಾರ್ಚನೆಯನೆಸಗುತೊಸೆದು
ಮೃಗಧರಧರಂಗೆ [2]ಸಂಗೀತ[2]ಸುಖಮೀವುತ್ತೆ
ಬಗೆಯೊಳಗೆ ಶಿವಲಿಂಗಮೂರ್ತಿಯಂ ಜಾನಿಸುತೆ
ಪಗಲುಮಿರುಳುಂ ಶಿವನ ತತ್ತ್ವಗೋಷ್ಠೀಸುಧಾಂಬುಧಿಯೊಳಾಳುತ್ತಿರ್ಪನು ೪

ಅವರ ಸಚ್ಛಿಷ್ಯನೊಪ್ಪುವ ಚಿಕ್ಕಮಾದಣ್ಣ
ನವ[3]ನ[3] ಚಾರಿತ್ರಮೆಂತೆನೆ ತನ್ನ ಗುರುಪಾದ
ಭುವನಜದ ಸೇವೆಯೊಳ್ ಸುತಸತಿಗಳೊಡಗೂಡಿ ಸಂತತಂ ಭಕ್ತಿಯಿಂದಂ
ತವೆಯಿರುತ್ತಿರ್ಪನಾ ಗುರುಪೂಜೆಯೇ ರಾಜಿ
ಸುವ ಜೀವನಂ ತನಗೆ ತಪ್ಪದೆಂದಳ್ಕಱಂ
ದವೆ ಕುಟುಂಬಕ್ಕಿದೇ ಮಿಗುವುಪಾರ್ಜನೆಯೆಂದು ಪೂಣ್ದು ಸುಖದಿಂ ಚರಿಸುತೆ ೫

ಕರಮೆಸೆವನೀಶಕಲ್ಪಿತಮಾಗಿ ತೋರ್ಪಲ್ಪ
ತರ ಕರ್ಮದಿಂದೊದಗಿದನಿತಱಿತೊಳ್ ಸಂತಸಂ
ಬೊರೆದು ದುಃಖಂಗೊಳ್ಳದತಿದರಿದ್ರತ್ವದಿಂ ಚಿಂತಿಸದೆ ಗೃಹಕಾರ್ಯಮಂ
ಪರಮಗುರು ಸಕಲೇಶಮಾದಿರಾಜನ ಪಾದ
ಸರಸಿಜಮೆ ತನಗೆ ಗತಿಮತಿ ತಂದೆ ಮಾತೃ ಕಡ
ವರಮೆಂಬ ಭಾವದಿಂ ಪರಿಚರ್ಯಮೆಸಗುತಿರೆ ಪಲಕೆಲವು ಕಾಲಮಿಂತು ೬

ಒಂದುದಿವಸಂ ಚಿಕ್ಕಮಾದಣ್ಣನಸುಗಳೆಯ
ಲಂದವಳಿಯದೆ ತದಂಗನೆ ಪೂತ ಪಾದಜಲ
ದಿಂದೆ ತನ್ನಿನಿಯನಂಗಂದೊಳೆದು ಭಸ್ಮಮಂ ಸರ್ವಾಂಗದೊಳಗೆ ತೊಡೆದು
ಮಂದಿರದ ನಡುಗಂಬದೆಡೆಯೊಳಾ ಶಬಮನಂ
ತೊಂದಿಸಿ ಬಳಿಕ್ಕಾರುಮಱಿಯದಂದದೆ ಮನೆಯೊ
ಳೊಂದು ತಾಣದೊಳಗವುತಿರೆ ಗುಹೆಯನಾ ದನಿಯ ಕೇಳುತ್ತೆ ತನ್ನಂದನಂ ೭

ಭರದಿನೆಳ್ದಿಯ್ತಂದು ತಾಯಿ ನೀನೇನನೀ
ಗಿರದೆಸಗಿದಪ ಬಪ್ಪನುಸಿಕನೇ ನಡುಮನೆಯ
ಪಿರಿಯ ಕಂಬಮನೊಯ್ಯನೇ ನೆಮ್ಮಿಕೊಂಡು ಕುಳ್ಳಿರ್ದಪ[4]ನಿ[4]ದೇಂ ಕಾರಣಂ

---

[1] ವರುಷಂ (ಗ) [2] ಸನ್ನಿಹಿತ (ಕ) [3] ರ (ಕ) [4] ನ (ಕ)

ಗುರುಸೇವೆಗೇತರ್ಕೆ ಪೋಗನಿನ್ನುಂ ಮನೋ
ಹರ ಶಂಭು ಪೂಜಾರ್ಥಮಾದ ವೇದಿಕೆಯನುಜಾತ
ತುರಿತದಿಂದಗೆಯುತಿರ್ದಪೆಯಿಃದೇಂ ಸೋಜಿಗಂ ಪೇಳಬ್ಬೆ ನೀನೆನಗಿದಂ ೮

ಮಿನುಪ ಲಿಂಗಾರ್ಚನಾಸ್ಥಾನವೇದಿಕೆಯಲ್ಲಿ
ಯನುವಿನಿಂ ಬಗರಗೆಯ ತೆಗೆದಡಟಿ ಜಲದಲ್ಲಿ
ಮನಸಿಜಾರಿಗೆ ಮಜ್ಜನಂ ಮಾಳ್ಪೆನೆಂದಜ್ಜನಿಂದು ನೇಮಂಗೊಂಡನೊ
ಸನಯ[1]ದಿಂದಾ[1] ಸಲಿಲದಭಿಷೇಕಮಂ ಲಿಂಗ
ಕನುನಯಂ ಮಾಡಿದಲ್ಲದೆ ಎನ್ನೊಡನೆ ನುಡಿಯೆ
ನೆನುತುಸಿಕನಿರ್ದಪನೊ ನೀಂ ಮುಳಿದು ನುಡಿಯದಿರೆ ಮಟ್ಟಮಿರ್ದಪನೊ ತಾನು ೯

ಏತೆಱದೊಳಂ ಮುನಿಯನೆಮ್ಮಯ್ಯನೇಗಳುಂ
ಖಾತಿಗೊಂಡಱಯನಿನ್ನೆಗಮಾರೊಳಾದೊಡಂ
ತೇತರ್ಕೆ ನುಡಿಯದಿರ್ದಪನಾವಗಂ ತಾಯೆ ಪೇಳಿದಟಿ ಬಗೆಯನೆನಗೆ
ಪ್ರೀತಿಯಿಂ ನೀಂ ಮುನ್ನೆ ಮಾಳ್ಪ ಪರಿಚರ್ಯಮಂ
ಭೀತಿಯಿಂ ಸಮೆಯದಾದೆಯೊ ಬಳಿಕ್ಕತಿಶಯ ವು
ನೀತ ಶೀಲವ್ರತಂಗಳನೆಯ್ದೆ ತಾಱಂಬಳಿಯನೊಡರ್ಚಿದೆಯೊ ಬಳಿಕಂ ೧೦

ಪಿರಿದು ಸಮಯೋಚಿತಾಗತ ಜಂಗಮಾವಳಿಗೆ
ಭರದಿನಾಲಸ್ಯದಿಂದುಪಚರ್ಯಮೆಸಗದೇ
ಕರಮುಸಿಕನಿರ್ದೆಯೋ ಪೂಜೋಪಕರಣಂಗಳತಿಕಾಂತಿಯಪ್ಪ ತೆಱದೆ
ಹ[2]ರಿಸ[2]ದಿಂ ಬೆಳಗದಾದೆಯೊ ಗೋಮಯದೊಳೆಯ್ದೆ
ತರಳ ಕೀಟಂಗಳಿರೆ ನೋಡಿ ಬಿಸುಡದೆ ಮತ್ತೆ
ಮಿರದದಱನೆಯ್ದೆ ಸಮ್ಮಾರ್ಜನಂಗೆಯ್ದೆಯೋ ಭಾಂಡಸತ್ವದಿನಾವಗಂ ೧೧

ವರವರ್ಣಕಮನೊಲ್ದು ರಮಣೀಯಮಪ್ಪಂತೆ
ಕರವೆಸಗದಾದೆಯೋ ಕಮಲದೆಸಳ್ಗಳನಾಯ್ದು
ಪಿರಿದು ನುಣ್ಪಿಳ್ಪನಂ ಮಡಗದಾದೆಯೊ ಚಂದನಂ ಮಲಿನಮಾಗಿರ್ದುದೊ
ಭರದೆ ಜಲಮಂ ವಸ್ತ್ರದಿಂ ಪೂತಮಂ ಮಾಡ
ದಿರಿಸಿದೆಯೊ ಮಿಗೆ ಕಂದಿ ತೊಟ್ಟುಬಿಟ್ಟಿರ್ದ ಪಳೆ
ಯರಲ ಶೋಧಿಸಿದೆ ಪೊಸಪೂಗಳೊಳ್ ಬೆರಸಿದೆಯೊ ಆಲಸಿದೆಯೊ ಸೇವೆಗಳ್ಗೆ ೧೨

---

[1] ದೀಹಾ (ಕ) [2] ರುಷ (ಗ)

ಕಿಱುದಾಯ್ತೊ ಮಹಿಷಾಕ್ಷಿ ಪಿರಿದು ಗುಗ್ಗುಳವಿಕ್ಕಿ
ಮಿಱುಪ ಧೂಪಾಗ್ನಿ ತಗ್ಗಿತೊ ಅದಱ ರಸದಿಂದೆ
ತಱಿಸಂದ ನೀರಾಜನಪ್ರಭೆಯ ಸೌಂದರ್ಯಮಣಿಯರಂ ಮಸುಳಿಸಿತ್ತೊ
ನೆಱೆಯದಾದುವೊ ಇಕ್ಕೆಲದ ದೀಪಕಾಂತಿಗಳ್
ಮೆಱೆವ ಪರಮೇಶ್ವರಂಗುಪಹಾರವೀವೆಡೆಯೊ
ಳಱಿಯದೇ ನಿನ್ನ ಮನವದಱ ಸವಿಗೆಱಗಿತೋ ಅಯ್ಯನೇತರ್ಕೆ ಮುನಿದಂ ೧೩

ಸಲೆಯರ್ಪಿತಪ್ರಸಾದಂ ಬಳಿಕ್ಕರ್ಪಿಸದೆ
ಕೆಲದೊಳಿರ್ದ ಪದಾರ್ಥತತಿಗಳೊಡೆವೆರೆಯಿತ್ತೊ
ವಿಲಸಿತ ತ್ರಿವಿಧೋದಕಂಗಳಂ ಕುಡಿದೆಯೋ ನೀಂ ಪ್ರಸಾದಮಸಣಿಯರಂ
ಒಲವಿನಿಂದಂ ಪದಾರ್ಥಂಗೆತ್ತು ನೋಡಿದೆಯೊ
ಕೆಲಸವಂ ಬೆಸಸೆ ಮಾಡದೆ ಮಟ್ಟಮಿರ್ದೆಯೋ
ನಲಿದು ಕರೆಯಲ್ಕೆ ಮಾಱುತ್ತರಂ ನುಡಿದೆಯೋ ಅಯ್ಯನೇತರ್ಕೆ ಮುನಿದಂ ೧೪

ಪೊಸತಿದಪ್ಪಾ ನಿನ್ನೊಡನೆ ಮಾತನಾಡದೇ
ಉಸಿಕನೆಮ್ಮಯ್ಯನಿರ್ಪುದು ಶೀಘ್ರದಿಂ ಪಾದ
ಬಿಸರುಹಕ್ಕಾವೀರ್ವರುಂ ನಮಿಸೆ ಮುನಿಸನೀಗಳೆ ಬಿಡುವನೆಮ್ಮಯ್ಯನು
ನಿಸದಂ ಶಿವಾರ್ಚನೆಯನೆಂದಿನಂದದೆ ಮಾಳ್ಪ
ನಸವಸಂ ಗುರುಗಳ್ಗೆ ವಂದಿಸಲ್ ಪೋಗುವಂ
ಮಸಕದಿಂ ಚಲಮೆಯುಂ ಮತ್ತೆ ತೆಗೆಯೇಳಬ್ಬೆ ಅಯ್ಯನಿರ್ದೆಡೆಗೆ ಪೋಪಂ ೧೫

ಎನುತೆ ತಾಯುಪ್ಪಟ್ಟ ಹುಟ್ಟಗೆಯ ಪಿಡಿದೆಳೆಯುತಿರ
ಲನಿತಱೊಳ್ ಜನನಿ ಕಿಸುಗಣ್ಣ ನುಡಿದಳ್ ತನ್ನ
ತನುಜನಂ ಬಾಯ್ಬಡಿಕತನಮನಿದನೆಲ್ಲಿ ಕಲ್ತೆಯೊ ಮಟ್ಟಮಿರು ನಿನ್ನಯ
ಜನಕನೀ ಬಗರಗೆಯ ತೆಗೆದಲ್ಲದೇ ತನ್ನ
ಮುನಿಸನುಳಿಯಂ ಮತ್ತಿದಂ ಶೀಘ್ರದಿಂದಗೆದು
ತನಯ ಬಂದಪ್ಪೆನಾಂ ನೀಂ ಪೋಗಿ ಪಟ್ಟೆರೆನುತಂ ಬಳಿಕಮಿಂತೆಂದಳು ೧೬

ಬಿಡದೆ ನಿಮ್ಮಜ್ಜನೊಳ್ಗಜ್ಜಮಂ ಪೂರೈಸಿ
ತಡೆಯದೆನ್ನೊಳಗಿಂದು ಮೊದಲಾವಗಂ ಮುನಿಸ
ನೊಡರಿಸಿದವೊಲ್ ತಿಳಿಪಿ ಬಂದಪೆಂ ನಿಡುಮುನಿಸನುಸಿಕನುಡುಗಂ ಭಾವಿಸೆ

ಬಿಡು ಸೆಱಿಂಗನೆನುತ್ತೆ ಸುತನ ಕೈಗಳನೆರಡ
ನೊಡೆಮುರಿದು ಜೀಲವಂ ಬರಸೆಳೆದುಕೊಂಡು ಮಿಗೆ
ಸಡಗರದೆ ತನ್ನ ಪತಿಯಂ ನಗುತೆ ನೋಡುತ್ತೆ ಗುಪೆಯುನಗೆ[1]ವ್ರು[1]ತ್ತಿರ್ದಳು ೧೭

ಬಳಿಕಮಾ ಬಾಲಕಂ ತಾಪಿಸುತೆ ಹೃದಯದೊಳ್
ನಿಳಯಮಂ ಪೊಱಮಟ್ಟು ಬಲಿದ ಕಳ್ತಲೆಯೊಳಗೆ
ಬಳವಳಿಯುತುಂ ತನ್ನ ಗುರು ಮಾದಿರಾಜಾರ್ಯನಾಲಯಕೆ ಬಂದು ಬೇಗಂ
ಲಳಿತ ಸಂಗೀತ ಪೀಯೂಷವಾರಿಧಿ ಮಧ್ಯ
ದೊಳಗೊಪ್ಪುತಿರ್ಪ ಗುರುಮೂರ್ತಿಯಂ ಕಂಡು ಭೂ
ವಳಯದೊಳ್ ಪೊಡೆಗೆಡೆದು ವಂದನಂಗೆಯ್ದಲೆ ಸ್ವಾಮಿ ಚಿತ್ತೈಸು ಮುದದಿಂ ೧೮

ಮುನಿದೆಮ್ಮ ತಾತನೆಮ್ಮಬ್ಬೆಯೊಳ್ ನುಡಿಯದೇ
ಕಿನಿಸುಗೊಂಡುಸಿಕನಿರ್ದಪನಯ್ಯ ನೀಂ ಬಂದು
ಘನಕೋಪಮಂ ತವಿಸು ಬಾ ಬಾರೆನುತ್ತೆ ಕರೆಯುತ್ತೆ ಶರಣೆನುತೆ ಮತ್ತಂ
ಎನಸುಮುಸಿರ್ದಂ ಕೋಪಕಿನ್ನೇನುಮೆಂಬುದಂ
ಸನಯದಿಂ ವಂಚಿಸದೆ ಮೊನ್ನೆ ಪಳೆಗಪ್ಪಡಮ
ನನುವಾಗಿ ಪೊದೆದಿರಲ್ ನೋಡಿ ನೀವಿತ್ತಂಬರಮನಂತೆ ಧರಿಸಿಕೊಂಡು ೧೯

ಮಿಸುಪ ಭಸ್ಮ[2]ವಲಿಪ್ತಾಂಗ[2]ನಾಗುತ್ತೆ ರಾ
ಜಿಸುವ ನಡುಮನೆಗೆಂಬಮಂ ನೆಮ್ಮಿಕೊಂಡು ತಾ
ನುಸಿಕನಿರ್ದಪನಿಂದು ಪೊಸತಪ್ಪ ನೇಮಮಂ [3]ಮು[3]ದ್ಭರ್ತೃ ಪಿಡಿದನೆನುತೆ
ಮಸಕದಿಂ ಚಲಮೆಯಂ ತೆಗೆವೆನೆನುತೆಮ್ಮ ತಾಯ್
ನಿಸದಂ ಶಿವಾರ್ಚನಾಸ್ಥಾನವೇದಿಕೆಯನಂ
ತೊಸೆದಗೆಯುತಿರ್ದಪಳ್ ಮುನಿಸನಿದನೆಯ್ದೆ ತೆಗೆದಲ್ಲದೇ ತಿಳಿಯನೆನುತೆ ೨೦

ಮುನಿದಿರ್ದ ತಂದೆಯಡಿಗಳನೆಯ್ದೆ [4]ನಾ[4]ವೀರ್ವ
ರನುನಯದೆ ಪಿಡಿದೊಡಾ ಕೋಪಮುಳಿವುದು ತಾಯೆ
ಎನಲದಂ ಬಗೆಯದೇ ಮುನಿದೊಡಂ ಮುನಿದಿರಲಿ ತಿಳಿಪಲೆನ್ನಳವಲ್ತಿದು
ಘನಕೋಪಮೆಂದು ಕೆಮ್ಮನೆ ಚಲಮೆಯಂ ತೆಗೆಯು
ತಿನಿಸಿನಿಸು ನಸುನಗುತ್ತಿರ್ದಪಳ್ ಪೋಗಲದು
ಮುನಿದೊಡೆಮ್ಮಬ್ಬೆಯೊಡನೆಯ್ದೆ ಮುನಿಯಲ್ ತಂದೆ ಎನ್ನೊಡನದೇಕೆ ನುಡಿಯಂ ೨೧

---

[1] ಯು (ಕ) [2] ಲಿಪ್ತನಾಂಗ (ಕ) [3] ತ (ಕ) [4] ಯಾ (ಕ)

ಪಿರಿದು ತನ್ನಯ ಹರಣವೆಂದೆನ್ನನಾವಗಂ
ಹರಿಸ[1]ದಿಂ ಬಗೆದಿರ್ಪನೆನ್ನೊಡನೆ ನುಡಿಯದಿಂ
ದಿರುತಿಪ್ಪುದಿದು ಸೋಜಿಗಂ ಗೆಂಟಿಜತೊಳಗೆನ್ನ ಕಾಣುತ್ತೆ ವದನದೊಳಗೆ
ದರಹಾಸನುಣ್ಮುಗುಂ ವ್ಯನವಿರ್ ಮೂಡುಗುಂ
ಭರದೆ ತನ್ನಯ ಕಣ್ಣೊಳಾನಂದಜಲವೊಸರಿ
ಪರಿಯುತಿರ್ಕುಂ ಬಾರ ಬಾಲಲಿಂಗನೆ ಬಾರೆನುತ್ತೆ ತೆಗಡಪ್ಪಿಕೊಳ್ವಂ ೨೨

ಹರಿಸ[1]ದಿಂ ತನ್ನೂರು ಪೀಠದೊಳಗೆನ್ನ ಬಂ
ಧುರತರ ಪ್ರೀತಿಯಿಂದಿರಿಸಿಕೊಂಡಣಿಯರಂ
ಕರಯುಗದೆ ಚಂಡಿಕೆಯ ನೇರ್ಪಡಿಸಿ ಜಡೆವೆಣೆದು ನಿರ್ಮಾಲ್ಯಪುಷ್ಪತತಿಯಂ
ಸರಗೆಯ್ದು ಡಲ ತುದಿಯೊಳೆಳಲಿಕ್ಕುವಂ ಮತ್ತೆ
ಸರಳಾಂಜನಮನೆರ್ಚುವಂ ಕಣ್ಗೆ ಭಾಳದೊಳ್
ವರ ಭಸಿತವಿಡುವನೊಸೆದಾನನಂ ನೋಡುತ್ತೆ ನಸುನಗುವನಳ್ತಿವೊಳ್ವಂ ೨೩

ನಲಿದು ಪಣೆಯೊಡ್ಡಿ ಬೊಟ್ಟಂ ಬೇಡುವಂ ಗಲ್ಲವು
ನ್ನಲುಗಿ ಮಿಗೆ ಭುಲ್ಲೈಸುವಂ ಪ್ರೇಮದಿಂದೆ ಜ
ಕ್ಕುಲಿಸಿ ಪಿರಿದಟ್ಟಹಾಸಮನೊಡರ್ಚಿಸುವನುನ್ನತಮಾದ ತೊದಳುಸುರನು
ಸಲೆ ಕೇಳ್ವನಾವಗಂ ಪಂಚಾಕ್ಷರೀಮನುವ
ನಲಸದೇ ಪಠಿಯಿಸುವನೆನ್ನ ಮೊಗದೊಳ್ ತನ್ನ
ಲಲಿತ ಮುಖಮಂ ಸಾರ್ಚಿ ಮುತ್ತುಗೊಳ್ವಂ ಪ್ರೀತಿಯೆಸಕದಿಂದೆಮ್ಮಯ್ಯನು ೨೪

ಎನ್ನ ಚಿತ್ತಪ್ರಿಯಸಖನೆ ಎನ್ನ ಚಿಣ್ಣನೇ
ಎನ್ನ ಮುದ್ದಿನ ತವರೆ ಎನ್ನ ಚನ್ನಿಗನೆ ಸಂ
ಪನ್ನ ನೀನಾರ ಬಂಟಂ ಬಳಿಕ್ಕಾರ ಬಾಗಿಲ್ಗಾಪಿನವನಾರವಂ
ನನ್ನಿಯಿಂ ಬಸವರಾಜನ ಮನೆಯ ಬೊಕ್ಕಸದ
ಮನ್ನಣೆಯವನೊ ಸುರಗಿಚೌಡಯ್ಯನಾಳೊ ಅ
ತ್ಯುನ್ನತ ಮುಸುಂಡಿಚೌಡಯ್ಯಂಗಳಾತ್ಮಜನೊ ಮಸಣಿದೇವನ ಭೃತ್ಯನೊ ೨೫

ಕರಿಕಾಲಚೋಳನಡವಳದವನೊ ಚೇರಮನ
ತುರಗದವನೋ ಕೇಶಿರಾಜಯ್ಯನವರ ಭಾ
ಸುರತರ ಛಾತ್ರನೋ ಏಲೇಶ ಕೇತಯ್ಯನವರ. ಮನೆತುಱುಗಾಱನೊ

---

1 ರುಷ (ಗ)

ಪರಮ ದೇವರದಾಸಿಗಳ ಕಣಜದವನೊ ಶಂ
ಕರದಾಸ ಲೆಂಕನೋ ಬಂಕಯ್ಯನವರ ಕಿಂ
ಕರನೊ ಕಕ್ಕಯ್ಯಂಗಳೊಳ್ವಾಳೊ ಕಲಕೇತಬೊಮ್ಮಯ್ಯನ ವರಸುತನೊ ೨೬

ಮಳೆಯರಾಜನ ಪುನೆಯ ಪಡೆವಳ್ಳನೋ ಬಳಿ
ಕ್ಕೆಳೆಯ ದಂಗುಡಿಮಾರನಣುಗಾಳೊ ಪರಮ ಚಂ
ಗಳೆಯ ಮುದ್ದಿನ ಶಿಶುವೊ ಸುಂಕಿಬಂಕಯ್ಯಕುವರನೊ ಚನ್ನನಾಳ್ಗಳಾಳೊ
ಲಳಿತ ಸೊಡ್ಡಳಬಾಚಿದೇವ ಗೃಹಲೇಖಕನೊ
ವಿಳಸಿತ ಶ್ರೀಪಂಡಿತಾರಾಧ್ಯವರಸುತನೊ
ತಿಳಿಯೆ ಗುರುಮಾದಿರಾಜಾರ್ಯ ಪೌತ್ರನೊ ನೀನೆನುತ್ತೆ ಮತ್ತಂ ಮುದದೊಳು ೨೭

ಸಲೆ ಚಿಕ್ಕಮಾದಣ್ಣ ಮಾದೇವಿಯರ ಮೋಹ
ದಲಘುಸುತನೋ ಎನುತೆ ಕೊಂಡಾಡಿ ಮುಂಡಾಡು
ತೊಲವಿನಿಂ ಪೊಡೆಯನೀಕ್ಷಿಸಿ ಬಾಲಲಿಂಗನುಜಿತ ಪಸಿದನತಿವೇಗದಿಂದಂ
ಎಲೆಗೆ ಕೈಗೆಲಸಮಂ ಬಿಟ್ಟು ಬಾ ಬಾರೆನುತೆ
ನಲಿ[1]ದಮ್ಮನಂ[1] ಕರೆವನಬ್ಬೆ [2]ತಳ್ವಿ[2]ದೊಡೆ ತಾ
ನಲಸದೆಳ್ತಂದೋದನಮನಿಕ್ಕಿ ತುತ್ತುಗೆಯ್ದೂಡುಮಂ ಮನದ[3]ಣಾಗಿ[3]ನಿಂ ೨೮

ಹರಿಸದಿಂ ಪೆಗಲನೇಱಿಸಿಕೊಂಡು ನಿಮ್ಮ ಪದ
ಸರಸಿಜದ ಸೇವೆಗೆಯ್ತರ್ಪನೊಲ್ದಾವಗಂ
ನಿರುತಮತಿ ಜಡರಂತೆವೊಲ್ ತನುಜನೆಂಬ ದುರ್ಭ್ರಾಂತಿಯಿಂ ಪೊರೆಯನೆನ್ನಂ
ಕರಮ ತ[4]ನ್ಮಯೆ[4] ಗುರುವಿನೊಳ್ವಿಸರ ಮಗನೆಂದು
ಸಿರಿದು ಮನ್ನಿಸಿ ಸಲಹುವಂ ಮತ್ತಮೀಗಳಾಂ
ಕರೆದೊಡಂ ಮುಂದಿರ್ದೊಡಂ ನೋಡನುಸುರನಿದುವೆಂತಪ್ಪ ಮುನಿಸೊ ಪೊಸತು ೨೯

[5]ಸಿಸು[5]ಗಳಂತೆವೊಲಾನೊಡರ್ಚನೇನಂ ತನ್ನ
ವಸದೊಳಿರ್ಪೆಂ ಬಳಿಕ್ಕಬ್ಬೆ ನೀನೆನಗಿನಂ,
ನಿಸದಮಿಾಯೆಂದು ಬೇಡೆಂ ಲಿಂಗಕ್ಕಿತ್ತಲ್ಲದೇನುಮಂ ಮುಟ್ಟೆನಿನಿಸಂ
ಮಸಕದಿಂದಿದನೆಲ್ಲವಂ ತನ್ನ ಮನವಱಿವು
ದುಸಿಕನುಸುರದೆ ಮುನಿಸುಗೆಯ್ವಂತೆ ತಪ್ಪುಗಳ
ನೆಸಗಿತಿಲ್ಲಾಂ ಪೊಡವಿಗತಿಶಯಂ ಮುನಿದ ಮುನಿಸಿದು ನಾಡೆ ಪರಿಭಾವಿಸೆ ೩೦

---

[1] ದು ಮಗನಂ (ಕ) [2] ತಿಳಿ (ಕ) [3] ಣಿವಿ (ಕ) [4] ನ್ನಯ (ಕ) [5] ಶಿಶು (ಗ)

ನಿರುತಮಿಾ ಮುನಿಸು ನಿಮ್ಮಡಿಗಳಿಂದಲ್ಲದೇ
ಪರನೊರ್ವನಿಂದಳಿಯದೆಲೆ ಗುರುವೆ ನೀಮೆಯ್ದಿ
ಕರುಣದಿಂದೆನ್ನೊಡನೆ ನುಡಿವಂತೆ ಮಾಡಿಮೆನುತಡಿಗಳ್ಗೆ ಪೊಡಮಡುವನು
ಉರದ ಸೆಜ್ಜೆಯನೊಡನೆ ಕೌಂಕುಳೊಳಿಱುಂಕಿಕೊಳು
ತರುದುಃಖದಿಂದಳುತೆ ಗದ್ಗದಂ ಪೊಡಕರಿಸಿ
ಭರದೆ ನುಡಿ ತಡಬಡಂಗೆಯ್ವುತಂ ಮರಳಿ ವಂದಿಸುತೆ ನೀಂ ಬನ್ನಿಮೆನುತಂ ೩೧

ಕರದಿಂದೆ ಚೇಲಾಗ್ರಮಂ ಪಿಡಿದು ಸೆಳೆಯುತ್ತೆ
ಪಿರಿಯ ಮುನಿಸಿದು ನಿಮ್ಮ ದೆಸೆಯಿಂದಮಲ್ಲದೇ
[1]ಷಱಿದುಪೋಗದು ಗುರುಸ್ವಾಮಿ ಬನ್ನಿಮೆನುತ್ತೆ ಬಾಲಲಿಂಗಂ ಕರೆಯುತೆ
ಇರುತಿರ್ಪವಸ್ಥೆಯಂ ಸಂಗೀತಲೋಲುಪಂ
ಕರುಣಾಂಬುನಿಧಿ ಮಾದಿರಾಜಾರ್ಯನೀಕ್ಷಿಸುತೆ
ಭರದೆ ನುಡಿದಂ ಶಿಶುವಿನೊಡನೆ ಪಲ್ಗದಿರ್ಗೂಡಿ ದರಹಾಸಮುಣ್ಮುತಿರಲು ೩೨

ಜಗದೊಳಗೆ ಶೀಲಸಂತರ್ ಪಲಬರೊಳರೆಯ್ದೆ
ನೆಗಳ್ದ ಮನೆಮನೆದಪ್ಪದೊಱತೆಯಂ ಮನೆಯೊಳಗೆ
ತೆಗೆವವರನಿನ್ನೆವರೆಗಂ ಕಂಡುದಿಲ್ಲ ಮತ್ತಂ ಸತೀಸುತರ ಕೂಡೆ
ಮಿಗೆ ಕಲಹಗೊಂ[2]ಡೊಡವರಂ[2] ಜಡಿದು ಬುದ್ಧಿಯಂ
ಸೊಗಸಾಗಿ ಪೇಳ್ವುದುಚಿತಂ ನುಡಿಯದಣೆಯರಂ
ಬಗೆಗೆಟ್ಟು ಮಟ್ಟಮಿರ್ಪಿರವಿದತಿಚಿತ್ರಮುವನಿಯೊಳ್ ಪರಿಭಾವಿಸೆ ೩೩

ಪಸುಗೂಸುಗಳ್ ಧರಣಿಯೊಳಗನಂತರ್ಕರೊಳ
ರೊಸೆದಿವನವೊಲ್ ಮುದ್ದುಮಾತೊಳಗೆ ಬರ್ದುನುಡಿ
ಯೆಸಗುವಂತುಸುರ್ವ ಮಕ್ಕಳ ಕಂಡುದಿಲ್ಲಿನ್ನೆವರೆಗಮಿಾತನ ವಾಕ್ಯವು
ನಿಸದಮುಂ ಬೇಱೊಂದು ತೆಱನಾಗೆ ತೋಱುತಿದೆ
ಮಿನುಪ ಸಕಲೇಶನ ನಿರೂಪಮೆನುತೆಳ್ದು ಸಂ
ತಸದಿಂದೆ ಬಾ ಮಗನೆ ಪೋಪಮೆನುತಲ್ಲಿಂದೆ ತೆರಳ್ದು ನಡೆತರ್ಪಾಗಳು ೩೪

ಶರಣಜನಸಂದೋಹ ವರದ ಸಕಲೇಶ ಬಂ
ಧುರ ಮೋಕ್ಷಪದವಿಯಂ ಬಯಸದಾನಿರ್ಪುದ
ಕ್ಕರರೆ ನೀನೇ ಸಾಕ್ಷಿಯೆನ್ನ ಮನದೊಳಗಾವುದೊಂದುಮನಪೇಕ್ಷಿಸದೆಯುಂ

---
1 ಪ (ಕ) 2 ಡಾಡುವರ (ಕ)

ಇರುತಿರ್ಪ ಕತದಿಂದವೆನ್ನ ಸದ್ವಾಕ್ಯವಂ
ಪಿರಿದು ಮನ್ನಿಸುತಿರ್ಪ ನೀನೆಂದು ಗೀತವಂ
ಸರಸಮಾಧುರ್ಯದಿಂ ವಿರಚಿಸುತೆ ನಸುನಗುತೆ ತದ್ಭವನಕೆಯ್ದಿವಂದು ೩೫

ಎಲೆ ಮಹಾದೇವಿ ಮನೆಯೊಳಗೇನನೆಸಗಿದಪೆ
ಯಲಘು ಕೋಪಂದಳೆದನೇತರ್ಕೆ ನಿನ್ನ ಪತಿ
ಯಲಸುತೇವಂದಪಂ ಶಿಶುಬಾಲಲಿಂಗನೆಮ್ಮಾಲಯಕ್ಕಿರುಳೊರ್ವನೆ
ಸಲಿದು ಪೇಳೆಂದು ನುಡಿಯಲ್ಕಾರವಂಗೇಳು
ತೊಲವಿನಿಂ ತತ್ಕಾಂತೆಯಿದಿರ್ವಂದು ಗುರುಪಾದ
ಸಲಿಲಜಕೆ ಮಗುಳ್ದು ಮಗುಳ್ದಿಯ್ದೆ ಸದ್ಭಕ್ತಿಯಿಂ ಸಾಷ್ಟಾಂಗದೊಡನೆಱಗುತೆ ೩೬

ಇರಲವಳನೊಡಗೊಂಡು ನಡುಮನೆಯನೆಯ್ದಿ ಯಮ
ಕರಿಮೃಗೇಂದ್ರಂ ಮಾದಿರಾಜಯ್ಯನಳ್ಕಱಿಂ
ಕರುಣಾಕಟಾಕ್ಷದಿಂ ಚಿಕ್ಕಮಾದಣ್ಣನಂ ನೋಡಿ ನುಡಿದಂ ಮುದದೊಳು
ಭರದಿ ನಾವೆಯ್ತರಲ್ ನುಡಿಯದೇ ನೀನುಸಿಕ
ನಿರಲಕ್ಕುದೇ ಪರಮಗುರುಭಕ್ತ ನೀಂ ನಾಡೆ
ಪರಲಿಂಗ ಪೂಜನಾಸಕ್ತಚಿತ್ತಂ ಬಳಿಕ್ಕಿರದೆ ನೀನೇಳೆನುತ್ತೆ ೩೭

ಪರಮ ಲಿಂಗಾರ್ಚನೆಯ ವೇಳೆಯಾಯ್ತಿಲ್ಲಿ ಕು
ಳ್ಳಿರದೇಳೆನುತ್ತೆ ಮತ್ತಂ ವಿಚಾರಂಗೆಯಲ್
ಪರಮುಕ್ತಿಪದವಿಯೊಳಗಾವ ಸುಖಮುಂಟು ಸದ್ಭಕ್ತಿಮಾರ್ಗಮಿದಾವಗಂ
ನಿರುತಮಾ[1]ಗೆಮ್ಮ[1] ಚೈತನ್ಯಮಿದನೊಕ್ಕಿರ್ಪು
ದುರುಮತಂ ತಾನಲ್ತು ಮೌನಮಂ ಬಿಟ್ಟು ನಿ
ರ್ಭರದಿಂದ[2]ವೆಳ್ದಂ[2]ದಿನಂತಿರ್ಪುದೆಮಗಣಿಯರಂ ಪ್ರಿಯಮದಕ್ಕುಮನಿಶಂ ೩೮

ನುಡಿಯದೇನೀ ಛಲಂಗೊಂಡು ದೋಷಂದಾಳ್ದು
ಕಡುಮುನಿದು ಮಟ್ಟಮಿರ್ದಪನದಂ ಬಂದು ನಿ
ವ್ಮೊಡನೆ ತಿಳಿಯಿಸಿ[3]ವೆಂ[3]ದು ಬಾಲಲಿಂಗಂ ಭರದಿನೆಮ್ಮನೊಡಗೊಂಡೆಯ್ದಿದಂ
ಬಿಡು ಮುನಿಸ[4]ನೆಂ[4]ದೆನುತೆ ತನ್ನ ಕರುಣಾಪಾಂಗ
ದೊಡೆವೆರೆದ ಪೀಯೂಷರಸಮನಾ ಶಬದ ಮೇ
ಲೊಡರಿಸಲ್ ನಿದ್ರೆತಿಳಿದವನೇಳ್ವ ಪಾಂಗಿನಿಂ ತುರಿತದಿಂದವನೆಳ್ದನು ೩೯

---

[1] ಗೆಂದು (ಗ) [2] ಮೇಳಿಂ (ಗ) [3] ಬಂ (ಕ) [4] ಮುಂ (ಕ)

ಬೆನ್ನ ನಸುಮುರಿಯುತ್ತೆ ಕರತಲಾಂಗುಲಿಗಳಂ
ಚಸ್ನಮರ್ದು ಚಿಟುಕುಗಳೆಯುತ್ತೆ ಸರ್ವಾಂಗಮಂ
ಮುನ್ನಿನಂತೆವೊಲೊಸೆದು [1]ನೇ[1]ರ್ಪಡಿಸಿಕೊಳುತೆ ಬೆವರಿಸೆಯೆ ತನುನಿಚಯದೊಳಗೆ
ಸನ್ನಿದಂ ತೋಳ್ಗಳಿರಡಂ ನೀಡಿಕೊಳುತೆ ಮ
ತ್ತನ್ನಿಸದಮಧರಮಡಿಗಡಿಗೆ ಕೆತ್ತುತ್ತಿರಲ್
ತನ್ನ ಮೊಗನೆತ್ತಿ ಕಣ್ದೆರೆದು ನೋಡುತ್ತೆ ಕಂಡಂ ಮಾದಿರಾಜಯ್ಯನಂ ೪೦

ಅನಿತಱೊಳ್ ಸಂಭ್ರಮಂ ಭಯಭಕ್ತಿಗಳ್ ಕಂಪ
ವಿನಯಂಗಳುಣ್ಮುತಿರಲಭಿವಂದನಂಗೆಯ್ದು
ಮಿನುಗುವೆನ್ನಯ ಪುಣ್ಯವೆಂತಪ್ಪುದೋ ಧನ್ಯನಾದೆನಾಂ ವಿಗತದೈನ್ಯ
ಅನಘದೂರೀಕೃತಾಂಗಜಸೈನ್ಯ ಶಿವಸಮಯ
ಕನದಮಲ ಚೈತನ್ಯತರ್ಜಿತಜಘನ್ಯ ಮ
ತ್ತನವರತ ಜಿತಮಾತೃಕಾಸ್ತನ್ಯ ಸದ್ಭಕ್ತ ಸೌಜನ್ಯ ಎಂದು ಮುದದಿಂ ೪೧

ಸುತ ಸತಿಗಳೊಡಗೂಡಿ ಚಿಕ್ಕಮಾದಣ್ಣನು
ನ್ನತ ಭಕ್ತಿಯಿಂ ಮುಗುಳ್ದು ಮುಗುಳ್ದು ಗುರುವಿಂಗೆಱಗಿ
ನುತಿಸುತಿರಲಾ ಸಮಯದೊಳಗಿರ್ದ ಸದ್ಭ[2]ಕ್ತ[2]ವಿತತಿಯತಿಹರುಷದಿಂದೆ
ಅತಿಶಯಂ ಮಿಗೆ ಮಾದಿರಾಜಂಗೆ ಪೊಡಮಟ್ಟು
ಸುತನ ನುಡಿಗೇಳಿ ತಂದೆಗೆ ಹರಣಮಂ ಕೊಟ್ಟು
ವಿತತ ಸತ್ಕೀರ್ತಿ ನಿನಗಲ್ಲದಾರ್ಗುಂಟೆಂದು ಪೊಗಳುತ್ತಮಿಂತೆಂದರು ೪೨

ತಂದೆಯತಿಶಯಭಕ್ತಿ[3]ಯಿಂ[3] ಸುತಪ್ರಾಣಮಂ
ಸಂದೆಗಮದಿಲ್ಲದೇ ಮುನ್ನೆ ಶಿವನಿತ್ತನಿದು
ಚಂದದಿಂ ಚಂಡೇಶಸುತಭಕ್ತಿ ಸದೃಶಮಾದುದು ಸುತನ ವಾಕ್ಯದಿಂದೆ
ಇಂದು ಪಿತೃವಿನ ಹರಣಮಂ ಕೊಟ್ಟ ಬಲ್ಮೆಯಂ
ಚಂದಿರಧರಂ ಬಲ್ಲನುಳಿದರೇನಱಿವರೇ
ಎಂದು ತದ್ಭಕ್ತತತಿ ನಾಡೆ ಗುಣಕಱುಗೊಂಡು ಕೀರ್ತಿಸಿದರತಿಶಯದೊಳು ೪೩

ಭಲರೆ ಸಕಲೇಶ ಮಾದರಸಯ್ಯ ಸದ್ಭಕ್ತ
ಕುಲ[4]ಚಿತ್ತಶಯ್ಯ ನಿನ್ನಯೆ ಲಸಿತ[4] ಮೂರ್ತಿಯಂ
ಸಲೆಗೆಂಟ[5]ಱಿಱೊಳ್ ಕಂಡ[5] ಮಾನವರ ಪಾಪೌಘಮುರ್ಯಾಮನ ಕಿರಣತತಿಗೆ

---

[1] ಮೋ (ಕ) [2] ಕ್ತಿ (ಕ) [3] ಯಂ (ಗ) [4] ಚೇತಸೆಯ ನಿನ್ನ ವಿಲಸಿತ (ಕ)
[5] ರೋಳುಳ್ (ಕ)

ನಲಿದಿದಿರ್ಚಿದ ಗಾಢತನುದೊಡ್ಡಿ ನಂತೆ ನೆಲಿ೩
ತೊಲಗಿಪೋಗದೆ ನಿನ್ನ ನಿಟ್ಟಿಸಿದ ದುರ್ನಿತ
ರಲಘು ತತ್ತ್ವಾರ್ಥವಿದರಾಗರೇ ಭಾವಿಸಲ್ ಮೂಲೋಕದೊಳಗೆ ಸತತಂ ೪೪

ಕರುಣದಿಂದಾವನಂ ನೀಂ ನೋಡಲವನೆಯ್ದೆ
ಕುರುಡನಾದೊಡೆ ಕಣ್ಗೊಳೊಗೆಗುಮವನಾವಗಂ
ಕರಮೆ ರೋಗಿಯುಮಾದೊಡರುಜನಪ್ಪಂ ಸ್ಥವಿರನಾದೊಡಂ ತರುಣನಪ್ಪಂ
ಇರದೆ ನೀಂ ನೋಡಿದೊಡೆ ಶಬಮಾದೊಡಂ ನಾಡೆ
ಭರದಿಂದೆ ಚೇತನತ್ವದೊಳೊಂದಿ ತೋರ್ಕುಮಂ
ತುರು ಶುಷ್ಕದಾರು ಕೊನರ್ಗುಂ ನೋಡೆ ನೀನೊಸೆದು ನಿಕ್ಕುವಂ ಲೋಕದೊಳಗೆ ೪೫

ನಲಿದು ನೀಂ ನೋಡೆ ಕಾಳ್ಗಿರ್ಚು ಮಂಜಪ್ಪುದ
ತ್ಯಲಘು ಹಾಲಾಹಲಂ ಸುಧೆಯಪ್ಪುದುರಗ[1]ನದು
ಲಲಿತ[1] ಸುಮನೋಮಾಲೆಯಪ್ಪುದಿದು ಕೊಂಡಾಟಮಲ್ತು ಸಾಜಂ ಭಾವಿಸೆ
ಒಲವು ಮಿಗೆ ಬಾಲಕಂ ಪ್ರಾರ್ಥಿಸಲ್ ಕೈಕೊಂಡು
ನಲವಿನಿಂ ಬಂದಿಪ್ಪವಂ ಸಲಿಸಿಯವನ ಸ
ಲ್ಲಲಿತ ಪಿತನಸುವಿತ್ತು ಪೊರೆದ ಸಾಮರ್ಥ್ಯಮುಂಟೇ ಮತ್ತಿನರ್ಗೆ ಸತತಂ ೪೬

ನಿರುತಮಿಂತಪ್ಪ ಸಾಮರ್ಥ್ಯಮುಳ್ಳಾರ್ಯ ನೀಂ
ಹ[2]ರಿಸ[3]ದಿಂದಿಲ್ಲಿಗೆಯ್ತಂದು ದಯೆಯಿಂ ನೋಡೆ
ವರ ಚಿಕ್ಕಮಾದಣ್ಣನಸು ಬಂದಿತೆಂಬುದೇಂ ಸೋಜಿಗಮೆನುತ್ತಿಲ್ಲರು
ಪರಮಭಕ್ತರ್ ಕೀರ್ತಿಸುತ್ತಿರಲ್ಕಂ[3]ದು ಭಾ
ಸುರ ಮಾದಿರಾಜಯ್ಯನತ್ಯಂತ ಮೋಹದಿಂ
ಸರಳ ಶಿಷ್ಯಂ ಚಿಕ್ಕಮಾದಣ್ಣನಸುಪಡೆದನೆಂಬುದಂ ಕೇಳ್ದಜಾವೆವು ೪೭

ಇಂದು ಗುರುಮಲ್ಲಿಕಾರ್ಜುನ ಪಂಡಿತಾರಾಧ್ಯ
ರಂದಮಪ್ಪಂತೆ ಮಾದೇವನಡಿಗಳ ಭಕ್ತ
ವೃಂದಮಧ್ಯದೊಳೊಲ್ದು ಪಡೆದುದಂ ಕಂಡೆವಾವೆಂದು ಸದ್ಭಕ್ತಸಮಿತಿ
ಮುಂದುವರಿದತಿಕೀರ್ತಿಸುತ್ತಿರ್ದುದೆಂದು ಸ್ಥಲೆ
ಸಂದ ಮೋಹದೆ ಪಾಲ್ಕುರಿಕೆ ಸೋಮನಾಥನಾ
ನಂದಮುಣ್ಮಲ್ ಸೂರಸಚಿವಂಗೆ ಪೇಳ್ದನಿದನಾಲಿಪುದು ಭಕ್ತನಿಕರಂ ೪೮

---

1 ಕುಲ। ಮುಲಿದು (ಕ) 2 ರುಷ (ಗ) 3 ಡು (ಗ)

ಸದಮಲಪ್ರಚುರವಿಶ್ರುತ ಪರಮಭಕ್ತಗಣ
ಪದಸರೋರುಹಸಾಂದ್ರ ಮಕರಂದಪಾನ ಸ
ಮ್ಮುದಿತ ಚಂಚಚ್ಚಂಚರೀಕನನವರತ ಪಂಚಾಕ್ಷರೀಪ್ರಸಿತಹೃದಯಂ
ವಿದಿತ ಮಂಜುಲನೀಲಕಂಠಾಹ್ವಯಂ ಮನೋ
ಮುದದೆ ಪೇಳ್ದುರುತರಾರಾಧ್ಯಚಾರಿತ್ರದೊಳ
ಗಿದು ಚಿಕ್ಕಮಾದಣ್ಣನಸುವನಾ ಮಾದಿರಾಜಂ ಪಡೆದ ಕಥನವೆನಿಕುಂ ೪೯

# ಹನ್ನೆರಡನೆಯ ಸಂಧಿ

## ಕದಿರರೇಮಯ್ಯ[1]ನ[1] ಕಥೆ

ಸೂಚನೆ : ಮದನಹರಗಣವರನ ನಿರ್ಧೂತ ಕಲ್ಮಷನ
ಕದಿರರೇಮಯ್ಯನೊಳ್ಗತೆಗೇಳ ಮನದಂದು
ವಿದಿತ ಸೂರಾಮಾತ್ಯ ನೀನೆಂದು ಪೇಳ್ದನಾ ಪಾಲ್ಕುರಿಕೆ ಸೋಮೇಶ್ವರಂ

ಮುಡಿಯೊಳಗೆ ಗಂಗೆ ಫಣೆಯೊಳಗಗ್ನಿ ಕಿವಿಯೊಳಗೆ
ನಿಡುಸರ್ಪ[2]ಗೊಂ[3]ಡಲಂ ಕೊರಲೊಳಗೆ ಪೊಸ[3]ಬಿಸಂ[3]
ಕಡುವೆರಿಜಿತನ ಕರದೊಳಗೆ [4]ಬರ್ಮ[4]ದಲೆಗರ್ಪರಂ ಕರಟೆಯೊಳಗೆ ಪುಲಿಯ [5]ಸಮ್ಮಂ[5]
ತೊಡೆಯೆಡೆಯೊಳದ್ರಿಸುತೆ ವಿಮಲ ಚರಣಾಗ್ರದೊಳ್
ಪೊಡೆಯಲರಸೊಳ್ಳಚ್ಚಿ ರಾಜಿಸಲ್ಕಣಿಯರಂ
ಪಡಪುದೋಱುವ ನೀಲಕಂಠನೊಸೆದೆಮಗೀಗೆ ಭಕ್ತಿ ಸಾಮ್ರಾಜ್ಯಪದವಂ ೧

ಬಳಿಕೆ ಮತ್ತೊರ್ವನೀಶ್ವರಭಕ್ತಪುಂಗನಂ
ಲಳಿತ ಸತ್ಕೀರ್ತಿವಂತಂ ಕದಿರರೇಮಯ್ಯ
ನಳಘು ಗುರುಮೂರ್ತಿ ವಿಶ್ರುತದಯಾವರ್ತಿ ನಿರ್ಧೂತವಿನ ಮಜ್ಜನಾರ್ತಿ
ಲುಳಿತ ಸನ್ಮಾರ್ಗವರ್ತನಚಕ್ರವರ್ತಿ ನಿ
ರ್ಮಳತರ ಶ್ರೀಗುರುವನೊಲ್ದು ಕಾಣ್ಬ[6]ಳ್ಕ[6]ಱಿಂ
ತಳರ್ದು ಬರುತಿರೆ ಲಿಂಗಪೂಜಾವಸರಮಾಗಲೊಂದೂರ ನಿಕಟದಲ್ಲಿ ೨

ಪಿರಿದು ಶಿವಲಿಂಗಾರ್ಚನಾ ಕಾಲಲಂಘನಂ
ನಿರುತಮಾಗದೆನುತ್ತೆ ಶಿವಪುರಾಣಂಗಳೊಳ್
ಕರಮೆ ನುಡಿಗುಂ ಪತ್ತುಮದಱಿಂ ತ್ರಿಕಾಲಪೂಜಾ ನಿಯಮಮಂ ಮಾಳ್ಪುದೆ
ಪರಮಭಕ್ತರ್ಗುಚಿತಮೆನುತಲಾ ಗ್ರಾಮಮಂ
ಭರದಿಂದೆ ಪೊಕ್ಕು ಶಿವಭಕ್ತನೊರ್ವನ ಗೃಹ
ಕ್ಕುರುತರ ಪ್ರೀತಿಯೊಳ್ ಬಂದನಾ ರೇಮಯ್ಯನೀಶಪೂಜೆಯನೆಸಗಲು ೩

---

1 ಗಳ (ಟ) 2 ಗುಂ (ಗ) 3 ವಿಷಂ (ಗ) 4 ಬ್ರಹ್ಮ (ಗ) 5 ಚರ್ಮಂ (ಗ)
6 ಕ್ಕ (ಗ)

ಅನಿತಱೊಳಗಾ ಮನೆಯ ಸದ್ಭಕ್ತನಿದಿರ್ವಂದು
ವನಿತೆಯುಂ ತಾನುಮಾತ್ಮಜನುಮತಿಶಯಭಕ್ತಿ
ವಿನಯದಿಂ ತಱಿಸಲ್ಗೆಯ್ದು ಲಿಂಗಾರ್ಚನೋಚಿತ ವಸ್ತುನಿಕರಂಗಳಂ
ಅನುವಿನಿಂದಿರಿಸಿ ಲಿಂಗಾರ್ಚನೆಯನೊಸೆದೆಸಗಿ
ಮಿನುಪ ಶಿವಲಿಂಗ ಪ್ರಸಾದಮಂ ಭರದಿಂದೆ
ಮಸ[1]ವೊ[1]ಲ್ದು ಕದಿರರೇಮಯ್ಯಂಗಳಾರೋಗಿಸುತ್ತಿರಲ್ಕಾ ಗೃಹಸ್ಥಂ ೪

ಕದಿರರೇಮಯ್ಯಂಗೆ ನಂದನಂಗೆಯ್ದು ಸ
[2]ಮ್ಮು[2]ದದಿಂ ಪ್ರಸಾದಮಂ ಕೊಂಡಂತೆವೋಲವನ
ವಿದಿತ ಸುತನಾ ತೆಱದಿನವರ್ಗೆ ವಂದಿಸಿ ತತ್ಪ್ರಸಾದಮಂ ಕೈಕೊಳುತ್ತೆ
ಪದೆದು ತಾನುಂ ತನ್ನ ತಾಯುಮೊಡಗೂಡಿಯಿಂ
ಪೊದವಿದಾ ಸುಪ್ರಸಾದಂಗೊಂಡನನಿತಱೊಳ್
ಪದುಳದಿಂದಾಯಯ್ಯನೆಯ್ದಿದಂ ತನ್ನ ಗುರುವಿನ ಮಿನುಪ ಪಟ್ಟಣವನು ೫

ಗುರುದೇವನಂ ಕಂಡು ಕದಿರರೇಮಯ್ಯನುರು
ತರಭಕ್ತಿಯಿಂ ತಱಿಸಲ್ಗೆಯ್ದವರ ಕಾರುಣ್ಯ
ಶರನಿಧಿಯೊಳತಿನಿಮಗ್ನನುಮಾಗಿರುತ್ತಿರಲ್ಕಿತ್ತ ತಮಗೆಂದು ಮುದದಿಂ
ವರಲಿಂಗಪೂಜೆಯಂ ಮಾಡಿಸಿದ [3]ತ[3]ದ್ಭಕ್ತ
ನರಸಿ ಕಾಳ್ಕರುಳನಾಯಲ್ ಪೋಗುತಿರೆ ಪಿಂದೆ
ಬರುತಿರ್ಪ ತನ್ನ ಸುಕುಮಾರನಂ ದುಷ್ಟಕಾಳೋರಗಂ ಬಂದು ಪಿಡಿಯೆ ೬

ಇದು ಶಿವಾಜ್ಞೆಯೆನುತ್ತೆ ನಸುನಗುತೆ ಬಾಲಕಂ
ಪದೆದು ತ[4]ಮ್ಮಬ್ಬೆ[4]ಯಂ ಕರೆದಿತ್ತಬಾರದಿರ್
ಪುದುಗಿಕೊಂಡಿದೆ ಸರ್ಪನೆಲೆ ತಾಯೆ ಎಂದು ನುಡಿ[5]ವುತೆ ಮಡಿದ[5]ನಾಕ್ಷಣದೊಳು
ಅದನೆಯ್ದೆ ಕಂಡವನ ಮಾತೃವತಿಧೈರ್ಯದಿಂ
ಬೆದಬೆದನೆ ಬೇಯದೆ ಮನದೊಳಗೆ ಚಿಂತಿಸದೆ
ವದನಮಂ ಬಿಟ್ಟು ಪುಯ್ಯಲ್ಚದೆ ಬೆಜ್ಜರಂ [6]ಕರೆಯವೇಳ್ಕೆಂ[6]ದೆನ್ನದೆ ೭

ಉರಗನೆಲ್ಲಿಂದೆ ಬಂದೆನ್ನ ಮಗನಂ ನೋಡಿ
ಭರದಿಂದೆ ಕರ್ಚಿತೆನ್ನದೆ ಪೂರ್ವಲಿಖಿತಮಂ
ಪರಿಹರಿಪನಾವನೆನ್ನದೆ ಮುದ್ದುಮಗನಳಿದನಕಟಕಟ ಶಿವ ಎನ್ನದೆ

1 ವೊ (ಕ) 2 ಮ್ಮ (ಗ) 3 ಸ (ಕ) 4 ಮ್ಮಂಬೆ (ಕ) 5 ಯುತೆ ಮುದದಿ (ಕ)
6 ಕರವೇಳ್ಕೆಯೆಂ (ಕ)

ಪಿರಿಯಸುತನಿವನೆನೊರ್ವನೇ ಎಂದು ದುಃಖಿಸದೆ
ದುರುಳೆ ದುಷ್ಕರ್ಮಿಯಾನಿರೆ ಸುತನ ನುಂಗುವುದು
ಗರುವಿಕೆಯೆ ನಿನಗೆ ಸರ್ಪಾ ಎಂದು ಕೆನ್ನುನೋಡಲಡೆ ದೆಸೆಗೆ ಬಾಯ್ದೆರೆಯದೆ ೮

ತನಿವಣ್ಣಿರಲ್ ಮಿಡಿಯನಡಸಿ ಕೊಯ್ದ[1]ಪ ಬಿದಿಯ[1]
ಎನುತೆ ಘೋಳಿಡದೆ ಶಿವ ನಿನ್ನ ಪೆಸರಿಟ್ಟ ಫಲ
ವನುವಾದುದೆನ್ನದೇ ಪೊಗದ ಕಳೆಯುಳಿಯುದೇ ಕಳವಳಿಸಿಯೆರ್ದೆಗುಂದದೆ
ಮಿನುಪ ಭಕ್ತರ ಕರಸ್ಪರ್ಶ ಭಸ್ಮವನಿಡಲ್
ತನುಜನೀಗಳೆ ಬರ್ದುಂಕುವನೆನ್ನದೇ ಪೆತ್ತೆ
ಘನಕಾಲಹರನೆ ನಿನ್ನಯೆ ಕರುಣವಿಂತುಟೇ ಎನುತೆ ಪಂಬಲಿಸುತಿರದೆ ೯

ಎಲೆ ಶಿವನೆ ಈಯಣುಗುಗಂದನಂ ಸರ್ಪನಿಂ
ಕೊಲಿಸುವುದು ನೀತಿಯೇ ಎನುತೆ ಬೆಂಬೀಳದೇ
ಮಲಹರಾ ನಿನ್ನ ಪೂಜಿಸಿದ ಫಲವೆನಗೆ ಕಯ್ಗೊಡನೀಗ ತೋರೆಂದು
ಅಲಸಿ ಮಲಮಲನೆ ಮರುಗದೆ ಎನ್ನ ಕಂದನಂ
ನಲಿದು ನೀಂ ನೋಡೆಗಮಲ್ಲದೆ ಶಿವನೆ ಸಾವಿಂಗೆ
ಸಲೆ ತುತ್ತುಮಾಡಿ [2]ಕೋ[2]ಡುವುದು ಧರ್ಮವೆ ಎಂದು ಬಾಯ್ಬಿಟ್ಟು ಪಂಬಲಿಸದೆ ೧೦

ಅವನಿಯೊಳಗೆ[3]ಡನೆ ನೆಲಶತಲೆಗ[3]ವುದೆಂದು ಜನ
ನಿವಹಮೆಲ್ಲಂ ನುಡಿಯುತಿರ್ಕುಮೆಲೆ ಕಾಲಹರ
ತವಕದಿಂ ನಿನ್ನ ಪೂಜಿಪ ಫಲದೆ ಮೇಲಾದ ಧರ್ಮವುಂಟೇ ಧರೆಯೊಳು
ತವೆಯುದಡಿನೆನ್ನ ತನುಜನ ತಲೆಯ ಕಾಯಯ್ಯ
ಶಿವನೆಯೆನ್ನದೆ ಬಳಿಕವೆನ್ನ ಮಗನಸುವಿತ್ತೊ
ಡವ ಭರದಿನರ್ಚನೆಯ ಪರ್ವಂಗಳಂ ಮಾಳ್ಪೆನಾನೆಂದು ಪುಯ್ಯಲ್ಲದೆ ೧೧

ಹರನೆ ನಿನ್ನಯೆ ಕಂಠದೊಳ್ ವಿಷಜ್ವಾಲೆಯುಂ
ಶಿರದೊಳಗೆ ವಿಷಪೂರಮುಂ ಪ್ರಕೋಷ್ಠದೊಳೆಯ್ದೆ
ಪಿರಿಯುಗ್ರಸರ್ಪನಂ ಬಿಡದೆ ನೆಲಸಿರೆ ನಿನ್ನ ಸೇವಕಜನಾಳಿಗಳ್ಗೆ
ಗರಳದಿಂ ಮರಣಮಾಗಲ್ತಕ್ಕುದೇ ಎಂದು
ಭರದಿಂದೆ ಶೋಕಿಸುತ್ತಿರದೆ ವೀರೇಶ್ವರಾ
ಕರುಣದಿಂದೆನ್ನ ಮಗನಸುವಿತ್ತೊಡಾಂ ನಿನಗೆ ಯಾತ್ರೆಗೆಯ್ವೆಂ ಎನ್ನದೆ ೧೨

---

[1] ಪಂ ಬಿದಿ (ಕ) [2] ಕಾ (ಕ) [3] ರ ನೆರೆವಳೇ ಸಾ (ಕ)

ತನುಜನಸುವಿತ್ತೊಡಂ ಪ್ರಮಥರ್ಕಳಿರ ನಿಮಗೆ
ಮಿನುಪೆನ್ನ ಪತ್ತುಬೆರಲೊಳ್ ದೀಪವೆತ್ತುವೆಂ
ನನೆಸೆಂದು ನುಡಿಯದೇ ಷೋಡಶಶರಿರಾ ಎನ್ನ ಸುತನ ಹರಣಮನಿತ್ತೊಡೆ
ಘನಭಕ್ತಿಯಿಂ ಭುಜದ ಖಂಡಂಗಳಂ ಕುಡುವೆ
ನೆಸುತೆ ಪರಕೆಗಳನೊಡರಿಸದೆ ಸಂತೋಷದಿಂ
ಜನನಿಯುಂ ಜನಕನುಂ ನಗುತಲೀತಂ ಪ್ರಮಥಪದತಳಕೆ ಸಂದನೆಸುತೆ ೧೩

ಪತಿಸತಿಗಳಿರ್ವರುಂ ಮತ್ತೊರ್ವರಱಿಯದಂ
ತತಿವೇಗದಿಂ ಮನೆಯ ನಡುವಿರ್ದ ವೇದಿಯೊಳ್
ನುತ ಸಮಾಧಿಯ ತೆಗೆದು ಸುತನನಿಕ್ಷೇಪಿಸಿ ಸುಖಂದಳೆಯುತೆಸೆದಿರ್ದರು
ಜಿತ[1]ಕಾಲ[1] ಕದಿರರೇಮಯ್ಯನನಿತಱಿತೞೊಳೆಯ್ದೆ
ವಿತತ ಸದ್ಗುರುಸೇವೆಯೊಳಗೇಳ್ದಿನಂಬರಂ
ಸತತವೋಲಾಡಿ ಬಳಿಕಾ ಗುರುವಿನಾಜ್ಞೆಯಂ ಶಿರದೊಳಗೆ ತಾಳ್ದಿ ಮುದದಿಂ ೧೪

ತಿರಿಗಿ ಬರುತಂದಿರ್ದ. ಪೋದ ಭಕ್ತನ ಮನೆಗೆ
[2]ಹರಿಸದೊಳ್[2] ಭರದಿಂದ್[3]ವೆ[3]ಯ್ತ್ತರಲ್ ಕಂಡವರ್
ಪಿರಿದು ಸದ್ಭಕ್ತಿಯಿಂ ಪತಿಸತಿಗಳೀರ್ವರುಂ ಮುನ್ನಿನಂದದೊಳೆಱಗುತೆ
ಕರವೆ ಲಿಂಗಾರ್ಚನೋಚಿತ ವಸ್ತುನಿಕರಮಂ
ಪರುಠವಿಸಿ [4]ಕುಡೆ[4] ಲಿಂಗಪೂಜೆಯಂ ಮಾಡಿ ಬಂ
ಧುರ ಕದಿರರೇಮಯ್ಯನೊಸೆದು ಶಿವಲಿಂಗಪ್ರಸಾದಮಂ ಕೊಂಬಾಗಳು ೧೫

ನಲಿ[5]ವು ತದ್ದಂಪತಿ[5]ಗಳಾನನ[6]ಮ[6]ನೀಕ್ಷಿಸುತೆ
ಲಲಿತ ವಚನದೆ ನುಡಿದನವರ್ಗಳಂ ನಿಮ್ಮ ಸುತ
ನೊಲವಿನಿಂದೆತ್ತಲಾಡಲ್ಪೋದನಾವೆಡೆಯೊಳಿರ್ದಪಂ ಕಾಣೆವಿಲ್ಲಿ
ಲುಲಿತ ಸುಕುಮಾರನಾವಂದು ಬಂದಿರ್ದಾ
ಗಳಲರ್ವ ಸದ್ಭಕ್ತಿಯಿಂ ನಿಮಗಿಂದೆ ಮುನ್ನೆಮಗೆ
ತಲೆವಾಗುವಂ ಸೇವೆಯಂ ಮಾಳ್ಪನೆಮಗವಂ ಮನದನ್ನನಾಗಿರ್ಪನು ೧೬

ವನಿತೆ ನೀನೆಮಗೆ ಪರಿಚರ್ಯಂಗಳಂ ಮಾಡು
ವನುವಿನಿಂ ತಾನೆಮಗೆ ಸೇವೆಯಂ ಮಾಳ್ಪನಂ
ತನುನಯುಂ ನೀ[7]ನೆ[7]ಮ್ಮ ಲಿಂಗಪ್ರಸಾದಕ್ಕೆ ಕರವೊಡ್ಡಿ ಕೊಳ್ವ ಪಾಂಗಿಂ

---

[1] ಮದನ (ಗ) [2] ಹರುಷದಿಂ (ಗ) [3] ಲೆ (ಗ) [4] ತಂದೆ (ಕ) [5] ವುದಂ ದಂಪತಿ (ಕ) [7] ವೆ (ಗ)

ತನುಜನಾ ತೆಱದೆ ಕೈಯಾಂತುಕೊಳ್ವಂ ಬಳಿ
ಕ್ಕನಘಸುತನೆಮ್ಮ ಪೊರೆಯೊಳ್ ನಿನ್ನ ಕೂಡಿರ್ಪ
ನಿನಿಸಗಲನೊರ್ಮೆಯುಂ ತಂದೆತಾಯ್ಗಳನೀಗ ನೆರಮನೆಯೊಳಿರ್ದಪ್ಪನೊ ೧೭

ಎಲೆ ಯುವತಿ ಬಾಗಿಲೊಳ್ ನಿಂದು ನೀಂ ಕರೆಯಲ್ಕೆ
ನಲಿಯುತ್ತೆ ನಿನ್ನ ಮಗನೆಳ್ತಪ್ಪನೀಗಳೆನೆ
ಲಲನೆ ನುಡಿದಳ್ ಚಂಗಳವ್ವೆಯೇ ಆಂ ಸುತನ ಕರೆಯಲ್ಕೆ ಕರೆಯೆನೆಂಬ
ಲಲಿತ ನಿಂ[1]ಬವ್ವೆಯೇ[1] ಅವರಿರ್ವರಾಲಯದ
ಸಲುಗೆವಡೆದಿರ್ಪ ತೊಳ್ತಿನ ಸುತರ್ಗಾಂ ಸರಿಯೆ
ಅಲದುರ್ ಸುತನಂ ಕರೆವೊಡಾಂ ಪರಮಭಕ್ತಿಯೇ ನೀಮಿದಂ ನುಡಿವುದಲ್ತು ೧೮

ತನುಜನಂ ಕರೆಯೆ ನಾನೆಂದೊಡದು ವೈರಾಗ್ಯ
ಮೆನಿಸುವುದೊ ಕರೆಯಲದು ಸಂಸಾರದನುಬಂಧ
ವೆನಿಸುವುದೊ ಕರೆಯಲುಂ ಕರೆಯದಿರಲುಂ ಸ್ವತಂತ್ರತೆಯೆಂಬುದೆನಗೆ ನಿಸದಂ
ಇನಿಸಿಲ್ಲ ನಿಮ್ಮಡಿಗಳೇ ಬಲ್ಲಿರೆಲೆ ಗುರುವೆ
ಮಿನುಪ ಸುತನೆಯ್ತಿ ನಿಮ್ಮಯ ಪಾದದೆಡೆಯೊಳಗೆ
ನನಸು[2]ವಿ[2]ರ್ದಪನುಂ[3]ತೆ[3] ಮತ್ತಿನೊಂದೆಡೆಯೊಳಗೆ ಕರೆಯಲೇತಕಾತನಂ ೧೯

ಸತಿ ನುಡಿಯಲಿಂತೆಂದು ಕದಿರೆರೇಮಯ್ಯನು
ನ್ನುತಹರ್ಷದಿಂದೆ ತತ್ಪಿತನ ಕೈಯಿಂದಮಾ
ನುತ ಸಮಾಧಿಯನಗೆಸಿ ಶಬದ ಮೇಲಿರ್ದ ಬಿಲ್ವ ಪಲಾಶ ಭಸಿತಂಗಳಂ
ಅತಿವೇಗದಿಂ ತೊಲಗಿಸುತ್ತೆ ಪೆಣನಂ ನೋಡಿ
ಯತಿಶಯಂ ಪೆಸರ್ಗೊಂಡು ಕರೆಯಲನಿತಱೊಳೆ ತ
ತ್ಸುತನೆಯ್ದೆ ಕಣ್ದೆಱೆದು ನಿದ್ದೆತಿಳಿದೆದ್ದವನ ಭಂಗಿ[4]ಯಿಂ[4] ನೋಡಿ ಮುದದಿಂ ೨೦

ಶರಣಾರ್ಥಿ ಎನುತೆ ಗುಹೆಯಿಂದೆಳ್ದುಬರುತಿರಲ್
ಭರದಿಂದೆ ತಾಯ್ಗೆ ಮೊಲೆವಾಲ್ ತೊರೆಯೆ ತೆಗೆದಪ್ಪಿ
ಹ[5]ರಿಸ[5]ದಿಂ ಕದಿರೆರೇಮಯ್ಯನಡಿಗೆಱಗಿಸಲ್ ಕರುಣಾಕಟಾಕ್ಷದಿಂದೆ.
ನಿರುತಮೊಲ್ದೀಕ್ಷಿಸುತ್ತಾ ಬಾಲಕಂಗೆ ತ
ಮ್ಮುರುತರ ದಯಾಪ್ರಸಾದಂಗೆಯ್ದರತಿಹರ್ಷ
ಶರಧಿಯೊಳಗಾಳ್ದರಾ ಶಿಶುವ ಪಿತೃಮಾತೃಗಳ್ ಜನರಕ್ಕಜಂಬಡುತಿರೆ ೨೧

---

[1] ಚಾಗೆಯೆ (ಕಗ) [2] ಸಿ (ಕ) [3] ಟೆ (ಕ) [4] ಯಂ (ಗ) [5] ರುಷ (ಗ)

ಪಡೆದು ಶರಣರ್ ಕೀರ್ತಿಸುತ್ತಿರಲ್ಕಂದೊಸೆದು
ಕದಿರೆರೇಮಯ್ಯವೇಳ್ದಿನದಲ್ಲಿ ಸತ್ತ ಶಿಶು
ಗೊದ[1]ವಿ[1]ಸಿದನಸುವನದನೆಯ್ದೆ ಕೇಳ್ದಜೀಯೆವೀಗಳ್ ಕಂಡೆವಿಲ್ಲಿ ಪೊಸತಂ
ವಿದಿತಮಾಗೀ ಮಹಾದೇವನಡಿಗಳನೊಲ್ದು
ಮುದದಿಂದೆ ಪಂಡಿತಾರಾಧ್ಯ ಗುರುಮೂರ್ತಿ ಜಿತ
ಮದನಸದೃಶಂ ಪಡೆದುದಂ ಎಂದು ಭಕ್ತತತಿ ಮನದ[2]ಣಾಗಿ[2]ನಿಂ ಪೊಗಳ್ದುದು ೨೨

ಸದಮಲಪ್ರಚುರವಿಶ್ರುತ ಪರಮಭಕ್ತಗಣ
ಪದಸರೋರುಹಸಾಂದ್ರ ಮಕರಂದಪಾನ ಸ
ಮ್ಮುದಿತ ಚಂಚಚ್ಚಂಚರೀಕನನವರತ ಪಂಚಾಕ್ಷರೀಪ್ರಸಿತಹೃದಯಂ
ವಿದಿತ ಮಂಜುಲನೀಲಕಂಠಾಹ್ವಯಂ ಮನೋ
ಮುದದೆ ಪೇಳ್ದುರುತರಾರಾಧ್ಯಚಾರಿತ್ರದೊಳ
ಗಿದು ಕದಿರೆರೇಮಯ್ಯ ಸತ್ಕಥಾವರ್ಣನಂ ಭವಭಕ್ತಕರ್ಣಪರ್ವಂ ೨೩

---

1 ಗಿ (ಕ) 2 ಣವಿ (ಕ)

# ಹದಿಮೂರನೆಯ ಸಂಧಿ

## ಮೋಳಿನವೇಮಯ್ಯ[1]ಗಳ[1] ಕಥೆ

*ಸೂಚನೆ : ಹೀರತಾರಾಚಲತುಷಾರನಿಭ ಸಿತಕೀರ್ತಿ
ಸೂರಸಚಿವನೆ ಮೋಳಿನವೇಮಯ್ಯನೆಂಬ ಮದ
ನಾರಿಭಕ್ತನ ಕಥೆಯ ಕೇಳೆಂದು ಸೋಮೇಶನುಸುರ್ದನದನಾಲಿಸುವುದು

ಉಷ್ಣಕರ ಶಶಿಧನಂಜಯನೇತ್ರ ವಿಧಿ ಶಾರ್ಙ್ಗಿ
ಜಿಷ್ಣುಪ್ರವೇಕ ನಿರ್ಜರವಾರ ಚಾರುಕನ
ದುಷ್ಣೀಷಕೋಟಿಸಂಘಟ್ಟ ಸಂಸ್ಪೃಷ್ಟಪದ ಶಂಬರೋ[2]ದ್ಭೂತ[2]ಯುಗಳ
ಕೃಷ್ಣತನಯಾಖರ್ವಗರ್ವಪರ್ವತ ಶಂಬ
ವಿಷ್ಣುನಯನಾರ್ಚಿತಪದಾ ವಿಷಧರಾಲಂಕ
ರಿಷ್ಣು ಭಕ್ತಾಭೀಷ್ಟವರ್ಧಿಷ್ಣು ಪಾಲಿಪುದು ಲೋಕವಮಂ ನೀಲಕಂಠ ೧

ಬಳಿಕೆ ಮುನ್ನೊರ್ವನೀಶ್ವರಭಕ್ತನನುಪಮಂ
ಲಳಿತಗುಣನುನ್ನತಂ ಮೋಳಿನವೇಮಯ್ಯನೆಂ
ಬಳಘುನಾಮಂಬಡೆದು ಭೂಮಿಯೊಳ್ ವರ್ತಿಪಂ ಶಿವಭಕ್ತಗಣಮದೇಭಂ
ವಿಳಸದಣಿಮಾದ್ಯಷ್ಟಗುಣವಿಭವ ಭಾಸುರೋ
ಜ್ವಳಕೀರ್ತಿರಾಶಿ ಸದ್ಭಕ್ತಿಮಾಹಾತ್ಮ್ಯ[3]ಕಂ
ಲ[3]ಳಿತ ಕಾಂಕ್ಷೇಯ ನಿರ್ಭಿನ್ನ ರಸಸಿ[4]ದ್ಧ[4]ಸಂದೋಹಘೋಣಂ ಧೀರನು ೨

ಪಿರಿದಪಗತೋತ್ಕೃಷ್ಟ ರಸರಸಾಯನ ಭೋಗ
ವರರಾಜ್ಯವಿಭವಸೌಖ್ಯಂ ಸದ್ಗುಣಾವೃತಂ
ನಿರುಪ[5]ಮ ಸ್ವ[5]ರ್ಗಾಪವರ್ಗದೂರಂ ನಿರರ್ಗಳಭ[6]ರ್ಗ[6]ಭಕ್ತಿಕಾಂತಂ
ಪರಮ ಬಸವಾರ್ಪಿತ ಶರೀರಾರ್ಥಸಂದೋಹ
ನುರು ಜಂಗಮಾಧೀನವರ್ತನಂ ಪ್ರವಿಲಸ
ದ್ಗುರುಬಸವ ಚರಣಸರ[7]ಸಿರುಹರಂ[7] ಜಿತಹೃದಯ ವಿಮಳತರಕಾಸಾರನು ೩

---

1 ನ (ಗ) 2 ದ್ಭೂಪ (ಕ) 3 ಲ (ಗ) 4 ದ್ಧಿ (ಕ) 5 ಮಿತನಿ (ಕ) 6 ಕ್ತ (ಗ) 7 ಸೀರುಹಂ (ಗ) * (ಕ) ಪ್ರತಿಯಲ್ಲಿ ಸೂಚನೆಯ ಪದ್ಯವಿಲ್ಲ.

ಬಸವ ಚರಣಧ್ಯಾನ ಸುರಲೋಕಭೂರು[1]ಹೋ
ಲ್ಲ[1]ಸಿತ ಚಿತ್ತಾಲವಾಲಂ ವಿಧೃತಸುಪ್ರತಂ
ಬಸವಾಕ್ಷರಾನರ್ಘ್ಯಮಾಣಿಕ್ಯಭರಿತಜಿಹ್ವಾಕರಂಡಂ ಸಂತತಂ
ಬಸವಾಕ್ಷರತ್ರಯ ಪ್ರಖ್ಯಾತದಿವ್ಯನವ
ಕುಸುಮಚೇತಃಪ್ರೌಢಷಟ್ಪದಂ ಭಾವಿಸಲ್
ಬಸವಾಕ್ಷರತ್ರಯಸುಧಾಪೂರ್ಣ ಕರ್ಣಸೌವರ್ಣ ವರಕಳಸದ್ವಯಂ ೪

ಬಸವ ಸುಗುಣಸ್ತೋತ್ರಪರಿಚಿತ ವಿಚಿತ್ರತರ
ರಸಸಮುದಯಾಭಿಜ್ಞನನಿಶ ಸುಜ್ಞಾನಯುತ
ನಸಮ [2]ಬಸವಸ್ತುತಿಲತಾಬದ್ಧ ಚಿತ್ತಕಲ್ಪಕ[2]ನಭವತತ್ತ್ವವಿದನು
ಬಸವಭೃತ್ಯಂ ದಲೆನಿಸಿಂತು ರಾಜಿಸುತಿರ್ಪ
ಕುಸುಮಶರಹರಭಕ್ತ ಮೋಱನವೇಮಾರ್ಯನು
ಲ್ಲಸದೆ ಸೂರ್ಪಂಗಳಂ ತಾಂ ವಿರಚಿಸುತ್ತುನುತಿಸಂತೋಷದೆಸಕದಿಂದೆ ೫

ನಲಿದು ಕಟಕಾರರ್ಗೆ ಕೆಲರ್ಗೆ ಜೀವಿತವಿತ್ತು
ಮಲಸಹವರಿಂ ಮೊಱಗಳಂ ಭರದೆ ಮಾಡಿಸು
ತ್ತೊಲವಿನಿಂ ಶಕಟದೊಳ್ ತುಂಬಿಸಿಯುಸಂ ಗ್ರಾಮ ಪತ್ತನಂಗಳ್ಗೆ ಕಳುಪಿ
ನಿಲವಿಲ್ಲದೇ ಮಾಱಿಸುತ್ತೆ ಮತ್ತಮಱಿಂದೆ
ಮಲಹರಾಜ್ಞೆಯಿನೊದಗಿದರ್ಥದಿಂ ಜಂಗಮಾ
ವಲಿಗೆ ಸೇವೆಯನೊಱಲ್ದೆಸಗುತ್ತೆ ಶಿವಭಕ್ತಗೋಷ್ಠಿಯೊಳ್ ಸುಖವಿರ್ಪನು ೬

ಇಂತಿ[3]ರುತಿರಲ್ಕವರ ಸಚ್ಚರಿತ್ರಂ[3]ಗೇಳ್ದು
ಕಂತುಹರ ಸದ್ಭಕ್ತರೊಲ್ದು ನಾನಾದೇಶ
ದಿಂ ತವೆ ನಿರೀಕ್ಷಿಸುವ ಕಾಂಕ್ಷೆಯಿಂ ಬರುತಿರಲ್ಕ[4]ದಱೊ[4]ಳೊರ್ವಂ ಪ್ರಸಿದ್ಧಂ
ಸಂತಸದೆ ರಸಸಿದ್ಧನೆಳ್ತಂದು ನೋಡಿಯ
ತ್ಯಂತಹ[5]ರ್ಷ[5]ದೆ ಮೋಱನವೇಮಯ್ಯ ಮಾಡುತಿ
ರ್ಪಂತಕಾಂತಕಭಕ್ತಸೇವೆಯಂ ಸಾಶ್ಚರ್ಯಚಿತ್ತನಾಗುತ್ತೆ ನುಡಿದಂ ೭

ಪಿರಿದೆನ್ನೊಳಿರ್ಪ ರಸಸಿದ್ಧಿಯಿನ್ನಾವೆಡೆಗೆ
ನಿರುತಮೀ ಪರಮಪುರುಷಂಗೀವೆನೆನುತೆ ನಿ
ರ್ಭರದಿಂದೆ ಶೋ[6]ಧಿ[6]ತಂಗೆಯ್ದು ಮಿಗೆ ಜಾರಣಂಗಳನೊಡರ್ಚುತ್ತೆ ಮತ್ತಂ

---

1 ಹಂ।ಲ (ಕ) 2 ವಸವಸ್ತುನಿಲತಾಭದ್ರ ಚಿತ್ಕಲ್ಪ (ಕ) 3 ರಲ್ಕವರ ಸಚ್ಚರಿತಂಗಳಂ (ಕ) 4 ವರೊ (ಕ) 5 ರುಷ (ಗ) 6 ಭಿ (ಗ)

ಕರವೆ ತೋರ್ಪಸವನೌಷಧಂಗಳಿಂದಂ ಪುತ್ತೆ
ಸುರಸತ್ವೈಲಂಗಳಿಂ ಪಾಷಾಣಧೃತಿಗಳಿಂ
ದಿರದೆ ಮರ್ದಿಸಿ ಮೂರ್ಛಿತಂಮಾಡಿ ಬಳಿಕೆ ರಸವಂ [1]ಕೊಂಡು[1] ತದನಂತರಂ ೮

ಸಲೆ ಕಲ್ಕಮಂ ಮಾಡಿ ಬಳಿಕೆ ಪಿಂಡಂಗೆಯ್ದು
ಪಲವೌಷಧಂಗಳಿಂ ಭಾವಿಸಿ ಬಳಿಕ್ಕೆ ಸ
ಲ್ಲಲಿತೋರುವಜ್ರಮೂಷೆಯೊಳಿಟ್ಟು ಯತ್ನದಿಂ ಮಂದ[2]ನ[2]ಪ್ಪಂತೆ ಕಾಸಿ
ನಲಿದು ಪಕ್ಷಚ್ಛೇಧಕರದೌಷಧಂಗಳಿಂ
ದೊಲವಿನಿಂದಡಿಗಡಿಗೆ ಲೇಪಮನೊಡರ್ಚಿಯು
ಜ್ವಲಮಂತ್ರಮೂಲಿಕಾನೀಕಸಾರಂಗಳಿಂದಾ ಕಲ್ಕಮಂ ಪುದುಗಿಸಿ ೯

ವರಭಾಗಸಂಖ್ಯೆ[3]ಯಿಂ[3] ಮಿತ್ರಪಂಚಕಮನಣಿ
ಯರಮುದಜಕೂಳೊಡಗೂಡಿ ಕೋವೆಯೆರಡಂ [4]ಕೂಡಿ[4]
ಪಿರಿದು ರಂಧ್ರಂದೋಱದಂತೆಯ್ದೆ ಮುಚ್ಚಿ ಮಂದಂ ತೀವ್ರಮಾದಗ್ನಿ[5]ಯ[5]
ಸರಳ ಪಾಕಮನಱವುತೂದಿ ಸಲೆಸಾಂಗದಿಂ
ದಿರದೆ ಶೈತ್ಯಂಬಡೆದ ರಸಘುಟಿಕೆಗೊಲ್ದು ಭಾ
[6]ಸುರ ದೀಪ[7]ನಂ[7]ಮಾಡಿ ಯಂತ್ರಘಟದಿಂದೌಷಧಂಗಳಿಂದಂ ಬಳಿಕ್ಕಂ ೧೦

ಮಿನುಪ ಪಾಷಾಣಸತ್ವಂಗ[8]ಳಂ[8] ಹೇಮಮಂ
ಕನದಮಲ[9]ವಜ್ರ[9]ಮಂ ಕ್ರಮದಿಂದೆ ಗ್ರಾಸಮಂ
ವಿನಯದಿಂದಿತ್ತು ತೃಪ್ತಿಯ ಮಾಡಿದೀ ಘುಟಿಕೆ ಭಾವಿಸಲನರ್ಘ್ಯಮಕ್ಕುಂ
ವಿನುತಂ ಸಹಸ್ರವೇದಿನಿಯೆಂದು ಭಕ್ತಿಯಿಂ
ದನಘ ವೇಮಯ್ಯಂಗೆ ನಲಿಯು[10]ತಾ[10] ಸಿದ್ಧನತಿ
[11]ವಿನ[11]ಯದಿಂದಿತ್ತನಾ ಘುಟಿಕೆಯಂ ಮನದಂದು ಹ[12]ರಿಸ[12]ದಿಂ ಪೊಡಮಡುತ್ತೆ ೧೧

ಎಲೆ ಮೋಱನವೇಮಯ್ಯ ಘುಟಿಕೆಯಿದು ಭಾವಿಸಲ್
ಸಲೆಯಪರಿಮಿತಧನಂಗಳ ಕುಡುವುದಾವಗಂ
ನಲಿದು ಚರಲಿಂಗಾರ್ಚನೆಯ ಮಾಡಿಮೆನುತಲಾ ಸಿದ್ಧನತ್ತಲ್ ಪೋದನು
ಒಲವಿನಿಂ ರಸಸಿದ್ಧಿಯೆನಗೆ ಘುಟಿಕೆಯುಮಿಲ್ಲ
ದಲಘು ಪ್ರಯತ್ನಮಿಲ್ಲದೆ ಸಾರ್ದುದೆನ್ನ ನ್ನಿ
ರ್ಮಲಕಾಯಕದಿನದಱನನುಪಮೈಶ್ವರ್ಯಮೆನಗುಂಟೆಂದು ವೇಮಯ್ಯನು ೧೨

---

[1] ತಂದು (ಕ) [2] ಮ (ಕ) [3] ಯಂ (ಕ) [4] ಪಿಡಿದು (ಕ) [5] ಯೊಳ್ (ಕ) [6] ಸ್ವ (ಕ) [7] ಮಂ (ಗ) [8] ಳಿಂ (ಗ) [9] ಜಸ್ರ (ಕ) [10] ತಂ (ಕ) [11] ಸನ (ಗ) [12] ರುಷ (ಗ)

ಹೃದಯದೊಳ್ ತಿಳಿದು ತದ್ರಸಸಿದ್ಧನಂ ಮತ್ತೆ
ವಿದಿತರಸಘುಟಿಕೆಯಂ ಪುಲ್ಗೆ ಸಮವೆಂದು ಮುದ
ದೊದವಿನಿಂ ಭಾವಿಸುತ್ತೆಂದಿನಂದದೆ ತನ್ನ ಕಾಯಕದೊಳೆಸೆದಿರ್ದನು
ಪಡೆದು ವೇಮಯ್ಯನ ಸಮೀಪಸ್ಥನಾಗಿರ್ದ
ಮದನಹರಭಕ್ತನೊರ್ವಂ ರಸದ ವೃತ್ತಾಂತ
ಮದನೆಲ್ಲವಂ ಕೇಳ್ದು ತದ್ಘುಟಿಕೆಯಂ ಭೂಮಿಯೊಳ್ ಮುಚ್ಚಿ ಬಳಿಕೊಯ್ದನು ೧೩

ಆ ರಸದ ಸಾಮರ್ಥ್ಯ[1]ದಿಂ ಬಳಿಕ್ಕವನೆಯ್ದಿ[1]
ನಾರಿ [2]ಸುತರ್ ಮಿತ್ರ[2] ಬಂಧುಜನದೊಡಗೂಡಿ
ಚಾರುತರವೈಭವದೆ ಸುಖಮಿರ್ದನಿತ್ತಲಾ ಸಿದ್ಧನೀ ವೇಮಯ್ಯನಂ
ಆರೈದು ಬರ್ಪೆನೆನುತಂ ನೆನೆದು ಭೂಮಿಯೊಳ
ಗೋರಂತಿರಾರ್ಗಮರಿದಾದ ರಸಘುಟಿಕೆಯಂ
ಸೇರಿಸಿದೆ[3]ನದಱ[3]ನಿನ್ನೆಗಮಧಿಕ ವೈಭವದೊಳಿರ್ಪನಾಂ ನೋಳ್ಪೆನೆಂದು ೧೪

ಬಂದು ಕಂಡಂ ವೇಮನಾರ್ಯನಂ ರಸಸಿದ್ಧ
ನೆಂದಿನಂದದೆ ಜೀರ್ಣವ[4]ಸನ[4]ಮಂ ಪೊದೆದುಕೊಂ
ಡಂದಮಪ್ಪಂತೆ ಸೂರ್ಪಂಗಳಂ ರಚಿಸಿಯವನೊಲ್ದು ಮಾಱಿಸಿದ ಧನದಿಂ
ಮುಂದುಗೊಂಡೆಯ್ದೆ ಜಂಗಮಸೇವೆಯಂ ಮಾಳ್ಪ
ಚಂದವಂ ನೋಡಿ ಕಡುನೊಂದು ನುಡಿದಂ ಸಿದ್ಧ
ನೆಂದಿ[5]ನಂದದಿನಿವಂ[5] ಮೊಱಗಳಂ ಮಾಡಿ ಮಾಱಿಸಿ ಜಂಗಮಾರ್ಚನೆಯನು ೧೫

ಭರದಿಂದೆ ಮಾಡುತ್ತೆ ಮೋಱನವೇಮಯ್ಯನೆಂ
ಬುರುತರದ ನಾಮದಿಂ ಸುಖ[6]ಮಿರಿಮೆನುತ್ತೆ[6]ಮ್ಮ
ಪರಮರಸಘುಟಿಕೆಯನನರ್ಘ್ಯಮಂ ಕುಡಿಮೆಮಗೆ ನಿಮಗದೇತರ್ಕೆನಲವಂ
ಹ[7]ರಿಸ[7]ದಿಂ ವೇಮನಾರ್ಯಂ ನುಡಿದನಾ ಘುಟಿಕೆ
ಸರಳರಸಘುಟಿಕೆಯೆಂಬುದನಱಿದುದಿಲ್ಲ ಮ
ತ್ತಿರಿಸಿದುದನುಂ ಕಂಡುದಿಲ್ಲ ನೀಂ ಮಡಗಿದೆಡೆಯೊಳ್ ಪೊಳೆಯುತಿ[8]ರ್ದೊಡದನು[8] ೧೬

ವರರೌಪ್ಯಮಣಿಯೆಂದು ಕೊಂಡೊಯ್ದರೋ ಮತ್ತೆ
ತರುವಲಿಗಳಾದ ಪೆಣ್ಮಕ್ಕಳಾಡುವ ತಮ್ಮ
ಮರದ ಬೊಂಬೆಗಳ್ಗೆ ತುಡಿಸಲ್ಕೊಯ್ದರೊ ಮಿನುಪ ಕೊರಲಾರ ಕುಣಿಕೆಗೆಂದು

---

[1] ದಿನದವಂ ಬಳಿಕೆಯ್ದಿ (ಕ) [2] ಸುತೆ ಮಿತ್ರರ್ (ಕ) [3] ನರಿಯೆ (ಗ) [4] ಸ್ತ್ರ (ಕ) [5] ನಂತೆ ಪೊಲಿವಂ (ಗ) [6] ದಿಮಿರಿಮೆನುತೆ (ಕ) [7] ರುಷ (ಗ) [8] ರ್ದೊಂದನು (ಕ)

ಹರಿಸದಿಂ ಕೊಂಡೊಯ್ದರೋ ಕಸಂದೆಗೆವವರ್
ನಿರುತವುದಱಿತೂಳ್ ನೂಂಕಿದರೊ ಮೊಱಂಗೊಳವಂದ
ತರುಣಿಯರ ಪದಘಟ್ಟಣೆಯಿನೆಯ್ದೆ ರಜದೊಳಗೆ ಮಱಸಿತೋ ಆವಱಯವು ೧೭

ಸಡಗರದಿ ನೀನಾಗ ಬಯ್ತು ಘುಟಿಕೆಯ ನೋಡಿ
ದೊಡೆ ತೆಗೆವೆವಾಂ ನೋಡಿತಿಲ್ಲ ಮುನ್ನಂ ನಿನ್ನ
ಕಡುಗಿ ಯಾಚಿಸಿತಿಲ್ಲ ನೀನಿಲ್ಲಿಯೇಂಕಾರಣಂ ಬಯ್ತೆಯಾ ಘುಟಿಕೆಯಂ
ಮಿಡುಮಿಡನದೇಕೀಗ ಮಱುಗಿದಪೆ ನೀಂ ಮಡಗಿ
ದೆಡೆಯೊಳನ್ವೇಷಿಸಿ ನಿರೀಕ್ಷಿಸು ಬಳಿಕ್ಕಿಲ್ಲಿ
ಕಡುಗಲಹವೇಕೆ ನೀನಾರ ಕೈಯೊಳ್ ಕೊಟ್ಟೆ ಏಂ ಬಂದೆ ನೀನಿಲ್ಲಿಗೆ ೧೮

ವಿಸುಪ ರಸಘುಟಿಕೆ ಕೈಸಾರ್ದೊಡಮುಸಂ ನಾಡೆ
ಯೆಸೆದು ಕೋಟೀಶನಾಗಿರನೆ ಇಲ್ಲಿರ್ದವರ
ನೊಸೆದು ನೋಡೊರ್ವನುಂಟೇ ವಿಭವಮುಳ್ಳವಂ ಬಱಿದೆ ಸದ್ಭ್ರಾಂತಿಯಿಂದೆ
ಕಿಸುಗುಳತನಂ ಬೇಡ ಪೋಗೆಂದೊಡವನೆಂದ
ನಸವಸದೆ ರಸಘುಟಿಕೆಯಂ ಗ್ರಹಿಸು ನೀಂ ಮತ್ತೆ
ಮಸಕದಿಂದೊಲ್ಲದಿರ್ದೊಡಮೆನ್ನ ಘುಟಿಕೆಯಂ ಕೊಟ್ಟೊಡಾಂ ಪೋಪೆನೆನಲು ೧೯

ಪಲವಾತದೇನಿಲ್ಲಿಯೇ ಮಡಗಿದೆಂ ರಸಮ
ನೊಲವಿನಿಂ ಕುಡುವುದೆನೆ ವೇಮಯ್ಯನೊಸೆದಸುರ್ದ
ನೆಲೆ ಸಿದ್ಧ ಕೋ ನಿನ್ನ ರಸಕೆ ದಶಗುಣಮಧಿಕಮೆನುತಲಿಕದೊಳ್ ಶೋಭಿಸ
ಲಲಿತ ಸಿತಭಸಿತಮಂ ಬೆಮರ್ವನಿಗಳಿಂದೆ ನಿ
ರ್ಮಲಘುಟಿಕೆಯಂ ಮಾಡಿ ತತ್ಸಿದ್ಧನಂಗಯ್ಯೊ
ಳಲಘು ವೇಮಯ್ಯನಿರಿಸಲ್ ಕಂಡದಂ ಬೆಱಗುವಡೆದವಂ ನಿಟ್ಟಿಸಿದನು ೨೦

ಪಿರಿದದಂ ಪಚ್ಚವಣಮಂ ನೋಡಲಾ ಸಿದ್ಧ
ನರಿದೆಂಬ ತೆಱದಿನಾ ಘುಟಿಕೆಗಿದು ದಶಗುಣಂ
ಕರಮಧಿಕಮಾಗೆ ಬೆಕ್ಕಸಬಟ್ಟು ನಾಡೆ ಪರಿತುಷ್ಟನಾಗುತ್ತೆ ಮತ್ತಂ
ಹರಿಸದಿಂ ೩ತೂತಿಸುತಿರಲದಱಿಂದೆ ಮುನ್ನೆ ಭಾ
ಸುರ ವೇಮವಿಭುವಿನೌದಾರ್ಯಗುಣಮಂ ಕೇಳ್ದು
ಹರಭಕ್ತನೊರ್ವನತ್ಯಧಿಕ ಸದ್ವ್ರತಯುಕ್ತನೆಯ್ತಂದು ವಿನಯದಿಂದೆ ೨೧

---

1 ರುಷ (ಗ) 2 ಸು (ಕ)

ವರವೇಮವಿಭುವನೀಕ್ಷಿಸಿ ನುಡಿದನಣುಗಿಂದೆ
ಪರಮಪುರುಷಾ ಮೋಡಿನವೇಮಯ್ಯ ಕೇಳೆಮ್ಮ,
ಸುರುಚಿರೋನ್ನತ ಪರ್ವನಿಯಮಮಂ ಪನ್ನೆರಳ್ಕೋಟಿಚರಲಿಂಗಕೊಲ್ದು
ಉರುತರಚ್ಛತ್ರ ಧ್ವಜಂಗಳ್ ಪತಗ್ರಾಹ
ತುರಗಭೂಷಾಮತ್ರ ತಳ್ಪಖಟ್ವಂಗಳುಮಿತು
ಸರಳಘಂಟಾಧೂಪದೀಪಾದಿ ಪಾತ್ರೆಗಳ್ ಪರಮಾನ್ನಮುಖ್ಯಂಗಳಂ ೨೨

ಹ[1]ರಿಸ[1]ದಿಂದರ್ಪಿಸಿದೊಡೊಲ್ಲದಾಂ ಮನವೊಸೆದು
ಪರಮಪ್ರಸಾದಮಂ ಕೊಂಬುದಿಲ್ಲೀ ವ್ರತಮ
ನಿರದಿಕ್ಕೆನೆನ್ನಸುವನುಳಿಪೆನಲ್ಲದೊಡೆಂಬ ಜಂಗಮದ ನುಡಿಯ ಕೇಳ್ದು
ಭರದೆ ವೇಮಯ್ಯನಾ ಸಿದ್ಧಂಗೆ ತನ್ನ ಭಾ
ಸುರ ಭಾಳ ಭಸ್ಮಮಂ ಮುನ್ನೆ ಕುಡುವಾಗಿನಿತು
ಕರನಖರದಗ್ರದೊಳ್ ಪತ್ತಿರ್ದ ಭಸಿತಮಂ ಕೊಟ್ಟನಾ ಚರಲಿಂಗಕೆ ೨೩

ಅನಿತಱಿಂದೊಳಗಾಯಯ್ಯನತಿತುಷ್ಟನಾಗಿ ತೊ
ಟ್ಟನೆ ವೇಮವಿಭುವ ಪೊಗಳ್ದಂ ಭಾಪು ವೇಮಯ್ಯ
ಮನುಪ ಕಲಿಕಾಲಬಸವಾಧೀಶ ಸದ್ಭಕ್ತಕಾಮ್ಯಪ್ರದಾನಶೌಂಡ
ಎನುತೆ ನುತಿಸುತ್ತಿರ್ದು ತ[2]ನ್ನ ನಿಯಮಮಂ[2] ಮಾಡ
ಲನುವಿನಿಂದದನೆಲ್ಲಮಂ ಸಿದ್ಧನೀಕ್ಷಿಸುತೆ
ಮನದೊಳತಿವಿಸ್ಮಯಂಬಡುತೆ ಲಜ್ಜಿತನಾಗಿ [3]ಮು[3]ದವಳಿದು ಪೋದನವನು ೨೪

ಬಳಿಕೆ ಲಿಂಗಾರ್ಚನಾರತನಪ್ಪ ವೇಮಯ್ಯ
ನಳರ್ದುದಯಮುಜ್ಜನದ ವೇಳೆಯಾಗಲ್ ಪೂರ್ವ
ಲಳಿತನಿದ್ರಾರ್ಪಿತೋಚಿತ ಲಿಂಗಗರ್ಭಸಮ್ಮಿಳಿತೇಂದ್ರಿಯಾಳಿ ತಮ್ಮ
ಮುಳಿರ್ವ ವಿಷಯಂಗಳೊಳ್ ಸುಳಿಯದಿರ್ಪಂತೆ ಸಲೆ
ತೊಳಪ ಲಿಂಗಸ್ಪರ್ಶನಂಗೆಯ್ಯುತುಂ ಮಹೋ
ಜ್ವಲ ಗುರುಧ್ಯಾನೈಕಭಕ್ತಿಯಿಂ ಬಸವಚರಣಧ್ಯಾನದಿಂದೆ ಸತತಂ ೨೫

ಮಿಗೆ ನಮೋ ರುದ್ರಾಯ ಪಠಿಸದೇ ಎನುತೆ ತೊ
ಟ್ಟಿಗೆ ನಮೋ ರುದ್ರಾಯ ಮನಸದೇ ಎನುತೆ ಮ
ತ್ತಗಲಪ್ಪುಸದೆ ಎನುತೆ ಸರ್ವಂ ನಮೋ ರುದ್ರ ರುದ್ರಾಯ ಎನುತೆ ಮತ್ತಂ

---
1 ರುಷ (ಗ) 2 ನ್ನಿಯಮಮಂ (ಕ) 3 ಮಃ (ಟ)

ನೆಗಳ್ಗಂ ಶ್ರುತಿಪ್ರಯುಕ್ತಂ ಕರೋಮಿ ಎನುತ್ತೆ
ಬಗೆದಿವುಂ ಮೊದಲಾದ ವಾಕ್ಯಂಗಳಿಂದೆ ನೆ
ಟ್ಟಗೆ ಭೂಮಿವನಜಲಾದಿಗಳಲ್ಲಿ ಸಂತತಂ ಚರಿಪ ಸುಖನಿಕರಂಗಳಂ ೨೬

ಜೀವನೊರ್ವಂ ಕರ್ಮವೆರಡು ಗುಣಮುಂ ಮೂಱು
ತೀವಿದಂತಃಕರಣಮವು ನಾಲ್ಕು ಭೂತತತಿ
ಭಾವಿಸಲ್ಕೈದು ಷಡ್ವರ್ಗಮೇಳ್ ಧಾತುಗಳ್ ಮದವೆಂಟು [1]ಋ[1]ಣಮೊಂಭತು
ಈವಿಧದೆ ಪತ್ತು ಹರಣಂಗಳೀಯೆಲ್ಲಪಟಿ
ಸಾವಧಾನಕ್ರಿಯಾನೀಕಂಗಳಂ ಸತತ
ಮೋವಿ ನಿದ್ರಾಂತ[2]ರಗತಂ[2]ಗಳಂ ಚರ್ಯೆಗಳನಭವ ಶಂಕರ ಶಶಿಧರ ೨೭

ಪಿರಿದುಂ ಭವತ್ಪ್ರಸಾದಂಗಳಂ ಮಾಡಿ ಬಳಿ
ಕ್ಕಿರದೆನ್ನನುಂ ಪ್ರಸಾದಂ ದಲೆಂಬೀ ಭಾವ
ದಿರವಿನಿಂ ಭಾವಿಸೆ[3]ನುತೀ[3]ಶನಂ ಪ್ರಾರ್ಥಿಸಿ ಸುಚಿತ್ತದಿಂ ವೇಮಯ್ಯನು
ಗಿರಿಶನುಪಭೋಗಕ್ಕೆ ಮುಂದಿರ್ದ ವಸ್ತುವಂ
ನಿರುತಮುಂ ತತ್ತತ್ಸಮರ್ಪ್ಯ ದೇವಾಯ ಎಂ
ಬುರುವಾಕ್ಯಮಾನದಿಂದೀಶಂಗೆ ಸದ್ಭಕ್ತಿಯಿಂ ಸಮರ್ಪಿಸುತೆ ಬಳಿಕಂ ೨೮

ಸಲೆ ಕಥಂ ಚಿನ್ನೋಪ ಭುಂಜೀತ ಎಂಬ ಸ
ಲ್ಲಲಿತವಾಕ್ಯಪ್ರಮಾಣದೆ ಲಿಂಗಕರ್ಪಿ[4]ಸದ[4]
ಸುಲಭವಸ್ತ್ವಾನೀಕಮಂ ಬಿಟ್ಟು ತತ್ತದ್ವಿಷಯಕಾರ್ಯನಿಕರಂಗಳಂ
ನಲವಿನಿಂ ಪ್ರಾಣಲಿಂಗಾರ್ಪಿತಂಗಳ ಮಾಡ
ಲಲರುತುದ್ಯುಕ್ತನಾಗುತ್ತುಮಾ ವೇಮಯ್ಯ
ನೊಲವಿನಿಂ ಪಿಡಿವ ಮೆಟ್ಟುವ ಮುಟ್ಟುವಪನಱಿದು ಲಿಂಗಕರ್ಪಿಸಿ ಭಕ್ತಿಯಿಂ ೨೯

ತದನಂತರಂ ಬಸವ ಪದಯುಗಧ್ಯಾನಸುಧೆ
ವಿದಿತತನುವೆಂಬ ಕುಂಭಂ ತೀವಿ ಮೇಲ್ವಾಸೆ
ಮುದದಿಂದೆ ಬಸವ ಶಬ್ದಂ ಕರಂ ಪೊಱಪೊಣ್ಮೆ ಬಸವ ಬಸವಾ ಎನುತ್ತೆ
ಪದೆದು ಘೋಷಿಸಿ ನುಡಿಯುತಿರಲಾ ರಸಂಗೇಳು
ತೊದವಿದತಿಹರುಷದಿಂ ಬಸವಾಭಿಧಾನದೊಳ್
ಪುದುಗಿರ್ದ ಶಿಶುವೊರ್ವನೋ ಎನುತ್ತೆಳ್ತರಲ್ ಕಂಡವಂಗತಿಭಕ್ತಿಯಿಂ ೩೦

---

1 ಮು (ಗ) 2 ರಂಗಂ (ಕ) 3 ಮಹೇ (ಕ) 4 ಸುತೆ (ಕ)

ಇದಿರೆಳ್ದು ಸಾಷ್ಟಾಂಗದಿಂ ವಂದಸಂಗೆಯ್ದು
ಮುದದಿನಾ ಶ್ರೀವೃಷೇಂದ್ರಾವತಾರಂ ಬಂದ
ನೊದವಿದ ಶಿಲಾದಂಗೆ ಸುತನಾದ ನಂದಿಕೇಶ್ವರನೀಗಳೊಸೆದು ಬಂದಂ
ವಿದಿತಂ ದ್ವಿತೀಯಶಂಭುವೆನಿಪ್ಪ ಬಸವನೇ
ಪಡೆದುಬಂದಂ ಮಾದಿರಾಜನಾ ಮಾದಾಂಬೆ
ಯುದರದಿಂದೊಗೆದ ಬಸವಣ್ಣನೆಯ್ತಂದನೆನ್ನಯ ಸೈಪಿನೆಸಕದಿಂದೆ ೩೧

ವರಸಂಗಮೇಶನರ್ಥೋದಯದೊಳಾವಂಗೆ
ಗುರುವಾಗಿ ಮತ್ತದಾಸಂಗೆ ಸಲೆ ಭಾವಿಸಲ್
ನಿರುತದಿಂ ಪ್ರಾಣಲಿಂಗಂ ತಾನೆಯೆನಿಸಿದನುಪಮ ಬಸವನೆಳ್ತಂದಪಂ
ಸರಳ ಬಲದೇವತನಯಾಧಮಂ ಬಸವಣ್ಣ
ನಿರದೆ ಬಂದಂ ತನ್ನ ಗುರುವೆಂದು ಸಂಗಮೇ
ಶ್ವರನ ನುಡಿಸಿದ ಬಸವರಾಜನೆಯ್ತಂದನೀಗಳ್ತಿಯಿಂದೆನ್ನ ಮನೆಗೆ ೩೨

ಮಿಗೆ ಬಿಜ್ಜ[1]ಳಂ[1] ಪ್ರಾರ್ಥನಂಗೆಯ್ಯೆ ಬಂದವನ
ನೆಗಳ್ದ ಭಂಡಾರಮಂ ರಕ್ಷಿಸಿದ ಬಸವನಿದೆ
ಸೊಗಸಿಂದೆ ಬಂದನೀಗಳ್ ಮಿಂಡಜಂಗಮಂ ಬೇಡೆ ಧನನಿಕರಂಗಳಂ
ಬಗೆಯದೇನಂ ಬಿಜ್ಜಳನ ಕೋಶದಿಂದೆ ತೊ
ಟ್ಟಗೆ ವಸ್ತುವಿತ್ತ ಬಸವಂ ಬಂದನಂದು ವಧು
ಮೊಗಸಿಯುಟ್ಟಿರ್ದ ಹುಟ್ಟಿಗೆಯ ಜಂಗಮಕಿತ್ತ ಬಸವಣ್ಣನೀಗ ಬಂದಂ ೩೩

ವರಮುಗ್ಧಸಂಗಯ್ಯನಂ ಬೊಜಗನಂ ಮಾಡಿ
ದುರುಬಸವನೀಗಳಿದೆ ಬಂದನಾ ವೃಂತಾಕ
ದಿರವಳಿದು ಬಾಣಲಿಂಗಂ ಮಾಡಿದಾ ಬಸವನೆಳ್ತಂದನಳ್ತಿಯಿಂದಂ
ಚರಲಿಂಗದಸುವಿನೊಡನೆಡೆಯಾಡುತಿರ್ಪ ಸಲೆ
ಹರಣವುಳ್ಳಾ ಬಸವನೆಯ್ತಂದನಭವಂಗೆ
ಹ[2]ರಿಸ[2]ದಿಂ ಕಣ್ಣಿತ್ತ ಬಸವನೆನ್ನಯ ಸೈಪಿನಿಂ ಬಂದನೊಸೆದು ಮನೆಗೆ ೩೪

ಪೊಸಜೋಳ[3]ರಾಸಿಯಂ ಮುತ್ತುವಣಿ[3]ಮಾಡಿದಾ
ಬಸವನೆಯ್ತಂದಪಂ ಹಿರಿಯ ಭಕ್ತರ ಕರದೊ
ಳೊಸೆದು ಪಾಲಂ ಕಱೆದು ಮೆಱೆ[4]ವ ಬಸವಂ[4] ಬಂದನೆನ್ನ ಮನೆಗೀಗಳೀಗ

---

1 ಲಂ (ಗಟ) 2 ರುಷ (ಗ) 3 ದಾ ರಾಸಿಯಂ ಮುತ್ತ (ಕ) 4 ದ ಬಸವಣ್ಣ (ಗ)

ಅಸಮಪ್ರಸಾದಮನ್ಯರ್ಗೆ ಸಲ್ಲದೆನುತ್ತೆ
ಪೊಸ[1]ಬಿಸ[1]ಮನೀಂಟಿದಾ ಬಸವವಿಭು ಬಂದನಿದೆ
ಪೆಸರುಳ್ಳ ಗೋ[2]ಲ್ಲಿ[2]ತಿಯಂ ಕೊಡನ ಪಿಡಿದಾ ಬಸವನೆಯ್ದಿದಂ ಕರುಣದಿಂದೆ ೩೫

ಗುರು ಸಿದ್ಧರಾಮಯ್ಯನೊಸೆದೀಕ್ಷಿಸುತ್ತುಮಿರೆ
ಹರನುದರದೊಳಗಿರ್ದ ಬಸವೇಶ್ವರಂ ಬಂದ
ನುರುದಯಾಕೂಪಾರದೊಳಗೆನ್ನ ಮುಳುಗಿಸಲ್ ಮುಗ್ಧಬಾಲಕರೂ[3]ಪಿನಿಂ[3]
ಕರಮೆಸೆಯುತೆನ್ನ ಪುಣ್ಯೋದಯದಿನೀಗಳೀ
ವರಬಸವನೆಯ್ತಂದಪಂ ಕರುಣದಿಂದೆನುತೆ
ಹ[4]ರಿಸ[4]ದಿಂ ಕೀರ್ತಿಸುತೆ ನಮಿಸುತ್ತೆ ನೋಡುತ್ತೆ ಶಿಶುರೂಪ ಬಸವೇಶನಂ ೩೬

ಅವನಿಯೊಳಗಾಂ ಧನ್ಯನಾದೆನನುಪಮ ಪುಣ್ಯ
ನಿವಹಯುತನಾದೆನೆನ್ನಯ ಭಾಗ್ಯನಿಕರಕ್ಕೆ
ತವೆ ದೊರೆಯದಾ[5]ವನೆ[5]ನುತಾನಂದಬಾಷ್ಪಜಲಮುಣ್ಮೆ ನಯನಾಂಚಲದೊಳು
ಅವಯವದೊಳೆಯ್ದೆ ಹರ್ಷೋತ್ಕರ್ಷಮೊಗೆಯುತಿರೆ
ಸವಿನಯದೆ ಕಂಠದೊಳ್ ಗದ್ಗದಧ್ವನಿ ಮಿಸುಗೆ
ತವಕದಿಂದಾ ಬಾಲಬಸವನಾನನಮನೊಲ್ದೀಕ್ಷಿಸುವನತಿಶಯದೊಳು ೩೭

ಬಸವ ಬಸವಾ ಎಂದು ಕರೆಯಲಾ ಶಿಶು ನೋಡು
ತಸವಸದಿನೋ ಎನಲ್ ಮುಗುಳ್ನದು ವಂದಿಸುವನೆಲೆ
ಬಸವೇಶ್ವರಾ ಎಂದು ಮರಳಿ ಕರೆಯಲ್ ಬಳಿಕ್ಕೋ ಎನಲ್ಕಾ ಬಾಲಕಂ
ಮಸಕದಿಂ ಮತ್ತಮಾ ಪಸುಗೂಸಿನಡಿಗಳೊಳ
ಗೊಸೆದಡಿಗಡಿಗೆ ಪೊರಳ್ವಂ ಮತ್ತೆಮತ್ತೆ ರಾ
ಜಿಸುವುರದೊಳಗೆ ತಾಳ್ದುಕೊಳುತೆ ಪೆಗಲೊಳಗಿರಿಸಿಕೊಳುತೆ ಶಿರದೊಳ್ ತಾಂಗುತೆ ೩೮

ನಲಿಯುತಾ ಬಾಲಕನ ಪಾದಂಗಳೊಳ್ ತೊಳಪ
ವಿಲುಲಿತ ಕ್ಷುದ್ರಘಂಟಿಕೆಗಳಂ ಪಿಡಿದು ಮ
ತ್ತಲುಗಿ[6]ಸುತ್ತ[6]ವಜಿ ನುಣ್ದನಿಗೊಲ್ದು ನರ್ತಿಸುತೆ ಬಸವ ಬಸವಾ ಎನುತ್ತೆ
ಸಲೆ ತಾಳವಟ್ಟವೆಡೆವಜೀಯದುದದೆ ಪಾದ
ತಲದ ಘಂಟಾರವಕೆ ಕುಣಿದಾಡುವಂ ಮತ್ತ
ಮಲರ್ದಿವುಂ ಮೊದಲಾದ ನರ್ತನಂಗಳನಾಡುವಂ ಬಸವ ಬಸವ ಎನುತೆ ೩೯

---

[1] ವಿಷ (ಗ) [2] ಲ್ಲ (ಕ) [3] ಪದಿಂ (ಟ) [4] ರುಷ (ಗ) [5] ವುದೆ (ಕ)
[6] ಸಲ್ಕ (ಗ)

ಬಳಿಕಮಾ ಬಾಲಬಸವೇಶನಂ ತನ್ನ ಗೃಹ
ದೊಳಗೆ ಸಿಂಹಾಸನವನಿಕ್ಕಿಯದಱಗ್ರದೊಳ್
ಬಿಳಿಯ ಪಟ್ಟೆಯ ಪಚ್ಚಡಿಸಿಯಲ್ಲಿ ಕುಳ್ಳಿರಿಸಿ ತತ್ಪಾದಪಂಕಜವನು
ತೊಳೆದು ತತ್ತೀರ್ಥಮಂ ತಳೆದು ಸಂತೋಷದಿಂ
ಲಳಿತಪೂಜೆಯನೆಸಗಿ ಭಕ್ತಿಪರವಶದೊಳಗೆ
ಮುಳುಗಿ ತತ್ಕರುಣಾಮೃತಾಬ್ಧಿಯೊಳ್ ಮಗ್ನನಾಗುತ್ತೆ ಮತ್ತಂ ಮುದದೊಳು ೬೦

ತರುಣಬಸವೇಶನಂ ಭೋಜನಂಗೆಯ್ಸಿ ಸುರು
ಚಿರತತ್ಪ್ರಸಾದಮಂ ಸ್ವೀಕರಿಸಿ ತಾಂ ಮತ್ತೆ
ಸರಸತಾಂಬೂಲ ಗಂಧೋದ್ಗಮ ಸ್ರಗ್ವಿಸರ ಮುಖ್ಯವಸ್ತುಗಳನಿತ್ತು
ಹರುಷದಿಂ ಧನಧಾನ್ಯ ಪಶ್ವಾದಿಯಾದ ಬಂ
ಧುರಗೃಹಾಂತರದೊಳೆಸೆದಿರ್ಪೊಡಮೆಗಳನೆಯ್ದೆ
ಯಿರದರ್ಪಣಂಗೆಯ್ದು ಪತಿಸತಿಗಳೀರ್ವರುಂ ಪೊಡಮಟ್ಟು ನುಡಿದರೊಸೆದು ೬೧

ಎಲೆ ಬಾಲಬಸವ ಮಲ್ಲಿಂಗ ಪಾಲಿಪುದೆಮ್ಮ
ನಲಘುಕೃಪೆಯಿಂದಿಮಂ ಕೈಕೊಂಡೆನುತ್ತೆ ಪದ
ಜಲರುಹಕೆ ನಮಿಸಿತ್ತರೆಲ್ಲಮಂ ಪತಿಸತಿಗಳತ್ಯಂತಭಕ್ತಿಯಿಂದಂ
ನಲಿದದಂ ಕಂಡ ಜನರೆಯ್ದೆ ಸೋಜಿಗವಡು
ತ್ತೊಲವಿನಿಂ ಬಸವ ಪನ್ನಳಿನಂಗಳಾವಗಂ
ಲಲಿತಸುರಭೂರುಹಾರಾಮಂಗಳಕ್ಕೆ ಭಾವಿಸಿ ನೋಡೆ ನಂಬಿದವರ್ಗೆ ೬೨

ಬಸವನ ಸುಹಸ್ತಂಗಳದಿತಿನಂದನಧೇನು
ವಿಸರಂಗಳಲ್ತೆ ಸಲೆನಂಬಿದ ಜನಾವಳಿಗೆ
ಬಸವೇಶ್ವರ ಸ್ವಾಂತಮದು ನಂಬಿದರ್ಗೆ ಚಿಂತಾಮಣಿಯ ಕಣಿಯೆನಿಸುಗುಂ
ಬಸವಕಟಾಕ್ಷೇಕ್ಷಣಂ ತನ್ನ ಭಕ್ತರ್ಗೆ
ಮಿಸುಪ ರಸಕಾಸಾರಮಕ್ಕುಮಿಮಾ ಮೇಮಯ್ಯ
ನೆಸೆವ ಭಕ್ತಿಗೆ ಮೆಚ್ಚಿ ಶಿಶುವಿನೊಳ್ ತದ್ಬಸವರೂಪು ನೆಲಸಿಕಱುಗೊಂಡಿತು ೬೩

ಪಿರಿದು ಸಂಪನ್ನಿಕರಕಾಲಯಮಿದೆನಿಸಿತ್ತು
ಪರಮ ಮೇಮಯ್ಯನಾಲಯಮೆಂದು ಕೀರ್ತಿಸು
ತ್ತಿರಲನಿತಱೊಳಗಿತ್ತಲಾ ಬಾಲಕನ ಮಾತೃಪಿತೃಗಳಿದನೆಯ್ದೆ ಕೇಳ್ದು

---

1 ರುಷ (ಗ)

ಪರಿತಂದು ತದ್ಧನಮನೆಲ್ಲಮಂ ತಮ್ಮ ಮಂ
ದಿರಕೊಯ್ವುತಿರಲಱಿದು ಜಂಗಮಾವಳಿ [1]ಬಂ[1]ದು
ಶರಣಬಸವನ ವಸ್ತುವೆಮ್ಮ ಡೆಂದದನಲ್ಲಿ ಸೂಱೆಗೊಳಿಸುತ್ತುಮಿರಲು ೪೪

ಚರಲಿಂಗಮಿಂತು ದಳದುಳಮಾಡೆ ಮುನ್ನಿರ್ದ
ಸರಳ ಪೆಟ್ಟೀ ಧನಂ ಪೆರ್ಚಿ ತುಳ್ಕಾಡುತಿರೆ
ಕರಮೆ ವರ್ಧಿಸುತಿರಲ್ ಗೋಕುಲಂ ಕಣಜದೊಳಗಿರ್ದ ಧಾನ್ಯಂ ಕವೆಯದೆ
ಪಿರಿದುಮೊದಗುತ್ತಿರಲ್ ಮುಕ್ತಾಫಲಂ ವಜ್ರ
ವರಪದ್ಮರಾಗಾದಿ ರತ್ನಸಮುದಾಯಂಗ
ಳಿರದೊಯ್ವುದರ್ಕೆರಳ್ಮಡಿ ಪೆರ್ಗ್ಗಳಂ ತೋಱುತಿರೆ ಕಂಡು ಭಕ್ತವಿತತಿ ೪೫

ನಲಿದು ವೇಮಯ್ಯಂಗೆ ವಂದನಂಗೆಯ್ವುತಂ
ಭರದೆ ವೇಮಯ್ಯ ನಿನ್ನಯ ಮಹತ್ವಂ ಭುವನ
ವಲಯದೊಳ್ ಬಿಸವಂದಮಣಿಯರಂ ಬಸವೇಶನಂ ನಂಬಿದೊಡೆ ಮನದೊಳು
ಸಲೆ ನಿನ್ನವೊಲ್ ನಂಬಬೇಡವೇ ನೆನೆವೊಡಿಂ
ತಲಸದೇ ನೆನೆಯುವೇಡವೆ ಸೇವಿಪೊಡೆ ನಿನ್ನ
ವೊಲು ಸೇವಿಸಲ್‌ಬೇಡವೇ ಬಸವರಾಜನಂ ಭಕ್ತರಾದರ್ ಸಂತತಂ ೪೬

ಮಿಗೆ ನಂಬಿ ನೆನೆದು ಸೇವಿಸಿ ಬಸವನಂ ನಾಡೆ
ಪೊಗಳ್ದವರ ಕಾಣ್ಬೆವಿಂತೊಲ್ದು ಗೃಹದೊಳಗೆ ತೊ
ಟ್ಟಗೆ ತೀವಿಕೊಂಡಿರ್ದ ವಸ್ತುಚಯಮಂ ಸಮರ್ಪಿಸಿದವರನಿನ್ನೆವರೆಗಂ
ಬಗೆದೆಲ್ಲಿಯುಮಂ ಕಂಡುದಿಲ್ಲ ಮತ್ತಾ ಮನೆಯೊ
ಳಗೆ [2]ತಿಂ[2]ಬಿದುರುವಸ್ತುನಿಕರಂಗಳೆಲ್ಲಮುಂ
ತೆಗೆಯೆ ತೆಗೆಯಲ್ ತವಿಸಲಕ್ಷಯತ್ವಮನೆಯ್ದಿ[3]ದು[3]ದೆಯ್ದೆ ಕೇಳ್ದ[4]ದಿಲ್ಲ[4] ೪೭

ಬಸವವೆಸರೆಸೆದಿರ್ಪ ಶಿಶುವಿನೊಳ್ ಪ್ರತ್ಯಕ್ಷ
ಬಸವ ಸಾಮರ್ಥ್ಯಮಂ ಪಡೆದಾತ ನಿಮ್ಮತ್ತೆ
ಮಿಸುಗುವಕ್ಷೀಣ ಧನಧಾನ್ಯಾದಿ ಪದವಿಯಂ ಪಡೆದವರ ಕಂಡಱಿಯೆವು
ಬಸವಬಸವೆಂಬ ವೇಳೆಯೊಳೊರ್ವ ಬಾಲಕಂ
ನಿಸದಮೋ ಎಂದು ನುಡಿಯಲ್ ಬಳಿಕ್ಕಾ ಶಿಶುವ
ನೊಸೆದು ಸಾಕ್ಷಾದ್ಬಸವನೆಂದೆ ಭಾವಿಸಿದ ಸದ್ಭಕ್ತಿಪರರ್ಗುಂಟೆ ನೋಡೆ ೪೮

---

1 ಗೊಂ (ಕ) 2 ತುಂ (ಕ) 3 ದ (ಕ) 4 ಲ್ಲಂ (ಕ)

ನಿಗಮಾರ್ಥಪರಿಪಾಕನಿಷ್ಠಿತಶ್ಲೋಕ ನೆ
ಟ್ಟಗೆ ಪರಮವಿಶ್ವಾಸಸದ್ಭಕ್ತಿ ಸವಿಲಾಸ
ವಿಗತಕನದಘವಾರನಿರ್ಧೂತಸಂಸಾರ ವಿಜಿತಕಾಮವಿಕಾರನೆ
ಸುಗಮಪ್ರಸಾದ ಸರ್ವಾಂಗಸದ್ಗುಣತುಂಗ
ನೆಗಳ್ದ ವೇಮಯ್ಯ ನೀನೆನುತೆ ಸಂತೋಷದಿಂ
ಪೊಗಳುತಿರೆ ಬಾಲಬಸವೇಶನಂ ನುತಿಸುತ್ತೆ ವೇಮಯ್ಯನಿರ್ದನೆಸೆದು ೪೯

ಇರುತಿರಲ್ಕಿಂತು ಕೆಲದೆವಸಂಬರಂ ಮತ್ತೆ
ಗಿರಿಶಭಕ್ತಂ ನಂದಿಕೋಲ ಬಲ್ಲಯ್ಯನೆಂ
ಬುರುಗಣಾಗ್ರಣಿ ತನ್ನ ಕುವರನಂ ಮಸ್ತಕೋದಯ ಕಾಲದೊಳೆ ತುರಿತದಿಂ
ವರಲಿಂಗಸಂಸ್ಕಾರಿಯಂ ಮಾಡಿ ಬಳಿಕೆ ಭಾ
ಸುರತರಖ್ಯಾತಸದ್ಭಕ್ತಸಂತತಿಗೊಲ್ದು
ಹ°ರಿಸ°[1]ದಿಂ ಭೂತಿತಾಂಬೂಲಂಗಳಂ ಸಮರ್ಪಿಸಿ ಮನೋಮುದದೊಳೆಯ್ದೆ ೫೦

ವರವೀರ ಷೋಡಶಗಣಂಗಳಭಿಧಾನವಮಂ
ಕರೆದು ತನ್ನಯ ಸೂನುವಂ ಭಕ್ತಪುಂಗವರ
ಸರಳಹಸ್ತಸ್ಪರ್ಶಭೂತಿಯಂ ಸುತಲಲಾಟದೊಳಿಟ್ಟು ತದನಂತರಂ
ಹ°ರಿಸ°[1]ದಿಂ ದಂಪತಿಗಳಾ ವೀರಷೋಡಶನ
ನಿರದೆತ್ತಿಕೊಂಡೊಯ್ದು ಸದ್ಭಕ್ತಿಯಿಂದೆ ಭಾ
ಸುರವೇಮನಾರ್ಯೋರುಪೀಠದೊಳ್ ಸೈತಿರಿಸೆ ಬಳಿಕಮಾ ವೇಮಯ್ಯನು ೫೧

ಬಸವನಂ ನೆನೆದು ತಚ್ಛಿಶು ಭಾಳದೊಳ್ ಪರಮ
ಭಸಿತಮಂ ಲೇಪಿಸಲ್ಕಾಪೊಳ್ತು ತತ್ಸೂನು
ಮಸಕದಿಂದಂ ಕ್ಷುತಂಗೆಯ್ಯಲ್ ಶತಾಯುಷ್ಯಮಕ್ಕೆಂದು ವೇಮಯ್ಯನು
ಒಸೆದು ಪರಸಿದನೆಯ್ದೆ ಕೆಲವುಕಾಲದ ಮೇಲೆ
ನಿಸದಮಾ ಕೂಸಸುಂಗಳೆಯೆ ವಿಧಿವಶದಿಂದೆ
ಮಿಸುಪ ವೇಮಯ್ಯನಾ ವೇಳೆಯೊಳ್ ನಿರ್ವ್ಯಾಜದಿಂದಲ್ಲಿಗೆಳ್ತಂದನು ೫೨

ನಗುತುಮಾ ದಂಪತಿಗಳಿದಿರ್ವಂದು ವಂದಿಸು
ತ್ತೊಗೆದ ಹ°ರಿಸ°ದೆ ಸುತನ ಶಬಮನಾಚ್ಛಾದಿಸುತೆ
ನೆಗಳ್ದ ವೇಮಯ್ಯನಂ ತಮ್ಮಾಲಯಾಂತರಕೆ ಕರೆದೊಯ್ದು ಭಕ್ತಿಯಿಂದಂ

---
1 ರುಷ (ಗ)

ಮಿಗೆ ಉಚಿತಮಾದರ್ಚನೆಗಳನೆಸಗುತ್ತಿರಲ್
ಮಗುಳ್ದು ನಿಟ್ಟಿಸಿ ಸೀರೆ ಮುಸುಕಿರ್ದ ಬಾಲಕನ
ಸುಗುಣನಿಧಿ ವೇಮಯ್ಯನತಿವಿಸ್ಮಯಾವಿಷ್ಟಚಿತ್ತನಾಗುತ್ತೆ ನುಡಿದಂ ೫೩

ಇದು ಚಿತ್ರಮೀ ಪುತ್ರನುಸಿಕನಿರ್ದಪನೇಕೆ
ಪದೆದು ಮಿಸುಕಂ ಶರೀರಂಗಳಂ ಕೈಗಳಿಂ
ಪದನವಂ ಮುಚ್ಚಿರ್ದ ಚೇಲದ ಸೆಱಂಗನಿಳ್ಕುಳಿಗೊಳ್ಳನೇಂ ಕಾರಣಂ
ಮುದದಿನಂಗುಲಿಗಳಂ ಪೀರ್ದುಕೊಳ್ಳಂ ಕ್ಷುಧೆಯು
ಮೊದವೆ ಮಿಗೆ ರೋದನಂಗೆಯ್ಯನೀ ಬಾಲಕಂ
ಪುದಿದ ನಿದ್ರೆಯೊಳಿರ್ದಪನೊ ದೀರ್ಘನಿದ್ರೆಯೊಳ್ ಪುದುಗಿರ್ದಪನೊ ನಿಕ್ಕುವಂ ೫೪

ಎನುತೆ ಮುಸುಕಿರ್ದಂಬರವ[1]ನೀ[1]ಳ್ದು ಕೊಂಡು ಶಿಶು
ವಿನ ಮೊಗಂ ನಡೆನೋಡಿ ನಸುನಗುತ್ತೆಲೆ ಶಿವನೆ
ಮನವಂಟಿಯಾಂ ಶತಾಯುಷ್ಯಮಕ್ಕೆಂದು ನೆಱೆಪರಸಿದೆಂ ನಿನ್ನ ದೃಢದಿಂ
ನೆನೆಯದದನಗ್ನಿಲೋಚನ ಕೃಪಾಕೂಪಾರ
ಮನಸಿಜಾಂತಕ ನಿನಗಿದುಚಿತಮೇ ಈ ಬಾಲ
ಕನನೊಯ್ವುದೆಂದು ನುಡಿಯುತೆ ಬಸವನಂ ಸ್ಮರಿಸಿ ಭಸಿತವಂ ನೊಸಲೊಳಿಟ್ಟು ೫೫

ತೆಗೆದೆತ್ತಿಕೊಂಡು ಷೋಡಶನನೊಲ್ದೀಕ್ಷಿಸುತೆ
ಮಗುಳ್ದವನ ತಾಯ ಕಯ್ಯೊಳ್ ಕೊಟ್ಟು ಶಿಶುವಿಂಗೆ
ಸೊಗಸಿನಿಂದಂ ಸ್ತನಮನೂಡೆನಲ್ಕದಱಿಂದೆ ಮುನ್ನೆ ತದ್ಬಾಲಕಂಗೆ
ನೆಗಳ್ದ ಹರಣಂ ಬಂದಳುತ್ತೆ ತಾಯ್ ಮೊಲೆವಾಲ
ತೆಗೆದು ಬಾಯಾರೆಯಾರೋಗಿಸುತ್ತಿರಲದಂ
ಜಗದ ಜನರೆಲ್ಲರುಂ ಕಂಡು ಕೊಂಡಾಡಿದರ್ ಮೊಱನವೇಮಯ್ಯನವರಂ ೫೬

ಭಲರೆ ಭವದಾವ ಸಮುದಾಯ ಭಾಸುರದಾವ
ಭಲರೆ ವಿಸಮಜ್ಞನಾನೀಕ ನಾಕೋರ್ವೀಜ
ಭಲರೆ ಪಾಪೌಘಪಾರಾವಾರ ಚಾರುತರ ಬಾಡಬಾನಲ ಸದೃಶನೆ
ಭಲರೆ ಶಿವಶರಣವಾಂಛಿತಫಲಪ್ರದ ಶುಭದ
ಭಲರೆ ಭಲರೇ ನಂದಿಕೋಲ ಬಲ್ಲಯ್ಯಸುತ
ಲಲಿತ ಸತ್ಪ್ರಾಣದಾನಪ್ರವೀಣನೆ ಎಂದು ಸಂತೋಷದೆಸಕದಿಂದೆ ೫೭

---

[1] ಸೀ (ಕ)

ವರನಂದಿಕೋಲಬಲ್ಲಯ್ಯಸುತ ಷೋಡಶನ
ಹರಣಮಂ ಮೋಟನವೇಮಯ್ಯನೊಸೆದೆಂದು ಭಾ
ಸುರಭಕ್ತಿನಿಷ್ಠೆಯಿಂ ಪಡೆದನೆಂಬುದನೆಯ್ದೆ ಕೇಳ್ದ ಜೀವೆವೀಗ ನಿಸದಂ
ಗುರುಪಂಡಿತಾರಾಧ್ಯರೀ ಮಹಾದೇವ ನಿಜ
ಚರಣಂಗಳಂ ಪಡೆದುದಂ ಕಂಡೆವೆಂದು [1]ವಿಗೆ
ಹರಿಸಿ[2]ದಿಂ ನುತಿಸುತಿರ್ದರ್ ಪಂಡಿತೇಂದ್ರನಂ ಸದ್ಭಕ್ತರನವರತಮುಂ ೫೮

ಬಸವಪದ ಬಿಸದನವಮಾಕಂದರೋಲಂಬ
ಬಸವಪದಸೇವಾನುರಕ್ತ ಶೋಭನಚಿತ್ತ
ಬಸವಪದನಖರಚುಂಬಿತ ವಿಮಲಕೋಟೀರ ಬಸವಪದನವಮಯೂರ
ಬಸವಪದ ಭೃತ್ಯಗತದುರಿತ ಸೂರಾಮಾತ್ಯ
ಮಿಸುಪಿದು ಪುರಾತನಪ್ರಕರಣಮಿದಂ ಕೇಳ್ದ
ವಸುಮತೀಜನರ್ಗೆ ಬಸವೇಶನಿಷ್ಟಾರ್ಥಮಂ ಬಿಡದೆ ಕುಡುತಿರ್ಕೆ ಮುದದಿಂ ೫೯

ಸದಮಲಪ್ರಚುರವಿಶ್ರುತ ಪರಮಭಕ್ತಗಣ
ಪದಸರೋರುಹಸಾಂದ್ರ ಮಕರಂದಪಾನ ಸ
ಮ್ಮದಿತ ಚಂಚಚ್ಚಂಚರೀಕನನವರತ ಪಂಚಾಕ್ಷರೀಪ್ರಸಿತಹೃದಯಂ
ವಿದಿತ ಮಂಜುಳನೀಲಕಂಠಾಹ್ವಯಂ ಮನೋ
ಮುದದೆ ಪೇಳ್ದುರುತರಾರಾಧ್ಯಚಾರಿತ್ರದೊಳ
ಗಿದು ಮೋಟನವೇಮಯ್ಯನವರ ಸಚ್ಚಾರಿತ್ರಮತಿಪವಿತ್ರಂ ಸಂತತಂ ೬೦

ಮರುದಿನವನೇಶಯೇಕ್ಷಣ ಲೋಕನಾಥ ಮುಖ
ಪರಿವೃಢಾಹರಿಣ ಭುವನಜ ಶಂಬ ಹರಿ ಕರಟ
ಹರಿ[3]ಹಾರ[4]ನೀಹಾರ ಶುಚಿವರ್ಷ್ಮ ವಿವರಕುಲಸಾರ್ವಭೌಮಾವಾಪಕ
ಸುರಕಾಲಿಸ್ರಗ್ಧರ ಭಭೃನ್ಮಂಜು[3]ಳೋ[4]ಷ್ಣೀಷ
ಖರಕರವ್ರಾತ ಚಪಲಾವಾರ ಜಿತತೇಜ
ಸರ[3]ಲೋ[4]ದ್ಗಮಪ್ರದರಘನಕಸನ್ನಿಭ ನೀಲಕಂಠೇಶ ಕಾವುದೆಮ್ಮಂ ೬೧

---

[1] ವಿಾ। ಹರುಷ (ಗ) [2] ಹರಾ (ಗ) [3] ವೋ (ಕ) [4] ಮೋ (ಕ)

# ಮೊದಲನೆಯ ಸಂಧಿ

ಸೂಚನೆ: ಪರವಾದಿವೃಂದಧಾರಾಧರೋನ್ನತ ವಾಯು
ಗುರುಪಂಡಿತಾರಾಧ್ಯರೊಸೆದು ವಾದಕ್ಕೊಲ್ದು
ತೆರಳ್ದ ಸಂಭ್ರಮವನತಿಹರ್ಷದಿಂದಂ ಕೇಳ ಸೂರಸಚಿವಾಗ್ರೇಸರ

ಬಿಭ್ರಾಣಶೀತಭಾನೂಜ್ವಲ ಜಟಾಜೂಟ
ನಭ್ರಮಾತಂಗ ಗೋರಾಡ್ವಾರತೀ ಶಾರ
ದಾಭ್ರಾರ್ಜುನಾಬ್ಜಾ ಹಿನಾದೊಡುಪರಿವೃಢಾಸ್ರ ಸದೃಕ್ಷ ದರಹಾಸನು
ಅಭ್ರಕೇಶಂ ಶುಭ್ರಭಸಿತಗಾತ್ರಂ ಶಬರ
ವಿಭ್ರಮಾಕಾರನಸುರಾರಿಪೂಜಿತಪದನ
ದಭ್ರಕಿಲ್ಬಿಷಮೇಘಚಯಮಾರುತಂ ಪೊರೆಗೆ ಲೋಕಮಂ ನೀಲಕಂ[1]ಠಂ[1] ೧

ಬಸವ ಗುರುಲಿಂಗ ಸಮುದಂಚಿತದಯಾಪಾಂಗ
ವಿಸರ ನಿರ್ಮಲಸಲಿಲವಾಹ ಪ್ರಲಗ್ನ ಸುವಿ
ಲಸಿತಚಿತ್ತಾ ಸೂರಸಚಿವೇಂದ್ರಪಂಡಿತೇಶ್ವರನಿಂತು ಸಂತೋಷದಿಂ
ಎಸೆವುತಿರೆ ಸ[2]ನದವ್ರೋ[2]ಲಾಖ್ಯಪುರದೊಳಗೊಲ್ದು
ಮಿಸುಪ ದಂಡಿತವಾದಿವೃಂದನೆಂಬೀ ಯಶಂ
ಮಸಕದಿಂ ಲೋಕಂಗಳೊಳ್ ಪಸರಿಸುತ್ತಿರಲ್ ಸುಖಮಿರ್ದನನವರತಮುಂ ೨

ಇರುತಿರಲ್ಕಾ ಪಂಡಿತೇಶ್ವರನ ಶೀಲಮಂ
ಪರಮಪಾಂಡಿತ್ಯಮಂ ಸರ್ವಜ್ಞತೆಯನಭವ
ಚರಣಸದ್ಭಕ್ತಿಯಂ ಸರಸವಾಕ್ಪ್ರೌಢಿಯಂ ಪುಣ್ಯಲಕ್ಷಣನಿಕರಮಂ
ವರಭಾವಶುದ್ಧಿಯಂ ಪ್ರಭುಶಕ್ತಿಯಂ ಚಾರು
ತರಬುದ್ಧಿಯಂ ವಚಸ್ಸಿದ್ಧಿಯಂ ಶೀಲಂಗ
ಳುರುಸಂಪದವನುನಿರೀಕ್ಷಿಸಿಯಸಹ್ಯತ್ವದಿಂ ಮನದೊಳಗೆ ಮಿಗೆಬೇಯುತೆ ೩

---

1 ಠ (ಗ) 2 ದನ (ಕ)

ಸರಳತರ ವೆಲ್ನಾಡಜೋಳಭೂವರನ ಗುರು
ದುರಿತಸಂಯುಕ್ತಬೌದ್ಧಂ ಕುಟಿಲಸುನ್ನತಂ
ಪಿರಿದಸದ್ವಾದಕುಶಲಂ ಧರ್ಮಮಾರ್ಗೇತರಂ ನಿಕೃಷ್ಟಂ ದುಷ್ಟನು
ಉರುತರಶ್ರುತಿವಿ[1]ರು[1]ದ್ಧಂ ದುರಾಚಾರರತ
ನಿರದೆ ತಚ್ಛಿಷ್ಯನಂ ವೆಲ್ನಾಡಜೋಳನಂ
ಬರಿಸಿ ನುಡಿದಂ ಲೋಕಪತಿ ಲೋಕಪಾಲಕಂ ನೀನೊರ್ವನೇ ಸಂತತಂ ೪

ಜನರೆಯ್ದೆ ನಿನ್ನಾಜ್ಞೆಯೊಳಗೆ ವರ್ತಿಪುದಱಿಂ
ಜನಪತಿಯೆ ನಿನಗೆ ಗುರುವಾದಪಂ ಲೋಕಕ್ಕೆ
ಮಿನುಪ ಗುರುವಾಗವೇಳ್ಕುಂ ಐಱಿಯ ಗುರುಗಳೆಂಬರ್ ಗುರುಗಳೇ ಲೋಕಕೆ
ಎನಸುಂ ಜಗದ್ಗುರುತ್ವಂ ಪಂಡಿತತ್ವಮುಂ
ನೆನಸಾಗಿಯೆತ್ತಣಿಂ ಬಂದಿತ್ತು ಮತ್ತಿನರ್ಗೆ
ಕನದಮಲ ಬುದ್ಧದರ್ಶನ ಪಟ್ಟಬದ್ಧನೇ ಲೋಕಕ್ಕೆ ಗುರುವೆನಿಸುವಂ ೫

ಮಿಗೆ ಬುದ್ಧನೇ ಜಗತ್ಪ್ರಭು ಬೌದ್ಧಮತವೆ ತೊ
ಟ್ಟಗೆ ಮೋಕ್ಷಸಾಧನಂ ಪಿರಿದುಂ ವಿಚಾರಿಸಲ್
ಜಗದೊಳಾರಾಧ್ಯತ್ವಮುಂ ಪಂಡಿತತ್ವಮುಂ ಎನಗೆ ಯೋಗ್ಯಂ ಮತ್ತಿನ
ನೆಗಳ್ದ ವೈದಿಕಮಾರ್ಗಬದ್ಧರ್ಗೆ ರುದ್ರನೀ
ಜಗಕೊಡೆಯನೆಂಬವರ್ಗೆ ಶೈವಮಾರ್ಗದೆ ಮುಕ್ತಿ
ಯೊಗೆಗುವೆಂಬವರ್ಗೆ ಜಗದಾರಾಧ್ಯತೆಯುಮುಂಟೆ ಪಂಡಿತತ್ವಂ ಸಲ್ವುದೆ ೬

ಸಲೆ ಶೈವದ[2]ರ್ಶ[2]ನಂ ಮೋಕ್ಷಮಾರ್ಗಮುಮೆಂಬ
ಲಲಿತರುದ್ರಂ ಜಗತ್ಪತಿಯುಮೆಂಬವರ್ಗೆಯುಂ
ಲುಲಿತಬುದ್ಧಂ ಜಗತ್ಪ್ರಭು ಬೌದ್ಧಮತವೆ ಮೋಕ್ಷಪ್ರದಂ ಎಂಬೆಮಗೆಯುಂ
ನಲಿದು ವಾದಮನಿಕ್ಕಿನೋಡು ನಿನ್ನಯ ಗುರುವಿ
ನಲರ್ದ ಮಹಿಮೆಯನೆಂದು ವೆಲ್ನಾಡಜೋಳನೊಡ
ನೊಲವಿನಿಂದವನ ಗುರು ಬೌದ್ಧನತಿಗರ್ವದಿಂ ನುಡಿದು ಮತ್ತಿಂತೆಂದನು ೭

ಪಿರಿದುಮಾ ಶೈವರಾರಾಧಿಸುವ ದೈವಮಂ
ನಿರು[3]ತ[3]ಮಲ್ಲೆನಿಸುವೆಂ ತತ್ಪಂಡಿತನನೆಯ್ದೆ
ಭರದಿಂದೆ ವಾದದೊಳ್ ಸೋಲಿಸುವೆನೆನಗಮ ಗಣ್ಯನೇ [4]ಎನ್ನಿ[4]ದಿರೊಳು

---

[1] ಶು (ಕ) [2] ರುಶ (ಕ) [3] ಮಿ (ಗ) [4] ಯೆಂಬನಿ (ಕ)

ಪರನೊರ್ವನುಂತೆ ಪಂಡಿತನೆನಿಸಿಕೊಂಬನಂ
ಧರಣಿಯೊಳಗುಂಟೆ ತತ್ಪಂಡಿತನ ರಯದಿಂದೆ
ಕರೆಯಿಸು ಬಳಿಕ್ಕೆ ಸಾಮಾಜಿಕರನಾಸ್ಥಾನಯೋಗ್ಯರಂ ಸ[1]ನ್ಮು[1]ದಡೊಳು ೮

ಮಿಸುಪೆಮ್ಮ ಸಮಯಸ್ಥರಂ ಸುಧೀಯುಕ್ತರಂ
ಪೆಸರುಳ್ಳ ಬೌದ್ಧವಾದಿಗಳನುರುತರ ವೇದ
ವಿಸರರಹಿತರನತಿಸುಜನದೂಷಿತರನೊಪ್ಪುವಾ ಜೈನವಾದಿಗಳನು
ಎಸೆವನಂ ನೀತಿವರ್ಜಿತರನದ್ವೈತಿಗಳ
ನಸವಸಂ ಸ್ವರ್ಗನರಕಾದಿಯಿಲ್ಲೆಂದು ವಾ
ದಿಸುವ ಚಾರ್ವಾಕರಂ ನಿಜಪರಬ್ರಹ್ಮ ದೂರಬ್ರಹ್ಮವಾದಿಗಳನು ೯

ವರವಿಬುಧವಿಮುಖರಂ ವಿದ್ವಿಷ್ಟಮತಿಗಳಂ
ದುರುಳರೆನಿಸುವ ವೇದವಾದಿಗಳ ದುರ್ಮಾರ್ಗ
ನಿರತಾಂತರಾಳಿಕರ ಪರಮಾತ್ಮದೂರರನನೇಕಾತ್ಮವಾದಿಗಳನು
ಪಿರಿದು ವಿಭ್ರಾಂ[2]ತ[2]ಚಿತ್ತರ್ ಪಾಂಚರಾತ್ರರು
ಕರಮೆ ದೈನ್ಯಸ್ವಭಾವರ್ ಮಾನ್ಯತತಿಗಿತರ
ರುರುಜಘನ್ಯಚರಿತ್ರ ಶೂನ್ಯವಾದಿಗಳನತಿವೇಗದಿಂ ಕರೆಯಿಸೊಸೆದು ೧೦

ಮಿಗೆ ಅಲ್ಪಮತಿಗಳನನಲ್ಪಜಲ್ಪಕರನಂ
ತಗಲದೆ ವಿಕಲ್ಪತತ್ತ್ವಜ್ಞರಂ ಕಾಲವಾ
ದಿಗಳನತಿನಿರ್ದೈವರಂ ಧರ್ಮವಿಕಲರಂ ಕರ್ಮವಾದಿಗಳ ತತಿಯಂ
ನೆಗಳ್ದ ವಿಕೃತೈಕವೇಷರನಮಲ ಸುಕೃತಸರ
ಣಿಗಳನುಲಂಘಿಸಿದಾಂಟೆ ವರ್ತಿಸುವರಂ ಪ್ರಕೃತಿವಾ
ದಿಗಳ ಸಲೆ ಪ್ರಚ್ಛನ್ನಬೌದ್ಧರಾಗಿರ್ಪ ಮಾಯಾವಾದತತ್ಪರರನು ೧೧

ಮಿಸುಪ ಶಬ್ದಬ್ರಹ್ಮವೆಂದುಸುರುತಿರ್ಪ ಸೊಂ
ಪೆಸೆವ ಶಬ್ದಬ್ರಹ್ಮವಾದಿಗಳನಣಿಯರಂ
ಮಸಕದಿಂ ಹೇತುದೃಷ್ಟಾಂತರಹಿತಾಧ್ಯಾತ್ಮವಾದಿಗಳ ಸಂತತಿಯನು
ಎಸೆವ ಕಾರ್ಯತ್ರಯಂಗಳ ಭೇದವಱಿಯದೇ
ನಿಸದವುಸುರ್ವಾ ತ್ರಿಪುರುಷೈಕವಾದಿಗಳನಂ
ತೊಸೆದಸನ್ಮತಸಮಯದವರನಾ ಭ್ರಾಂತದ್ವಿಪುರುಷೈಕವಾದಿಗಳನು ೧೨

---

1 ಮ್ಮು (ಕ) 2 ತಿ (ಕ)

ಧರಣಿಮೊದಲಾದಷ್ಟಮೂರ್ತಿಗಳ್ ಭಾವಿಸಲ್
ನಿರು[1]ತದಿನನಾದಿಕರ್ತೃಗಳಕ್ಕುಮೆಂದು ಭಾ
ಸುರಮುಸುರ್ವ ಕಸದಷ್ಟಮೂರ್ತಿವಾದಿಗಳ ವೇದಭ್ರಮಿತಯಂತ್ರವಿದ್ಯಾ
ಸರಳವಾದಿಗಳನಾ ಸ್ಮಾರ್ತರಂ ಯೋಗಿಗಳ
ನುರುಮಂತ್ರವಾದಸಿದ್ಧರ್ಕಳಂ ನಿರುಪಮಿತ
ಪರಮಷಟ್ತರ್ಕಶಾಸ್ತ್ರಪ್ರಮಾಣಜ್ಞರಂ ಧರ್ಮಶಾಸ್ತ್ರಜ್ಞರ್ಕಳಂ ೧೩

ಮಿಗೆ ಪುರಾಣಾಗಮಾಖಿಲತತ್ತ್ವದರ್ಥಮಂ
ಬಗೆಗೊಳ್ಳದವಿನೀತ ಸಕಲತಾರ್ಕಿಕರನಾ
ವಗನೆಸೆವ ಕೌಟಲ್ಯಶಾಸ್ತ್ರಪ್ರಬುದ್ಧರಂ ನಕ್ಷತ್ರಪಾಠಕರನು
ನೆಗಳ್ದ ಪರಿಹಾಸಕರನಾ ಪಾಠಕರನೆಸೆವ
ಸುಗುಡಕಬ್ಬಿಗಳನುನ್ನತ ಕಳಾಭಿಜ್ಞರಂ
ಸೊಗಸಿನಿಂ ಕರೆಯಿಸಿೀಗಳ್ ನಿನ್ನ ಸಭೆಗೆ ಮತ್ತುಳಿದ ಪುರಜನಮೆಲ್ಲರಂ ೧೪

ಬರಿಸು ನೃಪಸಭೆಗೆ ಬಾರದೆ ಮಟ್ಟಮಿರ್ದವಂ
ನರಪನಾಜ್ಞೆಗೆ ತಪ್ಪಿದವನೆಂದು ಪುರದೊಳಗೆ
ಭರದೆ ಸಾಱಿಸೆನಲ್ಕೆ ಗುರುವಿನನುಮತದೊಳಾ ನೃಪತಿ ಸಾಱಿಸಲಾಕ್ಷಣಂ
ವರಮಂತ್ರಿ ಸಾಮಂತ ದಂಡನಾಥಾದಿಗಳ್
ಕರಮೆಸೆವ ರಾಯಕುವರರ್ ಧನಾಧ್ಯಕ್ಷರುರು
ತರ ಗಜಾರೋಹಕರ್ ಘೋಳಾಯ್ಲರರಸಾಳ್ಗಳೆಸೆವ ವಾರಾಂಗನೆಯರು ೧೫

ಮಿಗೆ ಕುಂಚವಡಿಗರುಂ ಪುಲ್ಲನಡಿಗರುಮೆಯ್ದಿ
ಸೊಗಯಿಸುವ ಡವಕೆಯಡಪಂಗಳಂ ಪಿಡಿವವರ್
ಬಗೆಯೆ ಕೌಳುಡೆಯ ಪಿಡಿವವರಾದಿಯಾದರೆಲ್ಲರ್ ಬಂದು ತನ್ನೃಪನನು
ಬಗೆದು ಸೇವಿಸುತಿರಲ್ ನೃಪತಿಯುಂ ಬೌದ್ಧನುಂ
ಸುಗುಡತನದಿಂ ಬ್ರಹ್ಮರಾಜಸಭೆಗಳ ನಡುವೆ
ನೆಗಳ್ದೆಸೆಯುತಿರ್ದು ವಾದಕ್ಕೆಂದು ಪಂಡಿತಾರಾಧ್ಯರಂ ಕರೆದಟ್ಟಲು ೧೬

ಬಂದವನ ನುಡಿಗೇಳಿ ಪಂಡಿತಾರಾಧ್ಯವಿಭು
ಚಂದದಿಂದದನಱಿದು ತಮ್ಮೊಳಿಂತೆಂದರಾ
ನಂದದಿಂದಂ ವಾದಕೆಂದು ಕಾಳಿಗಕೆಂದು ಕರೆದಟ್ಟಲಾವನೊರ್ವಂ

---

[1] ರ (ಗ) [2] ವು (ಗ)

ಮುಂದುವರಿದಲ್ಲಿಗೆಯ್ದುವುದುಚಿತಮಾವಗಂ
ಸಂದ ಯತಿಗಂ ನೃಪತಿಗಂ ಎಂದು ನಿಶ್ಚೈಸಿ
ಮಂದಹಾಸಂ ಮೊಗದೊಳೊಗೆಯುತಿರೆ ಲಿಂಗಾರ್ಚನಂಗೆಯ್ದು ತದನಂತರಂ ೧೭

ವಿದಿತ ಸತ್ಪ್ರಮಥರಂ ಮನದೊಳಗೆ ಜಾನಿಸುತೆ
ಮದನಾರಿಗಣವರರ ಪರಕೆ[1]ಯಂ[1] ಕೈಕೊಳುತೆ
ಪಡೆದವರ್ಗಭಿಮತಾರ್ಥಂಗಳಂ ಕುಡುತೆ ಸದ್ಭಕ್ತಿಯಿಂ ವಂದಿಸುತ್ತೆ
ಅದಿರದಾ ನೃಪನ ಪರಿಷನ್ನಿಕೇತನಮನತಿ
ಮುದದಿನೆಯ್ದಲ್ಕಜ್ಜುಗಂಗೆಯ್ವ ವೇಳೆಯೊಳ್
ಮುದದೆ [2]ದೋನಮ[2]ರಾಜ ಮುಖ್ಯಶಿಷ್ಯರ್ ಪಂಡಿತೇಶಂಗೆ ಭಕ್ತಿಯಿಂದೆ ೧೮

ಪೊಡಮಟ್ಟು ನುಡಿದರೆಲೆ ಬಸವ ಕರುಣಾಪಾತ್ರ
ತೊಡರ್ವ ಪರಸಮಯಬಂಧುರವಾದಿಕುಲಚೈತ್ರ
ಮೃಡದರ್ಶನಾಚಾರ್ಯಸದೃಶ ವಿರಹಿತಶೌರ್ಯ ಸತ್ಪುಣ್ಯಜನವರೇಣ್ಯ
ಕಡುಮೇಲಶಿವ ದುರ್ಮತಾಭೇದ್ಯ ಜಗದಾರಾಧ್ಯ
ಸಡಗರಿಪ ನಿಜಸಮಯವಿಸ್ತಾರ ಸುವಿಚಾರ
ನಿಡಿದೆಸೆವ ಪಂಚಾಕ್ಷರೀಮಂತ್ರಸಿದ್ಧ ಪರಮೇಶ ಸದ್ಭಕ್ತಿಸಿದ್ಧ ೧೯

ಚಿರದಯಾರಸಕುಲ್ಯ ಭೂತೇಶ ಗಣಲೌಲ್ಯ
ಚರಲಿಂಗ ಪರತಂತ್ರಗತದುಷ್ಟಯಂತ್ರ ಬಂ
ಧುರ ಮಹಿಷ್ಠಾನುಭಾವಾ ಲಸದ್ವಿಹಿತೋರುಶುದ್ಧಶೈವಾಘದೂರ
ಪರಮುಚಿದಕೂಪಾರ ಸದ್ಭಕ್ತಸಾನ್ನಿಧ್ಯ
ವರಪಂಡಿತಾರಾಧ್ಯ ನಿನ್ನ ಪೆಸರಂ ಕೇ[3]ಳ್ದ
ಪರ[3]ದುಷ್ಟಸಮಯಿಗಳ್ ನಷ್ಟವಾಗರೆ ಲೋಕವಿಸರದೊಳ್ ಪರಿಭಾವಿಸೆ ೨೦

ಪ್ರಮಥಾತ್ಮ ನಿನ್ನ ಮಾಹಾತ್ಮ್ಯಮಂ ಕೇಳ್ದನ್ಯ
ಸಮಯಸ್ಥರೆಲ್ಲರಪದಸ್ಥರಾಗರೆ ನಿನ್ನ
ಸಮುದಂಚಿತಾಮಲೋನ್ನತಮಹಿಮೆಯದು ಬೌದ್ಧಘೋಣಾಗ್ರಶಸ್ತ್ರಮಲ್ತೆ
ಅಮಮಾರ್ಹತರ ಬೆನ್ನ ಬಡಿವ ದಂಡಮದಲ್ತೆ
ಕುಮತಲೋಕಾಯತರ ನಾಲಗೆಯ ಥಟ್ಟುಗಿವ
ವಿಮಲಕಂಟಕಮಲ್ತೆ ಕರ್ಮವಾದಿಗಳ ಗಳಮಂ ಬಿಗಿವ ಪಾಶಮಲ್ತೆ ೨೧

---

1 ಗಳ (ಕ) 2 ದೋಮನ (ಕ) ದಾನಮ (ಗ) 3 ಳಿ।ದುರು (ಗ)

ಉರುತರಾಭೇದವಾದಿಗಳ ಗಂಟಲ ಗಾಣ
ಮುರರೆ ಏಕಾತ್ಮವಾದಿಗಳ ಹೃಚ್ಛಲ್ಯಮುಂ
ತಿರದೆ ಸನ್ಯಾಸಿಗಳ ಶೂನ್ಯವಾದಿಗಳ ಕಂಧರಬಂಧದು[1]ಷ್ಪೋರಗಂ[1]
ಭರದೆ ನಿನ್ನಯ ಮಹಿಮೆಯೆಂತಪ್ಪುದೆಂದೊಡಿ
ನ್ನುರುಗರ್ವದಿಂ ನಿನ್ನೊಳಿದಿರಾಂಪ ತಾರ್ಕಿಕಂ
ಪಿರಿದು ವೈಖರ್ಯಮುಳ್ಳವನಾದೊಡಂ ಪರಾಜಿತ[2]ನಪ್ಪುದೇಂ ಸೋಜಿಗಂ ೨೨

ಇವನ ಬೌದ್ಧನ ಮೀಮಾಂಸ ಸಿ[3]ದ್ವಾದಿ[3]ಮಂ ಪಲಂ
ತವಕದಿಂ ನಿರ್ಧೂಮಧಾಮಂಗೆಯಲ್ಕಾವೆ
ತವೆಸಮರ್ಥರ್ ನೀಂ ಬರಲ್ ಕಾರ್ಯಮಣಮಿಲ್ಲ ನಿಮ್ಮ ಪಾದದ ಬಲ್ಮೆಯಿಂ
ಸವಿನಯದೆ ನಾವೆಲ್ಲರೆಯ್ದಿ ವಾದಂಗೆಲ್ದು
ಭುವನದೊಳ್ ನಿಮ್ಮ [4]ಕೀ[4]ರ್ತಿಯನುಂಟುಮಾಳ್ಪೆವೆನು
ತವನತರುಮಾದ ತಚ್ಛಿಷ್ಯರಂ ನೋಡಿ ನುಡಿದಂ ಪಂಡಿತೇಶನೊಸೆದು ೨೩

ಮಿಸುಪ ವಾದಕ್ಕೆಮ್ಮನುದ್ದೇಶಿಸಿಯೆ ಕರೆಯು
ಲೊಸೆದು ನಿಮ್ಮಂ ಕಳುಪುವುದು ಕಾರ್ಯಮಲ್ತೆನು
ತ್ತಸನಸದೆ ಮಲ್ಲಿಕಾರ್ಜುನಪಂಡಿತಾರಾಧ್ಯರೆಳ್ತರುತ್ತಿರಲಿದಿರೊಳು
ಒಸೆದು ದಕ್ಷಾಧ್ವರ ವ್ಯಾಸಾಷ್ಟಕಂಗಳಂ
ಮುಸುಕದೆ ಗಣಾಡಂಬರಂಗಳಂ ನಾಡೆ ಪಠಿ
ಯಿಸುತೆ ಶಾರಭಮನೋದುತ್ತೆ ವಂದಿಗಳೊಲ್ದು ಕೈವಾರಿಸುತ್ತೆ ಬರಲು ೨೪

ಉರುತರ ಶ್ರೀರುದ್ರಮಹಿಮೆಯಂ ಶತಕಮುಂ
ಸರಳತರ ಪಂಚಗದ್ಯಂಗಳಂ ಸಂತತಂ
ಹ[5]ರಿಸ[5]ದಿಂ ಶಿವತತ್ತ್ವಸಾರಾದಿಯಾದ ಪದ್ಯಂಗಳಂ ಕವಿಗಳೆಯ್ದೆ
ನಿರುತಮಿರ್ಕೆಲದೊಳೋದುತ್ತೆಬರೆ ಎಡೆವಿಡದೆ
ಭರದೆ ಸಂಸಾರಮಾಯಾಸ್ತವನ ಪದತತಿಯು
ನಿರದೆ ನೀರಾಜನಪದಂಗಳಂ ದುಮ್ಮಿಯ ಪದಂಗಳಂ ಪಾಡುತೊಸೆದು ೨೫

ಹಿಂಗದಾನಂದಮಪದಂಗಳಂ ಶಂಕರಪ
ದಂಗಳಂ ಪರ್ವತಪದಂಗಳಂ ಗೊಬ್ಬಿಯ ಪ
ದಂಗಳಂ ಗಣವರ್ಣನೆಯ ಪದಂಗಳನರ್ಣವದ ರವದವೊಲ್ ಪಾಡುತೆ

---
[1] ಷ್ಪರೋಗಂ (ಗ) [2] ಮ (ಗ) [3] ದ್ವಾವ (ಕ) [4] ಮೂ (ಕ) [5] ರುಷ (ಗ)

ತುಂಗಹರ್ಷಂಬಡೆದು ಸದ್ಭಕ್ತಸಂಕುಲಂ
ಮುಂಗಡೆಯೊಳಿಯ್ದಿ ಬರೆ ಋಗ್ವೇದರುದ್ರಸೂ
ಕ್ತಂಗಳಂ ಪವಮಾನಮುಖ್ಯಂಗಳಂ ನಾಡೆ ಪಠಿಸುತ್ತೆ ಸಂತೋಷದಿಂ ೨೭

ನಿರುತಂ ಯಜುರ್ವೇದ ನಮಕಚಮಕಂಗಳಂ
ಪಿರಿಯ ಪಂಚಬ್ರಹ್ಮಸನ್ಮುಕ್ತೋಕ್ತಿಗಳನಂ
ತುರುಸಾಮವೇದಾನ್ವಿತಂಗಳಂ ರುದ್ರಪ್ರಶಂಸೆಗಳನೊಳ್ನುಡಿಗಳಂ
ಭರದಿಂದಥರ್ವಣಶಿರಶ್ಶಿಖೆಗಳಾದ ಭಾ
ಸುರ ರುದ್ರಸೂಕ್ತಪ್ರತಾನಂಗಳಂ ಮತ್ತೆ
ಹ[1]ರಿಸ[1]ದಿನಘೋರಾದಿ ದಿವ್ಯಮಂತ್ರಂಗಳಂ ಪಾರ್ಶ್ವದೊಳ್ ಪಠಿಯಿಸುತ್ತೆ ೨೮

ಪಿರಿದನಂತಾವ್ಸೆ ಎನುತ್ತೆ ವೇದಾ ಎನುತೆ
ಹ[1]ರಿಸ[1]ದಿಂ ನುಡಿದಾಗಮಪ್ರಮಾಣದೆ ಬಳಿ
ಕ್ಕುರುತರಶ್ಯಾಮಮಾಧ್ಯಂದಿನಂಗಳನಂತೆ ಚರ್ಚಕಶ್ರವಣಂಗಳಂ
ಪರಮ [2]ವಾ[2]ರ್ತಾಂತವೇಯಂಗಳಂ ರಮಣೀಯ
[3]ತರ ಶೌ[3]ನಕೀದಂಡಿದುಂದುಭಿಗಳಂ ಮತ್ತೆ
ನಿರುಪಮ ಶ್ಯಾಮಾಯಣೀಯ [4]ಮಾಂ[4]ಡೂಕ ವೈಧೇಯ ಕಠಶಾಖೆಗಳನು ೨೯

ಮಿಗುವ ಮೈತ್ರಾಯಣೀಯಂಗಳಂ ದೇವದ
ರ್ಶಿಗಳ ಶಾಖಾಯಣೀಯಂಗಳಂ ಮತ್ತೆ ಸೊಂ
ಪೊಗೆವ ನಾರಾಯಣೀಯಂಗಳಂ ಶೌಕ್ತೇಯ ಕಾಪಾಲ ಶಾಖೆಗಳನು
ಸುಗುಡ ಸಾಂಖ್ಯಾಯನೀಯಂಗಳಂ ಗಾಲವಾ
ದಿಗಳನುಱುವೆಱುವ ಚರಣವ್ಯೂಹದಲ್ಲಿಯಿಂ
[5]ಪೊ[5]ಗೆವ ಶಾಖೆಗಳ ಭೇದಂಗಳಂ ಕೀರ್ತಿಸುತ್ತವಱುಳು[6]ದ್ದಿಷ್ಟ[6]ಮಾದ ೩೦

ಪರಮಕೈವಲ್ಯ ಕೈನೇಷಂಗಳೊಳ್ ಮತ್ತೆ
ಸರಳಜಾಬಾಲ ಕಾಲಾಗ್ನಿ ರುದ್ರಬ್ರಹ್ಮ
ವರಗರ್ಭಹಂಸ ಬೃಹದಾರಣ್ಯಕಾದ್ಯುಪನಿಷತ್ತುಗಳೊಳಿಯ್ದೆ ಮೆಱುವ
ಗಿರಿಶಪ್ರಶಂಸೆಯಂ ಸ್ವಾಧ್ಯಾಯತತ್ಪರರ್
ವರಭೂಸುರೋತ್ತಮರ್ ಶಿವಪೂಜನಾಪರರ್
ಭರದೆ ನೋಡುತ್ತೆ ಮತ್ತಂ ವೇದಭಾಷ್ಯಂಗಳಂ ಕರಂ ಪಠಿಯಿಸುತ್ತೆ ೩೦

---

[1] ರುಷ (ಗ) [2] ವ (ಗ) [3] ನರಶಾ (ಕ) [4] ಮಂ (ಕ) [5] ದೊ (ಕ) [6] ದ್ದೀಪ್ತ (ಕ)

ಭರವಸದೊಳೆರ್ಕೆಲದೊಳೆಯಿದ್ದು ಬರುತಿರೆ ಬಳಿ
ಕ್ಕುರುತರನ್ಯಾಯವೈಶೇಷಿಕೋದಾತ್ತ ಬಂ
ಧುರಶಾಸ್ತ್ರದಲ್ಲಿ ನಿಶ್ಚಿತಬುದ್ಧಿಯುಳ್ಳ ತಾರ್ಕಿಕರೆಯ್ದೆ ತಂತವೊಳು
ಹರಿಸ[1]ದಿಂ ಖಂಡನಕೆ ಖಂಡನವನುಸುರುತ್ತೆ
ಪರಮತಾರ್ಕಿಕರೊಸೆದು ಒಡೆ ನಡೆತರುತಿರಲ್
ವರಗಾಯಕರ್ ತಾನಮಾನಂಗಳಿಂದಿಂಪು ಸೊಂಪು ಪೊಂಪುಳಿಯಾಗಲು ೬೧

ಬಸವದಂಡೇಶ ಸತ್ಯೇಶ ಚಾಮಯ್ಯಂಗೆ
ಳಸವ ಮಡಿವಳ್ಳಮಾಚಯ್ಯನಜಗನು ಚನ್ನ
ಬಸವ ಕಕ್ಕಯ್ಯಂಗಳುದ್ಭಟಂ ಸಿದ್ಧರಾಮಯ್ಯನಾ ಕಲ್ಲಿದೇವಂ
ಮುಸಣಯ್ಯ ಚಿಕ್ಕಯ್ಯ ಕೇಶಿರಾಜಯ್ಯಂಗ
ಳೆಸೆವಿಪರ್ ಮೊದಲಾದ ಗಣವರರ್ ಪಾಡಿದಾ
ಮಿಸುಪ ಗೀತಂಗಳಂ ಪಾಡುತ್ತೆ ಮುಂದೆಸೆಯೊಳೆಸೆದು ಬರುತಿರೆ ಶೋಭೆಯಿಂ ೬೨

ಶಿವಮಸ್ತು ಎಂದು ತಾಪಸವೃಂದ ನುಡಿಯುತಿರೆ
ತವೆ ಶಂಖಕಾಹಳಾದಿಗಳ ನಿನದಂಗಳುಂ
ವಿವಿಧವಾದ್ಯಧ್ವನಿಗಳುಂ ದಿಗಂತರವೆಯ್ದೆ ಪುರಜನಂ ಜಯಜಯ ಎನೆ
ತವಕದಿಂ ಭಕ್ತಕಾಂತಾನೀಕಮಿದಿರ್ವಂದು
ಸವಿನಯದೆ ಭಸ್ಮತಾಂಬೂಲಂಗಳಂ ಕೊಟ್ಟು
ಭುವನದೊಳ್ ಪೊಡೆಗೆಡೆಯುತಿರೆ ಮಂಗಳಾರತಿಯು ಕೆಲಕೆಲಬರೆತ್ತುತಿರಲು ೬೩

ಪರಿಶೋಭಿಸುತ್ತಿರ್ಪ ಭಕ್ತವಿಸರದ ನಯನ
ದುರುಕಾಂತಿಮಣಿಗಳೊಳ್ ವಾಗ್ಮಣಿಗಳೊಳ್ ಮತ್ತೆ
ಪಿರಿದುನೀರಾಜನಾದೀಪಮಣಿಗಳೊಳೊಂದಱಿಂದಱೊಳ್ ಬೇಱೆಬೇಱೆ
ಭರದೆ ಪುಷ್ಪಾಂಜಲಿಯನೆಸಗಿ ನೀರಾಜನವ
ನಿರದೆತ್ತಿ ವಂದಿಸುತ್ತಿರೆ ಭಕ್ತವಿತತಿ ಭಾ
ಸುರವೀಧಿಯೊಳ್ ನಿಂದು ಪಿರಿಯರೀ ಭಕ್ತರ್ಗೆ ಸರಿಯುಂಟೆ ಎನುತಮಿರಲು ೬೪

ಕರುಣಾಕಟಾಕ್ಷದಿಂ ಭಕ್ತಸಂದೋಹಮಂ
ಪಿರಿದೀಕ್ಷಿಸುತ್ತಿರ್ಪ ಶಾಂತನಂದಿಗಳಿಂದೆ
ಪರಸಮಯನಿಕರಮಂ ಭಸ್ಮಮಂ ಮಾಡಲತ್ಯುಗ್ರತ್ವದಿಂದೆ ನೋಳ್ಪ

1 ರುಷ (ಗ)

ಪರಮೋಗ್ರನಂದಿಗಳಿನಾವಗಂ ಶೋಭಿಸುವ
ಸರಳಧ್ವಜಾನೀಕಮಂ ಮತ್ತೆ ಮಿಗೆತೋರ್ಪ
ಸುರುಚಿರಾಮಲಪಾತಪೂರಣಂಗಳುಮೆಯ್ದೆ ಪಿಡಿದುಬರೆ ಮುಂದೆಸೆಯೊಳು ೩೫

ಪಡಿಹಾಜಿರಾವಗಂ ಚಾಂಗು ಭಲರೇ ಎನಲ್
ಪಿಡಿದುಬರೆ ಶಿಷ್ಯಾಳಿಗಳ್ ಸಿತಚ್ಛತ್ರಮಂ
ನುಡಿದಂತೆ ವಾಯುವೀಯಂ ಶಶಿಸಿಭಂ ಛತ್ರಮೀಶ್ವರಂಗೆಂದು ಮತ್ತಂ
ಕಡುಗಿ ಪದ್ಮಪುರಾಣಮದು ನಿರ್ಮಲಚ್ಛತ್ರ
ಮುಡುಪತಿಧರಂಗೆಂದು ಪೇಳಿತ್ತು ವಿಷ್ಣುವಿಂ
ಗೊಡನೆ ಪೀತಚ್ಛತ್ರಮೆಂದು ರ[1]ಕ್ತ[1]ಚ್ಛತ್ರಮಬ್ಜಜಂಗೆಂದು ನುಡಿಗುಂ ೩೬

ಪಿರಿದುಮಾಯರ್ಥಮುಂ ಸ್ಕಾಂದದೊಳ್ ಶೋಭಿಸುಗು
ಮಿರದದಜಾನಮಳ ಸಿತಚಾಮರಂಗಳು[2]ಮಂತೆ[2]
ಹರಿಣಧರಸನ್ನಿಭಚ್ಛತ್ರಂಗಳುಂ ಶಿವಂಗೆಯ್ದೆ ತದ್ಭಕ್ತತತಿಗೆ
ಕರಮೆ ಸಲ್ಗುಂ ವಿಷ್ಣುಪರಮೇಷ್ಠಿ ಮುಖ್ಯರ್ಗೆ
ಹ[3]ರಿಸದಿಂದಂ[3] ಸಿತಚ್ಛತ್ರಮಂ ಕೊಟ್ಟರ್ಗೆ
ನರಕಮೆಂದಿರದೆ ತನ್ನರಕಮಪ್ರಜೇಡೆಂಬ ವಾಕ್ಯಮುಲಿಗುಂ ಸಂತತಂ ೩೭

ಇಂತೆಂಬ ಪೌರಾಣವಾಕ್ಯಪ್ರಮಾಣದಿಂ
ಕಂತುಹರನಿಭಪಂಡಿತೇಂದ್ರಸಿ[4]ರ್ಕೆ[4]ಲದಲ್ಲಿ
ಸಂತತಂ ಮೌಕ್ತಿಕಚ್ಛತ್ರಂಗಳುಂ ಧವಳಚಾಮರಂಗಳುಮೆಸೆಯಲು
ಪಿಂತೆಯ್ದೆ ಪರೆ ವೆಲ್ಲಕೊಂಡದ ಮಹಾದೇವ
ನುಂ ತವಕದಿಂ ಸೂರಸಾನಾಂಬೆ ಮೊದಲಾದ
ನಂತಭಕ್ತಾಳಿಯುಂ ಪರವಾದಿಮತ್ತಗಜಸಿಂಹಸನ್ನಿಭರೂಪನು ೩೮

ಪರವಾದಿ ಸಂವರ್ತನಾಬ್ಧಿಕುಂಭೋದ್ಭವಂ
ಪರವಾದಿ ಕಾದಂಬಿನೀಪ್ರಭಂಜನನಿಭಂ
ಪರವಾದಿ ಶಿವಸಮಯಮಣಿಚೋರಗಳದಳನ ನಿಶಿತಕೌಕ್ಷೇಯರೂಪಂ
ಪರವಾದಿಕುಸುಮಪ್ರದರದಹನ ಭಾಳಾಕ್ಷ
ಪರವಾದಿನಿಕರವಲ್ಲೀಲವನದಾತ್ರನುರು
ಪರವಾದಿ ಧರಣೀಜ ಸಮುದಾಯವಿಚ್ಛೇದ ಪಟುತರಕುಠಾರಸದೃಶಂ ೩೯

---

[1] ಜತ (ಕ) [2] ಮತ್ತೆ (ಕ) [3] ರುಷದಿಂ ತೋರ್ದಂ (ಗ) [4] ಕ್ಕೆ (ಕ)

ಪರವಾದಿಮಂಡೂಕ ಮಂಡಲಾಶೀವಿಷಂ
ಪರವಾದಿವಲ್ಮೀಕ ಖನನಕುದ್ದಾಲನುರು
ತರವಾದಿ ಭೂಮಿಭೃದ್ದಳನ [1]ಪವಿಸನ್ನಿಭಂ[1] ಪರವಾದಿಹೃದಯಶೂಲಂ
ಪರವಾದಿ[2]ಜಿಹ್ವೆ[2]ಗಾನೀಕ ಪಕ್ಷೀಶ್ವರಂ
ಪರವಾದಿಪುರನಿಕರಹರಲಲಾಟೇಕ್ಷಣಂ
ಪರವಾದಿ[3]ನಿಕರ ವಿಪು[3]ಲಾರಣ್ಯನಿರ್ಧೂಮಧಾಮ ಧೂಮಧ್ವಜಾಭಂ ೪೦

ಗುರುಲಿಂಗ ಚರಲಿಂಗ ಸಾಮ್ರಾಜ್ಯಸಂಪದಂ
ವರಬಸವದಂಡೇಶಪದವನಜಷಟ್ಪದಂ
ದುರಿತವಿಧ್ವಂಸನೀಶ್ವರಸಮಯ ವಿಮಲಕಾಸಾರ ನವರಾಜಹಂಸಂ
ಗುರುಪಂಡಿತಾರಾಧ್ಯದೇಶಿಕಂ ಬೌದ್ಧನತಿ
ತರ ಕೋಪವಹ್ನಿಯಿಂ ಬೇಯುತ್ತೆ ನೋಡುತಿರೆ
ಪಿರಿದು ಹ[4]ರಿಸದ[4] ಬಂದು ಪೊಕ್ಕಂ ಸಭಾಸ್ಥಾನಮಂ ಭಕ್ತರುಘೆ ಎನುತಿರೆ ೪೧

ಸದಮಲಪ್ರಚುರವಿಶ್ರುತ ಪರಮಭಕ್ತಗಣ
ಪದಸರೋರುಹಸಾಂದ್ರ ಮಕರಂದಪಾನ ಸ
ಮ್ಮುದಿತ ಚಂಚಚ್ಚಂಚರೀಕನನವರತ ಪಂಚಾಕ್ಷರೀಪ್ರಸಿತಹೃದಯಂ
ವಿದಿತ ಮಂಜುಳನೀಲಕಂಠಾಹ್ವಯಂ ಮನೋ
ಮುದದೆ ಪೇಳ್ದುರುತರಾರಾಧ್ಯಚಾರಿತ್ರದೊಳ
ಗಿದು ಮೆಱೆವ ವಾದಪ್ರಕರಣದೊಳ್ ಪಂಡಿತೇಶಂ ಸಭೆಗೆ ಬಂದ ಸಂಧಿ ೪೨

[1] ತೀಕ್ಷ್ಣಾಶನಿ (ಗ) [2] ಜಿಹ್ವ (ಗ) [3] ವಿಪುಲ ನಿಕ (ಗ) [4] ರುಷದಿಂ (ಕ)

# ಎರಡನೆಯ ಸಂಧಿ

## *ವೈದಿಕವಾದ ನಿರಸನಂ

ಸೂಚನೆ: ಪ್ರತಿವಾದಿಗಜ[1]ಸಿಂಹ[1] ಪಂಡಿತಾರಾಧ್ಯವಿಭು
ವತಿಶಯಂ ವೆಲ್ನಾಡಚೋಳನಾಸ್ಥಾನದೊಳ್
ವಿತತವೈದಿಕಮತಮನೊಲ್ದು ಧಿಕ್ಕರಿಸಿದುದನೆಯ್ದೆ ಕೇಳ್ ಸೂರಸಚಿವ

ಹರಿಣಧರರಮಣೀಯಕಿರಣಚಯಮೆಸೆಯೆ ಚಾ
ಮರದಂತೆ ಸುರನದೀಸ್ಫಾರಫೇನಸ್ತಬಕ
ಮುರುತರಶ್ವೇತಾತಪತ್ರದಂತೆವೊಲೊಪ್ಪೆ ಜೂಟಬಂಧಾಹಿಪತಿಯ
ವರಫಣಾನೀಕಮುತ್ತುನ್ನತಕಿರೀಟದಂ
ತಿರೆ ದೇವಕುಲಚಕ್ರವರ್ತಿ ಚಿಹ್ನದೆ ಮೆಱೆವ
ಪರಮಗುರುನೀಲಕಂಠಂ ಪೊರೆಗೆ ಸಂತತಂ ಸಜ್ಜನಸ್ತೋಮಂಗಳಂ ೧

ತದನಂತರಂ ಪಂಡಿತಾರಾಧ್ಯದೇಶಿಕಂ
ಮುದಮುಲರ್ದು ತನ್ನ ಬಲಗಡೆಯಲ್ಲಿ ಭಕ್ತರಂ
ಪದುಳದಿಂ ಸಿಂಹಾಸನಮನಿಟ್ಟು ಕುಳ್ಳಿರಿಸಿ ತದ್ಭಕ್ತತತಿಯಾಜ್ಞೆಯಂ
ಪಡೆದು ತನ್ನಯ ಶಿರದೊಳಗೆ ತಾಳ್ದಿಕೊಂಡು ಮಿಗೆ
ಮುದದಿಂದೆ ಸೊರ್ಕಿದುಗ್ರೇಭದಂದದೆ ಭಯಮ
ನೊದವಿಸುತ್ತಾ ಸಭೆಗೆ ಶಾ[2]ರಮಿಯ[2]ನೇಱಿರ್ದ ಪಟುಭಟನ ಭಂಗಿಯಂತೆ ೨

ಮಿಗಗಡಣಮಂ ಕಂಡ ಬಿಯದನಂದದೆ ತನ್ನ
ಪಗೆಯನಿದಿರೊಳ್ ಕಂಡ ತುಳಿಲಾಳ ತೆಱದೆ ತೊ
ಟ್ಟಗೆ ಪಸಿದ ಪುಲಿ ಪಶುವನೀಕ್ಷಿಸುವ ಪಾಂಗಿನಿಂ ಪಂಡಿತೇಂದ್ರಂ ಕೋಪದೆ
ಮಿಗೆ ಬೌದ್ಧನಂ ಮತ್ತೆ ಸಮಯಾಪಶದರನಾ
ನೆಗಳ್ದ ದುಟ್ಟರ ನಿಟ್ಟಿಸುತ್ತೆ ನುಡಿದಂ ಬೌದ್ಧ
ತೆಗಳಲ್ತೆ ನಿನಗೆ ವೈದಿಕನ ಕೂಟಂ ಸಾಂಖ್ಯ ಚಾರ್ವಾಕನೊಡನೆ ಜೆರಿದ ೩

---

1 ಜಿಹ್ವ (ಕ) 2 ರಲಿಯ (ಗ)

* (ಕಗ) ಪ್ರತಿಗಳಲ್ಲಿಲ್ಲ.

ಎಲೆ ವೈಷ್ಣವಾ ನಿನಗೆ ಜೋಗಿಗಳ ಕೂಟವೇ
ಎಲವು ವೇದಾಂತಿ ಕರ್ಮಠರ ಕೂಟವೆ ನಿನಗೆ
ನಲಿದು ನೋಡಲ್ ಪರಸ್ಪರವಿರುದ್ಧಂ ಸಭೆ[1]ಯಿ[1]ದೆಲ್ಲಿಯದೊ ಲೋಕದೊಳಗೆ
ಪಲವು ಪುಲ್ಸರವಿಗಳ್ ಕೂಡಿ ದೃಢಮಪ್ಪೊಂದು
ಲಳಿತ ರಥಪಾಶಕ್ಕೆ ಪಾಸಟಿಯೆನಿಕ್ಕುಮೇ
ಸಲೆ ಬಿಟ್ಟಬಂದ ಸಾಸಿರಮಾನಸರೊಳೊರ್ವನುಂಟೆ ಸಭ್ಯಂ ಭಾವಿಸೆ ೪

ನರಪನಾಜ್ಞೆಗೆ ಬಂದು ನೆರೆದ ವಾದಿಗಳೆಲ್ಲ
ರಿರದಿದಿರ್ಚಿಪರೆ ಎನ್ನೊಳ್ ಬೇಡದಂತಿರ್ಕೆ
ಪೊರಸುಗಾಲಂ ಸಂಕವಣಿಯನೊಡವೆರಸಿಕೊಂಡಂತೆ ಮತ್ತಂ ಭಾವಿಸೆ
ಸಿರಿಯ ಸವಣರ್ಗೆಯುಂ ರಜಕರ್ಗೆಯುಂ ನಂಟು
ನೆರದಂತೆ ತೋಱುವೀ ಸಭೆಗೆ ಪತಿಯಾವನಂ
ಕರನೆ ವಾದಂಗೆಯ್ಯಲರ್ಹನಾವಂ ಬಱಿದೆ ಬಂದೆವೀ ಸಭೆಗೆನುತ್ತೆ ೫

ಮುನಿದೆಪ್ಪೊಡನೆ ವಾದ[2]ಕೆಂದು[2] ತಲೆಯೆತ್ತಿ ನೆ
ಟ್ಟನೆನೋಡಲುಂ ತರ್ಕಿಸಲುಮಣಿಯರಂ ಯೋಗ್ಯ
ನೆನಿಪ ತಾರ್ಕಿಕನುಂಟೆ ಲೋಕದೊಳ್ ತಿರಿಗಿ ಪೋಪುದೆ ಯುಕ್ತವೆಮಗೆನುತ್ತೆ
ಮನದೊಳಗೆ ತಿಳಿದು ಮತ್ತಂ ಪಂಡಿತೇಶ್ವರಂ
ನೆನೆದನೊಂದಂ ವಾದಕೆಂದು ಸಭೆಯೇಱಿ ಸು
ಮ್ಮನೆ ಮರಳಿ ಪೋಪುದನುಚಿತಮೆಂದು ನಿಶ್ಚೈಸಿ ಪ್ರಶ್ನೆಗೆಯ್ದಂ ಬಳಿಕ್ಕಂ ೬

ಮಿನುಪ ವೈದಿಕನೆ ನಿನಗೇಕೆ ಬೌದ್ಧನ ಕೂಡೆ
ಸುನಯಮಿಂದು ವಿಂಗೆ ಪೊಸತು ವೇದದೂರರನೊಸೆದು
ನನಸು ಮುಟ್ಟಲ್ ನೋಡಲಾಗದವರೊಡನೆ ನುಡಿಯಲುಮಾಗದೆಂದು ಪೇಳ್ದುಂ
ವಿನುತವಾಕ್ಯಂ ಹಸ್ತಿನಾಹನ್ಯಮಾನೋಪಿ
ಎನುತೆ ನವಿಷೇದೆನುತೆ ಜಿನಮಂದಿರಂ ಎನು
ತ್ತಿನಿಸುಮಿದನಱಿಯ ಜಿನಬೌದ್ಧರ್ಗೆ ಭೇದವೆನಿಸಲ್ತೆ ಪರಿಭಾವಿಸುವೊಡೆ ೭

ಅದಱಿಂದೆ ನಿನಗೆಯ್ದುಗುಂ ನರಕಮದು ನಿನಗೆ
ಪಡೆದಿಷ್ಟಮಾಡೊಡದುಮಂತಿರ್ಕೆ ಕೇಳ್ ನಿನ್ನ
ವಿದಿತವೇದಂಗಳತಿನಿತ್ಯಂಗಳೆಂಬೊಡವು ನಿತ್ಯಂಗಳಲ್ತೆಂತೆನೆ

---

1 ಯ (ಕ) 2 ಕೆಮ್ಮ (ಗ)

ಪುದಿದ ಮೂವತ್ತಾಱುತತ್ತ್ವಸಂದೋಹದೊಳ
ಗೊದವಿದ್ಯೆದನೆಯ ತತ್ತ್ವಂ ನಭಂ ಬಳಿಕದಱ
ಸದಮಲಗುಣಂ ಶಬ್ದಮದು ನಿತ್ಯಮಲ್ತು ತನ್ನಭವಮದುಂ ನಿತ್ಯಮಲ್ತು ೮

ನನಸು ಶಬ್ದಕ್ಕೆ ಕಾರಣಮಾದ ಗಗನಕ್ಕೆ
ಜನಿಯಿಸದು ನಿತ್ಯತ್ವಮೆಂದೊಡಾವಗಸುದಱ
ಘನಕಾರ್ಯಮಾದ ಶಬ್ದಕ್ಕೆಂತಃ ನಿತ್ಯತ್ವಮೊಗೆಗುಮಿಾ ಲೋಕದೊಳಗೆ
ಎನಸುಮದುಮಲ್ತು ಕೃತಕತ್ವದಿಂ ಶ್ರುತಿಗಳವು
ಮಿನುಪ ಘಟದಂತನಿತ್ಯತೆವೆತ್ತು ತೋರ್ಕುಮೆಂ
ತೆನೆ ಕೃತಕಮಾವುದದಃ ನೋಡನಿತ್ಯತೆವಡೆಗುಮೆಂಬುದಿದು ಶಾಸ್ತ್ರಮತವು ೯

ಪರಿಕಿಸಲ್ ಶ್ರುತಿಗಳ್ಗೆ ದೇಹಾದಿಗಳ್ ತೋರ್ಕು
ಮಿರದದಱೊನಸ್ಮದಾದಿಗಳಂತೆವೊಲ್ ನೋಡ
ಪಿರಿದನಿತ್ಯತೆ ಸಾರ್ಗುಮಿಂತೆಲ್ಲ ತೆಱದೊಳಮನಿತ್ಯಮಿದು ಸಿದ್ಧವು
ಕರಮೆ ವೇದಂಗಳ್ಗೆ ನಿತ್ಯತ್ವಮಿಲ್ಲ ಬಂ
ಧುರ ಜಗತ್ಕರ್ತೃವೊರ್ವನೆ ನಿತ್ಯನೆನಿಸುವಂ
ಮರಳಿ ವೇದಂಗಳ್ ಸ್ವಯಂಭುಗಳೆನಲ್ವೇಡ ಕೇಳದಂ ಪೇಳ್ದಪ್ಪೆವು ೧೦

ಸಕಲಕ್ಕೆ ಕರ್ತೃವಾಗೆಸೆವಾದಿಶಿವನಿಂದೆ
ಸುಕರವೇದಂ ಪುಟ್ಟೆ ಭವನಾಜ್ಞೆ[1]ಯೊಳ್[1] ಲೋಕ
ನಿಕರದೊಳ್ ವರ್ತಿಸುತೆ ಸಂವರ್ತಕಾಲದೊಳ್ ತವಿಸಿ ತವೆಸೃಷ್ಟಿಯಲ್ಲಿ
ಪ್ರಕಟಮಪ್ಪಂತೊಗೆಗುಮೆಂದು ಮಿಗೆ ನಿಜಸೂಕ್ತಿ
ನಿಕುರುಂಬವೊರೆಗುಮದಱಿಂದಮಾ ವೇದಕ್ಕೆ
ಮಕುಟಲಕಳೇವರಾದಿಗಳುಂಟವಂ ಕೇಳ ವೈದಿಕಾಧಮನೆ ನೀನು ೧೧

ಕರಮೆಸೆದು ತೋರ್ಪ ಋಗ್ವೇದಕ್ಕೆ ವಿಗ್ರಹಂ
ರುರುವರ್ಣಮತ್ರಿಗೋತ್ರಂ ನೆಗಳ್ದ ಗಾಯತ್ರಿ
ಪರಿಕಿಪೊಡೆ ಛಂದಸ್ಸು ನಿರುತಮಧಿದೈವಮಂಭೋಜಸಂಜಾತನೆಂದು
ಪಿರಿದುಮನುರಾಗದಿಂದಂ ಪಂಡಿತಾರಾಧ್ಯ
ಗುರುವರಂ ವೈದಿಕಾಪಶದ ಸಂದೋಹಕ್ಕೆ
ಭರದಿಂದೆ ಪೇಳ್ದು ಮತ್ತುಳಿದ ವೇದಸ್ವರೂಪಂಗಳಂ ಬಿತ್ತರಿಸಿದಂ ೧೨

---

1 ಯಿಂ (ಗ)

ನೆಗಳ್ದು ರಾಜಿಪ ಯಜುರ್ವೇದಕ್ಕೆ ಸಂತತಂ
ಸೊಗಯಿಸುವ ತಾಮ್ರವರ್ಣಂ ನಿಜತನುಚ್ಛಾಯೆ
ನಗೆಗಣ್ಗಳಬ್ಜದಳಸನ್ನಿಭಂಗಳ್ ಗುಜುಱುಮೀಸೆ ಕುಂಚಿತಚಿಬುಕವು
ಮಿಗುವ ಭಾರದ್ವಾಜಗೋತ್ರಮಾ ವೇದಕ್ಕೆ
ತಗುಳ್ದು ತ್ರಿಷ್ಟುಪ್ಛಂದಮಧಿದೈವಮಚ್ಯುತಂ
ಬಗೆದುನೋಡಲ್ ಕೃಶಸ್ಥೂಲಮಾದ ಕಪಾಲಮುಳ್ಳುದಾಗಿರುತಿರ್ಪುದು ೧೩

ವರಸಾಮವೇದಕ್ಕೆ ಧವಳವರ್ಣಂ ಕಳೇ
ವರಮಂತೆ ಬಿಳಿಯ ಕೋಡೆರಡು ಕಾಶ್ಯಪಗೋತ್ರ
ಮುರುತರಮೆನಿಪ್ಪ ಜಗತೀಛ್ಛಂದಮಧಿದೈವಮೀಶಾನನತಿಭಾವಿಸೆ
ನಿರುಪಮಾಥರ್ವಣಕೆ ವೇದಕ್ಕೆ ಪರಿಕಿಪೊಡೆ
ಪಿರಿದಸಿತವರ್ಣ ತನುವೈಜಾನಸಂಜ್ಞಕಂ
ವರಗೋತ್ರಮೊಸೆದನುಷ್ಟುಛ್ಛಂದಮುಮರೇಶನಧಿದೈವಮುಕ್ಕುಮನಿಶಂ ೧೪

ಇಂತು ದೇಹಂ ವರ್ಣಗೋತ್ರನಿಕರಂಗಳೋ
ರಂತೆ ಬಳಿಕಧಿದೈವಮುಂಟಾಗಿರಲ್ ವೇದ
ಸಂತತಿಗಳೆಂತಕ್ಕುಮಿರದೆ ನೋಡಲ್ ಸ್ವಯಂಭುಗಳಾವಗಂ ಭಾವಿಸೆ
ಮುಂತಱಿಯದೀ ಜಗಮನಾದಿಯೆಂಬೊಡ ಕೇಳ
ಸಂತವೈದಿಕನೆ ಪ್ರಾಜ್ಞಾನವಿಷಯಜ್ಞಾನ
ಮಂತುತ್ತರಜ್ಞಾನವೆನಿಸುವೀ ಜ್ಞಾನತ್ರಯಂಗಳೊಳ್ ಪರಿಕಿಸುವೊಡೆ ೧೫

ಎರಡನೆಯದಾದ ವಿಷಯಜ್ಞಾನಮುಣ್ಮುತಿರೆ
ಭರದೆ ಮೂಱನೆಯ ಸುಜ್ಞಾನಮಾಯೆರಡನೆಯ
ಸರಳವಿಷಯಜ್ಞಾನದಿಂದಱಿಯಪಟ್ಟುವಾಗುತ್ತರಜ್ಞಾನಮೆನಿಕುಂ
ಪಿರಿದು ವಿಷಯಜ್ಞಾನಮುತ್ತರಜ್ಞಾನಕ್ಕೆ
ಕರಮೆ ಪೂರ್ವಜ್ಞಾನಮೆನಿಸಿ ರಾಜಿಸುಗುಮಿಂ
ತಿರಪೂರ್ವ ಪೂರ್ವಸುಜ್ಞಾನದಿಂ ಮೇಗೊಗೆವ ಜ್ಞಾನಮುತ್ತರಮೆನಿಕ್ಕುಂ ೧೬

ಪರಮಾ[1]ದ[1] ಸುಜ್ಞಾನದಿಂ ಪೂರ್ವದಲ್ಲಿರ್ದ
ನಿರುಪಮಜ್ಞಾನಮದನಱಿವಂಗನಾದಿಯೆಂ
ತಿರದಾದುದದಱವೋ[2]ಲೀ ಜ್ಞಾನ[2]ಮಕ್ಷರಾ[3]ದಿ[3]ಗಳಲ್ಲಿ ತೋರ್ಕುಮಿಂತು

---

[1] ನ (ಗ) [2] ಲಿಲ್ಲಿನ (ಕ) [3] ೦ (ಕ)

ಎರಡನೆಯ ವರ್ಣಮಾಧ್ಯಕ್ಷರಂಗುಱುತು ಭಾ
ಸುರದೆ ವಿಷಯಾಕ್ಷರಂ ಎನಿಸಿತ್ತು ಘುತ್ತಮಾ
ಯೆರಡನೆಯ ವರ್ಣಮೇ ತನಗಿಂದೆಮುಂದೆ ಬಂಧುರಮಾಗಿ ತೋಱುತಿರ್ಪ ೧೭

ವರತೃತೀಯಾಕ್ಷರಕೆ ಪೂರ್ವಮೆನಿಸಿತ್ತುಮಾ
ಯೆರಡನೆಯ ಪೂರ್ವಾಕ್ಷರಂ ದಲೆನಿಸುವ ಮನೋ
ಹರವರ್ಣದಿಂ ಮುಂದೆತೋರ್ಪ ಮೂಱನೆಯಕ್ಕರಂ ಬಳಿಕೆ ವಿಷಯಾಕ್ಷರಂ
ನಿರುತಮ:ದಱಿಂದೆ ಮುಂತೋರ್ಪ ನಾಲ್ಕನೆಯ ಸುಂ
ದರವರ್ಣಮುತ್ತರಾಕ್ಷರಮೆನಿಕುಮಿಾ ತೆಱದೆ
ಭರವಸದೊಳುತ್ತರೋತ್ತರವರ್ಣದಿಂ ಪೂರ್ವಪೂರ್ವಾಕ್ಷರಂಗಳನಿಶಂ ೧೮

ನಲಿದನಾದಿಗಳಕ್ಕೆ ವರ್ಣಂಗಳೋದುವಂ
ಗೊಲವಿನಿಂ ವರ್ಣನಿರ್ಮಾತೃವಿಂಗವು ನೋಡೆ
ಸಲೆ ಅನಾದಿಗಳೆ ಮತ್ತಾ ಪರಿಯೊಳೀ ಜಗಂ ನರತತಿಗನಾದಿಯಕ್ಕುಂ
ಒಲವಿನಿಂದಂ ಜಗತ್ಕರ್ತೃವಾದಂಗೆ ಸ
ಲ್ಲಲಿತೇಶ್ವರಂಗನಾದಿಗಳೆ ಬಳಿಕೀ ಜಗ
ದ್ವಲಯಂಗಳುಂ ಪ್ರವಾಹಾನಾದಿಯುಳ್ಳುವುಂ ಭಾವಿಸಲ್ಕೆಲೆ ವೈದಿಕ ೧೯

ಜಗಮೆಯ್ದೆ ನಿತ್ಯಂಗಳಾವಗಮನಾದಿಗಳ್
ಬಗೆದು ನೋಡಲ್ಕೆಂಬೊಡಲೆ ವೈದಿಕನೆ ಕೇಳ
ಜಗದನಿತ್ಯತ್ವಮನನಾದಿತ್ವಮಂ ನಾಡೆ ನೀನಱಿಯಲಸಮರ್ಥನು
ಜಗದನಾದಿತ್ವಮಂ ಕಣ್ಗಳಿಂದಂ ನೋಡಿ
ಮಿಗೆ ಅಱಿದೆನಾನೆಂಬೊಡಾ ನಯನಕಾಂತಿಗಳ್
ನೆಗಳ್ದ ಶಿವನೇತ್ರಂಗಳಾದರ್ಕಶಶಿತೇಜವಿಲ್ಲದವು ವಿಸ್ಫುರಿಸವು ೨೦

ತರಣಿಶಶಿಕಿರಣಂಗಳಿಲ್ಲದೇ ಕಣ್ಗಳ್ಗೆ
ಪಿರಿದು ಕಂಡಱಿವ ಸಾಮರ್ಥ್ಯಮೊಂದಿನಿತಿಲ್ಲ
ನಿರುತಮಿದು ಗಾಂಪ ನಿನಗೆಲ್ಲಿಪ್ಪೊ ಕಂಡಱಿವ ಸಾಮರ್ಥ್ಯಮವನಿಯೊಳಗೆ
ಪಿರಿದು ಮುನ್ನಿರ್ದ ಜಗಮಂ ಜ್ಞಾನದೃಕ್ಕಿನಿಂ
ಕರಮಱಿದೆನೆಂಬೊಡವು ನಿನಗವಾದಿಗಳಕ್ಕು
ಮಿರದವಱ ನೆಲೆಯ ನಿನಗಱಿಯಲಳವಲ್ತು ನೊನ್ನಿನ ಕೂಸು ನೀಂ ಭಾವಿಸೆ ೨೧

ಎನ್ನಱಿವಿನಿಂದ ನಾನಱಿದೆನೆಂಬೊಡೆ ಕೇಳ
ಮುನ್ನಿನ ಭವಂಗಳಿರವಂ ಬಳಿಕ್ಕೀಗ ನೀಂ
ಸನ್ನಿದಂ ತಿಳಿದು ಕಾಣಲ್ಕಱಿಯ ಜಗದನಾದಿತ್ವಮನದೆಂತಱಿವೆಯೊ
ನಿನ್ನಲ್ಪಮತಿಯಿಂದೆ ಮುನ್ನಿರ್ದ ಜಗದುದಯ
ಮನ್ನಿಸದಮಱಿಯಲಳವಲ್ತದಱಿನೀ ಜಗ
ಕ್ಕನ್ನೆಱೆ ಅನಾದಿಯಾಗಿರ್ದ ಗೌರೀಶನೊರ್ವನೆ ಬಲ್ಲನಿದಱ ತೆಱನಂ ೨೨

ಮಱಳಿಯಾಗಮವಾಕ್ಯದಿಂದಱಿದೆನೆಂಬೊಡಾ
ಸರಳಾಗಮಂಗಳಾದ್ಯಂಗಳವು ಸಂತತಂ
ಹ[1]ರಿಸಾ[1]ದಿಂ ಜಗತಾಂ ಎನುತ್ತೆ ಪತಯೇ ನಮಃ ಎನುತೆ ನುತಿಸುಗುಮಭವನಂ
ಇರದಿವುಂ ಮೊದಲಾದ ಸೂಕ್ತಿನಿಕರಂಗಳುರು
ತರ ಜಗದನಾದಿತ್ವಮಱಿಯುದವಱಿಂದೆ ಭಾ
ಸುರ ಜಗನ್ನಿಕರಮಣಿಯಱನನಾದಿಯುಮಲ್ತು ವೇದದಿಂದಾದುದಲ್ತು ೨೩

ಶ್ರುತಿವಾಕ್ಯಮಂ ಕೇಳ ಸಂತತಂ ವೈದಿಕನೆ
ಪಿತೃದೇವ ಎನುತೆ ನಿರ್ಮಲ ವೇದಸಂತತಿಗ
ಳತಿಶಯದೆ ವಚಿಸುಗುಂ ಶ್ರುತಿ ಶಿ[2]ವೋ[2]ಮೇಮೇ ಎನುತ್ತೆ ಪಿತ[3]ರೌ[3] ಎನುತ್ತೆ
ವಿತತಂ ಪಿತಾತದಶ್ಯಾ[4]ಮ[4] ಎನುತಾವಗಂ
ಶ್ರುತಿಗಳೇ ಪೇಳ್ಗುಮಭವಂ ತಮಗೆ ಪಿತನೆಂದು
ಮತಿವಿಕಲ ಕೇಳ್ ಮತ್ತೆಯುಂ ವೇದಪುರುಷರ್ಕಳಿರವನುಸುರ್ದಪೆವಳ್ತೆಯಿಂ ೨೪

ಮಿನುಪ ಶೈವವ್ರತಸ್ಥರ್ ಪರಮಶಿವಭಕ್ತ
ರನುಪಮವಿಭೂತಿರುದ್ರಾಕ್ಷಮಾಲಾಯುಕ್ತ
ರೆನಿಸಿ ಶಿವಚರಣಸಲಿಲಪ್ರಸಾದಂಗಳಂ ಸ್ವೀಕರಿಸಿ ಸುಖಮಿರ್ಪರು
ವಿನುತರುದ್ರಾಕ್ಷೆಯಂ ವೇದತತಿ [5]ತೊ[5]ಟ್ಟದ
ರ್ಕನುವಿನಿಂ ಕೇಳ ವೇದಾಧಾರ್ಯಂತಿ ಎಂ
ಬನಘವಾಕ್ಯಮನೊಲ್ದು ಭಸಿತಮಂ ಶ್ರುತಿ ತಾಳ್ದುದರ್ಕೆ ಕೇಳ್ ಶ್ರುತಿವಾಕ್ಯಮಂ ೨೫

ಭರದೆ ದೇವಾನಾಂ ತ್ರಿಯಾಯುಷಂ ಎನುತೆ ಮು
ತ್ತಿರದೆ ತನ್ಮೇ ಅಸ್ತುವೆನುತಿರ್ಕುಮವಿರತಂ
ಗಿರಿಶನಂ ವೇದತತಿಯರ್ಚಿಸಿದುದರ್ಕೆಯುಂ ಮೇ ಹಸ್ತ ಎಂಬ ವಚನಂ

---

1 ರುಷ (ಗ) 2 ರೋ (ಗ) 3 ರೋ (ಕ) 4 ದು (ಗ) 5 ಕೊ (ಕ)

ನಿರುತದಿಂ ವೇದಾಶ್ಚ ಕಾಮಯಂತೇ ಎಂಬ
ಪರಮವಾಕ್ಯವೆ ಮಾನಮಭವಪ್ರಸಾದಮಂ
ಹ[1]ರಿಸ[1]ದಿಂ ಶ್ರುತಿ ತಾಳ್ದುದರ್ಕೆ ಮನುರಾಯ[2]ಜೇಡೆಂ[2]ಬ ವಾಕ್ಯವೆ ಮಾನವು ೨೬

ಹರಚರಣಸಲಿಲಮಂ ಶ್ರುತಿ ತಾಳ್ದುದರ್ಕೆ ಕೇಳ್
ಭರದಿಂದೆ ಭಗವತಃಪಾದೌ ಎನಿಪ್ಪ ಭಾ
ಸುರವಾಕ್ಯವೇ ಪ್ರಮಾಣಂ ಮತ್ತಮಾ ವೇದಮೊಲ್ದು ಭವಗಣವರರನು
ಹ[3]ರಿಸ[3]ದಿಂ ನುತಿಗೆಯ್ದುದರ್ಕೆ ಕೇಳೆಲೆ ವಿಪ್ರ
ಸುರುಚಿರಂ ಕೃತ್ಸ್ನವೀರಾಯ ಎಂಬೀ ವಾಕ್ಯ
ಮಿರದೆ ಮಾಸಂ ದಲೆನಿಕುಂ ಮತ್ತೆಯುಂ ಕೇಳ ವೇದಂಗಳಿರವ ಊಸೆದು ೨೭

ಅಗಲದಿನಿತಂ ವೇದತತಿಗಳಾಯಿೞಶ್ವರನ
ವಿಗಡಮಪ್ಪಾಜ್ಞೆಯೊಳೆ ವರ್ತಿಕುಮದೆಂತೆನಲ್
ನೆಗಳ್ದ ಮಾದೇವನನಃಖ೩ ತನ್ನಗ್ರಸುತನಪ್ಪ ದೃಹಿಣಂಗೆ ಕರುಣದಿಂದೆ
ಸೊಗಸುವೀ ವೇದಂಗಳಂ ನಿಯಾಮಿಸಿಕುಡಲ್
ಪೊಗಳ್ದವನ ವೇದಕರ್ತೃವೆ ಬ್ರಹ್ಮನೆನಿಸಿದುವು
ಮಿಗೆ ಲೈಂಗ್ಯದೊಳಗಗ್ರಪುತ್ರೇ ಚತುರ್ಮುಖೇ ಎಂಬ ವಚನಂ ಪ್ರಮಾಣಂ ೨೮

ಕರವೆಸೆವ ವೇದಂಗಳಂ ಪುರಾಣಂಗಳುಂ
ಸರಳಾಗಮಂಗಳುಂ ಸಕಲಶಾಸ್ತ್ರಂಗಳುಂ
ಪರಮಪಂಚಾಕ್ಷರೀಮಂತ್ರದೊಳಡಂಗಿರ್ಪುವೆಂದು ಸಲೆಪೇಳುತಿರ್ಪ
ಸುರುಚಿರಾಗಮವಾಕ್ಯಮೆಂತೆನಲ್ ವಿಪ್ರ ಕೇಳ್
ಕರಮೊಸೆದು ಪಂಚಾಕ್ಷರೇ ಸ್ಥಿತಾಃ ಎಂದಿರಲ್
ಕರಮೆ ವೇದಂಗಳ್ ಸ್ವಯಂಭುಗಳ್ ನಿತ್ಯಂಗಳೆಂತಕ್ಕುಮವನಿಯೊಳಗೆ ೨೯

ಪರಮೇಶ್ವರಂ ನಿಜಾಜ್ಞೆಯಿನಾದಿಯೊಳ್ ನೀರ
ಕರಿಕೂರ್ಮಫಣಿಗಳಂ ಭೂಮಿಗಾಧಾರಮಂ
ವಿರಚಿಸಿ ಚರಾಚರಾನೀಕಂಗಳಂ ಮತ್ತೆ ಸಂಕಲ್ಪಮಾತ್ರದಿಂದೆ
ಕರಮೆ ಸೃಜಿಯಿಸಿ ಮತ್ತಮಂ ನೋಡಿ ರಕ್ಷಿಸಲು
ಮಿರದೆ ಸಂಹರಿಸಲುಂ ತಾನೆ ದಕ್ಷನುಮಾಗಿ
ಪಿರಿದೊಪ್ಪುವಂ ಮತ್ಸರಮನುಳಿದು ನೋಡು ನೀಂ ವೇದದೊಳ್ ಪರಿಭಾವಿಸಿ ೩೦

---

[1] ರುಷ (ಗ) [2] ಜೇಯಂ (ಗ) [3] ರುಷ (ಗ)

ಪಿರಿದು ಜನಿತಾಪತೀನಾಘೆನುತ್ತುಂ ಮತ್ತೆ
ಭರವೆ ಪಶವೋ ಭವಂತಿ ಎನುತ್ತೆ ಮುದದಿಂದೆ
ಕರವೆ ದೇವಾಶ್ಚಪಶವಃ ಎನುತೆ ಸೃಷ್ಟ್ವಾ ಎನುತ್ತೆ ಮತ್ತಂ ವೇದವು
ಹ[1]ರಿಸ[1]ದಿಂದಂ ಸರ್ವೇ[2]ದಾಂ[2] ದೇವತಾಃ ಎನುತೆ
ಮರಳಿ ಸ್ರಷ್ಟ್ವಾ ಎನುತ್ತಾಪಗಂ ವೇದತತಿ
ನಿರುತಮಿಾ ವಾಕ್ಯಂಗಳಿಂ ಜಗಂಗಳ್ಗೆ ಶಂಭುವೆ ಕರ್ತೃವೆಂದು ಪೇಳ್ಗುಂ ೩೧

ಸದಸುಲಶಿವಂ ಜಗತ್ಕರ್ತೃವಾಗೀ ಜಗವು
ನುದಯಿಪಾಗಳ್ ಜಗದ ಪೊರಗಿರ್ದು ಸೃಜಿಪನೋ
ಮುದವೆ ಜಗದೊಳಗಿರ್ದು ಸೃಜಿಪನೋ ಎಂಬೊಡದನಿರದೆ ಕೇಳೆಲೆ ವೈದಿಕ
ವಿದಿತದಿಂ ಲಿಂಗಮಧ್ಯೇ ಜಗತ್ಸರ್ವಮೆಂ
ಬುದು ಪುರಾಣದ ವಾಕ್ಯಮದರಿಂದ ಸರ್ವೇಶ
ನುದರಾಬ್ಧಿಯಲ್ಲಿ ಜನಿಸಿದ ಬುದ್ಬುದಾದಿಗಳವೊಲ್ ತೋರ್ಕುಮಿಾ ಜಗತ್ತು ೩೨

ಜಗಮೆಲ್ಲಮಂ ಸೃಷ್ಟಿಪಡೆಯೊಳಾ ಶಿವನೆಯ್ದೆ
ನೆಗಳ್ದನಾಕಾರನೊ ನಿರಾಕಾರನೋ ಮತ್ತೆ
ಬಗೆದುನೋಡಲ್ ನಿರಾಕಾರನಾದೊಡೆ ಜಗಂ ನಿರ್ಮಾಣಕರ್ಹನಲ್ತು
ಮಿಗುವ ಸಾಕಾರನಾದೊಡೆ ನಿತ್ಯನೋ ಬಳಿ
ಕ್ಕೊಗೆದನಿತ್ಯನೊ ನೋಡಸಿತ್ಯನಾದೊಡೆ ವಲಂ
ಜಗದುದಯಕರ್ತೃವಲ್ತುಸ್ಮದಾದಿಗಳವೊಲ್ ನಿತ್ಯನೆಂಬೊಡೆ ಸಂತತಂ ೩೩

ಪಿರಿದುಮಾನಿತ್ಯತೆಯದೆಂತರಿಯಪಟ್ಟುದಾ
ಹರನ ಸಾಕಾರತತ್ವದ ನಿರಾಕಾರಮಾ
ದುರುತತ್ತ್ವದೆರಡರೊಳೇಕತ್ತ್ವಮೆಂತೆಂಬೊಡದನೆಯ್ದೆ ಕೇಳೆಲೆ ವೈದಿಕ
ವರರಜೋಗುಣದಿನುತ್ಪಾದಿಸುವನೀ ಜಗವ
ನರಿದೆಂಬ ತೆರದೆ ಭವನಾಗಿ ಸಾತ್ವಿಕದಿಂದೆ
ಪೊರೆವನತಿಸ್ಪುಡನಾಗಿ ತಾಮಸದೆ ಹರನಾಗಿ ಹರಿವನೀ ಲೋಕಂಗಳಂ ೩೪

ಮಿಸುಗುವೀ ತ್ರಿಗುಣಂಗಳೇನುಮಿಲ್ಲದೆ ಮತ್ತೆ
ಬಿಸವಂದಮಾದ ಶಿವನಾಮದಿಂದೊಪ್ಪುತಂ
ನಿಸದಮಾಗೀ ಜಗಚ್ಚಕ್ರಮಂ ಶಿವಶಕ್ತಿಸಂಪುಟದೆ ತಿರುಗಿಸುವನು

---

[1] ರುಷ (ಗ) [2] ದಾರ್ಥ (ಗ)

ಅಸಮನೇತ್ರಂ ಸಕಲನಿಷ್ಕಲೈಶ್ವರ್ಯಯುತ
ನೆಸೆವಾದಿರುದ್ರನೀಶಾನನಕ್ಷಯನಮಲ
ನಸದೃಶಂ ಶ್ರೀಮಹಾದೇವನಾಮ್ನಾಯಾಂತವೇದ್ಯನತಿಮಹಿಮಾಕರಂ ೩೫

ಇಂತೆಸೆವ ಶಿವನ ಸಾಕಾರತತ್ತ್ವಂ ಲೋಕ
ಸಂತತಿಯನುತ್ಪಾದನಂಗೆಯ್ವುದರ್ಕೆ ನೋ
ಡಂತೆ ಕಾರಣಮಾದುದಾ ತತ್ತ್ವದಿಂ ಲೋಕನಿಕರಂಗಳಂ ಸೃಜಿಸುವಂ
ಸಂತತಂ ಮುನ್ನುಳ್ಳ ಲೋಕಂಗಳಂ ಶಿವಂ
ಮುಂತುಗೊಂಡೊಸೆದು ಸೃಜಿಪನೊ ಎಂದುಮಿಲ್ಲದವ
ನುಂ ತವಕದಿಂ ಪುಟ್ಟಿಪನೊ ಎಂಬೊಡದನೆಯ್ದೆ ಕೇಳ ವೈದಿಕನೆ ನೀನು ೩೬

ಸಲಿಲಮುದ್ದಂಡಚಕ್ರಾದಿಯುಂಟಾಗಿರಲ್
ನಲಿದು ಕುಂಬಜನಿಲ್ಲದಿರ್ದ ಕುಂಭಂಗಳಂ
ಲಲಿತ ತಂ ತ್ವಾದಿಯುಂಟಾಗಿರಲ್ ಕಾಕುವಿಂದಂ ಮೊದಲೊಳಿಲ್ಲದಿರ್ದ
ಸುಲಲಿತಪಟಂಗಳಂ ರಚಿಸುವವರೀರ್ವರಂ
ತಲಘುಪರಮಾಣ್ವಾದಿ ಪಂಚಶಕ್ತಿಗಳಿಂದೆ
ಸಲೆಜಗತ್ಕರ್ತೃವಾದಮಲ ಪರಮೇಶ್ವರಂ ಪರಮಾತ್ಮನೆನಿಪ ಶಿವನು ೩೭

ನನಸು ಮುನ್ನಿಲ್ಲದ ಜಗಂಗಳಂ ಪುಟ್ಟಿಸುವ
ನನುವಿನಿಂದೆನೆ ಮತ್ತೆ ಸಲಿಲಮೃದ್ದಂಡಾದಿ
ಯಿನಿತು ಸಾಧನಮುಳ್ಳೊಡಾವನೊರ್ವಂ ಕಲ್ತು ಘಟವಿತತಿಯಂ ನಿರ್ವಿಪಂ
ಮಿನುಗುವ ಕುಲಾಲನೇತರ್ಕಂ[1]ತೆ[1] ಭಾವಿಸಲ್
ವಿನುತಪರಮಾಣುಗಳ್ ಶಕ್ತಿಗಳ್ ಕಾರಣಮು
ಮೆನಿಸಿರಲ್ ಬ್ರಹ್ಮಾಂಡಸಂಘಮಂ ಪುಟ್ಟಿಸುವನಾವನೊರ್ವಂ ನಿಕ್ಕುವಂ ೩೮

ಶಿವನೆ ಕಾರಣನೆಂಬ ನಿಯಮಮೇಕೆಂಬೊಡದ
ನವಿರತಂ ಕೇಳ್ ಕಾರ್ಯನಿಕರಂಗಳಾಗಿ ತೋ
ಱುವ ಪಂಚಶಕ್ತಿಗಳ್ ಕಾರಣಂಗಳವಲ್ತು ಸಿರಿದುಂ ವಿಚಾರಿಸುವೊಡೆ
ಅವು ಶಕ್ತಿಗಳ್ ಕಾರ್ಯನಿಕರಂಗಳೆಂತೆಂಬೊ
ಡವರ ಬಗೆಯುಂ ಕೇಳ್ ಜಗಂ ಕಾರ್ಯಮಾ ಜಗಂ
ನಿವಹಕ್ಕೆ ಪಂಚಶಕ್ತಿಗಳೆ ಕಾರಣಮಕ್ಕು[2]ಮಾ[2] ಶಕ್ತಿಗಳ್ ಭಾವಿಸೆ ೩೯

---

[1] ತು (ಕ) [2] ವಾ (ಕ)

ಪಿರಿದು ಕಾರ್ಯಂಗಳೆನಿಸುಗುವುವಕ್ಕಾವಗಂ
ಪರಮಾಣುಗಳ್ ಕಾರಣಂಗಳೆನಿಸುಗುವುವುಂ
ಪರಮಾಣುಗಳುವೆಯ್ದೆ ಕಾರ್ಯಂಗಳೆನಿಸುಗುಂ ಶಿವನವಕೆ ಮಿಗೆಕಾರಣಂ
ಪರಮಕಾರಣನೀಶನಾದೊಡೀ ಶಕ್ತಿಗಳ
ಪರಮಾಣುಗಳ ನೆರವಿಯೇತರ್ಕೆ ಜಗದುದಯ
ವಿರಚನೆಗೆ ಬಳಿಕೆಂಬೊಡಂ ಕೇಳುಮಾಮಹೇಶ್ವರಲೀಲೆಯೆನಿಸುಗುವುದು ೪೦

ಮಿಸುಪ ಕಾರಣನಿಕರವಿಲ್ಲದೆ ಜಗಂಗಳಂ
ಸಸಿನೆ ಸೃಜಿಪಂ ಪಾಲಿಪಂ ಹರಿಸುವಂ ಸತತ
ಮೊಸೆದು ಸಂಕಲ್ಪಮಾತ್ರದೆ ಮತ್ತೆಯುಂ ತನ್ನ ದೃಷ್ಟಿಮಾತ್ರದೆ ಲೋಕಮಂ
ಒಸೆದು ಪುಟ್ಟಿಸುವನತಿರಕ್ಷಿಪಂ ಹರಿಸುವಂ
ನಿಸದಮೆಂದಾ ವಾಕ್ಯಮಂ ಕೇಳ ವೈದಿಕನೆ
ಮಸಕದೆ ಸಯಿಾಕ್ಷತೇಮಾನ್ ಎನುತೆ ಲೋಕಾಂಸ್ಪ ಎನುತೆ ನುಡಿಗುಂ ಸಂತತಂ ೪೧

ಹರಿಸುರಜ್ಯೇಷ್ಠಾದಿಗಳ ಜಗಂಗಳನೆಯ್ದೆ
ಭರದೆ ತವಿಸಲ್ ಮರಳಿ ಪುಟ್ಟಿಸಲ್ ಶಿವನೆ ಬಂ
ಧುರದಕ್ಷನೆಂದುಲಿವ ವಾಕ್ಯಂಗಳಂ ಕೇಳ ವೈದಿಕಾಧಮನೆ ನೀನು
ನಿರುತದಿಂ ತ್ವಂ ವಿಶ್ವಭರ್ತಾ ಎನುತ್ತೆ ಮ
ತ್ತಿರದೆ ತವನಾಸ್ತಿ ಭರ್ತಾ ಎನುತ್ತಿಂತು ಭಾ
ಸುರನಾದದಿಂದುಲಿಯುತಿರಲೀ ಜಗಂ ಸ್ವಯಂಭುವದೆಂತು ತಾನಪ್ಪುದು ೪೨

ಮಿನುಪ ಶ್ರುತಿ ಏಕಮೇವಾದ್ವಿತೀಯಂ ಬ್ರಹ್ಮ
ಎನುತೇಕ ಏವ ರುದ್ರೋನದ್ವಿತೀಯಾಯ
ಎನುತೆ ಶಿವ ಏಕ ಏವಧ್ಯೇಯ ಎಂದಿಂತು ಸಾಱಿ ಪೊಗಳುತ್ತುಮಿರಲು
ಎನಸುಮಿಂತೀ ವಾಕ್ಯನಿಕರಂಗಳಿಂದೆ ತೊ
ಟ್ಟನೆ ಜಗತ್ಸೃಷ್ಟ್ಯಾದಿಕಾರಣಂ ಶಿವನೊರ್ವ
ನನುವಿನಿಂದಾಗಿರಲ್ಕೀ ಜಗಂಗಳ್ಗಿಲ್ಲದಂ ಕರ್ತೃ ಬೇಱೊರ್ವನು ೪೩

ಭರದಿನೀ ಜಗಮೆಲ್ಲನಾದಿಯೆಂಬೀ ನುಡಿಯೆ
ಪುರುಳಲ್ಲದೆಂತೆನಲ್ ಕಾರ್ಯತ್ವದಿಂದೆ ಭಾ
ಸುರಕಾರ್ಯಮಾದುದದು ಘಟದಂತನಿತ್ಯತೆಯೊಳೊಂದಿತೋಱುಗುವುನಿಶವು

ಪಿರಿದುಮದು ಕಾರ್ಯತ್ವಮೆಂತಪ್ಪುದೆಂಬೊಡದು
ಕರಮೆ ಸಾವಯವತ್ವದಿಂದೆ ಸಾವಯವತ್ವ
ಮಿರುತಿರ್ಕುಮಾವುದಱೊಳದು ಭಾವಿಸಲ್ ಕಾರ್ಯಮೆಂಬುದಿದು ಸಿದ್ಧಾಂತವು ೪೪

ತವೆ ಜಗಂಗಳನಾದಿಯಲ್ಲದುದಱಿಂದ[1]ಮಿ[1]
ಭುವನದೊಳಗಿರ್ದ ವೇದಂಗಳತಿಭಾವಿಸಲ್
ಪ್ರವರದೈವಂಗಳಲ್ತಾವಗಂ ಶಿವನುತಿಯುಮಾಳ್ಪ ಪಾಠಕರೆನಿಕ್ಕುಂ
ಸವಿನಯದೆ ವೇದಂಗಳವು ದೈವಮಾದೊಡಾ
ಸವಿತೃ ಮೊದಲಾದವರಮೊಲ್ದು ಪೊಗಳ್ದಮೆ ರಾಜಿ
ಸುವ ತಮಾಸುರನಣಲೊಳವಿದಿರ್ಕುಮೇ ಕವಿತೆಗೊಳಗಪ್ಪವೇ ಆಣಿಯರಂ ೪೫

ಘನತರಂ ದೈವಂಗಳಾದೊಡಾ ಶ್ರುತಿಗಳವು
ಮಿನುಪ ಪಕ್ಷಿಯ ಕುಕ್ಷಿಯೊಳ್ ಕ್ಷಯಮನೆಯ್ದುಗುಮೆ
ಮನಮೊಸೆದು ಜನ್ನಮಂ ಮಾಳ್ಪ ದಕ್ಷನ ಶಿರಂ ವಹ್ನಿಗಾಹುತಿಯಪ್ಪುದೆ
ನನಸು ಶುನಕಂಗಳಕ್ಕುಮೆ ಭಾವಿಸಲ್ಕೊರ್ವ
ಮುನಿಯಿಂದೆ ತವಿಸಿ ಬಳಿಕಂ ವ್ಯಾಸನಿಂದೆ ಸಂ
ಜನಿಸಿ ತೋರ್ಕುಮೆ ಮತ್ತಮದಱಿಂದೆ ವೇದಂಗಳವು ದೈವಮಲ್ತು ಸತತಂ ೪೬

ಸದಮಲಪ್ರಚುರವಿಶ್ರುತ ಪರಮಭಕ್ತಗಣ
ಪದಸರೋರುಹಸಾಂದ್ರ ಮಕರಂದಪಾನ ಸ
ಮ್ಮುದಿತ ಚಂಚಚ್ಚಂಚರೀಕನನವರತ ಪಂಚಾಕ್ಷರೀಪ್ರಸಿತಹೃದಯಂ
ವಿದಿತ ಮಂಜುಲನೀಲಕಂಠಾಹ್ವಯಂ ಮನೋ
ಮುದದೆ ಪೇಳ್ದರುತರಾರಾಧ್ಯಚಾರಿತ್ರದೊಳ
ಗಿದು ವಲಂ ವೈದಿಕಸಮಯನಿರಸನಂ ಲೋಕವಿಸರದೊಳ್ ಪರಿಶೋಭಿಕುಂ ೪೭

1 ಲೀ (ಗ)

## ಪದಿನಾರನೆಯ ಸಂಧಿ

### ಕರ್ಮವಾದ ನಿರಸನಂ

ಸೂಚನೆ : ಪರವಾದಿಮುಖಚಂದ್ರರಾಹುಸನ್ನಿಭನೆನಿಪ
ಪರಮಗುರುಪಂಡಿತೇ[1]ಶಂ[1] ಕರ್ಮವಾದಮಂ
ಭರದಿಂ ನಿರಾಕರಿಸಿದುದನಳ್ಕಱಿಂ ಕೇಳ ಸೂರಸಚಿವಾಗ್ರಗಣ್ಯ

ಧೃತಕನಕಸಲಿಲಪಿಂಗಲಜಟಾಮಧ್ಯದೊಳ್
ಸತತಮೊಪ್ಪುವ ದೇವಗಂಗೆಯೊಳ್ ಮಾರ್ಪೊಳೆವ
ಧೃತಖಂಡಶೀತಾಂಶುವಂ ಕಂಡು ನವಮೃಣಾಳಂ ತಾನಿದೆಂದು ಬಗೆದು
ಅತಿಬಾಲಭಾವದಿಂದೆಸೆವ ಕಲಭಾನನನು
ನ್ನತಪುಷ್ಕರಾಸ್ಯದಿಂ ಬೆದಕುತಿರೆ ನೋಡಿ ಗಿರಿ
ಸುತೆಗೆ ಕಣ್ಸನ್ನೆಯಿಂದಱಪಿ ಬಿನದಿಪ ನೀಲಕಂಠನೆಮಗೀಗೆ ಶುಭಮಂ ೧

ವರವೇದಮದು ಕರ್ತೃವಲ್ಲದೊಡೆ [2]ವೇದೋಕ್ತ[2]
ದುರುಕರ್ಮದಿಂದೊಗೆದ ಸತ್ಪುಣ್ಯನಿಕರಮಂ
ಪರತರಸ್ವರ್ಗಾಪವರ್ಗಮಂ ತತ್ಕರ್ತೃವಿಂಗೀವುದಾವುದನಿಶಂ
ಸರಳಕರ್ಮಂ ಪಿಂಗಿಯೆಂಬೆಯಾದೊಡೆ ಕೇಳ
ತರಳವೈದಿಕನೆ ತತ್ಕರ್ಮಮದು ತತ್ಕರ್ತೃ
ಗಿರದಿನಿಸುಫಲಮನೀಯದು ಕರ್ಮವಾದಿಯಾದೈ ನೀಂ ಬಳಿಕ್ಕೆ ನೋಡೆ ೨

ಅದಱಿಂದೆ ನೀಂ ವೇದವಾದಿಯಲ್ತವಿರತಂ
ಪದೆದು ಮತ್ತಂ ಕರ್ಮವೇ ತ[3]ನ್ನ[3] ಫಲಮನಿರ
ದೊದವಿಸುಗುಮೆಂತೆಲೇ ಕರ್ಮವಾದಿಯೆ ನಿನ್ನ ಮತದಭಿಪ್ರಾಯಂಗಳಂ
ಮುದದೆ ಕೇಳ್ ಕರ್ಮಕ್ಕೆ ಕರ್ತೃತ್ವಮಿನಿತಿಲ್ಲ
ವಿದಿತಶಿವನೇ ಕರ್ಮ ಕರ್ತೃ ನಿನ್ನಯ ಮತಂ
ತುದಿಗಸಿದ್ಧಾಂತಮಕ್ಕುಂ ನಿಕ್ಕುವಂ ನಾಡೆಯೊರೆದಪೆವು ನಿನ್ನ ಮತಮಂ ೩

---

[1] ಶ್ವರ (ಕ) [2] ಡೊಕ್ಕ (ಕ) [3] ಮ್ಮ (ಗ)

ಉರುತರಸ್ವರ್ಗಕಾಮೋಯಜೇತೆಂಬ ಬಂ
ಧುರಸೂಕ್ತಿ ನಿನ್ನ ಮತಮಿಂದ್ರಾಯ ಎಂಬ ಸೌಂ
ದರಚತುರ್ಥ್ಯಂ ತಪ ದಮೋ ದೈವಮೆಂದು ಮಿಗೆ ತಾಂ ಸಮೆದ ಕರ್ಮಫಲಮೆ
ಕರಮೆ ತನಗನುಭವಿಸತಕ್ಕುದೆಂದಾ ಕರ್ಮ
ಕಿರದೆ ಕರ್ತೃತ್ವಮುಂ ಕರ್ಮವಾದಿಗಳೊಲ್ದು
ಭರದೆ ನುಡಿವವ್ಯರ್ಥಮದು ಮತ್ತಮಿಂತೆಂಬಿರದುಮಾಗದೆಲ್ಲೆಡೆಯೊಳು ೪

[1]ಪಿರಿದು[1]ಕರ್ಮಮೆ ಶರೀರಾನುಗತಮಾಗಿ ತಾಂ
ಚರಿಯಿಪುದೊ ಕಾಯಮೋ ಕರ್ಮಾನುಗತಮಾಗಿ
ನಿರುತದಿಂ ವರ್ತಿಪುದೊ ತನಗನಾದಿಯೊ ಕರ್ಮಮಿಾ ಕರ್ಮಕಾ ಶರೀರಂ
ಕರಮನಾದಿಯೊ ಕರ್ಮಕಾಯಂಗಳೆರಡುಮತಿ
ಭರದೆ ಜೀವಾತ್ಮನಂ ನೋಡೆಂದು ಸೂಳೊಳಂ
ತಿರದೆಯ್ದುಗುಮೊಯೆಂಬೆಯಾದೊಡದನೆಲೆ ಕರ್ಮವಾದಿ ನೀಂ ಕೇಳ್ ಪೇಳ್ವೆವು ೫

ವಿದಿತಕರ್ಮದ ಲಕ್ಷಣಂಗಳಂ ನೀನಱಿಯೆ
ಯದು [2]ವೆಱಿಂ[2] ಕ್ಷಣಿಕಜಡನಿರ್ಗುಣಂಗಳ್ ಕೂಡೆ
ಪುದಿದು ತೋಱುವ ಕತದಿನಣಿಯರಂ ತತ್ಕರ್ತೃಮಂ ತಾನದೆಂ[3]ತ್ರೈ[3]ದುಗುಂ
ಪದೆದು ತಾಂ ಮಾಡಿದಾ ಕರ್ಮಂಗಳಂ ತಾನೆ
ಮುದದಿಂದಮೆಯ್ದುಗುಂ ಜೀವಾತ್ಮನೆಂಬೊಡವ
ನುದಿತಜಡರೂಪನನುನ್ನತಕರ್ಮವಶನೆಂತುಮೆಯ್ದಲಱಿ[4]ವಂ[4] ಕರ್ಮಮಂ ೬

ಜಗದೊಳಗೆ ತಪ್ಪುಗೆಯ್ದವನೊರ್ವನಣಿಯರಂ
ನೆಗಳ್ದ ತಪ್ಪಿಂಗರ್ಹಮಪ್ಪ ದಂಡಣೆಗಳಂ
ತಗುಳ್ದು ತಾನೇ ತನಗೆ ಮಾಡಿಕೊಂಬನೊ ತಪ್ಪು ತಾನೆ ನಿಗಳಾಕಾರದೆ
ಮಿಗೆ ತಪ್ಪುಗೆಯ್ದವನ ಕಾಲ್ಗಳಂ ಬಂಧಿಪುದೊ
ಸೊಗಸುವಪರಾಧಕ್ಕೆ ತಕ್ಕ ದಂಡಣೆಗಳಂ
ಬಗೆದುಮಾಡಲ್ ನೃಪತಿ ಬೇಱೊರ್ವನುಂಟೊ ಅಂತಾ ಕರ್ಮಕರ್ಮಿಗಳನು ೭

---

1 ವಿದಿತ (ಕ) 2 ತಿರಂ (ಕ) ವೆಯುಂ (ಗ) 3 ದ್ವೈ (ಗ) 4 ಯಂ (ಕ)

ಪಿರಿದು ಸಂಘಟಿಸಲಾ ಕರ್ಮವಶನಲ್ಲದಾ
ಪರಮಸ್ವತಂತ್ರನುರುಸರ್ವೇಶ್ವರಂ ಸರ್ವ
ಭರಿತನೀಶ್ವರನುಗ್ರನನುಪಮಂ ಬೇಱೊರ್ವನುಂಟಾಗಿರಲ್ ಸಂತತಂ
ನಿರುತದಿಂ ಕರ್ಮಕಂ ಕರ್ಮಿಗಂ ಕರ್ತೃತ್ವ
ಮಿರದೆಂತು ಕೈಸಾರ್ಗುಮೆಲೆ ಕರ್ಮವಾದಿಯೇ
ಪಿರಿದುಮಾ ಕರ್ಮಮುಂ ಕರ್ತೃವುಮಚೇತನಂಗಳ್ ತಜ್ಞರೊಸೆದು ನೋಡೆ ೮

ವರಕರ್ಮತನುಗಳಿರವಂ ಕೇಳ ಕರ್ಮದಿಂ
ದುರುಶರೀರಂ ಪುಟ್ಟುಗುಂ ಬಳಿಕೆ ದೇಹದಿಂ
ಪರಮಕರ್ಮಂ ಜನಿಯಿಸುಗುಮಿಂತನಾದಿಯಿಂ ಬೀಜವೃಕ್ಷನ್ಯಾಯದೆ
ನಿರುತಂ ಪ್ರವಾಹಸ್ವರೂಪಮಾಗೀ ಕರ್ಮ
ಶರಿರಂಗಳಿರಡುಮಿಂತೆಸೆದಿರ್ಕುಮಿದನಱಿಯ
ದಿರುತಿರ್ಪ ಕರ್ಮವಾದಿಯೆ ಕರ್ಮತನುಗಳೊಳಗಾವುದಿಲ್ಲಿಯನಾದಿಯು ೯

ಇಂತು ಕರ್ತೃತ್ವಮವಕಿಲ್ಲದಿರೆಯುಂ ಮತ್ತ
ಮಿಂತೆಂಬಯಾ ಪೂರ್ವಮೀಮಾಂಸದೊಳ್ ಪೇಳ್ದ
ನಂತಕರ್ಮಂಗಳುಱಬೇಱ ಬೇಱಾಱು ತೆಱನಾಗಿರ್ಕುಮವು ಭಾವಿಸೆ
ಸಂತತಂ ದರ್ಶದೊಳ್ ಮೂಱುಯಜ್ಞಂಗಳ್ ಸ
ಮಂತು ಪೂರ್ಣಿಮೆಯಲ್ಲಿ ಮೂಱುಯಜ್ಞಂಗಳಾ
ಗಿಂತು ವರ್ತಿಕುಮವನನುಷ್ಠಿಸುತಿರಲ್ಕಾಱುಸಂಸ್ಕಾರತತಿಗಳೊಗೆಗುಂ ೧೦

ಪಿರಿದುಮಾ ಸಂಸ್ಕಾರರೂಪಂಗಳಾದಾಱು
ನಿರುಪಮಾಪೂರ್ವಂಗಳಪ್ಪುವವಪೂರ್ವಮಂ
ಸರಳಪರಮಾಪೂರ್ವಮುಂ ಪುಟ್ಟಿಸುಗುಮದಱನುಱ ವಿಹಿತಮಾದ ಫಲದ
ಶಿರಮೆ ದೈವಮದೃಷ್ಟಕರ್ಮಂಗಳಪ್ಪ ಭಾ
ಸುರಮಪ್ಪ ನಾಮತ್ರಯಂಗಳಿಂದಣೆಯುರಂ
ಪರಮದೇಹಾಂತರಾದಿಗಳೊಳಾ ಕರ್ತೃಗನುಭವಯೋಗ್ಯಫಲವೀವುದು ೧೧

ಎಂದುಮಿಾ ಯುಕ್ತಿ ಲೋಕದೊಳೆಲ್ಲಿಯುಂ ನೋಡೆ
ಚಂದಮೇ ವ್ಯರ್ಥಮೇಕೆಂಬೊಡತಿ ಜಡರೂಪ
ನೊಂದಿ ವರ್ತಿಪ ಕರ್ಮವೆಂತು ದೇಹಾಂತರಾದಿಗಳಲ್ಲಿ ಫಲವೀವುದು

ಸಂದ ಕರ್ಮಫಲಂಗಳಂ ಕುಡುವ ಶಿವನಿಚ್ಛೆ
ಯಿಂದಮಲ್ಲದೆ ಕರ್ಮಮಿನಿತನುಱಿ ತನ್ನಿಚ್ಛೆ
ಯಿಂದೆ ಫಲಮಂ ಕುಡದಚೇತನಂ ತಾನದಾದೊಂದು ದೂಸಱನಾವಗಂ ೧೨

ಇದುಕಾರಣಂ ಕರ್ಮಫಲದಾತೃ ಪರಶಿವನೆ
ಇದನಱಯದೇ ಕರ್ಮವಾದಿ ನೀಂ ಸಡಗರದೆ
ವಿದಿತಕರ್ಮವೆ ತನ್ನ ಫಲಮನಾ ಕರ್ತೃಗೀವುದು ವೆಱಂ ಎಂಬ ವಚನಂ
ಅದು ಬಗೆಯೆ ಸತ್ಯಮಾದೊಡೆ ಭಾಟ್ಟಮುಖ್ಯರೊದ
ವಿದ ಕರ್ಮವಾದಿಗಳ ಜಪತಪೋದಾನಾದಿ
ಸದಮಲಫಲಂಗಳುಂ ವ್ಯರ್ಥಮಕ್ಕುಂ ಕರ್ಮಮದು ಜಡನುಮಾದ ಕತದೆ ೧೩

ಉರುತರಾಚೇತನ ರಥಾದಿಗಳ್ ಪೊಡವಿಯೊಳ್
ಚರಿಸಲಱಯವು ಚೇತನ ಪ್ರೇರಣತೆಯಿಲ್ಲ
ದಿರಲಂತೆವೋಲಚೇತನಕರ್ಮಮದು ಭಾಟ್ಟ ಬೌದ್ಧ ಜೈನಾದಿಗಳ್ಗೆ
ವರತಪೋದಾನಧರ್ಮಾದಿ ಫಲನಿಕರಮಂ
ಪಿರಿದೀಯದಜಡನೀಶ್ವರನಿಚ್ಛೆಯಿಲ್ಲದೇ
ನಿರುತಮಿದು ಕರ್ಮವೇ ತತ್ಫಲಂಗುಡಲಱಯದೆಲ್ಲಿಯುಂ ಭಾವಿಸುವೊಡೆ ೧೪

ಪುಷ್ಟಿವರ್ಧನಭೂತಭೋಜನಕ್ರಿಯೆಗಳಿಂ
ಪುಷ್ಟಿವರ್ಧನಮಾಗದೇ ಮರಣಮೆಯ್ದುವುದು
ದೃಷ್ಟಮೆಂತೆನೆ ನೋಡು ಶಿಷ್ಟಾನ್ನಮಾದೊಡಂ ದುಷ್ಟಪ್ರಯೋಗದಿಂದೆ
ಕ್ಲಿಷ್ಟ ಹಾಲಾಹಲಮದಾಗಿ ಸಲೆ ಮರಣಮಂ
ಪುಷ್ಟಿಯುಂ ತೊಲಗಿಸುತ್ತೀಯುತ್ತಿತದೆ ಭಾವಿಸಲ್
ಕಷ್ಟಕರ್ಮಂ ತನ್ನ ಫಲಮನೆಂತೀಯ್ವುದೋ ಫಲದಾತೃ ಶಿವನ ತೊಲಗಿ ೧೫

ಇದುಕಾರಣಂ ಸರ್ವಗತನಾದ ಪರಶಿವಂ
ಮುದದೆ ತತ್ಕರ್ಮಕನುಸಾರೂಪಫಲವೀವ
[1]ನಿ[1]ದು ನಿಕ್ಕುಮಂ ಕರ್ಮಕೆಲ್ಲಿಯುಂ ಕರ್ತೃತ್ವಮಿಲ್ಲ ಪರಿಭಾವಿಸುವೊಡೆ
ಮುದದಿಂ ಮಹೇಂದ್ರಾಯ ಚಂದ್ರಾಯ ಎಂಬ ಸಂ
ವಿದಿತಮಂತ್ರಂಗಳಿಂ ಸ್ವಾಹಾಂತಮಾದವಱ
ನೊದಗಿ ಬೇಳಲ್ಪಟ್ಟ ಭಸ್ಮಮಾದಾ ಹವಿಸ್ಸಿಂದ ಪೂರ್ವಂ ಜನಿಯಿಸಿ ೧೬

---

1 ವಿ (ಕ)

ಸಂತತಂ ಸ್ವರ್ಗಾದಿ ಫಲನಿಕರ[1]ಮಂ ತಾನ[1]
ದೆಂತೀವುದಂತೆ ಕಾಲಾಂತರದೊಳಾ ಕರ್ಮ
ಮುಂ ತ[2]ನ್ನ[2] ಫಲಮೀವುದೆಂಬುದದು ಸೊಗಸಾಗಲಱಿಯದೀ ಲೋಕದೊಳಗೆ
ಎಂತೆನಲ್ ಸಿರಿಯಾಳನುರುವ ಮಗನಂ ಕೊಂದು
ಮುಂತೆ ಕಾಲಾಂತರದೊಳೆಯ್ದನೇ ಶಿವಪುರಮ
ನಂತಕಾಂತಕ ಶಿವಪ್ರೇರಣೆಯಿನಾ ಕರ್ಮಮೆಯ್ದುಗುಂ ತತ್ಕರ್ಮಿಯಂ ೧೭

ಎಂತೆನಲ್ ಕರ್ಮಮಭವಪ್ರೇರಣೆಯ ತೊಲಗಿ
ಮುಂತೆ ಕರ್ಮಿಗೆ ಶುಭಾಶುಭಮಪ್ಪ ಕರ್ಮಫಲ
ಮಂ ತಗುಳ್ದು ತಾನೆ ಕುಡಲಱಿಯದೆಂದುಂ ಜಡಂ ಪ್ರಾಣಿ ತಾನೊಲ್ದು ಸಮೆದ
ಕಾಂತ ಶುಭಮಶುಭಮಾದಾ ಕರ್ಮಕೊಡೆಯನ
ಲ್ತುಂತೆ ಸರ್ವೇಶ್ವರಪ್ರೇರಿತನುಮಾಗಿ ತಾಂ
ಸಂತತಂ ನಾಕನರಕಂಗಳೊಳ್ ಚರಿಯಿಸುವನೆಂಬ ಶ್ರುತಿಯುಂಟಾಗಿರೆ ೧೮

ಒಸೆದುಕೇಳೀಶ್ವರಪ್ರೇರಿತೋಗಚ್ಛೇದೆ
ನಿಸಿ ಮೆಱೆವ ವಚನಪ್ರಮಾಣದಿಂ ಭಾವಿಸಲ್
ಮಿಸುಪಕರ್ಮಂ ಕಲ್ಪಕೋಟಿಯಿಂದುಂಡಲ್ಲದಳಿಯದೆಂಬೀ ವಚನವು
ನಸಿದು ಪೋಪುದದೆಂತೆನಲ್ ಬ್ರಹ್ಮಪುತ್ರನಾ
ದಸಮ ದಕ್ಷಪ್ರಜಾಪತಿ ಮಾಳ್ಪ ಜನ್ನಮದು
ಮಸಕದಿಂ ತನ್ನ ಫಲಮಂ ಕುಡದೆ ವಿಪರೀತಫಲಮನೊಸೆದಿತ್ತ ಕತದೆ ೧೯

ಬಗೆದು ಕೇಳ್ ಜನ್ನಮದು ಸಾಮಗ್ರಿವಿಕಲದಿಂ
ವಿಗತಫಲಮಾದುದೆಂಬೊಡಮಧ್ವರಂ ನೋಡೆ
ಮಿಗೆ ಅಶ್ವಮೇಧಮದು ಯಜಮಾನನಾ ದಕ್ಷನಸುರಾರಿಮುಖರಕ್ಷಕಂ
ನೆಗಳ್ದಿಂದ್ರಮುಖ್ಯ ವಿಬುಧರೆ ಯಜ್ಞಭಾಗಮಂ
ಸೊಗಸಿನಿಂ ಸ್ವೀಕರಿಸುತಿರ್ಪವರ್ ಸಲೆಸಂದ
ಸುಗುಡ ಋತ್ವಿಕ್ಕುಗಳೆ ಋಷಿಗಳೆನೆ ಸಾಮಗ್ರಿಯಿದಱಿಂದೆ [3]ಮೊದ[3]ಲಾವುದೊ ೨೦

ಇಂತೊದಗಿಸಲ್ಪಟ್ಟ ಸಾಮಗ್ರಿಯಿಂ ಮಾಳ್ಪ
ನಂತಸುಖಮೀವ ಮಖಕರ್ಮಮದು ದಕ್ಷಂಗ
ದೆಂ[4]ತೊ[4] ತನ್ನಯೆ ಮಹತ್ಪುಣ್ಯಫಲಮೀಯದೇ ತಲೆಗೆ ಮಾರಿಯನಿತ್ತುದು

---

[1] ದಿಂ ಮುನ್ನ (ಗ) [2] ನ್ನು (ಕ) [3] ಮೇ (ಗ) [4] ತು (ಗ)

ಸಂತತೇಷ್ಟಾಧ್ವರಶತಂಗಳಿಂ ಸತ್ಪುಣ್ಯ
ಮಂ ತಗುಳ್ದು ಸಮೆದೊಡಂ ಶಿವನೊಡೆಯನಲ್ಲದಿರೆ
ಮುಂತಾ ಫಲಂಗಳಂ ತತ್ಕರ್ತೃವೆಯ್ದನಿದು ಸಂದ ಡಂಗುರಮುಭವನ ೨೧

ಬಗೆದು ಕೇಳಿದು ವಾಯವೀಯಸಂಹಿತೆಯಲ್ಲಿ
ಸೊಗಸಾಗಿ ಪೇಳ್ದ ವಚನಂ ತಾನದೆಂತೆನಲ್
ತಗುಳ್ದಹೋ ವಿಧಿವಿಪರ್ಯಾಸಮೆನುತಶ್ವಮೇಧೋಯಮಧ್ವರಮೆನುತ್ತೆ
ನೆಗಳ್ದ ಯಜಮಾನ ಸ್ವಯಂದಕ್ಷ ಎನುತೆ ತೊ
ಟ್ಟಗೆ ಬ್ರಹ್ಮಪುತ್ರ ಪ್ರಜಾಪತಿಃ ಎನುತೆ ಘ
ಮ್ಮಗೆ ಬೊಬ್ಬಿಡುತ್ತಿರ್ಕುಮಿದನಱಿಯದುಂತೆ ಕರ್ಮವೆ ಕರ್ತೃವೆನುತಿರ್ಪರಿ ೨೨

ಬಱಿಯ ಕರ್ಮಕ್ಕೆ ಮಿಗೆ ಕರ್ತೃತ್ವಮುಂಟಾದೊ
ಡುಱುವ ದಕ್ಷನ ಪುಣ್ಯಮುಖಫಲಮದೇತರ್ಕೆ
ತಱಿಸಂದು ಕೈಸಾರಿತಿಲ್ಲಿದಂ ಕಂಡು ಬಳಿಕಂ ಮನಂ ಪೆಳಱಿದೆಲವೊ
ಮೀಱುಪ ಕರ್ಮಮೆ ತನ್ನ ಫಲಕರ್ತೃವೆಂದೀತು
ತೆಱನನಱಿಯದೆ ನಾಲಗುಂಟೆಂದು ಸಂತತಂ
ಜಱಿಚುಪ್ಪೆ ಕೇಳ್ ಕರ್ಮಕೆಲ್ಲಿಯುಂ ಕರ್ತೃತ್ವಮಿಲ್ಲ[1]ದು[1]ದನಳ್ಕಱಿಂದಂ ೨೩

ಪರಮಚಂಡೇಶ್ವರನೆನಿಪ ಪಾರ್ವನೊರ್ವನುರು
ತರ ಭಕ್ತನಗಜೇಶಪೂಜೆಗೆಯ್ವವಸರದೊ
ಳಿರದೆ ತನ್ನಯ ಪಿತಂ ಸದ್ಬ್ರಾಹ್ಮಣಂ ಶಿವದ್ರೋಹಮಂ ಮಾಡಲವನ
ಶಿರಮನುಱೆ ತಱಿದಿಟ್ಟು ಮನುಜತ್ವಮಂ ಬಿಟ್ಟು
ಸುರುಚಿರಪ್ರಮಥಪದವಿಯನೆಯ್ದುವಲ್ಲಿ ಬಂ
ಧುರಪಾಪಕರ್ಮಫಲವೆಲ್ಲಿತ್ತೊ ತತ್ಫಲಮನೀಯದೆಲೆ ಕರ್ಮವಾದಿ ೨೪

ಇದುಕಾರಣಂ ಪುಣ್ಯಪಾಪಕರ್ಮಂಗಳೊದ
ವಿದ ತಮ್ಮ ಫಲಮನೀಯಲ್ ಸಮರ್ಥಂಗಳ
ಲ್ಲಿದು ನೋಡೆ ಸತ್ಯಮೀಶ್ವರರಹಿತಪುಣ್ಯಫಲಮದು ಪಾಪಫಲಮೀವುದು
ಮದನಾರಿಯಂ ಕುಱಿತು ಸಮೆದ ಪಾಪಂ ಪುಣ್ಯ
ಮದೆನಿಕ್ಕುಮ[2]ದು[2] ನಿಕ್ಕುಮಂ ಕೇಳಿದರ್ಕೀಶ
ಗದಿತ ವಾಕ್ಯಂ ಮಾಮನಾದೃತ್ಯಯತ್ಪುಣ್ಯಮೇನುತೊಸೆದು ಸಾಱುತಿರ್ಕುಂ ೨೫

1 ಮ (ಕ) 2 ದೆ (ಗ)

ಮಗುಳ್ದು ಕೇಳೊಲ್ದುಪಕ್ರಮಿಪ ಕರ್ಮಂಗಳ್ಗೆ
ನೆಗಳ್ದೀಶ್ವರನೆ ಕರ್ತೃವೆಂದು ವೇದಂಗಳುಂ
ಸೊಗಯಿಸುವ ನಾನಾಪುರಾಣವಚನಂಗಳುಂ ತರ್ಜನಿಯನೆತ್ತಿ ಮುದದೆ
ಮಿಗೆಘೋಷಿಸುತ್ತಿರಲ್ಕೀ ಪ್ರಮಾಣಂಗಳಿಂ
ತಗುಳ್ದಿಲ್ಲ ಕರ್ಮಕ್ಕೆ ಶಿವನೊಡೆಯನಾಗಿರ
ಲ್ಬಗೆದು ನೋಡಲ್ಕತ್ತೆ ಬಱಗರ್ಮಕೆಲ್ಲಿತ್ತೊ ಕರ್ತೃತ್ವಮಿದು ಚೋದ್ಯವು ೨೬

ಪಿರಿದು ಯಜ್ಞಾರಂಭದೊಳೆ ರುದ್ರ[1]ನೊ[1]ಡಗೂಡಿ
ದುರುತರಾಗ್ನಿಗೆ ಪುರೋಡಾಶನಂ ಭಾವಿಸಲ್
ನಿರುತಮಷ್ಟಕಪಾಲದಲ್ಲಿ[2]ರಿಪು[2]ದೆಂಬ ನಿರ್ಮಲ ಯಜುರ್ವೇದೋಕ್ತಿಯು
ಇರದೆ ಕೇಳಧಿಕೃತ್ಯ ಅಗ್ನಯೇ ಎಂದು ಮ
ತ್ತಿರದೆ ರುದ್ರವತೇ ಪುರೋಡಾಶ ಎಂದು ನಿ
ರ್ಭರದಿಂದೆ ಸಾಱುಗುಂ ಮತ್ತೆಯುಂ ಕೇಳಗ್ನಿಗಧಿಪನೀಶ್ವರನೆಂಬುದಂ ೨೭

. ಮತ್ತಮಾ ವೇದದೊಳೆ ಯಜ್ಞಾನುವಾಕ್ಯದೊಳ
ಗುತ್ತಮಾಗ್ನಿಯೆ ನಿನಗೆ ರುದ್ರನೇ ರಕ್ಷಕಂ
ಮತ್ತೆ ನೀನೊಡೆಯನಾ ಮುಖಕೆಂದು ಬೊಬ್ಬಿಡುತ್ತಿರ್ಪುದನೊಲ್ದು ನೀನು
ಬಿತ್ತರದೆ ಕೇಳಭವ ತಸ್ತ್ವಮಗ್ನೇ ಎಂದು
ಮತ್ತೆಯುಂ ರುದ್ರ ಆವೋ ಎನುತ್ತಾಮಗಂ
ಸುತ್ತೆನೋ ರಾಜಾನಮೆಂದಿಂತು ರುದ್ರನೇ ಅಧಿದೈವ[3]ವ[3]ಗ್ನಿಗೆನುತಂ ೨೮

ತನಗಧಿಪನಾದ ರುದ್ರನ ತೊಲಗಿ ಹೋಮಾಗ್ನಿ
ಯಿನಿತುಮಾಹುತಿಗೊ[4]ಳಲ್[4] ಶಕ್ತನಲ್ಲದಱಿಂದೆ
ಮನಸಿಜಾಂತಕರಹಿತಮಾದ ಬಱಯಗ್ನಿಯೊಳ್ ಬೇಳ್ದ ಸಾಧನಸಮೂಹಂ
ಅನಿತೆಲ್ಲವುಂ ಕಿರ್ಚಿನೊಳ್ ಬೆಂದ ವಸ್ತುವಂ
ತೆನಸುವಫಲಂಗಳಾಗಿರ್ಪುದದಱಿಂದೆ ತೊ
ಟ್ಟನೆ ಶಂಭುವಂ ಪಿಂಗಿ ಬಱಗನ್ಮವೆಲ್ಲಿಯುಂ ತತ್ಫಲಕೆ ಕರ್ತೃವಲ್ತು ೨೯

ಲಲಿತಕರ್ಮಂ ಕರ್ಮತತ್ಪರರ್ಗೆ ನಾಡೆ ತ
ತ್ಫಲಮನೀವುದು ಸತ್ಯಮೆಂದು ಮತ್ತಂ ಬಱದೆ
ಪಲವುಯುಕ್ತಿಗಳಿಂದೆ [5]ಜಱು[5]ಚುವೊಡೆ ಕೇಳದರ್ಕೆಯ್ದೆ ದೃಷ್ಟಾಂತಂಗಳಂ

---

[1] ರೊ (ಕ) [2] ಪ್ಪು (ಕ) [3] ಮ (ಗ) [4] ಳ್ಳ (ಗ) [5] ದಱ (ಗ)

ನಲವಿನಿಂ ಭೂಸುರೋತ್ತಮನ ಪಥೆಗೆಯ್ದು ನಿ
ರ್ಮಲಶಿವನ ಗರ್ಭವುಂ ಶರಣನರ್ಯಮನರಾಜ
ನೊಲವಿನಿಂ ಪುಗುಸಂದು ತತ್ಕರ್ಮಫಲವೆಲ್ಲಿ ನೋಡ ಮರಣಂಬೆತ್ತುದೊ ೩೦

ಮನುಜರೊಳಗೆನೊರ್ವನುನ್ನತಶ್ರೈವಸಂಪನ್ನ
ನನಘನೀ ಭೂಮಿಯೊಳ್ ಶಿಶುವಧೆಯ ಮಾಡಿ ನಿಜ
ತನುವೆರಸಿ ಕೈಲಾಸಗಿರಿಗೆ ಪೋಪಾಗಳಾ ಕರ್ಮಫಲವೇಗೆಯ್ದು[1]ದು[1]
ಅನವರತವಿಂತನಂತರ್ ಶಿವನಿಮಿತ್ತಮಂ
ತನುಪಮಪಥಾಕ್ರಿಯೆಗಳಂ ನಿಮಿರ್ಚುತ್ತುಮಿಾ
ಶನ ಪುರಕೆ ವಪುವೆರಸಿ ಪೋದರಂ ತತ್ಕರ್ಮಫಲವೇಕೆ ಬಳಿವಿಡಿಯದೊ ೩೧

ಕಱಗೊರಲನಂ ಕುಱತು ಸವೆದ ಪಾಪಂಗಳೇ
ಉಱುವ ಪುಣ್ಯಂಗಳಾಗಿಂತು [2]ಮೆಱೆದುವು ನೋಡ[2]
ಪೆಱದಲೆಯನಂ ತೊಲಗಿ ಸವೆದ ಪಾಪದ ಫಲಕೆ ಬಂದ ದುರ್ಗತಿಯ ಕೇಳು
ತಱಸಂದ ವಿಷ್ಣು ನಿರ್ಜರರ್ಗೆ ಹಿತಮಾಗಿ ಜತಿ
ಯೆಱಯುನೆನಿಸುವ ಭೃಗುವ ಸತಿಯ ಶಿರವುಂ ನಾಡೆ
ತಱದ ಕರ್ಮಂ ದಶಭವಂಗಳೊಳ್ ಕಷ್ಟಯೋನಿಗಳಲ್ಲಿ ಪುಟ್ಟಿಸಿತ್ತು ೩೨

ಪೊಡೆಯುಲರಸಂದು ಬಾಲಿಯ ಕೊಂದ ಕರ್ಮವದು
ಪೊಡವಿಯಱಯಲ್ ತನ್ನ ಕೃಷ್ಣಾವತಾರದೊಳ್
ಬಿಡದೆ [3]ಚಿನ್ನಂಜರಕನೆಂಬ ಬಿಯದನ ಬಾಣದಿಂದೆ ಕೊಲಿಸುತ್ತೆ ಮತ್ತೆ
ಸಡಗರದೆ ಬಲಿಯ ಬಂಧಂಗೆಯ್ದ ಕರ್ಮವದು
ನಿಡಿದಾದ ನಾಗರಜ್ಜುವಿನಿಂದ ಬಂಧಿಸಿ
ತ್ತೊಡನೆ ಕೌರವರ ಕೊಲಿಸಿದ ಕರ್ಮವದು ತನ್ನ ಯಾದವರನುಱ ಕೊಲಿಸಿತು ೩೩

ಮುನ್ನೆ ಪರ್ವತನಾರದರ ಮನೋರಮೆಯಪ್ಪ
ಕನ್ನೆಯಂ ಬಲ್ಮೆಯಿಂದ್ಧೀಳ್ದುಕೊಂಡಾ ಕರ್ಮ
ದುನ್ನತಫಲಂ ತನ್ನ ಕುಲವಧೂ ಸೀತೆಯಂ ರಾವಣಂಗೊಪ್ಪಿಸಿತ್ತು
ಇನ್ನೆ ಮತ್ತಿನ ದೇವದಾನವರ ಕೊಱಚಾಡಿ
ನನ್ನಿಯಿಂ ಕಾಡದಿರ್ಪುದೆ ನಾಡೆ ಭಾವಿಸಲ್
ಪನ್ನಗಾಭರಣರಹಿತಂ ಕರ್ಮಮಾವಗಂ ಮೂಜಗದೊಳಿದು ಸಿದ್ಧವು ೩೪

---

1 ಗು (ಕ) 2 ನೋಡೆಮೆಱದುವು (ಗ) 3 ಲೆ (ಗ)

ಮಗುಳ್ದು ಕೇಳ್ ಕರ್ಮಂ ಸ್ವತಂತ್ರಮಲ್ತೆಂತೆನಲ್
ನೆಗಳ್ದಧಮಮಧ್ಯಮೋತ್ತಮ ಲಸತ್ಕ್ರಿಯೆಗಳಿಂ
ತಗುಳ್ದಾವಗಂ ವಿಧಿನಿಷೇಧಕರ್ಮಂಗಳಂ ಸಮೆದ ಜೀವಾತ್ಮತತಿಗೆ
ನೆಗಳ್ದ ತರತಮಭಾವದಿಂ ಪುಣ್ಯಪಾಪಂಗ
ಳಗಲದನುಭವಿಸಲ್ಕೆ ನಾಕನರಕಂಗಳಂ
ಪುಗಿಸಿ ತತ್ತತ್ಕರ್ಮಫಲವನೀವಂ ಕರ್ಮಕರ್ತೃ ನಿಷ್ಕರ್ಮಶಿವನು ೩೫

ಕರ್ಮಕ್ಕೆ ಕರ್ತೃವೀಶ್ವರನಾದೊಡಂ ಮತ್ತೆ
ಕರ್ಮವೀಶ್ವರನಾಜ್ಞೆಯಿಂ ಪಶುವನೆ[2]ಯ್ದುವೊ[2]ಡೆ
ಕರ್ಮಾಧಿಪತಿಯಪ್ಪ ಪರಶಿವನನೇತರ್ಕೆ ಕೊಱಚಾಡಿ ಕಾಡಿತಂದು
ಧರ್ಮನೈದನೆಯ ಪೋಲ್ದಲೆಯ ಕಿಳ್ತರ್ಕಿದಾ
ಕರ್ಮವೆಂ[1]ಬೊ[1]ಡೆ ಕೇಳ ಕರ್ಮವಾದಿಯೆ ಮತ್ತೆ
ಕರ್ಮರಹಿತನನಭವನಂ ಬ್ರಹ್ಮಶಿರಮರಿದ ಕರ್ಮವೆಯ್ದದು ಭಾವಿಸೆ ೩೬

ವಿನಯದಿಂ ಕೇಳ್ ಬ್ರಹ್ಮಹಿಂಸೆಯಿಂದೀಶಂಗೆ
ಮಿನುಪ ಕರ್ಮಂ ಸಾರ್ದುದೆಂಬರಜ್ಞರ್ ನೋಡ
ಲನುಪಮಂ ಶಿವನೊರ್ವನೇ ಬ್ರಾಹ್ಮಣಂ ಪಿತಾಮಹನುಂತೆ ವೈಶ್ಯನೆಂದು
ಮನವೊಸೆದು ಶ್ರುತಿ ಪೇಳುತಿರಲವಂ ಬ್ರಾಹ್ಮಣಂ
ನನಸಲ್ತ್ರದಂತಿರ್ಕೆ ವೈಶ್ಯನಂ ದುಷ್ಟನಂ
ಮುನಿದುಕೊಂದುದಱಿಂದೆ ಬೊಮ್ಮೆತಿಯೆಲ್ಲಿತ್ತೊ ದುಷ್ಟನಿಗ್ರಹಮುಚಿತವು ೩೭

ಹ[2]ರಿಸ[2]ದಿಂದಂ ಮುನ್ನೆ ಯಕ್ಷ ಗಂಧರ್ವ ಕಿ
ನ್ನರರಮರ ಕಿಂಪುರುಷ ಸಿದ್ಧವಿದ್ಯಾಧರರ್
ನೆರೆದು ತಮ್ಮೊಳ್ ಬ್ರಹ್ಮವಾದಮನೊಡರ್ಚುತದಱರಮನಱಿಯದೆ ಬಳಲುತೆ
ಪರಮೇಷ್ಠಿಯಿರ್ದೆಡೆಗೆ ಪೋಗಿ ತಾನೆಲ್ಲರುಂ
ಕರಕಮಲಮಂ ಮುಗಿದು ಬೊಮ್ಮದಿರವಂ ಎಮಗೆ
ಪಿರಿದುತಿಳಿವಂತೆ ಪೇಳಲ್ವೇಳ್ಕುಮೆನೆ ರಜೋಗುಣದಹಂಕಾರದಿಂದೆ ೩೮

ಮಿಗೆ ಋತಂ ಸತ್ಯಂ ಪರಬ್ರಹ್ಮ ಎಂದು ಚ
ಕ್ಕಗೆ ತತ್ಪರಂ ಬ್ರಹ್ಮ ಎನೆ ವಿಭಾತಿ ಎನುತ್ತೆ
ಬಗೆ ಬ್ರಾಹ್ಮಣಾಧಿಪತಿಯೆಂದುಱದೆ ತತ್ಪರಂ ಬ್ರಹ್ಮ ಎಂದತಿಮುದದೊಳು

---

1 ದೊ (ಕ) 2 ರುಷ (ಗ)

ನೆಗಳ್ದ ಶ್ರುತಿನಿಕರಮೆಲ್ಲಂ ಶಿವನನೇ ಕುಱಿತು
ಸೊಗಸಿನಿಂದಂ ಪರಬ್ರಹ್ಮವೆಂದಾವಗಂ
ಪೊಗಳುತಿರೆ ಮೆಯ್ಮಱೆದವಂ ತಾನೆ ಪರಬೊಮ್ಮವೆಂದವರ್ಗೆ ಪೇಳಲೊಡನೆ ೩೯

ಸುರವರ್ತ್ಮದಲ್ಲಿ ದೇದೀಪ್ಯಮಾನಂಬೆತ್ತ
ಪರಮತೇಜಃಪುಂಜ ಮಂಜುಲಾಕಾರಮುರು
ತರಭವ್ಯಲೀಲಾವಿಲೋಲಶೀಲಂ ದುಷ್ಟನಿಗ್ರಹಂಮಾಳ್ಪ ಶಿವನು
ನಿರುಪಮಂ ವಿಸ್ಫುಲಿಂಗೋತ್ಕೀರ್ಣಲಿಂಗ[1]ಮು[1]
ಬ್ಬರಿಸಿ ಸನೆಯಲ್ ತಕ್ಷಣಂ ಭೀಷಣಾಕಾರ
ಮರಿಗರ್ವಕೋಲಾಹಲಂ ಕಾಲರುದ್ರನತಿರೋಷದಿಂದೆಯ್ದೆವಂದು ೪೦

ಉಗುರ್ಗೊನೆಯಿನಾ ಸುರಜ್ಯೇಷ್ಠ ಶಿರವರಿಯೆ ನಾ
ಲ್ಮೊಗನತಿಭಯಾತುರದೆ ಹಮ್ಮದಂಬೋಗಿ ಘ
ಮ್ಮಗೆ ತಿಳಿದು ಓಂ ನಮೋ ದೇವಾಯ ದೇವ್ಯೈ ನಮಃ ಎಂದು ಭಕ್ತಿಯಿಂದೆ
ಸೊಗಸಾಗಿ ಸೋಮಾಷ್ಟಕದೆ ನುತಿಸಿ ನಮಿಸುತ್ತೆ
ಗಗನಕಚ ಸರ್ವೇಶ ಪರಮೇಶ್ವರಾ ಎನ್ನ
ಬಗೆಗೊಡೆಯ ಪರಮಭಟ್ಟಾರಕ ಪರಬ್ರಹ್ಮ ಪರಮಕರುಣಾಂಬುನಿಧಿಯೆ ೪೧

ಎಂದಿಂತು ಕೀರ್ತಿಸುತೆ ದೇವದೇವಾ ಎನ್ನ
ಮಂದಮತಿಯಂ ತೀರ್ಚಿದಿರಿಮೊಳ್ಪಿತಾಯ್ತೆದುಂ
ಚಂದವೊಡೆವಂತಿದಂ ಧರಿಸಿಮೆನಲಾ ಸುರಜ್ಯೇಷ್ಠನೊಳ್ನುಡಿಗೆ ಮೆಚ್ಚಿ
ಅಂದುರುವ ಕಾಲರುದ್ರಂ ತಚ್ಛಿರಂ ಧರಿಸಿ
[2]ಸಂ[2]ದ ವೃಂದಾರಕರ ಗರ್ವಪರ್ವತಮನಾ
ನಿಂದೊಱಸಿದಪನೆಂದು ಭಿಕ್ಷಾಟನಕ್ಕೆಯ್ದಿದುದಱಿಂದೆ ದೋಷಮುಂಟೆ ೪೨

ಇರದಿದಂ ದೋಷಮೆಂದೆಲೆ ಕರ್ಮವಾದಿ ನೀಂ
ಭರದೆ ನುಡಿಯದಿರೊಸೆದು ದುಷ್ಟನಂ ಶಿಕ್ಷಿಪುದು
ಕರಮೆ ಯೋಗ್ಯಮದೆಂತೆನಲ್ ಭೂಮಿಯೊಳ್ ಭೂಪನತಿಕಷ್ಟದುರ್ಜನರ್ಗೆ
ಪಿರಿದು ಶಿಕ್ಷೆಯನೊಡರ್ಚುತೆ ಲೋಕಮಂ ಪೊರೆಯ
ಲುರುಪುಣ್ಯಮಲ್ಲದೇ ದೋಷಸಾಧನಮಲ್ಲ
ದಿರುತಿರ್ಕುಮಂತೆ ಶಿಕ್ಷಾಯೋಗ್ಯನಂ ಶಿಕ್ಷಿಸಿದೊಡೆ ದೋಷಂ ಪೊರ್ದ[3]ದ[3] ೪೩

---

[1] ಮು (ಟ) [2] ಬಂ (ಕ) [3] ವು (ಗ)

23

ಮಂಗುಳೆ ಕೇಳ್ ಪೌಲಸ್ತ್ಯನಪ್ಪ ರಾವಣವಧೆಯಿ
ನೊಗೆದ ಕರ್ಮಂ ರಾಮನಂ ಕಾಡಿದಂತೆ ನಾ
ಲ್ಮೊಗನ ಕೊಲೆಯಿಂ ಶಿವನನಂಡಲೆದುದುಂಟೆ ಕರ್ಮಂ ನೋಡಲಾವೆಡೆಯೊಳು
ನೆಗಳ್ದ ಸಿರಿರಾಮನಂ ರಾವಣನ ಕೊಲೆಯಿಂದೆ
ತಗುಳ್ದು ಬೊನ್ಮೆ್ರತಿ ಬೆನ್ನಂಬಿಡದಿರಲ್ಕವಂ
ಸುಗಿದದರ್ಕೆಯ್ದೆ ಪ್ರಾಯಶ್ಚಿತ್ತಮಂ ಮಾಡಲದಱಿನದು ತವಿಸದಿರಲು ೪೪

ಮುದವಱಿತು ರಾಮನಾ ರಾವಣನ ವಧೆಯಿಂದ
ಮೊದವಿದಘನಿರ್ಹರಣಮಾರ್ಗಮಂ ಕಾಣದಿರೆ
ಪಡೆದು ಪರಮೇಶ್ವರಂ ಶಂಭು ಪೌರಾಣಿಕಾಹ್ವಯದಿನವನಿದಿರೊಳೊಸೆದು
ಪುದಿದ ದೋಷಂ ನಿನಗೆ ಲಿಂಗಪ್ರತಿಷ್ಠೆಯಿಂ
ದದವಳಲ ನೀಗಿ ಪೈಸರಿಸಿ ಪೋಕುಮೆನಲ್ಕೆ
ಸದಮಲಜ್ಞಾನಮುಳ್ಳಲರ್ದು ರಾಮಂ ಭರದಿನಾ ನುಡಿಯ ಮನದೆಗೊಂಡು ೪೫

ಉರುಗಂಧಮಾದನಾಚಲಮಾದಿಯಾಗಿ ಮ
ತ್ತಿರದಾ ಧನುಷ್ಕೋಟಿ ಮುಟ್ಟೆ ಶಿವಲಿಂಗಮಂ
ಪರಿತೋಷದಿಂದಂ ಪ್ರತಿಷ್ಠೆಯಂ ಮಾಡಿ ರಾಮೇಶ್ವರಂ ಲಿಂಗಮೆಂದು
ಹ[1]ರಿಸ[1]ದಿಂ ಪೆಸರ್ಗರೆದು ತವಕದಿಂ ಪೂಜಿಸುತೆ
ಪಿರಿದು ಸಾ[2]ತ್ವಿ[2]ಕಭಾವದಿಂ ಕೀರ್ತಿಸುತ್ತುಮಿಂ
ತರರೆ ಭೂಮಿಯೊಳೊಲ್ದು ರಾಮನಾ ರಾಮೇಶಲಿಂಗಮಂ ಪೂಜೆಗೆಯ್ದು ೪೬

ವರ ಪುಲಸ್ತ್ಯಬ್ರಹ್ಮಸುತನಾದ ರಾವಣನ
ನಿರದೆ ಕೊಂದಿಕ್ಕಿದುನ್ನತ ದೋಷಮಂ ನಾಡೆ
ಪರಿಹರಿಸಿಕೊಂಡಂತೆ ಶ್ರೀಮನ್ಮಹಾದೇವನೀಶ್ವರಂ ಶಂಭು ಶಿವನು
ಪರಮದೇವಾಧಿದೇವಂ ದೇವಕುಲತಿಲಕ
ನುರುದೇವವೇಶ್ಯಾಭುಜಂಗನನಘಂ ಮಹೇ
ಶ್ವರನಂತಕಾಂತಕಂ ದೇವತತಿ ಸಾರ್ವಭೌಮಂ ದಕ್ಷಮುಖಹರಣನು ೪೭

ನೋಡಲೀ ಭೂಮಿಯೊಳಗಾವೆಡೆಯೊಳಾದೊಡಂ
ಗಾಡಿಮಿಗೆ ಪರಮೇಶ್ವರೇಶ್ವರಂ ಎಂದು ನೆಱೆ
ರೂಢಿಸಿದ ನಾಮಂಗಳಿಂದೆ ಪರಮೇಶ್ವರಂ ಲಿಂಗಪ್ರತಿಷ್ಠೆಗೆಯ್ದು

---

[1] ರುಷ (ಗ)   [2] ಕ್ಷಿ (ಕ)

ನಾಡೆ ಬರ್ಮನ ತಲೆಯನರಿದ ದೋಷಮನಾಗ
ಳೀಡಾಡಿದೆಡೆಯುಂಟೆ ಪೇಳ್ ಕರ್ಮವಾದಿ ನೀಂ
ನಾಡಗಾವಿಲನರ್ಥಮಕರ್ಮಪ್ರಬದ್ಧಕಂ ಸನ್ಮಾರ್ಗವರ್ಗದೂರಂ ೪೮

ಮಗುಳ್ದು ಕೇಳಾ ಶಿವಂ ಸುತೆಗಳುಪಿದಜನ ಘ
ಮ್ಮಗೆ ವಧಿಸಿದಂದು ಮತ್ತಂ ದಕ್ಷಮುಖದಲ್ಲಿ
ನೆಗಳ್ದ ದಕ್ಷನ ಶಿರಮನರಿದು ಕುಱಿದಲೆಯ[1]ನು[1]ರದಿತ್ತಂದು ಮತ್ತಮೊರ್ವ
ಬಗೆಯದತ್ರಿತನೂಜ ಚಂದ್ರನಂ ನಿರ್ಭರದೆ
ಸೊಗಯಿಪುಂಗುಟದ ಕೊನೆಯಿಂದೊರಸಿ ಕೊಂದಂದು
ಮಿಗುವ ವಿಷ್ವಕ್ಸೇನನಂ ತ್ರಿಶೂಲ[2]ದಿನಿ[2]ಱಿದು ಪೆಗಲೊಳಳವಡಿಸಿದಂದು ೪೯

ಮಿನುಪ ವಾಣೀಗೋಣಮಂ ಮೂಣದರಿದಂದು
ಮುನಿಸಿಂದೆ ದೇವಮಾತೃಕೆಯರುನ್ನತಘನ
ಸ್ತನನಾಸಿಕಂಗಳಂ ಚಿವುಟಿದಂದದುಮಲ್ಲದೆಯುಮಂತೆ ರೋಷದಿಂದೆ
ಇನಿತು ಪಣೆಗಣ್ಣೆ ವೆಗದಂದೆಗೆದು ನೋಡೆ ಘ
ಮ್ಮನೆ ಕಮಲಜಾಂಡದೊಳಗವಿದಿರ್ದ ದನುಜಸುರ
ಮುನಿನಿಕರ ಹರಿವಿರಿಂಚಿಗಳನಂತರ್ ನಾಡೆ ಹತವಾದ ದಿನದೊಳಂದು ೫೦

ಸಲೆ ಪೊರ್ದದಾ ಬ್ರಹ್ಮಹತ್ಯಮೆನಸುಂ ಬೊಮ್ಮ
ದಲೆಯೊಂದನುಂಗುರಿಂದೆ ಚಿವುಟಿದುದಱಿಂದಮಂ
ಲಲಿತಾಂಗಹೀನನಾದಂ ಸತ್ತುದಿಲ್ಲದಱಿನೆಂತಪ್ಪ ಬೊಮ್ಮೆಗೀತಿಯೊ
ವಿಲಸದಭವಂಗೆ ಪೊರ್ದಿತು ನೋಡ ಚೋದ್ಯಮಿದು
ಪಲವು ಬೊಮ್ಮೆಗೀತಿಗಳ ಮಾಡಿದವನೊರ್ವ ನಿ
ರ್ಮಲಶಿವನ ದರ್ಶನಂಗೆಯ್ದು ನುತಿಸಲ್ಕವುಂ ಕಿಡುಗುಮೆಂಬುದು ಸಿದ್ಧವು ೫೧

ಇಂತಪ್ಪ ಪರಶಿವನನಾ ಬ್ರಹ್ಮಹತ್ಯಮೆಂ
ತುಂ ತುಡುಕದೆಲೆ ಕರ್ಮವಾದಿ ಕೇಳ್ ನೀನುಂತೆ
ಮುಂತಱಿಯದುಲಿವ ನೀಚೋಕ್ತಿಗಳವೆಲ್ಲಿಯುಂ ಸತ್ಯಮಾಗವು ಭಾವಿಸೆ
ಸಂತತಂ ಶಶಶೃಂಗದಂತೆ ಮಿಥ್ಯಂಗಳಾ
ಗಿಂತು ವರ್ತಿಸುತಿರ್ಕುಮದಱಿಂದೆ ನಿನ್ನ ಮಾ
ತಂತಿರ್ಕೆ ಕಂತುಹರನಾಜ್ಞೆಯೊಳೆ ಕರ್ಮಿಯುಂ ಕರ್ಮಮದು ಸಾರ್ಗುಮನಿಶಂ ೫೨

---

[1] ನೆ (ಗ) [2] ದಲಿ (ಗ)

ಸದಮಲಪ್ರಚುರವಿಶ್ರುತ ಪರಮಭಕ್ತಗಣ
ಪದಸರೋರುಹಸಾಂದ್ರ ಮಕರಂದಪಾನ ಸ
ಮ್ಮುದಿತ ಚಂಚಚ್ಚಂಚರೀಕನನವರತ ಪಂಚಾಕ್ಷರೀಪ್ರಸಿತಹೃದಯಂ
ವಿದಿತ ಮಂಜುಲನೀಲಕಂತಾಹ್ವಯಂ ಮನೋ
ಮುದದೆ ಪೇಳ್ದುರುತರಾರಾಧ್ಯಚಾರಿತ್ರದೊಳ
ಗಿದು ಕರ್ಮವಾದನಿರಸನಕಥನಮಭವಗಣಪುಂಗವರ್ ಕೇಳ್ವುದೊಸೆದು ೫೩

## ನಾಲ್ಕನೆಯ ಸಂಧಿ

### *ಕಾಲವಾದ ನಿರಸನ

ಸೂಚನೆ : ಪ್ರತಿವಾದಿರವಿಸಿಂಹಿಕಾತ್ಮಜಂ ವಿಮಲನು
ನ್ನತ ಪಂಡಿತೇಶ್ವರು ಕಾಲವಾದವನೊಸೆದು
ವಿತತಮಪ್ಪಂತೆ ಜಯಿಸಿದ ಕಥನಮಂ ಕೇಳ ಸೂರಸಚಿವೇಂದ್ರ ಮುದದೆ

ಪೊಸಸುಸಿಲ್ಗಲಹದೊಳ್ ಶ್ರೀಮಕುಟದೊಳ್ ತನ್ನ
ಮಿಸುಪಪದಸಾರಸಮನಿರಿಸಲ್ಕೆ ಸುರನದಿಯೊ
ಳೊಸೆದಾಡುತಿರ್ಪಂಜೆಗಳ್ ಕಂಡು ಶೋಣಶತಪತ್ರಮೆಂದತಿ ಭಾವಿಸಿ
ಅಸವಸಂ ಕರ್ದುಕಬರೆ ಭರದಿಂದೆ ಕಾಲ್ದೆಗೆವ
ವಸುಮತಿಧರಾಸುತೆಯು ಬರಸೆಳೆದು ಬಿಗಿಯಪ್ಪಿ
ನಸುಮುನಿಸ ತಿಳುಪಿ ಬಿನದಿಪ ನೀಲಕಂಠನೆಮಗೀಗೆ ವಾಕ್ಚತುರತೆಯನು ೧

ಮರಳಿ ಕೇಳಿಲೆ ಕರ್ಮವಾದಿಯೇ ನೀಂ ಮತ್ತೆ
ಭರದೆ ನಿನ್ನಯ ಕರ್ಮಮದು ಭಾವಿಸಲ್ಕೆ ತಾ
ನಿರದೆ ಕಾಲಾಂತರದೊಳೆಯ್ದಿಸುಗುಮಾ ಕರ್ತೃವಂ ತನ್ನ ಫಲತತಿಯನು
ನಿರುತಮೆಂಬುದಱಿಂದೆ ಕರ್ಮವಾದಿಯೆ ಅಲ್ತು
ಕರಮೆ ನೋಡಲ್ ಕಾಲವಾದಿ ನೀನಾದಯದ
ಱರವನತಿಶಯದೆ ಕೇಳೆಂದು ಪೇಳ್ದಂ ಪಂಡಿತೇಶ್ವರಂ ಸಭೆ ಮೆಚ್ಚಲು ೨

ಮನವೊಸೆದು ಕೇಳ್ ಕಾಲವಾದಿ ನಿ[1]ನ್ನ[1]ಭಿಮತಮ
ನೆನುತೆ ಕಾಲಂ ನಿತ್ಯಮಾದಂ ಸ್ವತಂತ್ರತೆಯೊ
ಳನುದಿನಂ ತೋರ್ಕುಮದು ದೈವಮದನತಿನಿರಾಕರಿಸಲಾರ್ಗಂ ಶಕ್ಯವು
ಅನುಗೊಳ್ಳದದಱಿಂದೆ ಸಕಲಜಂತುಗಳ ಜೀ
ವನಮದಱ ಬೆಂಬಳಿಯನೆಯ್ದಿರ್ಕುಮಂತೆ. ನೆ
ಟ್ಟನೆ ಚಂದ್ರಸೂರ್ಯಾದಿಗಳ ವೃತ್ತಿಗಳ್ ಕಾಲವಶಮಾಗಿ ತೋಱುತಿರ್ಕುಂ ೩

---

1 ಮ್ಮ (ಕ)

* (ಕಗ) ಪ್ರತಿಗಳಲ್ಲಿಲ್ಲ.

ಹರಿಸುರಜ್ಯೇಷ್ಠ ಜಿಷ್ಣ್ವಾದ್ಯಮರಗಣಮಂತೆ
ಪರಿಕಿಸಲ್ ಕಾಲಕಲ್ಪನೆಯನೆಳ್ಳನಿತನುಳಿ
ದಿರಲಜಾಯು[1]ಲ[1]ಪರಾಯು ಕಾಲಕಲ್ಪಿತ ಗಣನೆಯೊಳಗಲ್ಲದದಱ ಪೊಱಗೆ
ಪಿರಿದಾಗಿರಲ್ ಸಪರ್ಥತೆಯು ಪಡೆಯದು ನೋ[2]ಡ[2]
ನಿರುತದಿಂ ಜನನಮರಣಾದಿಗಳ್ ತಾಮುವುಂ
ಕರಮೆ ಕಾಲಾಧೀನಮದಱನೆತ್ತೆತ್ತಲುಂ ಕಾಲಮೇ ನಿಜತತ್ತ್ವವು ೪

ಪಲಕೆಲರ್ ಜೀವರುಂ ಭರದಿಂದೆ ಮಾಡಿದ
ತ್ಯಲಘುತರಮುಭಯಕರ್ಮಂ ದಲಾ ಕರ್ಮಿಯುಂ
ಕೆಲವುಕಾಲಾಂತರಕ್ಕೆಯ್ದಿ ಸುರಲೋಕ ನಾರಕ ಭೋಗನಿಚಯಂಗಳಂ
ಸುಲಭದಿಂದೆಯ್ದಿಸುತ್ತಿರ್ಕುಮದುಕಾರಣಂ
ಸಲೆ ಪುಣ್ಯಪಾಪಂಗಳೆಲ್ಲವುಂ ಭಾವಿಸ
ಲ್ಕೊಲವಿನಿಂ ಕಾಲವಶಮಾಗಿರ್ಕುಮದನುಳಿದು ಪೆಱತಾವುದಿಲ್ಲ ನೋಡೆ ೫

ಕೆಂಗದಿರನಾದಿಯಾದೊಂಬತ್ತು ಗರಬಲಂ
ತುಂಗನಕ್ಷತ್ರಪ್ರವರ್ತನಂಗಳಪೆಲ್ಲ
ವುಂ ಗಗನಮಣಿ ಕುಮುದಬಾಂಧವಗ್ರಹಣಮೆಂಬಿವು ಮುಖ್ಯಮಾಗಿ ತೋರ್ಪ
ಮಂಗಲಾಮಂಗಲ ದಿನಂಗಳುಂ ರುತುಗಳುಂ
ಪಿಂಗದತಿ[3]ಶೋಭಿ[3]ಸುವ ಸಂಕ್ರಾಂತಿ ಯೋಗಕರ
ಣಂಗಳುಂ ಮೊದಲಾಗಿವೆಲ್ಲವುಂ ಕಾಲವಶಮೆನೆ ಕಾಲಮೇ ದೈವವು ೬

ಎಂದಣಿಯರುಂ ನುಡಿವ ಕಾಲವಾದಿಯೆ ಮನಂ
ದಂದು ಕೇಳ್ ಕಾಲಮದು ನಿರ್ಗುಣಮಚೇತನದೊ
ಳೊಂದಿ ತ್ರುಟಿಲವ ಮುಖ್ಯಕಾಲಂಗಳಿಂದೆ ತಾನಖಿಲಮಾಗೆಸೆದಿರ್ಪುದು
ಸಂದವಾರ್ಭಂಗಭಂಗುರಸನ್ನಿಭಂ ನೋಡ
ಲೆಂದುವುಂ ನಿತ್ಯತ್ವಮಿನಿತಿಲ್ಲ ತನ್ನಿಚ್ಛೆ
ಸಂಧಿಸದು ಕಾಲಕೆಂದುಂ ಚೇತನಾಭಾವದೊಳಗೆಸೆದು ತೋರ್ಪ ತೆಱದೆ ೭

ಸಲೆ ಭೂತವರ್ತಮಾನಾದಿ ಕಾಲಂಗಳಿಂ
ದಲನಂತಮಾಗಿರ್ಪ ಕಾಲಮದು ಜಡಮದಱಿ
ನೊಲವಿನಿಂ ಘಟದಂತನಿತ್ಯತೆಯೊಳೊಂದಿರ್ಪುದದು ದೈವಮೆಂತಪ್ಪುದೊ

---

[1] ದ (ಗ) [2] ಡೆ (ಗ) [3] ಭಾವಿ (ಗ)

ಛಲರೆ ಲೇಸಿದು ನೋಡಶುದ್ಧಮಾಯೆಯಿನೊಗೆದ
ಲಲಿತತತ್ತ್ವಂಗಳೊಳಗೆಸೆದಿರ್ಪ ಕಾಲನುದು
ನಲಿದು ತಾಂ ಕರ್ತೃವೆಂತಪ್ಪುದದನಱಿಯದಪಶದ ಕಾಲವಾದಿನಿ[1]ಕರಂ[1] ೮

ಮಗುಳ್ದು ಕೇಳ್ ಭೂತತನ್ಮಾತ್ರೇಂದ್ರಿಯಂಗಳುಂ
ಬಗೆವೊಡಂತಃಕರಣಮುಂ ಗುಣಮುಮಂತೆ [2]ಚ
ಕ್ಕ[2]ಗೆ ಪ್ರಕೃತಿತತ್ತ್ವಂ ದಲಿವು ನೋಡಶುದ್ಧತತ್ತ್ವಂಗಳೆನಿಪುವು ಮತ್ತಿನ
ಸೊಗಯಿಸುವ ನಿಯತಿ ಮೊದಲಾಗಿ ಮಾಯಾಂತಮಾ
ದೊಗೆದಾಱು [3]ಮಿಶ್ರ[3]ತತ್ತ್ವಂಗಳೆನಿಪುವು ಬಳಿಕೆ
ನೆಗಳ್ದ ವಿದ್ಯಾದಿ ಶಿವತತ್ತ್ವಾಂತಮಾದಯ್ದು ಶುದ್ಧತತ್ತ್ವಂ ಭಾವಿಸೆ ೯

ಇಂತು ಮೂವತ್ತಾಱುತತ್ತ್ವಂಗಳೊಳಗೆ ತಾ
ನೆಂತುಱದೆ ಸಪ್ತವಿಂಶತಿತತ್ತ್ವವೆನಿಪ ಕಾ
ಲಂ ತತ್ತ್ವಮದು ತನ್ನ ಪೆಱಗಿರ್ಪ ತತ್ತ್ವಂಗಳಲ್ಲದೇ ಮತ್ತೆ ತನ್ನ
ಮುಂತೆಸೆವ ತತ್ತ್ವಂಗಳೊಂಬತ್ತನುಱಿ ಕಾಣ
ದಂತದಱಿನೆಂದುವುಂ ಕಾಲತತ್ತ್ವಂ ಜಡಂ
ಮುಂತಱಿಯದೆಲೆ ಕಾಲವಾದಿ ನೀಂ ಜಱುಚುವ್ಯೆ ಕಾಲಮಧಿದೈವವೆಂದು ೧೦

ಪರಿಕಿಸಲ್ ನಿತ್ಯಮುಂ ತಾಳ್ದ ಮೂಲಪ್ರಕೃತಿ
ನಿರುತದಿಂ ಕಾಲತತ್ತ್ವಕ್ಕೆ ಕಾರಣಮಾಗಿ
ಕರಮೆಸೆಯುತಿರೆ ಕಾರ್ಯಮಾದ ಕಾಲಕ್ಕೆಂತು ಚೇತನತೆ ತಲೆದೋರ್ಪುದು
ಸಿರಿದುಕಾರ್ಯಂ ದಲೆನಿಸುವ ಘಟಕೆ ಚೈತನ್ಯ
ಮಿರದೆ ದೊರೆಕೊಳ್ವದೆಂತಂತೆ ತತ್ತ್ವಾತೀತ
ಪರಮಕಾರಣ ಶಿವಂ [4]ಪ್ರೇರಿ[4]ಸಲ್ ಕಾಲಕ್ಕೆ ಚೇತನತೆ ದೊರೆಕೊಂಬುದು ೧೧

ಪ್ರವಿಲಸತ್ಕುಂಭಕಾರಂ ಪಿಡಿದ ದಂಡದಿಂ
ದವೆ ಚೇತನತ್ವಮಣಮಿಲ್ಲದೆಸೆದಿರ್ಪ ಚ
ಕ್ರವನೊತ್ತಿ ತಿರುಪಲಾ ತಿಗುರಿ ತಿಱ್ರನೆ ತಿರುಗಿ ಕಣ್ಗೆಡ್ಡಮಪ್ಪ ತೆಱದೆ
ಅವಿರಳಾಧಾರಶಕ್ತಿಯನೆ [5]ಕೀಲ್ಗಳ ಮಾಡಿ[5]
ದಿವಿಜಾದ್ರಿಯೆಂಬ ಮೊಳೆಯುಂ ಬಲಿದು ಸಂತತಂ
ತವೆಕಾಲಚಕ್ರಮಂ ತಿರುಗಿಸುವನಾದಿತ್ಯನೆಂಬ ಕೋಲಿಂದೆ ಭವನು ೧೨

---

1 ರಕಂ (ಗ) 2 ಕೆ।ಚ್ಚ (ಕ) 3 ಮಿಾಶ (ಕ) 4 ಪ್ರೀತಿ (ಕ) 5 ಕೀಳಲ್ಮಾಡಿ (ಕ)

ಹರಿಸುರಜ್ಯೇಷ್ಠ ಜಿಷ್ಣ್ವಾದ್ಯಮರಗಣಮಂತೆ
ಪರಿಕಿಸಲ್ ಕಾಲಕಲ್ಪನೆಯನೆಳ್ಳನಿತನುಳಿ
ದಿಶಲಱಯು[1]ಲ[1]ಪರಮಾಯು ಕಾಲಕಲ್ಪಿತ ಗಣನೆಯೊಳಗಲ್ಲದದಱ ಪೊಱಗೆ
ಪಿರಿದಾಗಿರಲ್ ಸಮರ್ಥತೆಯ ಪಡೆಯದು ನೋ[2]ಡ[2]
ನಿರುತದಿಂ ಜನನಮರಣಾದಿಗಳ್ ತಾಮುಂ
ಕರಮೆ ಕಾಲಾಧೀನಮದಱನೆತ್ತೆತ್ತಲುಂ ಕಾಲಮೇ ನಿಜತತ್ತ್ವವು ೪

ಪಲಕೆಲರ್ ಜೀವರುಂ ಭರದಿಂದೆ ಮಾಡಿದ
ತ್ಯಲಘುತರಮುಭಯಕರ್ಮಂ ದಲಾ ಕರ್ಮಿಯಂ
ಕೆಲವುಕಾಲಾಂತರಕ್ಕೆಯ್ದಿ ಸುರಲೋಕ ನಾರಕ ಭೋಗನಿಚಯಂಗಳಂ
ಸುಲಭದಿಂದೆಯ್ದಿ ಸಂತ್ರಿರ್ಕುಮದುಕಾರಣಂ
ಸಲೆ ಪುಣ್ಯಪಾಪಂಗಳೆಲ್ಲವುಂ ಭಾವಿಸ
ಲ್ಕೊಲವಿನಿಂ ಕಾಲವಶಮಾಗಿರ್ಕುಮದನುಳಿದು ಪೆಱತಾವುದಿಲ್ಲ ನೋಡೆ ೫

ಕೆಂಗದಿರನಾದಿಯಾದೊಂಬತ್ತು ಗರಬಲಂ
ತುಂಗನಕ್ಷತ್ರಪ್ರವರ್ತನಂಗಳವೆಲ್ಲ
ವುಂ ಗಗನಮಣಿ ಕುಮುದಬಾಂಧವಗ್ರಹಣಮೆಂಬಿವು ಮುಖ್ಯಮಾಗಿ ತೋರ್ಪ
ಮಂಗಲಾಮಂಗಲ ದಿನಂಗಳುಂ ರುತುಗಳುಂ
ಪಿಂಗದತಿ[3]ಶೋಭಿ[3]ಸುವ ಸಂಕ್ರಾಂತಿ ಯೋಗಕರ
ಣಂಗಳುಂ ಮೊದಲಾಗಿವೆಲ್ಲವುಂ ಕಾಲವಶಮೆನೆ ಕಾಲಮೇ ದೈವವು ೬

ಎಂದಣಿಯರಂ ನುಡಿವ ಕಾಲವಾದಿಯೆ ಮನಂ
ದಂದು ಕೇಳ್ ಕಾಲಮದು ನಿರ್ಗುಣಮಚೇತನದೊ
ಳೊಂದಿ ತೃಟಿಲವ ಮುಖ್ಯಕಾಲಂಗಳಿಂದೆ ತಾನಖಿಲಮಾಗೆಸೆದಿರ್ಪುದು
ಸಂದವಾರ್ಭಂಗಭಂಗುರಸನ್ನಿಭಂ ನೋಡ
ಲೆಂದುವುಂ ನಿತ್ಯತ್ವಮಿನಿತಿಲ್ಲ ತನ್ನಿಚ್ಛೆ
ಸಂಧಿಸದು ಕಾಲಕೆಂದುಂ ಚೇತನಾಭಾವದೊಳಗೆಸೆದು ತೋರ್ಪ ತೆಱದೆ ೭

ಸಲೆ ಭೂತವರ್ತಮಾನಾದಿ ಕಾಲಂಗಳಿಂ
ದಲನಂತಮಾಗಿರ್ಪ ಕಾಲಮದು ಜಡಮದಱ
ನೊಲವಿನಿಂ ಘಟದಂತನಿತ್ಯತೆಯೊಳೊಂದಿರ್ಪುದದು ದೈವಮೆಂತಪ್ಪುದೊ

---

1 ದ (ಗ)   2 ಡೆ (ಗ)   3 ಭಾವಿ (ಗ)

ಭಲರೆ ಲೇಸಿದು ನೋಡಶುದ್ಧಮಾಯೆಯಿನೊಗೆದ
ಲಲಿತತತ್ತ್ವಂಗಳೊಳಗೆಸೆದಿರ್ಪ ಕಾಲನುದು
ನಲಿದು ತಾಂ ಕರ್ತೃವೆಂತಪ್ಪುದದನಱುಯುದಪಶದ ಕಾಲವಾದಿಸಿ[1]ಕರಂ[1] ೮

ಮಗುಳ್ದು ಕೇಳ್ ಭೂತತನ್ಮಾತ್ರೇಂದ್ರಿಯಂಗಳುಂ
ಬಗೆವೊಡಂತಃಕರಣಮುಂ ಗುಣಮುಮಂತೆ [2]ಚ
ಕ್ಕ[2]ಗೆ ಪ್ರಕೃತಿತತ್ತ್ವಂ ದಲಿವು ನೋಡಶುದ್ಧತತ್ತ್ವಂಗಳೆನಿಪುವು ಮತ್ತಿನ
ಸೊಗಯಿಸುವ ನಿಯತಿ ಮೊದಲಾಗಿ ಮಾಯಾಂತಮಾ
ದೊಗೆದಾಱು [3]ಮಿಶ್ರ[3]ತತ್ತ್ವಂಗಳೆನಿಪುವು ಬಳಿಕೆ
ನೆಗಳ್ದ ವಿದ್ಯಾದಿ ಶಿವತತ್ತ್ವಾಂತಮಾದಯ್ದು ಶುದ್ಧತತ್ತ್ವಂ ಭಾವಿಸೆ ೯

ಇಂತು ಮೂವತ್ತಾಱುತತ್ತ್ವಂಗಳೊಳಗೆ ತಾ
ನೆಂತುಂ ಬಿಡದೆ ಸಪ್ತವಿಂಶತಿತತ್ತ್ವವೆನಿಪ ಕಾ
ಲಂ ತತ್ತ್ವಮದು ತನ್ನ ಪೆಱಗಿರ್ಪ ತತ್ತ್ವಂಗಳಲ್ಲದೇ ಮತ್ತೆ ತನ್ನ
ಮುಂತೆಸೆವ ತತ್ತ್ವಂಗಳೊಂಬತ್ತನುಱು ಕಾಣ
ದಂತದಱಿನೆಂದುವುಂ ಕಾಲತತ್ತ್ವಂ ಜಡಂ
ಮುಂತಱುಯದೆಲೆ ಕಾಲವಾದಿ ನೀಂ ಜಱುಚುವ್ಪೆ ಕಾಲಮಧಿದೈವವೆಂದು ೧೦

ಪರಿಕಿಸಲ್ ನಿತ್ಯಮುಂ ತಾಳ್ದ ಮೂಲಪ್ರಕೃತಿ
ನಿರುತದಿಂ ಕಾಲತತ್ತ್ವಕ್ಕೆ ಕಾರಣಮಾಗಿ
ಕರಮೆಸೆಯುತಿರೆ ಕಾರ್ಯಮಾದ ಕಾಲಕ್ಕೆಂತು ಚೇತನತೆ ತಲೆದೋರ್ಪುದು
ಪಿರಿದುಕಾರ್ಯಂ ದಲೆನಿಸುವ ಘಟಕೆ ಚೈತನ್ಯ
ಮಿರದೆ ದೊರೆಕೊಳ್ಳದೆಂತಂತೆ ತತ್ತ್ವಾತೀತ
ಪರಮಕಾರಣ ಶಿವಂ [4]ಪ್ರೇರಿ[4]ಸಲ್ ಕಾಲಕ್ಕೆ ಚೇತನತೆ ದೊರೆಕೊಂಬುದು ೧೧

ಪ್ರವಿಲಸತ್ಕುಂಭಕಾರಂ ಪಿಡಿದ ದಂಡದಿಂ
ದವೆ ಚೇತನತ್ವಮಣಮಿಲ್ಲದೆಸೆದಿರ್ಪ ಚ
ಕ್ರವನೊತ್ತಿ ತಿರುಪಲಾ ತಿಗುರಿ ತಿಱ್ರನೆ ತಿರುಗಿ ಕಣ್ಗೆಡ್ಡಮಪ್ಪ ತೆಱದೆ
ಅವಿರಳಾಧಾರಶಕ್ತಿಯನೆ [5]ಕೀಲ್ಗಳ ಮಾಡಿ[5]
ದಿವಿಜಾದ್ರಿಯೆಂಬ ಮೊಳೆಯುಂ ಬಲಿದು ಸಂತತಂ
ತವೆಕಾಲಚಕ್ರಮಂ ತಿರುಗಿಸುವನಾದಿತ್ಯನೆಂಬ ಕೋಲಿಂದೆ ಭವನನು ೧೨

---

[1] ರಕಂ (ಗ) [2] ಕೆ।ಚ್ಚ (ಕ) [3] ನಿಾಶ (ಕ) [4] ಪ್ರೀತಿ (ಕ) [5] ಕೀಳಲ್ಮಾಡಿ (ಕ)

ಇಂತು ತನ್ನಾಜ್ಞೆಯಿಂ ಕಾಲಚಕ್ರಂದಿರುಪಿ
ಸಂತತಂ ಲೀಲಾನಿಮಿತ್ತದಿಂ ಪರಶಿವನ
ನಂತಣುಗಳೆಂಬ ಘಟನಿಕುರುಂಬಮಂ ರಚಿಸಿ ತಜ್ಜೀವಘಟವಿತತಿಯಂ
ಸಿಂತಿಮಾಡಿದ ಕರ್ಮಪಾಶದಿಂ ಬಂಧಿಸಿ ಕ
ರಂ ತವೆಯದಿರ್ದ ಭವಜಾಟಾಳದೊಳ್ ಕೋದು
ಮುಂತೆ ನಾನಾ ಯೋನಿಕೂಪದೊಳ್ ತಿರಿಗಿಸುವನತಿಶಯಮಿದೆಂಬ ತೆಱದೆ ೧೩

ಹರಿ ವಿರಿಂಚೇಂದ್ರ ಸುರ ಗಂಧರ್ವ ಯಕ್ಷ ಕಿ
ನ್ನರ ಗರುಡ ಸಿದ್ಧ ವಸು ಪುರುಹೂತವೈರಿ ಮುನಿ
ವರವಿಹಂಗಮಮೃಗಾದಿಗಳಾಯುವೆಂಬ ಭಾಸುರಧಾನ್ಯರಾಶಿಗಳನು
ತರದೆ ತೃಟಿಲವನಿಮಿಷಕಾಷ್ಠಾಮುಹೂರ್ತ ವಾ
ಸರ ಪಕ್ಷಮಾಸಾಯನಾಬ್ದಂಗಳೆಂಬ ಸುರು
ಚಿರಮಾದ ಗಿದ್ದನಂ ಮೊದಲಾದವಱಿಂಕೊಳಳೆವನೀಶನಾಜ್ಞಾಹಸ್ತದೆ ೧೪

ಇಂತುಱದೆ ಜನನಮರಣಾದಿಗಳ್ ಭವನಾಜ್ಞೆ
ಯಿಂ ತಗುಳ್ದು ಚರಿಸುತ್ತುಮಿರೆ ಸರ್ವಮುಂ ನೋಡೆ
ಸಂತತಂ ಕಾಲವಶವೆಂಬುದೆಂತೆಲೆ ಕಾಲವಾದಿ ಪರಿಭಾವಿಸುವೊಡೆ
ಕಂತುಹರಶಾಸನಾಧೀನಮಲ್ಲದೆ ಕಾಲ
ಕೆಂತು ದೊರೆಕೊಳ್ಗುಂ ಸ್ವತಂತ್ರತ್ವಮಾವಗಂ
ಮುಂತೆ ಕೇಳ್ ಕಾಲಕಲ್ಪನೆಯನುಲ್ಲಂಘಿಸಿದ ಶಿವಶರಣಚರಿತೆಗಳನು ೧೫

ನಲಿದು [1]ನೀಂ ಕೇಳ್[1] ಕಾಲವಾದಿ ಜತಿಕುವರನೆನಿ
ಸಲಘು ಮಾರ್ಕಂಡೇಯಮುನಿಗೆ ಕಾಲಂ ತುಂಬ
ಲುಲಿಯುತತಿಕೋಪದಿಂ ಯಮರಾಜನೆಯ್ತಂದು ಪಿಡಿದೆಳೆಯೆ ಶಿವನಿದಿರೊಳು
ಮಲಹರಂ ಕಿಸುಗಣ್ಣ ಜವನ ದರ್ಪಂ ಮುಱದು
ಸುಲಭದಿಂದೆಂದುಮುಂ ಸಾಯದ ವರಂಗುಡಲ್
ನಲಿದು ಸೊಕಮಿರನೆ ಮಾರ್ಕಂಡೇಯಮುನಿಯೆಂದು ಕಾಲವೇಯೆಡೆಗೆ ಪೋಯ್ತು ೧೬

ಮಳಯದೇಶಾಧಿಪತಿ ದೇವರಾಜೇಂದ್ರಸುತ
ಮಳಯರಾಜಂಗೆ ಷೋಡಶವತ್ಸರಂ ತುಂಬೆ
ಘಳಿಲನೆಯ್ತಂದವನನಿರಡಳೆವ ತೂಣನಂ ಮುಳಿದು ಪದತಳದಿನೊದೆದು

[1] ಕೇಳ್ ನೀಂ (ಕ)

ಮಳಹರಂ ಕೊಂದು ಶಿವನಾಮಮುಳ್ಳನ್ನೆವರ
ಮಳುಕದಿರ್ಪಂತೆ ದೀರ್ಘಾಯುಮಂ ಸಲೆಕೊಟ್ಟು
ಮಳಯರಾಜನ ಪೊರೆವ ದಿನದೊಳಾ ಕಾಲನೇಯೆಡೆಯೊಳವಿಡುದೊ ಭಾವಿಸೆ ೧೭

ಪಿರಿದು ವಿಟವೇಷದಿಂದೊಣದುರ್ ಚರಿಸುತ್ತಿರ್ಪ
ದುರುಳನಂ ಶ್ವೇತನಂ ಕಾಲನೊಯ್ಯುತ್ತಿರಲ್
ಪುರಹರಂ ದಂಡಧರನಂ ಸುಟ್ಟು ತಚ್ಛ್ವೇತಮುನಿಯಿತ್ತ ಕುಸುಮಫಲದೆ
ನಿರುತದಿಂ ಕಾಲನುಂ ಮಿಾಱಿರಿಸಿದಂದು ಸುಂ
ದರತರ ಶ್ವೇತನಂ ಕಾಲವೇಗೆಯ್ದುದೆಲೆ
ಮರುಳನೆನಿಸುವ ಕಾಲವಾದಿ ನೀಂ ಕೇಳ್ ಸರ್ವಮುಂ ಕಾಲವಶಮೆಂತುಟೊ ೧೮

ಸರಸಸಂಗೀತವಿದ್ಯಾಲೋಲುಪಂ ಶಂಭು
ಚರಣಪರಿಸೇವಕಂ ಮಾದಿರಾಜಾರ್ಯನೆಂ
ಬುರುತರಗಣೇಶ್ವರಂ ಸಾಸಿರದ ನಾಲ್ನೂಱುಬರಿಸಮಿಾ ಧರಣಿಯೊಳಗೆ
ಇರನೆ ಪುರುಷರ್ಗೆ ನೂರ್ಬರಿಸಂ ದಲೆಂಬ ಬಂ
ಧುರವೇದವಾಕ್ಯದೊಳ್ ಪೇಳ್ದ ಕಾಲಮನುರುಪಿ
ಪರಮಹರ್ಷದೊಳಂದು ಕಾಲವೇಯೆಡೆಯಲ್ಲಿ ಹಮ್ಮದಂಬೋಗಿರ್ದುದೊ ೧೯

ಪಿರಿದು ಕಾಲದೊಳೊರ್ವ ಪಾರ್ವನೆಣುಗನ ವೊಸಳೆ
ಭರದಿಂದೆ ನುಂಗೆ ತಜ್ಜನನಿಯುವನೋರಗೆಯು
ವರವಟುವ ಪರವೋತ್ಸವಂಗಂಡು ನಿಜಸುತಂ ಮೃತವಾದ ಶಾಣಕೆಯ್ದಿ
ಕರವೆ ಶೋಕಿಸುತಿರಲ್ ನಂಬಿಯಣ್ಣಂ ಕೇಳ್ದು
ಪುರಹರನ ನೇಮದಿಂದವಳ ಮಗನಂ ಜವನ
ಪುರದಿಂದೆ ತಂದಾಕೆಗೀವಂದು ಕಾಲವೇಯೆಡೆಯಲ್ಲಿ ಮೆಯ್ಗಱಿದುದೊ ೨೦

ಲುಂಪಂತಿ ದೈವಲಿಖಿತಾನಿ ಎಂಬೀ ವಾಕ್ಯ
ದಿಂ ಪರಮಭಸಿತಮದು ವಿಧಿಲಿಖಿತಮೊರಸುಗುಂ
ಮುಂ ಪೊಡವಿಯೊಳ್ ತನಗೆ ವಂದಿಸಿದ ಕನ್ನೆಗಸುವಿತ್ತು ಪೊರೆಯನೆ ನಿಕ್ಕುವಂ
ಪೆಂಪಿನಿಂ ಮುಸುಡಿಚೌಡಯ್ಯಂಗಳೊಲ್ದು ಮ
ತ್ತಂ ಪೂರ್ವದೊಳೆ ರಕ್ಕಸಯ್ಯನೀಯನೆ ಹರಣ
ಮಂ ಪಡೆದು ಸತ್ತ ಪುತ್ರಂಗೆ ಮೂಜಗಮಱಿಯೆ ಕಾಲವೇಗೆಯ್ದುದಂದು ೨೧

ಇಂತು ಕಾಲದ ಕಣ್ಗೆ ಸಣ್ಣಮಳಲಂ ಪೊಯ್ದ
ನಂತ ಶಿವಶರಣರುಂಟಾಗಿರಲ್ ಕಾಲಕ್ಕೆ
ದೆಂತು ಸಂಭವಿಪುದೋ ಕರ್ತೃತ್ವಮನಿಶಮಾ ತತ್ತ್ವಸಮುದಾಯಮೆಲ್ಲಂ
ಅಂತಕಾಂತಕನೆನಿಪ ಮೃಡನಾಜ್ಞೆಯೊಳ್ ವರ್ತಿ
ಕುಂ ತವೆಯೆನಲ್ಕಾಲಕೊಂದರ್ಕೆ ಕರ್ತೃತ್ವ
ವೆಂತಿರದೆ ಬರ್ಕುವೆಲೆ ಕಾಲವಾದಿಯೆ ಕೇಳಭವನೊರ್ವನೇ [1]ಅ[1]ಧಿಪನು ೨೨

ಸದಮಲಪ್ರಚುರವಿಶ್ರುತ ಪರಮಭಕ್ತಗಣ
ಪದಸರೋರುಹಸಾಂದ್ರ ಮಕರಂದಪಾನ ಸ
ಮ್ಮುದಿತ ಚಂಚಚ್ಚಂಚರೀಕನನವರತ ಪಂಚಾಕ್ಷರೀಪ್ರಸಿತಹೃದಯಂ
ವಿದಿತ ಮಂಜುಳನೀಲಕಂಠಾಹ್ವಯಂ ಮನೋ
ಮುದದೆ ಪೇಳ್ದುರುತರಾರಾಧ್ಯಚಾರಿತ್ರದೊಳ
ಗಿದು ಕಾಲವಾದನಿರಸನಕಥನಮಿದನಾಲಿಪುದು ಪರಮಸದ್ಭಕ್ತರು ೨೩

---

[1] ಯ (ಗ)

# ಐದನೆಯ ಸಂಧಿ

## ವೇದಾಂತ ನಿರಸನ

ಸೂಚನೆ: ಪರವಾದಿಮೇಘಜಂಝಾಪವನಸನ್ನಿಭಂ
ಪರಮಗುರುಪಂಡಿತಾರಾಧ್ಯವಿಭು ವೇದಾಂತ
ನಿರಸನಂಗೆಯ್ದ ಕಥನಮನೆಯ್ದೆ ಕೇಳ್ ಸೂರಸಚಿವ ಮನದಣಿಗಿನಿಂದೆ

ನುಡಿವೆಣ್ಣ ವಲ್ಲಭಂ ಬಲಗಡೆಯೊಳೋಲೈಸೆ
ಪೊಡೆಯಲರನೊಲ್ದೆಡದ ಕಡೆಯೊಳೋಲೈಸುತಿರೆ
ಸಡಗರದಿನಿಂ[1]ದ[1]ರಂ ಸೀಗುರಿಯನಿಕ್ಕುತ್ತೆ ಪಿಂಗಡೆಯೊಳೋಲೈಸಲು
ಕಡುಪಿನಿಂ ಸಾಲ್ಗೊಂಡು ಮುಂಗಡೆಯೊಳಮರ್ದಗಣಿಗ
ಳೆಡೆವಿಡದೆ ತಂತಮ್ಮ ವರ್ಗದಿಂದೋಲೈಸೆ
ಮಡದಿಯೊಡನೊಡ್ಡೋಲಗದೊಳಿರ್ಪ ಗುರುನೀಲಕಂಠನೆಮ್ಮಂ ಸಲಹುಗೆ ೧

ಮಿಗೆ ಕಾಲತತ್ತ್ವಮದನಾದಿ ನಿಷ್ಕಲತತ್ತ್ವ
ಮೊಗೆದ ಜಗಮೆಲ್ಲಮುಂ ತದ್ವಶಂ ದಲೆನಿಕ್ಕು
ಮಗಲದೆಂಬುದಱಿಂದೆ ನೀಂ ಕಾಲವಾದಿಯಲ್ತೀಗ ವೇದಾಂತಿಯಂತೆ
ನೆಗಳ್ದು ತೋಱುತ್ತಿರ್ಪಯದಱ ಮಾರ್ಗಂಗೇಳ
ಸೊಗಸಿನಿಂ ಮಾಯಾಮತಂ ಭಾವಿಸಲ್ಕದುಂ
ಮಿಗುವ ವೇದಾಂತದಿರವಱಿಯದೇ ನೀಂ ಬಳಿಕೆ ಜಱುಚುವಯದೆಂತೆಂಬೊಡೆ ೨

ಜೀವಶ್ಶಿವಶ್ಶಿವೋಜೀವ ಎನುತುಂ ಬಳಿ
ಕ್ಕಾವಗಂ ಬಂಧರಹಿತನ ಶಿವನ ಬಂಧನೆನು
ತೋವಿ ನುಡಿದಪ ನಿನಗದುಚಿತಮೇ ರುದ್ರಃ ಪಶೂನಾಮೆನುತ್ತೆ ಮತ್ತೆ
ಭಾವಿಸಲ್ಕಹಮೇವ ಎನೆ ಪಶೂನಾಮೆನು
ತ್ತೀ ವಿಧದಿನಧಿಪತಿಯೆನುತ್ತೆ ವೇದಂ ಬಳಿ
ಕ್ಕೋವೊ ಪಶುಪತಯೇ ನಮೋ ನಮೋ ಎನುತೊಲ್ದು ಘೋಷಿಸುತ್ತಿರೆ ತವಕದಿಂ ೩

---

[1] ದ (ಕ)

ಸಂತತಂ ಬ್ರಹ್ಮಾದ್ಯಃ ಪಶವ ಎಂದು ವೇ
ದಂ ತವಕದಿಂ ನುಡಿಯುತಿರೆ ಬರ್ಮನಾದಿಯಾ
ಗಿಂತಿಱುಂಪೆಗಳ್ಳೈದೆ ಕಡೆಯಾದ ಜೀವಂಗಳೆಲ್ಲವುಂ ಪಶುಗಳೆನಿಕುಂ
ಅಂತುಮಾ ಪ್ರಕೃತಿಪಾಶಂ ದಲೆನಿಕುಂ ಬಳಿ
ಕ್ಕಿಂತಿ[1]ವೆರಡರ್ಕೊಲ್ದು[1] ಶಿವನೆ ಪತಿಯೆನಿಸುವಂ
ಕಾಂತಪತಿಯಾದ ಶಿವನೆಂತು ಪಶುಗಳೆನಿಪ್ಪನಿದು ನೋಡೆ ಚೋದ್ಯಮೆನಿಕುಂ ೪

ವಿನುಪ ಗೋಪಾಲಕಂ ಪಶುಗಳದ ಪಾಶಮಂ
ನನಸು ಬಿಡುವಂತವುಂ ತಮ್ಮ ಗಳಬಂಧಮಂ
ಮನಮೊಲ್ದು ತಾಮೆ ಬಿಡಿಸಲ್ಕರ್ಹಮೆಂತಲ್ತು ಬಳಿಕಮಂತೆಯ್ದೆ[2] ನೋಡೆ
ಎನಸುಮಾ ಬ್ರಹ್ಮಮೊದಲಾದ ಪಶುಗಳ ಕೊರಲ
ಘನಪಾಶಮಂ ತಾಮೆ ಬಿಡಿಸಲಸಮರ್ಥರಾ
ವನಜಭವರವರ್ಗೆ ಪತಿಯಾದ ಶಿವನೇ ಬಿಡಿಸಲರ್ಹನಕ್ಕುಂ ಭಾವಿಸೆ ೫

ಅದುಕಾರಣಂ ಪಶುಗಳಾದಬ್ಜಸಂಭವರ್
ವಿದಿತ ಪತಿಯಾದ ಶಿವವಶವರ್ತಿಗಳ್ ಕರಂ
ಮುದದಿನಾ ಪಾಶಮಂ ಬಂಧಿಸಲ್ ಸಡಿಲಿಸಲ್ಕಭವನೇ ಕರ್ತೃವೆನಿಪಂ
ಪುದಿದ ದುಃಖಾಂಬುಧಿನಿಮಗ್ನಪಶುರಾಶಿಗಳ್
ಸದಮಲೇಶ್ವರಕರುಣದಿಂ ಮುಕ್ತರಾಗಿ ಬಳಿ
ಕುದಿತಸಾಲೋಕ್ಯಾದಿ ಪದವಿಯಂ ಸಾರ್ದು ರಾಜಿಸುತಿರ್ಪರನವರತವು ೬

ಪಿರಿದು ಪಶುಪಾಶಪತಿವಿಜ್ಞಾನಮೇ ಭವನಿ
ಕರಶರಧಿಯಂ ದಾಂಟಿಸುವುದು ಜೀವರ್ಕಳಂ
ನಿರುತಮಾ ಜ್ಞಾತೃ ಸುಜ್ಞಾನ ವಿಜ್ಞೇಯಂಗಳೀ ತ್ರಿವಿಧಮುವನಿಯಲ್ಲಿ
ಭರದಿಂದೆ ಬಾಧಕಪ್ರತ್ಯಯದೆ ಪ್ರತ್ಯಕ್ಷ
ದಿರವಿನಿಂ ತೋಱುತಿರಲದಱಿಂದೆ ಭೇದಮದು
ಕರತಳಾಮಳಕದಂತಿರಲಭೇದಂ ಬೇಳ್ಪುದೆಂತು ಘಟಿಯಿಪುದು ನಿನಗೆ ೭

ನಲಿದು ದೃಷ್ಟಾದೃಷ್ಟದರ್ಥಫಲಮೊಡರಿಸುವ
ಲಲಿತ ವೈದಿಕಪಥದಿನಱಿದ ಭೇದಂ ಕರಂ
ವಿಲಸಿತ ಪ್ರಮಿತಿಪಿಂಡಮದಾದುದದಱಿಂ ವಿಭೇದಕ್ಕೆ ಸಿದ್ಧಿಯಕ್ಕುಂ

[1] ವರ್ಗೊಲಿದು (ಗ)   [2] ಯ್ದಿ (ಗ)

ಸಲೆ ವೇದಮುಸುರ್ದ ಕರ್ಮದ ಫಲಂಗುಡುವನಿ
ರ್ಮಲ ಶಿವನ ಸಂಗತಿಯಿನಾ ಕರ್ಮ[1]ದಲ್ಲಿ[1] ಮ
ತ್ತಲದಾದರಂ ಪುಟ್ಟುಗುಂ ನರರ್ಗೆ ಬಳಿಕಮಾರಾ[2]ಧನೀ[2]ಯೇಶಕೃಪೆಯಿಂ ೮

ಅನಿಶಮುಂ ಸ್ವರ್ಗಮೋಕ್ಷಾದಿ [3]ಸೌಖ್ಯಂ[3] ತಮ್ಮ
ಮಿನುಪ ಕರ್ಮಾನುರೂಪದೆ ಸಾರ್ಗುಮೆಂದು ಚ
ಕ್ಕನೆ ವೇದಶಾಸ್ತ್ರಾಳಿ ನುಡಿಯುತಿರಲಜ್ಞಾನದಿಂದ ಭೇದಂವೇಳಲು
ಅನುವಾಗದೀ ಜಗಂ ಪ್ರತ್ಯಕ್ಷದಿಂ ಭೇದ
ವೆನಿಸಿ ತೋಱುತ್ತಿರಲ್ ಬಱುವಾತನಿರದೆ ಜಗ
ಮಿನಿಸುಭೇದಂ ತೋಱದೆಂಬ ವಚನಂ ಬಾಧ್ಯಮಕ್ಕುಮಣಿಯರಮಾವಗಂ ೯

ಜಗಕೆ ಮಿಥ್ಯತ್ವಮಂ ನುಡಿವಂಗಮಿಾ ಜಗದ
ಬಗೆಯಱಿಯಲಳವಲ್ತಿದೆಂತೆನಲ್ ಮಿಥ್ಯೆಯದು
ಮಿಗೆ ಅನಾಶ್ರಯಮಕ್ಕುಮಿಾ ಜಗಂ ಸತ್ಪ್ರಮಾಣಸ್ವೀಕೃತಂ ದಲೆನಿಕುಂ
ಜಗಕೆ ಪವಣುಂಟಾದೊಡಕ್ಕೆಂಬೊಡಾ ಜಗಂ
ಸೊಗಸಾಗಿ ತೋರ್ಕುಮಲ್ಲದೆ ಮಿಥ್ಯೆಯಾಗದದು
ನೆಗಳ್ದು ತೋಱುವ ವಸ್ತುತತಿ ತಥ್ಯಮಲ್ಲದೇ ಮಿಥ್ಯೆಯಾಗದೆ ಭಾವಿಸೆ ೧೦

ಮಿಸುಪುತ್ತರಜ್ಞಾನಮೆನಿಪ ಶುಕ್ತಿಜ್ಞಾನ
ಮೆಸೆಯೆ ಮುಂತೋರ್ಪ ರಜತಜ್ಞಾನಮಳಿವಂತೆ
ನಿಸದಮಿಾ ಜಗದಭೇ[4]ದ[4]ಜ್ಞಾನಮದು [5]ನಿಖಿಲ[5]ವೇದಾಂತಶಾಸ್ತ್ರದಿಂದೆ
ಒಸೆದೀ ಜಗಕ್ಕಭೇದಮದಲ್ಲದೇ ಮತ್ತ
ಮುಸುರಲಪ್ಪುದೆ ಭೇದಮಂ ಎಂಬೊಡದನೆಯ್ದೆ
ಸಸಿನೆಕೇಳ್ ವೇದಾಂತಿ ನಿನ್ನ ಮತಭಂಗಮಂ ಪೇಳ್ದಪೆಂ ಸಭೆ ಮೆಚ್ಚಲು ೧೧

ಪರಮ ನಿರ್ವಚನೀಯಮಿಲ್ಲದೇ ಭಾವಿಸಲ್
ಕರಮನಿರ್ವಚನೀಯತೆಯುಮುಂಟೆ ಲೋಕದೊಳ್
ನಿರುತದಿಂ ವೇದಾಂತವಾದಿಗಳ್ಗೆ ನೆ ಬಳಿಕ್ಕಾಯೆರಡುಮುಂಟೆಂಬೊಡೆ
ಭರದೆ ನೀನುಸುರ್ವ ಸರ್ವಾದ್ವೈತಮೆಂಬುದದು
ಮರಣಮೆಯ್ದುಗುಮೇಕೆನಲ್ ಮಿಸುಪ ಭುವನದೊಳ
ಗೆರಡುವಸ್ತುಗಳೆಯ್ದೆ ತೋರ್ಪ ಕತದಿಂದೆಂದು ಪಂಡಿತೇಶಂ ಪೇಳ್ದನು ೧೨

---

1 ಫಲದಲ್ಲಿ (ಗ) 2 ಧ್ವನಿ (ಗ) 3 ಸುಖಮುಂ (ಕ) 4 ದ್ವೈ (ಗ) 5 ಕಿಡಲ್ (ಗ)

ವಿಃಸುಪ ಜೀವಶ್ಶಿವೋ ಎಂಬ ವಚನಂ ಶಿವಂ
ಗೆಸಿಪ ಜೀವಂಗೇ ಕತೆಯನುಸುರ್ದುದಲ್ಲ ಮ
ತ್ತಪಸದಿನೀ ಜೀವನಾಪ್ತ ಭೃತ್ಯಂ ಶಂಭುಗದಱಿನಸ್ಯಂ ದಲೆನಿಸಂ
ನಿಸವಸೆಂದಿನಿತಸುಸುರಿತ್ತಲ್ಲದೇ ಮತ್ತೆ
ಮಸಕದಿಂ ಸಂಸಾರಬಂಧಮೋಕ್ಷಾಂಕನೀ
ಪಸುವಾದ ಜೀವನಾ ನಿತ್ಯಮುಕ್ತಂ ಶಂಕರಂ ಶಂಭುವೆಂತಾದನು ೧೩

ಶಿವಜೀವರೀರ್ವರಂತರಮನಣಿಯರ ಭಾವಿ
ಸುವೊಡೆ ಹೇಮಾದ್ರಿ ಪರಮಾಣುಗಳ ಭಂಗಿ ಮ
ತ್ತವಿರತಂ ಎನ್ನಿಂದೆ ಬೇರೊರ್ವನೀಶನಿಲ್ಲೆಂಬೊಡೇಂ ಚಾರ್ವಾಕನೆ
ತವೆ ನೀನದಂತಿರ್ಕೆ ಬಳಿಕಾಂ ಶಿವನೆ ಅಕ್ಕು
ಮವ ಭರದೆ ಪಾಶಬಂಧದೆ ರಾಜಿಸುತ್ತಿರ್ಪ
ಶಿವತನಂ ಮಱಸಿತೆಂಬೊಡೆ ದೀಪ ತಿಮಿರುಗಳೊಂದೆಡೆಯೊಳಿರ್ಪುದುಂಟೆ ೧೪

ನಿರುತದಿಂ ಮಾತೃವುಂ ಮೇಯಮುಂ ಮಾನಮುಂ
ಪಿರಿದುಮಿಥ್ಯಂ ದಲೆಂಬೀ ನಿನ್ನ ವಾಕ್ಯಮಿದು
ಪುರುಳಲ್ತದಾವನೊರ್ವಂಗೆಯುಂ ಭಾವಿಸಲ್ ಬಳಿಕಮಿಾ ಜಗದುದಯವು
ಪುರುಷನಿಂದಾದುದೆಂಬೊಡೆ ಪುರುಷನವನೆಯ್ದೆ
ನಿರವಯುವನೆಂದು ನೀನೇ ಪೇಳ್ವಯದಱಿಂದೆ
ಪುರುಷನವನೀ ಜಗಂ ನಿರ್ಮಾಣಕರ್ತೃವಾಗಂ ಪರಿಕಿಸಲ್ಕೆಲ್ಲಿಯುಂ ೧೫

ಸಲೆ ಸಚ್ಚಿದಾನಂದರೂಪನೀಶ್ವರನೆಂದು
ನಲಿದು ನುಡಿವರ್ ಮತ್ತಮಾ ಶಿವಂಗಳ್ಕಱಿಂ
ದೊಲವು ಕೈಮಿಗಲವಿದ್ಯೆಯ ಕಲ್ಪಿಸುವಿರದುಂಟಲ್ಲೆಂದು ಕೇಳಲೊಸೆದು
ಉಲಿಯಲ್ ಸಮರ್ಥರಲ್ಲದೆ ಮೂಕಬಧಿರರಂ
ತೆಲೆ ನೀಚರಿರ ಸುಜನಮಾರ್ಗದೂರರಿರ ನಿ
ರ್ಮಲಶಿವನನಾತ್ಮನೆನುತಿರ್ಪ ವೇದಾಂತಿಗಳಿರುಸಿಕನಿರ್ಪಿರಿ ಸಂತತಂ ೧೬

ಪಿರಿದುಂ ಜಗದ್ಭೇದಮಂ ಕಂಡು ಕಂಡು ಸ್ಥೈ
ತಿರದೆ ಮುದದಿಂದಾವು ವೇದಾಂತವಾದಿಗಳ್
ನಿರುತಮೆಂಬುದು ಸಲ್ಲದೆಲ್ಲಿಯುಂ ಮತ್ತೆ ಸರ್ವಂ ಶಿವಂ ಎಂಬ ವಾಕ್ಯಂ

ಕರವೆ ಶಂಭುಗೆ ಗೌಣಮಲ್ಲದೇ [1]ಮುಖ್ಯಾರ್ಥ[1]
ದಿರವಲ್ತದೆಂತೆನಲ್ ಸರ್ವಪ್ರಪಂಚಮುಂ
[2]ಹರ[2]ನಾಜ್ಞೆಯಿಂ ವ್ಯಾಪ್ತವೆಂಬರ್ಥಮಂ ಪೇಳ್ದ ನತ್ಯಂತಹ[3]ರ್ಷ[3]ದಿಂದಂ ೧೭

ಮಿಗೆ ಶಿವಾದ್ವೈತತತ್ಪರನಪ್ಪ ಮಾನವಂ
ಬಗೆದು ಶಿವನಾನೆಂಬನೇ ಬಳಿಕ್ಕಂತೆವೊಲ್
ಸೊಗಸಿನಿಂ ಮನುಜನೀಶ್ವರನಪ್ಪನೇ ಶಿವಂ ಸಂತತಂ ಪರಿಭಾವಿಸೆ
ನೆಗಳ್ದ ಮಾನವನಪ್ಪನೇ ಲೋಕಕಿದು ಪೊಸತು
ಬಗೆಯೊಳಗೆ ತನ್ನನಱಿವಂ ತಾಂ ಶಿವಂಗೆ ತೊ
ಟ್ಟಗೆ ಕಿಂಕರಂ ದಲೆನಿಪಂ ಶಿವಂ ತಾನೆನ್ನನಜ್ಞಾನದಿಂದವಿರತಂ ೧೮

ವಿದಿತ ಮಾಯಾನುಗತವಾದವಂ ನೀನುಡುಗು
ಪದೆದು ವೇದಾಂತಿಯೇ ಸ್ವಾಮಿಭೃತ್ಯಸ್ಥಿತಿಯಿ
ನೊದವಿದತಿಭಕ್ತಿಯಿಂದೀಶನಂ ಸೇವಿಸದೆ ಮುಕ್ತಿ ಮತ್ತಾವ ಗತಿಯಿಂ
ಒದಗುಗುಂ ನಿನಗೆ ತನ್ಮಾಯಾನುಗತವಾದ
ಮುದಿತಮನ್ಯಾಯತರಮದು ಶೂನ್ಯಕನುಕೂಲ
ಮದು ಹಾಸ್ಯಕಾರಣಂ ವಿಬುಧವಿದ್ವೇಷಮ[4]ದು[4] ಸತ್ಕರ್ಮದೂರಮನಿಶಂ ೧೯

ಚ್ಯುತಸರ್ವಮಾನಮದು ಸಾಧುಗರ್ಹಿತಮದುಂ
ವಿತತ ಗರ್ವಾಂಧೀಕೃತೋರುವರ್ತನಮದುಂ
ಸತತಮುಂ ಪ್ರಚ್ಛನ್ನಬೌದ್ಧಮಜ್ಞಾನಯುತಮದು ತುಚ್ಛಮಾರ್ಗಮೆನಿಕುಂ
ಅತಿನಾಸ್ತಿಕಂ ಪಲಂ ಬಳಿಕೆ ಮಾಯಾವಾದ
ಮತಿಶಯಾದ್ವೈತವೇದಾಂತಮಕ್ಕುಂ ಲೋಕ
ವಿತತಿಯೊಳಗಿದಮಿಥ್ಯವೆಂಬ ವೇದಾಂತವಿಷಯಂ ನಿನಗೆ ಸಂಭವಿಸದು ೨೦

ಅದಱಿಂದೆ ನೀಂ ಬಳಿಕೆ ವೇದಾಂತಿಯಲ್ತು ಮುಂ
ಪದೆದು ನೋಡಲ್ [5]ಸಾಂ[5]ಖ್ಯವಾದಿ ನೀನಾದ ಮ
ತ್ತದಱಿರವನೀ ಸಭಾಸ್ಥಿತರಾದ ಸುಜನನಿಕರಂ ಮೆಚ್ಚುನಂದದಿಂದೆ
ವಿದಿತಮೆನಿಸುವ ನಿನ್ನ ಸಾಂಖ್ಯದರ್ಶನದಿರವ
ನುದಿತಹರ್ಷದೆ ಪೇಳ್ದೆವತಿಮೋದದಿಂ ಕೇಳ
ಸದಮಲೇಶ್ವರದೂರ ಸಾಂಖ್ಯವಾದಿಯೆ ಎಂದು ಪಂಡಿತೇಶಂ ಪೇಳ್ದನು ೨೧

---

1 ಮೂರ್ಖತ್ವ (ಕ) 2 ಶಿವ (ಗ) 3 ರೂಪ (ಗ) 4 ಘ (ಕ) 5 ಸಂ (ಕ)

ಸದಮಲಪ್ರಚುರವಿಶ್ರುತ ಪರಮಭಕ್ತಗಣ
ಪದಸರೋರುಹಸಾಂದ್ರ ಮಕರಂದಪಾನ ಸ
ಮ್ಮುದಿತ ಚಂಚಚ್ಚಂಚರೀಕನನವರತ ಪಂಚಾಕ್ಷರೀಪ್ರಸಿತಹೃದಯಂ
ವಿದಿತ ಮಂಜುಲನೀಲಕಂಠಾಹ್ವಯಂ ಮನೋ
ಮುದದೆ ಪೇಳ್ದುರುತರಾರಾಧ್ಯಚಾರಿತ್ರದೊಳ
ಗಿದು ಮೆಱೆವ ವೇದಾಂತವಾದನಿರಸನಕಥನಮಿದನಾಲಿಪುದು ಶರಣರು ೨೨

# ಆರನೆಯ ಸಂಧಿ

## *ಸಾಂಖ್ಯವಾದ ನಿರಸನ

ಸೂಚನೆ : ಪ್ರಖ್ಯಾತಪರವಾದಿಮುಖಕಮಲಶಶಧರಂ
ಸೌಖ್ಯಮಪ್ಪಂತೊಲ್ದು ಪಂಡಿತಾಗ್ರೇಸರನ
ಮುಖ್ಯಮೆನಿಪಾ ಸಾಂಖ್ಯಮತನಿರಸನಂಗೆಯ್ದ ಕಥೆಯ ಕೇಳ್ ಸೂರಸಚಿವ

ಚರಣತಳಕೆಱಪುಪೇಂದ್ರ ಬ್ರಹ್ಮದೇವೇಂದ್ರ
ಸುರದಾನವಾಶಾಧಿಪರ ನಾಗನಾಯಕರ
ನರಲೋಕದೊಳ್ ಚರಿಯಿಸುವ ದಿವ್ಯಯೋಗಿಗಳ ಪಡಿರೂವು ನಖರದೊಳಗೆ
ಪಿರಿದಾಗಿ ಪೊಳೆಯೆ ಮೂಜಗಮೆಯ್ದೆ ತನ್ನ ಬಂ
ಧುರಪದದ ಕೊನೆಯೊಳಗವಿದುದೆಂಬುದಂ ಪೇಱಂ
ಭರದೆ ಕನ್ನಡಿಪಂತೆ ಮೆಱೆವ ಗುರುನೀಲಕಂಠಂ ಪೊರೆಗೆ ಸಜ್ಜನರನು ೧

ಎಲೆ ಸಾಂಖ್ಯವಾದಿ ಕೇಳ್ ಪ್ರಕೃತಿತತ್ತ್ವಂ ಪೇಱಂ
ಸಲೆ ವಿಕೃತ[1]ಮತಿ[1]ಜಡಂ ಚೈತನ್ಯವರ್ಜಿತಂ
ನಲಿದದುಂ ಸತ್ವಾದಿಗುಣಸಾಮ್ಯರೂಪಾಗಿ ಜಗಕಾದಿಯಾಗಿ ಪೆತ್ತಂ
ಒಲವಿನಿಂದೊಂದೊಂದುಗುಣಮಧಿಕಮಾಗಿ ಮು
ತ್ತಲಸದಿತಱ ಗುಣಂಗಳಂ ಗ್ರಹಿಸಿಯುಮಱಂ ಸ
ಕಲಜಗನ್ನಿಕರಂಗಳಂ ಸೃಜಿಪುದೆಂಬೊಡದುಮಾಗದನಿಶಂ ಭಾವಿಸೆ ೨

ಪಿರಿದುಮೊಂದೊಂದು ಗುಣವೃದ್ಧಿಯೊಳ್ ಸಾಮ್ಯಗತಿ
ಯಿರದೆ ಕೆಟ್ಟಪುದಾಗಿ ಜಗಮುಂ ಪ್ರಧಾನಮತಿ
ಭರದೆ ಪುಟ್ಟಿಸಲಱಯದುಱ ಪ್ರಕೃತಿತತ್ತ್ವಮದು ಕೆಟ್ಟಕರ್ಮಮತಿಶಯದೊಳು
ಪರಿಣಾಮಮೆಯ್ದುಗುಂ ವಿಶ್ವರೂಪದೆ ಪ್ರಕೃತಿ
ನಿರುತಮೆಂಬೊಡೆ ಕೇಳ ಪರಿಣಾಮಮದು ಮತ್ತೆ
ಕರಮೇಕದೇಶರೂಪಮೊ [2]ಪೂರ್ಣ[2]ರೂಪಮೋ ಪೇಳದಂ ಸಾಂಖ್ಯವಾದಿ ೩

---

[1] ದುರಿ (ಕ) [2] ಪುಣ್ಯ (ಕ)

* (ಕಗ) ಪ್ರತಿಗಳಲ್ಲಿಲ್ಲ.

ವಿಸುಪೇಕದೇಶರೂಪದಿನೆಂಬೊಡಾ ಪ್ರಕೃತಿ
ಗೊಸೆದು ಕಾರ್ಯತ್ವಮೊಂದಿತು ಕಾರಣತ್ವಮದು
ನಿಸದಮಲ್ತದಱಿಂ ವಿನಶ್ವರತ್ವಂ ಸಾವಯವತೆ ಸಾರ್ದುದು ನಿಕ್ಕುವಂ
ಒಸೆದದಱಿನಾ ಪ್ರಕೃತಿಕಾರ್ಯರೂಪಮದಾಯ್ತು
ಮಸಕದಿಂದಂ ಜಗಂಗಳನೊಲ್ದು ಪುಟ್ಟಿಪುದು
ಸಸಿನೆ ದೊರೆಕೊಳ್ಳದದಱಿಂ ಪ್ರಕೃತಿತತ್ತ್ವಮದು ಜನಕೆ ಕಾರಣಮೆನಿಪುದು ೪

ಪರಿಪೂರ್ಣರೂಪದಿಂದಂ ಮಾನಮಂ ಮಿಾಱಿ
ಪರಿಣಮಿಪುದಾ ಪ್ರಕೃತಿಯೆಂಬೊಡಂ ಕೇಳ್ ಮತ್ತೆ
ಪರಿಣಮಿಪುದಾವ ವೇಳೆಯೊಳಾಗಳಾ ಪ್ರಕೃತಿ ಜಗದುದಯಮಂ ಮಾಡಲು
ಪಿರಿದಶಕ್ತತೆವೆತ್ತು ತೋಱುಗುಮದೇಕೆನಲ್
ನಿರುತದಿಂದೇಕಕಾರ್ಯಂ ತಾನುಮಾದುದಱಿ
ನಿರದೀ ಜಗಂಗಳಂ ಪರಿಣಾಮಮೆರಡಱಿಂ ಪ್ರಕೃತಿ ಸೃಷ್ಟಿಸಲಱಿಯದು ೫

ಪ್ರಳಯದೊಳ್ ನಾಶಮಪ್ಪಾ ಪ್ರಕೃತಿಗೆಂದೆಂದು
ತಿಳಿದುನೋಡಲ್ ಜಗಂ ನಿರ್ಮಾಣಕರ್ತೃತ್ವ
ಮಳವಡದು ಮತ್ತದಱಿನೊಗೆದ ಗುಣತತ್ತ್ವಕ್ಕೆ ನಾಶಮಂ [1]ಪೇಳವೇಡ[1]
ಘಳಿಲನದಱಿಂ ಮುನ್ನೆ ಕೆಟ್ಟಪೂರ್ದಾಗಿ ನಿ
ರ್ಮಳಮಹಾದೇವಂಗೆ ಪರಮಾತ್ಮರೂಪಂಗೆ
[2]ತೊಳಪ[2] ಪರಬೊಮ್ಮನೆನಿಸುವ ಶಿವಂಗೀಶಂಗೆ ತತ್ತ್ವಕುಲಕಾರಣಂಗೆ ೬

ಬಗೆವೊಡಾ ಸರ್ವೇಶ್ವರಂಗೆ ಸರ್ವಜ್ಞಂಗೆ
ಸೊಗಯಿಸುವನಂತನಾಮಂಗಳೊಳವ್ವೆಱ[3]ಳಗೆ
ಮಿಗೆ ಭವಂ ಶರ್ವ ರುದ್ರರ್ ಭೀಮನುರುಮಹಾದೇವನುಗ್ರಂ ಸೋಮನು
ನೆಗಳ್ದ ಪಶುಪತಿಯೆನಿಸುವಷ್ಟನಾಮಂಗಳಿಂ
ತಗುಳ್ದವನಿಜಲಮಗ್ನಿವಾಯುಗಗನಂ ಭಾನು
ಮೃಗಲಕ್ಷ್ಮನಾತ್ಮನೆಂದೆಸೆವಷ್ಟತನುಗಳಂ ನಿರ್ಮಿಸಲ್ ವಾಂಛೆಗೆಯ್ದು ೭

ಪರಶಿವೇಚ್ಛೆಯಿನಾ ಕುಟಿಲೆಯುದಯಮದಱಿಂದೆ
ಪಿರಿದು ಮಾಯಾತತ್ತ್ವಮುದಿಸಿತಾ ಗ್ರಂಥಿಯಿಂ
ದುರುತರ ತ್ರಿಗುಣಾನ್ವಿತಂ ಪ್ರಧಾನಂ ಮತ್ತಮವ್ಯಕ್ತಮೆನಿಸಿ ಮೆಱೆವ

---

[1] ವೇಳ್ದವೇಡ (ಗ) [2] ತುಳಿವ (ಗ) [3] ದ (ಕ)

ಸುರುಚಿರಪ್ರಕೃತಿಯುದಯಂ ಬಳಿಕ್ಕದು ವಲಂ
ಸರಳಪುರುಷಾಧಿಷ್ಠಿತಂ ದಲೆನಿಸುತೆ ನಿರಂ
ತರಮಿಾಶಶಾಸನದಿನೀ ಜಗಂಗಳನೊಲ್ದು ಸೃಜಿಯಿಸುವದೆಂಬುದುಚಿತಂ ೮

ಇಂತಲ್ಲದೇ ಸದಾ ಜಡನಚೇತನಮಾದ
ದುಂ ತವೆ ಜಗತ್ಕರ್ತೃವೆಂತಕ್ಕುಮಿಾ ಪ್ರಕೃತಿ
ಮುಂತಱಿಯದಾ ಸಾಂಖ್ಯವಾದಿಗಳ್ ಜಱುಚುವರ್ ಪ್ರಕೃತಿ ದೈವಂ ಎನುತ್ತೆ
ಸಂತರದನೆಂತು ಕೇಳ್ವರೊ ನಿರೀಶ್ವರಸಾಂಖ್ಯ
ಮಂತಣಂಗೆಯ್ದು ನೋಡಲ್ ಕಪಿಲಮುನಿಯಿಂ ನಿ
ರಂತರಂ ತೋರ್ಪ ನಿನ್ನೀ ಮತದೊಳುಂಟೆ ಸನ್ಮೋಕ್ಷಮಾರ್ಗಂ ಭಾವಿಸೆ ೯

ಸನಕಶುಕಯೋಗೀಂದ್ರ ವಾಮದೇವರ್ ಸನಂ
ದನನಮರ[1]ಗಣವರರ್[1] ಮೊದಲಾದರೆಲ್ಲರುಂ
ಮಿನುಪ ಸಾಂಖ್ಯಮತಾನುಗತರೆ ಸೇಶ್ವರಸಾಂಖ್ಯದೊಳ್ ಪವ[2]ಣ್ದೋಱುವಂತೆ
ವಿನಯದಿಂದಂ ನಿರೀಶ್ವರಸಾಂಖ್ಯದೊಳ್ ತೋಱಿ
ದಿನಿಸುಂ ಪ್ರಮಾಣಮನುಮಾನಾದಿಯೆನೆ ನಿನ್ನ
ಘನತರಮಹೇಶನುಂಟೆಂಬುದರ್ಕಾವ ಪವಣೆಂಬೊಡದನೊಲ್ದು ಕೇಳು ೧೦

ಎಂದೆಂದುಮಿಾಶನುಂಟೆಂಬುದರ್ಕೆಲೆ ಸಾಂಖ್ಯ
ಮುಂದೆ ಪವಣಂ ಕೇಳ ಗಿರಿಶಿಖರದಲ್ಲಿ ತಱು
ಸಂದ ಬಾಷ್ಪಂಗಂಡದರ್ಕೆ ಕಾರಣಮಪ್ಪ ವಹ್ನಿಯಂ ತರ್ಕಿಪಂತೆ
ಚಂದವಡೆದೀ ಜಗಂ ಕಾರ್ಯಮಾದುದಱಿಂದೆ
ಸಂದ ಕಾರಣನದರ್ಕೀಶನೆಂದಾವಗಂ
ಮುಂದುವರಿದುಲಿಗುಮೆಲ್ಲಾ ತಂತ್ರಸಮುದಯಂ ಭಾವಿಸಲ್ಕಿದು ಸಿದ್ಧವು ೧೧

ಮತ್ತೆ ಕೇಳೆಲೆ ನಿರೀಶ್ವರ ಸಾಂಖ್ಯವಾದಿ ನೀಂ
ಮತ್ತತ್ವದಿಂ ಬಾಷ್ಕಳಂಗೆಯ್ಯದಿರ್ ನಾಡೆ
ಪತ್ತಿತೋರ್ಪಗ್ನಿಯಿಲ್ಲದೆ ಬಾಷ್ಪಮೊಂದೆಡೆಯೊಳುಂಟಾಗಿ ತೋರ್ಪುದೆಂದು
ಬಿತ್ತಿಗರ್ ಕೈವಿಡಿಯರಾ ಯುಕ್ತಿಯಂ ನೋಢ
ಲೆತ್ತಾನುಮಗ್ನಿಯಿಲ್ಲದೆ ಬಾಷ್ಪಮುಳ್ಕೊಡದು
ಬಿತ್ತರಂ ಧೂಮವಲ್ಲದು ಧೂಮಸದೃಶದಾ ಬಾಷ್ಪಸಂತತಿಯೆನಿಸುಗುಂ ೧೨

---

[1] ವರಗಣರ್ (ಗ) [2] ಣಾ (ಕ)

ಜಲಸಮೂಹದವೊಲ್ ಮರೀಚಿಕಾಜಲಮಿರಲ್
ಜಲಮಪ್ಪುದೇ ನೋಡಲಂತೆವೊಲ್ ಬಾಷ್ಪಮದು
ಸಲೆಧೂಮವಲ್ತಗ್ನಿಯಿರ್ದೆಡೆಯೊಳಲ್ಲದಿರದಾ ಧೂಮತತಿ ಪರಿಕಿಸೆ
ನೆಲೆಯಾದ ಧೂಮಮುಂಟಾದೆಡೆಯೊಳಾವಗಂ
ಜ್ವಲನನುಂಟೆಂಬುದೇ ಸರ್ವದರ್ಶನ ಮತಂ
ಲಲಿತಜಗಮುಂಟಾದ ಕತದಿಂದಮೀಶ್ವರಂ ಕರಮುಂ[1]ಟೆದೇ ಸಿದ್ಧವು[1] ೧೩

ಇಂತು ನಿತ್ಯತೆವೆತ್ತು ತೋರ್ಪ ಪರಮೇಶ್ವರನ
ಮುಂತೆ ಶ್ರುತಿಯತ್ಯತಿಷ್ಠರ್ದಶಾಂಗುಲನೆಂದು
ಮುಂತುಗೊಂಡುಲಿಯುತಿರೆ ಸಾಂಖ್ಯ ನಿನ್ನಯೆ ಕರಮನಿತ್ಯಶಬ್ದಸಮೂಹವು
ಎಂತತರ್ಕ್ಯಂಗೆ ನಿತ್ಯಂಗೆ ಸಂಪಾದಿಸುಗು
ಮಂತಮೆಯ್ದುತ್ತನಿತ್ಯತೆಯನಿದು ಮಿಗೆಪೊಸತು
ಸಂತತಂ ಬಱಿದೆ ಗಳಪುವ ಸಾಂಖ್ಯರುಕ್ತಿಗಳ್ ದೋಷಸಾಧನೆಮಪ್ಪುವು ೧೪

ಪರಮಕಾರಣಮೀಶತತ್ತ್ವದಱಿವಿಂಗೆ ಭಾ
ಸುರಮಾನಮನುಮಾನಮಲ್ಲದೇ ಮತ್ತೆ ಬಂ
ಧುರತರಾಕಾಶಗುಣಮಾದ ಶಬ್ದಸ್ವರೂಪದೆ ತೋರ್ಪ ವೇದನಿಕರಂ
ಪಿರಿದುಕಾರಣಮಲ್ತೆನಲ್ ನಿಮ್ಮ ಶಂಕರಂ
ನಿರುತದಿಂ ತನ್ನ ತಾನಱಿಯಿ ಸಂಸ್ಕೃತಿಗಳವು
ಪರಮೇಶ ಕೃತಕಂಗಳಿನ್ನೀಶಜ್ಞಾನದೊಳ್ ಪವಣುಂಟೆ ಬೇಱತಂಬೊಡೆ ೧೫

ನಲಿದು ಕೇಳ್ ಮಾಯಾತನುಂ ಪಿಂಗಿ ವರ್ತಿಸುವ
ಸುಲಭದಿಂದೀಶನೊಳನನ್ಯಭಾವದೊಳಿರ್ಪ
ಲಲಿತಶರಣರ ಮನೋಮಧ್ಯದೊಳ್ ತನ್ನ ತೋಱುತ್ತಿರ್ಪನೀಶನೊಸೆದು
ನೆಲೆಯಿದೆನೆ ಮತ್ತೀಶನಿಂದಾದ ವೇದಂಗ
ಳಲಘುಪ್ರಮಾಣಂಗಳಂ ಬಾರಿಸಳವಲ್ತು
ಸಲೆದೃಷ್ಟಮಾದುದೆಲ್ಲಂ ನಷ್ಟಮಕ್ಕುಮೆಂದೊಲ್ದು ವೇದಂ ಬಣ್ಣಿಕುಂ ೧೬

ಪಿರಿದು ಸಂದೃಶ್ಯಮಾನಂ ದಲೆನಿಸುವ ಮತ್ತೆ
ಭರದಿಂದೆ ಪ್ರತ್ಯಕ್ಷಮಾಗನಿತ್ಯಮದಾದ
ನಿರುತ ಹೇತುವಿನಿಂದೆ ನಿತ್ಯಮಾದೀಶ್ವರನನಱಿಯಲಳವಲ್ತೆಂಬೊಡೆ

---

1 ಟೆಸದಿರ್ದವು (ಗ)

ಇರದೆ ಕೇಳನುಮಾನವಮುಖ್ಯಮಾನಂಗಳೊಳ್
ಪರಿಕಿಪೊಡೆ ಪ್ರತ್ಯಕ್ಷರಹಿತಮಾಗಿರ್ಪ ಭಾ
ಸುರಮಾನವಿಸರಮುಂಟೇ ಲೋಕವಿತತಿಗಳೊಳಾವನೊರ್ವಂ ನೋಳ್ಪಡೆ ೧೭

ಸೂರಯೋ ಯತ್ರಪಶ್ಯಂತಿ ಎನುತುಂ ಬಳಿಕೆ
ಸೇರಿ ಪಶ್ಯಂತಿ ಸೂರಯ ಎಂಬ ವಾಕ್ಯದಿಂ
ದೋರಂತೆ ತತ್ತ್ವಮದು ಮಾನರಹಿತಮೆ ಭಕ್ತಿಗೋಚರಂ ಪರಮೇಶ್ವರಂ
ಆರಯ್ದು ನೋಡನಿತ್ಯನೆ ತಚ್ಛಿವಂ ಮತ್ತೆ
ಸಾರವೇದಂ ನಮೋ ಭಕ್ತಾಃ ಪ್ರಣಶ್ಯಂತಿ
ವಾರ[1][ಣಾಸೀ] ಎಂ[1]ದು ಪೇಳುತಿರೆ ನಶ್ವರಂಗಳ್ ವಸ್ತುಗಳ್ ಕಿಡುವುವು ೧೮

ಪಿರಿದುಂ ನಿಕೃಷ್ಟತರಮಪ್ಪ ವಿಷ್ಣ್ವಾದಿಗಳ
ಸರಿರಂಗಳೆಯ್ದೆ ಸಂವರ್ತದೊಳ್ ಕೆಡುವಂತೆ
ಪರಮಸರ್ವೇಶ್ವರನ ಕಾಯಮದು ಬ್ರಹ್ಮಕಲ್ಪಾದಿಗಳೊಳಳಿದುದುಂಟೆ
ಕರಮಳಿವ ಕಾಯಂಗಳಳಿಗುಮಲ್ಲದೆ ಮಹೇ
ಶ್ವರಕಾಯಕೆಂದೆಂದುಮಳಿವಿಲ್ಲ ನಿಕ್ಕುವಂ
ದುರುಳಸಾಂಖ್ಯನೆ ಬಱಿದೆ ಗಳಪದಿರ್ ನೀಂ ಜಗತ್ಕಾರಣಂ ಶಿವನೆ ನಿತ್ಯಂ ೧೯

ಮರಳಿ ಕೇಳ್ ಜ್ಞಾನಮುಖ್ಯಪ್ರಮಾಣಂಗಳಿಂ
ಭರದೆ ವಿಷಯಿೀಕೃತಂ ತತ್ತ್ವಮದು ಭಾವಿಸಲ್
ನಿರುತದಿಂ ಮಾನಸಾತೀತಮೋ ಹೇತು ದೃಷ್ಟಾಂತರಹಿತಮೆ ತತ್ತ್ವವು
ಪಿರಿದುಮಂತಾದೊ[2]ಡಾ ತತ್ತ್ವಮುಂ[2] ಜ್ಞಾನಿಗಳ್
ಕರಮೆ ಮತ್ತಾವುಪಾಯದಿನಱಿದು ಭಕ್ತಿಮಿಗೆ
ಹ[3]ರಿಸ[3]ದಿಂದಮುಪಾಸ್ತೆಗೆಯ್ದು ಮೋಕ್ಷಮನೆಯ್ದುವರ್ ನಾಡೆ ಲೋಕದೊಳಗೆ ೨೦

ತಿಳಿ ಕನಕಪರಿಮಾಣಮಱಿವುದರ್ಕಾ ತ್ರಾಸಿ
ನೊಳಗಿಟ್ಟ ಗುಂಜಿ ಕನಕಕ್ಕೆಣೆಯೆ ಆದಱಿಂತೆ
ಲಲಿತ ಪರಮೇಶ್ವರಪ್ರತ್ಯಾಯಕಂ ಪವಣ್ನಾಡಿ ಶಿವಂಗೆಣೆಯೆ ಮತ್ತಂ
ಫಳಿಲನದ್ರಿಯನೆಚ್ಚ ಬಾಣಮದು ತಪ್ಪುವುದೆ
ಲುಳಿತೇಶ್ವರನೊಳಾದ್ಯರುಂ ಪ್ರಯೋಗಿಸಿದ. ನಿ
ರ್ಮಳ ಹೇತುದೃಷ್ಟಾಂತಮಾಪವಾದಿಗಳಿಂದೆ ತೊಲಗಿಸಲ್ಕಳವ[4]ಲ್ತದು[4] ೨೧

---

1 ಣಶಿವೋಎಂ (ಕಗ) ಣಶಿವೋಲೆಂ (ಟ) 2 ಡಂ ತತ್ತ್ವಮು (ಗ) 3 ರುಷ (ಗ)
4 ಲ್ತವು (ಕ)

[1]ಬಱಿಂದೆ[1] ಜಱುಚಲ್ವೇಡ ಸಾಂಖ್ಯ ಮೇಲಱಿಯದೇ
ನೆಱೆಸಂದ ಪರಮೇಶ್ವರಂ ಜಗತ್ತಿಂಗೆ ತಾ
ನುಱುವ ಕರ್ತೃವಣಂ ದಲಲ್ಲೆಂದು ಕೆಟ್ಟನುಡಿಗಳಿನಾವಗಂ ಮುದದೊಳು
ತಱಿಸಂದು ಪೂರ್ವದೊಳ್ ಕಪಿಲಮುನಿವರನುಸುರ್ದ
ವಿಱುಪ ಯೋಗಂ ಶಿಷ್ಟರನುಮತದೆ ಭಾವಿಸ
ಲ್ಕುಱಿ ಶುದ್ಧನನುಪಮಿತನಗುಣಾನ್ವಿತಂ ಬುದ್ಧನುರುಕಲಾತೀತನೆನಿಪ ೨೨

ಭರದಿಂದಣೋರಣೀಯಾನೆಂಬ ವಾಕ್ಯದಿಂ
ದುರುತರಪ್ರತಿಪಾದ್ಯನಾದೀಶ್ವರಂ ಬಳಿ
ಕ್ಕೊರಿಯೆ ನಾನಾತ್ಮನಾಗೆಲ್ಲಿಯುಂ ಪೂರ್ಣನಾಗಿರುತಿರ್ಪನಿದು ನಿಕ್ಕುವಂ
ಪಿರಿದದಱನೇಕಾತ್ಮಕಂ ವಿಶ್ವಮೆಂದಾರ್ಯ
ರಿರದುಸುರ್ವರಿಂತೆಸೆವ ಶಿವನೆಂತು ಭಾವಿಸಲ್
ನಿರುತದಿಂ ಪ್ರಾದೇಶಿಕನುಮಪ್ಪನೆನೆ ಸಾಂಖ್ಯನತಿಹರ್ಷದಿಂ ನುಡಿದನು ೨೩

ಇರದೆ ಕೇಳ್ ನಿಮ್ಮ ಶಿವನಮಲಾತ್ಮಕಂ ವಲಂ
ನಿರುತದಿಂ ದುರ್ವಲಾತ್ಮರೊಳೆಂತು ತೋಱುವಂ
ಸರಳದೇಹೇಂದ್ರಿಯಾದಿಗಳಿಲ್ಲದಿರ್ಪ ಶಿವನುರುದೇಹಿಗಳೊಳಿರ್ಪನೆ
ವರ[2]ಗು[2]ಣವಿನಿರ್ಮುಕ್ತನಾ ತ್ರಿಗುಣಯುತರೊಡನೆ
ಹ[3]ರಿಸ[3]ದಿಂದೆಂತಿರ್ಪನತಿವಿಶುದ್ಧಾತ್ಮಕಂ
ಕರಮಶುದ್ಧಾತ್ಮರೊಡನೆಂತಿರ್ಪನೆಲೆ ನಿತ್ಯನೆಂತನಿತ್ಯರೊಳಿರ್ಪನು ೨೪

ಅದಱನಾ ಶಂಕರಂ ಸುಖದುಃಖಕಾಲಯಂ
ವಿದಿತನುಪ್ಪಂ ಗಡೆನೆ ಕೇಳ್ ಸಾಂಖ್ಯ ಮಱುವಾತ
ನುದಿತವೇದಂ ಮುಗುಳ್ದಣೋರಣೀಯಾನೆಂದು ನುಡಿದರ್ಥಮುಂ ಭಾವಿಸೆ
ಸದಮಲಶಿವಂ ಸರ್ವಜೀವರೊಳ್ ಚೈತನ್ಯ
ಪದನಾಗಿ ಮತ್ತಮಾ ಜೀವರ್ಗೆ ಸಂತತಂ
ಮುದದಿನಾಧಾರಮಾಗಿರ್ಪನೆನುತುಂ ನುಡಿಗುಮದಱಿಂದಮಾ ಶರ್ವನು ೨೫

ಪಿರಿದು ಜೀವಾನೀಕದೊಳಗೆ ಪರಮಾರ್ಥಮಾ
ಗಿರನದೆಂತೆನೆ ಸೂತ್ರಧಾರಿ ಬೊಂಬೆಗಳೊಳಗೆ
ಕರಮೆ ಪೊಕ್ಕಿರದೆ ಸಾಕ್ಷಿಕನಾಗಿ ಬೊಂಬೆಗಳನೆಂತಾಡಿಸುವನಕ್ಕಱಿಂ

---

1 ಭರದೆ (ಗ) 2 ಗ (ಗ) 3 ರುಷ (ಗ)

ಪರಮೇಶ್ವರಂ ಸರ್ವಜೀವಜಾಲಂಗಳಂ
ನಿರುತದಿಂ ಪ್ರೇರಿಸುವನವನವೊಲ್ ಮತ್ತೆ ಭಾ
ಸುರ ಜೀವರೊಡನೊಗೆಯುನವರೊಡನೆ ನಾಶನಮುಂ ತವೆ ಪೊಂದನಾ ಶಂಕರಂ ೨೬

ಜಲಕುಂಭತತಿಗಳೊಳ್ ಪ್ರತಿಬಿಂಬಿಸಿ‌ರ್ಪ ವಿಲಸ
ದಲಘುಚಂದ್ರಂ ಕುಂಭನಿಸರಂಗಳೊಡೆಯಲ್ಕೆ
ಸುಲಭದಿಂದವಱೊಳಗೆ ಬಿಂಬಿಸುವ ಚಂದ್ರಮಂ ನಾಶಮಂ ಮಿಗೆಪಡೆವನೆ
ಲಲಿತ ಘಟಮಧ್ಯದೊಳ್ ತೋರ್ಪ ಗಗನಂ ಘಟಂ
ಸಲೆ ಭಗ್ನಮಾಗೆ ತಾಂ ಕಿಡುವುದೇ ದರ್ಪಣದೊ
ಳೊಲವಿನಿಂ ತೋಱುವಾ ವ್ಯಕ್ತಿ ಮುಕುರದ ಕಾಂತಿಕಿಡೆ ಕೂಡೆ ತಾನಳಿವುದೆ ೨೭

ಅಂತೆವೊಲ್ ಸರ್ವಜಂತುಗಳಳಿಯಲವಱೊಳಗೆ
ಸಂತತಂ ಪ್ರತಿಬಿಂಬಿಸುವ ಶಿವಂ ಕಿಡುವನೇ
ಮುಂತಱಿಯದೆಲೆ ಸಾಂಖ್ಯ ಜಱುಚುತಿರ್ಪಯ್ ನಿನ್ನ ಕುತ್ಸಿತೋಕ್ತಿಗಳೆಲ್ಲಿಯುಂ
ಮಂತಣಂಗೆಯೆ ಸಲ್ಲವೀ ಜೀವಜಾಲದೊಳ
ಗುಂತೆ ತೋಱು[1]ತ್ತಿರ್ಪ[1] ದುರವಸ್ಥೆಗಳ್ ನಾಡೆ
ಕಂತುಹರನಂ ಮುಟ್ಟವೆಂತೆಂಬೊಡಂ ಕೇಳ ಮನವುಣ್ಮೆ ಸಂತಸದೊಳು ೨೮

ಸುರಮಾರ್ಗದಲ್ಲಿ ನಿರ್ಮಲತೆವಡೆದೊಪ್ಪುತಂ
ಚರಿಯಿಸುವ ದಿನಮಣಿಪ್ರತಿಬಿಂಬಮಾವಗಂ
ಧರಣೀಜಲಂಗಳೊಳ್ ಮೈದೋಱಲಾ ಜಲಂಗಳೊಳೊಗೆದು ತೋಱುತಿರ್ಪ
ಉರುಭಂಗಭಂಗುರತ್ವಪ್ರಮುಖ ಜಲವಿಕೃತಿ
ಪರಿಕಿಪೊಡೆ ಜಲಕಲ್ಲದೇ ರವಿಗದುಂಟೆ ಕೇ
ಳಿರದಂತೆ ಲೋಕದಂತರ್ಯಾಮಿಯೆನಿಪ ಶಿವನೊಳ್ ಜಗದ ಪ್ರಕೃತಿ ವಿಕೃತಿ ೨೯

ಅದಱಿಂದ ಜೀವ[2]ವಾ[2] ಶಿವನಾಗಲಱಿಯನಿಂ
ತಿದು ನಿಕ್ಕುವಂ ಜೀವನೇ ಜೀವನಾವಗಂ
ಪದೆದುನೋಡಲ್ ಶಿವನೆ ಶಿವನೆನಿಸುವಂ ಮತ್ತೆ ಶಿವನೊಡೆಯನಾಂ ಭೃತ್ಯನು
ವಿದಿತಮಿದೆಯೆಂಬ ಭಾವನೆಯಿಂದೆ ಸತ್ಕ್ರಿಯೆಗ
ಳೊದವಿನಿಂ ಚರಿಪರ್ಗೆ ತನುಘಟಂ ತಿಂಬಿರ್ದ
ಸದಮಲಜ್ಞಾನಾಂಬುವೊಲ್ ಪರಶಿವೆಂದು ನಿಚ್ಚಂ ಬಿಂಬಿಸುತ್ತಿರ್ಪುದು ೩೦

---

1 ತಿರ್ಪರ (ಗ) 2 ನಾ (ಗ)

ಇಂತೆಂಬ ಭಾವನೆಗಳಿಲ್ಲದಿರ್ಪರ್ಗೆ ನೋ
ಡಂತವರ ಕಲುಷಿತಸ್ವಾಂತಂಗಳೊಳ್ ಶಿವಂ
ನುಮಂತುಗೊಂಡತಿನಿರ್ಮಲತ್ವದಿಂದಂ ತೋಱನೆಂತೆನಲ್ ಧರಣಿಯಲ್ಲಿ
ಸಂತತಂ ಕದಡಿರ್ದ ನೀರೊಳಗೆ ಶಶಿಬಿಂಬ
ನೆಂತು ತೋಱುಗು[1]ಮಂತೆ[1] ಭಕ್ತಿಹೀನರ್ಗೆ ಮ
ತ್ತಂತೆ ಮಾಸಿದ ಮುಕುರದೊಳ್ ತೋರ್ಪ ಪರಿಜಿನಂತೆಯ್ದೆ ತೋಱಂ ಪರಶಿವಂ ೩೧

ಮರಳಿ ನೋಡೆಲೆ ಸಾಂಖ್ಯ ನೀಂ ಜ್ಞಾನದಿಂದವೇ
ಪರಮಮೋಕ್ಷಂ ಸಾರ್ಗುಮೆನುತೆ ನುಡಿವೈ ಬಳಿಕೆ
ನಿರುತಮಾ ಬಱಜ್ಞಾನದಿಂ ಮೋಕ್ಷಮಪ್ಪುಡೇ ಸತ್ಕ್ರಿಯಾರಹಿತ ನರರ್ಗೆ
ಪುರುಷನೊರ್ವಂ ಭೂಮಿಪಾಲನಂ ದೂರದೊಳ್
ಕರಮಱಿದ ಮಾತ್ರದೊಳೆ ಪಾಲಿಸನದೆಂತೆಂತೆ
ಹರನುಮಾ ವಿಧದೆ ಬಱಯಱವಿನಿಂದಱದವರ್ಗೆ ಮೋಕ್ಷಮಂ ಕುಡಲಱವನೆ ೩೨

ಅನುನಯದಿನಾವನೊರ್ವಂ ಗಜಾರೋಹಣಂ
ಮಿನುಪ ತುರಗಾರೋಹಣಂ ರಥಾರೋಹಣಂ
ಯೆನಿಪಿವುಂ ಮೊದಲಾದ ಶಸ್ತ್ರಶಾಸ್ತ್ರಂಗಳಂ ನೆಱೆ ಅಱತ ಮಾತ್ರದಿಂದೆ
ತನುಕರ್ಮದಿಂದಭ್ಯಸಿಸಿದ ಮಾನವನವೊಲ್
ಕೊನದರ್ದು ಸಮರಾಂಗಣದೊಳಿಱದು ಮೆಱೆಯಲ್ ಸಮ
ರ್ಥನು[2]ಮಲ್ತಿದೆಂ[2]ತಂತೆ ಬಱಯಱವಿನವರೆಯ್ದಲಱನರೇ ಪರಶಿವನನು ೩೩

ಮಿಗೆ ಕೃಷಿಕನೊರ್ವನುನ್ನತ ಕೃಷಾರ್ಥಂಗಳಾ
ಗೊಗೆದ ನಾನಾಬೀಜನಿವಹಮಿದುರ್[3]ದ[3]ನೆಯ್ದೆ
ಸೊಗಸಿನಿಂದಱದ ಮಾತ್ರದೆ ಕ[4]ಮ್ಮ[4]ಗೆಯ್ದು ಬಿತ್ತಿದ ಕುಡಿಯನಂತೆ ಮುದದಿಂ
ನೆಗಳ್ದ ತದ್ಬೀಜಫಲಮಂ ಪಡೆಯನೆಂತಂತೆ
ನಗಜಾಧಿಪತಿಯನಱದತಿ ಪೂಜೆಗೆಯ್ದವಂ
ತಗುಳ್ದಿಯ್ದುವಂತೆ ಮುಕ್ತಿಯನಣಿಯರಂ ಜ್ಞಾನಮಾತ್ರದಿಂದೆಯ್ದಲಱಯಂ ೩೪

ಪಿರಿದು ಸರ್ವಾದ್ವೈತವಿಜ್ಞಾನಮೆಯ್ದೆ ಭಾ
ಸುರ ಮುಕ್ತಿಕಾರಣಂ ಸರ್ವಭೂತಂಗಳೊಳ್
ಪರಮೇಶನಿ[5]ಪ್ಪ[5]ದಱನೆನ್ನಲ್ಲಿಯುಂ ಶಿವನ ಕಂಡೆ ನಾನೆಂದು ಬಱದೆ

1 ಮೆಂತು (ಗ) 2 ಮೆಂತದಂ (ಕ) 3 ವ (ಕ) 4 ರ್ಮ (ಗ) 5 ರ್ಪ (ಗ)

ಹರಿಸದಿಂ ಕಣ್ಮುಚ್ಚಿಕೊಂಡಿರ್ದಪಂ ಮುಕ್ತಿ
ಗರಸನಪ್ಪನೆ ಶಿವನ ಸೇವೆಗೆಯ್ದುಳ್ಕಱಿಂ
ದುರುತರಜ್ಞಾನ ವೈರಾಗ್ಯ ಸತ್ಕರ್ಮನಿಷ್ಠೆಗಳುಳ್ಳ ಯೋಗಿಯಂತೆ ೩೫

ಮರಳಿ ಕೇಳಿಲೆ ಸಾಂಖ್ಯ ಪವನಯೋಗಂ ಬಳಿಕೆ
ಸರಳಷಟ್ಚಕ್ರಯೋಗಂ ಮಂತ್ರಯೋಗ ನಿ
ರ್ಭರ ಲಂಬಿಕಾಯೋಗ ಹಠಯೋಗ ಲಯಯೋಗನಿಕರಂಗಳಭ್ಯಾಸದೆ
ಪಿರಿದಹಂಭಾವದಿಂದಂ ಶಿವೋಹಂ ಎಂದು
ನಿರುತ ರಾಗದ್ವೇಷನಾ[1]ಸ್ತಿ[1] ಮುಖ್ಯಂಗ[2]ಳ
ತ್ಯುರುತರ[2] ಜ್ಞಾನಂಗಳಳಿಯದೇ ಬೊಮ್ಮ[3]ವಾನೆನೆ[3] ಮುಕ್ತಿದೊರಕೊಂಬುದೆ ೩೬

ಮಿನುಪ ದೇಹೇಂದ್ರಿಯಂಗಳ್ ಮನಃಪ್ರಾಣಾದಿ
ಯೆನಿಪುವಳಿಯದೆ ತನ್ನ ವ್ಯಾಖ್ಯೆಯುದೇ ಮಾಯಾರ
ಚನೆಗಳೊಳ್ ಸಿಲ್ಕಿ ನಾನಾ[4]ಕುಹಕಕುಪಥ[4]ಮಾರ್ಗಂಗಳೊಳ್ ತೊಲಗದಿರುತೆ
ಕನದಖಿಲವಿಷಯಂಗಳೊಳ್ ಮಗ್ನನಾಗಿ ತನು
ವಿನ ಮನಸ್ಸಿನ ವಾಯುತತಿಯ ವಿಪರೀತಭಾ
ವನೆವಿಡಿದು ನಡೆವ ದುರ್ಗುಣನಿರೀಶ್ವರಸಾಂಖ್ಯಯೋಗಿಗೆಲ್ಲಿಯದು [5]ಮುಕ್ತಿ[5] ೩೭

ಸಲೆ ದರ್ಶನಭ್ರಾಂತಿಯಿಂ ಶಬ್ದಜಾಲದೊಳ
ಗಲಸದುಲಿಯುತೆ ಕರ್ಮಬದ್ಧನಾಗುತೆ ವಿಷಯ
ಫಲಕಾಂಕ್ಷೆಗೆಯ್ಯುತ್ತೆ ಕುತ್ಸಿತಾಗಮವಿಡಿದು ಬಳಲುತ್ತೆ ದುರ್ಗತಿಯೊಳು
ನಲಿಯುತಂ ಯೋಗಿಯಾನೆಂಬ ಹಮ್ಮಿಂ ಮತ್ತೆ
ಜಲಕನೊಪ್ಪುತೆ ಬೊಮ್ಮ[6]ವಾ[6]ನೆಂಬ ಯೋಗಿ ತಾಂ
ತೊಲಗಿ ಮಾಯಾಪ್ರಪಂಚಂಗಳಂ [7]ವಿ[7]ಜ್ಞಾನಮುಕ್ತಿಯನದೆಂತೆಯ್ದುವಂ ೩೮

ಮಗುಳ್ದು ಕೇಳ್ ತನುಮನಃಪ್ರಾಣಾದಿಗಳನಳಿವು
ದೊಗೆದ ಗರುಡಧ್ವಜಾಜೇಂದ್ರಾದಿಗಳ್ಗಾಗ
ದಗಜಾಧಿನಾಥಭಕ್ತಿಜ್ಞಾನವೈರಾಗ್ಯನಿರತಕ್ರಿಯಾಯೋಗದಿಂ
ಸೊಗಯಿಸುವ ದೇ[8]ಹಾ[8]ದಿ ನಿವಹಂಗಳೆಯ್ದೆ ತೊ
ಟ್ಟಗೆ ದಗ್ಧಪಟ[9]ಭೃ[9]ಷ್ಟಬೀಜಂಗಳಂತೆ ಕೆ
ಮ್ಮಗೆ ಕೆಟ್ಟುಪೋಕುಮದಱಿಂ ಮುಕ್ತಿಗೆಯ್ದುವಂತಿತರಮಾರ್ಗದೊಳೆಯ್ದ[10]ರು[10] ೩೯

---

[1] ಗಿ (ಕ) [2] ಳುರು।ತರದ (ಗ) [3] ನಾನೆಂದೊಡಂ (ಗ) [4] ಕುಪಥ ಕುಹಕ (ಟ)
[5] ಮತ್ತೆ (ಗ) [6] ನಾ (ಗ) [7] ಸು (ಗ) [8] ವಾ (ಕ) [9] ಪ್ರ (ಕ) [10] ದು (ಗ)

ಪರಮ ಶಿವಭಕ್ತಿವಿಜ್ಞಾನಕ್ರಿಯಾಯೋಗ
ನಿರತಿಶಯಸಾನಂದಸಾಮರಸ್ಯಂಗಳೊಳ್
ಪರನೆನಿಪ ಶಿವಯೋಗಿಯೇ ಯೋಗಿಯಾತಂಗೆ ವಿಜ್ಞಾನಕ್ಕೈವಲ್ಯವು
ಕರತಳಾಮಳಕಮಾಗಿರ್ಪುದಿತರರ್ಗೆ ಬಂ
ಧುರಸಾಂಖ್ಯಯೋಗಿಗಳ್ಗದು ಮುಕ್ತಿ ಶಶಶೃಂಗೆ
ದಿರವಿನಂತೆಸೆದು ತೋರ್ಕುಂ ಸಿದ್ಧಮಿದು ಭಾವಿಪೊಡೆ ಲೋಕವಿಸರದೊಳಗೆ ೪೦

ಲಲಿತ ಸಮ್ಯಕ್ಪರಮ ಗಂಭೀರ ನಿತ್ಯ ನಿ
ರ್ಮಲ ನಿರಂಜನ ಸತ್ಯಸಹಜ ಶಿವತತ್ತ್ವಮಂ
ಜುಲಸುಬೋಧಾರಸಾಯನಪಾನಪರನೆನಿಪ ಶಿವಯೋಗಿಯೇ ಮುಕ್ತನು
ಒಲವಿನಿಂದೀ ಮಾರ್ಗಮಂ ಬಿಟ್ಟು ದುಷ್ಟ ದು
ರ್ಮಲ ದುರ್ವಿಷಯ ದುರಾಚಾರಮಾರ್ಗಂಗಳಂ
ಸಲೆಬಿಡದ ಪತಿತನೆನಿಸುವ ನಿರೀಶ್ವರಸಾಂಖ್ಯಯೋಗಿಯೇ ಕಡುಬದ್ಧನು ೪೧

ಮಗುಳ್ದು ಕೇಳ್ ಕ್ರಿಯೆಯಿಲ್ಲದೇ ಜ್ಞಾನದಿಂ ಮುಕ್ತಿ
ಬಗೆವೊಡೆಳ್ಳನಿತಿಲ್ಲ [1]ತ[1]ದ್ಜ್ಞಾನವಿಲ್ಲದೇ
ಮಿಗೆ ಬಱಿಯ ಕರ್ಮದಿಂದಂ ತೆಱಂಬೊಳೆವ ಮೋಕ್ಷಂ ಕರಂ ಕೆಯ್ಗೂಡದು
ಸೊಗಯಿಸುವ ಸುಜ್ಞಾನದಿಂ ಕ್ರಿಯೆಯಿನಾವಗಂ
ನಗಜಾಧಿಪತಿಯ ಸಲೆ ಅಱಿದು ಪೂಜಿಸದರ್ಗೆ
ನೆಗಳ್ದ ಮೋಕ್ಷಂ ವ್ಯೋಮತಾಮರಸದಂತೆ ಪಡೆಯಲ್ ಶಕ್ಯಮಲ್ತು ನೋಡೆ ೪೨

ಆದಱಿಂದೆ ಸತ್ಕ್ರಿಯಾಮಾರ್ಗಂಗಳಿಂದೆಸೆವ
ಸದಮಲಜ್ಞಾನದಿಂದಂ ಶಿವೋಪಾಸ್ತಿಯಂ
ಮುದದಿನಾವಂ ಮಾಳ್ಪನವನ ಹಸ್ತಸ್ಥಮಾಗಿರ್ಕು[2]ಮಾ[2] ಮುಕ್ತಿಪದವು
ಇದನಱಿಯದುಂತೆ ಬಱಿಯಱಿವಿನಿಂ ಮುಕ್ತಿಯಂ
ಪಡೆದೆಯ್ದುವೆಂ ನಿರತಮೆಂಬ ಸಾಂಖ್ಯಂಗೆ [3]ತ[3]
ತ್ಪದಮಾವಗಂ ಗೆಂಟಱೊಳ್ ತೋರ್ಪ ಸುರಚಾಪದಂತೆ ಪಡೆಯಲ್ಬಾರದು ೪೩

ಮಿನುಪ ರಾಗಾದಿಯುತನಾಗಿರುತೆ ಮತ್ತೆಯುಂ
ವಿನುತಯೋಗೀಶ್ವರನೆನಿಪ್ಪ ದುರ್ವಾಕ್ಯಮೆಂ
ತನುವಪ್ಪುದದಱಿಂದೆ ಸಾಂಖ್ಯಯೋಗಂ ಭ್ರಾಂತಿಮೂಲಂ ದಲೆನಿಸಿ ತೋರ್ಕುಂ

---

1 ದ (ಗ) 2 ಮಾ (ಕ) 3 ಸ (ಕ)

ಎನಸುಮವಿವೇಕದಿಂದಾಂ ಶಿವನೆಯೆಂದು ತೊ
ಟ್ಟನೆ ನುಡಿವ ಸಾಂಖ್ಯ ನಿನಗಂ ಮರಳಿ ಭಾವಿಸಲ್
ನನಸು ಚಾರ್ವಾಕಂಗವಿನಿ[1]ಸು[1]ಭೇದಂ ತೋಱದಿನ್ಕೇಳ ನಿನ್ನ ಮತಮಂ ೪೪

ಸದಮಲಪ್ರಚುರವಿಶ್ರುತ ಪರಮಭಕ್ತಗಣ
ಪದಸರೋರುಹಸಾಂದ್ರ ಮಕರಂದಪಾನ ಸ
ಮ್ಮುದಿತ ಚಂಚಚ್ಚಂಚರೀಕನನವರತ ಪಂಚಾಕ್ಷರೀಪ್ರಸಿತಹೃದಯಂ
ವಿದಿತ ಮಂಜುಳನೀಲಕಂಠಾಹ್ವಯಂ ಮನೋ
ಮುದದೆ ಪೇಳ್ದುರುತರಾರಾಧ್ಯಚಾರಿತ್ರದೊಳ
ಗಿದು ಸಾಂಖ್ಯಮತನಿರಸನದ ಕಥನಮಿದನಾಲಿಪುದು ಹರನ ಸದ್ಭಕ್ತರು ೪೫

1 ತು (ಗ)

# ಏಳನೆಯ ಸಂಧಿ

## *ಚಾರ್ವಾಕವಾದ ನಿರಸನ

ಸೂಚನೆ : ಪರವಾದಿ[1]ತುಂಡಂ ವಿಲೂನನಿಭ[1]ನೆನಿಪ ಭಾ
ಸುರಪಂಡಿತೇಶ್ವರಂ ಚಾರ್ವಾಕಮತಮನತಿ
ಭರದೆ ಜಯಿಸಿದ ಕಥನಮಂ ಕೇಳ ಸೂರಸಚಿವೇಂದ್ರ ನತಚರಣಯುಗಳ

ಸ್ವರ್ಗದುರ್ಗಸ್ಥರಂ ಗೀರ್ವಾಣರಂ ಕರಂ
ತಳ್ಗೊಯ್ಯುತವರ ಸಱುಮಿಂಡಿಯರ ಸೆಱಗೆಯ್ದು
ನುರ್ಗಿ ಮಾಧವನ ಪನ್ನತಿಕೆಯಂ ಕೊಱಚಾಡಿ ಮೂಲೋಕಮಂ ಬಾಧಿಸಿ
ಮುಳ್ಗ[2]ದಿದಿರಾದ ಕರಟೇಂದ್ರಾರಿಗರ್ವಮಂ
ನೆರ್ಗಿ ಮತ್ತವನಾಯುಗೊಂಡವನ ಸಮ್ಮಮಂ
ಜಗುರ್ವಿಳದ ತೆಱದೆ ಪೊಸಗಾಡಿಯಿಂ ಪೊದೆದ ಗುರುನೀಲಕಂಠ ಜಯತು ೧

ಶ್ರುತಿವಿರಹಿತನೆ ಬುಧಜನಾರಿಷ್ಟ ದುರ್ಮಾರ್ಗ
ವಿತತಿಯುತ ತಂತ್ರದೂಷಿತ ಪರಮಸನ್ಮಾರ್ಗ
ಮತಬಹಿಷ್ಕೃತ ಸರ್ವದರ್ಶನವಿದೂರ ಚಾರ್ವಾಕ ನಿನ್ನಯ ಮತವದು
ವಿತತಪಾಪಾನೀಕದಾಗರಂ ಗುದವದನ
ಹಿತಕರಂ ದುರ್ನೀತಿಮಾರ್ಗಯುಕ್ತಂ ಬಳಿ
ಕ್ಕತಿಶಯದೊಳದಱರವನೊರೆದಪೆಂ ಸಭ್ಯಜನಮೊಸೆದು ಮೆಚ್ಚುವ ಪಾಂಗಿನಿಂ ೨

ಇದು ಭಾವಿಸಲ್ ಸ್ಥೂಲಮಿದು ವಲಂ ನೋಡೆ ಕೃಶ
ಮಿದು ಮತ್ತೆ ಯೌವನಂ ಪಿರಿದುಮಿದು ವೃದ್ಧಮಿಂ
ತಿದು ಪಸುಳೆಯೆಂಬೀ ವಿಶೇಷಣವಿಶಿಷ್ಟಮಾದೀ ದೇಹಮೇ ಆತ್ಮನು
ಇದನುಳಿದು ಬಳಿಕೊರ್ವನಾತ್ಮನೆಲ್ಲಿಯುಮಿಲ್ಲ
ಪದೆದುನೋಡಲ್ ಪೂಗಪರ್ಣಚೂರ್ಣಂಗಳಿಂ
ದೊದಗಿ ಮಿಗೆ [3]ಕೆಂಪುತೋರ್ಪಂತೆ[3] ಭೂತವಿಕಾರಮದು ದೇಹಚೈತನ್ಯವು ೩

---

[1] ಕುಂಡಂ ವಿಲೂನನಿಭ (ಗ) ಕುಂಡಲಿ ಎನನಿಭ (ಟ) [2] ಗ್ಗ (ಗ) [3] ಕಂಪು ದೋರ್ಪಂತೆ (ಗ) * (ಕಗ) ಪ್ರತಿಗಳಲ್ಲಿಲ್ಲ.

ಮಿಸುಪ ದೇಹವೆ ಆತ್ಮ[1]ನ[1]ದಱಿಂದೆ ಬೇಱೆ ಮ
ತ್ತೆಸೆವಾತ್ಮನೊರ್ವನಿಲ್ಲೀ ದೇಹಮಂ ತೊಱೆದು
ಪೊಸೆದು ಸಣ್ಣಿಸಿನೋಡೆ ಬಿಳಿದು ಕರಿದಾಗಿ ದೀರ್ಘಂ ಕುಬ್ಜನಾಗಿ ಬಳಿಕಂ
ಒಸೆದು ತೋರ್ಪವನೊರ್ವನಂ ಕಾಣೆವದಱಿಂದೆ
ವಸುಮತೀಜಲವಹ್ನಿವಾಯುಗಳ ಪರಮಾಣು
ವಿಸರದಿಂ ಪ್ರತ್ಯಕ್ಷಮಾದ ದೇಹವೆ ಆತ್ಮನೆಂಬ ಚಾರ್ವಾಕ ಕೇಳು ೪

ಅತಿಶಯಂ ದೇಹವೋ ಆತ್ಮನಾದೊಡೆ [2]ನೆಱಂ[2]
ಮೃತಶರೀರಂ ದೃಷ್ಟಮಾಗಿರಲ್ ಭೂಸಲಿಲ
ಹುತವಹಶ್ವಸನಂಗಳಿಂ ತೋರ್ಪ ದೇಹಚ್ಚೈತನ್ಯಮಂ ಕಾಣ್ಬರಿಲ್ಲ
ಮತಿವಿಕಳಚಾರ್ವಾಕ ಬಱಿದೆ ಬಕ್ಕುಡಿಗುಟ್ಟು
ತತಿವಾದಿಸ್ಪೈ ಜನನಮರಣಾದಿಗಳ್ ನೋಡೆ
ಸತತಮಾತ್ಮನ ಧರ್ಮ[3]ನ[3]ದಱಿಂದೆ ದೇಹದಿಂ ಬೇಱೆಯೊರ್ವನಾತ್ಮನುಂಟು ೫

ಪಿರಿದವಸ್ಥಾತ್ರಯಂಗಳ್ಗೆ ಕಾರಣಮಪ್ಪ
ಸುರುಚಿರ ಸ್ಥೂಲಾದಿತನುಗಳೊಳ್ ವ್ಯಾಪಿಸು
ತ್ತುರುವಿಶ್ವತೈಜಸಪ್ರಾಜ್ಞರೆಂಬಭಿಧಾನದಿಂದೊರ್ವನೇ ಆತ್ಮನು
ನಿರುತದಿಂ ದೇಹದೊಳ್ ತೋಱೆ ತದ್ದೇಹಮದು
ಭರದಿಂದೆ ಚೇತನತ್ವದೊಳೊಂದಿತೋಱುಗುಂ
ಕರಮಮಂ ತೊಲಗೆ ಮೃತದೇಹಮೆನಿಸುಗುಮದಱಿ[4]ಮೀ[4] ದೇಹಮಾತ್ಮನಲ್ತು ೬

ಮಿಸುಪ ಚಕ್ರಮ[5]ನೊ[5]ತ್ತಿ ಪಿಡಿದಿರ್ದ ದಂಡದಿಂ
ಡೊಸೆದು ತಿರುಪಲ್ ಚಕ್ರಿ ಚಕ್ರಮದು ತಿರುಗುವಂ
ತಸವಸಂ ದೇಹಮಾತ್ಮಪ್ರೇರಣೆಯಿನುಱದೆ ಚಲಿಸು[6]ತಿರ್ಕುಂ[6] ಭಾವಿಸೆ
ನಿಸದಮಾತ್ಮಂ ದೇಹದಿಂ ತೊಲಗಿಪೋಗೆ ಮ
ತ್ತಸುಗಳೆಯಿತೀ ಶರೀರಂ ಶುದ್ಧಮಲ್ತೆಂದು
ವಸುಧಾಜನಂ ಮುಟ್ಟದದಱಿಂದೆ ತನುವಿಲಕ್ಷಣನಾತ್ಮ[7]ನುಂ[7]ಟು ಸತತಂ ೭

---

1 ಮ (ಕ)   2 ವಲಂ (ಕ) ದಿಟಂ (ಗ)   3 ಮ (ಟ)   4 ನೀ (ಕ)   5 ನೆ (ಗ)   6 ತ್ತಿರ್ಕು (ಗ)   7 ಮುಂ (ಕ)

ನಿರುತಮಂತಾದೊಡೀ ದೇಹವಿರಹಿತಮಾಗಿ
ವರಸೂಕ್ಷ್ಮದೇಹಸಂಯುಕ್ತಾತ್ಮನುಂಟಾದೊ
ಡೊರೆಯಿಮೆಂಬೊಡೆ ಕೇಳ ಚಾರ್ವಾಕನೇ ಮುದದೆ ಪೇಳ್ದಪೆಂ ಮುನ್ನೊರ್ವನು
ಪಿರಿಯ ಪೆಸರುಳ್ಳ ಹರಿಹರಭಟ್ಟನೆಂಬ ಬಂ
ಧುರತರಬ್ರಾಹ್ಮಣಂ ತವೆ ವೇದವೇದಾಂತ
ಸುರುಚಿರಾನಂತ [1]ತರ್ಕ[1] ಪ್ರಮುಖವಿದ್ಯೆಗಳೊಳತಿಚತುರನಾಗಿರುತ್ತೆ ೮

ಮಿಗೆ ಕಷ್ಟದುರ್ಜನರ ಸಂಗದಿಂದಂ ಸತ್ಕ್ರಿ
ಯೆಗಳೆಲ್ಲಮಂ ಬಿಟ್ಟು [2]ಕ್ರೂರಕರ್ಮಂ[2]ಬೊಂದಿ
ತೆಗಳಂ ವಿಚಾರಿಸದೆ ಪಾಳಿಗೆಟ್ಟಿರುತೆ ಕೆಲದೆವಸಕ್ಕೆ ಮರಣಮೆಯ್ದಿ
ನೆಗಳ್ದ ನಾಯಕನಾರಕಂಗಳೊಳ್ ವರ್ತಿಸುತೆ
ಮಗುಳ್ದು ಕರ್ಮಾನುಕೂಲದೆ ಭೂಮಿಗೆಯ್ದಿ ತೊ
ಟ್ಟಗೆ ಬೊಮ್ಮರಕ್ಕಸಂ ತಾನಾಗಿ ಪಿರಿಯದೊಂದಶ್ವತ್ಥಮೂಲದಲ್ಲಿ ೯

ಇರುತುಮಶನಾರ್ಥದಿಂದೊರ್ವನಂ ಕುಡಿಯನಂ
ಭರದಿಂದೆ ಸೋಂಕಿ ಮತ್ತವನ ದೇಹಮೆ ತನ್ನ
ಪಿರಿಯ ತನುವಾಗಿ ಮೃಷ್ಟಾನ್ನಮಂ ತಣಿ[3]ಯುಂ[3]ಡು ನಾಡೆ ಸಮ್ಮದಮನೆಯ್ದಿ
ಕರಮುದಾತ್ತಾನುದಾತ್ತಾದಿ ಸ್ವರಂಗಳಿಂ
ನಿರುತ ಪದಪಾಳಿಕ್ರಮಾಜ್ಞಾದಿಗಳನುಱದೆ
ಬೆರಳರೇಖೆಗಳ ಪೆ[4]ರ್ಬೆ[4]ರಲಿಂದೆ ಮುಟ್ಟಿತೋದನೆ ಮುನ್ನೆ ವೇದಂಗಳಂ ೧೦

ಅಂತಾಗಿ ತನುರಹಿತನಾತ್ಮನತಿಸೂಕ್ಷ್ಮತನು
ವಂ ತಳೆದು ಪುಣ್ಯಪಾಪಂಗಳಂ ಭುಂಜಿಸುತೆ
ಮುಂತೆ ಮತ್ತಾ ಸೂಕ್ಷ್ಮತನು ಕಿಡಲ್ ಮುಕ್ತಿಪಥಮೆಯ್ದುವಂ ಜೀವಾತ್ಮನು
ಇಂತೆಂದು ವೇದಾಗಮಂಗಳುಸುರುತ್ತಿರ
ಲ್ಕೆಂತು ದೇಹಮೆ ಆತ್ಮನೆನಲಕ್ಕು[5]ಮೆಲೆ[5] ಮರುಳೆ
ಸಂತತಂ ದೇಹಮುಂ ಬೇಱಾತ್ಮನುಂ ಬೇಱೆ ನೋಡು ತಾನಿದು ಸಿದ್ಧವು ೧೧

ಧರಣೀಜಲಾಗ್ನಿವಾಯುಗಳ ಪರಮಾಣುಗಳಿ
ನಿರದೊಗೆದ ದೇಹ[6]ಕಾತ್ಮಂ[6]ಗುಂಟೆ ಭೇದಮು
ತ್ತರುದೇಹಮಗ್ನಿಯೊಳ್ ಭಸ್ಮೀಕೃತಮದಾಗಿಯುಳಿದು ಬಳಿಕುದಯಿಸುವುದೆ

---

[1] ಕರ್ತೃ (ಗ) [2] ಕೂರರಮಂ (ಟ) [3] ದುಂ (ಗ) [4] ರ್ವ (ಕ) [5] ಮೇ (ಗ)
[6] ಕಾಂತಂ (ಗ)

ಮರಣಮೇ ಮೋಕ್ಷಮದಱಿಂ ಮನುಜತತಿಗೆ ಭಾ
ಸುರಮಾಗಿ ದೃಷ್ಟಮಾಗಿರ್ದ ಮ[1]ಸ್ತ್ರಾ್ವ[1]ಳಿಗಳ್
ಪಿರಿದುಂಟೆನಿಪ್ಪುವಲ್ಲದೆ ನೋಡದೃಷ್ಟಂಗಳುಂಟೆ [2]ನೀವೇ[2] ಭಾವಿಸೆ ೧೨

ಮಿನುಪ ಸುಖಮೇ ಸ್ವರ್ಗಮುರುದುಃಖಮೇ ನರಕ
ಮೆನಿಕುಮಿವಱಿಂ ಬೇಱೆ ಪರಲೋಕಮಿಲ್ಲ ತೊ
ಟ್ಟನೆ ಪುಣ್ಯಪಾಪಂಗಳಿನಿಸಿಲ್ಲ ಜಗಕೊಡೆಯನಾದ ಶಿವನಿಲ್ಲ ನಿಸದಂ
ನನಸು ಜಗಮಿದು ಮಿಥ್ಯೆ ಮೋಕ್ಷಫಲಮಂ ಕುಡುವ
ಘನದೈವಮಿಲ್ಲೆಂದು ನಲಿದು ನುಡಿ[3]ವೊಡೆ ಕೇಳ್[3]
ಬಿನುಗುಚಾರ್ವಾಕ ನಿನಗುತ್ತರಮನೆನುತೆ ನುಡಿದಂ ಪಂಡಿತೇಶನೊಸೆದು ೧೩

ಬಗೆಯೆ ಧರ್ಮಾಧರ್ಮರೂಪಸಹಕಾರಿ ಚ
ಕ್ಕಗೆ ಅದೃಷ್ಟಮದಾದೊಡಂ ದೃಷ್ಟಮಾಗಿ ತೋ
ಱುಗುಮದಱಿನೊಗೆದ ಸುವ್ಯಾಪಾರದೃಷ್ಟದಿಂದೆಂತೆನಲ್ ಪರ್ವತದೊಳು
ನೆಗಳ್ದ ದೃಷ್ಟಂ ದಲಾಗಿರ್ಪ ಧೂಮಧ್ವಜಂ
ಮಿಗೆ ದೃಷ್ಟಮಾದ ಪೊಗೆಯಿಂದಮನುಮಾನಿಸಲ್
ಬಗೆಗೆ ದೃಷ್ಟಮದಾಗಿ ತೋರ್ಪಂತೆ ನೋಡಲಿದು ಸರ್ವದರ್ಶನಸಿದ್ಧವು ೧೪

ಇಂತದೃಷ್ಟಂಗಳೆಲ್ಲಂ ದೃಷ್ಟಮೆನಿಕುಮೋ
ರಂತೆ ನಿಜಸೂಕ್ಷ್ಮದೇಹಮನಾತ್ಮನೆಯ್ದಿಯ
ತ್ಯಂತಭೋಗಕೆ ಯೋಗ್ಯಮಪ್ಪ ಸುರಲೋಕಫಲಮಂ ನರಕಫಲಮನೊಸೆದು
ಸಂತತಂ ಕರ್ತೃವೆನಿಸುವ ಪರಮಶಿವನಾಜ್ಞೆ
ಯಿಂ ತಗುಳ್ದು ಕರ್ಮಾನುಕೂಲದಿಂದನುಭವಿಪ
ನೆಂತೆನಲ್ ಪುಣ್ಯಕರ್ಮದೆ ಸಗ್ಗಮೆಯ್ದಿ ಸುರಗಣಕೊಡೆಯನಾಗಿ ಮತ್ತಂ ೧೫

ಸುರುಚಿರಾನಂತ ಸುರಕೋಟೀರಖಚಿತ ಭಾ
ಸುರ ರತ್ನಕಿರಣಸಮುದಾಯಪರಿವೃತ ವಿಮಲ
ಚರಣನಖನಾಗಿಯಪ್ಸರವಧೂಕುಚಮಸೃಣಘುಸೃಣಕಲಿತಾಂಗನಾಗಿ
ವರ ವೈಜಯಂತಾಗ್ರದೊಳ್ ವಿಬುಧಯುವತಿಯರ್
ಬೆರಸಮೃತಪಾನತತ್ಪರನಾಗಿ ಸತತಂ ವಿ
ಹರಿಪನಂಬರಯಾನದೊಳ್ ದೇವಕಾಂತಾಕದಂಬಸಂಯುಕ್ತನಾಗಿ ೧೬

---

[1] ಸ್ತ್ರಾ (ಕ) [2] ನಿಪ್ಪವೆ (ಗ) [3] ದೊಡೆ ಕೇಳು (ಗ)

ನೆಗಳ್ದು ಚರಿಯಿಸುತುಂ ಸುಧರ್ಮೆಯೊಳ್ ಸುರಸಮಿತಿ
ಸೊಗಸಿನಿಂದೋಲಗಿಸುತಿರೆ ದೇವಗಾಯಕರ್
ಮಿಗೆ ಮಧುರತಾನಾದಿಯುಕ್ತ ಸಪ್ತಸ್ವರಂಗಳೊಳಿಂಪುದೋಱೆ ಮೆಱೆವ
ಸುಗುಡತನವೆನಿಪ ಗಾನಾನಂದರಸದೊಳೋ
ಲಗಸಾಲೆ ಮೂರ್ಛೆಯೋಪಂತೆ ಪಾಡುತ್ತಿರಲ್
ಬಗೆಯನಿಳ್ಕುಳಿಗೊಳುತೆ ಸಗ್ಗನಚ್ಚಣಿಯರಾಡಲ್ ನೋಡುತೆಸೆದಿ[1]ರ್ದನು ೧೭

ಮಂದಾರದಲರ ತಿಱೆದೆಸೆವ ಮುಡಿಯೊಳ್ ತಳೆದು
ನಂದನದೊಳೊಗೆದು ಚರಿಸುತ್ತೊರ್ಮೆ ದಲ್ಸಗ್ಗಿ
ಸಿಂಧುರಕೆ ಸುರದೀರ್ಘಿಕೆಯೊಳೊಗೆದ ನವಮೃಣಾಳಮನಿತ್ತು ನಲಿಯುತೊರ್ಮೆ
ಸಂದ ಸಂತಸದಂತವೆಯ್ದಿರ್ಪನೆಂದು ತಱೆ
ಸಂದ ಶ್ರುತಿವಾಕ್ಯಮೇ ಸ್ವರ್ಗಕಾಮೋಯಜೇ
ತೆಂದಿರಲ್ಕೆಂತು ಪುಣ್ಯಂ ಮಿಥ್ಯೆಯೆಂಬ ಎಲೆ ಚಾರ್ವಾಕ ಮನದಣುಗಿನಿಂ ೧೮

ಸತತಮುಂ ಪಾಪಕರ್ಮಂಬೊಂದಿದಾ[2]ತ್ಮ[3]ನು
ನ್ನತ ಮಹಾರೌರವಂ ಕಾಲಸೂತ್ರಂ ವೀಚಿ
ನುತ ರೌರವಂ ಮಹಾಭಯ[3]ಮ[3]ಯುಸ್ತುಂಡಮುಚ್ಛ್ವಾಸಾದಿ ನರಕದೊಳಗೆ
ಮತಿವಿಕಳನಾಗಿ ತೊಳತೊಳಲಿ ಬಳಲುತೆ ಮುಂದೆ
ಗತಿಯ ಕಾಣದೆ ವೈತರಣಿಯಲ್ಲಿ ಬಿಳ್ದು ದು
ರ್ಗತಿಯೊಳೀಸಾಡುತೇಳುತೆ ಮುಳುಗುತಿರ್ಪನತಿಭಯಭಗ್ನಚಿತ್ತನಾಗಿ ೧೯

ಭರದೆ ಮಱುಗುತ್ತಿರಲ್ ಜವನಾಳ್ಗಳೆಯ್ದಿ ನಿ
ರ್ಭರಘೋರಘರ್ಜಪ್ರಚಂಡಗಂಭೀರ[4]ಘ
ರ್ಘ[4]ರನಾದದಿಂ ಕೊಱೆದು ತಱೆದು ಸೀಳ್ದು ಸೀಳುಂಬುಳಾಡಿ ಯಮಸನ್ನಿಧಿಯೊಳ್
ಪಿರಿದು ಬಾಧಿಸುತಿರ್ಪರೆಂಬುದರ್ಕೇಗಳುಂ
ಕರಮೆಸೆವ [5]ಪೀ[5]ಡ್ಯತಾಂ ಮಮ ಸನ್ನಿಧೌ ಎಂಬ
ಪರಮವಾಕ್ಯಮೆ ಮಾನವುದಱೆಂದೆ ಪಾಪಮುಂಟೆಂಬುದೇ ಲೋಕಸಿದ್ಧಂ ೨೦

ಬಗೆದುಕೇಳ್ ಮತ್ತಂ ಶಿವಜ್ಞಾನಕಥೆಗಳಂ
ಸೊಗಸಿನಿಂ ಕೇಳುತನ್ಯಪ್ರಸಂಗಮನೆಸಪ
ನೆಗಳ್ದ ಶಿವನಂ ಗುರುವನೇಳಿದಂಗೆಯ್ವ ಸದ್ಗುರುದೇವರೊಡವೆಗಳನು

---

1 ರ್ಪ (ಗ) 2 ತ (ಕ) 3 ಭ (ಗ) 4 ಗ।ಘ್ರ (ಕ) ಗ।ರ್ಗ (ಗ) 5 ಪಿಂ (ಗ)

ತಗುಳ್ದು [1]ನೀಳ್ಕು[1]ಳಿಗೊಳ್ವ ಮಾನಿಸರ್ ಭಾವಿಸಲ್
ಪುಗುವರೇಗಂ ನರಕಶರಧಿಯಂ ನಿಕ್ಕುವಂ
ಮಿಗೆ ಪೇಳ್ವ ತೇ ಯಾಂತಿ ನರಕಾರ್ಣವಂ ಎಂಬ ಧರ್ಮಶಾಸ್ತ್ರವೆ ಮಾನವು ೨೧

ಇಂತುಱದೆ ಪುಣ್ಯಪಾಪಂಗಳುಂಟಾಗಿರಲ್
ಭ್ರಾಂತುಚೇತಸ್ಕ ಲೋಕಾಯತಿಕ ನೀನುಂತೆ
ಮುಂತಱಿಯದೊಲ್ದು ಜಱಿಚುವ ಏಕೆ ಧೂಮದಿಂದಗ್ನಿಯಂ ಕಾಣ್ಬವೋಲು
ಅಂತೆ ಕುಂಭದೆ ಕುಲಾಲಜ್ಞಾನಮೊಗೆವಂತ
ನಂತಜಲಪೊಟ್ಟಣದೆ ಮಳೆಜ್ಞಾನಮೊಸೆವಂತೆ
ಸಂತತಂ ಶಾಸ್ತ್ರದರ್ಶನದಿಂದೆ ನಾಕನರಕಂಗಳುಂ ಸಲೆ ಸಿದ್ಧವು ೨೨

ಎಂದಖಿಳಶಾಸ್ತ್ರಂಗಳೊಳಗಿಂತು ನಾಡೆ ತಱಿ
ಸಂದು ಘೋಷಿಸುತಿರ್ಪ ಸರ್ವಪ್ರಮಾಣಮಿರ
ಲೆಂದುವುಂ ಕಾಣಪಡೆದಿರ್ದ ಹೇಮಾಚಲಾದಿಗಳನಿಲ್ಲೆನಬರ್ಕುಮೆ
ಮಂದಮತಿ ಚಾರ್ವಾಕ ಕಣ್ಗೆ ಕಾಣದದು ತಱಿ
ಸಂದು ಶಶಶೃಂಗದಂತೆವೊಲೆಂಬ ಇದು ನೋಡೆ
ಸಂದ ಪ್ರತ್ಯಕ್ಷಾನುಮಾನಾಗಮಪ್ರಮಾಣಂಗಳಿಂ ಪ್ರಕ್ಷಿಪ್ತವು ೨೩

ನಲಿದು ಚಾರ್ವಾಕ ಕಲಿಕಾಲದ ಮಹಾಪಾಪ
ಕಲರ್ದು ಕಾರಣಮಾದ ನಿನ್ನ ಮತಮುಂ ಬಿಟ್ಟು
ಲಲಿತವೇದೋಕ್ತಮಾರ್ಗಕ್ಕೆ ಗೆಂಟಾದ ಜಾತಿವಿಭೇದಮಿನಿಸಿಲ್ಲದ
ಸಲೆ ಕಳತ್ರಮಿದನುಜೆಯಿವಳೆಂಬ ಭೇದಮುಂ
ತಲೆದೋಱದಾ ಪಾಂಚರಾತ್ರಮತಮುಂ ಸಾರ್ದ
ಎಲವು ನೀಂ ಪ್ರಚ್ಛನ್ನಪಾಂಚರಾತ್ರಂ ದಲಾದಯ್[2] ಕೇಳ ನಿನ್ನ ಮತಮುಂ ೨೪

ಸದಮಲಪ್ರಚುರವಿಶ್ರುತ ಪರಮಭಕ್ತಗಣ
ಪದಸರೋರುಹಸಾಂದ್ರ ಮಕರಂದಪಾನ ಸ
ಮ್ಮುದಿತ ಚಂಚಚ್ಚರೀಕನನವರತ ಪಂಚಾಕ್ಷರೀಪ್ರಸಿತಹೃದಯಂ
ವಿದಿತ ಮಂಜುಳನೀಲಕಂಠಾಹ್ವಯಂ ಮನೋ
ಮುದದೆ ಪೇಳ್ದುರುತರಾರಾಧ್ಯಚಾರಿತ್ರದೊಳ
ಗಿದು ಕರಂ ಚಾರ್ವಾಕಮತನಿರಸನದ ಕಥನಮಿದನಾಲಿಪುದು ಭಕ್ತರು ೨೫

---

[1] ನೀಕರ್ಳ (ಕ) [2] ದಯುದ (ಗ)

# ಎಂಟನೆಯ ಸಂಧಿ

## ಪಾಂಚರಾತ್ರಮತ ನಿರಸನ

ಸೂಚನೆ: ಪರವಾದಿವದನಭಾಳಾಂಬಕಂ ಪಂಡಿತೇ
ಶ್ವರನಳ್ತಿಯಿಂ ಪಾಂಚರಾತ್ರಮತಕಾನನಮ
ನುರುಪಿದ ಕಥಾಸರಣಿಯಂ ಕೇಳ ಸೂರದಂಡಾಧೀಶ ಭಕ್ತಿಕೋಶ

ತೊಡೆಯೆಡೆಯೊಳಿಡೆಗೊಂಡ ಗಿರಿಸುತೆಯ ಕಣ್ಮಲರ
ನೆಡಗಯ್ಯೊಳಡಸಿ ಬಿಸದದ ನೆವದೆ ಮುಚ್ಚಿ ನಿಡು
ಜಡೆಮುಡಿಯ ನಡುವೆ ಬಿಡದೆಸೆದಿರ್ಪ ಗಂಗೆಯಂ ನಿಡಿದಾದ ಬಲಗೈಯೊಳು
ಕಡುಪಿನಿಂ ಬರಸೆಳೆದು ಬಿಗಿಯಪ್ಪಿ ಮುಂಡಾಡಿ
ಮೃಡೆಯಱಿಯದಂತೆ ರಂಜಿಪ ನೀಲಕಂಠನೆಡೆ
ಯುಡುಗದಡಿಗಡಿಗೆ ನಡೆನೋಡಿ ಪಾಲಿಸುತಿರ್ಕೆ ಪೊಡವಿಯಂ ಸಡಗರದೊಳು ೧

ಇರದೆ ಕೇಳೆಲೆ ಪಾಂಚರಾತ್ರಮತಭೇದಮಂ
ಭರದಿಂದೆ ನಿನಗಱುಪಿದಪೆವದೆಂತೆನೆ ವಲಂ
ಪಿರಿದೇಕ ಏವ ರುದ್ರೋ ನ ದ್ವಿತೀಯಾಯತಸ್ಥೇ ಎನಿಪ್ಪ ಶ್ರುತಿಯ
ಇರವನುಱೆ ತಿಳಿಯಲಱಿಯದೆ ಶುಷ್ಕತರ್ಕದಿಂ
ಮರುಳನೆನಿಸುವ ಪಾಂಚರಾತ್ರಮತಶಾಲಿಯೇ
ಸರಳದಿಂ ಎಚ್ಚ ಕಿಂಚಿಜ್ಜಗತ್ಸರ್ವಮೆಂಬೀ ವಚನದಿಂದೆ ಮತ್ತಂ ೨

ಮಿಗೆ ವಿಷ್ಣುಮಾಯಾಮಯಂ ಜಗತ್ತೆಂದು ತೊ
ಟ್ಟಗೆ ನುಡಿ[1]ವ[1] ವಚನದಿಂದಿವಱರ್ಥಮಱಿಯದೇ
ಬಗೆಗೆಟ್ಟು ವಿಷ್ಣುವೀ ಜಗಕೊಡೆಯನೆಂಬೊಡದು ಸಲ್ಲದೆಂತೆನೆ ಪೇಳ್ವೆವು
ಸೊಗಸಿನಿಂ ವಿಶ್ವಮೆಲ್ಲಂ ವಿಷ್ಣುರೂಪಮೆಂ
ದೊಗೆದ ಶ್ರುತಿ ಕೃಷ್ಣಂಗೆ ವಿಶ್ವತ್ವಮಂ ಪೇಳ್ಗು
ಮಗಲದಾ ಶ್ರುತಿ ಮತ್ತೆ ವಿಶ್ವಕೊಡೆಯಂ ಶಿವನೆ ಎಂದು ಬೊಬ್ಬಿಡುತಿರ್ಪುದು ೩

---

[1] ದ (ಕ)

ಸಿರುತದಿಂ ವಿಶ್ವಾತ್ಮನಾಗಿ ತದ್ವಿಷ್ಣು ಬಂ
ಧುರಜಗದ್ವ್ಯಾಪಕತ್ವವುನೆಯ್ದಿ ರಂಜಿಸಂ
ಪಿರಿದು ಜಗಕೊಡೆತನಂ ವಿಷ್ಣುವಿಂಗಿಲ್ಲೆಂಬುದೇ ಸತ್ಯವೇಕೆಂಬೊಡೆ
ಪರಮಪುರುಷೋತ್ತಮಂ ಸೇವಕಂ ಭಾವಿಸಲ್
ಪರ[1]ತತ್ತ್ವ[1]ಮಾದ ಶಿವನೇ ಸೇವ್ಯನೆಂದು ಸುಂ
ದರವೇದಮುಲಿಗುಮದಱಿಂ ಸೇವಕಂ ವಿಷ್ಣು ಜಗಕೊಡೆಯನೆಂತಪ್ಪನೊ ೪

ಸನಯದಿಂ ವೈಷ್ಣವಮತಂ ಮತ್ತೆ ವೈಷ್ಣವಂ
ಮಿನುಪ ಕೇಶವ ಭಾಗವತ ಪಾಂಚರಾತ್ರಂಗ
ಳೆನುತೆ ನಾಲ್ಕಂತೆಱಬೆ ತೋರ್ಕುಮವಱೊಳಗೆ ವೈಷ್ಣವಮೆಂಬುದೊಂದು ಮತವು
ಕೊನರ್ದಾದಿವೈಷ್ಣವಮುಪರವೈಷ್ಣವಂಗಳೆಂ
ದೆನಸುಮೆರಡಾಗಿರ್ಕುಮಾದಿವೈಷ್ಣವಮುದಂ
ತೆನಲಾದಿವಿಷ್ಣುಸಂಬಂಧಮಾ ವಿಷ್ಣುವಿನ ನಿಜವೃತ್ತಿ ತಾನೆಂತೆನೆ ೫

ಸೊಗಯಿಸುವ ದೀಪ್ತಾಂಗ ನಿರ್ಜರನಿಕಾಯದಿಂ
ಸುಗುಡಮುನಿಜನದಿಂದೆ ಸಂಸ್ತೂಯಮಾನನಾ
ಗಗಲದೆ ನಿರಂತರಂ ಭಸ್ಮದಿಗ್ಧಾಂಗನಾಗುತ್ತೆ ರುದ್ರಾಕ್ಷಿಯಿಂದೆ
ಮಿಗೆ ವಿಭೂಷಿತನಾಗುತತಿವಿರಾಜಿ[2]ಪ[2] ಜಟಾ
ಳಿಗಳಿಂದೆ ನಾಡೆ ಕಣ್ಗೆಡ್ಡಮಾಗುತ್ತೆ ಸೊಂ
ಪೊಗೆವಿಂದ್ರನೀಲಮಯಲಿಂಗಮಂ ಪೂಜಿಸುತೆ ವಿಷ್ಣುತ್ವಮೆಯ್ದಿರ್ಪನು ೬

ಇಂತಿದಾ ವಿಷ್ಣುವಿನ ನಿಜವೃತ್ತಿಯಿದಱಿಂತೆ
ಸಂತತಂ ಸನ್ಮಾರ್ಗದಲ್ಲಿ ವರ್ತಿಸುತಿರ್ಪ
ಸಂತನೇ ಆದಿವೈಷ್ಣವನೆನಿಪನಿನ್ನಪರವೈಷ್ಣವಂ ತಾನೆಂತೆನೆ
ಅಂತಕಾಂತಕಭಕ್ತರೆನಿಸಿ ಚರಿಸುತ್ತಿರ್ಪ
ಕಾಂತ ಭೃಗು ಗೌತಮ ದಧೀಚ್ಯಾದಿ ಮುನಿಮುಖ್ಯ
ಸಂತತಿಗಳಿಂ ಶಾಪವಡೆದು ಚರಿಸುವ ಋಷಿಸಮೂಹಕ್ಕೆ ಪತಿಗಳಾದ ೭

1 ತರತ್ವ (ಗ) 2 ತ (ಕ)

ಪಿರಿಯನಾಂಗಿರಸ ಶಾಂಡಿಲ್ಯಾದಿ ಮುನಿಗಳುರು
ತರ ಪಾಂಚರಾತ್ರಪ್ರಮುಖ [1]ತರ್ಕ[1]ತಂತ್ರಂಗಳಂ
ನರಕಕರಣಂಗಳಂ ವೇದಬಾಹ್ಯಂಗಳಂ ವಿಷ್ಣುಸಂಬಂಧ[2]ವಾ[2]ಗಿ
ವಿರಚಿಸುತೆ ತ[3]ಮ್ಮ[3] ಕೂಟಸ್ಥರ್ಗೆ ಬೋಧಿಸುತೆ
ಪರಮವೇದಾದಿ ಸಚ್ಛಾಸ್ತ್ರಮಾರ್ಗಂದೊಱೆದು
ಪರದಾರಗಮನಾದಿ ರೋಷಭೀರುಗಳಲ್ಲದಿ[4]ರ್ಪ[4]ರವರೊಳ್ ಮುಖ್ಯನು ೮

ಶಾಂಡಿಲ್ಯನೆಂಬ ಮುನಿಯೊರ್ವನತ್ಯಂತ ಪಾ
ಷಂಡಮತಮಂ ಹರಿಸದಿಂದಂ ನೆಗಳ್ಚಿ ಸಲೆ
ಖಂಡೇಂದುಧರಭಕ್ತನಿಂದೆ ರುದ್ರಾಕ್ಷಾದಿಗಳ ನಿಂದೆಯಿಂದೊಪ್ಪುವ
ಶಾಂಡಿಲ್ಯಸಂಹಿತೆಯನೊಸೆದು ವಿರಚಿಸಿ ಮನಂ
ಗೊಂಡದಱಊಳಡಿಯಿಡುತೆ ವೇದಮಾರ್ಗಂಗಳಂ
ಖಂಡಿಸುತೆ ನಡೆದನಾ ಸಂಹಿತೆಯೆ ಭಾವಿಸಲ್ ಪಾಂಚರಾತ್ರಂ ಎನಿಪುದು ೯

ಅದು ಪೆಱಂ ಪರಿಕಿಸಲ್ಕಪರವೈಷ್ಣವಮೆಂಬು
ದದಱ ದುಶ್ಚಾರಿತ್ರಮೆಂತೆನಲ್ ಕೇಳೆಲವೊ
ವಿದಿತವೈದಿಕಮಾರ್ಗವಿರಹಿತಂ ಮಾತೃವಧುಗಳೊಳಭೇದಂಗಾಣ್ಬುದು
ಪುದಿದ ಶೈವಾಚಾರನಿಂದೆ ಇಂದ್ರಿಯಸಮೂ
ಹದ ವಿಷಯದೊಳ್ ಸ್ವೇಚ್ಛೆಯಿಂದೆ ಚರಿಸುತ್ತಿರ್ಪು
ದೊದವಿದ ತಪೋಧ್ಯಾನನಿಯಮಾದಿಗಳ ಬಿಟ್ಟು ನಿರಯದೊಳ್ ವರ್ತಿಸುವುದು ೧೦

ಕರಮೆ ಗೋಪೀಮಲಿನಧಾರಿಗಳ್ ತಾವೆನಿಸಿ
ಪಿರಿದುಂ ವಿಭೂತಿರುದ್ರಾಕ್ಷಿಗಳನಿಳಿಕೆಯ್ದು
ಹರಪೂಜೆಯಂ ಬಿಟ್ಟು ನೆಱೆ ಬಹಿಷ್ಕೃತರಾಗಿ ವರ್ತಿಸುತ್ತಿರ್ಪರವಡೆ
ನಿರುತದಿಂದವರ ಚಾರಿತ್ರಮಂತದಱಿಂದೆ
ನಿರಯದೊಳ್ ಬಿಳ್ದು ನಾನಾ ಯೋನಿಯೊಳ್ ಬಂದು
ತಿರುಗಿ ನರಕದೊಳಾಳ್ದು ಗಾಣದೆತ್ತಿನ ತೆಱದೆ ತಿಱ್ರನೇ ಬರುತಿರ್ಪರು ೧೧

ಮಿನುಪಪರವೈಷ್ಣವರ ನಿಜವೃತ್ತಿಯಂ ಕೇಳ
ಸನಯದಿಂದಂಬಷ್ಟಕನ್ನೆಯಿಂದೊಗೆದು ಚ
ಕ್ಕನೆ ವಿಷ್ಣುಪೂಜಾದಿಗಳನೊಡರ್ಚುತೆ ಮು[5]ಷ್ಟಿ ಕಂ[5]ಡೋಲಮಂ ಪಿಡಿಯುತೆ

---

[1] ಕರ್ತೃ (ಕ) [2] ನಾ (ಕ) [3] ನ್ನ (ಕ) [4] ರ್ದ (ಗ) [5] ಟ್ಟಖಂ (ಗ)

ಮನೆಮನೆಯನೆಯ್ದಿ ಮು[1]ಷ್ಟಿಯ[1] ಬೇಡಿ ತಟ್ಟೆಗಳ
ನನುವಾಗಿ ರಚಿಸಿಯವಱಿಂ ಜೀವಿಸುವರೆಂಬ
ಮನುವಾಕ್ಯಮುಂಟದೆಂತೆನೆ [2]ತಸ್ಯ[2]ವೃತ್ತಿಃ ಕಟಾನ್ ಕ್ರಿಯಾ ಎಂದು ನಾಡೆ ೧೨

ಕ್ರೂರ[3]ರೆ[3]ನಿಸುವ ದುರಾಚಾರವೈಷ್ಣವತತಿಗೆ
ಸಾರಾಪವರ್ಗಫಲಮಿನಿತು ಸಲೆ ದೊರೆಕೊಳ್ಳ
ದೋರಂತಘೋವದನಮಾಗಿ ಕಾಲ್ಕೆ[4]ಳಗಾಗಿ[4] ನರಕಶರಧಿಯೊಳಿರ್ಪುದು
ಆರಯ್ದು ನೋಡೆ ಕೈಸಾರ್ಗುಮೆಂದೊಲ್ದು ಗಂ
ಭೀರನಾದದಿ[5]ನೇಗಳುಂ[5] ಕೂಗಿ ಬೊಬ್ಬಿಡುವ
ಚಾರುತರ ವೇದವಾಕ್ಯಂ ಕೂಡೆ ಯಾಸ್ಯಂತಿ ನರಕಾರ್ಣವಂ ಎಂಬುದು ೧೩

ಮಿಗೆ ಪಾಂಚರಾತ್ರಾದಿ ವೈಷ್ಣವಮತಂಗಳೊಳ್
ಸೊಗಯಿಸುವ ಸೌರಶಾಕ್ತಿಕಬೌದ್ಧಮುಖ್ಯದೀ
ಕ್ಷೆಗಳನೊಲ[6]ವಿಂ[6] ತಾಳ್ದು ಮನವಂಟೆಯವ[7]ಱಿತೂಳಾಚರಿಪಥಮು[7] ಮಾನವರ್ಗೆ
ಮಿಗುವ ನಾರಕಶರಧಿಯೊಳಗಿರ್ಪವೆ ಎಂದು ಘ
ಮ್ಮಗೆ ಪಾಂಚರಾತ್ರೇಷು ಎಂಬ ನಿಗಮೋಕ್ತಿಗಳ್
ನೆಗಳ್ದು ಸಾಱುತ್ತಿರ್ಕುಮಿದಱಿನಾ ವೈಷ್ಣವರ್ಗೆ ಮುಕ್ತಿಮಾರ್ಗಂ ದೊರಕದು ೧೪

ನನಸು ಕೇಳಿದು ಪಾಂಚರಾತ್ರಾದಿ ವೈಷ್ಣವರ
ಮಿನುಪ ಸಮಯಾಚರಣೆಯಿನ್ನಿದರ್ಕಧಿದೈವ
ವೆನಿಪ ವಿಷ್ಣುವಿನುದಯಮವನ ದೇವತ್ವದಿರವೆಂತೆನಲ್ ಪೇಳ್ವೆನದನು
ಮನಸಿಜಾರಿಯ ಮಹೇಶ್ವರನೆಡದ ಭಾಗದಿಂ
ಜನಿಯಿಸಿದೆ ನಾನೆಂದು ವಿಷ್ಣುವತಿಶಯದಿಂದೆ
ಮನವೊಸೆದು ಜಾತೋಹಮಸ್ಯ ವಾಮಾಂಗೇ ಎನುತುಸುರ್ದನಿದು ಸಿದ್ಧವು ೧೫

ಇನ್ನವನ ದೇವತ್ವಮೆಂತೆನಲ್ ಕೇಳೆಲವೊ
ಮುನ್ನೆ ಭೃಗುವಧುವ ವಧೆಯಿಂ ಕಮಳನೇತ್ರಂಗೆ
ಪನ್ನಗಾಭರಣಸನ್ನಿಭ ಭೃಗುಮುನೀಶ್ವರಂ ಕೊಟ್ಟ ಶಾಪಾಗ್ನಿಯಿಂದೆ
ಚನ್ನಮರ್ದ ತನ್ನ ಸಾಹಸಕಾನನಂ ಬೆಂದು
ನನ್ನಿಯಿಂದಂ ಮತ್ಸ್ಯಕೂರ್ಮಾದಿವಪುಗಳಿಂ
ಸನ್ನಿದಂ ತಾಳ್ದು ಭವಜಲನಿಧಿಯೊಳಾಳ್ದು ನಾನಾಯೋನಿಯೊಳ್ ಬಿಳ್ದನು ೧೬

---

1 ಟ್ಟಿಗಳ (ಗ) 2 ಸತ್ಯ (ಕ) 3 ನೆ (ಗ) 4 ಗಳಾಗಿ (ಕ) 5 ನೆಗಳ್ದುಂ (ಗ)
6 ವಿಂದೆ (ಗ) 7 ರನಾಚರಿಪಧರ್ಮ (ಕ)

ಇಂತು ಭೃಗುಃಶಾಪದಿಂ ಬಂದ ಮತ್ಸ್ಯಾದಿಯಿಂ
ಸಂತತಂ ಮಾಂಸರುಧಿರವನುಂಡು ಜೀವಿಸುತೆ
ಮುಂತೆ ಸೂಕರರೂಪದಿಂ ಜಗದ್ವಿಷ್ಟೆಯಂ ನಾಶಮಂ ಮಾಡುತೊಸೆದು
ಅಂತೆ ನರಸಿಂಹಾದಿ ಭೇದರೂಪಂಗಳಿಂ
ದುಂತೆ ದುಃಖಂಗಳಂ ತಾಳ್ದು ಚರಿಸುತ್ತಿರ್ಪ
ನೆಂತೆನಲ್ ಕೇಳ್ ಜಗದ್ವಿಷ್ವಾಂ ಕ್ಷಯಃ ಕುರುವೆನಿಪ್ಪ ವಾಕ್ಯ[1]ದೆ[1] ಸಿದ್ಧವು ೧೭

ಮತ್ತಾ ಮುನೀಶ್ವರನ ಶಾಪಕ್ಕೆ ಪೆಳಱಿಯು
ತ್ಯತ್ತಮು ಯತೀಶನಿಂದುಪಮನ್ಯುಮುನಿಪನಿಂ
ಚಿತ್ತಮಲರುತ್ತೆ ಸಲೆದೀಕ್ಷೆಯಂ ಕೈಕೊಂಡು ಮಂದರಾಚಲಮನೆಯ್ದಿ
ಚಿತ್ತಜಾರಿಯ ಕುಱಿತು ತಪಮಿರಲ್ ನಂದೀಶ
ನತ್ತಣಿಂ ಶಿವನಱಿದು ವಿಷ್ಣುವಿರ್ದೆಡೆಗೆಯ್ದಿ
ಸುತ್ತಿದುಪತಾಪಮಂ ಪರಿಹರಿಸಿ ವಿಷ್ಣುವಂ ನುಡಿದನಾ ಸರ್ವೇಶ್ವರಂ ೧೮

ಎಲೆ ಕೃಷ್ಣ ಕೇಳೆ[2]ಮ್ಮ[2] ಮನದನ್ನನಪ್ಪ ಮುನಿ
ಕುಲತಿಲಕ ಭೃಗುಯತೀಶಂ ಕೊಟ್ಟ ಶಾಪಮಂ
ತೊಲಗಿಸಲ್ಕೆಮ್ಮ ವಶವಲ್ತು ನಿನ್ನಯ ಪತ್ತುಭವದ ರೂಪುಗಳನೆಲ್ಲ
ನಲಿದು ಸಂಹರಿಸೆವಾವೆಂದು ಮತ್ತವು ಲೋಕ
ಕೊಲವಿನಿಂ ರಕ್ಷಕಂಗಳುಮಕ್ಕೆನುತ್ತೆ ಸ
ಲ್ಲಲಿತ ಕರುಣಂಗಱಿದು ಶಿವನೆಯ್ದಿದಂ ತನ್ನ ನಿಜನಿವಾಸಮನಿತ್ತಲು ೧೯

ಭೃಗುಶಾಪದಿಂ ವಿಷ್ಣು ಮತ್ಸ್ಯಾವತಾರಮಂ
ಸೊಗ[3]ಸಿಂದೆ[3] ತಾಳ್ದು ವೇದವನೆಯ್ದೆ ಕಳ್ದೊಯ್ದ
ಗಗನಚರವೈರಿಯಂ ನೆಱಿಕೊಂದು ವೇದಮಂ ತಂದು ಸಲೆಮೆಱಿವುತಂತೆ
ನೆಗಳ್ದ ಮತ್ಸ್ಯಾ[4]ಕಾರ[4]ಮಂ ಶಂಭು ವಧಿಸಿ ಘ
ಮ್ಮಗೆ ಶಿರೋವೇಷ್ಟನಂಗೆಯ್ದು ರಂಜಿಸುತಿರ್ಪ
ನೊಗೆದುತೋಱುವ ಮತ್ತಿನೊಂಭತ್ತುರೂ[5]ವು[5]ಗಳ ವಧೆಯ ಕೇಳ್ ಪಾಂಚರಾತ್ರ ೨೦

ಕಡಲ ಕಡೆವೆಡೆಯೊಳಾ ಮಂದರಾಚಲಕೆ ನೇ
ರ್ಪಡೆದಧಿಷ್ಠಾನಮಾಗಸೆವ ಕಮಠನ ರೂಪ
ನೊಡೆಯಿಱಿದು ಕೊಂದದಂ ಪದಕದಂದದೊಳೆರ್ದೆಯೊಳಳವಡಿಸಿ ಸೊಬಗಿನಿಂದೆ

---

[1] ವೆ (ಗ) [2] ಸ್ನ (ಗ) [3] ಸಿನಿಂ (ಕ) [4] ವತಾರ (ಕ) [5] ಹು (ಕ)

ಕಡುಮೆಱೆದು ತೋಱುತ್ತೆ ದೇವಾಧಿದೇವನು
ಗ್ಗಡದೇವವೇಶ್ಯಾಭುಜಂಗನೊಪ್ಪಿರ್ಪನೆಂ
ದಡಿಗಡಿಗೆ ಶ್ರುತಿ ಬೊಬ್ಬಿಡುತ್ತಿರ್ಕುಮದನಱಿಯು ಪಾಂಚರಾತ್ರಾಪಶದನೆ ೨೧

ಮತ್ತಮಾ ಮಾಧವಂ ಕ್ರೋಡಾವತಾರನುಂ
ಬಿತ್ತರದಿನೆಯ್ದಿ ಧರೆಯಂ ರಸಾತಳಕೊಲ್ದು
ಸುತ್ತಿಕೊಂಡೊಯ್ದಸುರನಂ ಕೊಂದು ಭೂಮಿಯಂ ಮುನ್ನಿನಂತೆಯ್ದೆ ಪರಪೆ
ಉತ್ತಮಮೆನಿಪ್ಪ ಗಂಗಾತೀರದೊಳ್ ನಾಡೆ
ಮತ್ತತ್ವದಿಂದಿರಲ್ ತಾರಕಾರಾತಿಯಿಂ
ದೊತ್ತಂಬದಿಂ ಕೊಲಿಸಿಯವನಸ್ಥಿಯಂ ಶಿವಂ ತೊಡವಾಗಿ ತೊಟ್ಟೆಸೆದನು ೨೨

ನರಸಿಂಹರೂಪದಿಂದಂ ಹಿರಣ್ಯಕಶಿಪುವ
ಹರಿಸಿಯುವನೆರ್ದೆಯ [1]ಸಿಳ್ಳನೆ[1] ಸೀಳಿ ಕೋಪದಿಂ
ದಮುಣಜಲಪಾನಮಂ ಮಾಡಿ ತದ್ವಿಷ್ಣು ಮೆಯ್ಮಱೆದು ಮಿಗೆ ಕೊರ್ಬಿನಿಂದೆ
ಧರೆಯನೆಲ್ಲಮನೆಯ್ದೆ ಜೀಱುಂಡೆಗೊಳಿಸುತಿರೆ
ಶರಭರೂಪಾದ ವೀರೇಶನಿಂ ಕೊಲಿಸಿ ಶಿವ
ನಿರದನನ ಸಮ್ಮಮಂ ಪೊದೆದು ಮೊಗವಂ ಭುಜದೊಳಳವಡಿಸಿ ಮೆಱೆದಿರ್ದನು ೨೩

ಅಸುರಹರನಾ ವಾಮನಾವತಾರಂದಳೆದು
ಮಿಸುಪ ಬಲಿಯಂ ಭೂಮಿದಾನಮಂ ಬೇಡಿ ಮ
ತ್ತಸವಸದಿನಾ ತ್ರಿವಿಕ್ರಮರೂಪನೆಯ್ದಿ ತನ್ನಯ ಕಾಲನಾಗಸಕ್ಕೆ
ಸಸಿನೆ ನೀಡಲ್ ಕೀಳಲದಱೊಡನೆ ಬಂದರಮೆ
ಎಸೆವ ದೇಹಮನೀಶನನಿಶಮತಿಹರ್ಷದಿಂ
ದೊಸೆದು ಖಟ್ವಾಂಗಮಾಗೆಯ್ದೆ ಪಿಡಿದಂ ಲೋಕಸಿದ್ಧಮಿದು ಪರಿಭಾವಿಸೆ ೨೪

ಮುರಹರಂ ಪರಶುರಾಮಾಹ್ವಯದೆ ಜಮದಗ್ನಿ
ವರಗರ್ಭದಿಂದೊಗೆದು ಕಾರ್ತವೀರ್ಯಾರ್ಜುನನ
ನಿರದಿಕ್ಕಿ ಕೊಂದ ದೋಷಕ್ಕೆಯ್ದೆ ತಾನಾಳ್ವ ದೇಶಮಂ ಪಾರ್ವರ್ಗಿತ್ತು
ಇರಲೆಡೆಯನಿನಿತುಗಾಣದೆ ಮನದಲೊದವಿದುರು
ತರದುಃಖದಿಂ ಬೆಂದು ಮುಂದುಗಾಣದೆ ಬಂದು
ಶರಧಿಯೊಳ್ ಬೀಳ್ದಳಿದನಿದು ಪುರಾಣೋಕ್ತಿಸಮ್ಮತಮೊಸೆದು ಭಾವಿಸುವೊಡೆ ೨೫

---

1 ಶೀಳನೆ (ಕ)

ದನುಜರಿಪು ಮತ್ತೆ ರಾಮನಾಹ್ವಯದೆ ರಘುಸೂನು
ವೆನಿಸಿ ಗಹನದೊಳೆಯ್ದೆ ತೊಳಲುತಿರೆ ತನ್ನ ಕುಲ
ವನಿತೆ ಸೀತೆಯಂ[1]ನೆಯ್ದೆ[1] ಪಿಡಿಯುತೊಲ್ದಾ ರಾವಣಂ ರಯದೆ ಕೊಂಡೊಯ್ಯಲು
ಮನದೊಳದವಳಲಂಪ್ಕೆ ಲಂಕೆಯಂ ಮುತ್ತಿ ತ
ದ್ದನುಜಪತಿಯಂ ಕೊಂದು ಸೀತೆಯಂ ತಂದು ತ
ನ್ನನುಜ ಲಕ್ಷ್ಮಣನಿಂದೆ ಸೀತೆಯಂ ನಿಂದಿಸುತೆ ನದಿಯೊಳಗೆ ತಾನಳಿದನು ೨೬

ಗರುಡಧ್ವಜಂ ಬಳಿಕೆ ಬಲಭದ್ರನಾಮದಿಂ
ವರರೋಹಿಣಿಗೆ ಪುಟ್ಟಿ ಯಾದವಸುತರ್ಬೆರಸು
ವರುಣನಟ್ಟಿದ ವಾರುಣಿಯನೀಂಟಿ ಮತ್ತತೆಯಿನಿರದೆರಳ್ಚಗೆಯಾಗುತೆ
ಪಿರಿದು ಬಿನದದೆ ಗೇಕಿನಸ್ತ್ರಶಸ್ತ್ರಂಗಳಂ
ವಿರಚಿಸುತೆ ಸಂಗರಂಗೆಯ್ಯಲವು ನಿಜಮಾಗಿ
ಭರದಿನವರೆಲ್ಲರಳಿಯಲ್ ಕಂಡು ರಾಮನಳಿದಹಿರೂಪನೆಯ್ದಿ ಪೋದಂ ೨೭

ಕಮಲಾಕ್ಷನೊಲ್ದು ಬಳಿಕಂ ಬೌದ್ಧರೂಪದಿಂ
ರಮಣೀಯವೇದಮಂ ನಿಂದಿಸುತೆ ನಾಡೆ ಸಂ
ಭ್ರಮದೆ ಷೋಡಶಲಕ್ಷ ಬೌದ್ಧಶಾಸ್ತ್ರಗ್ರಂಥಮಂ ವಿರಚಿಸುತ್ತೆ ಬಳಿಯಂ
ಕಮನೀಯ ಭಸ್ಮರುದ್ರಾಕ್ಷಾದಿಗಳ ದೂಷ
ಣಮನೆಸಗಿ ಪಾಷಾಂಡಮತದೊಳೆಲ್ಲಾಗಳುಂ
ರಮಯಿಸುತ್ತಿರೆ ಶಿವಂ ಕಂಡು ಶಿಕ್ಷಾಸ್ತ್ರದಿಂ ವಧಿಸಿದಂ ಲೋಕವಱಿಯೆ ೨೮

ಬಳಿಕಮಾ ಕೇಶವಂ ಕಲ್ಕಿರೂಪಂ ತಾಳ್ದು
ಮಿಳಿರ್ವ ಸತ್ಯಮಧರ್ಮಮನ್ಯಾಯವನೃತಂಗ
ಳೊಳಗಾದನಾಚಾರಮಾರ್ಗಮಂ ಭೂವಳಯದೊಳ್ ಕರಂ ಪಸರಿಸುತ್ತೆ
ಲಳಿತ ಸತ್ಯಂ ಸದಾಚಾರ ಸತ್ಕರ್ಮಂಗ
ಳೊಳಗಾದ ಸನ್ಮಾರ್ಗನಿಕರಂಗಳಂ ಭರದಿ
ನಳಿಯುತ್ತೆ ಚರಿಸುತ್ತಿರಲ್ಕಭವನಾ ಕಲ್ಕಿರೂಪನಳಿದಂ ಮುದದೊಳು ೨೯

ಇಂತೀ ದಶಾವತಾರಂಗಳಿಂದಂ ವಿಷ್ಣು
ಸಂತತಂ ಬನ್ನವಡೆಯುತ್ತಿರ್ಪನಿದನಱಿಯ
ದುಂತೆ ಪಾಷಂಡ ವೈಷ್ಣವ ನೀಚರೀ ವಿಷ್ಣುವೇ ದೈವವೆನುತಿರ್ಪರು

[1] ನೈದಿ (ಗ)

ಪಱಂತೆ ಕೇಳಾ ವಿಷ್ಣು ಕೃಷ್ಣಾವತಾರದೊಳ್
ಸಂತಸದೆ ವಸುದೇವಸುತನೆನಿಸಿ ಪಾಂಡವ
ರ್ಗಂತೆ ಭಂಡಿಯ [1]ಬೋ[1]ವನಾಗಿ ಜರಕನ ಬಾಣಹತಿಯಿಂದೆ ಸತ್ತನೆಂದು ೩೦

ಮುರಹರಂ ವ್ಯಾಸಾಭಿಧಾನದಿಂದಂ ಮತ್ತೆ
ಪಿರಿಯಂಬಿಗಿತಿಯ ಬಸುಱಿಂದೊಳ್ ಬಂದು ಕಾಶಿಗೆ
ಯ್ದಿರದೆ ಕೇಶವನಲ್ಲದೇ ದೈವಮಿಲ್ಲೆಂದು ವಿಶ್ವಪತಿ ಸನ್ನಿಧಿಯೊಳು
ಎರಡುಕೈಗಳನಾಗಸಕ್ಕೆತ್ತಲಾಕ್ಷಣಂ
ಭರದೆ ನಂದೀಶ್ವರಂ ಮುಳಿದ[2]ವಂ[2] ಕಿಳ್ತು ಭಾ
ಸುರ ವಿಶ್ವನಾಥನಾಲಯದ ಮುಂದಿರಿಸಿದಂ ಧ್ವಜರೂಪದಿಂದವೊಸೆದು ೩೧

ಪರಮ ದತ್ತಾತ್ರೇಯನೆನಿಸಿದಂ ವಿಷ್ಣು ಮ
ತ್ರಿರದತ್ರಿಸುತನಾಗಿಯದಿತಿಗೊಗೆತಂದು ಬಂ
ಧುರವೆನಿಸುವಿಂದ್ರಾನುಜಾಹ್ವಯಂಬಡೆದನಬ್ಜಜನಥೋದ್ವಾರದಿಂದೆ
ಭರದೆ ಜನಿಯಿಸಿಯಧೋಕ್ಷಜನೆನಿಸಿದಂ ಕ್ಷುಪನ
ನರಪತಿಯ ನೇಹದಿಂದಂ ದಧೀಚಿಯ ಕೂಡೆ
ಪಿರಿದು ಯುದ್ಧಂಗೆಯ್ದು ಚಕ್ರಮಂ ನೀಗಿ ಬಳಿಕದನೀಶನಿಂ ಪಡೆದನು ೩೨

ಮುರಹರಂ ಪೂಜೆಗೆಯ್ದವಸರದೊಳೊಂದು ಪು
ಷ್ಕರಮಿಲ್ಲದಿರೆ ನೋಡಿ ತನ್ನ ಬೆಳತಿಗೆಗಣ್ಣ
ನಿರದೆ ಕಿಳ್ತೀಶನಂಘ್ರಿಗೆ ಪೂಜೆಗೆಯ್ದೆಱಗಿ ಬಳಿಕಭವನಿಂದೆ ಮಿಱುಪ
ಸರಸಿಜಾಕಾರದಲರ್ಗಣ್ಣ ಪಡೆದೇಗಳುಂ
ವರಪುಂಡರೀಕಾಕ್ಷನೆನಿಸಿ ನುತಿವಿಸರದಿಂ
ಪಿರಿದು ಮತ್ತಾ ವಿಷ್ಣು ಪಶುಪತಿಯ ಕೀರ್ತಿಸುತೆ [3]ಸೋ[3]ಕಮಿರ್ದನಿದು ನಿಕ್ಕುವಂ ೩೩

ಜಡಧರಾಕೃತಿಯಿನೀಶನ ತಾಳ್ದು ಸಂತಸಂ
ಬಡಿಸಿ ಸಾಂಬನೆನಿಪ್ಪ ಸುಕುಮಾರನಂ ಪೆತ್ತ
ನಡಿಯಿಂದೆ [4]ದೂರ್ವಾ[4]ಸನೊದೆಯೆ ವಕ್ಷಸ್ಥಲವನಂದಿಂದೆ ನಾರಾಯಣಂ
ಪಡೆದನಾ ಶ್ರೀವತ್ಸಲಾಂಛನಾಹ್ವಯಮನೀ
ಪೊಡವಿಯೊಳ್ ಷೋಡಶಸಹಸ್ರಕುಲಸತಿಯರಂ
ಕಡುವೆಱಕೆವ ಗೋಪಾಂಗನೆಯರನಾ ತಸ್ಕರರ್ ಕೊಂಡೊಯ್ಯೆ ಸುಗಿದನೆಂದು ೩೪

1 ಗೋ (ಗಟ) 2 ದಂ (ಗ) 3 ಸು (ಗ) 4 ದುರ್ವಾ (ಕ)

ಕಲಿ ಜಲಂಧರನೆಂಬ ದೇವಾರಿಯಿಂ ಮತ್ತೆ
ನೆಲೆ[1]ಗೆ[1]ಟ್ಟು ಬೆಂಗೊಟ್ಟು ಬೆಟ್ಟದಿಟ್ಟೆಡೆಗಳೊಳ್
ಗೆಲವಳಿದು ಪನ್ನತಿಕೆ ಪೈಸರಂಬೋಗಿ ಮೆಯ್ಗ್ಗರೆದು ದೇವತ್ವಮುಮುಡುಗಿ
ಬಲಗೆಟ್ಟು ನಾಣ್ಗೆಟ್ಟು ನಿಂತು ಶತಕೋಟಿ ದು
ರ್ಬಲ ಮಾನಭಂಗಂಗಳೊಳವಪಂತಿರ್ಕೆ ನಿ
ರ್ಮಲಮಹಾದೇವನಂ ವಿಷ್ಣು ಮನದಳ್ತಿಯಿಂ ಪೂಜೆಗೆಯ್ದಡೆಯ ಕೇಳು ೩೫

ಕೊನರ್ವ ಲಂಕಾನಗರದಲ್ಲಿ ಮತ್ಸ್ಯೇಶ್ವರನ
ನನುದಿನಂ ಕೂರ್ಮಗಿರಿಯಲ್ಲಿ ಕೂರ್ಮೇಶ್ವರನ
ಮನದಳ್ಕಱಿಂ ವರಾಹೇಶ್ವರನನಾ ಗಯೆಯೊಳಾವಗಂ ಭಜಿಸುತಿರ್ಪ
ಮಿನುಪಹೋಬಲದೊಳೆ ನೃಸಿಂಹೇಶ್ವರನ ಮತ್ತೆ
ವಿನುತ ತ್ರಿಚಕ್ರಿಕಾಪುರದೊಳಗೆ ವಾಮನೇ
ಶನನವನಿಯೊಳಗೆ ರಾಮೇಶ್ವರನನಳ್ತಿಯಿಂ ವಿಷ್ಣು ಪೂಜಿಸುತಿ[2]ರ್ಪ[2]ನು ೩೬

ಮಿನುಪ ತನ್ನಯ ಶರೀರದೊಳಿಂದ್ರನೀಲಮಯ
ವೆನಿಪ ಶಿವಲಿಂಗಮಂ ಸಂತೋಷದಿಂ ತಳೆದು
ಮನದಳ್ಕಱಿಂ ಷೋಡಶೋಪಚಾರಂಗಳಿಂದರ್ಚಿಸುತೆ ಸುಖಮಿರ್ಪನು
ಇನಿತನಱಿಯದೆ ಪಾಂಚರಾತ್ರಾದಿ ಪಾಷಂಡ
ಘನದುರಾಚಾರ ವೈಷ್ಣವನಿಕರಮಾವಗಂ
ವನಜಾಕ್ಷನೇ ದೈವಮೆಂದುಲಿಗುಮಾ ವಿಷ್ಣುಗೆಲ್ಲಿತ್ತೊ ದೈವತ್ವವು ೩೭

ಅವನ ಸದ್ಭಕ್ತರೆನಿಸುವ ವೈಷ್ಣವರ್ಗೆ ಸಂ
ಭವಿಸುವುದು ನಿರಯಮಂತವರ್ಗೆ ಮನವೊಲ್ದಾವ
ನವಿವೇಕದಿಂದಮುಣಲಿಕ್ಕಿ [3]ತುಡಕು[3]ಡುತೆ ಸಂಭಾಷಣೆಗಳಂ ಮಾಳ್ಪನು
ಆವನೆ ಭೂತಪ್ರಳಯಪರ್ಯಂತಮಿರ್ಪನೊ
ಪ್ಪುವ ನರಕನೀರನಿಧಿಯೊಳಗೆಂದು ಸಂತತಂ
ಭುವನದೊಳ್ ಸಾಱುಗುಂ ಯೇ ನರಾ ಭೋಜಯಿಷ್ಯಂತಿ ಎಂಬೀ ವಾಕ್ಯವು ೩೮

ವಿರತಿಯಿಂ ಪಾಷಂಡಮತದ ಪಾಪಿಷ್ಠರ್ಗೆ
ಪುರುಷರ್ಗೆ ಸಂತತಂ ವಸ್ತ್ರಹೇಮಾದಿ ಸಂ
ದರಭೂಷಣಂಗಳಂ ಕುಡುತಿರ್ಪನವನೆ ದಲ್ ನರಕತತ್ಪರನೆನಿಪನು

---

1 ಗೊ (ಕಗ)  2 ರ್ದ (ಕ)  3 ಕುಡುಕು (ಕ)

ಪಿರಿದುಮವರ್ಗಿತ್ತ ಭೂಮ್ಯಾದಿ ಸದ್ದಾನಂಗ
ಳಿರದೆ ವೈಶ್ವಾನರನ ಮುಖಕಿತ್ತ ಕಾಷ್ಠದಂ
ತಱಿದು ಕರಿಮುಱಿವೋಕುಮಂತದಱಿಂಸವರ್ಗಿತ್ತ ತದ್ದಾನಫಲಸುಫಲವು ೩೯

ಪರಮವೇದವಿದೂರರೆನಿಪ ಗೋಪೀಮಲಿನ
ಧರರೆನಿಪ ಭೂತಿರುದ್ರಾಕ್ಷಾದಿ ಶಿವಲಾಂಛ
ತರ ದೂಷಿಸುವ ಬಹಿಷ್ಕೃತರೆನಿಪ ಪಾಷಂಡಯತಿಗಳಂ ದೇವೇಂದ್ರನು
ಕರಮೆ ಪು:[1]ಳ್[1]ಸಿಂದೆ ಸೌಳ್ಗನೆ[2] ಸೀಳಿ ಖಂಡಮಂ
ಪಿರಿಯ ಕೆನ್ನಾಯ್ಗಳ್ಗೆ ಕುಡುತಿರ್ಪನೆಂದು ಬಂ
ಧುರವೇದಮುಲಿಗುಮಿಂದ್ರೋ ಯತೀನ್ ಶಾಲಾವೃಕೇಭ್ಯಃ ಎನುತ್ತೆ ಸತತಂ ೪೦

ಗರುಡಧ್ವಜಂ ದೈವವೆಂದು ಭಜಿಪುದಱಿಂದ
ಮಱುತರ ಸುಮುಕ್ತಿಮಾರ್ಗಂ ದೊರಕದದಱಿಂದೆ
ನಿರಯದೊಳ್ ಬಿಳ್ದು ನಾನಾಯೋನಿಯೊಳ್ ಬಂದು ಮತ್ತೆ ನರಕದೊಳಾಳುತೆ
ತಿರುಗಿ ಬಹುವಿಧಯೋನಿಮುಖದಲ್ಲಿ ಪುಟ್ಟಿ ಬಂ
ಧುರಮಪ್ಪ ಊಟಾಳಗುಂಡಿಗೆಯ ತೆಱದ ತಿರಿ
ತಿರಿಗಿ ಬರುತಿರ್ಪರಲೆ ವೈಷ್ಣವರಿರಾ ಮೋಕ್ಷಸತ್ಪಥಂಗಾಣದನಿಶಂ ೪೧

ಪರಮೇಶ್ವರನ ಮಹಿಮೆಯಂ ವಿಷ್ಣುವಿನ ಹೀನ
ತರಮುಂ ವಿಚಾರಿಸುವೊಡಿಂತು ನಿಜದೃಷ್ಟಾಂತ
ಮಿರೆ ನಿತ್ಯಶಿವನನರ್ಚಿಸಿ ಮುಕ್ತಿವಡೆವಂತೆವೋಲನಿತ್ಯನ ಕೃಷ್ಣನ
ಪಿರಿದುಪೂಜಿಸಿ ಮೋಕ್ಷಮಂ ಸಾರಲಱಿವರೇ
ನರರೆಲವೊ ನೀಂ ವೈಷ್ಣವಂ ಭಾವಿಸಲ್ಕಲ್ತು
ಕರಮೆ ಬೌದ್ಧನೆ ಅಕ್ಕುಮಾ ವಿಷ್ಣು ಬಾನ್ಪೊಳಲನುಗ್ರನುರುಪುವ ದಿನದೊಳು ೪೨

ಭೃಗುಶಾಪದಿಂ ಬಂದ ಪತ್ತುಭವದೊಳಗೊಂದು
ಮಿಗುವ ಬೌದ್ಧಾವತಾರಂದಳೆದು ಶಂಭುವಿನ
ವಿಗಡಮಪ್ಪಾಜ್ಞೆಯಿಂ ತ್ರಿಪುರಕೆಯ್ದಿದ ಬೌದ್ಧಜನ್ಮಮಾ ಲೋಕದೊಳಗೆ
ಮಿಗೆ ದುರಾಚಾರಕನುಕೂಲಮಾ ಮಾರ್ಗಮಿಂ
ಪೊಗೆವ ವಾಮನಕೂರ್ಮದಾಸರ್ಕಳುಂಟು ತೊ
ಟ್ಟಗೆ ಬೌದ್ಧದಾಸರ್ಕಳಂ ಕಾಣವೆಲ್ಲಿಯುಮಂ ಕೇಳದಱ ದುಸ್ಸರಣಿಯಂ ೪೩

1 ನಿ (ಗ) 2 ಗೆ (ಗ)

ಸದಮಲಪ್ರಚುರವಿಶ್ರುತ ಪರಮಭಕ್ತಗಣ
ಪದಸರೋರುಹಸಾಂದ್ರ ಮಕರಂದಪಾನ ಸ
ನ್ಮುದಿತ ಚಂಚಚ್ಚಂಚರೀಕನನವರತ ಪಂಚಾಕ್ಷರೀಪ್ರಸಿತಹೃದಯಂ
ವಿದಿತ ಮಂಜುಲನೀಲಕಂಠಾಹ್ವಯಂ ಮನೋ
ಮುದದೆ ಪೇಳ್ದುರುತರಾರಾಧ್ಯಚಾರಿತ್ರದೊಳ
ಗಿದು ಪಾಂಚರಾತ್ರಮತನಿರಸನದ ಕಥನಮಿದನಾಲಿಪುದು ಸದ್ಭಕ್ತರು ೪೪

# ಒಂಬತ್ತನೆಯ ಸಂಧಿ

## ಬೌದ್ಧಮತ ನಿರಸನ

ಸೂಚನೆ : ಪರವಾದಿವಾರಿನಿಧಿ ಕುಂಭಸಂಭವನಿಭಂ
ಗುರುಪಂಡಿತಾರಾಧ್ಯವಿಭು ಬೌದ್ಧವಾದಮಂ
ಪರಿಭವಂಗೆಯ್ದು ಕಥನಂಗೇಳ ಸಚಿನಕುಲತಿಲಕ ಸೂರಾಮಾತ್ಯನೆ

ಕೈಲಾಸಗಿರಿವಾಸ ಹಾಲಾಹಲಾ[1]ಹಾ[1]ರ
ಶೂಲಾಸಿ ಚಾರುಕರ ಕೀಲಾಲಚಾರ್ಯ್ಯ ವಿ
ಶಾಲಾಂಬಕಾಂತಕಿರಣಾಲೋಲ ವಲ್ಲ್ಯಾಲವಾಲಾ ಕೃಪಾಸಾಗರ
ಫಾಲಾಂಬಕಾ ಕಾಮಕೋಲಾಹಲಾ ದುಷ್ಟ
ಲಾಲಾಸುರಾದ್ಯಸುರಜಾಲಾಟವೀದಾವ
ಲೀಲಾಯಮಾನ ಮುನಿಮಾಲಾರ್ಚಿತಾಂಘ್ರಿಯುಗ ಪಾಲಿಪುದು ನೀಲಕಂಠ ೧

ಬೌದ್ಧ ಕೇಳೆಲೊ ನಿನ್ನ ಮತಮಂ ವಿಚಾರಿಪೊಡ
ಶುದ್ಧಮದು ವೇದಾಗಮಾದಿಗಳ್ಗದು ಮಿಗೆ ವಿ
ರುದ್ಧಮತಿ ಭವಪಾಶದೊಡನಸಂಬದ್ಧಮಘಸಂರುದ್ಧಮುವನಿಯೊಳಗೆ
ಸದ್ಧರ್ಮ್ಮವರ್ಜಿತಂ ದುಃಖಸಂಚಯದಿಂ ಸ
ಮೃದ್ಧಂ ನಿಷಿದ್ಧಮತ್ಯಂತಭವಕಾರಣಂ
ಶುದ್ಧಸನ್ಮಾರ್ಗ್ಗ ಗರ್ಹಿತಮಬದ್ಧಂ ಕುತ್ಸಿತಾರ್ಥ್ವಿದ್ಧ ನಿಜವರ್ತನಂ ೨

ಸಲೆ ಮನೋಮಯಕೋಶದೊಳ್ ಶೋಭಿಸುತ್ತಿರ್ಕ್ಕ
ಮಲಘುವಿಜ್ಞಾನಮಯಕೋಶಮುದೆ ಪರಿಕಿಪೊಡೆ
ಲಲಿತಬುದ್ಧಿಯೆನಿಕ್ಕುಮಾ ಬುದ್ಧಿ ಭಾವಿಸಲ್ ಕ್ಷಣಿಕಮೆನಿಕುಂ ಸಂತತಂ
ಅಲದರ್ಗ್ಗುತ್ತರೋತ್ತರಂ ಬುದ್ಧಿ ಪೊಣ್ಮುತ್ತಿರಲ್
ಸುಲಭದಿಂ ಪೂರ್ವದೊಳ್ ತೋಱುತಿರ್ಪಾ ಬುದ್ಧಿ
ವಿಲಯಮೆಯ್ದುಗು[2]ಮೆಂ[2]ತೆನಲ್ ದೀಪಸಂತಾನದಿರವಿನಂತೆವೊಲಾವಗಂ ೩

---

[1] ಥಾ (ಗ) [2] ಮಂ(ಗ)

ಪಿರಿದುತ್ತರೋತ್ತರಂ ಬುದ್ಧಿ ತೋಱುತ್ತಿರಲ್
ಕರಮೆ ಪಿಂತೊಗೆವ ತದ್ಬುದ್ಧಿ ಸಂತತಿರೂಪ
ದಿರವುಳ್ಳ ಬುದ್ಧಿಯೇ ಆತ್ಮಂ ವಿಚಾರಿಸಲ್ಕೀ ಬುದ್ಧಿ ಸಂತತಿಯೊಳು
ನಿರುತದಿಂ ಕ್ಷಣಿಕಮಾಗೊಲ್ದು ತೋಱುತ್ತಿರ್ಪ
ವರಚತುರ್ವಿಧಭಾವಸುಧ್ಯಡೊಳಗೆಸೆ[1]ವೊ[1]ಂದು
ಸುರುಚಿರಜ್ಞಾನಸಂಯುಕ್ತಂ ಕ್ಷಣಂ ಮೋಕ್ಷಕಾರಣಂ ತಾನೆಂಬೊಡೆ ೪

ಸಂತತಂ ಕ್ಷಣಭಂಗುರಂ ಮುಕ್ತಿಕಾರಣಮು
ದೆಂತಕ್ಕುಮೋ ಆಗದಾಕ್ಷಣಮದಂತಿರ್ಕೆ
ಮುಂತೆ ಕೇಳೊರ್ವನೊರ್ವಂ ಎಂದು ಲೆಕ್ಕಿಸುತೆ ಮತ್ತೀರ್ವರೆಂಬಾಗಳು
ಪಿಂತಣೋರ್ವನ ಬಿಟ್ಟು ಬಳಿಕೀರ್ವರೆನುತೆ ನೋ
ಡಂತು ಮಿಗೆ ಮೂವರೆಂಬಾಗಳೀರ್ವರ ಬಿಡು
ತ್ತಿಂತೆಣಿಸುವೆಡೆಗಳೊಳ್ ಮೊದಲ[2]ಲೇಕಂ[2] ಕೆಟ್ಟು ಮುಂ ಲೆಕ್ಕಮುಣ್ಮುವಂತೆ ೫

ಪಿರಿದುಮಿರ್ತಡಿಮುಟ್ಟಿ ತಿಂಬಿ ಬರುತಿರ್ಪ ಭಾ
ಸುರನದೀಪೂರಮದು ಮುಂಪರಿದು ಪೋಗುತಿರೆ
ಭರದಿನಳಿವಂತೆ ಪಿಂತಣ ಪೂರವಿತತಿಗಳ್ ಮತ್ತೆಯುಂ ಪರಿಭಾವಿಸೆ
ಉರಿವುತ್ತೆ ಕಾಳ್ಕಿಚ್ಚು ಮುಂದುವರಿದೆಯ್ದುತಿರೆ
ನಿರುತದಿಂ ಪಿಂತಾಱಿಪೋಪಂತೆ ಬಳಿಕಮು
ಕ್ಷರಪಠಣೆಯೊಳ್ ಪಿಂತಣಕ್ಕರಂ ಮುಂತೋದುತಿರೆ ಕಿಡುವ ಪಾಂಗಿನಂತೆ ೬

ಮಿಸುಪಂಕುರಂ ಕುಸುಮತತಿಫಲಂ ಪಣ್ಣಾಗಿ
ಮಸಕದಿಂ ಬೀಜಮದು ಪೂರ್ವರೂಪಂ ಬಿಟ್ಟು
ನಿಸದಮೊಸೆವಂತಣುವಿಮುಕ್ತಿಯೆಯ್ದಲ್ ಪೂರ್ವಬುದ್ಧಿ ಕೆಟ್ಟಿರ್ಕುಮನಿಶಂ
ಎಸಕದಿಂದಿಂತೆಂಬೊಡಂ ಬೌದ್ಧ ಕೇಳೆಲವೊ
ನಸಿದುಪೋಕುಂ ವಲಂ ಕ್ಷಣಿಕಮತಮೆಂತೆನಲ್
ಸಸಿನೆ ನಿನ್ನಯ ಬುದ್ಧಿಯಿರುತಿರ್ದು ನಾಶಮೆಯ್ದುವುದೆಂತೊ ಭಾವಿಸುವೊಡೆ ೭

ಸಂತತಂ ತ್ರಿಕ್ಷಣಾವಸ್ಥೆಯುಳ್ಳುದು ಬುದ್ಧಿ
ಯೆಂತೆನಲ್ ಜನವಾದಿಯುಂಟಪ್ಪುದಱಿನವುಂ
ಯೆಂತುತೋಱುವ ಬುದ್ಧಿಯುತ್ಪತ್ತಿಕಾಲವೋ ನಾಶಕಾಲಮದೆಂಬೊಡೆ

---

[1] ದೊಂ (ಗ) [2] ಲೆಕ್ಕಂ (ಗ)

ಅಂತಾದೊಡಾ ಬುದ್ಧಿ ತನ್ನ ನಾಶಂ ಗ್ರಹಿಸಿ
ಮುಂತೊಂದು ಬುದ್ಧಿಯಂ ಪುಟ್ಟಿಸಲ್ಕಱಿಯದಿ
ರ್ಕುಂ ತವಕದಿಂದೊಂದು ಕಾರ್ಯ್ಯಮಂ ಮನವೊಸೆದು ಮಾಡಲಱಿಯದು ಪರಿಕಿಸೆ ೮

ಜನನಕಾಲದೊಳೆಯ್ದೆ ನಷ್ಟತ್ವಮಂ ಪಡೆ[1]ವ[1]
ವಿನುಪ ಧೀಸಂತತಿಯೊಳಾಕ್ಷಣಂ ಮೋಕ್ಷಮಂ
ವಿನಯದಿಂದೆಯ್ದುಗುಮೆನುತ್ತೆ ನುಡಿವೈ ಕ್ಷಣಂ ಮೋಕ್ಷಮಂ ತಾನೆಯ್ದಲಿ
ನಿನಗದಱಿನೊಂದು ಲಾಭಮದುಂಟೆ ಪೇಳೆಲವೊ
ಬಿನುಗು ಬೌದ್ಧನೆ ಸಮಂಚಿತಮಾಗಿ ಲೋಕದೊಳ್
ವಿನುಪ ಶೈವಗುಣಾಳಿಗಳ್ ಶೋಭಿಸುತ್ತುಮಿರಲಲ್ಪಗುಣ ನಿನ್ನ ವ್ರತವು ೯

ಕೊಲೆ ಕಳವು ಪುಸಿಗಳಂ ಪರವಧೂಗಮನಮಂ
ತೊಲಗುವುದು ಪೇಯಾಪೇಯಂಗೆಯ್ಯದಿರ್ಪುದೇ
ಲಲಿತಸೌಗತ ಮತಕೆ ಸದ್ವ್ರತಂಗಳೆನುತ್ತೆ ಬಱಿದೆ ಬಾಯ್ಬಡಿಗೊಂಬಿರಿ
ಕೊಲೆಯಲ್ಲವೇ ನೆಟ್ಟನಿರುತಿರ್ಪ ಬೌದ್ಧನಂ
ನಲಿದು ಪೂಜಿಸಿ ನಮಸ್ಕರಿಸುತ್ತೆ ಸಂತತಂ
ವಿಲಸದುಕ್ತಿಗಳಿಂದೆ ಪೊಗಳುತ್ತೆ ಮತ್ತಮಂ ಶೂನ್ಯನೆಂದೇ ಬಗೆವುದು ೧೦

ಸುರುಚಿರಾಮ್ನಾಯ ತಂತ್ರೋಪನಿಷದಾದಿ ಬಂ
ಧುರಶಾಸ್ತ್ರಸನ್ಮಾರ್ಗದಲ್ಲಿ ಸರ್ವರುಮೊಲ್ದು
ಚರಿಸುತಿರಲದನುಳಿದು ಬಾಹ್ಯಕುತ್ಸಿತ ಸೂಕ್ಷ್ಮತರ ಕುಮಾರ್ಗಂಗಳಲ್ಲಿ
ಉರುತರಜ್ಞಾನಾಂಧತಮದೊಳೆಸೆದೇಗಳುಂ
ಪಿರಿದಾಗಿ ವರ್ತಿಸುತ್ತಿರ್ಪಿರವೆ ಭಾವಿಸಲ್
ಪರಮ ತಸ್ಕರವೃತ್ತಿಯಲ್ಲವೇ ಇದನಱಿಯಿರೆಲೆ ಬೌದ್ಧವಾದಿಗಳಿರ ೧೧

ಪುಸಿಯೆನೆಂಬಾ ಬೌದ್ಧ ಕೇಳಾಗಮಾಮ್ನಾಯ
ವಿಸರದೊಳ್ ಸತ್ಯನೀಶಾನನೀಶ್ವರನೆಂದು
ಮಿಸುಪ ಶಿವನೆಂದು ಶಂಕರನೆಂದು ಪರಶಿವಂಗೀ ನಾಮಮಾದಿಯಾಗಿ
ಎಸೆವ ನಾಮಂಗಳತಿರೂಢಿಯಾಗಿರೆ ಮತ್ತೆ
ಮಸಕದಿಂ ಶಿವನಿಲ್ಲ ಜಗಕೆಂದು ಜಱುಚುವುದು
ಪುಸಿಯಲ್ತೆ ಇದನಱಿಯದುಂತೆ ಬಕ್ಕುಡಿಗುಟ್ಟದಿರ್ ಜಗದೊಳೆಯ್ದೆ ಸತತಂ ೧೨

---

[1] ದು (ಗ)

ಕುಲವಧುವ ಪಾಂಗಿನಿಂದತಿಗೋಪ್ಯಸುಪ್ಪ ಸ
ಲ್ಲಲಿತ ವಿದ್ಯಾಂಗನಾರತಿಸುಖಮನೊಕ್ಕು ದು
ರ್ವಲ ಕುಮಾರ್ಗಾವಲಂಬನವೆನಿಪ ಸರ್ವರ್ಗೆ ಸಾಧಾರಣಂ ದಲೆನಿಪ
ಪಲವರೊಳ್ ವರ್ತಿಸುವ ವಿದ್ಯಾಂಗನಾಕುಲಟಿ
ಗೊಲವಿನಿಂದೊಳಗಾಗಿ ವರ್ತಿಸುತ್ತಿರ್ಪಿರವೆ
ಸಲೆ ಜಾರಭಾವವೆಂಬುದಿದಲ್ತೆ ಬೌದ್ಧರಿರ ದುರ್ಮಾರ್ಗವರ್ತಿಗಳಿರ ೧೩

ಮಿನುಪ ವೇದಾದಿ ವಿದ್ಯಾನಿರ್ಜರದ್ರುಮದ
ತನಿವಣ್ಣ ಪಕ್ವರಸಪಾನಮಂ ಮಾಡಿ ಕೆ
ಮ್ಮನೆ ಶಿವೋಪಾಸ್ತಿಗೆಯ್ವುದನಿಕ್ಕಿ ದುಃಖದುಂಬಿತನದಿಂದೆ ಮಿಗೆ ಮದಿಸುತೆ
ಘನತರಾಜ್ಞಾನಾವೃತಂ ದಲೆನಿಸುವ ದುಷ್ಟ
ತನದ ಬೌದ್ಧಾಗಮಾಸವಮನುಃಖತಿಯಿಂಟ ಬಿ
[1]ಟ್ರ[1]ನೆ ಬೀಗುವುದೆ ನೋಡಪೇಯಪೇಯಂ ಎಂಬುದಕ್ಕುಮಿದು[2] ಭಾವಿಸುವೊಡೆ ೧೪

ದುರುಳಬೌದ್ಧನೆ ಕೇಳ ನಿಮ್ಮ ದುರ್ನೀತಿಗಳ
ಸರಳಕುಂತಳದೇಶದಲ್ಲಿ ಮೃಗಸಮಿತಿಯಂ
ಪಿರಿದು ಕೊಲಲಾಗದವಬಡಗುಗಳ ತಾವು ಭಕ್ಷಿಸಲಾಗದೆಂದು ಮತ್ತೆ
ಇರದೆ ಗಳಪುವಿರದರ್ಕನುಕೂಲಮಾಗಿ ಭಾ
ಸುರ ಶಾಸ್ತ್ರಸಂತತಿಯನೊಡರಿಸುತ್ತೀಗಳುಂ
ಕರವೆ ನಿಮ್ಮಯ ಶಿಷ್ಯವಿಸರಕ್ಕದಂ ಬೋಧೆಗೆಯ್ವುತ್ತಮಿರುತಿರ್ಪಿರಿ ೧೫

ಮತ್ತಮೆಲೆ ಬೌದ್ಧರಿರ ನೀವಿಂತು ಜಬುಚುವಿರ್
ಮತ್ತತ್ವದಿಂ ಸಿಂಹಣೋಪವರ್ತನದಲ್ಲಿ
ಯೊತ್ತಂಬದಿಂ ಪಕ್ಷಿಮೃಗಜಾತಿಗಳ ತಾವು ಕೊಲಲಾಗದನ್ಯರಿಂದೆ
ಸತ್ತ ಮೃಗಪಕ್ಷಿಗಳ ತಾವು ಭಕ್ಷಿಪುದಜಿಂ
ದೆತ್ತಲುಂ ತಮಗೆ ದೋಷಂ ಪೊರ್ದದೆಂದು ಸಲೆ
ಸತ್ತ ಮೃಗಪಕ್ಷಿಗಳನೊಸೆದು ತಿನುತಿರ್ಪಿರೆಲೆ ನೀಚರಿರ ಕುತ್ಸಿತರಿರ ೧೬

ಮಿನುಗುತಿರ್ಪೀ ಕ್ಷಣಿಕವೃತ್ತಿಯಿಂದಪವರ್ಗ
ಮಿನಿತು ತಲೆದೋಱದೆಲೆ ಬೌದ್ಧ ಕೇಳ್ ಮತ್ತೆಯುಂ
ವಿನುತದೈವಂ ತವಗದಾವುದುಂದಾ ಭೃಗುಮುನೀಶನಿಂ ಶಾಪವಡೆದ

---

[1] ಟ್ಟ (ಕ) [2] ದಿದು (ಕ) [3] ಙ (ಗ)

ದನುಜಾರಿ ಮತ್ತೆ ಬೌದ್ಧಾವತಾರಂದಳೆದು
ವಿನಯದಿಂ ಬಾನ್ಪೊಳಲ ಪೊಕ್ಕದಟಿಕೂಳಿಸೆವ ಸ
ದ್ವನಿತಾವ್ರತಂಗಳಂ ಕಿಡಿಸಿ ತತ್ಪತಿಗಳೇಕೋನಿಷ್ಠೆಯಂ ಬಿಡಿಸಲು ೧೭

ಪರಮ ಶಿವಭಕ್ತಿದೂಷಣಮಾಗಿ ಸಂತತಂ
ಸುರುಚಿರಾಮ್ನಾಯ ತಂತ್ರಾಳಿಬಾಹಿರಮಾಗಿ
ನಿರುಪಮ ಸ್ಮಾರ್ತಾಳಿಗಳ್ಗೆ ಪೊಱಗಾಗಿ ಬೌದ್ಧಗ್ರಂಥಮಂ ವಿರಚಿಸಿ
ಪಿರಿದು ವೇದಾದಿಸನ್ಮಾರ್ಗಕ್ಕೆ ಗೆಂಟಾದ
ಕರಮನಿತ್ಯತೆವಡೆದ ಬುದ್ಧನವನೆಂತು [1]ಸೌಂ[1]
ದರ ನಿತ್ಯಮುಕ್ತಿಯಂ ಕುಡುವನಿದು ಬಿಸಮಂದಮೆಲ್ಲೆಡೆಯೊಳುಂ ಭಾವಿಸೆ ೧೮

ಸಂತತಂ ಕ್ಷಣಭಂಗುರಂ ದಲೆನಿಸುವ ಕರ್ಮ
ಮೆಂತು ತನ್ನಯ ಫಲಮನೀವುದೆಲೊ ನಿನಗೆ ನೋ
ಡಂತೆ ಸರ್ವಂ ಶೂನ್ಯಮೆಂಬ ಬೌದ್ಧರ್ಗೆ ಬುದ್ಧಂ ದೈವಮೆಂದುಲಿವುದು
ಉಂತೆ ಶಶಶೃಂಗದವೊಲಿರ್ಕುಮನಿಶಂ ಮತ್ತ
ಮಂತೆ [2]ಚೌವೀಸತೀರ್ಥಕರೊಳರುಮೆಂಬ ನುಡಿ
ಯಿಂತಿ[3]ದೆಲ್ಲಮನಱಿಯದೊಣದರ್ು ನೀಂ ಶೂನ್ಯವಾದಂಗೆಯ್ವ ಎಲೆಯಧಮನೆ ೧೯

ಸರಳಕಾಲತ್ರಿತಯವರ್ತಿಗಳೆನಿಪ್ಪ ಭಾ
ಸುರಮಾದ ಚೌವೀಸತೀರ್ಥಕರರಿಂ ಮತ್ತೆ
ನರೆಬರೆಪ್ಪತ್ತೇಳೆನಿಪ್ಪ ಶೂನ್ಯಧ್ಯಾನಪರರೆನಿಪ ಮುನಿವರರ್ಗಳಿಂ
ಪಿರಿದು ಮಾಡಲ್ಪಟ್ಟ ಜಪತಪೋಧ್ಯಾನಾದಿ
ವರ[4]ಧರ್ಮ ಕರ್ಮಫಲದಾತೃವಾವಂ ಮತ್ತ
ಮಿರದವರ್ ಸಮೆದ ಸತ್ಕ್ರಿಯೆಗಳ್ಗೆ ನಿರ್ವಾಹಮಾವುದೋ ಪರಿಭಾವಿಸೆ ೨೦

ಮಿಗೆ ಶೂನ್ಯನಾದ ಬುದ್ಧಂ ಭಾವಿಸಲ್ಕೆ ಪೆಂ
ಪೊಗೆವ ಜನನಸ್ಥಿತಿಲಯಂಗಳ್ಗೆ ತಾನೆಂತು
ಸೊಗಸಿನಿಂ ಕರ್ತೃವಪ್ಪಂ ನೋಡೆ ಜನನಾದಿಗಳ್ಗೊಡೆಯನಲ್ಲದಾತಂ
ನೆಗಳ್ದ ದೈವಮೆ ಅದಂತಿರ್ಕೆ ಕೇಳೆಲೊ ಬೌದ್ಧ
ಬಗೆದು ನೀಂ ನುಡಿವ ಶೂನ್ಯಂ ತತ್ತ್ವಮದು ಮತ್ತೆ
ಜಗದೊಳುಂಟಾದುಡೋ ಇಲ್ಲದುದೊ ಪೇಳಿದನೊಱಲ್ದು ನೀಂ ಪರಿಭಾವಿಸಿ ೨೧

1 ಸುಂ (ಗ) 2 ಚಲುವಿಂ ಸ (ಗ) 3 ವೆ (ಗ) 4 ಕರ್ಮಧರ್ಮ (ಕ)

ಪಿರಿದು[1]ಮುಂಟೆಂ[1]ಬೊಡದು ಶೂನ್ಯಮಲ್ತೇಗಳುಂ
ನಿರುತಮಿಲ್ಲೆಂಬೊಡದು ಶೂನ್ಯಮಂ ಶೂನ್ಯಮೆಂ
ದೊರೆಯಲಳವಲ್ತು ಮಿಗೆವುಂಟಾದುದಂ ಬಳಿಕ್ಕಿಲ್ಲೆಂಬ ನುಡಿ ತೊದಳದು
ಧರೆಯೊಳಿಲ್ಲೆನಿಸುವವನಿಲ್ಲೆಂಬ ವಚನಮುಂ
ಕರಮೆ ಮಿಥ್ಯೆಯೆನಿಕ್ಕುಮಿದು ನಿಕ್ಕುವಂ ನೋಡೆ
ಪರಿಕಿಪೊಡಹಿಂಸಾವಿಹೀನರಿರ ಸತ್ಕರ್ಮಫಲವಿದೂರರಿರ ಸತತಂ ೨೨

ವರ ಸತ್ಯಧರ್ಮವರ್ಜಿತರಿರಾ ದ್ಯೆವಹೀ
ನರಿರ ಪುಣ್ಯಾತಿದೂರರಿರ ಬೌದ್ಧರಿರ ಭಾ
ಸುರ ಮೋಕ್ಷಸುಖಮೆಯ್ದುಗುಮೆ ನಿಮಗೆ ನಿಮ್ಮ ಕುತ್ಸಿತವಾದ ಬೌದ್ಧಮತದ
ತರಳವಾದಂ ಬಿಡಿಂ ಶೈವಸಿದ್ಧರ್ಗೆ [2]ನೀ
ಮು[2]ರುಬೌದ್ಧಮತಮೆಯ್ದೆ ಗುಲ್ಫಪ್ರ[3]ಮಾಣ[3]ಮೆನಿ
ಸಿರದು ಮತ್ತಾ ಜೈನಮತಮಲ್ಪಮಾಗಿರ್ಪುದದುರವನೊಲ್ದು ಕೇಳಿಂ ೨೩

ಸದಮಲಪ್ರಚುರವಿಶ್ರುತ ಪರಮಭಕ್ತಗಣ
ಪದಸರೋರುಹಸಾಂದ್ರ ಮಕರಂದಪಾನ ಸ
ಮ್ಮುದಿತ ಚಂಚಚ್ಚಂಚರೀಕನನವರತ ಪಂಚಾಕ್ಷರೀಪ್ರಸಿತಹೃದಯಂ
ವಿದಿತ ಮಂಜುಳನೀಲಕಂಠಾಹ್ವಯಂ ಮನೋ
ಮುದದೆ ಪೇಳ್ದುರುತರಾರಾಧ್ಯಚಾರಿತ್ರದೊಳ
ಗಿದು ಬೌದ್ಧವಾದನಿರಸನಕಥನಮಿದನಾಲಿಪುದು ಪರಮಸದ್ಭಕ್ತರು ೨೪

---

[1] ಮಿಂತೆಂ (ಗ) [2] ನಿಮ್ಮು (ಗ) [3] ಣಾಮ (ಕ)

# ಹತ್ತನೆಯ ಸಂಧಿ

## ಜೈನ[1]ವಾದ[1] ನಿರಸನ

ಸೂಚನೆ : ಪರವಾದಿತರುಪರಶ್ವಧನೆನಿಪ ಪಂಡಿತೇ
ಶ್ವರನಮಲವೇದಬಾಹಿರ ಜೈನಮತಮನತಿ
ಪರಿಭವಂಗೆಯ್ದುದಂ ಕೇಳ್ ಸುರಸಚಿವೇಂದ್ರ ಪರಸಚಿವಗಜಮೃಗೇಂದ್ರ

ಕಂಜಸಖಪಾವಕದ್ವಿಜರಾಜನೇತ್ರ ಸಿತ
ಕುಂಜರ ಭುಜಂಗಪತಿ ಗೋಕ್ಷೀರಫೇನಶುಚಿ
ಕಂಜಸನ್ನಿಭಗಾತ್ರ ಹಿಮಕುಧರಜಾನೂತ್ನಲಾವಣ್ಯರಸಸುಪಾತ್ರ
ಮಂಜುಲಾರ್ಯಾಂಗಮಂಗಲಸೂತ್ರ ಸಂಸಾರ
ಪುಂಜಜಲರಾಸಿತಾರಕಯಾನಪಾತ್ರ ವಿಧಿ
ಕಂಜಾಕ್ಷಗರ್ವವಲ್ಲೀನಿಕರದಾತ್ರ ಜಯ ಜಯತು ಗುರುನೀಲಕಂಠ ೧

ಎಲೆ ಜೈನ ಮುದದಿನಿಂತೆಂಬೊಡಂ ಕೇಳ್ ಜೀವ
ನಲಸದೆಂದುಮನಾದಿ ಮೋಹಾದಿ ದೋಷಯುತ
ನೊಲವಿನಿಂದಾ ದೋಷನಿಕರಮಂ ಎಮ್ಮ ಶಾಸ್ತ್ರಜ್ಞಾನದಿಂದಮಂತೆ
ನಲಿದು ತಚ್ಛಾಸ್ತ್ರೋಕ್ತಮೆನಿಪುಗ್ರತಪದಿಂದೆ
ಸಲೆ ಜೀವರಾಶಿಗಳನೇನುಮಂ ಕೊಲ್ಲದಾ
ಸುಲಲಿತಾಚರಣೆಯಿಂ ಕಿಡಿಸಲದೆ ಮುಕ್ತಿ ಬೇರೊಂದಿಲ್ಲ ಮುಕ್ತಿಯೆಂಬ ೨

ಇದು ಸಲ್ಲದೆಂತೆನಲ್ ಜೀವನೊಳನಾದಿಯಿಂ
ಪುದಿದ ಮೋಹಾದಿದೋಷಂಗಳೊಂದೆಳ್ಳನಿತು
ಪದೆದು ತೋರ್ಪಾ ಜ್ಞಾನದಿಂ ತಪೋಬಲದಿಂದ ಹಿಂಸೆಯಿಂ ತವೆಯಲೆಂದುಂ
ಒದವಿದಾಮ್ನಾಯತಂತ್ರಜ್ಞಾನದುದಯದಿಂ
ದೊದಗಿದ ತಪೋಬಲದಿನಾತ್ಮನೊಳನಾದಿಯಿಂ
ವಿದಿತಮಾಗಿರ್ದ ಮೋಹಾದಿದೋಷಂ ಕಿಡುಗುಮುಳಿದುದದೆಂತನಿತಳಿಯದು ೩

---

1 ಮತ (ಗ)

ನಲಿದು ಪಂಚಾಣುವ್ರತಂಗಳೆನುತಿರ್ಪಿರೆಲೊ
ಕೊಲೆ ತೊದಳ್ ಕಳವು ಪರದಾರಗಮನಂ ಬಳಿಕೆ
ಲಲಿತಕಾಂಕ್ಷೆಯೆನಿಪ್ಪುವೆನುತೆ ಮತ್ತಂ ವೇದನಿಪುಣರನುಪಾಲಂಭದಿಂ
ಅಲರ್ದು ಧಿಕ್ಕರಿಸಿಯವರಂತರಂಗಮನೊರ್ವೊ
ದಲೆ ನೋಯಿಪುದು ನಾಡೆ ಕೊಲೆಯಲ್ತೆ ಪರಿಕಿಸಲ್
ಸಲೆ ಹಿಂಸೆಗೆಯ್ಯಲಾಗದು ಜೈನನೆಂದು ಕಾಳ್ಗಿಡದೊಳಿ ಬೊಬ್ಬಿಡುವಿರಿ ೪

ಮುಗುಳ್ದು ಕೇಳಾದಿಯೊಳ್ ಜಿನನಿಲ್ಲ ವೇದದೊಳ್
ಬಗೆಯೆ ಪುಸಿಯಿಲ್ಲೆಂಬ ನಿಶ್ಚಿತಾರ್ಥಮನುಳಿದು
ತಗುಳ್ದಾದಿಯಲ್ಲಿ ಶಿವನಿಲ್ಲ ವೇದದೊಳೆಯ್ದೆ ದಿಟಮಿಲ್ಲ ನೋಡಲೆಂದು
ಮುಗಿಲುದ್ದ ಕೇ[1]ಳ್ದು[1] ಮತ್ತಂ ಬಾಷ್ಕಳಂಗೆಡೆದು
ನೆಗಳ್ದ ಷಡ್ದ[2]ರ್ಶನಂಗಳ ವಾಕ್ಯನಿಕರಮಂ
ತೆಗಳ್ದು ನಿನ್ನಯ ಕುತ್ಸಿತೋಕ್ತಿವಿಸರಂಗಳಂ ಪರಪುವುದು ತಾನೆ ತೊದಳು ೫

ಕಳವಲ್ಲವೇ ನ್ಯಾಯವೈಶೇಷಿಕಾದಿ ನಿ
ರ್ಮಳಶಾಸ್ತ್ರಕರ್ತೃಗಳ್ ಪೋದ ಸತ್ಪಥಮನದ
ನುಳಿದು ಶ್ರುತಿರಾಜಮಾರ್ಗಮನಿಕ್ಕಿ ಸರ್ವರುಂ ಮನಮೊಲ್ದು ಚರಿಸುತಿರ್ಪ
ಲಳಿತ ಸರಣಿಯ ಬಿಸುಟ್ಟೊರ್ವರುಂ ಪದವಿಡದ
ಕಲುಷಯುತಮಪ್ಪರ್ಹತೋಕ್ತಿ ದುರ್ಮಾರ್ಗಮಂ
ತಿಳಿದದಟಿಕೊಳಡಿಯಿಡುವ ಜೈನರಾಚರಣೆ ತಾನದು ಲೋಕದೊಳ್ ಭಾವಿಸೆ ೬

ವಿನುಪಾದಿಶೈವಾಗಮಾಚರಣೆಯಿಂ ಮುಕ್ತಿ
ವನಿತೆಯಂ ಸಾರ್ದು ಸುಖದೊಳಗಿರ್ಪುದಂ ಬಿಸುಟು
ಬಿನುಗುಪಾಷಂಡಮತಮೆನಿಪರ್ಹತೋಕ್ತಿ ದುಶ್ಚಾರಿತ್ರದೊಳ್ ಚರಿಸುತೆ
ಮನಮೊಲ್ದು ವಿದ್ಯಾಂಗನಾಸಂಗಸುಖದಿಂದ
ಮನವರತ ಮೋಹಾಂಬುನಿಧಿಯೊಳಾಳುತ್ತಿರ್ಪು
ದೆನಸುಮನ್ಯಾಂಗನಾರತಮಲ್ಲವೇ ಇದಂ ಪರಿಕಿಸದು ಜೈನವಿತತಿ ೭

ಅತಿಕಾಂಕ್ಷೆಗೆಯ್ಯಲಾಗದು ಜೈನನೆಂದು ಸಂ
ತತಮುಲಿವ ಬಿನುಗುಜೈನನೆ ಮನಂದಂದು ಕೇ
ಳತಿಶಯಂ ವೇದಾದಿ ಶಾಸ್ತ್ರಾಳಿಗಳೊಳುಸುರ್ದ ಪರಮಮೋಕ್ಷಮನೊಲ್ಲದೆ

---

1 ಳು (ಕ) 2 ಡುದ (ಗ)

ಮತಿವಿಕಳರಾಗಿ ಬೇಱಿಕೊಂದು ಮುಕ್ತಿಯನೆಯ್ದಿ
ವಿತತಮಪ್ಪಂತೆ ಪಡೆದಪೆವೆಂಬುಧದು ತಾನೆ
ಅತಿಕಾಂಕ್ಷೆಯಲ್ಲವೇ ನಿಮ್ಮ ಪಂಚಾಣುವ್ರತಂ ತಾನದೆತ್ತವೋಯ್ತೊ ೮

ಪಿರಿದು ಮಧು ಗಿಣ್ಣತ್ತಿಯೊಳ್ಪಣ್ಗಳೆಂಬಿವುಂ
ಪರಿಕಿಸಲ್ ದ್ರವ್ಯದೋಷತ್ರಯಂಗಳೆನಿಕ್ಕು
ವಿರದಿವಂ ಬಿಡುವುದೇ ಸದ್ವ್ರತಂ ಜೈನಮುನಿಗಳ್ಗೆಂದು ನುಡಿವಿರೆಲವೊ
ಕರಮೆ ಮಧುಸೇವನೆಯಿದಲ್ಲವೇ ವೇದಾದಿ
ಪರಮಾಗಮಂಗಳಂ ದೂಷಿಸುತೆ ಕಾಳ್ಗೆಡೆದು
ಭರದಿನುಟ್ಟುದನುಳಿದು ಕೋವಣಂಗಳೆದು ಮತ್ತತ್ಪದಿಂ ಪರ್ತಿಸುವುದು ೯

ಲಲಿತಾನ್ನಪಾನಾದಿ ಭೋಜ್ಯವಸ್ತುಗಳನಱ
ದೊಲವಿನಿಂದವಱ ಪೂರ್ವಾಶ್ರ[1]ಯಂ[1]ಗಳೆದು ನಿ
ರ್ಮಳಸುಧಾಸೂತಿಜೂಟಂಗೆ ಮನವೊಸೆದರ್ಪಣಂಗೆಯ್ದು ಬಳಿಕನುವನು
ನಲಿದು ಭುಂಜಿಸದೆ ಸೋಡಂಬಾಡಮುಣ್ಬುದದು
ನೆಲೆಯಾದ ಗಿಣ್ಣಲ್ಲವೇ ಜೈನರಿರ ಮತ್ತ
ಮುಲಿವಿರೋಹೋ ಗಿಣ್ಣ ಮುಟ್ಟದೊಡೆ ದೋಷಮುಕ್ಕುಂ ವ್ರತಂ ಕಿಡುಗುಮೆನುತೆ ೧೦

ಪಿರಿದು[2]ಮೋ[2]ಷಧಿಗಳ್ಗೆ ಶಿವನೆ ಪತಿಯೆಂದು ಸುರು
ಚಿರವೇದಮುಲಿಯುತಿರೆ ಮನವೊಸೆದು ಸಂತತಂ
ಪರಮೌದನಕ್ಕೆ ಶಿವನಧಿಪನೆಂದಱಯದುನ್ಮತ್ತತ್ವದಿಂದೆ ಸವಿದ
ಸರಳಾನ್ನಸಿಕ್ತಕಬಲಂ ಭಾವಿಸಲ್ಕೆ ತಾ
ನುರುತ[3]ರೌ[3]ದುಂಬರದ ಪಣ್ಣಲ್ಲವೇ ಇದಂ
ಪರಿಕಿಸದೆ ನುಡಿವ ಜೈನರ್ಗೆ ಸದ್ವ್ರತಭಂಗಮುಕ್ಕುಮಿದನಱಯಿರೆಲವೊ ೧೧

ಇಂತು ನೆಱೆ ಸದ್ವ್ರತಭ್ರಷ್ಟನೆನಿಸುವ ಜೈನ
ಸಂತತಿಯೆ ದೋಷ ಮುನ್ನೀರೊಳಾಳುತೆ ಮುಳುಗು
ತಂತೆ ಶತಕೋಟಿಕಲ್ಪಂ ಮುಟ್ಟೆ ನಿರಯದೊಳಗೋಲಾಡುತಿರ್ಕ್ಕನಿಶಂ
ಮುಂತೆ ನೋಡಲ್ ಮುಕ್ತಿ ನಿಮಗೆ ಜೈನರ್ಗೆ ತಾ
ನೆಂತು ಮಿಗೆ ಶಶಶೃಂಗದಂತೆ ತೋಱದು ದಿಟಮು
ದಂತಿರ್ಕೆ ಕೇಳೆಲವೊ ನಿಮ್ಮ ದೈವದ ಜನನಮಂ ನಾಡೆ ಸಂತಸದೊಳು ೧೨

---

1 ಮಂ (ಕ) 2 ಮಾ (ಗ) 3 ರೋ (ಕ)

ಸರಳಶಕವರ್ಷಕ್ಕೆ ಮೊದಲೊಳಯ್ನೂಱಿಱರ
ಳ್ವರಿಸದೊಳ್ ನಾಭಿರಾಜಾಹ್ವಯ ಕ್ಷತ್ರಿಯಂ
ಪಿರಿದುಮೊಪ್ಪುವನವನ ಕುಲವಧುವೆನಿಪ್ಪ ಮರುತಾದೇವಿಯೆಸೆದಿರ್ಪಳು
ವರ ತನೂಭವನೊರ್ವನವರೀರ್ವರುದರದಿಂ
ಕರಮೆ ಜನ್ಮಿಸಿಯರ್ಹನೆಂಬ ಪೆಸರಿಂದಿರುತೆ
ಭರದಿಂದಮೊಂದುದಿವಸಂ ಬೇಂಟೆಗೆಂದು ಪೇರಡವಿಗವನೆಳ್ತಂದನು ೧೩

ನೆಗಳ್ದ ಸರಸೀತೀರದಲ್ಲಿ ತೋಹಂ ಸಮೆದು
ಸೊಗಸಿನಿಂದೊಂದು ವಟವೃಕ್ಷಮೂಲದೊಳವಿದು
ಮೊಗಸಿ ನೀರ್ಗುಡಿಯಲಲ್ಲಿಯೊಳೆಯ್ದಿ ಬಂದಾ ಮೃಗಗಣಮನೆಸುವ ಬೆಸನದಿಂ
ಮಿಗೆ ಶಬ್ದಪಾತಬಾಣಮನೊಸೆದು ಬಿಲ್ಲ ನಾ
ರಿಗೆ ಪೂಡಿ ಸನ್ನದ್ಧನಾಗಿರ್ಪ ವೇಳೆಯೊಳ್
ಬಗೆಯದೇನಂ ಮಱೆಯುತೊಂದು ವೃಷಭಂ ನಾಡೆ ನೀರಳ್ಕೆಯಿಂ ಬಂದುದು ೧೪

ಬಂದು ತೋಹಿನ ಸರಸಿಯಲ್ಲಿ ನೀರ್ಗುಡಿಯುತ್ತೆ
ಮಂದನಿಶ್ವಾಸಮಂ ಜಲದೊಳಗೆ ಸೂಸಲ್ಕೆ
ದೊಂದು ಘುಳುಘುಳಿರವಂ ಪೊಣ್ಮೆ ಮಿಗದನಿಗೆತ್ತು ಬಾಣಮಂ ಬಿಡಲಾಕ್ಷಣಂ
ಮುಂದುವರಿಯುತ್ತೆ ಬಸವನ ಹೃದಯಮಂ ತಾಗೆ
ನೊಂದು ಬಸವಂ ಘೋಳಿಡುತ್ತೆ ಬೀಳಲ್ಕದಂ
ನಿಂದು ಕೇಳುತ್ತವಂ ತ್ವರಿತದಿಂದಾಯೆಡೆಗೆ ಬಂದು ಬಸವನ ಕಂಡನು ೧೫

ಬಸವನಂ ಕಾಣುತ್ತೆ ಬಿಲ್ಲಂಬುಗಳ ಬಿಸುಟು
ಬಸವಳಿದು ಹಮ್ಮದಂಬೋಗಿ ಹ[1]ರಿಸಂ[1]ಗೆಟ್ಟು
ನಸಿದು ಮುಸಕಂಗುಂದಿ ನಾಡೆ ಬಿಲ್ಲುಂಬೆಱಗನೆಯ್ದಿ ಬಳಿಕೆಚ್ಚಱಿಸಗೆ
ಸಸಿನೆ ತಿಳಿದಾಂ ಪೂರ್ವಜನ್ಮದೊಳ್[2]ಗೆಂ[2]ತಪ್ಪ
ಪಿಸುಣನೋ ಎಂದು ಮಮ್ಮಲಮಱುಗಿ ಬಿಸುಸುಯ್ದು
ಬಸವಂಗೆ ಕಾಪಿಟ್ಟು ಚಿಂತೆಯಂ ಮುಂದಿಟ್ಟುಕೊಂಡು ಪುರಮಂ ಪೊಕ್ಕನು ೧೬

ಪಿರಿದು ಪುರಜನ ಪರಿಜನಂಗಳಂ ಪರಿಕಿಸದೆ
ಭರದಿನಂತಃಪುರಮನೆಯ್ದಿಯರ್ಹಂ ಬಳಿಕೆ
ಪರಿಮಿತದೊಳಿರ್ದ ವೇದಜ್ಞರಂ ಗುರುಗಳಂ ವಿದ್ವಾಂಸರಂ ಕರಸುತೆ

1 ರುಷಂ (ಗ) 2 ದೆಂ (ಗ)

ತರಿಸಿ ವೇದಸ್ಮೃತಿ ಪುರಾಣಾದಿ ಶಾಸ್ತ್ರಮಂ
ಬರಿಸಿ ತನ್ನಯ ಪುರೋಹಿತರನತಿಕುಶಲದಿಂ
ದಿರದೆ ಕೇಳ್ದಂ ವೃಷಭನಥೆಗೆ ಪ್ರಾಯಶ್ಚಿತ್ತಮಾವುದೆನುತವರೆಲ್ಲರಂ ೧೭

ಮಿನುಪ ವಿಜ್ಞಾನೇಶ್ವರಾದಿ ಶಾಸ್ತ್ರಂಗಳಂ
ಮನವೊಸೆದು ನೋಡಿಯುವರೆಲ್ಲರಿಂತೆಂದರಾ
ಘನವೃಷನಥಾದೋಷಮಂ ನಿಮಿರ್ಚಿದ ನರಂ ತನ್ನುದ್ದದಟ್ಟಣೆಯನು
ಅನುನಯಂ ರಚಿಸಿಯುದಲಗ್ರದೊಳ್ ಸತ್ತ ವೃಷ
ಭನನಿರಿಸಿ ತಾನದಲ ಕೆಳಗೆ ಮುತ್ತುಗದ ತೊವ
ಲನೆ ಪಾಸಿಕೊಂಡು ಪದ್ಮಾಸನದೊಳೆಸೆಯುತ್ತೆ ಮೌನಮುದ್ರಿತನಾಗುತೆ ೧೮

ವಿಲಸಿತಾಜ್ಞಾ ಚಕ್ರ[1]ದಲ್ಲಿ[1] ಮನಪವನನಂ
ನಿಲಿಸಿ ಹೃತ್ಕರ್ಣಿಕಾಕುಹರಮಧ್ಯದೊಳೆಯ್ದಿ
ನೆಲೆಗೊಳಿಸಿಯಾತನಂ ನಾಸಿಕಾಗ್ರದೊಳೊಸೆದು ದಿಟ್ಟಿಯಂ ಸ್ಥಾಪಿಸುತ್ತೆ
ಒಲವಿನಿಂ ಬಾಹ್ಯಕರಣಂಗಳಂ ತವಿಸುತ್ತೆ
ನಲಿದು ಸತ್ಪ್ರಣವನುಚ್ಚರಿಸುತ್ತುಮಾವಗಂ
ಸುಲಲಿತ ಪರಬ್ರಹ್ಮಮಂ ಭ್ರುಕುಟಿಮಧ್ಯದೊಳ್ ಬೈತು ಮಿಗೆ ಜಾನಿಸುತ್ತೆ ೧೯

ವೃತವೃಷ[2]ಪ್ರಣ[2]ಪೂಯ ಬಿಂದುಚಯದಿಂದನೂ
ವೃತಕಳೇವರನಾಗುತವಲ ದುರ್ಗಂಧ ಸಂ
ತತಿಗೆ ಸೆಡೆಯದೆ ಪಕ್ಷಮಾತ್ರಮಿರ್ದಾ ವೃಷಭಚರ್ಮಮಂ ತೆಗೆದು ಪೊದೆದು
ಸತತಮಾ ವೃಷಭವೃಷಣಂ ಪಿಡಿದು ಮತ್ತದಟ
ನುತವಾಲದಂಡ[3]ಮಂ[3] ಬಲಗೈಯೊಳಳವಡಿಸು
ತತಿಶಯದೊಳಾವಗಂ ಚರ್ಯಾತಪಂಗೆಯ್ಯುತೆನಸುಮೊಪ್ಪುತ್ತುಮಂತೆ ೨೦

ಸಲೆ ಜೀವರಾಶಿಗಳನೊಂದುಮಂ ಕೊಲ್ಲದತಿ
ಲಲಿತಸದ್ಧರ್ಮದಿಂ ಚರಿಸುತಿರಲಾ ದೋಷ
ವೊಲೆದು ಪೋಕುಂ ಬಳಿಕ್ಕಾ ವೃಷಭವಥೆಗೆಯ್ದವಂಗಕ್ಕುಮಪವರ್ಗವು
ನೆಲೆಯಿದೆಂದಾ ಪುರೋಹಿತರೆಯ್ದೆ ಪೇಳಲಂ
ತೊಲವಿನಿಂದಾಚರಿಸಿಯರ್ಹನಪವರ್ಗಮಂ
ನಲವಿನಿಂ ಸಾರ್ದನಂದಿಂದಾಯ್ತು ಜೈನಮತವವನಿಯೊಳಗಿದು ಸಿದ್ಧವು ೨೧

---

[1] ದೊಳ್ (ಕ) [2] ವ್ರಣೋ (ಕ) ಭ ವೃಷಣ (ಗ) [3] ನುಂ (ಕ)

ಇಂತು ತನ್ನಯ ದೋಷಮಂ ಕಿಡಿಸಲಾಱದ
ತ್ಯಂತದುಃಖಂಬಟ್ಟು ನಾಭಿರಾಜಾತ್ಮಜಂ
ಮುಂತೆ ನಿಮಗೆಂತು ಸನ್ಮೋಕ್ಷಮಂ [1]ಕು[1]ಡುವನಿದು ಬಿಸವಂದಮೊಸೆದುನೋಡೆ
ಸಂತತಂ ಜೈನರ್ಗೆ ನರಕಜಲರಾಶಿಯೊಳ
ಗುಂತೆ ಮುಳುಗುತ್ತೇಳುತಿರ್ಪಿರನಿದಲ್ಲದೇ
ಯಂತೆವೊಳ್ಮುಕುತಿ ದೊರಕದು ಮುಕ್ತಿಶೂನ್ಯರಂ ನೋಡಿದರ್ಗಘಮಪ್ಪುದು ೨೨

ಮತ್ತಿಯುಂ ಕೇಳಿಲವೊ ಜೈನ ಮುನ್ನೆಮ್ಮಾದ್ಯ
ರೊತ್ತಂಬದಿಂ ನಿಮ್ಮ ಪರಿಭವಿಸಿದುದನೆಯ್ದೆ
ಚಿತ್ತಜಾರಿಯ ಭಕ್ತನೆನಿಪ ದೇವರದಾಸನಮಲಗುಣಸಂಯುಕ್ತನು
ಬಿತ್ತಿಗಂ ಲೋಕಕ್ಕೆ ಶಿವನೆ ದೈವಂ ನೋಡ
ಲೆತ್ತಿತ್ತಲುಂ ಎಂದು ಜೈನರೊಳ್ ತರ್ಕಿಸುತೆ
ಸುತ್ತೆನೋ [2]ದ[2]ರ್ಪದಿಂ ಘಟಸರ್ಪನಂ ಪಿಡಿದು ಗೆಲ್ದು ಸಂತೋಷದಿಂದಂ ೨೩

ನಿರುತಮಿದು ಸರ್ಪಾಂಕಮುತ್ತರೇಶ್ವರನೆಂದು
ಹರಿಸದಿಂ ಪೆಸರ್ಗರೆದು ಸುಪ್ರತಿ[3]ಷ್ಠಂ[3] ಮಾಡಿ
ಧರೆಯೊಳಗೆ ಪೊಟಲಕೆಱೆಯೆಂಬ ಪುರದೊಳಗೊಪ್ಪುವೇಳ್ನೂಱು ಬಸದಿಗಳನು
ಒರಸಿ ಪುಡಿಗುಟ್ಟಿಯಲ್ಲಿರ್ದ ಜಿನರೂಪುಗಳ
ನುರುತರಕ್ರೋಧದಿಂ ಸೀಳಿ ದೆಸೆದೆಸೆಗಿಟ್ಟು
ಪರಿಭವಿಸುವಂದೆಲ್ಲಿಗೆಯ್ದಿರ್ದಿರೆಲೊ ಜೈನಮುನಿಗಳಿರ ನೀವೆಲ್ಲರು ೨೪

ಮರಳಿ ಕೇಳ್ ಕೋವೂರಬೊಮ್ಮಯ್ಯನೆಂಬ ಶಂ
ಕರಭಕ್ತನವನಿಯೊಳ್ ಜೈನರೆಲ್ಲರ ಗೆಲ್ದು
ಪರಿಜೃಂಭಿಸುತ್ತಿರಲ್ ಸೋತ ಜೈನರ್ ನೆರೆದು ಮಂತಣಂಗೆಯ್ದು ಬಳಿಕಂ
ವರ ಮಂತ್ರಸಿದ್ಧರಾವೆನುತೆ ವಟಭೂರುಹಮ
ನುರುಪೆ ಮನುರಾಜನೆನಿಪ್ಪೈದಕ್ಕರಂಗಳಂ
ಪಿರಿದುಮುಚ್ಚರಿಸಿ ಬೊಮ್ಮಯ್ಯನಾ ಮರವೆತ್ತುವಂದೆಲ್ಲಿಯುಮಿರ್ದಿರೊ ೨೫

ಎಸೆವಬ್ಬಲೂರೊಳೇಕಾಂತರಾಮಯ್ಯಂಗೆ
ಳೊಸೆದು ಜೈನರ ಗೆಲ್ದು ತತ್ಪುರದೊಳಗೆ ವಸತಿ
ವಿಸರಮೊಂದುಂ ತೋಱದಂತೆ ಶಾಪಂಗೊಟ್ಟು ಕಲ್ಯಾಣಪುರಮನೆಯ್ದಿ

---

1 ಕೊ (ಗ) 2 ಡ (ಗ) 3 ಷ್ಠೆಯ (ಗ)

ವಸುಧೆಗೀಶನೆ ದೈವವೆಂದು ಜೈನರ ಕೂಡೆ
ಮಿಸುಪವಾದಂಗೆಯ್ದು ಶಿರಮನರಿದಿತ್ತು ತ
ದ್ವಸನಸಚಿವಂ ಮೆಚ್ಚುನಂತೇಳ್ದಿನಂ ಮುಟ್ಟಿ ಕಲ್ಯಾಣಪಟ್ಟಣದೊಳು ೨೬

ಬಱಮುಂಡದೊಳೆ ರಾ[1]ಯಬೀದಿ[1]ಯೊಳ್ ಸಂಭ್ರಮದೆ
ಮೆಱೆಯುತ್ತೆ ಬಳಿಕೆ ಮತ್ತೊಂದು ಶಿರಮಂ ಗಿರಿಜೆ
ಯೆಱೆಯನಿಂ ಪಡೆದು ತಜ್ಜೈನವಾಸಂಗಳಂ ಸುಟ್ಟು ಭಸ್ಮಂ ಮಾಡುತೆ
ಮಿಱುಪ ಬೆತ್ತಲೆಯ ಬೊಂಬೆಗಳ ಜಿನರೂಪುಗಳ
ತಱಿದಿಕ್ಕುವಂದು ನೀವೇಗೆಯ್ವುತಿರ್ದಿರೆಲೊ
ಬಱಿವಾಯ ಬೊಳ್ಳುಗಳಿರಾ ಜೈನಮುನಿಗಳಿರ ಪಂಚಮಲಧಾರಿಗಳಿರ ೨೭

ಪರಿವಳಿಗೆಯೆಂಬ ಪುರದೊಳ್ ವೈಜಕವ್ವೆ ಪುರ
ಹರಭಕ್ತೆಯಿರುತಿರಲ್ಕೊಂದು ನೆವದಿಂ ತನ್ನ
ಪುರುಷನತಿಕೋಪದಿಂ ಪೂಜಿಮಡಿಸೆ ಮನೆಯಿಂದೆ ಬರುತೆ ಜಿನಮಂದಿರವನು
ಭರದಿನಿದಿರೊಳ್ ಕಂಡು ಶಿವನ ಭವನಂಗೆತ್ತು
ಕರಮೆತ್ತಿ ಮುಗಿಯೆ ಜಿನನೊಡಲನಿರ್ಬಗಿಮಾಡಿ
ಪರವೈಜನಾಥೇಶ್ವರಂ ಮೂಡ[2]ವಂದು[2] ನೀವೆಲ್ಲಿ ಮರಣಂಬೆತ್ತಿರೊ ೨೮

ಮಾರುಡಿಗೆಯೆಂಬ ಪುರದೊಳ್ ವಿರಾಜಿಸುತಿರ್ಪ
ವೀರಾವತಾರರಾ ನಾಚಯ್ಯನಾದಿಯಾ
ದೋರಣದೊಳೆಸೆದಿರ್ಪ ಪದಿಮೂವರೆಯ್ತಂದು ಜೈನರಂ ಕೊಂದಿಕ್ಕುತೆ
ಸೇರಿ ಜಿನಭವನಮಂ ಜಿನನ ಕಿಳ್ತೀಡಾಡಿ
ಮಾರಾರಿಯಂ ಪ್ರತಿಷ್ಠೆಯನಲ್ಲಿಮಾಡಿ ನೆಱೆ
ವೀರತ್ವದಿಂದಿರ್ಪ ಕಾಲದೊಳಗೆಲ್ಲಿ ಮೆಯ್ಗರೆದಿರ್ದಿರೋ ಪರಿಕಿಸೆ ೨೯

ಹರಭಕ್ತನೊರ್ವನಾದಯ್ಯನೆಂಬಂ [3]ಮುನ್ನೆ[3]
ಕರಮೆಸೆವ ಪುಲಿಗೆಱೆಯೊಳಗೆ ಜಿನಪ್ರತಿಮಾ ನಿ
ಕರಮಲ್ಲದೇ ಬಸದಿ ಗಡಣಮಲ್ಲದೆ ಜೈನತತಿಗಳಲ್ಲದೆ ಭಾವಿಸೆ
ಪರಮ ಶಿವಮೂರ್ತಿಗಳನಭವಸದನಂಗಳಂ
ಗಿರಿಶಭಕ್ತರ್ಕಳಂ ಕಾಣದತಿದುಃಖಮಂ
ಧರಿಸುತ್ತೆ ಸುರಹೊನ್ನೆವಸತಿಯೊಳ್ ಶೋಭಿಸುವ ಜಿನನ ನಡುದಲೆಯನೊಸೆದು ೩೦

---

1 ಜವೀಧಿ (ಗ) 2 ವಲ್ಲಿ (ಗ) 3 ಮುಂದೆ (ಕ)

[1]ಘಟಿಘ[1]ಟಿತ್ಕಾರ ರಸವಮುಣ್ಕೆ ಸೀಳ್ದಾ ಜಿನನ
ಪಟುದೇಹಮಧ್ಯದೊಳ್ ಸೌರಾಷ್ಟ್ರನಾಥನು
ತ್ಕಟಿಕಮೂರ್ತಿಯಳಿಕಲೋ[2]ಚ[2]ನದಿಂ ಜಟಾಜೂಟದಿಂ ನಾಲ್ಕು ತೋಳ್ಗಳಿಂದಂ
ಚಟುಲವೃಷವಾಹನದೆ ವಾಮಭಾಗದೊಳೆಸೆವ
ನಿಟಿಲಾಕ್ಷಿ[3]ಯುಂ[3] ಗೌರಿಯಿಂದೆ ಸಾಕಾರಸುಂ
ದಿಟವೆ ಧರಿಸುತ್ತಿನ್ನ ಕಣ್ಗೆಡ್ಡವೆಂತಪ್ಪುದೋ ಎಂದು ಚಿಂತಿಸುತ್ತೆ ೩೧

ವರಸೋಮನಾಥನಂ ತಿಂಗಳೊಂದಕ್ಕೆ ತಂ
ದಿರಿಸುವೆಂ ಸುರಹೊನ್ನೆವಸತಿಯೊಳಗೆಂದು ಭಾ
ಸುರಭಾಷೆಯುಂ ನುಡಿದು ಮನೆಯಿಂದೆ ಪೊಱಮಟ್ಟು ಯೋಜನಾಂತರವೆಯ್ದಲು
ಪರಮಸುಖಿಯಪ್ಪುದಱಿನತಿವೃದ್ಧನಪ್ಪುದಱಿಂ
ನುರುಬಲಂಗುಂದಿ ಕಾಲ್ಜಾನುಗಳ್ ಸೀಳಿಯುರು
ತರ ರಕ್ತಧಾರೆಗಳ್ ಮಸಗೆ ರವಿಕಿರಣದಿಂ ತಲೆಕಾದು ಕಣ್ಣೊಡೆಯಲು ೩೨

ಮುಂದಕೊಂದಡಿಯಿಡಲ್ ಶಕ್ತನಲ್ಲದೆ ದಾರಿ
ಯಂದಮಂ ಕಾಣದಲ್ಲಲ್ಲಿ ಕುಳ್ಳಿರುತೇಳು
ತೊಂದಿ ನಡುಗುತ್ತೆ [4]ಮೆಲ್ಲನೆ ಬಳಿಕ್ಕೇಳುತ್ತೆ ಬೀಳುತ್ತೆ[4] ಚಲತನದೊಳು
ಮುಂದಣೊಳ್ಪಟ್ಟೆಯಂ ನೋಡುತ್ತೆ ಕಣ್ದೆಱದ
ನಂದಮತಿ ಬರುತಲೇ ಸೋಮೇಶ ಗಿರಿಜೇಶ
ಮಂದಾಕಿನೀಜೂಟ ಮಾನಾಥನೇತ್ರಪೂಜಿತ ವೃಷಭಕೇತನಭವ ೩೩

ಎನುತೆ ಕೀರ್ತಿಸುತೆ ನಡೆಯುತ್ತಿರಲ್ಕಾದಯ್ಯ
ನನಿತಱೊಳ್ ಸೌರಾಷ್ಟ್ರಪತಿ ಸೋಮನಾಥಯ್ಯ
ನನಘನಾದಾದಯ್ಯನಚಲಭಕ್ತಿಗೆ ಮೆಚ್ಚಿ ಇದಿರೆಯ್ದಿ ಬಂದು ಮುದದಿಂ
ಜನವಿತತಿ ಜೈನಸಂಕುಲಮೆಯ್ದೆ ಚೋದ್ಯಮೆಂ
ದೆನುತಿರಲ್ ಜಿನನೆರ್ದೆಯ ಸೀಳಿ ಸಾಕಾರದಿಂ
ಜನಿಸಿಯಾದಯ್ಯನಿಷ್ಟಾರ್ಥಮಂ ಸಲಿಸಿ ಬಳಿಕಾತಂಗೆ ಮನದಳ್ಕಱಿಂ ೩೪

ನಲಿದು ಜೈನರ ಸಂಹರಿಪ ಶಕ್ತಿಯಂ ಕೊಟ್ಟು
ಸಲೆ ಜೈನಕುಲಮನೆಲ್ಲಮನಾತನಿಂದೆ ನಿ
ರ್ಮಲಸೋಮಶೇಖರಂ ಸೌರಾಷ್ಟ್ರನಾಥ ಸೋಮೇಶ್ವರಂ ಸೋಮಸಖನು

---

1 ದಟದ (ಕ) 2 ಕ (ಕ) 3 ಯಿಂ (ಕ) 4 ಬೀಳುತ್ತೆ ಮೆಲ್ಲನೆ ಬಳಿಕ್ಕೇಳುತ್ತೆ (ಟ)

ಕೊಲಿಸುವಂದಾವೆಡೆಯೊಳವಿದುಸಿಕಕ್ಷಿರ್ದ ಎಲೊ
ಮಲಧಾರಿ ಸರ್ವದರ್ಶನಬಹಿಷ್ಕೃತವೇದ
ದಲಘುಪದ್ಧತಿದೂರ ನರಕಪಾರಾವಾರಲಗ್ನ ಸದ್ಧರ್ಮಭಗ್ನ ೩೫

ಮರಳಿ ಕೇಳ್ ಪಿಳ್ಳೈ[1]ನಾ[1]ಯ್ನಾರೆಂಬ ಸದ್ಭಕ್ತ
ವರನೊರ್ವನಳ್ತಿಯಿಂ ಮಧುರೆಗೆಯ್ತಂದು ಬಂ
ಧುರ ಜೈನಬೌದ್ಧರಂ ಧಿಕ್ಕರಿಸಿ ಕೂನಪಾಂಡ್ಯೇಶ್ವರನ ಬೆನ್ನ ಕೂನಂ
ಭರದೆ ರುಜುಮಾಡಿ ಬಳಿಕಂ ಶೈವಮಂತ್ರಮಂ
ಬರೆದೊಂದು ಪತ್ರದೊಳ್ ಜೈನಮಂತ್ರಂಗಳಂ
ಬರೆದೊಂದು ಪತ್ರದೊಳ್ ನರಪತಿಯ ಕೈಯಿಂದಮುರಿವ ಕಿರ್ಚಿನೊಳಿಡಿಸಲು ೩೬

ಉರಿವಗ್ನಿಯೊಳ್ ಬಿಳ್ದ ಶುಷ್ಕಪತ್ರದ ತೆಱದಿ
ನುರಿಯಿತ್ತು ಜೈನಮಂತ್ರದ ಪತ್ರಮುದಕದೊಳ್
ಪರಿಶೋಭಿಸುವ ಕಮಲದಂತೆ ಶಿವಮಂತ್ರಪತ್ರಂ ಮನೋಹರಮೆಸೆದುದು
ಮರಳಿ ಶಿವಮಂತ್ರಮಂ ಜಿನಮಂತ್ರಮಂ ಬರೆದು
ಪರಿವ ನದಿಯೊಳ್ ಬಿಸುಡಿಸಲ್ ಜೈನಮಂತ್ರಮಂ
ಬರೆದ ಪತ್ರಂ ನೀರೊಳಗೆ ಪೋಯ್ತು ಶಿವಮಂತ್ರಪತ್ರಮಿದಿರೇಱಿ ಬರಲು ೩೭

ಮುನಿದು ಜೈನರನೆಲ್ಲರಂ ಪಿಳ್ಳೈ[1]ನಾ[1]ಯ್ನಾರೆ
ಮಿನುಪ ಶೂಲಪ್ರಾಪ್ತರಂ ಮಾಡುವಂದು ಸು
ಮ್ಮನೆ ಎಲ್ಲಿ ಮೆಯ್ಗರೆದು ಪೋಗಿರ್ದೆ ಎಲೊ ಮತ್ತೆ ನಿಡುಮಾರಚೋಳಭೂಪಂ
ಕನಲಿ ವಾದದೊಳೆಯ್ದೆ ಸೋತ ಜೈನರ ಬರಿಸಿ
ಘನಲೋಹಶೂಲಾರ್ಪಿತರ ಮಾಡುವಂದು ನೀ
ನೆನಸುಮಾವೆಡೆಯೊಳವಿದಿರ್ದ ಪೇಳ್ ನಿನ್ನ ಜಿನನಾಣೆ ನಿನಗೆಲವೊ ನಿಸದಂ ೩೮

ಎಸೆವ ವಾಗೀಶ[1]ನಾ[1]ಯ್ನಾರೆಂಬ ಭಕ್ತನಂ
ಮಸಕದಿಂ ಪಿಡಿತಂದು ಜೈನರೆಲ್ಲರ್ ಮುಳಿದು
ನಿಸದಮುರಿವಗ್ನಿಯೊಳ್ ಬಿಸುಟುಗ್ರಗಜದಗ್ರಕೀಡಾಡಿ ನೀರೊಳಿಕ್ಕಿ
ಬಿಸಗಿರ್ಚಿನೊಳಗಿಡುತಿರಲ್ ಸರ್ವಬಾಧೆಯಂ
ಹಸಗಿಡಿಸಿ ಪಂಚಾಕ್ಷರೀಮಂತ್ರದಿಂ ವಿರಾ
ಜಿಸುತೆ ತಜ್ಜೈನರಂ ಸುಟ್ಟುರುಪುವಂದು ನೀ[2]ನೆಲ್ಲಿ ಮೆಯ್ಮಱೆದಿರ್ದೆಯೊ ೩೯

[1] ನ (ಟ) [2] ವೆ (ಟ)

ಸಂತತವಿರಿತ್ತಾಂಡಿಯೆಂಬ ಜಾ[1]ತ್ಯಂ[1]ಧಕಂ
ಕಂತುಹರಭಕ್ತನೊರ್ವಂ ಶಿವನ ಮಜ್ಜನಕೆ
ಸಂತಸದೆ ಶಿವನಗ್ರದೊಳಗೊಂದು ಬಾವಿಯಂ ತೆಗೆಯುತಿರೆ ಜೈನನಿಕರಂ
ಅಂತದರ್ಕಂತರಾಯಮನೆಸಗೆ ನೊಂದು ನಿ
ಶ್ಚಿಂತಶಿವನಿಂ ಕಣ್ಗಳಂ ಪಡೆದಿರಿತ್ತಾಂಡಿ
ಮುಂತೆಸೆವ ಜೈನರಂ ಜಾತ್ಯಂಧರಂ ಮಾಡು[2]ವಂದು[2] ನೀನೆಲ್ಲಿರ್ದೆಯೊ ೪೦

ನಮಿನಂದಿಯೆಂಬ ಭಕ್ತಂ ಶಿವಂಗೇಗಳುಂ
ರಮಣೀಯ ಘೃತದೀಪಮಂ ಸಹಸ್ರಮನೊಸೆದು
ವಿಮಳಭಕ್ತಿಯಿನೆತ್ತಿ ಸೇವಿಸುತ್ತಿರಲಸಹ್ಯದೆ ಜೈನಮುನಿನಿಕರವು
ಕಮನೀಯ ತುಪ್ಪಮಂ ಕುಡಲೀಯದಿರಲಱಿದು
ನಮಿನಂದಿ ಲಿಂಗೋದಕದೆ ದೀಪವೆತ್ತಿ ಮ
ತ್ತಮಮ ತಜ್ಜೈನಗೃಹ ಗೋಸಮಿತಿಯೆಲ್ಲಮಂ ಬಂಜೆಯಕ್ಕೆನುತೆ ಮತ್ತಂ ೪೧

ಪಿರಿದುಮಾ ಪುರದೊಳಗೆ ಮೆಱೆವ ಬಸದಿಗಳೆಲ್ಲ
ಮಿರದಳಿದು ಪೋಕೆ ತಜ್ಜನಮುನಿಗಳೆಲ್ಲರುಂ
ಭರದೆ ಪೆಸರಱತು ಪೋಕೆಂದು ಶಾಪಂಗೊಟ್ಟು ಕಿಡಿಸುವಂದಿನ ದಿನದೊಳು
ನಿರುತಮಾವೆಡೆಯಲ್ಲಿ ಮರಣವೆತ್ತಿ[3]ರ್ದ ಎ[3]ಲೊ
ದುರುಳ ಜೈನನೆ ನೀಚಕುಲತಿಲಕನೇ ದುಷ್ಟ
ರರಸನೇ ಕೇಳ್ ಮತ್ತೆಯುಂ ನಿಮ್ಮ ಜೈನಮುನಿಗಳ ಭಂಗನಿಕುರುಂಬಮಂ ೪೨

ಸಲೆ ಸಾಂಖ್ಯತೊಂಡಾಹ್ವಯದಿನೊಪ್ಪುತಿರ್ಪ ನಿ
ರ್ಮಲ ಹರನ ಭಕ್ತನಾ ತೊಂಡಮಂಡಲದಲ್ಲಿ
ಲಲಿತ ತದ್ದೇಶದೊಳ್ ಶಿವನಾಲಯಂ ಶಿವಂ ಶಿವಭಕ್ತನೆಂಬಿನಿತಱ
ಹೊಲಬನಾರ್ ಕೇಳ್ದಱವರಿಲ್ಲೆಲ್ಲರುಂ ಜೈನ
ಕುಲಮೆ ಆಗಿರ್ಪರೀಶ್ವರನೆಂಬ ಪೆಸರ್ಗೇಳ
ರಲಘು ಪಾಪಿಷ್ಠರಭವಾಲಯಕ್ಕಾರ್ ಪೋಪರಿಲ್ಲ ಪೂಗೊಯ್ವರಿಲ್ಲ ೪೩

ಭಸಿತಮಂ ಮುಟ್ಟರಿಂತಪ್ಪ ಜೈನರ ನಡುವೆ
ನಿಸದಮವರೊಳಗೊರ್ವನಾಗಿ ಶಿವಲಾಂಛನಮ
ನೊಸೆದುತೋಱದೆ ಪುದುಂಗೊಳಿಸಿಕೊಂಡಿರುತೆ ನಿಚ್ಚಂ ಮೂಱುಕಲ್ಗಳಿಂದಂ

---

1 ತ್ಯಾಂ (ಗ) 2 ವಲ್ಲಿ (ಕ) 3 ದಿರ್ಱೆ (ಗ)

ಕುಸುಮಭಾವನೆಯುನೆರ್ದೆಯೊಳ್ ತಾಳ್ದು ಶಂಕರನ
ನಸವಸದೆ ಮುನಿದಿಡುವ ತೆಱನ ನೋಳ್ಪವರ್ಗೆಯ್ದೆ
ಮಸಕದಿಂ ತೋಱುತ್ತುಮಿಂತು ಮೂಱುವಸರದೊಳಭವನಂ ಪೂಜಿಸುವನು ೪೪

ಇಂತಂತರಂಗದೊಳ್ ನಿಶ್ಚೈಸಿ ಪೊಱಗಣ್ಗೆ
ಸಂತತಂ ಬೌದ್ಧನಂತೊಸೆ[1]ದು[1] ವರ್ತಿಸುತಿರ್ಪ
ನುಂತೆಮ್ಮ ಪುರದ ಸೀಮೆಯೊಳೊಂದು ಜೀರ್ಣಮಾದಭವನಾಲಯಮಿರ್ಪುದು
ಅಂತ[2]ದಂ[2] ನೋಡಲಕ್ಕುಮೆ ಕಲ್ಗಳಿಂದೊಡೆವೆ
ನೆಂತಾದೊಡೆನುತೆ ಬೌದ್ಧನ ರೀತಿಯಿಂ ನೋಡೆ
ಕಂತುಹರ(.)ಂ ನಿಂದಿಸುತ್ತಿದೇ ವ್ರತವೆನಗೆ ಕಲ್ಗಳಿಂದಿಡುತಿರ್ಪುದು ೪೫

ಎಂದು ಬಾಹ್ಯದೊಳೆಲ್ಲ ಬೌದ್ಧರಿದಿರೊಳ್ ನುಡಿಯು
ತಂದುಮೊದಲಂತರಂಗದೊಳೊಲ್ದು ಭಕ್ತಿಯಂ
ಮುಂದುಗೊಂಡಾ ಸಾಂಖ್ಯತೊಂಡನತಿಹರ್ಷದಿಂದಂ ತ್ರಿಸಂಧ್ಯೆಯೊಳೀಗಳುಂ
ಇಂದುಧರನಂ ಮೂಱುಕಲ್ಗಳಿಂದಿಡುತೆ ಮನ
ಸಂದಿಂತು ಕೆಲದೆವಸಮೆಯ್ದೆ ಪೋಗಲ್ ಬಳಿ
ಕ್ಕೊಂದುದಿನಮತ್ಯಂತವೃಷ್ಟಿಯಿಂದಂ ನದೀಪೂರಮಾಶಾಲಯಮನು ೪೬

ಪರಿವೇಷ್ಟಿಸಲ್ ಪೋಗಲನುವಲ್ಲದಿರೆ ಮಾರ
ಹರನ ಸೇವೆಯುನುಳಿದು ತುತ್ತಿಡುವುದಲ್ತೆನುತೆ
ಕರಮೆ ಮನದೊಳ್ ತಿಳಿದು ಬಾಹ್ಯದೊಳ್ ಸದ್ವ್ರತಂ ಪಿಂಗಿ [3]ಭುಂಜಿ[3]ಪುದಾಗದು
ನಿರುತಮೆನುತ್ತೈದುದೆವಸಂ ಮುಟ್ಟೆಯುಣ್ಣದಿರೆ
ನರಕಿಬೌದ್ಧರ್ ನುಡಿದರಿಂತಪ್ಪ ನಿಯಮಮಂ
ಧರೆಯೊಳಿಂತಪ್ಪ ಸದ್ವ್ರತಮನಾವೊರ್ವರೊಳ್ ಕಾಣೆವೀತನೆ ಬೌದ್ಧನು ೪೭

ಪಿರಿದೆಮ್ಮ ಸಮಯಕ್ಕೆ ವೈರಿಯಾದೀಶನಂ
ಭರದಿಂದೆ ಕಲ್ಗಳಿಂದಿಡಲಶಕ್ಯಮದಾಗೆ
ನಿರುತಮತಿದುಃಖಮಂ ಮಾಡುತ್ತೆ ಭೋಜನಂಗೆಯ್ಯದಿರುತಿರ್ಪಿರವಿದು
ಸರಳಸದ್ವ್ರತಮಿದರ್ಕೆಯ್ದೆ ಪಡಿಯಿಲ್ಲೆನುತೆ
ಪರಮವ್ರತಂ ಪಿಂಗಿಯುಂಬುದನುಚಿತಮಲ್ತೆ
ಪಿರಿಯ ಗುರುಗಳ್ಗೆನುತೆ ಜೈನಬೌದ್ಧರ್ ಪೊಗಳುತೋಲೈಸುತಿರೆ ತನ್ನನು ೪೮

---

1 ಯ (ಕ) 2 ದೇಂ (ಗ) 3 ಭಂಗಿ (ಗ)

ಅನಿತಱಿಂದೊಳ್ ಪೊಳೆ ಬೞಿತು ಪೋಗೆ ಸದ್ಭಕ್ತಿಯುತ
ನನಘನೆನಿಸುವ ಸಾಂಖ್ಯತೊಂಡನಾಳೋಚಿಸಿದ
ನನುವಿನಿಂದಂತರಂಗದೊಳೊಂದನೀ ಪ್ರತಿಜ್ಞಾಹಾನಿಯಾದ ಬೞಿಕಂ
ಮನಸಿಜಾಂತಕನೊಪ್ಪುವನೆ ಪಿಡಿದ ಸದ್ವ್ರತಂ
ನನಸು ಸಂಪೂರ್ತಿಯಾಗದೆ ಬಿಟ್ಟೆನೆಂಬುದಂ
ಎನುತಿರ್ಪುದುಚಿತವೋ ಶಿವಸೇವೆಯಾಂ ಪಿಡಿದ ಸದ್ವ್ರತಂ ಭಾವಿಸಲ್ಕೆ ೬೯

ಅನಶನವ್ರತವಲ್ತು ಬಳಿಕಮುಪವಾಸಂಗ
ಳೆನಿತಾದೊಡಂ ಶಿವನ ಸೇವಾವ್ರತಕ್ಕೆಣೆಯೆ
ಸನಯದಿಂ ಪಿಡಿದ ಸುವ್ರತಮಳಿಯೆ ಹರಣಮಂ ಬಿಡುವುದತ್ಯನುಪಮಮುತಂ
ಎನಸುಮದ ನೋಡಸಂಗತಮೆಂತೆನಲ್ ಬೌದ್ಧ
ಮುನಿಗಳೇನೆಂದುತಿಳಿವರೊ ಪಿಂಗಡೆಯೊಳೀಶ್ವ
ರನ ಸೇವೆಯಂ ಬಿಟ್ಟು ಸಾವುದುಂ ಸೊಕಮಲ್ತುದಂತಿರ್ಕೆನುತ್ತೆ ಬಳಿಕಂ ೭೦

ಉಳಿದೈದುದಿನದ ಪೂಜೆಗಳ ಕಲ್ಗಡಣಮಂ
ಬಳಸಿಯಱಿಸಲ್ಕಾಱಿತವೆನುತವಱ ಸಮತೂಕ
ದೊಳೆ ಮಿಸುಗುವೊಂದು ಪೆರ್ಗಲ್ಗುಂಡನಾಂತು ಶಿರದೊಳಗೆ ಭರವಸದಿನೆಯ್ದಿ
ಮಳಹರನೆ ಪಿಂತುಳಿದ ಪಾಷಾಣಪುಷ್ಪಸಂ
ಕುಳಕೊಂದೆ ಕಲ್ಲಪೂ ಪಾಸಟಿಯೆನುತ್ತೆ ಸ
ಲ್ಲಲಿತ ಸದ್ಭಕ್ತಿಯಿಂ ಶಿವಮಸ್ತಕಮನಿಡಲ್ ನಗುತೆ ಕೈಯೊಡ್ಡಿ ನೂಂಕಿ ೭೧

ಪುರಹರಂ ಪ್ರತ್ಯಕ್ಷನಾಗಿ ತತ್‌ಕ್ಷಣದಲ್ಲಿ
ವರಸಾಂಖ್ಯತೊಂಡ ನಿನ್ನಯೆ ಭಕ್ತಿಗಾಂ ಕರಂ
ಹರಿಸವಡೆದೆಂ ನಿನ್ನಭೀಪ್ಸಿತಂಗಳ ಬೇಡು ಕುಡುವೆನೆನೆ ಸಾಂಖ್ಯನೊಲ್ದು
ಭರದೆ ವಂದಿಸುತೆ ನುತಿಸುತ್ತೆ ನುಡಿ[1]ದಂ[1] ದೇವ
ವರತತಿಗಳಿಂದೆ ಫಲವೇನೆನ್ನ ದುಟ್ಟತನ
ದುರುಭಕ್ತಿಯಂ ಸ್ವೀಕರಿಸಿದುದೇ ಸಾಲದೇ ಕರುಣಾಮೃತಾಂಬುನಿಧಿಯೆ ೭೨

ಎಂದು ಬಳಿಕಂ ವಂದಿಸುತ್ತುಮಿರೆ ಶಂಕರಂ
ಚಂದವೊಡೆದಾ ದಿವ್ಯಪುಷ್ಪಕದೊಳಿರಿಸಿ ಮನ
ಸಂದು ಕೈಲಾಸಕ್ಕೆ ಕೊಂಡುಪೋಪಾಗಳಾ ಸಾಂಖ್ಯತೊಂಡರ ಶಾಪದಿಂ

---

[1] ದನೆಲೆ (ಗ)

ಸಂದ ಜೈನರ್ ಬೌದ್ಧರಾದಿಯಾದೆಲ್ಲರುಂ
ನಿಂದುರಿದು ತೊಂಡಮಂಡಲದಲ್ಲಿ ನಿಶ್ಶೇಷ
ವೊಂದಿ ಕಿಡುವಂದು ನೀಂ ಹಮ್ಮದಂಬೋಗಿಯಾವೆಡೆಯೊಳಿರ್ದೆಯೊ ಜೈನನೆ ೫೩

ಪಿರಿದಿಂತು ಜೈನಬೌದ್ಧರ ವಾದಮಂ ಗೆಲ್ದು
ಸರಳ ವಾಗ್ಜಾಲದಿಂ ಖಂಡನಕೆ ಖಂಡನಮ
ನೊರೆವ ವೇದಂಗಳನುಪನ್ಯಾಸಮಂ ಮಾಳ್ಪ ಪ್ರತಿವಾದಿನಿಕರದಿಂದಂ
ಒರೆವ ಪೂರ್ವಾಕ್ಷೇಪಮಂ ಪ್ರಶ್ನಜಾಲಮಂ
ಭರದೆ ತಾನನುವದಿಸಿ ಮತ್ತವಂ ಖಂಡಿಸುತೆ
ನಿರುತುತ್ತರಾಕ್ಷೇಪಮಪ್ರಮಿತಮಾದ ಪ್ರಶ್ನೆಗಳನೊರೆಯುತ್ತೆ ಮತ್ತಂ ೫೪

ಭರದಿಂದವಂ ಖಂಡಿಸುತ್ತೆ ತದ್ವಾದಿಗಳ
ಪರಿಭವಿಸಿಯಿಂತನ್ಯಸಮಯಮಂ ನೆಱೆಗೆಲ್ದು
ಹರಿಸದಿಂ ಮೆಱೆವ ಶಿವಭಕ್ತಿಸಿಂಧುರವಾದ ಜಿತವಾದಿ ವೃಂದನಾದ
ಪರಮಪಾಂಡಿತ್ಯಪ್ರಭಾಯುಕ್ತನಾದ ಬಂ
ಧುರಕೀರ್ತಿಯಿಂ ವಿರಾಜಿತನಾದ ಪಂಡಿತೇ
ಶ್ವರನನ[1]ತಿಕೋ[1]ಪದಿಂ ಬೌದ್ಧಮುನಿ ನೋಡಿ ನುಡಿದಂ ಮಹಾ[2]ನಾ[2]ದದಿಂದಂ ೫೫

ಸದಮಲಪ್ರಚುರವಿಶ್ರುತ ಪರಮಭಕ್ತಗಣ
ಪದಸರೋರುಹಸಾಂದ್ರ ಮಕರಂದಪಾನ ಸ
ಮ್ಮದಿತ ಚಂಚಚ್ಚಂಚರೀಕನನವರತ ಪಂಚಾಕ್ಷರೀಪ್ರಸಿತಹೃದಯಂ
ವಿದಿತ ಮಂಜುಲನೀಲಕಂಠಾಹ್ವಯಂ ಮನೋ
ಮುದದೆ ಪೇಳ್ದುರುತರಾರಾಧ್ಯಚಾರಿತ್ರದೊಳ
ಗಿದು ಜೈನವಾದಮಂ ಖಂಡಿಸಿದ ಕಥನಮಿದನಾಲಿಪುದು ಸದ್ಭಕ್ತರು ೫೬

---

[1] ರತೋ (ಕ) [2] ನಂ (ಕ)

# ಹನ್ನೊಂದನೆಯ ಸಂಧಿ

## ಚಂದ್ರಧಾರಣಂ*

ಸೂಚನೆ : ಸಲೆ ಚಂದ್ರಧಾರಣದ ಕಥನಮಂ ಕಮಲಭವ
ನಲಿಕದೊಳ್ ಶಿವನೊಗೆದನೆಂಬುದಂ ತೊಲಗಿಸಿದ
ಸುಲಭಕಥನಂಗೇಳ ಸೂರಸಚಿವೇಂದ್ರ ನೀಂ ಮನದೊಳಳ್ಕರ್ತು ನಿಚ್ಚಂ

ಸಮುದಂಚಿತೋರು ಹಿಮವನ್ನಗೇಂದ್ರಾಗ್ರದೊಳ್
ಕಮನೀಯ ಸಂವರ್ತವೈಶ್ವಾನರೋದ್ಭೂತ
ವಿಮಲಕೀಲಾಕದಂಬಂ ಮನೋಹರಮಾಗಿ ನೆಱೆಶೋಭಿಸುವ ಪಾಂಗಿನಿಂ
ಅಮಮ ಸಿತಗಾತ್ರದಿಂ ಕೆಂಜೆಡೆಯ ಬಂಚಲಿಂ
ಸಮುಪಾತ್ತಸೌಂದರ್ಯನಾಗಿ ರಾಜಿಸುತಿರ್ಪ
ಸುಮನಃಪ್ರದರವೈರಿ ಗುರುನೀಲಕಂಠನೆಮ್ಮಂ ಪೊರೆಗೆ ಶುಭಮನಿತ್ತು ೧

ಎಂತೆಂತೆಯಿನ್ನೊರ್ವ ನುಡಿ ಮಹಾದೇವನೆಂ
ದುಂ ತವೆದಿಟಂ ದೈವಮುಂಟೆ ಬೇಱೊಂದು ನೀ
ನುಂತೆ ವೇದಾರ್ಥಮಂ ಬಲ್ಲೆನೆಂಬೊಂದು ಗರ್ವದೆ ಮಿಸುಪ ನುಡಿಗಡಣಮಂ
ಮುಂತೆ ಪಸರಿಪ ಹರಿಪಿತಾಮಹರ್ಕಳ್ ಕಾಣ
ರೆಂತುವುಂ ಶಿವನನೆನುತಿರ್ಪ ನಿಮ್ಮಭವನಾ
ದ್ಯಂತಾದಿರಹಿತನಾದೊಡೆ ವಿಷ್ಣುಗೊಗೆದಜನ ಮಗನಾದ ಶೀತಕರನಂ ೨

ಧರಿಸಿದಂ ಮತ್ತಭವನಾದೊಡಜನಳಿಕದೊಳ್
ಕರಮೊಗೆದನೇತರ್ಕೆ ಮರಳೆ ವಿಧಿಯಂ ಕೊಂದ
ನುರುಮಂಗಲಾಂಗನಾದೊಡಮಂಗಲಾಸ್ಥಿಚರ್ಮಂಗಳಂ ಮಿಗೆ ಧರಿಸಿದಂ
ಸರಳಸರ್ವೇಶ್ವರಂ ತಾನಾದೊಡೇಕೆ ನೆಱೆ
ತಿರಿದುಂಡನೆತ್ತನೇಱಿದನೇಕೆ ತನಗೆ ಸುರು
ಚಿರಮಾದ ದಿವ್ಯವಾಹನಮುಳ್ಳೊಡಾವಗಂ ಭಾವಿಸಲ್ ನಿಮ್ಮ ಶಿವನು ೩

* (ಕಗ) ಪ್ರತಿಗಳಲ್ಲಿಲ್ಲ.

ಸ್ಮರಹರಂ ತಾನಾದೊಡೇಕೆಡದ ಭಾಗವಂ
ಗಿರಿಸುತೆಗೆ ಕೊಟ್ಟು ತಲೆಯೊಳ್ ಗಂಗೆಯಂ ತಾಳ್ದ
ನುರುದೈವಮಾದೊಡಂ ತಾನರ್ಧನಾರೀಶರೀರಮುಂಟೇ ಧರೆಯೊಳು
ಪುರಹರಂ ಬ್ರಹ್ಮಾಂಡಕೊಡೆಯನಾದೊಡೆ ದಿಗಂ
ಬರನಾಗಿ ಪಳುವಿನೊಳ್ ತಿರುಗಿದನದೇತರ್ಕೆ
ಕರದೊಳಾಯುಧಮಾಗಿ ವಹ್ನಿಯಂ ಧರಿಸಿದಂ ನಿಮ್ಮ ಶಿವನವನಿಯೊಳಗೆ ೪

ಎಸೆವ ದಿವ್ಯಾಭರಣಮುಳ್ಳೊಡುರಗೇಶ್ವರಂ
ಮಿಸುಗುವಾಭರಣಮೇತರ್ಕಾಯ್ತು ಪರ ಸುಧಾ
ರಸಮನಮರರ್ಗಿತ್ತು ವಿಷಮನೇತರ್ಕಿಂಟಿದಂ ವಿಷ್ಣು ನಯನದಿಂದೆ
ಒಸೆದು ಪೂಜಿಸಿಕೊಂಡು ಹರಿಹರಂ ದಲೆನುತ್ತೆ
ಬಿಸವಂದನಾಗೊಂದೆರೂವುಗಡ ಮತ್ತೆ ಸೋಂ
ಪೆಸೆವ ಯಜ್ಞೇಶ್ವರಂ ಗಡ ದಕ್ಷಯಜ್ಞಪ್ರಭಂಜಕಂ ಗಡ ಪರಿಕಿಸೆ ೫

ಪಿರಿದಜಾಂಡಾಳಿಗೆಲ್ಲಂ ಕರ್ತೃ ಗಡ ಮತ್ತೆ
ಭರದಿನವನೆಲ್ಲಮಂ ಕಿಡಿಸುವಂ ಗಡ ನಿಸದ
ಮುರುಸಚ್ಚಿದಾನಂದರೂಪಂ ಗಡೇಕೆ ಸೊಡಬಲಿಗಾದನನವರತವು
ನಿರುತಮುದಱಿಂದ ಮಂಗಲ್ಯರೂಪಂ ಪಿಕ
ಸ್ವರವಿರುದ್ಧಪ್ರಭಾವಾನ್ವಿತಂ ವಿಪರೀತ
ತರಚರಿತ್ರಂ ದುಷ್ಟವೇಷನತಿದುಶ್ಶೀಲಸಂಯುಕ್ತನಪವಿತ್ರನು ೬

ನಿಸದಮಿಂತಪ್ಪ ಶಿವನಂ ದೇವನೆಂದು ಸಂ
ತಸದೆ ನೀಂ ಸ್ಥಾಪಿಸಿ ಬಳಿಕ್ಕೆ ಪೊಗಳುತ್ತಿರ್ಪ
ಯುಸಮುಪಾಂಡಿತ್ಯಮಿದು ಲೇಸು ವಿದ್ವಾಂಸರ್ಕಳಪಹಾಸ್ಯಮಂ ಮಾಡುತೆ
ವಸುಧೆಯೊಳ್ ಧಿಕ್ಕರಿಸರೇ ಪೋಗು ಪೋಗು ನಿ
ನ್ನೆಸೆವಾಗಮದ ಪುಸ್ತಕಂಗಟ್ಟಿ ನುಡಿಯುಡುಗು
ವೊಸೆದು ನೀನಿಂತಪ್ಪ ವಾದಮಂ ಮಾಡದಿರ್ ಭೂಮಿಯೊಳಗಾವೆಡೆಯೊಳು ೭

ಎನೆ ಚಂದ್ರಧರಣಾದಿ ಶಿವನುಹಿಮೆಗಳ[1]ನಿ[1]ಳಿಸಿ
ಬಿನುಗುಬೌದ್ಧಂ ನುಡಿವುದನನ ದುಷ್ಕರ್ಮಫಲ
ಮೆನಿಕುವೆಂತೆನೆ ಪುಣ್ಯಹೀನನಗ್ರದೊಳಿರ್ದ ಕಡವರಂ ಲೋಕದೊಳಗೆ
ನನಸು ಭಾಂಡದ ಶಕಲದಂತೆ ತೋ(ಱು)ಗುಮಂತೆ
ಮನಸಿಜಾರಿಯ ವೈಭವನಂ ಪಾಪಿಗಳ್ಗೆ ತೊ
ಟ್ಟನೆ ವಿಕೃತಮಾಗಿ ತೋರ್ಕುಂ ದೋಷವೇನದ[2]ರ್ಕೆ[2]ನುತೆ ಗುರುಪಂಡಿತೇಂದ್ರಂ ೮

ನಸುನಗುತ್ತಾ ಬೌದ್ಧನಂ ನುಡಿದನೇನೆಲವೊ
ಪಿಸುಣಬೌದ್ಧನೆ ಪುರಾಣಾಗಮಂಗಳ ವಾಕ್ಯ
ವಿಸರವಂ ಕೇಳ್ದಱಿತುದಿಲ್ಲ ನೀಂ ಚಂದ್ರಜೂಟಂ ಮಕುಟದಲ್ಲಿ ಶಶಿಯಂ
ಒಸೆದು ಧರಿಸಿದುದನಾ ಬ್ರಹ್ಮಕೈವರ್ತಮೆಂ
ಬಸನು ಸಂಹಿತೆಯಲ್ಲಿ ಪೇಳ್ದುದೆಂತೆನೆ ಕಾಲ
ನೆಸೆವೋಲಗದೊಳಿರ್ದು ಚಿತ್ರಗುಪ್ತಂ ಯಮನ ನುಡಿದನತಿವಿಸ್ಮಯದೊಳು ೯

ಎಲೆಲೆ ಸಮವರ್ತಿ ಕೇಳಾಗಸದೊಳೆಸೆವ ನಿ
ರ್ಮಲ ಕನಕಪುಷ್ಪಕನುನೇಱಿ ಕೆಲಬರ್ ನಿನ್ನ
ಲಲಿತಪುರವಂ ಪುಗದೆ ನಿನ್ನನಾದರಿಸದತಿಗರ್ವದಿಂ ನಿನಗೆಱಗದೆ
ಸಲೆ ಊರ್ಧ್ವಲೋಕಕ್ಕೆ ಪೋಪರಿವರಾರೆಂದು
ನಲಿದುಪೇಳೆನೆ ಧರ್ಮರಾಜನತಿಹರ್ಷದಿಂ
ದೊಲವುವಿುಗೆ ನುಡಿದನಾ ಚಿತ್ರಗುಪ್ತನ ಕೂಡೆ ಮಿಗೆ ಅದಟ ಸತ್ಕಥನವಂ ೧೦

ಮನಸಂದು ಕೇಳ್ ಚಿತ್ರಗುಪ್ತ ನೀಂ ದಕ್ಷಂಗೆ
ಮಿನುಪ ಪೆಣ್ಮಕ್ಕಳಿಪ್ಪತ್ತೇಳ್ವರುಂಟವರ
ನನುವಿನಿಂದಿಂದುವಿಂಗಿತ್ತು ಮತ್ತಾ ದಕ್ಷನಿಂದುವಂ ಪ್ರಾರ್ಥಿಸಿದನು
ವಿನಯದಿಂದೆಲೆ ಚಂದ್ರ ಪೆಣ್ಮಕ್ಕಳೆಲ್ಲರಂ
ಘನದಯೆಯಿನೇಕಪ್ರಕಾರದೊಳೆ ಕಾಣ್ಬುದೆನು
ತನಿತಱಹೊಳಜಂ ಪೋಗಲಿತ್ತ ಶಶಿ ರೋಹಿಣೀದೇವಿಯೊಳೆ ನೇಹ ಬಲಿದು ೧೧

ಉಳಿದ ದಕ್ಷನ ತನೂಜೆಯರನೇಳಿದಗೆಯ್ಯು
ಲಳವಳಿ[3]ಯು[3]ತವರೆಲ್ಲರುಂ ತಮ್ಮ ಪತಿಯ ಮೇ
ಳಳಲುತಿರಲಿದನಱಿದು ಕಿಸುಗಣ್ಣಿ ಧಕ್ಷನೆಯ್ತಂದು ನುಡಿದಂ ಚಂದ್ರನಂ

---

[1] ನ (ಗ) [2] ಕೆ (ಕ) [3] ವು (ಗ)

ಬಳಲಿಸಿದೆ ಮಿಕ್ಕೆ[1]ಮ್ಮ[1] ಪೆಣ್ಮಕ್ಕಳಂ ಕರಂ
ಘಳಿಲನೊರ್ವಳನೆ ರೋಹಿಣಿಯನಂಗೀಕರಿಸಿ
ತಿಳಿಯದೆನ್ನಯ ವಚನವಂ ಮಾಱಿದುದಱಿಂದೆ ನೀಂ ಕಲಾಹೀನನಾಗಿ ೧೨

ದಿನದಿನದೊಳೆಯ್ದೆ ಬಡವಾಗಿ ನಾಶಂಬೊಂದಿ
ಘನತರಂಗುಂದಿಪೋಗೆಂದು ಶಾಪಂ[2]ಗ[2]ಡಲ್
ಮಿನುಪ ಶಶಿ ಪೆಳಱಿ ಶಂಕರನನು[3]ದ್ದೇಶಿಸಿಯೆ[3] ನಡೆನನಿತಱಿಳೊಳ್ ತನ್ನಯೆ
ವಿನುತ ಕಳೆಗಳೊಳವೆಯೆನಿಪ್ಪೊಂದುಕಳೆ[4]ಯು[4]ಳಿಯ
ಲೆನಸುವೆಲ್ಲಾ ಕಲಾವಿತತಿ ತವಿಸಲ್ ಶಂಭು
ವಿನ ಪದತಳಕ್ಕೆಱಗಿ ಲಕ್ಷ್ಮೀಶ ವಾಗೀಶವಂದ್ಯ ಗಿರಿಜಾಧಿನಾಥ ೧೩

ಎಂದು ನುತಿಸುತೆ ತನ್ನ ಕಾರ್ಯಮಂ ಬಿನ್ನೈಸ
ಲಿಂದುಧರನಂಜದಿರೆನುತ್ತೆ ಶಶಿಯಂ ನುಡಿದು
ಮುಂದಿರ್ದುದೊಂದವೆಯೆನಿಪ್ಪ ಕಲೆಯಂ ತನ್ನ ಜೂಟಾಗ್ರದೊಳ್ [5]ಸೂಡುತೆ[5]
ಕಂದರ್ಪಹರನೆಂದನೆಲೆ ವಿಧುವೆ ನಿನಗೆ ತಱಿ
ಸಂದು ದಕ್ಷಂಗೊಟ್ಟ ಶಾಪದಿಂ ಕಲೆಗಳೊಂ
ದೊಂದು ತವಿಸುತ್ತೆಮ್ಮ ಕೃಪೆಯಿಂದವೊಂದೊಂದು ಕಲೆ ಪೆರ್ಚುತಿರ್ಕೆ ಎನುತೆ ೧೪

ಪರಶಿವಂ ವರವೀಯೆ ಚಂದ್ರಂಗೆ ಸುರಸಮಿತಿ
ಕರವೆ ಪೊಗಳುತ್ತಿರಲ್ಕಂದುವೊದಲಾ ಶಶಿಯ
ಕಿರಣಂಗಳೆಯ್ದೆ ತವಿಸುತ್ತೆ ಜಗಕಿಷ್ಟವಂ ಮಾಡುಗುಂ ಶಿವನ ಕೃಪೆಯಿಂ
ಪಿರಿದವಾ ನಾವು ಎನುತುಂ ಕಲಾ ಯಾ[ತು][6] ಎನು
ತಿರದುಸುರ್ವ ಪೌರಾಣವಾಕ್ಯದಿಂದಂ ಕಲೆಯ
ಹರನೊಸೆದು ತಾಳ್ದ ದಿನವೇ ಅಮಾವಾಸ್ಯೆಯೆಂಬುರುತಿಥಿಯುದಾಯ್ತು ಧರೆಗೆ ೧೫

ಇವರೊಸೆದು ಭಕ್ತಿಯಿಂದಾ ತಿಥಿಯೊಳಾವಗಂ
ತವಕದಿಂದೇಕಾಗ್ರಚಿತ್ತರಾಗುತ್ತೆ ಶಂ
ಭುವ ಪೂಜೆಗೆಯ್ದು ಬಳಿಕತ್ಯಂತಲೀಲೆಯಿಂದುರುವಿಭವಯುಕ್ತರಾಗಿ
ಸವಿನಯದಿನೂರ್ಧ್ವಲೋಕಕ್ಕೆ ಪೋಪವರೆಂದು
ಜವನತಿಪ್ರೀತಿಯಿಂ ಚಿತ್ರಗುಪ್ತರಿಗೆ ತಿಳಿ
ವವೊಲೆಯ್ದೆ ಪೇಳ್ದನದಱಿಂದಿಂದುಕಲೆಯನಿತನೀಶನೊಲವಿಂ ತಾಳ್ದದಂ ೧೬

---

[1] ನ್ನ (ಗ) [2] ಗೊ (ಗ) [3] ದ್ವೇಷಿಸಿಯೆ (ಗ) [4] ಯ (ಗ) [5] ಧರಿಸುತೆ (ಗ)
[6] ನು (ಕಗಟ)

ಇನಿತಱಿಂದಂ ಶಿವಂ ಚಂದ್ರಧರನೆನಿಸಿದಂ
ಘನತರಾನಂತವೇದಾಂತದುರ್ಲಭವಿಭವ
ನನಘನತ್ಯಾದಿಮಧ್ಯಾಂತಶೂನ್ಯಂ ಜಗತ್ಪ್ರಭು ಶಂಕರಂ ಶಶಿಧರಂ
ವನಜಾಕ್ಷ ಕಮಲಭವ ಮುಖ್ಯರ್ಗಗೋಚರಂ
ವಿನುತಚಂದ್ರನನೇಗಳುಂ ಧರಿಸಿಕೊಂಡಿರ್ಪೊ
ಡೆನಸುಮಬ್ಜಂ ಗಗನದೊಳ್ ಚರಿಸುತಿರ್ಪುದದು ಪುಸಿಯಾಗವೇಳ್ಕು ಸತತಂ ೧೭

ಧರಣಿಯೊಳ್ ಬೇಱಿರ್ಪ ಚಂದ್ರನೊಗೆದಿರ್ಪನೋ
ಪುರಹರನ ಜೂಟದೊಳಗೆಸೆದಿರ್ಪ ಚಂದ್ರನಂ
ಬರದಲ್ಲಿ ತೋಱಲಱಿಯಂ ಗಗನದೊಳಗಿರ್ಪ ಚಂದ್ರನೀಶನ ಮುಡಿಯೊಳು
ನಿರುತಮಿರಲಱಿಯನದಱಿಂ ಶಂಕರಂಗೆ ಶಶ
ಧರನ ಮಾಕಲೆಯೊಂದೆ ಭೂಷಣಮದಾಯ್ತುದೇಂ
ಪಿರಿದು ನಿಂದೆಯೆ ಮಹಾದೇವಂಗೆ ಬೌದ್ಧ ನೀನಱಿಯೆ ಮ[1]ತ್ತಿ[1]ದಱ ತೆಱನಂ ೧೮

ಮರಳಿ ಕೇಳಿಲೆ ಬೌದ್ಧ ಬ್ರಹ್ಮನಳಿಕದೊಳಭವ
ನಿರದೊಗೆದನೆಂಬ ಮಾತಿಂಗುತ್ತರಮನೆಯ್ದೆ
ಪಿರಿದುಮಾ ವೇದವಾಕ್ಯಂ ಸ್ವೇಚ್ಛಯಾಚಿಂತಯೇಚ್ಛಿವಃ ಎಂದ ತೆಱದಿಂ
ಗಿರಿಜಾಧಿಪತಿ ಶಂಭುವಾದಿಸೃಷ್ಟಿಯನೆಯ್ದೆ
ಕರಮೆ ಬಿನದದೆ ಮಾಡಲೊಸೆದು ಚಿಂತಿಸಲೊಡನೆ
ಪರಮೇಷ್ಠಿ ಹರಿಗಳೀರ್ವರ್ ಗಿರಿಶನೆಡಬಲದ ಬೆಮರ್ವನಿಯೊಳೊಗೆತಂದರು ೧೯

ವಿದಿತದಿಂದಂ ಮದಂಗಸ್ವೇದ ಎನುತೆ ಸಲೆ
ಮುದದೆ ಸಂಭೂತೌ ಎನುತ್ತೆ ಮತ್ತಂ ನೋಡ
ಲೊದಱ ನುಡಿಗುಂ ಬ್ರಹ್ಮನಾರಾಯಣೌ ಎಂಬ ವಾಕ್ಯಪ್ರಮಾಣದಿಂದಂ
ಮದನಾರಿಗತ್ಯಂತಭಕ್ತಿಯಿಂದೆಱಗೆ ತ
ತ್ಪದರೇಣುಸಂಗದಿಂದುಱದೆ ಸಾತ್ವಿಕಗುಣಂ
ಪುದಿಯಿತ್ತು ನಾರಾಯಣಂಗೆ ರಾಜಸಗುಣಂ ಪೊರ್ದಿತ್ತು ಕಮಲಜಂಗೆ ೨೦

ಭರದಿಂದೆ ಯಸ್ಯ ಪಾದರಜಃ ಎನುತ್ತೆ ಮ
ತ್ತೊರೆಗುಗುಂ ಸ್ಪರ್ಶಾದೆನುತ್ತೆ ಭಾಸುರವೇದ
ಮಿರದೊರೆದ ವಾಕ್ಯಮೇ ಸತ್ಪ್ರಮಾಣಂ ಬ್ರಹ್ಮವಿಷ್ಣುಗಳ ನಿಜಪದವಿಗೆ

---

[1] ತ್ರ (ಗ)

ಹರನಾಜ್ಞೆಯಿಂ ಕಮಲಜಾಂಡನಿಚಯಂಗಳಂ
ಪರಮೇಷ್ಠಿ ಸೃಷ್ಟಿಸುತ್ತತಿಗರ್ವದಿಂದಾನೆ
ಪರಬೊಮ್ಮಮೆನ್ನಿಂದೆ ಮೇಲಾದ ದೈವಮಿಲ್ಲೆಂದು ಸಂಭ್ರಮದೆ ನುಡಿಯೆ ೨೧

ಅನಿತಱಿಂ ತನ್ನ ರಾಜಸಗುಣದ ಸಾಮರ್ಥ್ಯ
ಮಿನಿತುಳಿಯದೆಲ್ಲಮುಂ ತವಿಸಿ ಪೋಗಲ್ ಪೆಳಱಿ
ಘನಗರ್ವಮಂ ಬಿಟ್ಟು ಮುನ್ನಿನಂದದೆ ಭಾಳನೇತ್ರನಂ ಕುಱಿತು ತಪನಂ
ವನಜಜಂಗಿಷ್ಟಾಗರಿಷ್ಠದಿಂ ಘೋರತರ
ಮೆನಿಸಿ ಮಾಡುತ್ತೆ ತನ್ನಯ ರಸನೆಗಳ ಕೊಯ್ದು
ಮನಸಿಜಹರಂಗರ್ಪಿಸುತ್ತೇಗಳುಂ ಮತ್ತಮಷ್ಟವಿಧದರ್ಚನೆಗಳಂ ೨೨

ಪರುಠವಿಸುತಷ್ಟಾಂಗಯೋಗಸಂಗತಿಯಿಂದೆ
ನಿರುತನಿಶ್ಚಲಚಿತ್ತನಾಗಿ ಪದ್ಮಾಸನವ
ನಿರದೆ ವಿರಚಿಸಿ ಹೃದಯಪದ್ಮಸದ್ಮದೊಳೀಶಮೂರ್ತಿಯಂ ನೆಲೆಗೊಳಿಸುತೆ
ಹ[1]ರಿಸಿ[1]ದಿಂದೆಡದ ಚರಣದ ಮೂಲದಿಂದೆ ಬಂ
ಧುರವೆನಿಸುವಾಧಾರಮಂಡಲಮನಯಿಱ ಬಲಿದು
ಕರಮೆ ಪ್ರಾಣಾಪಾನವಾಯುಗಳ ಯೋಗಕೀಲಂ ಸತತಮಱಿದು ಬಳಿಕಂ ೨೩

ಮಿಸುಗುವಂತರ್ಯೋಗಕುಶಲದೊಳ್ ನೆಱೆ ವಿರಾ
ಜಿಸುತಾದಿಕುಂಡಲಮನಾಕುಂಚನಂಗೆಯ್ದು
ನಿಸದವೊಳಗಿರ್ದಹಿಯನೆಚ್ಚಱಿಸಿ ತರಣಿಶಶಿಗಳ ಗತಿಗಳಂ ಕಟ್ಟುತೆ
ಎಸೆವ ನಾಸಾಗ್ರದೊಳ್ ದಿಟ್ಟಿಯಂ ನಿಲಿಸುತ್ತೆ
ಮುಸಕದಿಂದೊಳಗಣಬ್ಜಂಗಳಂ ಮೇ[2]ಲ್ಮೊ[2]ಗದೊ
ಳೊಸೆದು ಸ್ಥಿತಿಡುತೆ ಕೆಳಗಿರ್ದಯ್ದು ಕಮಲಮಂ ನಲಿದಾಸನಂಗೆಯ್ಯುತೆ ೨೪

ಲಲಿತ ಕಾಂತಿಗಳಿನ್ನೈದಂಬುಜಂಗಳ ಮೇಲೆ
ದಲಶೇಜದಿಂ ತೋಱುವೆರಡೆಸಳ ಕಮಲಮು
ಳ್ಳಲಘುಪ್ರಸೂನಮಂಟಪದೊಳ್ ಲಲಾಟದೊಳ್ ಶಿವನ ಚಿಂತಿಸಿದನೆಂದು
ಸಲೆ ಲಲಾಟೇಚಿಂತಯೆತ್ ಎನುತೆ ಮತ್ತೆಯುಂ
ಸುಲಭದಿಂ ಬ್ರಹ್ಮಾ ಎನುತ್ತೆ ಮತ್ತಾವಗಂ
ನಲಿಯುತೇಗಳ್ ತಪಸ್ಯುಗ್ರೇ ವ್ಯವಸ್ಥಿತಃ ಎನುತೆ ನುಡಿಗುಂ ವಾಕ್ಯವು ೨೫

---

[1] ರುಷ (ಗ) [2] ಲ್ಕೊ (ಗ)

ಇಂತೀ ಪುರಾಣವಾಕ್ಯಪ್ರಮಾಣದಿ ನೋಡೆ
ಸಂತತಂ ಬ್ರಹ್ಮನಾ ಭ್ರೂಮಧ್ಯದೊಳ್ ಶಿವನ
ನಂತೆ ಸ್ಥೈತಿರಿಸಿಯವಗಾಹನಂ ಮೊದಲಾದ ಪಂಚವಿಧಮುಪಚಾರದಿಂ
ಕಂತುಹರನಂ ತುಷ್ಟನಂ ಮಾಡಿ ಬಳಿಕಮೋ
ರಂತೆ ಮಿನುಗುವ ಸಾಸಿರೆಸಳ ಶತಪತ್ರದಿಂ
ಮುಂತೆ ಪೊಣ್ಮುತ್ತಿಳಿದು ಬರ್ಪ ಮಕರಂದದಿಂದಭಿಷೇಕಮಂ ವಿರಚಿಸಿ ೨೬

ಮರಳಿಯಾ ಕಮಲದಿಂ ಪೂಜೆಯಂ ಮಾಡಿ ಭಾ
ಸುರಭಕ್ತಿವಾಸನೆಯಿನೊಲ್ದು ಧೂಪಂಗೊಟ್ಟು
ನಿರುತಮಾತ್ಮಜ್ಯೋತಿಯಿಂದೆ ನೀರಾಜನಮನೆಸಗಿ ಸದ್ಭಕ್ತಿಯಿಂದೆ
ನಿರುಪಮ ಶ್ರುತಿವಾಕ್ಯದಿಂ ನುತಿಸಿ ತಚ್ಛಿವಂ
ಪರಿತುಷ್ಟನಾಗಿ [1]ತ[1]ದ್ವಾಳದೇಶದೊಳೊಸೆದು
ಹ[2]ರಿಸ[2]ದಿಂ ಪ್ರತ್ಯಕ್ಷನಾಗಿ ನುಡಿದಂ ಶಿವಂ ಬ್ರಹ್ಮನೊಡನೊಲವಿನಿಂದಂ ೨೭

ಮಿನುಪ ನಿನ್ನಯ ಭಕ್ತಿಗಾಂ ಮೆಚ್ಚಿದೆವು ಬೇಡು
ವಿನಯದಿಂ ನಿನ್ನಭೀಪ್ಸಿತಮನೆನಲಾ ಬ್ರಹ್ಮ
ನನುನಯದಿನೆಱಗಿ ಕೈಮುಗಿವುತುಂ ಬ್ರಹ್ಮಾಷ್ಟಕದೆ ನುತಿಸಿ ಶಿವನತ್ತಣಿಂ
ವಿನುತ ಸೃಷ್ಟ್ಯಾಧಿಪತ್ಯಮನೆಯ್ದಿ ಮುನ್ನಿನವೊ
ಲೆನಸುಮಬ್ಜಜನೊಲ್ದು ಸೃಷ್ಟಿಗೆಯ್ಯುತ್ತಿರ್ದ
ನನುಪಮಶಿವಂ ನಿಜ[3]ನಿವಾಸಮೆಯ್ದಿದನಿದೇಂ ನಿಂದೆಯೇ[3] ಲೋಕದೊಳಗೆ ೨೮

ನಿರುತ ಷಟ್ಸಮಯಿಗಳ್ ಧ್ಯಾನೈಕನಿಷ್ಠೆಯಿಂ
ಪಿರಿದು ತಂತಮ್ಮಿಷ್ಟದೈವಂಗಳಂ ತಂದು
ಸರಳಹೃದಯಂಗಳೊಳ್ ನೆನೆಯುತಿರಲಲ್ಲಿ ತೋಱುವ ದೈವನಿಕರಂಗಳು
ಪರಿಭಾವಿಸಲ್ಕವರ ತನುಜರ್ಕಳಪ್ಪವೇ
ಭರದಿನಂತಾದೊಡವರಾರಾಧಿಸುವ ದೈವ
ದಿರವೆಲ್ಲಿಯುಂ ತೋಱದಿರ್ಕುಮಿಂಧನದೊಳೊಗೆದಗ್ನಿಗದು ಪಿತನಪ್ಪುದೆ ೨೯

ಮಿನುಪ ಪಾಷಾಣದೊಳ್ ಕಸವರಂ ಪುಟ್ಟಿದೊಡ
ಮೆನಸುಮಾ ಸಱಿಯಪತ್ಯಮೆ ಕನಕಮವನಿಯೊಳ್
ವಿನುತ ದಿವ್ಯಸ್ವಯಂಭೂಲಿಂಗಮೊಗೆದೊಡಾ ಧರೆಯ ಸುತನೆನಲಪ್ಪುದೆ

---

1 ಸ (ಕಗ) 2 ರುಷ (ಗ) 3 ವಾಸವೆಯ್ದಿದನಿದೆನ್ನಿಂದೆಯೆ (ಕ)

ನೆನೆಸು ಕಂಭದೊಳೊರ್ವನುದಯಿಸಿದನವನನಾ
ಘನತರ ಸ್ಥಂಭದಣುಗಂ ಎನಲ್ ತಕ್ಕುದೇ
ಸನಯದೆ ಹಿರಣ್ಯಗರ್ಭಂ ಬ್ರಹ್ಮ[1]ನೆಂಬೊ[1]ವ್ರೋಲಾವೆಡೆಯೊಳಾದೊಡೊಸೆದು ೩೦

ಅಮರಸಿಂಹಾದಿ ಬಂಧುರನಿಘಂಟುಗಳಲ್ಲಿ
ರಮಣೀಯ ಪಾಣಿನೀಯಾದಿ ಶಾಸ್ತ್ರಾಳಿಯೊಳ್
ಕಮಲಜಲಲಾಟಜಂ ಶಿವನೆಂದು ಪೇಳ್ದಿಡೆಗಳುಂಟೆ ಈ ಭುವನದೊಳಗೆ
ಭ್ರಮೆಯಿನಿಂತೆಂದು ನುಡಿವುದು ಪಾತಕಂ ಕರಂ.
ಭ್ರಮಿತ ಬೌದ್ಧನೆ ಎಂದು ಪಂಡಿತೇಶಂ ಮತ್ತೆ
ವಿಮಲೇಶ್ವರಂ ಶಿವಂ ಶಲ್ಯಾದಿಗಳ ತೊಟ್ಟುದಂ ಪೇಳಲುಜ್ಜುಗಿಸಿದಂ ೩೧

ಸದಮಲಪ್ರಚುರವಿಶ್ರುತ ಪರಮಭಕ್ತಗಣ
ಪದಸರೋರುಹಸಾಂದ್ರ ಮಕರಂದಪಾನ ಸ
ಮ್ಮುದಿತ ಚಂಚಚ್ಚಂಚರೀಕನನವರತ ಪಂಚಾಕ್ಷರೀಪ್ರಸಿತಹೃದಯಂ
ವಿದಿತ ಮಂಜುಳನೀಲಕಂಠಾಹ್ವಯಂ ಮನೋ
ಮುದದೆ ಪೇಳ್ದುರುತರಾರಾಧ್ಯಚಾರಿತ್ರದೊಳ
ಗಿದು ಚಂದ್ರಧಾರಣದ ಬ್ರಹ್ಮನಳಿಕಜನಿರಸನದ ಕಥನಮೆಯ್ದೆ ನೋಡೆ ೩೨

1 ವೆಂಬ (ಗ)

# ಹನ್ನೆರಡನೆಯ ಸಂಧಿ

## ಅಸ್ಥಿಚರ್ಮಭಿಕ್ಷಾಟನ–ವೃಷಭವಾಹನದ ಕಥೆ

ಸೂಚನೆ: ಹರನಸ್ಥಿಚರ್ಮಂಗಳಂ ತಾಳ್ದ ಕಥನಮಂ
ಪರಮಭಿಕ್ಷಾಟನದ ವೃಷಭವಾಹನದ ಬಂ
ಧುರಕಥನಮಂ ಕೇಳ ಸುರಸಚಿವೇಂದ್ರ ನೀನೆನುತೆ ಸೋಮೇಶನುಸುರ್ದಂ

ಪ್ರಲಯಾಗ್ನಿಸೌದಾಮಿನೀತಪ್ತಭರ್ಮಂಗ
ಳಲಘು ಕಾಂತಿಗಳನಿಳಿಕೆಯ್ವರುಣಕಾಂತಿಯಿಂ
ಲಲಿತತಾಮ್ರಾಧರದೆ ಸಾಮವೇದದಿನಬ್ಜಸೂರ್ಯಾಗ್ನಿನೇತ್ರದಿಂದೆ
ವಿಲಸದಮರನದೀತರಂಗತಾಟಿತ ಸುಹಿಂ
ಗಲಜಟಾಬಾಲೇಂದುವಿಂ ಮೆಱೆವ ಪೂರ್ವಮುಖ
ಮಲರ್ದು ರಾಜಿಸುತಿರಲ್ ಮಿನುಪ ಗುರುನೀಲಕಂಠಂ ಪೊರೆಗೆ ಲೋಕಂಗಳಂ ೧

ಪರಮೇಶ್ವರಂ ಪಿರಿದಮಂಗಲ್ಯಮಾದಸ್ಥಿ
ಕರಿಚರ್ಮಮುಖ್ಯಂಗಳಂ ತಾಳ್ದನೇಕೆಂಬೊ
ಡೊರೆದಪೆಂ ಕೇಳನಂತಾತೀತಕಲ್ಪಾಂತದೊಳ್ ಮಡಿದ ಕಮಲಭವರ
ಉರುಕಪಾಲಾಸ್ಥಿಮಾಲೆಗಳಿಂದೆ ಸಂತತಂ
ಸರಳ ಪಿಂಗಳಜಟಾಬಂಧನಂಗೆಯ್ದು ಸುರು
ಚಿರಕಳೇವರದೊಳಗೆ ದೇವದಾನವರ ತಲೆ[1]ಯೋಡಸ್ಥಿಗಳ ಧರಿಯಿಸಿ ೨

ಚರಣದೊಳ್ ವಿಷ್ಣು ನೇತ್ರಂದಾಳಿ ಬಲಭುಜದೊ
ಳಿರದೆ ವಿಷ್ವಕ್ಸೇನನೊಳ್ಪಿಣನ ಪೊತ್ತೆಡದ
ಕರದೊಳಾ ಬರ್ಮದಲೆವಿಡಿದು ಶೋಭಿಪ ಮಹೇಶ್ವರನ ಬಂಧುರಕಾಯಮೆ
ಹರನ ನಿತ್ಯತೆಯನತಿಮಹಿಮೆಯಂ ಮತ್ತಿನರ
ಸುರರ ನಾಶತ್ವಮಂ ಕನ್ನಡಿಪುದರ್ಕಿದೇ
ನಿರುಪಮಪ್ರತ್ಯಯಂ ಬೇಱೆ ಮತ್ತೊಂದನಱಿಸಲ್ವೇಡ ಧರಣಿಯೊಳಗೆ ೩

[1] ಯೊಡದ (ಗ)

ವನಜಭವಮು[1]ಖ ನಿರ್ಜರರ[1] ಕಪಾಲಾಸ್ಥಿಗಳ
ಮಿನುಗುವ ಮುಮುಕ್ಷುಗಳ್ ಧರಿಸೆ ಮೋಕ್ಷಕ್ಕೆಯುಂ
ನನಸುಕಾರಣಮಪ್ಪವೇ ಅದಂತಿರ್ಕೆ ಶಂಕರನಿವಂ ಧರಿಸಿ ಬಳಿಯಂ
ಎನಸುಮಪವಿತ್ರನಪ್ಪನೆ ಬಿಡಿಮುದಂತಿರ್ಕೆ
ವನಜಭವ ವನಜಾಕ್ಷರಿರ್ವರಸ್ಥ್ಯಾದಿಗಳ
ಮನಸಿಜಹರಂ ಧರಿಸಲವರೀರ್ವರುಂ ಕೃತಾರ್ಥರುಮಾ[2]ದರೆಂ[2]ತೆಂಬೊಡೆ ೪

ಅನಘಗಂಗಾಸಂಗಮಾದಸ್ಥಿಗಳ್ ನಾಡೆ
ನನಸು ಪೂತಂಗಳಪ್ಪುಗುಮಲ್ಲದಾ ಗಂಗೆ
ವಿನುತಾಸ್ಥಿಗಳ ಸಂಗದಿಂ ಪೂತಮಪ್ಪುದೇ ಗಂಗೆಯೊಡವೆರೆದು ತೊಳಪ
ಕನದಸ್ಥಿಮಾಲೆಗಳ್ ಪೂತಂಗಳಾಗಲಾ
ಮಿನುಪ ಜೀವಂಗಳೆಯ್ದುಗುಮಮರವಾಸಮಂ
ಸನಯದಿಂದೆಂದಂತೆ ಹರಿವಿರಿಂಚಿಗಳೆಲ್ವುಗಳ್ ಶಿವನ ಕೂಡಿದುದಱಿಂ ೫

ಹರಿವಿರಿಂಚಿಗಳ ನಿಜಪದವಿಗಳ್ಗಿವು ವಲಂ
ಪಿರಿದುಕಾರಣಮಕ್ಕುಮದಱಿಂದೆ ಶಂಕರಂ
ಪರಿಕಿಸಲಮಂಗಲ್ಯನಪ್ಪನೇ ನಿಂದೆಯಲ್ತಿದು ಮತ್ತೆ ಪರಮೇಶ್ವರಂ
ಹ[3]ರಿಸ[3]ದಿಂ ಚರ್ಮಂಗಳಂ ಧರಿಸಲಕ್ಕುಮೇ
ನಿರುತಮೆಂಬೊಡ ಕೇಳ ಮುನ್ನೆ ದುರ್ಬುದ್ಧಿಯಿಂ
ದಿರದೆ ಕೊರ್ಬಿದ ಹಿರಣ್ಯಾಕ್ಷನಂ ಕೊಂದು ತದ್ರಕ್ತಪಾನದೆ ಮದಿಸಿದ ೬

ನರಸಿಂಹನಂ ನೋಡಿ ಶರಭರೂಪಂ ತಾಳ್ದು
ಪುರಹರಂ ಕೊಂದವನ ಸಮ್ಮವಂ ಧರಿಸಿದಂ
ಮರಳಿ ಮತ್ತೊರ್ವನಂ ಬಗ್ಗರಕ್ಕಸನನಂತಿರದಿಕ್ಕಿ ಮಡುಪಿಯುವನ
ಉರುಕೃತ್ತಿಯಂ ತೆಗೆದು ತಾಳಿದಂ ಮತ್ತೆ ಭಾ
ಸುರಗಜಾಸುರನ ಪನ್ನತಿಕೆಯಂ ಮುಱಿದು ಸಂ
ಹರಿಸಿಯುವನಂ ಸೀಳಿ ತದಜಿನಮನಂಬರಂ ಮಾಡಿದಂ ರುದ್ರನೊಸೆದು ೭

[1] ಖ್ಯನಿರ್ಜರ (ಗ) [2] ದೊಡೆಂ (ಗ) [3] ರುಷ (ಗ)

ಮಿಗದ ರೂಪಂ ತಾಳಿಯೋಡುತಿರ್ಪಾ ಹರಿಯು
ನೆಗಳ್ದ ಶಿರಮಂ ಬಾಣದಿಂ [1]ಛೇದಿಸುತ್ತ[1]ವನ
ಸೊಗಯಿಸುವ ತೊಗಲ ತೆಗೆದುಟ್ಟನಾ ಪರಮೇಶ್ವರಂ ಶಂಕರಂ ಶಶಿಧರಂ
ಬಗೆದಿವಂ ಪರಿಧಾನಮಂ ಮಾಡಿ ಮಿನುಪ ಗ
ದ್ದುಗೆಗೆಯ್ದು ತನ್ನ ನಿತ್ಯತ್ವದುನ್ನತಮಾದ
ಸೊಗಯಿಸುವ ಮಹಿಮೆಯಂ ತೋಱಿ ಧರಿಸಲ್ ನಿಂದೆಯಕ್ಕುಮೇ ಶೂಲಿಗನಿಶಂ ೮

ಜಗದೊಡೆಯನೀಶನೊಲ್ದೇಕೆ ಭಿಕ್ಷಾಟನಕೆ
ಸೊಗಸಿನಿಂ ನಡೆತಂದನೆಂಬೊಡುತ್ತರಗೇಳ
ವಿಗಡರಜಹರಿಗಳೀರ್ವರ್ ಸೆಣಸಿ ಲೋಕಕಾನೊಡೆಯನಾನೊಡೆಯನೆನುತೆ
ಬಗೆಯದೇನಂ ನುಡಿಯಲವರಿರ್ವರೊಳ್ ಬಳೆದು
ನೆಗಳ್ದ ಗರ್ವಮನುಡುಗಿಸುವೆನೆಂ[2]ನ್ನ ಮಹಿಮೆಯಂ
ಮಿಗೆ ಮೆಱೆವೆನೆನುತಜನ ಮೇಲ್ದಲೆಯನುಗುರಿಂದೆ ಪಱಿದಿಕ್ಕಿ ಸಂತಸದೊಳು ೯

ಮಿಸುಪ ಸೋಮಾಷ್ಟಕದೆ ನುತಿಸುತ್ತೆ ವಂದಿಸು
ತ್ತೊಸೆದಜಂ ಶಿವನ ಕೀರ್ತಿಸುತೆ ಮತ್ಸ್ವಾಮಿಯೇ
ನಿಸದಮಾ ಶಿರಮವನಿಯೊಳ್ ಬೀಳೆ ಹತಮಕ್ಕುಮಖಿಳಲೋಕಂಗಳೆಯ್ದೆ
ಮುಸಕದಿಂ ನಿಮ್ಮ ಕರದೊಳ್ ಧರಿಪುದೆನುತಲಾ
ಬಿಸಜಾಸನಂ ಬಿನ್ನವಿಸೆ ಕೇಳಿ ಕರುಣದಿಂ
ದಸಮನಯನಂ ತತ್ಕಪಾಲಮಂ ಕರದಲ್ಲಿ ತಾಳ್ದು ಹರಿಲೋಕಮೆಯ್ದಿ ೧೦

ಮುನಿದು ವಿಷ್ವಕ್ಸೇನನಂ ತಿಸುಳದಿಂದಿಱಿದು
ಬಿನದದಿಂದೆತ್ತಲನಿತಱಿಳಸುರವಿಧ್ವಂಸಿ
ನನಸು ತನ್ನಯ ನೊಸಲನೊಡೆದು ತದ್ರಕ್ತಧಾರೆಯನತಿಮನೋಮುದದೊಳು
ವಿನುತ ಶಿವನೊಡನೆ ಗರ್ವಿಸಿದವರ್ಗೆನ್ನ ವಿಧಿ
ಸನಯದಿಂದೆಯ್ದುಗುಮೆನಿಪ್ಪುದಂ ತೋರ್ಪವೊಲ್
ಮಿನುಪಜಕಪಾಲದೊಳ್ ಸುರಿಯುತಿರ್ದಂ ಕೆಲವುದಿನಮುಟ್ಟೆ ನಳಿನಾಕ್ಷನು ೧೧

ಹರನುಗ್ರಮೂರ್ತಿಯಿಂತೆಸೆಯುತಿರೆ ಕಂಡು ನಿ
ರ್ಭರದಿಂದೆ ನಡುಗುತುಂ ಮೃತ್ಯುದೇವತೆಯುಮಾ
ತೆರಳಸುರರೆಲ್ಲರುಂ ಕರತಳಂಗಳನೆತ್ತಿ ಮುಗಿಯುತ್ತೆ ಭಕ್ತಿಯಿಂದಂ

1 ದೆ ಛೇದಿಸುತ (ಗ) 2 ಮ್ಮ (ಕ)

ಪಿರಿದು ಕೀರ್ತಿಸಿದರೆಲೆ ದೇವದೇವಾ ಮಹೇ
ಶ್ವರ ವಿಷ್ಣುಕೋಟಿಗಳ್ ಬ್ರಹ್ಮಕೋಟಿಗಳೆಯ್ದೆ
ವರ ಋಷಿಗಳೆಲ್ಲರುಂ ನಿನ್ನಿಂದೆ ಸಂವರ್ತದೊಳ್ ನಾಶಮೆಯ್ದೆ ನಿಸದಂ ೧೨

ನಿರುತಮುಂದಾವ ಹತ್ಯಂ ಪೊರ್ದಿತಿಲ್ಲೆಂದು
ಪಿರಿದಸಂಖ್ಯಾತಾಃ ಪಿತಾಮಹಾ ಎನುತೆಸೆವ
ಭರದಿಂದೆ ಬ್ರಹ್ಮಣಶ್ಚ ದಿನೇ ದಿನೇ ಎಂಬ ಪೌರಾಣವಾಕ್ಯವಿರಲು
ಸರಸಿಜಭವಂ ತನ್ನ ತನುಜೆಗಳುಪಿದೊಡಂದು
ಶಿರಮನುಱಿ ತಱಿಯೆ ಹತ್ಯಂ ಪೊರ್ದಿತಿಲ್ಲ ಶಂ
ಕರ ನಿಮ್ಮೊಳೆಸೆಗುವೀ ವಿಪರೀತಮೂರ್ತಿಯಂ ಬಿಡಿಮೆನುತ್ತಿಂತೆಂದರು ೧೩

ಪರಮಭಾಗೀರಥಿಯೊಳಖಿಳ ಜಂತುಗಳಳಿಯೆ
ಪಿರಿದವಱ ಹನನದೋಷಂ ಗಂಗೆಗುಂಟೆ ಭಾ
ಸುರ ದವಾಗ್ನಿಯೊಳಳಿಯೆ ವಿಪ್ರಕುಲಮಾ ಹತ್ಯಮಗ್ನಿಗುಂಟೇ ಧರೆಯೊಳು
ಕರಮೆ ನೀಚರ್ಕಳಾದಾವಱಿವೆವೇ ಸ್ವಾಮಿ
ಕರುಣಾಂಬುನಿಧಿಯೆ ನಿಮ್ಮುಗ್ರಮೂರ್ತಿಯನೆಮ್ಮ
ತರಳದೃಙ್ಮೃಗಂಗಳೀಕ್ಷಿಸಲ್ ಬಲ್ಲುವೇ ಹರನೆ ಸರ್ವಾದ್ವೈತನೆ ೧೪

ಸುರಸಮಿತಿಯಿಂತು ಸಂಪ್ರಾರ್ಥಿಸುತೆ ಭಕ್ತಿಯಿಂ
ಹ[1]ರಿಸ[1]ದಿಂದೆಱಗುತಿರ್ಪೀ ಮೂರ್ತಿವರ್ತನಮೆ
ಪರಿಭಾವಿಸಲ್ಕೆ ಭಿಕ್ಷಾಟನಮದೆನಿಸಿತ್ತು ಶಂಭುವಿಂಗಿದು ನಿಂದೆಯೆ
ನಿರುತಮಾ ಬ್ರಹ್ಮಾಂಡಮೆಂಬ ಪೆಸರುಳ್ಳ ಭಾ
ಸುರಪುರಾಣಂ ಕಪಾಲಸ್ಯ ಎನುತುಂ ಮತ್ತೆ
ಭರದಿಂದೆ ನಾರ್ಧಮಪ್ಯಭಿಪೂರಿತಂ ಎಂದು ನುಡಿದಂತೆ ತತ್ಕಪಾಲಂ ೧೫

ಹರಿ ತನ್ನ ನಡುವಣೆಯ ರಕ್ತಧಾರೆಗಳನತಿ
ಭರದಿಂದೆ ದಶಯುಗಂ ಮುಟ್ಟೆ ಸುರಿಯುತ್ತಿರಲ್
ನಿರುತಮರ್ಧಂ ತಿಂಬಿತಿಲ್ಲ ಬಳಿಕಾ ಕಪಾಲಕ್ಕುಂಟೆ ಭಿಕ್ಷನಿಕರಂ
ಧರಣಿಯೊಳ್ ಮತ್ತೆ ಶಿವಕುಕ್ಷಿಯೊಳಗೊಂದೆಡೆಯೊ
ಳಿರುತಖಿಳಲೋಕಂಗಳಾ ಹರನನಱಿಯುವೆನೆ
ಸರಳಭಿಕ್ಷಮನಾತನುದರಕ್ಕೆ ನೀಡಿ ತಣಿಸಲ್ ಶಕ್ತನಿಲ್ಲೆಲ್ಲಿಯುಂ ೧೬

---

1 ರುಷ (ಗ)

ಅಸುರರಿಪು ಕಮಲಭವ ಸುರಪರ್ಗೆ ನಾಡೆ ಶೋ
ಭಿಸುವ ತತ್ತತ್ಪದವಿಗಳನೀವ ದೇವಂಗೆ
ಮಿಸುಪ ಭಿಕ್ಷನುದೇಕೆ ಹರಿಯಜರ ಗರ್ವಮಂ ಮುಱುಯಲೀ ನೆವದೆ ಬಂದ
ಕುಸುಮಶರರಿಪುಗೆ ಭಿಕ್ಷಾಟನಂ ನಿಂದೆಯೋ
ಮುಸಕದಿಂದಂ ಪರಬ್ರಹ್ಮವಾನೆಂದಜನ
ಮಿಸುಪ ಶಿರಮಂ ಕಿಳ್ತುದದು ಮಹಿಮೆಯಲ್ಲವೇ ಲೋಕದೊಳ್ ಪರಿಭಾವಿಸೆ ೧೭

ಮಿನುಗುತಿರ್ಪ ದಿವ್ಯವಾಹನಚಯಂಗಳಿರೆ
ಮನಸಿಜಹರಂ ಶಾಕ್ವರನುನೇಱು ತಿರುಗುವಂ
ನನಸಿದೇತರ್ಕೆಂಬೊಡಂ ಕೇಳ ಮುನ್ನಾದಿ ಸೃಷ್ಟಿಸಮಯದೊಳೀಶ್ವರಂ
ಘನರೂಪಮಾದೆನ್ನ ರೋಮಕೂಪಂಗಳೊಳ್
ವನಧಿಯೊಳ್ ತೋರ್ಪ ಬುದ್ಬುದದಂತಜಾಂಡತತಿ
ಯೆನಸುಮತಿಸೂಕ್ಷ್ಮರೂಪದಿನಡಂಗಿರುತಿರ್ಕುಮವನೆಲ್ಲಮಂ ತಾಳಲು ೧೮

ಪಿರಿದುಂ ಸಮರ್ಥನಾವಂ ಮತ್ತಮದಱಿಂದೆ
ನಿರುತಮೆನ್ನಿಂದೆನ್ನನೇ ತಾಳ್ದಿಕೊಳ್ವೆನೆನು
ತಿರದೆ ಚಿಂತಿಸಿ ಶಿವಂ ವೃಷಭನಾದಂ ಬಳಿಕ್ಕಾ ವೃಷಭನಾ ಶಿವಂಗೆ
ಹರಿಸದಿಂ ವಾಹನಮುಮಾಯ್ತು ಮಗುಳ್ದದಱಿಂದ
ಮೆರಡನೆಯ ಶಂಭುವೆನಿಸಿದನಾ ವೃಷೇಶ್ವರಂ
ಪರಿಕಿಪೊಡೆ ಸಾಮಾನ್ಯನೇ ಯೋನಿಜನೆ ನಾಡೆ ಸಂಸಾರಿಯೇ ವೃಷಭನು ೧೯

ಎಸೆವ ಕಾಲಾಗ್ನಿರುದ್ರಾಳಿಕಾಂಬಕದೊಳಗೆ
ಲಸಿತಾಗ್ನಿಕಣವಿತತಿ ತೋಱುವಂದದೆ ವಿರಾ
ಜಿಸುವ ಶಿವ ರೋಮಕೂಪಂಗಳೊಳ್ ಬ್ರಹ್ಮಾಂಡಸಮುದಯಂ ತೋಱುತಿರ್ಕುಂ
ನಿಸದಮಿಂತಪ್ಪ ಶಿವನಂ ತಾಳ್ದ ವೃಷಭನಂ
ಪಸುವೆನಲ್ ಬರ್ಕುಮೇ ಭಾವಿಸಲ್ ಮತ್ತೆಯುಂ
ಮುಸಕದಿಂದಲ್ಪನೆನಲಕ್ಕುಮೆ ಚತುರ್ಭುಜನ ವಿಮಲಾವತಾರವೃಷ[1]ನಂ[1] ೨೦

ಸಲೆ ಲೋಕಪಾವನಂ ನಿಖಿಲ ಸುರವಂದಿತಂ
ಲಲಿತವೃಷಭಂ ಜಗದ್ವರ್ತನದೊಳಿರ್ಪನೇ
ನಲಿದು[2][ನೋ][2]ಡಲ್ ಧರ್ಮವಿಗ್ರಹಂ ಕರ್ಮಾನ್ವಿತನೆ ಮಹಾವೃಷಭೇಶ್ವರಂ

---

1 ಭಂ (ಕ)   2 ವೆನೊ (ಕಗಟ)

ನಲವಿನಿಂದಿಂತೆಸೆವ ವೃಷಭಾಧಿಪಂ ಶಿವಂ
ಗೊಲವಿನಿಂ ವಾಹನವೆನಿಕ್ಕುಮಲ್ಲದೆ ನಾಡೆ
ಬಲರಿಪುವಿನೈರಾವತಂ ದುರ್ಮದಾನ್ವಿತಂ ಮದವಿದೂರಂ ವೃಷಭನು ೨೧

ಅನಲವಾಹನವಮದಂ ಪಶು ಮಿಸುಗುವೀ ವೃ[1]ಷಂ[1]
ನೆನೆಸು ಪಶುಪತಿ ಯಮಲುಲಾಯವದು ಭಾವಿಸ
ಲ್ಕೆನಸುಮಂತಕಲೋಕವರ್ತಿಯಿಾ ವೃಷಭನೀಶ್ವರಲೋಕವರ್ತಿ ಸತತಂ
ಮನುಜನಾ ಕೌಣಪನ ವಾಹನಂ ಪರಿಕಿಪೊಡೆ
ಮಿನುಪ ವೃಷಭಂ ನರಾಮರವಂದ್ಯನುದಕಪತಿ
ವಿನುತಯಾನಂ ಯುಕ್ತ ಜಡಪಾಶನೀ ವೃಷಂ ಜಡಪಾಶನಿರ್ಮುಕ್ತನು ೨೨

ಮರುತಯಾನಂ ಸದಾಸಂಚಾರದುಃಖಿತಂ
ಪರವೃಷಂ ದುಃಖವರ್ಜಿತನುತ್ತರಾಶಾರ್ಥಿ
ಹರಸಖಹಯಂ ಸಂತತಂ ತುಷ್ಟಮಾನಸಂ ವೃಷಭೇಶ್ವರಂ ಭಾವಿಸೆ
ನಿರುತಮಿಾಶಾನಯಾನಂ ನಂದಿಯೆನಿಸುಗುಂ
ಭರದಿನೆಮ್ಮಾಳ್ದ ಶೂಲಿಯ ಲಲಾಟೇಕ್ಷಣನ
ಪುರಹರನ ಸರಳವಾಹನವೆಯ್ದೆ ನಂದಿನಾಯಕನೆನಿಸುವುದು ನೋಡಲು ೨೩

ವನಜೋದ್ಭವನ ಹಂಸೆಯದು ಜೀವಹಂಸನೀ
ವಿನುತ ವೃಷಭೇಶ್ವರಂ ಪರಮಹಂಸಂ ಮತ್ತೆ
ವಿನುತ ಹರಿಯಂ ಪೊತ್ತುಬರುತೆ ಗರುಡಂ ವೃಷಭನುಚ್ಛ್ವಾಸನಿಚ್ಛ್ವಾಸದಿಂ
ಕನಕಗಿರಿಯಂ ತಾಗಿ ಮರಳುತ್ತೆ ಮತ್ತೆ ತೊ
ಟ್ಟನೆ ಮೇರುವಂ ತಾಗುತಿಂತು ಬಳಲುತ್ತಿರ್ಪ
ವಿನುತಾಸುತಂ ಸರಿಯೆ ವೃಷಭಂಗಿದರ್ಕೆ ಕೇಳ್ ಪೌರಾಣಸದ್ವಾಕ್ಯ[2]ಮಂ[2] ೨೪

ಪಿರಿದುಮುಚ್ಛ್ವಾಸ ನಿಚ್ಛ್ವಾಸಜೈಷ್ಟ ಎನುತ್ತೆ
ಭರದಿಂದಮುಲಿಯುತಿರ್ಪಂ ವಿಷ್ಣುಮುಖ್ಯರುಂ
ಸರಿಯಲ್ತೆನಲ್ಕವರ ವಾಹನಂಗಳ್ ಸರಿಯೆ ವೃಷಭೇಶ್ವರಂಗೆ ನಿಸದಂ
ನಿರುತಂ ಪ್ರದೋಷಕಾಲದೊಳಾವನೊರ್ವನಾ
ಹರಿಯಂ ತ್ರಯೋದಶಿಯೊಳೀಕ್ಷಿಪಂ ಮತ್ತವಂ
ಹರಿಸದಿಂ ಪನ್ನೆರಳ್ವರಿಸವೆಸಗಿದ ಪುಣ್ಯತತಿ ಕೆಡುಗುಮಾಗಳಂತೆ ೨೫

---

[1] ಷಭ (ಗ) [2] ದಿಂ (ಕ)

ಮಿಗೆ ತ್ರಯೋದಶ್ಯಾಂ ಪ್ರದೋಷೇತು ಎಂದು ತೊ
ಟ್ಟಗೆ ಪೇಳ್ವ ವಾಕ್ಯಮೋ ಮಾನಮಿಾಯರ್ಥಮುಂ
ಬಗೆದು ಪೇಳ್ಗುಂ ತ್ರಯೋದಶ್ಯಾಂ ವಿಶೇಷತಃ ಎಂಬ ಮತ್ತೊಂದು ವಾಕ್ಯಂ
ನೆಗಳ್ದ ಸದ್ವಾಕ್ಯನಿಕರಂಗಳಿಂತೆಲ್ಲವುಂ
ತೆಗಳಕ್ಕುಮಾ ಹರಿಯ ನೋಡಿದೊಡಮೆಂದು ನೆ
ಟ್ಟಗೆ ಬೊಬ್ಬಿಡುತ್ತಿರಲ್ ವಿಷ್ಣು ಸರಿಯೇ ಪರಮವೃಷಭೇಶ್ವರಂಗೆ ಸತತಂ ೨೬

ಧರಣಿಯೊಳಗುಳ್ಳ ತೀರ್ಥಂಗಳೆಲ್ಲಂ ಬಂದು
ವರವೃಷಭನಂಡಮಂ ಸೇರಿರ್ಕುಮಾವಗಂ
ನಿರುತಪ್ರದೋಷಕಾಲದೊಳದಱಿನಾ ವೃಷಭವೃಷಣಮಂ ಮುಟ್ಟುತೊಸೆದು
ಹರನನೀಕ್ಷಿಸೆ ಸಪ್ತಜನ್ಮಕೃತಮಘಮದುಂ
ಭರದೆ ಕೆಟ್ಟಿರ್ಕುಮಿಾಯರ್ಥಮಂ ಸಂತಸದಿ
ನಿರದೆ ಪೇಳುತ್ತಿರ್ಕುಮಂಡ[1]ಮಾಶ್ರಿತ್ಯ ತಿಷ್ಠಂತಿ ಎಂಬೀ ವಾಕ್ಯವು[1] ೨೭

ಇಂತುಮಾ ವೃಷಭನಿಜವೈಭವಮನಳ್ಕಱಿಂ
ಸಂತತಂ ಪೌರಾಣವಚನತತಿ ಪೇಳುತಿರ
ಲೆಂತು ವೃಷಭೇಶ್ವರಂ ಸಾಮಾನ್ಯನಪ್ಪನೆಲೆ ಬೌದ್ಧ ಕೇಳ್ ಮನದಣಿಗಿನಿಂ
ಕಂತುಹರನಾವೆಡೆಯೊಳಿರ್ಪನಾಯೆಡೆಯೊಳಗ
ನಂತತೀರ್ಥಾನೀಕಮಿರ್ಪುವೆಂತಂತೆ ವೃಷ
ಭಂ ತಡೆಯದಿರ್ಪೆಡೆಯೊಳಾ ತೀರ್ಥಮೆಲ್ಲಮಿರ್ಕುಂ ಸಂತತಂ ಧರೆಯೊಳು ೨೮

ಮಿಗೆ ಯತ್ರ ವಾ ದೃಶ್ಯತೇ ಲಿಂಗಮೆಂದು ತೊ
ಟ್ಟಗೆ ಸರ್ವತೀರ್ಥಾನಿ ತತ್ರ ವೈ ಎಂದು ಘ
ಮ್ಮಗೆ ಪೇಳ್ವ ವಾಕ್ಯಮೇ ಮಾನಮಾ ವಿಷ್ಣುವಂ ನೋಡೆ ಪಾಪಂ ವೃಷಭನ
ನೆಗಳ್ದ ವೃಷಣಂ ಮುಟ್ಟೆ ಕಿಡುಗುಮಘಮೆಂಬ ಸೊಂ
ಪೊಗೆವ ವಾಕ್ಯಂ ಕೇಳ ಪಾಪಾಯ ಎನುತೆ ನೆ
ಟ್ಟಗೆ ಮತ್ತೆ ಪದ್ಮಾಕ್ಷದರ್ಶನಂ ಕಥಿತಂ ನೃಣಾಮೆನುತೆ ನುಡಿಗುಮನಿಶಂ ೨೯

ಬಳಿಕಂ ವೃಷಸ್ಯ ವೃಷಣಸ್ಪರ್ಶ ಎನುತಮು
ಜ್ವಳದೆ ಪುಣ್ಯಾಯೇತಿ ಕೀರ್ತಿತೇ ಎನುತಿರಲ್
ವಿಳಸದಮಲ ವೃಷೇಶಮಹಿಮೆಯುಂ ಪೊಗಳಲಾವಂ ಕ್ಷಮಂ ವಸುಧೆಯೊಳಗೆ

---

1 ಲಾಶ್ರಿತ್ಯ ನಿಷ್ಠಂತಿ ಎಂಬ ವಾಕ್ಯಂ (ಗ)

ತಿಳಿದುವಾ ದುಷ್ಟುತಿಃ ಎನುತೆ ಮತ್ತಂ ನೋಡೆ
ಲಳಿತದಿಂದಂ ವೃಷಭಮಾಸಹೂತಿ ಎನುತ್ತೆ
ಲುಳಿತವೇದಂ ಪೇಳುತಿರೆ ವೃಷಭರಾಜನಂ ತಿಳಿಯಲಱಿದಾರ್ಗಮನಿಶಂ ೩೦

ಪರಮದೂಷಕ ಬೌದ್ಧ ಸಾಕ್ಷಾತ್ಪರಂಜ್ಯೋತಿ
ಪರಶಿವಾಕಾರವೃಷಭೇಂದ್ರನಂ ಪಶುವೆಂದು
ಪಿರಿದು ಗಳಪುವಯದಟ ಮಹಿಮೆಯಂ ನೀನಱಿಯಲಳವೆ ಈ ವೃಷಭೇಶನಂ
ಹ[1]ರಿಸ[1]ದಿಂದಂ ಶಿವಂ ವಾಹನಂಗೆಯ್ಯಲದು
ಸರಳತರಕೀರ್ತಿಯಲ್ಲದೆ ನಿಂದೆಯಪ್ಪುದೇ
ಪರಿಭಾವಿಸಲ್ ತಜ್ಞಸಂದೋಹಮಾ ಧರೆಯೊಳವಿರತಂ ಸಮ್ಮುದದೊಳು ೩೧

ಸದಮಲಪ್ರಚುರವಿಶ್ರುತ ಪರಮಭಕ್ತಗಣ
ಪದಸರೋರುಹಸಾಂದ್ರ ಮಕರಂದಪಾನ ಸ
ಮ್ಮುದಿತ ಚಂಚಚ್ಚಂಚರೀಕನನವರತ ಪಂಚಾಕ್ಷರೀಪ್ರಸಿತಹೃದಯಂ
ವಿದಿತ ಮಂಜುಲನೀಲಕಂಠಾಹ್ವಯಂ ಮನೋ
ಮುದದೆ ಪೇಳ್ದುರುತರಾರಾಧ್ಯಚಾರಿತ್ರದೊಳ
ಗಿದು ನೋಡಲಸ್ಥಾಧ್ಯದಿಗಳ ತಾಳ್ದು ಮೆಱೆದ ಪರಶಿವನ ಲೀಲಾಕಥನವು ೩೨

---

1 ರುಷ (ಗ)

# ಹದಿಮೂರನೆಯ ಸಂಧಿ

## *ಗಿರಿಜೆಗೆ ಅರ್ಧಶರೀರವನು-ಗಂಗೆಯು ಧರಿಸಿದುದು

ಸೂಚನೆ: ಗಿರಿಜೆಗರೆಮೆಯ್ಯನೀಶ್ವರನಿತ್ತ ಕಥನವಮಂ
ಹರಿಸಿ[1]ದಿಂ ಗಂಗೆಯಂ ತಾಳ್ದ ಸತ್ಕಥನವಂ
ವಿರಚಿಸೆಂ ಸೂರಸಚಿವೇಂದ್ರ ಕೇಳೆಂದು ಪಾಲ್ಕುಱಿಕೆಸೋಮೇಶನುಸುರ್ದಂ

ಕರಿದಾನವನ ಸೀಳಿಯುವನ ಪೊಸಸಮ್ಮವಮಂ
ಶಿರದೊಳಳವಡಿಸಲಾ ರುಧಿರೋದಕದೆ [2]ನಾಂದು
ಪಿರಿದಾಗಿ[2] ಕೆಂಪಡರ್ದು ಜಡೆಗೆ ತೊಡವಾದ ಬಂಧುರಕಪಾಲಾವಳಿಗಳು
ವರಕಪರ್ದದೊಳಿರ್ದ ಸುರನದಿಯೊಳೊಗೆದ ಸುಂ
ದರ ರಕ್ತಶತಪತ್ರಸಂತತಿಯನನುಕರಿಸಿ
ಕರಮೆಸೆಯಲವಱಿಂದೆ ಶೋಭಿಸುವ ಗುರುನೀಲಕಂಠನೆಮ್ಮಂ ಸಲಹುಗೆ ೧

ಬಗೆಯಲರೆವೆಣ್ಣಾದ ದೈವಕ್ಕದೆಲ್ಲಿತ್ತೊ
ಮಿಗೆ ವಿಭುತ್ವಮದೆಂಬೊಡುತ್ತರಂಗೇಳಿರೆಲೊ
ಸೊಗಸಿನಿಂ ಮುನ್ನೆ ದಕ್ಷಾತ್ಮಜಾಗೌರಿ ತನ್ನಯ ಪಿತಂ ಶಿವನನಿಳಿಸಿ
ತೆಗಳನುಱೆ ಕೇಳಲಾಱದೆ ಪರಮನಿಷ್ಠೆಯಿಂ
ನೆಗಳ್ದ ತನ್ನಂಗಮಂ ವಹ್ನಿಗಾಹುತಿಮಾಡಿ
ಮಗುಳ್ದೊಗೆದು ಶಿವನ ನುತಿಯಿಸಿ ವಾಮಭಾಗಮಂ ಕೈಕೊಂಡಳಾ ಪಾರ್ವತಿ ೨

ಮೃಡನರ್ಧನಾರೀಶ್ವರಂ ದಲೆನಿಸೆಸೆವ ಸೊಂ
ಪಡ[3]ರ್ದ[3] ಪೆಸರಂ [4]ತಾ[4]ಳ್ದನಿದು ನಿಂದೆಯೋ ಅಲ್ತು
ಪೊಡೆಯರಲನುಂ ಬರ್ಮನುಂ ಸುರರುಮಸುರರುಂ ಪರಿತೋಷಮುಣ್ಮುತಿರಲು
ಸಡಗರದಿನೆಮಗೆ ತಾಯ್ತಂದೆಗಳ್ ಭಾವಿಸಲ್
ಮೃಡೆಯುಮಭವನುಮೆನುತೆ ಸೇವಿಸುತೆ ಸಂತಸಂ
ಬಡುತಿರ್ಪರೊಲ್ದು ಕಾಂಡವಶಾಖೆಯಿಾಯರ್ಧಮಂ ಪೇಳ್ಗುಮೆಂತೆಂಬೊಡೆ ೩

---

1 ರುಷ (ಗ) 2 ನನೆದು।ರುಧಿರವಾಗಿ (ಗ) 3 ರ್ದು (ಗ) 4 ದಾ (ಗ)

* (ಕಗ) ಪ್ರತಿಗಳಲ್ಲಿಲ್ಲ.

ಪಿರಿದು ಸ ಪತಿಶ್ಚ ಸಪನೀಜೇದೆನುತ್ತಿರ್ಕು
ಮುರುತರಧ್ಯಾನದಿಂದಂ ಬಳಿಕಮೋಗಳುಂ
ವರವೀರಶೈವವ್ರತಸ್ಥರ್ಗೆ ಲಿಂಗನಿಷ್ಠಾಪರರ್ಗೆ ಕೃಪೆಯಿಂನಭವಂ
ವರಮಾತೃಪಿತೃಕರ್ಗಳಾಗವೇಳ್ಕೆಂದು ಪು
ತ್ರಿರದೊಂದೆರೂಪಿನಿಂದರ್ಧನಾರೀತನುವ
ಭರದೆ ತಳೆದಂ ವಲಂ ವ್ಯಾಸಾಷ್ಟಕಂ ಪೇಳ್ತೀಯರ್ಥಮಂ ಮುದದೊಳು ೪

ನಿರುತಂ ನ ವಜ್ರಚಕ್ರಾಂಕಮೆನುತುಂ ಮತ್ತೆ
ಭರದಿಂ ಸರೋರುಹಾಂಕಂ ಎನುತೆ ನುಡಿಯುತಿರೆ
ಕರದ ಕಂಕಣಕೇಕೆ ದರ್ಪಣಂ ಶಿವಶಕ್ತಿಸಂಪುಟದೆ ಲೋಕಮೆಲ್ಲಂ
ಚರಿಸುತಿರ್ಕುಂ ವ್ಯಾಸಹಸ್ತಮೇ ಸಾಕ್ಷಿಯೀ
ಧರೆಯೊಳೀಗಂ ಶಿವನ ಮಹಿಮೆಯುಂ ನೀಚರಱಿ
ಮರೆಯಿದೇಂ ನಿಂದೆಯೋ ಅರ್ಧನಾರೀಶರೀರಂ ಶಂಭುಗೆಲೆ ಬೌದ್ಧನೆ ೫

ಗಂಗೆಯುಂ ಪರಶಿವನದೇತರ್ಕೆ ಮುಡಿಯೊಳಗೆ
ತಾಂಗಿದಂ ಪೇಳೆಂಬುದರ್ಕೆ ಮಱುಮಾತುಗೇ
ಳಿಂಗದಿರನುದಯಿಸಲ್ಕದಱ ಬರವಿಂಗೆ ಪಾಲ್ಗಡಲುರ್ಬಿ ಕೊರ್ಬಿ ದಿವಮಂ
ಪಿಂಗದೆಯ್ದಲ್ಕಾಗ ಗಂಗಾಪಯಃಪೂರ
ತುಂಗಮಾಲಾನಿಕರದೊಳ್ ನಾಡೆ ಭುವನತ್ರ
ಯಂಗಳೀಸಾಡುತಿರೆ ಸುರಸಮಿತಿ ಬೆದಱಿ ಮಱಿಮೊಕ್ಕರಾ ಪರಮೇಶನ ೬

ಪರಶಿವಂ ನೋಡಿ ನಸುನಗುತವರ್ಗಭಯಮಂ
ಹರಿಸ[1]ದಿಂ ಕೊಟ್ಟು ಮತ್ತಾ ಗಂಗೆಯಂ ತನ್ನ
ಸಿರಿ[2]ಮಗುಡ[2]ದೊಳ್ ಮಲ್ಲಿಗೆಯ ದಂಡೆಯಂತೆ ಸೂಡುತ್ತೆ ಸುರಸಂದೋಹಮಂ
ಭರದೆ ಕಾಯ್ದಂ ಶೂಲಿಯೆನುತೆ ಸಮ್ಮೋದದೊಡ
ಮೆರೆದು ಶೈವಪುರಾಣಮುಲಿಗುಮಿದು ನಿಂದೆಯೇ
ಧರೆಯ ರಕ್ಷಿಪುದರ್ಕೆ ಗಂಗೆಯಂ ತಾಳ್ದುದಾ ಶಂಭುವಿಂಗೆಲೆ ಬೌದ್ಧನೆ ೭

---

1 ರುಷ (ಗ) 2 ಮಕುಟ (ಗ)

28

ಮರಳಿಯಾ ಗಂಗೆ ಭೂಮಿಯನೆಯ್ದಿತೇಕೆಂಬೊ
ಡಿರದೆ ಕೇಳೆಲೊ ಮುನ್ನೆ ಕಪಿಲ ಕೋಪಾಗ್ನಿಯಿಂ
ದುರಿದಳಿದ ಸಗರರಂ ಮೋಕ್ಷವೆಯ್ದಿಸುವುಜ್ಜುಗದಿನವರ ವಂಶೋದ್ಭವಂ
ವರ ಭಗೀರಥನೊಸೆದು ಗಂಗೆಯಂ ಕುಱಿತುಗ್ರ
ಪರಮತಪಮಂ ತ್ರಿಕೋಟ್ಯಬ್ದಂ ನಿಮಿರ್ಚಲ್ಕೆ
ಪರಿತುಷ್ಟೆಯಾಗಿ ತದ್ಗಂಗೆ ಮತ್ತಾಗಳೇ ಪ್ರತ್ಯಕ್ಷಮಾಗಿ ಮುದದಿಂ ೮

ನುಡಿದಳಿಲೆ ನೃಪ ನಿನ್ನ ಭಕ್ತಿಗಾಂ ಮೆಚ್ಚಿದೆಂ
ಪೊಡವಿಗೆಯ್ದುವೆನೆನ್ನ ತುಂಗಪ್ರವಾಹದು
ಗ್ಗಡಮನೀ ಧರೆ ತಾಳಲಾಱದದಱಿಂದೀಶನಂ ಭಜಿಸಿ ತುರಿತದಿಂದಂ
ಜಡೆಮುಡಿಯನೆಡೆಮಾಡೆನಲ್ ಭಗೀರಥನೆಯ್ದೆ
ಮೃಡನ ಮೆಚ್ಚಿಸಿ ತದ್ವರಂಬಡೆದು ಗಂಗೆಯಂ
ಸಡಗರದೆ ಶಿವಜೂಟಮೆಯ್ದಿಸಲ್ಕಾ ಗಂಗೆ ಪಿಂಗಿಪೋಯ್ತಾ ಜಡೆಯೊಳು ೯

ಮಗುಳ್ದು ಮತ್ತಾ ಭಗೀರಥನಭವನಂ ಕುಱಿತು
ಸೊಗಸಿನಿಂದಂ ತಪಂಗೆಯೆ ಶಿವಂ ಮೆಚ್ಚಿ ತೊ
ಟ್ಟಗೆ ಜಟಾನ್ವಿತವಿಭೂತಿಯನುಂಗುಟದ ನಖಾಗ್ರದೆ ಮತ್ತೆ ಕಿಱುಕುಣಿಕೆಯು
ಉಗುರ ತುದಿಯಿಂ ತೆಗೆದು ಮಿಡಿದನೆಂದಾ ಶ್ರುತಿಯೆ
ಬಗೆಯಲಂಗುಷ್ಟ ಎನುತುಂ ಬಳಿಕ್ಕೇಗಳುಂ
ಸೊಗಸಿನಿಂ ತರ್ಜನೀಭ್ಯಾಮೆನುತ್ತುಂ ಮತ್ತೆ [1]ತದ್ಭಸ್ಮ ಎನುತಿರ್ಪುದು[1] ೧೦

ಮರಳಿಯುಂ ಖ್ಯಾತಾರ್ ನಖಾಗ್ರಾದೆನುತ್ತೆ ಶ್ರುತಿ
ಪಿರಿದಪತದೆನುತೆ ಮತ್ತಂ ನುಡಿಯುತಿರ್ಕುಮು
ಬ್ಬರದಿಂದೆ ಭಸ್ಮವರ್ಣಂ ತತೋಜ್ವಲಮೆಂದು ಬಳಿಕಮದಱಿಂ ಭಾವಿಸೆ
ನಿರುತಂ ನಖಾಗ್ರಸಂಭವೆಯೆನಿಸಿ[2]ತಾ ನದಿಯ
ಸರಳಸಲಿಲಂ ಭಸ್ಮದಂತೆ ಬಿಳಿದಾಗಿರ್ಕು
ಪಿರಿದು ಮತ್ತಾ ನದಿಯೆ ಭಾಗೀರಥೀನಾಮದಿಂ ಖ್ಯಾತಮಾಗಿರ್ಪುದು ೧೧

ಇಂತು ಗಂಗೆಯ ತಂದು ತತ್ಪ್ರವಾಹಮನೊಸೆದು
ಸಂತತಂ ತನ್ನ ವಂಶಜರ ಮೇಲ್ ಪರಿಸಲ್ಕೆ
ಸಂತಸದಿನವರೆಲ್ಲರಪವರ್ಗಮಂ ಸೇರಿ [3]ಸೊಕ್ಕಿ[3]ಮಿರ್ದರತಿಶಯದೊಳು

---

[1] ತದ್ಭಸ್ಮ ಸಭೆ ನುತಿಸುತಿರ್ಪುದು (ಕ) [2] ತೋ (ಗಟ) [3] ಸುಖ (ಗ)

ಎಂತಪ್ಪ ಕೃತಪುಣ್ಯನೋ ಭಗೀರಥನೆಂದು
ಸಂತರ್ಕಳೊಸೆದು ಕೀರ್ತಿಸುತಿರ್ಪರೆಂದು ಮುದ
ಮಂ ತಳೆದು ಶಿವಪುರಾಣಂ ಪೇಳುತಿರ್ಕುಮಿನ್ನುಂ ಕೇಳ ನೀಚಬೌದ್ಧ ೧೨

ಸುರುಚಿರ ಸ್ವಚ್ಛಂದಲಲಿತಭೈರವಿಯೆಂಬ
ಸರಳಾಗಮಂ ಪೇಳ್ಗುಮಿಂತೆಂದು ಮುನ್ನೆ ಪುರ
ಹರನು ಮಿಗೆ ಭೂಮಿವಿಸ್ತಾರಮಂ ವರ್ಣಿಸುವ ವೇಳೆಯೊಳ್ ಮೇರುಗಿರಿಯ
ವರ ಮಹತ್ವಮನೊರೆಯುತಾ ಗಿರಿಯ ನಾಲ್ದೆಸೆಯ
ನಿರದಿಳಿದು ಗಂಗೆ ಧರಣಿಯನೆಯ್ದಿತೆನೆ ಗಿರಿಜೆ
ಕರಕಮಲಮಂ ಮುಗಿದು ಸುರಸಿದ್ಧವಂದ್ಯ ಸರ್ವೇಶ್ವರ ಮಹಾದೇವನೆ ೧೩

ವರ ಗಂಗೆಯುತ್ಪತ್ತಿಯಂ ಮತ್ತೆ ಮೇರುವಂ
ಭರದಿನಾ ಗಂಗೆ ಸಾರ್ದುದನುರ್ವಿಗಾ ಗಂಗೆ
ನಿರುತದಿಂ ಬಂದುದನಿದೆಲ್ಲಮಂ ಪೇಳಿಮೆನಗೆನೆ ಶಂಭು ಸರ್ವಜ್ಞನು
ಕರಮೆ ನುಡಿದಂ ಜಗನ್ಮಾತೆಯೆ ಮಹಾದೇವಿ
ಹ[1]ರಿಸ[1]ದಿಂದಂ ಕೇಳ ಮುನ್ನೆ ನೀ[2]ನೆಂದು[2] ಭಾ
ಸುರ ದೇವಿಯಾಗಿರುತ್ತೊಂದುದಿವಸಂ ಕ್ರೀಡೆಯಿಂದೆಮ್ಮ ನಯನಂಗಳಂ ೧೪

ಆವಳಿಯದಂತೆ ಪಿಂಗಡೆಯಿಂದೆ ಬಂದು ನೀಂ
ತೀವಿ ಮುಚ್ಚಲ್ ನೊಸಲ ಕಣ್ದೆಱೆಯಲಾವದಱಿ
ನೋವದುರಿ ಪೊಱಪೊಣ್ಮಿ ತುಹಿನಗಿರಿಯಂ ಬಳಸೆ ಭೀತಿಯಂ ತಾಳ್ದು ನೀನು
ಆ ವಿಲೋಚನಮನುಱೆ ಮುಚ್ಚಿರ್ದ ಕೈದೆಗೆದು
ದೇವದೇವೆನುತೆ ಪೊಡಮಟ್ಟೆಮಗೆ ಪಣೆಗಣ್ಣ
ನೀವು ಬಿರ್ಚಲ್ಕೆ ಕಾರಣಮದೇನೆಂದು ನೀಂ ಬೆಸಗೊಳಲ್ ನುಡಿದೆವಂದು ೧೫

ಎಲೆ ದೇವಿ ಕೇಳ್ ಚಂದ್ರರವಿಗಳೆಮ್ಮಯ ಕಣ್ಗ
ಳೊಲವಿನಿಂ ನೀನವಂ ಮುಚ್ಚಲೀ ಲೋಕಮಂ
ಸಲೆ ಮರ್ವು ಪರ್ಬುಗುಂ ನಿನ್ನ ಕೈದೆಗೆಯೆಂದು ಪೇಳಲಮ್ಮದೆ ಲೋಕದ
ಬಲಿದ ಕೌ[3]ಳ್ತ[3]ಲೆಗಳೆಯಲೆಮ್ಮ ಭಾಳಾಕ್ಷಮಂ
ನಲಿದು ತೆಗೆದೆವದರ್ಕೆ ನೀಂ ಬೆದಱಬೇಡೆನು
ತ್ತಲರ್ದುನುಡಿವಾ ಕಾಲದೊಳ್ ನಿನ್ನ ಕೈಸೋಂಕಿನಿಂದೆಮ್ಮ ನಯನದೊಳಗೆ ೧೬

---

[1] ರುಷ (ಗ)   [2] ನೆಮ್ಮ (ಗ)   [3] ತ್ತ (ಗ)

ಪಿರಿದುರ್ಕಿದಾನಂದಜಲಧಾರೆ ನಿನ್ನ ಭಾ
ಸುರದಶಾಂಗುಲಿಗಳಗ್ರದಿನೊಸದುರ್ಱ ಭೂಮಿಯಂ
ಭರದಿಂದವೆಯ್ದಿ ಪೆಂಪಿನ ಪತ್ತುನದಿಗಳಾದುವು ಪುತ್ತಮುವಱೊಳೊಂದು
ಹರಿಯೆಮ್ಮ ಕರುಣದಿಂ ತನ್ನ ವೈಕುಂಠಕ್ಕೆ
ಹ[1]ರಿಸ[1]ದಿಂ ಕೊಂಡೊಯ್ದನಜನೆಮ್ಮ ಭಜಿಸಿ ಮ
ತ್ತಿರದೆ ತನ್ನಯ ಲೋಕಕೊಂದನೊಯ್ದಂ ಸ್ವರ್ಗಕೊಂದನೊಯ್ದಂ ಸುರಪನು ೧೭

ಬಳಿಕದಮಲೇಂದುಮಂಡಲಮನಣಿಯರಮೊಸೆದು
ಬಳಸಿ ದಿವದಲ್ಲಿ ಮಂದಾಕಿನಿಯೆನಿಪ್ಪ ಸ
ಲ್ಲಳಿತ ಪೆಸರಂ ಪಡೆಯಿತುಳಿದೇೞ್ ಸಮಂತು ಗಂಗಾನಾಮದಿಂದಮುರ್ಬಿ
ಅ[2]ಳ[2]ದುರ್ಱ ಮೂಲೋಕಮಂ ತೇಂಕಾಡಿಸುತ್ತಿರಲ್
ಸಲಿಲಜೋದ್ಭವ ವಿಷ್ಣು ಸುರಪಾದಿ ನಿರ್ಜರರ್
ಪೆಳಱಿ ಬಂದೆಮ್ಮ ಕೀರ್ತಿಸಿದರೆಲೆ ದೇವಾರ್ಥಿ ಸಿಂಧುಕುಂಭೋದ್ಭೂತನೆ ೧೮

ಸುರರ ದುಃಖಾಬ್ಜ ಭಾಸ್ವತ್ಸುಧಾಭಾನು ನಿ
ರ್ಜರಮನ್ಯು ಪರ್ಜನ್ಯ ಪೃಷದಶ್ವ ಗಿರಿಶ ಭಾ
ಸುರಕೃಪಾಶರಧಿ ಗಂಗಾಪೂರಮಂ ತವಿಸಿ ರಕ್ಷಿಪ್ಪುದೆಮ್ಮನೆಂದು
ಭರದೆ ಮೊರೆಯಿಡಲವರ್ಗಭಯಮಂ ಕೊಟ್ಟೆಮ್ಮ
ಸಿರಿಮುಡಿಯೊಳಾ ಗಂಗೆಯಂ ಚಂದ್ರಕಳೆಯಂತೆ
ಧರಿಸಲಮರರ್ ಬೆಱಗುವೊಡೆದು ಪೊಡಮಡುತೆಮ್ಮ ನುತಿಸಿದರ್ ಮರಳಿ ಮರಳಿ ೧೯

ಎಲೆ ಜಗನ್ನಾಥ ಮುಂ ಪೊಸಬಿಸಂ ತಗುಳ್ದೆಮ್ಮ
ಕೊಲುತಿರಲ್ಕಂದದಂ ಕೊರಲೆಡೆಯೊಳಳವಡಿಸಿ
ನಲಿದೆಮ್ಮನೆಲ್ಲರಂ ಕಾಯ್ದೆಯಿಂದೀಗಳೀ ಗಂಗೆಯಂ [3]ಮುಡಿಯೆಡೆ[3]ಯೊಳು
ಒಲವಿನಿಂ ಧರಿಸಿ ಮಗುಳ್ದೆಮ್ಮೆಲ್ಲರಂ ಪೊರೆದೆ
ಯಲಘುಕರುಣಾಕರನೆ ಗಂಗಾಪ್ರವಾಹದಿಂ
ಲಲಿತಸುರಲೋಕಮೆಲ್ಲಂ ಪೂತಮಾಯ್ತು ಬಳಿಕಿದಱಂತೆ ನರಲೋಕವು ೨೦

ಪಿರಿದುಂ ಪವಿತ್ರಮಾಗಲ್ವೇಳ್ಕುಮೆಂದ[4]ವಂ[4]
ಸುರರೆಲ್ಲರಂ ಪ್ರಾರ್ಥಿಸಲ್ಕವರ ನುಡಿಗೇಳ್ದು
ಹ[5]ರಿಸ[5]ದಿಂ ಗಂಗಾಪ್ರವಾಹಮಂ ಭೂಮಿಗೆಯ್ದಿಸಲುಜ್ಜುಗಂಗೆಯ್ಯುತೆ

---

[1] ರುಷ (ಗ) [2] ಲ (ಗ) [3] ಜಡೆಮುಡಿ (ಗ) [4] ವರ್ (ಗ) [5] ರುಷ (ಗ)

ಇರುತೊಂದನಾಳೋಚಸಂಗೆಯ್ದ್ದವೆಲೆ ಗಿರಿಜೆ
ಪರಮಗಂಗಾಪೂರಮತಿವೇಗದಿಂದೆಯ್ದಿ
ಧರೆ ಕರಗಿಪೋಕುಮೆನುತೆಮ್ಮ ನಿಡುಜಡೆದುದಿಯು ಕನಕಗಿರಿಯಗ್ರದಲ್ಲಿ ೨೧

ಇರಿಸಲದನೆಯ್ದಿ ಬಳಿವಿಡಿದು ಗಂಗಾಪೂರ
ಮಿರದಿಳಿದು ಕನಕಾದ್ರಿಗೆಯ್ದಿ ಮತ್ತಲ್ಲಿಂದೆ
ಧರೆಯನೆಯ್ದಿ ತ್ತು ತದ್ಗಿರಿಪೂರ್ವಭಾಗದಿಂದಿಳಿದ ಗಂಗಾಪೂರಮೆ
ಭರದಿನೆಯ್ದಿತ್ತು ಪೂರ್ವಾಂಬುಧಿಯನದು ವಲಂ
ಸರಳ ಸೀತಾನದಿಯೆನಿಸಿ ಮತ್ತಮಾ ಕನಕ
ಗಿರಿಯ ದಕ್ಷಿಣದ ನದಿ ತೆಂಕಗಡಲೆಯ್ದಿತ್ತು ದಕ್ಷಿಣೆಯೆನಿಪ್ಪ ಪೆಸರಿಂ ೨೨

ಮಿಗೆ ಸುನಂದೆಯೆನಿಪ್ಪ ಪೆಸರಿಂದಮಾ ಗಿರಿಯ
ನೆಗಳ್ದ ಪಶ್ಚಿಮದಿಕ್ಕಿನಿಂ ಪಡುವಣಬ್ಧಿಯಂ
ಸೊಗಸಿನಿಂ[ದಿರ]ದೆಯ್ದಿ ಗಿರಿಯುತ್ತರದಿನೊಗೆದು ರುದ್ರಸೋಮಾಖ್ಯದಿಂದಂ
ಅಗಲದುತ್ತರಶರಧಿಯಂ ಕೂಡಿತೆಂದು ವರ
ಮೃಗಧರಧರಂ ಗಂಗೆಯುತ್ಪತ್ತಿಯಂ ನಾಡೆ
ಅಗಜೆಗೊರೆದಂ ಬಿತ್ತರದೆ ಬಳಿಕ್ಕಿದು ನೋಡೆ ಲೋಕಪ್ರಸಿದ್ಧಮೆನಿಕುಂ ೨೩

ಹರಿ ವಾಮನಾವತಾರದೆ ಮುನ್ನೆ ಬಲಿಯೆಡೆಗೆ
ಭರದೆ ಯಾಚಿಸಬಂದು ಪೂರ್ವರೂಪಂ ಬಿಟ್ಟು
ಪರಮ ತ್ರಿವಿಕ್ರಮಾಕೃತಿಯಾಗಿ ತನ್ನ ಕಾಲೊಂದನಾಗಸಕೆ ನೀಡೆ
ಸರಸಿಜಭವಂ ತೊಳೆದನಾ ಕಾಲ ತನ್ನ ಭಾ
ಸುರ ಕಮಂಡಲುಗತಾಂಬುವಿನಿಂದೆ ತಜ್ಜಲಂ
ಪರಿತಂದು ಗಂಗೆಯೆನಿಸಿತ್ತೆಂಬ ನುಡಿಗೇಳಲಾಗದದು ದೋಷಕರವು ೨೪

ಹರಿಯ ಕಾಲ್ದೊಳೆದ ನೀರಖಿಳಲೋಕಂಗಳಂ
ಭರದೆ ತೇಂಕಾಡಿಸಲ್ಕರ್ಹಮೇ ವಿಶ್ವಮಂ
ಪಿರಿದು ಮುಳುಗಿಪ ನೀರ್ಗೆ ಸರಿಯೆ ಘಟಜಲಮೆಲವೊ ಆವಜಾಂಡದೊಳಿರ್ಪುದು
ನಿರುತಮಿಂತಪ್ಪ ಘಟಮಾ ಘಟವನವನಿಯೊಳ್
ಕರದೆ ಪಿಡಿವವನಾವನಲ್ಲಿರ್ದ ಸಲಿಲಮದು
ಕರಮೆ ಮುನ್ನಾವೆಡೆಯೊಳಿರ್ದು ಬಂದಿತೊ ಮುನ್ನ ಜಲಮಿಲ್ಲದಿರ್ದೆಡೆಯೊಳು ೨೫

ವನಜಾಕ್ಷನಡಿರ್ದೊಳೆದ ನೀರೆ ತದ್ಗಂಗೆ ತಾ
ನೆನಿಸಿದೊಡೆ ಗಂಗಾಪ್ರವಾಹಕ್ಕೆ ಪೆಳಜು ತೊ
ಟ್ಟನೆ ವಿಷ್ಣು ಬಂದು ಪರಶಿವನ ಮಱಿವುಕ್ಕನೇತರ್ಕೆಂದು ಭಕ್ತಿಯಿಂದಂ
ಮಿನುಗುವಾಕಾಶಕ್ಕೆ ವಿಷ್ಣುಪದವೆಂದು ಚ
ಕ್ಕನೆ ನಾಮಮುಂಟಾದ ದೂಸಜುಂದೀ ಗಂಗೆ
ಸನಯದಿಂ ವಿಷ್ಣುಪದಿಯೆನಿಸಿ ಜಗದೊಳ್ ಪ್ರಸಿದ್ಧತೆವೆತ್ತು ಶೋಭಿಸುವುದು ೨೬

ಅಸುರಾರಿಯಡಿಗೆಲ್ಲಿಯಾದೊಡಂ ವ್ಯೋಮವೆಂ
ದೆಸೆವ ಪೆಸರುಂಟೆ ತದ್ವ್ಯೋಮಕ್ಕೆ ಭಾವಿಸಲ್
ಮಿಸುಪ ಹರಿಪದವೆಂಬ ನಾಮಮುಂಟೇ ಮಂತಣಂಗೆಯ್ದು ನೋಡೆ ನಿಸದಂ
ಒಸೆದು ಮಂಡೂಕಕ್ಕೆ ವಿಷ್ಣುವಿನ ನಾಮಮಾ
ದಸಮಹರಿಯೆಂಬ ಶಬ್ದಂ ವರ್ತಿಸಲ್ಕೆ ಮ
ತ್ತಸವಸಂ ಭೇಕನಾ ಕಮಲಾಕ್ಷನಪ್ಪದೇ ಮೂಲೋಕದೊಳ್ ಭಾವಿಸೆ ೨೭

ಸಲೆ ಯೌಗಿಕಾರ್ಥವಶದಿಂದಮಾ ಶಬ್ದಂಗ
ಳಲಘು ಭಿನ್ನವ್ಯಕ್ತಿವಾಚಕಂಗಳುಮಾಗಿ
ನಲವಿನಿಂ ತೋರ್ಕುಮದುಕಾರಣಂ ಹರಿಚರಣಸಲಿಲಮಾ ಗಂಗೆಯೆಂದು
ಒಲವಿನಿಂ ನುಡಿಯಲಾಗದು ಮತ್ತಮಾ ಹರಿಯ
ಲುಲಿತ ಪದವಾರಿಯಿಾ ಗಂಗೆಯೆಂಬವರವನ
ಸಲಿಲಜಾಕ್ಷನ ಸಾವಸೆಣಿಸರೇಕೀ ಧರೆಯೊಳದನೆಯ್ದೆ ಕೇಳ್ ಪೇಳ್ವೆ[1]ನು[1] ೨೮

ವನಜಾಕ್ಷನಾಗಸಕೆ ತನ್ನ ಕಾಲಂ ನೀಡೆ
ಮನಸಿಜಹರಂ ಮುಳಿದು ಕೀಳಲಾ ಕಾಲೊಡನೆ
ಸನಯದಿಂದಂ ಬಂದ ಬೆನ್ನ ನಿಟ್ಟೆಲ್ವನಭವಂ ತನ್ನ ಹಸ್ತದಲ್ಲಿ
ಮಿನುಪ ಖಟ್ವಾಂಗಮಂ ಮಾಡಿ ಪಿಡಿದನಿದರ್ಕೆ
ವಿನಯದಿಂದಂ ತ್ರಿವಿಕ್ರಮ ಮಹಾಕಂಕಾಳ
ಯೆನುತಿರ್ಪ ತನ್ಮಹಾನಾಟಕಾಖ್ಯಗ್ರಂಥವೇ ಸಾಕ್ಷಿಯಿದನಱಿಯದೆ ೨೯

ಹರಿಯ ಕಾಲ್ಗರ್ಚಿದಾ ನೀರ್ ಗಂಗೆಯಾಯ್ತೆಂದು
ಪಿರಿದು ಗಳಪುವರವಂಗೆಲ್ಲಿತ್ತೊ ಕಾಲ್ಬಗೆಯ
ಲುರುತರ ಗ್ರಾಮವಿಲ್ಲದೆ ಸೀಮೆಯುಂಟೆ ಪರಿಭಾವಿಸುವೊಡೀ ಧರೆಯೊಳು

---

[1] ವು (ಗ) [2] ನಿ (ಗ)

ನಿರುತಂ ತ್ರಿವಿಕ್ರಮಂ ಗಡಿಯುಳ್ಳೊಡೊರ್ವನಾ
ಚರಣಮಂ ತೊಳೆವನದುಮಂತಿರ್ಕೆ ಬಲಿವೈರಿ
ಹ[1]ರಿಸ[1]ದಿಂ ಕಾಲನಾಗಸಕೆ ನೀಡಲ್ಕದುಂ ಬ್ರಹ್ಮಾಂಡಮಂ ತಾಗಲು ೩೦

ಜಲವೊಸರಲಲ್ಲಿಂದಮಾ ಜಲಂ ತದ್ವಿಷ್ಣು
ಲಲಿತಚರಣೋದಕಮೆ ಅಲ್ಲದಂತಿರ್ಕೆ ನಿ
ರ್ಮಲ ಜಹ್ನುವೊಳಗವಿದು ಬಳಿಕಮಾ ಜಹ್ನುವಿಂದೊಗೆದು ಮೂಲೋಕವಱಿಯೆ
ನಲಿದು ಜಾಹ್ನವಿಯೆನಿಸಿತಾ ಗಂಗೆಯಂತೆವೊಲ್
ಸಲೆ ಕೃಷ್ಣಪಾದಭವೆಯೆನಿಸಿ[2]ತ್ತೆ[2] ಗಂಗೆ ಮ
ತ್ತೆಲೆ ಬೌದ್ಧನೇ ವಿಷ್ಣುದೀರ್ಘಿಕೆಯೊ ಗಂಗೆ ಸುರದೀರ್ಘಿಕೆಯೊ ಭಾವಿಸುವೊಡೆ ೩೧

ಪರಿಕಿಸಲ್ ಸ್ವರ್ನದಿಯೊ ಹರಿಲೋಕನದಿಯೊ ಮ
ತ್ತೊರು ವಿಯದ್ಗಂಗೆಯೋ ಪದಗಂಗೆಯೋ ಬಳಿ
ಕ್ಕರರೆ ಮಂದಾಕಿನಿಯೊ ವೈಷ್ಣವಿಯೊ ಗಂಗಾಭಿಧಾನಮಿಾ ಲೋಕದೊಳಗೆ
ನಿರುತಂ ಯಥಾರ್ಥಮಱಿಯದೆ ಬಾಯ್ಗೆ ಬಂದುದಂ
ಕರಮೆ ಜಲುಚುವ ನರನ ಮುಖವಿವರದಿಂ ಕ್ರಿಮಿಗ
ಳಿರದೆ ಸುರಿಯವೆ ದುರಾತ್ಮರ ದುರ್ವಚನಗಳಂ ತಕ್ಕರೊಸೆದಾಲಿಸುವರೆ ೩೨

ಪಿರಿದಲ್ಪದಿನದೊಳಾ ಬಲಿಬಂಧಮೆಂಬುದದು
ಭರದಿನಾ ದಿನದೊಳ್ ತ್ರಿವಿಕ್ರಮಂ ಗಗನಕ್ಕೆ
ಹ[3]ರಿಸ[3]ದಿಂ ಕಾಲ್ನೀಡಲಜನದಂ ನಿಜಕಮಂಡಲದುದಕದಿಂ ತೊಳೆಯಲು
ಭರದಿನಾ ಜಲದಿಂದೆ ಗಂಗೆ ಪುಟ್ಟಿತ್ತು ಗಡ
ನಿರುತಮಿಂತಪ್ಪಬದ್ಧಂಗೇಳತಕ್ಕುದೇ
ವರ ಪುರಾಣವಿರುದ್ಧಮಿಾವಾಕ್ಯವಿನ್ನೆ ಕೇಳೊಸೆದೆಮ್ಮ ನೀಲಗಳನು ೩೩

ಮಿಸುಪನೇಕಯುಗಂಗಳೆಯ್ದೆ ಪೋಗಲ್ ಮತ್ತೆ
ಮಸಕದಿಂದತ್ತತ್ತ ಮುನ್ನೆ ಗಿರಿಜಾತೆಯೊಡ
ನುಸುರ್ದನೀ ಗಂಗೆಯುತ್ಪತ್ತಿಕಾರಣಮನಾ ಯುಗಕೋಟಿ ಪೋಗೆ ಮತ್ತಂ
ನಿಸದಂ ಭಗೀರಥಂ ತಂದುದಂ ಬಳಿಕದಂ
ಸಸಿನೆ ಮುಡಿಯೊಳ್ ತಳೆದುದಂ ಭೂಮಿಗೆಯ್ದಿದುದ
ನೊಸೆದಿಂತನಾದಿಯೊಳ್ ಪುಟ್ಟಿದಾ ಗಂಗೆ ವಾಮನನಡಿಯೊಳೆಂತೊಗೆದುದು ೩೪

---

1 ರುಷ (ಗ) 2 ತೇ (ಗ) 3 ರುಷ (ಗ)

ಇದಱಿಂದೆ ಮುನ್ನಾದ ಮತ್ಸ್ಯಾದಿ ರೂಪಂಗ
ಳೊದವಿದಾ ಗಂಗೆಯಿಂದಿತ್ತಿತ್ತ ಪುಟ್ಟಿದುವು
ವಿದಿತ ವಾಮನ ಚರಣದಿಂ ಗಂಗೆ ಪುಟ್ಟಿತೆಂಬುದು ನೋಡೆ ಮಿಗೆ ವಿರುದ್ಧಂ
ಪುದಿದ ಮತ್ಸ್ಯಾವತಾರಂ ವಿಷ್ಣುವಿಂಗೆ ಸಲೆ
ಮೊದಲೊಳಿಸೆವವತಾರಮೆನಿಕುಮಾ ಮತ್ಸ್ಯಮುಂ
ಮುದದೆ ನೀರೊಳಗಲ್ಲದೊಗೆಯದಂದೆಲ್ಲಿರ್ದು ಗಂಗೆ ಜನಿಸಿತೊ ಭಾವಿಸೆ ೩೫

ಮಿಸುಪಗಸ್ತ್ಯಮುನೀಶನರ್ಘ್ಯಮಂ ಕುಡುವೆಡೆಯೊ
ಳೊಸೆದಂಜಲಿಯೊಳೊಂದು ಮೀನ್ ಪೊಳೆಯೆ ಪೊಂಬಣ್ಣ
ದೆಸೆಕದಿಂದದನೀಕ್ಷಿಸುತ್ತಿರಲ್ ನುಡಿಯಿತೆಲೆ ಮುನಿಪ ಬಿಡಿಮೆನ್ನನೆಂದು
ಬಿಸವಂದಗೊಳುತೆ ಮುನಿ ನುಡಿಯೆ ನೀನಾರ್ಗೆಂದು
ಮಸಕದಿಂ ನುಡಿಯಿತಾಂ ವಿಷ್ಣು ಭೃಗುಶಾಪದಿಂ
ದೆಸೆವ ಮತ್ಸ್ಯಾವತಾರಂದಾಳ್ದೆನೆಂದು ಮತ್ಸ್ಯಂ ಪೇಳಿತತಿಶಯದೊಳು ೩೬

ಪರಮ ಮತ್ಸ್ಯಪುರಾಣದೊಳ್ ಪೇಳ್ದ ಕಥನಮಿದು
ನಿರುತಮಿದಱಿಂ ವಾಮನಾವತಾರಂ ಮೊದಲೆ
ಪರಿಭಾವಿಪೊಡೆ ವಾಮನಾಂಘ್ರಿಯೊಳಗೆಂತುದಿಸಿತಾ ಗಂಗೆ ಲೋಕದಲ್ಲಿ
ಮರಳಿ ಕೂರ್ಮಂ ಜಲಧಿಯಲ್ಲಿ ಜನಿಯಿಸಿತೆಂದು
ಪಿರಿಯ ಮುನಿಗಳ್ ಪೇಳ್ದರ್ಭವ ಮಹಿಮೆಯನುಸುರ್ದ
ಸರಳ ಕೂರ್ಮಪುರಾಣಮತಿಶಯಂ ಪೇಳಿದತ್ತೆನುತೆ ಸಂತೋಷದಿಂದಂ ೩೭

ಪುರಹರನ ಮಹಿಮೆಯಂ ಮುನಿಗಳಂ ಕೇಳಿಸುತೆ
ಹರಿಸಿ[1]ದಿಂ ಗಂಗಾತಟೇಸ್ಥಿತಃ ಎಂದು ಪೇ
ಳ್ದರು ವರಾಹಾವತಾರಂ ಮೊದಲೊ ನಿನ್ನೆ[2]ತೋಱಿದ ವಾಮನಾವತಾರಂ
ನಿರುತಮಿದು ಮೊದಲೊ ಮತ್ತಿದಱ ಕಾಲೊಳ್ ಗಂಗೆ
ಭರದಿನುದಯಿಸಿತೆಂದು ನುಡಿ[3]ವುದತಿಪಾತಕಂ
ಪರಮ ಪೌರಾಣವಾಕ್ಯವಿರುದ್ಧಮಿದನಱಿಯದುಲಿಯಲಾಗದು ಮಾನವಂ ೩೮

ಮರಳಿ ಕೇಳ್ ಶ್ರೀಶೈಲ ಕಂಧರದೊಳಾವಗಂ
ಸುರಗಂಗೆ ಪಾತಾಳಗಂಗೆ ಸರಸತಿಯೆಂಬ
ಪರಮನದಿಗಳ ಸಂಗಮದೆ ಶೋಭಿಪಾ ವಾಹನಾಖ್ಯತೀರ್ಥಕ್ಕೆ ಮುದದಿಂ

1 ರುಷ (ಗ) 2 ತೊರೆದವಾ (ಕ) 3 ಯುತತಿ (ಗ)

ನರಸಿಂಹಬಿಲದಿಂದೆ ಬಂದು ತನ್ನದಿಯೊಳಗೆ
ಹ[1]ರಿಸ[1]ದಿಂದೇಗಳುಂ ಮಜ್ಜನಂಬೊಕ್ಕು ಬಂ
ಧುರತರಾವಾಹನಾತೀರ್ಥಾಧಿವಾಸನಾಗಿರ್ಪ ಪರಮೇಶ್ವರಂಗೆ ೩೯

ಶರಭೇಶ್ವರಂಗೆ ನರಸಿಂಹೇಶ್ವರಂಗೆ ಭಾ
ಸುರಭಕ್ತಿಯಿಂ ಪೂಜೆಗೆಯ್ದು ವಂದಿಸುತಿರ್ಪ
ಸರಳ ನರಸಿಂಹಾವತಾರಮದು ಮೊದಲೊ ಮತ್ತಿನ ವಾಮನಾವತಾರಂ
ಪರಿಕಿಸಲ್ ಮೊದಲೊ ಮತ್ತೆಂದು ವಾಮನನಾದ
ಹರಿಯ ಕಾಲೊಳ್ ಗಂಗೆ ಪುಟ್ಟಿತೆಂಬಾ ಮಾತು
ಪರಿಭವಕ್ಕೊಳಗಾಗದಿರ್ಪುದೇ ಸಂತರ್ಕಳೊಲ್ದು ನೋಡಲ್ ಸಂತತಂ ೪೦

ಮಿಗೆ ಕಮಲಜಾಂಡಕ್ಕೆ ಗರ್ವದಿಂದಂ ಕಾಲ
ನೆಗಪಲ್ ತ್ರಿವಿಕ್ರಮನ ಕಾಲ್ಗಂಡಜಂ ಕಿನಿಸಿ
[2]ನೆಗ[2]ಳ್ದುಮಾ ಕಲ್ಯಾಣಸಮಯದೊಳ್ ಶಂಕರಂ ಕೃಪೆಯಿಂದೆ ತನಗೆ ಕೊಟ್ಟ
ಗಗನಗಂಗಾದ್ಯಶೇಷೋದಕಂ ತುಂಬಿರ್ದ
ಸೊಗಯಿಪ ಕಮಂಡಲದೊಳಿರ್ದ ಸಲಿಲಾಸ್ತ್ರದಿಂ
ತಗುಳ್ದದಂ ತರ್ಗಿಸಲ್ಕಾ ಜಲಂದಳಿಯಲದು ಕಾಲ್ದೊಳೆದುದೆಂತಪ್ಪುದೊ ೪೧

ಜಲಮಸ್ತ್ರಮೆಂತಪ್ಪುದೆಂಬೊಡದನುಸುರ್ದಪೆಂ
ನಲಿದು ಮಹಿಷಾಸುರನ ವಧೆಗೆಳಸಿ ಪೋಪ ಸ
ಲ್ಲಲಿತ ದುರ್ಗಿಗೆ ಶೂಲಮಂ ಹರಿಗೆ ಚಕ್ರಮಂ ನಾಲ್ಮೊಗಂಗೆಸೆಯುತಿರ್ಪ
ಸಲೆ ಕಮಂಡಲಮನಿಂದ್ರಂಗೆ ಶಕ್ತಿಯನೊಲ್ದು
ಸುಲಭದಿಂದೀಯಾಯುಧಂಗಳಂ ಗೆಲವಿನಿಂ
ಕಳುಪಿದನೆನುತ್ತೆ ಮಾರ್ಕಂಡೇಯ ಪೌರಾಣವಾಕ್ಯಮುಲಿಗುಂ ಸಂತತಂ ೪೨

ಭರದೆ ಕೇಳ್ ಬ್ರಾಹ್ಮಣೀ ಮಂತ್ರಪೂತೇನ ಎನೆ
ನಿರುತದಿಂದಂ ಕಮಂಡಲುಯೆನುತ್ತಾವಗಂ
ಹರಿಸದಿಂದಂ ಜಲೋಕ್ಷೇಪಾದೆನುತ್ತೆ ಹತವೀರ್ಯೋ ಎನುತ್ತೆ ಮತ್ತಂ
ಸರಳದೆ ಹತೌಜಸೇ ಎನುತ್ತಿರ್ಕುಮದಱಿಂದೆ
ಪಿರಿದು ಮಹಿಷಾಸುರಾದ್ಯದಿತಿನಂದನರೆಯ್ದೆ
ಕರಮೆ ಹತರಾದರಾ ಸಲಿಲಾಸ್ತ್ರದಿಂ ಮತ್ತಮದಱಿಂದೆ ಕಮಲಾಸನಂ ೪೩

1 ರುಷ (ಗ) 2 ತಗು (ಗ)

ನೆಗಪಿದೀ ವಾಮನಾಂಘ್ರಿಯ ಪೆರ್ಚುಗೆಯನೆಯ್ದಿ
ಮಿಗೆ ತವಿಪುದರ್ಕವನ ಕಾಲ್ಮೇಲೆ ತಳಿಯಲದು
ಬಗೆಯಲಡಿಗರ್ಚಿದುದೆನಿಪ್ಪುದೇ ಮತ್ತಾ ಜಲಂ ಗಂಗೆಯೆಂತಾದುದೊ
ತೆಗಳಲ್ತೆ ತನ್ನ ಕಾಲ್ದೊಳೆದ ನೀರಾ ಹರಿಗೆ
ನೆಗಳ್ದರ್ಘ್ಯಪಾದ್ಯಾಭಿಷೇಕಾನ್ನ ಪಾನಕ್ಕೆ
ತಗುಳ್ದಿವಂ ಪ್ರತ್ಯಯ ಸಮೂಹಂಗಳಂ ಕಂಡು ತಾರ್ಕಿಕರ್ ನುಡಿವರೆಂತೊ ೪೪

ಮಿನುಪ ವಾಮನ ಚರಣದೊಳ್ ಗಂಗೆ ಪುಟ್ಟಿತೆಂ
ದನಘಸತ್ಪುರುಷನಿಕರಂ ನುಡಿಯದಾವಗಂ
ಘನ ಪಾಪಯುಕ್ತರಪವರ್ಗದೂರರ್ ನುಡಿಗುಮಿಾಯಬದ್ಧಮನಿಳೆಯೊಳು
ವಿನುತ ಪೌರಾಣವಾಕ್ಯಕೆ ವಿರುದ್ಧಂ ಮತ್ತ
ಮೆನಸುಮಾಗ[1]ಮು[1]ಗರ್ಹಿತಂ ನೋಡಿಮೆಂದು ತೊ
ಟ್ಟನೆ ಪಂಡಿತೇಶ್ವರಂ ನುಡಿದನಾ ಬೌದ್ಧವಾದಿಗಳ ಸಭೆ ಬೆದಱುವಂತೆ ೪೫

ಸದಮಲಪ್ರಚುರವಿಶ್ರುತ ಪರಮಭಕ್ತಗಣ
ಪದಸರೋರುಹಸಾಂದ್ರ ಮಕರಂದಪಾನ ಸ
ಮ್ಮುದಿತ ಚಂಚಚ್ಚಂಚರೀಕನನವರತ ಪಂಚಾಕ್ಷರೀಪ್ರಸಿತಹೃದಯಂ
ವಿದಿತ ಮಂಜುಳನೀಲಕಂಠಾಹ್ವಯಂ ಮನೋ
ಮುದದೆ ಪೇಳ್ದುರುತರಾರಾಧ್ಯಚಾರಿತ್ರದೊಳ
ಗಿದು ಗಿರಿಜೆಗರ್ಧದೇಹಂಗೊಟ್ಟ ಗಂಗೆಯುಂ ತಾಳ್ದ ಕಥನಂ ಭಾವಿಸೆ ೪೬

---

1 ದು (ಕ)

# ಹದಿನಾಲ್ಕನೆಯ ಸಂಧಿ

## ವಿಷಸರ್ಪ ಅಗ್ನಿಯ ಧರಿಸಿದುದು

ಸೂಚನೆ: ಬಿಸಮನಹಿಯಂ ವಹ್ನಿಯಂ ತಾಳ್ದ ಕಥನಮಂ
ಬಿಸವಂದದಿಂ ದಿಗಂಬರನಾಗಿ ಸರ್ವೇಶ
ನೆಸೆದ ಸತ್ಕಥನಮಂ ಸೂರಸಚಿವೇಂದ್ರ ಕೇಳೆನುತೆ ಸೋಮೇಶನುಸುರ್ದಂ

ಮುಳಿಸಿನಿಂದೆಯ್ದಿ ಮುಗುಳಂಬುಗಳ ಬಳಗಮಂ
ದಳದಳನೆ ಸಲೆ ಪೊಳೆವ ಬಿಳಿಯ ಕರ್ಬಿನ ಬಿಲ್ಲ
ಯೆಳೆದುಂಬಿದಿರುವಿಂಗೆ ತಳ್ವಿಲ್ಲದಳವಡಿಸಿ ಘಳಿಲನೇಸುವ ಕಾಮನಂ
ಛಿಳಿಛಿಳಿಲ್ ಛಿಟಿಲೆಂಬ ರವದೆ ಕಡುಮಿಳಿರ್ದು ಗಳ
ಗಳನೆ ದಳವೇಱು ಮುಂಬರಿವ ಪಣೆಗಣ್ಣುರಿಯ
ತೊಳತೊಳಪ ಕಿಡಿಗಳಿಂ ಸುಟ್ಟಧಟ ಜಯಜಯತು ಮದ್ಗುರುವೆ ನೀಲಕಂಠ ೧

ಪರಮೇಶ್ವರಂ ತನ್ನ ನುಣ್ಗೊರಲೊಳೀತರ್ಕೆ
ಗರಳಮಂ ತಾಳ್ದನೆಂಬೊಡಮುತ್ತರಂಗೇಳ
ಶರಧಿಯಂ ಮುಂಕಡೆವ ಕಾಲದೊಳ್ ಗೀರ್ವಾಣರಂ ಪೂರ್ವಗೀರ್ವಾಣರಂ
ಪರಮೇಷ್ಠಿಯಂ ವಿಷ್ಣುವಂ ಬೆದಱಸುತ್ತೆ ನಿ
ಷ್ಠುರದಿನೀ ಬ್ರಹ್ಮಾಂಡ[1]ಭಾಂ[1]ಡದಹನೋದ್ದಂಡ
ಪರಮ ಚಂಡಾರ್ಚಿಗಳ ಕೆದಱುತ್ತೆ ಪೊಸಬಿಸಂ ಜನಿಸಿ ಮಿಗೆ ಬರುತಿರ್ದುದು ೨

ಸ್ಮರಹರನ ನೇತ್ರಾಗ್ನಿಯಂತೆ ಕಲ್ಪಾಂತದೊಳ್
ಸ್ಫುರಿಸುವಾದಿತ್ಯನಂತೆವೊಲುಗ್ರಕಾಲಾಗ್ನಿ
ಯಿರವಿನಂತಾ ಕಾಲಕೂಟವಿಷಮೆಯ್ದಿ ಬರುತಿರ್ದುದಾ ವಿಷದ ಪೊಗೆಯಿಂ
ಹರಿ ಕೃಷ್ಣತನುವಾದನೆಂದು ಪೇ[2]ಳ್ಗುಂ[2] ವಾಕ್ಯ
ಮಿರದದೆಂತೆನೆ ಕೃತಃ ಕೃಷ್ಣೋ ಜನಾರ್ದನಃ
ಭರದಿನಿಂತೆನುತೆ ಮತ್ತಾ ವಿಜೃಂಭಿಪ ವಿಷದ ವಿಸ್ಫುಲಿಂಗಂಗಳಿಂದಂ ೩*

---

[1] ತಂ (ಗ) [2] ಳುವ (ಕ)

* (ಟ) ಪ್ರತಿಯಲ್ಲಿ ೩ನೆಯ ಪದ್ಯದಿಂದ ೧೬ನೆಯ ಪದ್ಯದವರೆಗೆ ಇಲ್ಲ.

ವನಜೋದ್ಭವ ಶ್ಮಶ್ರು ನೆಱೆಬೆಂದುಪೋಯ್ತು ಘ
ಮ್ಮನೆ ಸಂಭ್ರಮದಿನಿಂತು ಬರ್ಪ ಗರಳಾಗ್ನಿಯಂ
ಮನಸಿಜಹರಂ ಬ್ರಹ್ಮವಿಷ್ಣ್ವಾದಿ ದೇವತೆಗಳಂ ಕಾಯ್ದು ಲೋಕಂಗಳಂ
ವಿನಯದಿಂ ರಕ್ಷಿಸಲ್ಕಾ ಬಿಸಮನಳ್ತಿಯಿಂ
ಮಿನುಪ ಕೊರಲೊಳ್ ತಾಳ್ದು ಸಿತಿಕಂಠನಾದನಿದು
ನನಸುನಿಂದೆಯೆ ಭೂಷಣಮದಲ್ತೆ ನೀಲಕಂಠಂಗೆ ಪರಮೇಶ್ವರಂಗೆ ೪

ಇನ್ನೆ ಕೇಳ್ ಫಣಿವಿಭೂಷಣಮಾದುದೇತರ್ಕೆ
ನನ್ನಿಯಾಗಗ್ನಿಯಂ ಧರಿಸಿದನ್[1]ದೇತರ್ಕೆ[1]
ಸನ್ನಿದಂ ನಗ್ನತ್ವಮೇಂಕಾರಣಂ ಪೇಳಿಮೆಂಬೊಡದನೆಯ್ದೆ ಕೇಳ್ದು
ಮುನ್ನ ಕಮಲಜಸೂನುವೆನಿಸುವ ಸನತ್ಕುಮಾ
ರನ್ನಿಸದಮತಿಗರ್ವದಿಂದಮದ್ವೈತಮಂ
ಚನ್ನಮದರ್ಿ ರಚಿಸಿ ತಾನೇಯೀಶ್ವರಂ ಎಂದು ಶಿವನನೆಱೆ ಅಱಿಯದಿರುತಿರೆ ೫

ವರ ಮುನಿಜನಂಗಳ್ಗೆ ಬೋಧಿಸುತ್ತದ್ವೈತ
ದಿರವನಿದು ಪರಮಾರ್ಥಮೆಂದು ಸನ್ಮುನಿಗಳಾ
ಚರಿಪ ಪಾಶುಪತವ್ರತಂಗಳಂ ಬಿಡಿಸುತ್ತೆ ತನ್ನಿಂದೆ ಮಾಡಪಟ್ಟ
ವರವೇದ ಬಾಹ್ಯಮಾದಾ ಯೋಗಶಾಸ್ತ್ರಮಂ
ವಿರಚಿಸುತ್ತಾ ದೇವದಾರುವನದೊಳಗಿರಲ್
ಪರಮೇಶ್ವರಂ ಬಳಿಕ್ಕಿದನಱಿದು ವಿಟವೇಷದಿಂದಲ್ಲಿಗೆಳ್ತಂದನು ೬

ಸಲೆವಿಕೃತ ವಿಟವೇಷದಿಂ ಬಂದ ಗಿರಿಶನಂ
ಲಲಿತ ಮುನಿಪತ್ನಿಗಳ್ ಕಂಡು ಕಾಮಾತುರದಿ
ನೊಲವಿನಿಂ ನಡೆನೋಡಿ ಕಾಮರಸಮುಣ್ಮೆ ಚಿತ್ತಸ್ಖಲನಮಾಗುತೊಲ್ದು
ನಲವಿನಿಂ ಶಿವನ [2]ಬೆನ್ನೆಯ್ದಿ[2]ಬರುತಿರೆ ಮುನಿಗ
ಳಲದರ್ಿ ವಿರಚಿಪ ಮಂತ್ರಶಕ್ತಿಗಳ್ ಕಿಡುತಿರ
ಲ್ಕೊಲವುತ್ತೆ ನಗ್ನತ್ವದೊಳ್ ಬರ್ಪನಾರೆಂದು ಮುನಿಗಳಾಗ್ರಹದೆ ನೋಡಿ ೭

ವನಿತಾ ಪತಿವ್ರತತ್ವಮನೆಯ್ದೆ ಕಿಡಿಸಿ ನೆ
ಟ್ಟನೆ ಬರ್ಪವನ ಕೊಲ್ವೆವೆಂದು ಮುನಿಗಳ್ ನೆನೆದು
ಮುನಿಯುತುಂ ಸರ್ಪಕ್ರಿಯಾಕ್ರಮಾನಳ ಮಂತ್ರತತಿಗಳಿಂದಭಿಚಾರಮಂ

---

[1] ದೇಂ ಮತ್ತೆ (ಗ) [2] ಮುಂದೆಯ್ದಿ (ಗ)

ವಿನಯದಿಂ ಬೇಳಿಯಮನ್ಮತ್ರರೂಪಂಬಡೆದು
ನನಸು ಶಿವನೆಡೆಗಟ್ಟ[1]ಲಾಂತಪಸ್ಸಾ[1]ರವಮಂ
ಮನಸಿಜಹರಂ ಪಾದದಿಂದೊರಸಿ ಮುನಿವಿತತಿ ಮತ್ತೆ ಕಿಸುಗಣ್ಣಿ ನಿಸದಂ ೮

ಪಿರಿದು ಮಂತ್ರಿಸಿ ಮತ್ತಮೊಂದಹಿಯನಟ್ಟಲ್ಕೆ
ಕರಕಟಕಮಂ ಮಾಡಿಕೊಂಡನದನೀಶ್ವರಂ
ಮರಳಿ ಪಕ್ಷಿಯನೆ ಕಳುಪಲ್ಕಾಯುಧದ ಪಾಂಗಿನಿಂ ಪಿಡಿದನದನಭವನು
ತಿರಿಗಿ ದುರ್ಮಂತ್ರನಿಚಯಂಗಳಂ ಮಾಡಲವ
ನೊರಸಿ ಲೆಕ್ಕಿಸದೆ ಬರುತಿರ್ಪುಗ್ರನಂ ಕಂಡು
ಕರಮೆ ಪೊಡದಜಸುತನನುಪ್ಪನಾಗೆಂದಂದು ಶಾಪವಿತ್ತಂ ಶಂಕರಂ . ೯

ಅದನೆಯ್ದೆ ಕಂಡುಳಿದ ಮುನಿಜನಂ ಭೀತಿಯಿಂ
ಮುದವುಡುಗಿ ನಡುಗುತ್ತೆ ಪೊಡವಿಯೊಳ್ ಕೆಡೆದು ದು
ರ್ಮದಮಳಿದು ನುಡಿದರೆಲೆ ದೇವ ಸುಜ್ಞಾನಹೀನರನಧಮರಂ ಕ್ರೂರರಂ
ಒದವಿದದ್ವೈತಮತಿಗಳನದ್ವಿತೀಯಾದಿ
ವಿದಿತ ಸೂತ್ರಾ[2]ರ್ಥ[2]ವಾದಿಗಳನೆಮ್ಮಂವನೆಯ್ದೆ
ಪುದಿದ ಕರುಣದಿ ಪೊರೆಯಿಮೆನುತೆಲ್ಲರುಂ ಪೊಗಳ್ದರಾ ಶಿವನ ಭಕ್ತಿಯಿಂದಂ ೧೦

ಎಲೆ ದೇವ ದಿವ್ಯಲಿಂಗಾಂಗ ದೇವೇಶ ನಿ
ರ್ಮಲಮಲ್ಲದ ಜ್ಞಾನಶಾಸ್ತ್ರನಿಚಯಂ ನೋಡ
ಲೊಲವಿನಿಂದಾವ[3]ನು[3]ಭ್ರಮಿತನಂಮಾಡದೀ ಲೋಕದೊಳಗನವರತವು
[4]ಸಲಿಲಜೋದ್ಭ[4]ವನುಂತೆ ವೇದಾತ್ಮತನುಮಾಗಿ
ಸಲೆ ನಿಮ್ಮನಱಯದೇ ತಲೆಯ ನೀಗಿದನವನ
ಲಲಿತಸುತನೀಗುಪ್ಪನಾದನೀ ಭುವನದೊಳ್ ನಿಮ್ಮಿರವನಿನಿತಱಯದೆ ೧೧

ನಿರುತದಿಂ ವ್ಯಾಸದಕ್ಷರ್ ಕೆಟ್ಟರಿದನಱಯ
ದುರು ತಪಸ್ಸಿನ ಗರ್ವದಿಂದ ನಾವೆಲ್ಲರುಂ
ಪಿರಿದುಮದ್ವೈತಕರ್ಮಂಗಳಿಂ ಕೆಟ್ಟೆವೆಲೆ ಶಂಕರಾ ಪರಮೇಶ್ವರ
ಭರದಿನಿಂತೆಂದು ನುಡಿಯುತೆ ವೇದಸೂಕ್ತದಿಂ
ಕರಮೆ ಪೊಗಳಲ್ ದಿಗಂಬರವಿಕೃತವಿಟವೇಷ
ದುರುಮಹಾಲಿಂಗವತಿಕರುಣದಿಂದಾ ಮುನಿಪ್ರಕರಮಂ ನೋಡಿ ನಗುತೆ ೧೨

---

[1] ಲಾಯಪಸಾ (ಗ) [2] ದಿ (ಕ) [3] ನರ (ಗ) [4] ಲಲಿತಬೋಧ್ಯ (ಗ)

ವಿಸುಪೆನ್ನ ಲಿಂಗಮೂರ್ತಿಯನಾವಗಂ ವಿರಾ
ಜಿಸುವ ಸೆಜ್ಜೆಯೊಳಿಟ್ಟು ಪೂಜಿಸಿವೆನುತ್ತವರ್ಗೆ
ಮಸಕದಿಂ ಕರುಣಿಸುತ್ತದ್ವೈತಮಂ ಬಿಡಿಸಿ ಮೋಕ್ಷಮಾರ್ಗಮನೆಯ್ದಿಪ
ಎಸೆವ [1]ಪಶು[1]ಪಾಶಪತಿವಿಜ್ಞಾನಮಂ ಹ[2]ರಿಸ[2]
ದೆಸಕದಿಂ ಬೋಧಿಸಲ್ ಮುನಿನಿಕರಮೆಯ್ದೆ ಸಂ
ತಸದಿಂದೆ ಮಗುಳ್ದು ಮಗುಳ್ದೊಲ್ದು ವಂದಿಸುತೆ ತಚ್ಛಂಬುವಂ ಕೀರ್ತಿಸಿದರು ೧೩

ಸಂತತಂ ತ್ವಚ್ಛೇಷಸೋಪಿ ಮಾಹಾತ್ಮ್ಯಮೆನು
ತಂತೆ ಮತ್ತಾವಾಂ ಎನುತ್ತೆ ದೃಷ್ಟುಮೆನುತ್ತೆ
ಮುಂತುಱಿ ನಹಿಕ್ಷಮೌ ಎನುತೆ ಮತ್ತಂ ಸೂರಯೋ ಎನುತೆ ಮನಮುಣ್ಮುತೆ
ಸಂತಸದೆ ಯತ್ರಪಶ್ಯಂತಿ ಎನುತುಂ [3]ಮತ್ತೆ[3]
ಮುಂತೆ ತದ್ವಿಷ್ಣೋಃ ಎನುತ್ತೆ ಪರಮಂ ಪದಂ
ಮುಂತೆ ಮತ್ತಿಂತೆನುತೆ ನಲಿಯುತಾ ವ್ಯಾಸಾಷ್ಟಕಂ ಪೇಳ್ದು ಮತಿಶಯದೊಳು ೧೪

ನಲಿಯುತುಂ ಸರ್ವಸ್ಯಪೂಜಾರ್ಹಮೆನುತೆ ಮ
ತ್ತೊಲವಿಂದಮಿಹೋತ್ತಮಾಂಗಮೆನುತಂ ಮತ್ತೆ
ಸುಲಭದಿಂ ಲಿಂಗಾಂಕಿತಂ ಪಸ್ಯಜಗದೆನುತ್ತುಱಿ ಭಗಾಂಕಿತ ಎನುತ್ತೆ
ಸಲೆ ನಿನ್ನ ಲಿಂಗಮಹಿಮೆಯ ಕಾಳಿಕಾಕಾಂಡ
ಮಲರ್ದಿಂತು ಪೊಗಳುತಿರೆ ಧರ್ಮಾದಿನಿಚಯಕ್ಕೆ
ಲಲಿತಮೋಕ್ಷಕ್ಕೆ ಕಾರಣಮಕ್ಕುಮಾ ಲಿಂಗಪೂಜನಂ ಲೋಕದೊಳಗೆ ೧೫

ಅದಱಿನಾವಾ ಲಿಂಗಪೂಜೆಯಂ ಮಾಳ್ಪುದೆ
ರ್ಕೊದವಿದ ವಿಧಾನಮಂ ಬೆಸಸಿಮೆನುತೀಶನಂ
ಪದೆದು ತಲ್ಲಿಂಗಾರ್ಚನಾವಿಧಿಕ್ರಮದಿನುಪದೇಶಮಂ ಪಡೆಯದವರ್ಗಳು
ಮುದದಿಂದಮಾ ದೇವದಾರುವನದೊಳಗೆ ಸಲೆ
ಮದನಹರನಂ ಪೂಜಿಸುತ್ತಿರ್ದರೀ ತೆಱದೊ
ಳೊದಗಿದಹಿಭೂಷಣಾದಿಗಳಿಂತು ನಿಂದೆಗಳ್ ಪರಮೇಶ್ವರಂಗೆ ಸತತಂ ೧೬

---

[1] ಪಾ (ಗ) [2] ರುಷ (ಗ) [3] ಮುಂತೆ (ಕ)

ಸದಮಲಪ್ರಚುರವಿಶ್ರುತ ಪರಮಭಕ್ತಗಣ
ಪದಸರೋರುಹಸಾಂದ್ರ ಮಕರಂದಪಾನ ಸ
ಮ್ಮುದಿತ ಚಂಚಚ್ಚಂಚರೀಕನನವರತ ಪಂಚಾಕ್ಷರೀಪ್ರಸಿತಹೃದಯಂ
ವಿದಿತ ಮಂಜುಳನೀಲಕಂಠಾಹ್ವಯಂ ಮನೋ
ಮುದದೆ ಪೇಳ್ದುರುತರಾರಾಧ್ಯಚಾರಿತ್ರದೊಳ
ಗಿದು ವಿಷಾಹಿಗಳ ಶಿವನೊಸೆದು ತಾಳ್ದಿದ ಕಥನವಿದನಾಲಿಪುದು ಶರಣರು ೧೭

# ಹದಿನೈದನೆಯ ಸಂಧಿ

## ಹರಿಹರಾತ್ಮಕ ನಿರಸನ

ಸೂಚನೆ : ಹರಿಹರಾತ್ಮಕನಿರಸನಂಗೇಳ ಯಾಚಕಾ
ಮರಧೇನು ಶಾತ್ರವಾಮಾತ್ಯಮಸ್ತ್ರನ್ಯಸ್ತ
ಚರಣತಳ ಸೂರಸಚಿವೇಂದ್ರ ನೀನೆನುತೆ ಪೇಳ್ದಂ ಸೋಮವಿಭುವಳ್ತಿಯಿಂ

ತಾರಾಧಿಪತಿಜೂಟ ನಾರಾಯಣಪ್ರೀತ
ಸೂರಾಗ್ನಿ ಶಶಿನೇತ್ರ ಗೌರಾಂಗ ಶೋಭಿತಾ
ಪಾರಾಶರಾದಿ ಮುನಿ ವಾರಾರ್ಚಿತಾಂಘ್ರಿಯುಗ್ಮಾ ರಾಜರಾಜಮಿತ್ರ
ಕ್ರೂರಾಂತಕಧ್ವಂಸ ತಾರಾಚಲಾವಾಸ
ಘೋರಾಘಮಾರುತಾಹಾರಾಧಿಪತಿತಾರ್ಕ್ಷ್ಯ
ಸಾರಾಪವರ್ಗದಾತಾರಾ ಮಹೇಶ ಜಯ ಮಾರಾರಿ ನೀಲಕಂಠ ೧

ಸಂತತಂ ಹರಿಸುರರ್ಗೇಕತ್ವಮೆಂತೆನಲ್
ಮುಂತೆ ಕೇಳೆಲೆ ಬೌದ್ಧ ಹರನೆಂದು ಹರಿಯಾಗ
ನಂತೆ ಹರಿಹರನಾಗನೆಯ್ದೆನೋಡಲ್ ಗುಹಾಸುರನ ಕೊಲಬಗೆದ ಕೃಷ್ಣಂ
ಸಂತಸದೆ ಶಿವನೆಡೆಗೆ ಬಂದು ವಂದಿಸಿ ನುಡಿದ
ನಂತಕಾಂತಕ ಕಾಮಹರನೆ ಪುರಹರನೆ ನಿ
ಶ್ಚಿಂತನೇ ಬಗ್ಗದೊಗಲುಟ್ಟವನೆ ಕುಳಿರ್ವೆಟ್ಟೆಯಣುಗಿಯಾಳ್ದನೆ ಶಂಕರ ೨

ಎನುತೆ ನುತಿಸುತೆ ಗುಹಾಸುರನಮರರೆಲ್ಲರಂ
ಕಿನಿಸಿ ಕೊಲುತಲಿಕ್ಷಯಟ್ಟುತಿರ್ದಪಂ ಮತ್ತಪಂ
ವನಜಭವನಿಂ ಸುರಪನಿಂದಮೆನ್ನಿಂದೆ ಮರಣಂಬಡೆಯನವನಿಯೊಳಗೆ
ವನಸು ಮತ್ತೊರ್ವನಿಂದಂ ಸಾಯನವನೆಯ್ದೆ
ಮನಸಿಜಾಂತಕ ನಿಮ್ಮ ವರದ ಬಲ್ಪಿಂದೆ ಮ
ತ್ತೆನಗೆ ತದ್ದೈತ್ಯನಂ ಕೊಲ್ವ ಬಲ್ಪಂ ಕೊಟ್ಟು ಕೃಪೆಯಿಂದೆ ಪಾಲಿಸುವುದು ೩

ಮಿಳಿರ್ವ ನಿಮ್ಮಯ ಕುಱುಪನೆನುತವಂ ಪ್ರಾರ್ಥಿಸಲ್
ಘಳಿಲನೀಶಂ ಮೆಚ್ಚಿ ತನ್ನ ಚಿಹ್ನಂಗುಡಲ್
ತೊಳಪ ಶಿವನಾಜ್ಞೆಯಿಂ ವಿಷ್ಣು ತನ್ನೆಡಬಲದೊಳಗೆ ಶಂಖಚಕ್ರಂಗಳಂ
ತಳೆದು ರುದ್ರಾಂಕಿತಂಗಳನಂತೆ ಧರಿಸಿಯು
ಜ್ವಳ ಮಹಾಬಲವಂತನಾಗಿ ಸಂಭ್ರಮದಿಂದೆ
ತಳರ್ದು ತದ್ಗುಹದೈತ್ಯನಂ ಕೊಂದನಂದು ಮೊದಲಾ ವಿಷ್ಣುವೀ ಧರೆಯೊಳು ೪

ಹರಿಹರಾಹ್ವಯದಿನೆಸೆದಿರ್ಪನಿನಿತಱಿಕೊಳೆಯ್ದೆ
ಹರನಪ್ಪನೇ ಹರಿಯದಂತಿರ್ಕೆಯೊಂದಾದೊ
ಡರಮೆ ದೇಹದೆ ಲಕ್ಷ್ಮಿಗೌರಿಯರ್ ಕೂಡಿರ[1]ಲ್ವೇಡ[1]ವೇ ಪರಿಭಾವಿಸೆ
ಮರಳಿ ತತ್ಸೂನು ಕಾಮಸ್ಕಂಧರೂಪದಿಂ
ಧರಣಿಯೊಳ್ ತೋರ್ಪನೇ ತದ್ಗೃಹದ ಮೇಲೆ ಮ
ತ್ತುರು ವರಾಹಂ ವೃಷಭರೂಪಂ ದಲಿರ್ಪುದೇ ನೀಚ ಬೌದ್ಧನೆ ಸಂತತಂ ೫

ಹರಿಹರನ ಸೇವಕರ ಪಣೆಗಳೊಳ್ ನಾಮಮುಂ
ವರಭಸಿತಮುಂ ಕೂಡಿರಲ್ವೇಳ್ಕು ಮತ್ತವರ
ಪಿರಿಯ [2]ತೋ[2]ಳ್ದಲೆಯೊಳಗೆ ಚಕ್ರಶೂಲಾಂಕಿತಂಗಳ್ ತೋಱವೇಳ್ಕು ಸತತಂ
ಧರಣಿಯೊಳಗವರ್ಗೆ ಹರಿಹರಲೋಕಮೆಂಬುದೊಂ
ದಿರವೇಳ್ಕು ಮತ್ತವರೊಳೊಂದುಮಂ ಕಾಣೆವೀ
ಹರಿಹರರದೆಂತೆಂದೊ ಚೋದ್ಯಮಿದು ಲೋಕಕ್ಕೆ ತಕ್ಕರೊಸೆದೀಕ್ಷಿಸುವೊಡೆ ೬

[3]ಸ[3]ಲೆ ಯಥಾಸ್ಯಾಪಾನಯೊಸ್ಸಾಮ್ಯಮೆಂದು ಮ
ತ್ತುಲರ್ದು ಛಿದ್ರತ್ವೇಪಿ ಎನುತುಂ ನ ವಿದ್ಯತೇ
ಯೊಲವಿನಿಂದಿಂತೆನುತೆ ಸೂತಸಂಹಿತೆ ಪೇಳ್ದವೋಲೊಂದೆ ದೇಹದೊಳಗೆ
ಲಲಿತ ಗುದ ವದನಕ್ಕೆ ರಂಧ್ರಂಗಳಿರ್ದೊಡು
ಜ್ವಲಸಾಮ್ಯಮುಂಟೆಯಿಾ ಪರಿಯೊಂದೆ ಸರಿರದೊಳ್
ನೆಲಸಿರ್ದ ಹರಿಹರಾಂಗಂಗಳ್ಗೆ ಹೀನಾಧಿಕತ್ವಮುಂ[4]ಟೋ[4]ಲ್ದು ನೋಡೆ ೭

---

1 ಲ್ವೇಳ (ಗ)   2 ರೊ (ಕ)   3 ಎ (ಗ)   4 ಪೋ (ಕ)

ಹರಿಹರಾಂಗವುದೊಂದೆ ತನುವನಾಶ್ರೈಸಿದೊಡೆ
ಹರನ ಸಮನಪ್ಪನೇ ಬಿಡಿಮುದಂತಿರ್ಕೆ ಮುರ
ಹರ ಹಿರಣ್ಯಾಕ್ಷನಂ ಮುಳಿದು ಕೊಲ್ವಂದು ನರಮೃಗರಾಜರೂಪನೊಸೆದು
ಧರಿಸಿದೊಡೆ ಸಿಂಹನಪ್ಪನೆ ನರಂ ಮತ್ತಮಾ
ಸುರವೈರಿಯಂ ಕೊಂದ ಗರ್ವದಿಂ [1]ಮುಂದ[1]ಱಿಯ
ದಿರೆ ನೃಸಿಂಹಂ ಮತ್ತಮವನ ಸಂಹರಿಪುದಕ್ಕಾ ಮಹೇಶ್ವರನಳ್ತಿಯಿಂ ೮

ಅರಮೆ ಮೃಗರೂಪಸಂತರಮೆ ಪಕ್ಕಿಯ ರೂಪ
ನಿರದೆ ತಾಳ್ದಾ ನೃಸಿಂಹನನೆಯ್ದೆ ತವಿಸಿದಾ
ಶರಭರೂಪಂ ಮಿಕ್ಕ ಮಿಗಪಕ್ಕಿರೂಪಮೆನಲಕ್ಕುಮೇ ಧರಣಿಯೊಳಗೆ
ಸರಳ ತಪದಿಂ[2]ದ[2] ಮೆಚ್ಚಿಸಿ ಮಹಾದೇವಿ ಶಂ
ಕರ[3]ನರಮೆ[3] ಮೆಯ್ವಡೆದಳನಿತಱಿಂದಾ ಗಿರಿಜೆ
ಹರಸದೃಕ್ಷಮೆ ಭಾವಿಸಲ್ಕೆ ಹರಿಹರರೂಪಮಿಾ ತೆಱಂ ಭೂಮಿಯೊಳಗೆ ೯

ಮಗುಳ್ದು ಕೇಳೆಲೊ ಹರಿಹರಂಗೇಕತೆಯ ನುಡಿಪೊ
ಡಗಲದಾ ಹರಿಹರಂ ಎಂಬ ಶಬ್ದಕ್ಕರ್ಥ
ಪೊಗೆದ ಪರಿಯಂ ಕಾಮನಂ ಹರಿಸಿದುದಱಿಂದೆ ಕಾಮಹರನೆನಿಸಿ ಶಿವನು
ಸೊಗಯಿಸಿದನಂತಲ್ಲದೇ ಕಾಮಹರರ್ಗೆ ಸೊಂ
ಪೊಗೆವೇಕತೆಯ ಪೇಳತೇ ಕಾಮಹರಶಬ್ದ
ಮಗಣಿತಂ ಕಾಮಹರನೆಂಬಿದುಂ ಮೊದಲಾದ ಶಬ್ದತತಿಯಿಂತು ತೋರ್ಕುಂ ೧೦

ಅದಱಿಂದೆ ಹರಿಹರಂ ಎಂಬ ಶಬ್ದಂ ಲೋಕ
ವಿದಿತಮಾದೀಶಂಗೆಯುಂ ಹರಿಗೆಯುಂ ಮತ್ತೆ
ಪದೆದೇಕತೆಯನುಸುದರ್ದಲ್ತು ಹರಿಯಂ ಶಿವಂ ಹರಿಸಿದಂ ತಥ್ಯಮೆಂದು
ಮುದದೆ ಪೇಳ್ಗುಂ ಮತ್ತಮಿಾಯರ್ಥಮಂ ವೇದ
ಮೊದವಿದತಿಸಂತೋಷಮುಣ್ಮುತಿರಲಾವಗಂ
ಪದೆದುಱಿ ಹರಿಂ ಹರಂ ತಂ ಎನುತ್ತನುಯಾಂತಿ ಎನುತೆ ಘೋಷಿಸುತಿರ್ಪುದು ೧೧

ಮರಳಿ ಸರ್ವಾತ್ಮಕೋ ವಿಷ್ಣುಃ ಎನುತ್ತೆ ಭಾ
ಸುರದೆ ಸರ್ವಂ ವಿಷ್ಣುಮಯಮೆನುತೆ ಜಗದೆನುತೆ
ಹ[4]ರಿಸ[4]ದಿಂ ನುಡಿವ ಪೌರಾಣ ವಾಕ್ಯಪ್ರಮಾಣದೆ ಸರ್ವಮಂ ಪರಶಿವಂ

---

[1] ಮುನ್ನ (ಕ) [2] ದೆ (ಗ) [3] ನಾಮ (ಗ) [4] ರುಷ (ಗ)

ಹರಿಪುದಜಿನಾಯ್ತು ಹರಿಹರನೆನಿಪ್ಪೊಳ್ಪಿಸರ್
ಪರಮೇಶ್ವರಂಗಂತುಟಲ್ಲದೇ ಭಾವಿಸಲ್
ಸಿರಿದು ಹರಿಹರರೈಕ್ಯತೆಯಿನಾದುದಲ್ತು ಹರಿಹರನಾಮಮಿಾಶ್ವರಂಗೆ ೧೨

ಹರಿ ಮೊದಲ್ ಗ್ರಹಿಸಿರ್ದ ಶಿವನರ್ಧಭಾಗಮಂ
ಮರಳಿ ಶಿವೆಯಿಾಳ್ದು ಕೊಂಡಳೊ ಅದಲ್ಲದೆ ಮುನ್ನೆ
ಗಿರಿಜೆಯೆಡೆಗೊಂಡಿರ್ದ ಶಿವನರ್ಧದೇಹಮಂ ತದ್ವಿಷ್ಣು ಸೆಳೆದೊಯ್ದನೊ
ಪಿರಿದುಮವಿನಾಭಾವಸಂಬಂಧಮಾದ ತ
ದ್ಗಿರಿಜೆ ಶಿವನರ್ಧಮಂ ಬೇರ್ಕೆಯ್ದುದೆಂತು ತಾ
ನಿರದೆಯ್ದುವಳ್ ದಕ್ಷಿಣಾಂಗಮಂ ಹರಿಕೊಳ್ವುದಾಗದೆಂದುಂ ಭಾವಿಸೆ ೧೩

ಗಿರಿಜೆ ಹರಿಯಿರ್ವರೊಂದೊಂದು ಭಾಗಮನೆಯ್ದೆ
ಭರದಿನೀಳ್ಕುಳಿಗೊಂಡ ದಿನವಾದಿಯಾಗಿಯಾ
ಹರನಿಲ್ಲ[1]ವೋ ಮತ್ತೆ[1] ಶಿವನರ್ಧದೇಹದೊಳ್ ನಿಚ್ಚಮಿರ್ಪಾ ಪಾರ್ವತಿ
ಉರಿದು ಪೋಗಲ್ ದಕ್ಷಮುಖಕೆಯ್ದಿಯಾಗಲಾ
ಯರಮೆ ದೇಹಕ್ಕೆ ಮುಂ ಗಿರಿಸುತೆಗೆ ತನ್ನರಮೆ
ಸರಿರಮಂ ಕುಡುವಂದು ಮುಟಗಿಟ್ಟ ದೇಹಮಂ ತಂದು ಪತ್ತಿಸಿಕೊಂಡನೊ ೧೪

ಮಿಗೆ ಸಕಲನಿಷ್ಕಲಂ ಶಾಶ್ವತಮನಶ್ವರಂ
ಬಗೆಯೆ ಹರಕಾಯಮದು ನಿತ್ಯಂ ದಲೆನಿಕುಮಾ
ಸೊಗಯಿಸುವ ಹರಿಯ ಮೆಯ್ಯರಮೆ ಶಿವದೇಹದೊಳ್ ಕೂಡುವಾ ಕಾಲದಲ್ಲಿ
ನೆಗಳ್ದರಮೆ ಸರಿರಮಾವೆಡೆಯಲ್ಲಿ ಕೆಟ್ಟತ್ತೊ
ತಗುಳ್ದುನೋಡಲ್ ಪೂರ್ವದಿಂ ಶಂಭುಕೇಶವ
ರ್ಗೊಗೆದರಮೆ ಸರಿರಂಗಳೊಳ್ ಕೆಲವು ಭುವನದೊಳ್ ನರರ್ಗರಮೆ ತನುಗಳುಂಟೊ ೧೫

ಹರಿಹರರ್ಗಲ್ಲದೇ ಪುತ್ತುಳಿದ ನರತತಿಗೆ
ಪಿರಿದುಮಿಂತಪ್ಪ ದೇಹಂ ತೋಱದೋ ಗುಹಾ
ಸುರನ ಕೊಲಲೆಯ್ದುವಂದೊಲ್ದು ತಂತಮ್ಮ ದೇಹಂಗಳೊಳಗರ್ಧಾರ್ಧಮಂ
ಸರಿರಮಂ ತೆಗೆದೊಂದುಗೂಡಿ ಗುಹದೈತ್ಯನಂ
ಕರಮೆ ಕೊಂದಿಕ್ಕಿದಱದಲ್ಲದೇ ಪೂರ್ವದೊಳೆ
ಹರಿಹರಾಕಾರಮುಂಟೋ ಭಾವಿಸಲ್ಕೆ ವಿಶ್ವಂಭರೆಯೊಳೊಂದೆಡೆಯೊಳು ೧೬

---

[1] ದೋಡುತ್ತೆ (ಗ)

ಸಡಗರದಿನಾದಿಯೊಳಗಿಂತಪ್ಪ ದೇಹವೇಂ
ಪೊಡವಿಯೊಳಗೊಗೆದೊಡೇನಪರಾಧವೆಂಬೊಡೆಲೆ
ಬಿಡದೆ ಕೇಳಾ ವಿಷ್ಣುವಿಂಗೆ ತಾಯ್ತಂದೆಗಳ್ ದಿಟದಿನಿಲ್ಲಾ ಪರಿಕಿಸೆ
ಪದಪಿನಿಂ ಪೂರ್ವಾವತಾರಂಗಳಲ್ಲಿ ಮ
ತ್ತೊಡನೊಡನೆ ಯೋನಿಜಂ ತಾನಾಗಿ ತೋಱಿದನೊ
ಪೊಡೆಯಲರನೆಯ್ದೆ ಯೋನಿಜನಾಗಿ ವೈದೋಱಿದನೊ ಭೂಮಿಯೊಳ್ ಸಂತತಂ ೧೭

ಮಿಗೆ ಮತ್ಸ್ಯ ಕಚ್ಛಪ ವರಾಹಾವತಾರದೊಳ
ಗೊಗೆವಂದು ಮತ್ಸ್ಯ ಕಚ್ಛಪ ಕಿಟಿಗಳಾದ ಸೊಂ
ಪೊಗೆವ ಮಿಥುನಂಗಳಿಂದೊಗೆದನಾ ಹರಿ ನೃಸಿಂಹಾಕಾರಮಪ್ಪೆಡೆಯೊಳು
ನೆಗಳ್ದ ಕಂಭವೆ ಮಾತೃಪಿತೃಗಳಾದುದು ಬಳಿ
ಕ್ಕಗಲದಿಂದ್ರಾನುಜನೆನಿಸಿಯದಿತಿಗೊಗೆದನಾ
ಮಗುಳ್ದು ವಾಮನ ರೂಪ[1]ದಿಂ[1] ರೇಣುಕಾತನಯನಾದನಾ ಪರಶುರಾಮಂ ೧೮

ನರಪ ದಶರಥ ಕೌಸಲಾದೇವಿಯರ್ಗೊಗೆದು
ವರರಾಮನಾದನಾ ಗೋಪಿಯುದರದೆ ಮತ್ತೆ
ಹ[2]ರಿಸ[2]ದಿಂ ಪುಟ್ಟಿದರ್ ಕೃಷ್ಣನೀಲಾಂಬರರ್ ಮತ್ತೊರ್ವನುದರದಿಂದೆ
ನಿರುತಮುದಯಿಸಿದನಾ ಬೌದ್ಧನಂತೆವೊಲೊರ್ವ
ಧರಣಿಪಂಗೊಗೆದನಾ ಕಲ್ಕಿ ಬಳಿಕಂ ನೋಡೆ
ಸರಸಿಜೋದ್ಭವನಧೋದ್ವಾರದಿಂದೊಗೆದಧೋಕ್ಷಜನಾದನವನಿಯಱಿಯೆ ೧೯

ಸರಳ ಕೌ[3]ಮಾರ[3] ಸರ್ಗದೆ ಋಭುವೆನಿಪ್ಪ ಮುನಿ
ವರನುದರದಿಂ ಯಜ್ಞನಾಗೊಗೆದನಾ ವಿಷ್ಣು
ಮರುದೇವಿ ನಾಭಿರಾಜರ್ಗೆ ಪುಟ್ಟಿದನೊಲ್ದು ಜಿನನಾಗಿಯನಸೂಯೆಗೆ
ಪರಮಾತ್ರಿ ಮುನಿಗೆ ದತ್ತಾತ್ರೇಯನಾಗೊಗೆದ
ನಿರದಂಬಿಗಿತಿಗೊಗೆದನಾ ಬಾದರಾಯಣಂ
ಮರಳಿ ನರನಾರಾಯಣಂ ಕಪಿಲನಾರದರ್ ಮೋಹಿನಿಯುಮಂತೆ ಮೆಱೆವ ೨೦

ಲಲಿತ ಧನ್ವಂತರಿಯುಮೆನಿಸಿ ವಾದಿಗಳಾದ
ಸುಲಭಾವತಾರಂಗಳಖಿಳಂಗಳೊಳವದಱಿಶೂ
ಳಲಸದಾ ವಿಷ್ಣು ತಾಯ್ತಂದೆಗಳ ಗರ್ಭದಿಂ ಪೊಱಮಟ್ಟು ಬರುತಿರ್ಪನು

---

[1] ನಾಗಿ (ಕ) [2] ಕುಷ (ಗ) [3] ರವ (ಕ)

ಸಲೆ ಹರಿಹರಾಕೃತಿಗೆ ನೋಡೆ ತಾಯ್ತಂದೆಗಳ್
ನೆಲದೊಳೆಲ್ಲಿಯುಮಿಲ್ಲದುದಱಿಂದೆ ಮತ್ತಮು
ಜ್ವಲ ಹರಿಹರಾವತಾರಂ ವಿಷ್ಣುವಿಂಗಿಲ್ಲದುದೆ ಸತ್ಯಮವನಿಯೊಳಗೆ ೩೧

ಕರಮೆ ತಾಯ್ತಂದೆಗಳ್ ನಿರುತಮುಂಟಾದೊಡದು
ಪರದೈವಮಲ್ತದೆಂತೆನೆ ಲೋಕದೊಳ್ ನೋಡೆ
ನರರ್ಗೆ ಪಿತರರ್ಕಳುಂಟಪ್ಪುದಱಿನವರೆಯ್ದೆ ದೈವಂಗಳಲ್ತು ಧರೆಗೆ
ಪಿರಿದು ಪಿತೃಮಾತೃಗಳಿಗೊಗೆದು ಸಂವರ್ತದೊಳ್
ಭರದೆ ಲಯಮಪ್ಪಧೋಕ್ಷಜನಪ್ಪ ಭೃಗುವಿನಿಂ
ಪರಿಭವಂಬಡೆದ ನಯನಾಬ್ಜಂಗಳಿಂದೆ ಶಿವಚರಣಮಂ ಪೂಜೆಗೆಯ್ದು ೩೨

ಭವಪಾಶಬದ್ಧನೆನಿಸುವ ಸಾವುಪುಟ್ಟುಗಳೊ
ಳವಿದಿರ್ಪ ವಿಷ್ಣು ನಿತ್ಯಾನಂದಮಯನೆನಿಪ
ಭವನಾಶನೆನಿಪ ತೇಜಃಪುಂಜ ಭವ್ಯಾಂಗನೆನಿಪ ಪರಮೇಶನೆನಿಪ
ತವೆ ಮೋಕ್ಷಕರನೆನಿಪ ಸರ್ವಜ್ಞನೆನಿಪ ನಿಜ
ಶಿವನೆನಿಪ ಚಿತ್ಪೂರ್ತಿಯೆನಿಪ ನಿರ್ಮಲನೆನಿಪ
ರವಿಸೋಮವೀತಿಹೋತ್ರಾಂಬಕನೆನಿಪ್ಪ ಭವನೊಳಗೈಕ್ಯತೆಯೊಳರ್ಪನೆ ೩೩

ತೊದಳಿದಂ ಕೇಳತಕ್ಕುದೆ ಮಹಾದೇವಂಗೆ
ಪದೆದೊರ್ವನೀ ಭೂಮಿಯೊಳ್ ಸದೃಶಮುಂಟೆ ಮುಂ
ದೊದವಿದಾದಿತ್ಯಂಗೆ ಖದ್ಯೋತವಿತತಿ ಲೋಕದೊಳೆಯ್ದೆ ಸರಿಯಪ್ಪುದೆ
ವಿದಿತ ವಿದ್ಯುನ್ಮಂಜರಿಗೆ ಕಿಡಿಗಳೆಣೆಯೆ ನೋ
ಡುದಿತ ಶೀತಾಂಶುಗಾಱಿಲ್ಗಡಣಮೋರಗೆಯೆ
ಅದಿತೆಸುತಗಿರಿಗೆ ನೋಡಲ್ ಕಾಗೆಪೊನ್ನಕಲ್ಸರಿಯೆ ಭೂಲೋಕದೊಳಗೆ ೩೪

ಪರಮೇಷ್ಠಿಯಿಂದಾದೊಡಂ ನೋಡಿವರ್ಕೆ ಭಾ
ಸುರಮೈಕ್ಯಮಂ ಪೇಳ್ವುದಾಗದದಱಿಂತೆವೊಲ್
ಹರಿಹರರ್ಗಾವೆಡೆಯೊಳೇಕತ್ವಮುಂಟೆ ಪೇಳ್ ಮೂಲೋಕದೆಡೆಯೊಳೊಲ್ದು
ತಿರುಗಿ ನೋಡಲ್ ಮತ್ತಮಿಂತೆಂಬೊಡಂ ಕೇಳ
ಭರದಿಂ ಶಿವಾಯಮೆನುತುಂ ವಿಷ್ಣುರೂಪಾಯ
ಮರಳಿ ಶಿವರೂಪಾಯ ವಿಷ್ಣವೇ ಎನುತೆ ಹರಿಹರರ್ಗೆ ಭೇದಂ ವಿರಚಿಪ ೩೫

ವಿದಿತ ವಾಕ್ಯಕ್ಕೆ ವಿಧಿಯಾವುದೆಂಬೊಡೆ ಕೇಳ
ಮುದದೆ ವೇದಜ್ಞರಿಂ ಪ್ರಕ್ಷಿಪ್ತಮಕ್ಕುಮಿಾ
ಪುದಿದ ವಾಕ್ಯಂ ಶಂಭುವಿನಮೂರ್ತಿ ವಿಷ್ಣು ತಾನೆಂತಪ್ಪುದೋ ಭಾವಿಸೆ
ಪದೆದು ಮೂರ್ತಾಮೂರ್ತರೂಪಮಾಗಿರುತಿರ್ಪ
ಸದಮಲೇಶಸ್ವರೂಪಂಗೇಳ ಪೇಳ್ದಪೆಂ
ಮುದದಿಂದೆ ಶಿವ ಸದಾಶಿವ ಮಹೇಶ್ವರರೆಂಬ ಮೂಱುತತ್ತ್ವಂ ತೋಱುಗುಂ ೩೬

ಪಿರಿದುಂ ಶಿವಸ್ಸದಾಶಿವ ಎನುತೆ ಮತ್ತೆ ಭಾ
ಸುರ ಮಹೇಶೋ ಮೂರ್ತಯಸ್ತ್ರಿಧಾ ಎನುತೆ ನಿ
ರ್ಧರದೆ ಪೇಳ್ವಾಗಮಮಿದರ್ಕೆ ಮಾನಂ ಬಳಿಕೆ ಶಿವತತ್ತ್ವಮೇಕರೂಪಂ
ವರ ಸದಾಶಿವತತ್ತ್ವಮೈದುಭೇದಂ ವಿಕ
ಸ್ವರ ಮಹೇಶ್ವರ ತತ್ತ್ವಮದು ಮತ್ತೆ ಭಾವಿಸಲ್
ನಿರುತಮಿರ್ಪತ್ತೈದು ಭೇದಮಾಗಿರ್ಕುಮೆಂದೊಣರ್ದು ಪೇಳ್ಗುಂ ವಾಕ್ಯಮುಂ ೩೭

ಮಿನುಪ ಶಿವಮೇಕಮೆನುತುಂ ವಿಜಾನೀಯಾತ್ತು
ಎನುತೆ ಸಾದಾಖ್ಯಮೆನುತುಂ ಪಂಚಧಾಭವೇತ್
ಎನುತುಂ ಮಹೇಶ್ವರೆನುತುಂ ಸ್ವರೂಪಮೆನುತ್ತೆ ತತ್ಪಂಚವಿಂಶತಿ ಎನೆ
ಸನಪ:ದಿಂದಾಗಮಂ ಪೇಳ್ಗುಮಿಂತೆಂದಿಪಱಿೞ
ಳನುನಯಂ ಮುಂಪೇಳ್ದ ಶಿವತತ್ತ್ವಮದು ನಿತ್ಯ
ಮನವರತಮಾನಂದಮವ್ಯಯಂ ನಿರ್ಮಲಂ ಮಾನದೂರಂ ಭಾವಿಸೆ ೩೮

ಅನುನಯದಿನಪ್ರಾಪ್ಯ ಮನಸಾ ಸಹೆನುತೆ ತೊ
ಟ್ಟನೆ ಅತ್ಯತಿಷ್ಠದ್ದಶಾಂಗುಲಮೆನುತ್ತೆ ಸ
ದ್ವಿನಯದಿಂ ನ ಸ್ಮರ್ಯತೇ ಎನುತೆ ನ ಚ ಸದೃಶ್ಯತೇ ಎನುತೆ ಘೋಷಿಸುತ್ತೆ
ಘನಮುಲಿವ ವೇದವಾಕ್ಯಂಗಳಿಂದಂ ತನ್ನ
ವಿನುತ ವೈಭವಮನಾರ್ಗಂ ತೋಱದಿರ್ಪುದದು
ಮಿನುಪ[1] ಶಾಂತಪ್ರಭಾವಂ ನಿರಾಮಯಮದೇಹಂ ವಾಙ್ಮನೋತೀತವು ೩೯

ಪಿರಿದುಂ ಸ್ವತಂತ್ರಮನವರತಮೈಶ್ವರ್ಯಮುರು
ತರ ಸರ್ವಗಂ ಪರಂಜ್ಯೋತಿರೂಪಂ ಸದಾ
ಭರಿತವೇಗಂ ಬ್ರಹ್ಮವೆನುತೆ ವಿಜ್ಞಾನಮೆನುತಾನಂದಮೆನುತೆ ಮತ್ತಂ

[1] ವಿನುತ (ಗ)

ಭರದಿಂ ನಿರಾಕಾರವೆನುತೆ ಸಾಕಾರವೆನು
ತೊರೆಯುತುಂ ಬಿತ್ತರದೆ ಚರ್ಚಿಸುವ ನಿಜಮಹಿಮೆ
ಗರ[1]ರೆ[1] ತಾಣವೆನಿಪ್ಪ ಶಿವತತ್ತ್ವಮಿದು ಶೋಭಿಸುತ್ತಿರ್ಕುಮನಿಶಮೆಯ್ದಿ ೩೦

ಮಿಸುಗುವಾ ಶಿವತತ್ತ್ವದಿಂದಾಯ್ತು ಭಾವಿಸಲ್
ಮುಸಕದಿಂ ಶಿವ ಸದಾಶಿವತತ್ತ್ವಮದು ವಿಜೃಂ
ಭಿಸಿತೋರ್ಕುಮೆಂತೆನಲ್ ವಿಶ್ವತೋಮುಖಮೆಂದು ಸರ್ವತೋಮುಖಮೆನುತ್ತೆ
ಅಸವಸಂ ಶ್ರುತಿ ಪೇಳ್ಗುಮಾ ತತ್ತ್ವದಿಂದೆ ಮ
ತ್ತೆಸೆವಮೂರ್ತಾಖ್ಯಂ ಸದಾಶಿವಂ ತತ್ತ್ವಮದು
ನಿಸದಮೊಪ್ಪುಗುಮಗ್ನಿಮೀಳೇ ಪುರೋಹಿತಂ ಎಂಬ ಶ್ರುತಿವಾಕ್ಯದಿಂದಂ ೩೧

ಮಗುಳ್ದು ವೇದಂ ನಮಸ್ತುಂಗ ಎನುತುಂ ಕರಂ
ಸೊಗಸಿನಿಂದಂ ಶಿರಶ್ಚುಂಬಿ ಎನುತೀಗಳುಂ
ಮಿಗೆ ಪೊಗಳ್ವ ನುಡಿಯಿಂದೆ ಯೋಗ್ನಿಸ್ಸಭಸ್ಮನಃ ಎನುತೆ ಮತ್ತಂ ಮುದದೊಳು
ಬಗೆದುಂ ಪರೋಹ್ಯಗ್ನಿಮೀಳೇ ಪುರೋಹಿತಂ
ನೆಗಳ್ದಿಂತೆನುತ್ತಿರ್ಪ ವಾಕ್ಯದಿಂ ಮತ್ತೆಯುಂ
ತಗುಳ್ದು ವೇದಂ ಲಿಂಗಮೂರ್ತೇ[2]ರುಮಾಪ[2]ತೇಃ ಎಂಬ ಸದ್ವಾಕ್ಯದಿಂದಂ ೩೨

ಮಿನುಪ ಮೂಲಸ್ತಂಭವೆಂಬ ಮೂಲಪ್ರಕೃತಿ
ಯೆನಿಪ ನುಡಿಯಿಂ ಲಿಂಗಮಧ್ಯೇ ಜಗತ್ಸರ್ವ
ಮೆನಿಪ ವಾಕ್ಯದಿ ಹುತವಹಸ್ತಂಭ ಎನುತುಮನಲಸ್ತಂಭವಪುಷಃ ಎನೆ
ಕೊನರ್ವ ವಾಕ್ಯದೆ ಪೇಳಪಟ್ಟ ಪರಮೇಶ್ವರಂ
ವಿನುತ ಪರಮಾತ್ಮಂ ಪರಾತ್ಪರಂ ಎನಿಸಿ ತೊ
ಟ್ಟನೆ ಅಮೂರ್ತದೊಳಿರ್ಪ ನಿಜಸದಾಶಿವತತ್ತ್ವದಿಂದೆ ಶೋಭಿಸಿ ತೋಱುವ ೩೩

ಪರಮತೇಜಃಪುಂಜಭಾಸ್ವದಗ್ಗರಿಷ್ಠ ಬಂ
ಧುರ ಮೂರ್ತಸಾದಾಖ್ಯಮಾ[3]ದತ್ತು[3] ಮತ್ತದಱ
ಸರಳಸ್ವರೂಪವೆಂತೆನೆ [4]ಕೋರದಾ[4]ಡೆಯಿಂ ಮಿಱುಪೇಕಮುಖಮೊಪ್ಪುವ
ವರಲಂಬಕರ್ಣಮುನ್ನತ ನಾಸಿಕಂ ಮನೋ
ಹರ ವಿಭೂಷಣಸಂಯುತಂ ಮತ್ತಮದಱಿಂದೆ
ನಿರುತಮಾದುದು ಕರ್ತೃಸಾದಾಖ್ಯಮದಱ ನಿಜರೂಪವೆಂತೆನೆ ಪೇಳ್ವೆನು ೩೪

---

[1] ಮೆ (ಗ) [2] ರೂಪಾಗ (ಕಟ) [3] ದಂತು (ಗ) [4] ತೋರದೊ (ಕ)

ಎಸೆವ ಯೋಗಂ ತ್ರಿಣೇತ್ರಂ ಕಲಾದಿಗಳಿಂದೆ
ಮಿಸುಗುತಿರ್ಕುಂ ಕೋರದಾಡೆಗಳ ಚೆಲ್ವಿನಿಂ
ಪಸರಿಸುತ್ತಿರ್ಪುದತಿಕಾಂತಿಯುಂ ಚಂದ್ರಾರ್ಧಶೇಖರಂ ಬಲಗೈಗಳು
ನಿಸದವೊಪ್ಪುವ ಶೂಲವೀಣಾಕ್ಷಸೂತ್ರಂಗ
ಳೊಸೆದು ವರಯುಕ್ತಂಗಳಾಗಿರ್ಕುಮಂತೆ ಶೋ
ಭಿಸುವೆಡದ ಕೈಗಳೊಳ್ ಮಾತುಳಂಗ ಕಪಾಲಮಭಯಂಗಳೊಪ್ಪುತಿರ್ಕುಂ ೩೫

ಸಲೆ ದಿವ್ಯಭೂಷಣಂಗಳ್ ದಿವ್ಯಪುಷ್ಪಂಗ
ಳಲಘುತರ ದಿವ್ಯವಸನಂಗಳೆಲ್ಲಂ ತನ್ನ
ತೊಲಗದೆ ವಿರಾಜಿಸುತ್ತಿರ್ಕುಮದು ಕರ್ತೃಸಾದಾಖ್ಯಮದಱಿಂದೆ ಮತ್ತಂ
ಸುಲಲಿತಂ ಕರ್ಮಸಾದಾಖ್ಯ ತತ್ತ್ವಮದಾದು
ದೊಲವಿನಿಂದದಱಿರವದೆಂತೆನಲ್ ಪೇಳ್ದಪೆಂ
ನಲಿದು ಲೋಕಂಗಳಂ ಸಂಹರಿಪುದರ್ಕೆ ಪಾಲಿಪುದರ್ಕೆ ಕಾರಣಮದು ೩೬

ಮಿಗೆ ನಾದಬಿಂದುಗಳಿನಾ ಕಾರ್ಯಘಟನೆಯುಂ
ಸೊಗಸಾಗಿ ಮಾಡಿಸುತ್ತಿರ್ಕುಮಾವಗಮೊಲ್ದು
ಬಗೆದುನೋಡಲ್ ಮತ್ತೆ ಲಿಂಗಪೀಠಾನ್ವಿತಾಕೃತಿಯೊ[1]ಳೆ[1]ಸೆದಿರ್ಕುಮನಿಶಂ
ನೆಗಳ್ದ ಕಲೆಗಳನೆಯ್ದಱಿಂ ಕೂಡಿ ತೋರ್ಪುದದು
ತಗುಳ್ದಱಿಯಲಾರ್ಗಮುಳವಲ್ತು ವೇದಂಗಳುಂ
ಪೊಗಳಲಱಿಯದೆ ಮತ್ತೆ ಚಕಿತಮಭಿದತ್ತೇ ಎನುತ್ತಿರ್ಕುಮಾ ರೂಪನು ೩೭

ಅನುನಯಂ ನಿಷ್ಕಲದ ಸಕಲದೊಡೆವೆರದಿರ್ಕು
ಮನವರತಮಾ ಸದಾಶಿವತತ್ತ್ವಮದಱ ನಿಜ
ತನುವಿರವದೆಂತೆನಲ್ ದರ್ಪಣಚ್ಛಾಯೆವೋಲಿಂದ್ರಧನುವಂತೆ ಮತ್ತಂ
[2]ಮಿನುಪ[2] ಚರ್ಮಾಸ್ಥಿ ಮುಖದೇಹಧರ್ಮಂಗಳಿಂ
ಘನಮಾಗಿ ತೊಲಗಿತೋರ್ಕುಂ ಕುಂದಚಂದ್ರಿಕಾ
ವಿನುತ ಗೋಕ್ಷೀರಫೇನಪ್ರಭಾವರ್ಣಕಂ ಭಸ್ಮೋಪಲಿಪ್ತಮನಿಶಂ ೩೮

ಮದನಾಂಗಮಂ ಸುಟ್ಟ ಲೋಚನಂ ಬ್ರಹ್ಮೇಂದ್ರ
ಮದನತಾತಾದಿ ಸುರವೃಂದನುತಿಪರಮಂತೆ
ಸದಮಲಾತ್ಮಕಯೋಗಿನಿಕರಪೂಜಿತಮೆಯ್ದೆ ಸಕಲನಿಷ್ಕಲರೂಪನು

---

1 ಳೊ (ಗ) 2 ವಿನುತ (ಕ)

ಪುದಿದೆಸೆದು ತೋರ್ಪ ಪಶ್ಚಿಮದ ಸದ್ಯೋಜಾತ
ವದನಮತಿ ಶೋಭಿಸುತ್ತಿರ್ಕುಮತಿಶಯದಿಂದೆ
ವಿದಿತಲೀಲಾಪ್ರಸನ್ನತ್ವದಿಂದಂ ಗತಕಳಂಕದಿಂದಂ ಸಂತತಂ ೩೯

ವಿನುತಗೌರಂ ಘುಸೃಣ ಪಿಂಗೋರುತಿಲಕಮು
ತನುನಯಂ ಕರ್ಣೋತ್ಪಲಾಂಚಿತಂ ಕರ್ಪಿನಿಂ
ಮಿನುಪ ಕೇಶಂಗಳಿಂ ಪರಿವೃತಂ ವ್ಯಾಪಾಂಡುಗಂಡಸ್ಥಲಂ ಪ್ರಹಸಿತಂ
ನನಸು ಕುಡುವುರ್ಪುಗಳ ಚಲನೆಯೊಡಗೂಡಿ ಕೆ
ಮ್ಮನೆ ನೋಳ್ಪ ಕಡೆಗಣ್ಣ ನೋಟದಿಂದೊಪ್ಪುವಾ
ಘನವಾಮದೇವ ಮುಖಮಾವಗಂ ಶೋಭಿಸುಗುಮುತ್ತರಾಶೆಯೊಳೇಗಳುಂ ೪೦

ಅಸಿತಾಭ್ರಷಟ್ಪದಾಂಜನಕಾಂತಿನಿಭಮೆಯ್ದಿ
ಮಿಸುಗುವಾ ಭ್ರೂಭಂಗ ರೌದ್ರಮಣಿಯರಮಾಗಿ
ನಿಸದಮಾ ವ್ಯಾವೃತ್ತ ಪಿಂಗೇಕ್ಷಣಂ ಸರ್ಪರಾಜಭೂಷಿತಮಾವಗಂ
ಎಸೆವ ದಾಡೆಗಳಿಂದೆ ಶೋಭಿತಂ ಸಂತತಂ
ಲಸಿತ ನೃಕರೋಟಿಮಾಲಾ ಲಲಿತಮಾಗಿ ರಾ
ಜಿಸುವ ಘೋರಾಸ್ಯಮದು ದಕ್ಷಿಣಾಶೆಯೊಳೆಸೆಗುಮುನ್ನತೋನ್ನತ ವಿಭವದಿಂ ೪೧

ವಿಲಯಾಗ್ನಿ ಚಂಚಲಾ[1]ಕ್ಷಪ್ತ ಕನಕಾಂ[1]ಶುಗಳ
ಲಲಿತಕಾಂತಿಗಳಿಂದೆ ಪಿಂಗಲಜಟಾಳಿಯಿಂ
ಸಲೆ ತಾಮ್ರವರ್ಣದಧರದೆ ಸರ್ಪಭೂಷಣದೆ ಗಂಗಾತರಂಗಮೆಸೆವ
ವಿಲಸತ್ಕಪರ್ದದಿಂದಿಂದ್ರಾದಿ ಸುರನಿಕರ
ವೊಲವಿನಿಂ ಸೇವಿಸುವ ಚರಣಯುಗದಿಂದಮು
ಜ್ವಲಮಾಗಿ ಶೋಭಿಸುವ ತತ್ಪುರುಷಮುಖಮೆಯ್ದಿ ಪೂರ್ವಾಶೆಯೊಳ್ ತೋಱುಗುಂ ೪೨

ಪಿರಿದು. ಷಟ್ತ್ರಿಂಶತತ್ತ್ವಾತೀತಮಾಗಿ ಭಾ
ಸುರತರ ವ್ಯಕ್ತಮವ್ಯಕ್ತಂ ದಲಾಗಿ ಬಂ
ಧುರ ಯೋಗಿಗಳ[2]ಜ್ಞಾ[3]ನಕಾವಾಸಮಾಗಿ ಸೂಕ್ಷ್ಮ[3]ಕ್ಕೆ[3]ಯ್ದೆ ಸೂಕ್ಷ್ಮವಾಗಿ
ಸುರವರ್ತ್ಮಸುವ್ಯಾಪಿಯಾಗಿ ತೇಜಃಪುಂಜ
ಕಿರದೆ ನೆಲೆವೀಡಾಗಿಯುತ್ತರೋತ್ತರಮಾಗಿ
ಭರದೆ ತೋರ್ಪೂರ್ಧ್ವಮೀಶಾನಾಸ್ಯಮೊಪ್ಪುಗುಂ ಸತತಂ ವಿರಾಜಿಸುತ್ತೆ ೪೩

---

[1] ಪ್ತ ಕನಕನಖಾಂ (ಗ) [2] ಜಾ (ಕ) [3] ವೆ (ಗ)

ನಿರುತವಿಂತೊಪ್ಪಿರ್ಪ ವದನಪಂಚಕದಲ್ಲಿ
ಕರವೆಸೆದು ತೋಱುವೊಂದೊಂದು ಮೊಗದೊಳಗೆ ಭಾ
ಸ್ಕರ ಸೋಮವಹ್ನಿಗಳ್ ತೋರ್ಪ ಮುಕ್ಕಣ್ಣ ಳಿಂದೆಡಗೈಗಳೈದಱೊಳಗೆ
ಸರಳ ಪಾಶಾಂಕುಶಾನಲಸರ್ಪಘಂಟೆಗಳಿ
ನಿರದೆ ಬಲಗೈಗಳೈದಱೊಳೆಸೆದು ತೋರ್ಪ ಬಂ
ಧುರ ಪರಶ್ವಭಯ ಶೂಲಾಸಿ ಪವಿಗಳಿನೆಯ್ದೆ ಮಿಱುಗುತ್ತೆ ಪೊಳ್ತು ಮತ್ತಂ ೪೪

ಮಿನುಪ ಪಳುಕಿನ ನುಣ್ಗದಿರನೇಳಿದಂಗೆಯ್ವ
ತನುಕಾಂತಿಯಿಂದೆ ನಿಜ ಭವ್ಯಪದ್ಮಾಸನದೆ
ವಿನುತ ದಿವ್ಯಾಂಬರಾಭರಣಾನುಲೇಪನಂಗಳಿನೆಯ್ದೆ ಪೂತಮಾದ
ಕೊನರ್ವ ಪಂಚಬ್ರಹ್ಮಸೂಕ್ತನುತಿವಿಸರದಿಂ
ದೆನಸುಮೊಪ್ಪುತ್ತಿರ್ಪ ಕರ್ಮಸಾದಾಖ್ಯದಿಂ
ಘನಮಹೇಶ್ವರತತ್ತ್ವಮಾಯ್ತುದಱ ಮಹಿಮೆಯಂ ಕೇಳ್ ಪೇಳ್ವವತಿಶಯದೊಳು ೪೫

ಸಲೆ ಪರಸ್ಸ ಮಹೇಶ್ವರಃ ಎಂದು ಮತ್ತೆ ನಿ
ರ್ಮಲ ಪರಾತ್ಪರತರೋ ಬ್ರಹ್ಮಾ ಎನುತ್ತೆ ಮ
ತ್ತೊಲವಿನಿಂದಂ ಪರಾತ್ಪರತರೋ ಹರಿಯೆನುತೆ ಮಿಗೆ ಪರಾತ್ಪರ ಎನುತ್ತೆ
ನಲಿದು ಮತ್ತಂ ತಯೋರೈಶಮೆನುತುಂ ವಾಕ್ಯ
ಮುಲಿಯುತಿರ್ಕುಂ ಮತ್ತೆ ಶಂಭುರ್ಮೃಡಃ ಎನುತೆ
ಸುಲಭದಿಂ ಮತ್ತೆ ಶಂಕರ ಈಶ್ವರೋ ವಾ ಮಹೇಶ್ವರೋ ವಾ ಎನುತ್ತೆ ೪೬

ಮರಳಿ ನಹಿ ವಿಷ್ಣುರುಕ್ತಃ ಎನುತ್ತಿಂತೆಸೆದು
ಭರದಿಂ ಮಹಾಸ್ತೋತ್ರಮುಲಿದಂತೆ ಭಾವಿಸಲ್
ನಿರುತದಿಂ ವಿಷ್ಣುಮುಖ್ಯರ್ಗೆ ನೋಡಲ್ ಮಹಾದೇವಾದಿ ನಾಮನಿಕರಂ
ಪಿರಿದುಂಟೆ ವಾಸುದೇವಂ ಬ್ರಹ್ಮದೇವನೆಂ
ದಿರದೆ ಲಕ್ಷ್ಮೀಶ್ವರಂ ವಾಗೀಶ್ವರಂ ಎಂದು
ಹೊರಿಸು[1]ದಿಂದುಪಪದಂಗೂಡಿ ವಿಷ್ಣ್ವಾದಿಗಳ್ಗೀ ನಾಮಮೊಪ್ಪುತಿರ್ಕುಂ ೪೭

ನೆಗಳ್ದುಪಪದಂ ಪೊರ್ದದಾ ಮಹಾದೇವಂಗೆ
ತಗುಳ್ದು ದೇವೇಶ್ವರರೆನಿಪ್ಪ ನಾಮಂಗಳಱಿ
ಸೊಗಯಿಸಿರ್ಕುಂ ಮುಖ್ಯಮಾಗಿ ಸತತಂ ಮತ್ತಮಾ ಮಹಾದೇವನೆಯ್ದೆ

[1] ರುಪ (ಗ)

ಮಿಗೆ ಭಾಳತಟವಹ್ನಿಲೋಚನನೆರಳ್ಕೆಲದೊ
ಳಗಲದೆಸೆದಿರ್ಪ ರವಿ ಸೋಮನಯನಂ ಚಲ
ದ್ಗಗನಗಂಗಾತುಂಗಲಸದೂರ್ಮಿ ತಾಟಿತಾಮಲಪಿಂಗಜೂಟಬಂಧಂ ೪೮

ಮೃಗಧರ ಕಲಾವತಂಸಂ ಚಲದ್ವರ ಮಹೋ
ರಗ ಕುಂಡಲಂ ಶೂಲಡಮರುದಾನಂಗಳಿಂ
ತಗುಳ್ದು ಭಯದಿಂದೆ ಪರಿಶೋಭಿಪ ಚತುರ್ಭುಜಂ ದೇವದಾನವ ಮುಖ್ಯರ
ಸೊಗಯಿಪ ಶಿರೋಮಾಲೆಯಿಂದೆ ರಾಜಿಸುತಿರ್ಪ
ನೆಗಳ್ದ ದೇಹಂ ದಿವ್ಯವಸನಭೂಷಣಮಾಗಿ
ಮಿಗೆ ಮಹೇಶ್ವರತತ್ತ್ವಮನವರತಮೊಪ್ಪುಗುಂ ಬಗೆದದಂ ಪೊಗಳ್ವನಾವಂ ೪೯

ಪಿರಿದು ಮತ್ತದಱ ಲೀಲಾಮೂರ್ತಿ ಮಹಿಮೆಯಂ
ನಿರವಿಸೆಂ ಕೇಳ್ ಭೀತಿಯಿಂ ಬಂದ ಶಶಧರನ
ವರಕಲೆಯನೊಲ್ದು ಸೂಡಿದುದಾದಿಲೀಲೆ ದಕ್ಷಾತ್ಮಜೆಯನಳ್ತಿಯಿಂದಂ
ವರಿಸಿದುದು ಬಳಿಕೆರಡನೆಯ ಲೀಲೆ ವೃಷಭನಂ
ಹರಿಸದಿಂ[1] ವಾಹನಂಗೆಯ್ದುದದು ಮೂಱನೆಯ
ದುರುತರ ಗಜಾಸುರನ ಕೊಂದು ನೃತ್ಯಂಗೆಯ್ದ ಲೀಲೆ ನಾಲ್ಕನೆಯದೆನಿಕುಂ ೫೦

ಸರಳ ಗೌರೀವಿವಾಹಂ ನೋಡಲೈದನೆಯ
ದರರೆ ವಿಷ್ವಕ್ಸೇನನಂ ಕೊಂದು ವಿಧಿಯ ಭಾ
ಸುರ ಕಪಾಲಂದಳೆದುದಾಱನೆಯದಂಗಭವನಂ ಕೊಂದುದೇಳನೆಯದು
ಉರುತರ ಶ್ವೇತಮುನಿಯಂ ಪಿಡಿದ ಕಾಲನಂ
ಪರಿಭವಂಗೆಯ್ದುದೆಂಟನೆಯ ಧಾತ್ರಿಪುರಮಂ
ಪಿರಿಯ ನಡುಗಣ್ಣಗ್ಗಿಯಿಂ ಸುಟ್ಟ ಲೀಲೆಯೊಂಬತ್ತನೆಯದೊಸೆದು ನೋಡೆ ೫೧

ಮುರರಿಪುವನೆಳೆದು ಕಟ್ಟಿದ ಜಲಂಧರನ ಮು
ತ್ತಿರದೆ ಸುಟ್ಟುದು ಹತ್ತನೆಯದಹಂಬ್ರಹ್ಮಮೆಂ
ದುರುಗರ್ವದಿಂ ನುಡಿದ ಬರ್ಮ ಶಿರವರಿದುದದು ಪನ್ನೊಂದನೆಯದು ನೋಡೆ
ಭರದಿಂದ ದಕ್ಷಯಜ್ಞಪ್ರಭಂಜನನೆನಿಪ
ವರ ವೀರಭದ್ರೇಶ್ವರನ ಮೂರ್ತಿ ಮತ್ತೆ ಪ
ನ್ನೆರಡನೆಯದಾ ನೃಸಿಂಹನ ಕೊಂದ ಶರಭತನು ಪದಿಮೂಱನೆಯದು ನಿಸದಂ ೫೨

---

1 ರುಷ (ಗ)

ಮಿಸುಪರ್ಧನಾರೀಶ್ವರತ್ವಮದು ನಾಡೆ ರಾ
ಜಿಸುವ ಪದಿನಾಲ್ಕನೆಯದಾ ಕಿರಾತಾಕೃತಿಯ
ಮುಸಕದಿಂ ಧರಿಸಿದುದು ಪದಿನೈದನೆಯದು ಕಂಕಾಳವೇಷಂದಾಳ್ದುದು
ಅಸವಸಂ ಪದಿನಾಱನೆಯದು ಚಂಡೇಶಂಗೆ
ನಿಸದಂ ಪ್ರಸಾದವಿತ್ತುದು ಭಾವಿಸಲ್ಕೆ ಷು
ತ್ರಿಸೆವ ಪದಿನೇಳನೆಯದಾ ವಿಷಂದಳೆದುದದು ಪದಿನೆಂಟನೆಯದೆನಿಪುದು ೫೩

ಮುರರಿಪುಗೆ ಚಕ್ರನೇತ್ರಂಗಳಂ ಕೊಟ್ಟುದದು
ಪರಿಕಿಸಲ್ ಪತ್ತೊಂಬತನೆಯದಾ ಬೆನಕಂಗೆ
ಪಿರಿದುಂ ಪ್ರಸನ್ನನಾದುದು ನೋಡಲಿರ್ಪತ್ತನೆಯದೆನಿಸುಗುಂ ಭಾವಿಸೆ
ಹ[1]ರಿಸ[1]ದಿನುಮಾ ಷಡಾನನರ್ಗೆ ತನ್ನಧಿಕತೆಯ
ನೊರೆದುದಿರ್ಪತ್ತೊಂದನೆಯದೆನಿಕುಮಾವಗಂ
ಚರಣವೊಂದಱೊಳಿರ್ದ ವಿಗ್ರಹಂ ನೋಡಲಿಪ್ಪತ್ತೆರಡನೆಯದೆನಿಪುದು ೫೪

ಗರುಡಧ್ವಜಾಬ್ಜಾದಿಗಳ್ಗೊಲ್ದು ಸೇವಿಪುದು
ಪಿರಿಯವಿರ್ಪತ್ತುಮೂಱನೆಯದೆನಿಕುಂ ಮನೋ
ಹರ ದಕ್ಷಿಣಾಮೂರ್ತಿರೂಪದಿಂ ಮುನಿಗಳಂ ತಿಳಿಪುದುದು ಪರಿಭಾವಿಸೆ
ನಿರುತಮಿರ್ಪತ್ತನಾಲ್ಕನೆಯದೆನಿಕುಂ ಮತ್ತೆ
ಸರಳೋರು ಲಿಂಗಾಕೃತಿಯಿನಿರ್ಪುದಾವಗಂ
ಭರದಿನಿರ್ಪತ್ತೈದನೆಯದೆನಿಕುಮಿಂತು ರಾಜಿಸುತಿರ್ಕುಮನವರತವು ೫೫

ಮಿನುಗುತುಂ ಪ್ರಜನನಮುಲಂಕೃತಂ ಎನುತೆ ತೊ
ಟ್ಟನೆ ವಲಂ ಜ್ವಲನ ಎನುತುಂ ಸ್ತಂಭರೂಪಿಣೇ
ಎನುತೆ ವೇದಂ ಪೊಗಳುತಿರೆ ಸೆಣಸುತಿರ್ಪ ವಿಷ್ಣ್ವಜರ ಮಧ್ಯದೊಳಜಸ್ರಂ
ಘನಲಿಂಗರೂಪದಿಂದೊಪ್ಪಲವರಿರ್ವರುಂ
ವಿನತರಾಗುತ್ತೆ ಗರ್ವವನುಳಿದು ನುಡಿದರೀ
ವಿನುತಮೂರ್ತ್ಯತ್ವಮೆಯ್ದಿದರೆ ಕರ್ತೃಗಳೆನುತೆ ಪರ್ದು ಪಂದಿಗಳಾಗುತೆ ೫೬

ಭರದಿನಜನೆಯ್ದಿದಂ ಮಕುಟಮಂ ಕಾಣ್ಬೆನೆನು
ತುರುಚರಣಮಂ ಕಾಣ್ಬೆನೆನುತೆಯ್ದಿದಂ ವಿಷ್ಣು
[2]ಪಿ[2]ರಿದವರ್ಮಕುಟ ಪಾದಂಗಳಂ ಕಾಣಲಱಿಯದೆ ತೊಳಲಿಬಂದರೆಂದು

1 ರುಷ (ಗ)   2 ಪ (ಕ)

ನಿರುತದಿಂ ಬ್ರಹ್ಮೋತ್ಪಪಾತದಿವಮೆನುತೆ ಭಾ
ಸುರದೆ ವಾಕ್ಯಂ ಪರಾಹೋ ವಿಷ್ಣುವೆನುತೆ ನಿ
ರ್ಭರವಾಗಿ ಘೋಷಿಸುತ್ತಿರ್ಕುಮನಿಶಂ ಮತ್ತಮುಪರಿರ್ವರಾ ಸ್ಥಾಣುವಂ ೫೭

ವಿನುತ ಲಿಂಗಾಷ್ಟಕದೆ ನುತಿಸಿದರೆನಲ್ ಮತ್ತೆ
ಮಿನುಗುವಿರ್ಪತ್ತೈದು ಲೀಲೆಯಂ ಭಾವಿಸು
ತ್ತನುನಯದೆ ವರ್ಣಿಪನದಾವನಾ ಶ್ರೀರುದ್ರಮೂರ್ತಿಯಾಗೆಸೆದು ತೋರ್ಪ
ಘನಮಹೇಶ್ವರತತ್ತ್ವಮಂ ಶ್ರುತಿಗಳಾವಗಂ
ವಿನಯದಿಂದಂ ನಮೋ ಭಗವತೇ ರುದ್ರಾಯ
ಎನೆ ನಮಸ್ತೇ ಅಸ್ತು ರುದ್ರಾಯ ಎನಲೂರ್ಧ್ವಬಾಹುವೇ ಎನಲುಮಂತೆ ೫೮

ಮಿನುಗುವೇಕೋ ರುದ್ರ ಉಚ್ಯತೇ ಎನೆ ಮತ್ತೆ
ವಿನಯದಿಂ ವಿಶ್ವಾಧಿಕೋ ರುದ್ರ ಎನೆ ಮತ್ತೆ
ಸುನಯದಿಂದಂ ನಮೋ ಅಸ್ತು ರುದ್ರಾಯ ಎನೆ ಮತ್ತಮಾ ವೇದಂಗಳು
ಘನತರ ಧ್ಯಾನದಿಂದಂ ನಮೋ ರುದ್ರಾಯ
ಎನುತಲುಂ ರುದ್ರಃ ಪಶೂನಾಮೆನಲ್ ಮತ್ತಾ
ಮನುನಯಂ ರುದ್ರಾಯತೇ ರಸವತೇ ಯ ಏಕೋ ರುದ್ರ ಎನುತೆ ಮತ್ತಂ ೫೯

ವಿನಯದಿಂದಂ ನಮಸ್ತೇ ರುದ್ರ ಮನ್ಯವೇ
ಎನುತಲುಂ ಮತ್ತೆ ಕದ್ರುದ್ರಾಯ ಎನೆ ಮತ್ತೆ
ಸನಯದಿಂದಂ ನಮೋ ರುದ್ರಾಯ ಮನ್ಯವೇ ಎನೆ ವೇದತತಿ ಮುದದೊಳು
ಕನದಮಲ ರುದ್ರಮಹಿಮೆಯ ಬಲ್ಲನೆಲ್ಲಿದಂ
ಮಿನುಪ ನ ಮನಃ ಕಸ್ಯ ನ ವಚಃ ಎನುತ್ತೊಲ್ದು
ಮನನೊಸೆದು ಪೇಳುತಿರಲೀ ರುದ್ರಮೂರ್ತಿಯಂ ಪೊಗಳಲಾವಂ ದಕ್ಷನು ೬೦

ಮಿಸುಗುವೀ ರುದ್ರಮೂರ್ತಿಯ ವಾಮಭಾಗದಿಂ
ದೊಸೆದು ಜನಿಸಿದ ವಿಷ್ಣುಸದೃಶನೆಂತಪ್ಪನೋ
ಮಸಕದಿಂದಾ ರುದ್ರನೊಡನೆ ನಿಃಕಲ ಸಕಲರೂಪಪ್ಪ ಪರಮೇಶನ
ಎಸೆವ ತತ್ತ್ವತ್ರಯ ಸಮುಂಚಿತ ವಿಭಾಸುರೋ
ಲ್ಲಸಿತ ಮೂರ್ತಿಗಳೊಳ್ ವಿವೇಕಿಸಲ್ ಹರಿಮೂರ್ತಿ
ನಿಸದಮಾಗಾವಮೂರ್ತಿಯೊ ಕೂಡಿ ತೋರ್ಪಡೆಲೆ ನೀಚ ಬೌದ್ಧನೆ ಸಂತತಂ ೬೧

ಮಿನುಪ ಶಿವರೂಪಾಯ ವಿಷ್ಣವೇ [1]ಎನುತೆ[1] ತೊ
ಟ್ಟನೆ ನುಡಿದ ವಾಕ್ಯಮತ್ಯಂತಯುಕ್ತಮದಲ್ತು
ಮನಸಿಜಹರಂಗೆ ಕೊರಲೊಳ್ ಕರ್ಪು ವಿಷ್ಣುವಿಂಗುರದೊಳಗೆ ವತ್ಸಮಂತೆ
[2]ವಿನುತ[2] ನೇತ್ರತ್ರಯಂ ಶೂಲಿಗಾ ವಿಷ್ಣುವಿಂ
ಗೆನಸುಮಕ್ಷಿದ್ವಯಂ ಶರ್ವಂಗೆ ಪಣ್ಣಿಲೋ
ಚನಮಸುರರಿಪುಗೆ ನೀರಜನೇತ್ರಮೆಂತು ಸರಿಯಪ್ಪರೋ ಶಿವಹರಿಗಳು ೬೨

ಸಲೆ ನೃಸಿಂಹಾದ್ಯ ಜಿನವಸನಮಭವಂಗೆ ನಿ
ರ್ಮಲ ಪೀತವಸನಮಸುರಾರಿಗಾ ಶಂಕರಂ
ಗೊಲವಿನಿಂ ಯಜ್ಞ ಚರ್ಮೋತ್ತರೀಯಂ ಚೇಲಮುತ್ತರೀಯಂ ವಿಷ್ಣುಗೆ
ಸಲಿಲಜೋದ್ಭವರಸ್ಥಿಮಾಲೆ ಪಶುಪಂಗೆ ಸ
ಲ್ಲಲಿತ ವನಮಾಲೆ ತದ್ಧರಿಗೆ ಪದ್ಮಾಸನನ
ಲುಲಿತ ಜಟೆ ಯಜ್ಞಸೂತ್ರಂ ಶಂಕರಂಗೆ ಬಱುಜನ್ನಿವರಮಾ ವಿಷ್ಣುಗೆ ೬೩

ಹರಿನೇತ್ರ ಪೂಜಿತಪದಂ ಶಂಕರಂಗೆ ಪುರ
ಹರನಿಂದೆ ಖಂಡಿಸದ ಕಾಲುಪೇಂದ್ರಂಗೆ ಭಾ
ಸುರ ಕೂರ್ಮಶಿರದಿಂದಮೊಪ್ಪುವುದರಂ ಶಂಭುಗಾ ವಿಷ್ಣುವಿಂಗೆ ಸತತಂ
ಹುರಿಗೆಯ್ದ ನೇಣಿಂದಮೊಪ್ಪುವುದರಂ ಮಿಱುಗು
ಉರಗರಾಜನ ಫಣಾರತ್ನಮಿಾಶಂಗೆ ಭಾ
ಸುರ ಕೌಸ್ತುಭಂ ಕೇಶವಂಗೊಪ್ಪುಗುಂ ಮತ್ತೆ ಪಾಸಟಿಯಮೆಂತೊ ಅವರ್ಗೆ ೬೪

ಶರದಭ್ರಕರ್ಪೂರ ಮಂದಾರ ತಾರ ಭೂ
ಧರ ಹಾರ ಸುರಗಜ ಕ್ಷೀರವಾರಾಶಿ ಶಶ
ಧರ ಮಲ್ಲಿಕಾ ಕುಂದ ಮಲಯೇಜ ಹಿಮ ಹಾಸ ಶೇಷ ಧವಳಾಂಬುಜಾತ
ವರ ಮರಾಳಾಮೃತೋಜ್ವಲಕಾಂತಿಗಳನೆಯ್ದೆ
ಭರದೆ ಕೀಳ್ಮಾಳ್ಪ ತನುಕಾಂತಿಯಿಂ ಶೋಭಿಸುವ
ಪರಮೇಶ್ವರಂಗೆ ವಿಷ್ಣ್ವರ್ಚಿತಪದಂಗೆ ಧೂರ್ಜಟಿಗೆ ಕರುಣಾಕರಂಗೆ ೬೫

ಅಸಿತಗಿರಿ ಕಾಳೋರಗ ಭ್ರಮರ ನೀಲಾಭ್ರ
ಲಸಿತ ಕೋಕಿಲ ಕಲ್ಮಷಾಂಜನಾಜ್ಞಾನ ರುಚಿ
ನಿಸರಕ್ಕೆ ಪಾಸಟಿಯೆನಿಪ್ಪ ತನುಕಾಂತಿಯಿಂ ಮಿಱುಪಧೋಕ್ಷಜನೆನಿಸುವ

---

1 ಯೆಂದು (ಗ) 2 ಎನುತೆ (ಕ)

ಬಿಸಜಾಕ್ಷನಂ ಬಳಿಕ್ಕಿಂದ್ರಾನುಜನನೆಯ್ದಿ
ಮಸಕದಿಂ ತೋಡೆನುತ್ತಿರ್ಪ ಮಾನವ ತತಿಗೆ
ನಿಸದಮಕ್ಕುಂ ಪಾಪನೀರನಿಧಿಯೊಳ್ ಮಗ್ನನಾಗಿ ಚರಿಸುತ್ತಿರ್ಪುದು ೬೬

ಹರನೊರ್ವನಲ್ಲದನ್ಯರನಱಿಯದಿರ್ಪ ಭಾ
ಸುರಗಿರಿಜೆಯುಂ ಪಲಬರೊಳ್ ಪುರುಷರೊಳ್ ಕೂಡಿ
ಹ[1]ರಿಸ[1]ದಿಂ ಚರಿಯಿಸುವ ಸಿರಿಯುಮೇಂ ಪಾಸಟಿಯೆ ಈಶವಾಹನ ವೃಷಭನುಂ
ಪಿರಿದುಮಾ ವೃಷಭೇಶ್ವರನ ಸುಯ್ಯುಗಾಳಿಯಿಂ
ಕರಮೆ ದುಃಖಂಬಟ್ಟ ಗರುಡನುಂ ಗೆಡೆಯೆ ಮ
ತ್ತಿರದಿಂತು ತನುಕಾಂತಿ ಮುಖ್ಯಮಾಗೆಲ್ಲಮಂ ಸರಿಯಲ್ತು ಶಂಭುವಿಂಗೆ ೬೭

ಅಂತುಮಲ್ಲದೆ ತನಗೆ ಜನನವಿಲ್ಲದೆ ಲೋಕ
ಸಂತತಿಯನೊಲ್ದು ಪುಟ್ಟಿಸಭವಂಗಂ ಪುಟ್ಟ
ಸಂತತಂ ಚರಿಪ ಹರಿಗಂ ಸರಿಯೆ ಮತ್ತೆ ನೆಱೆ ಬರ್ದುಕುತುಂ ತಾನಳ್ತಿಯಿಂ
ಮುಂತುಗೊಂಡೆಲ್ಲಾ ಜಗಂಗಳಂ ಬರ್ದುಕಿಸುವ
ನಂತಗುಣನಿಧಿಮೃಡಂಗಂ ಬಳಿಕ್ಕಾತನಿಂ
ದಂ ಶವೆ ಬರ್ದುಂಕುವಾ ವಿಷ್ಣುವಿಂಗೆಂತೊ ತೊಣೆ ಮೂಲೋಕದೊಳ್ ಭಾವಿಸೆ ೬೮

ಲಯಮನುಱೆ ತಾನೆಯ್ದದೇ ಲೋಕನಿಕರಮಂ
ರಯದಿಂದೆ ಲಯಮನೆಯ್ದಿಪ ಹರಂಗಂ ಮತ್ತೆ
ಲಯರಹಿತ ಹರನಿಂದೆ ಲಯಮನೆಯ್ದುವ ವಿಷ್ಣುಗಂ ಸರಿಯದೆಂತಪ್ಪುದೊ
ನಯದಿಂದೆ ವಿಶ್ವಾಧಿಕಃ ಎನಲ್ ಶ್ರುತಿ ಮತ್ತೆ
ನಿಯತದಿಂ ವಿಶ್ವಾಧಿಕೋ ಹರಃ ಎನೆ ವಿಶ್ವ
ಮಯ ಎನಲ್ ಶ್ರುತಿ ಶಿವನನಾ ವಿಷ್ಣುವಂ ವಿಶ್ವ ಎನೆ ಬಳಿಕ್ಕಾ ವೇದವು ೬೯

ಪಿರಿದು ಯಜ್ಞೇಶ್ವರಃ ಎನುತೆ ಶಿವನಂ ಪೇಳ್ಗು
ಮಿರದೆ ಯಜ್ಞಸ್ಯ ಶಿರ ಎನುತೆ ಶಿವನಂ ಪೇಳ್ಗು
ಮರರೆ ಮತ್ತಂ ಯಜ್ಞರೂಪಃ ಎನುತ್ತೆ ಹರಿಯಂ ಪೇಳ್ಗುಮನವರತವು
ನಿರುತಮಾ ಯಜ್ಞಯಜ್ಞೇಶ್ವರರ್ ಭಾವಿಸಲ್
ಭರದಿನೊಂದೆಂತಪ್ಪರೋ ನೋಡಲಿದು ಪೊಸತು
ಧರಣಿಯೊಳ್ ಮತ್ತಮಾ ವೇದವಿಂತೆಂದು ಪೇಳ್ಗುಂ ಸಂತತಂ [2]ಮುದ[2]ದೊಳು ೭೦

---

1 ರುಷ (ಗ) 2 ಮನ (ಗ)

ನಲಿದು ಪೂರ್ವಂ ಪುರುಷ ಎನುತೆ ಪರಮೇಶ್ವರನೆ
ಸಲೆ ಪುರುಷನೆಂದು ಪೇಳ್ಗುಂ ಜಗತ್ಪ್ರಕೃತಿಯೆನು
ತೊಲವಿನಿಂ ವಿಷ್ಣುವಂ ಪ್ರಕೃತಿಸ್ವರೂಪನೆನುತುಂ ಪೇಳ್ಗುಮದಱಿನೆಯ್ದೆ
ಅಲಘುತರ ಪುರುಷನುಂ ಪ್ರಕೃತಿಯುಂ ಲೋಕದೊಳ
ಗಲರ್ದೊಂದೆ ಆದ ತಾಣಮದುಂಟೆ ಭಾವಿಸಲ್
ನೆಲೆಯಾಗದೀಮಾತು ಸಭ್ಯರೊಸೆದಾಲಿಸಲ್ಕವರಿರ್ವರೊಂದೆಂಬುದು ೭೧

[1]ಹ[1]ರಿಯ ಕಣ್ ತಲೆ ದಾಡೆ ಬೆನ್ನೆಲ್ವು ದೇಹಮುರು
ತರವದನ ಚರ್ಮಂಗಳೆಂಬಿವುಂ ಪಶುಪತಿಗೆ
ವರಭೂಷಣಂಗಳಾಗಿರೆ ಶಿವನ ನಿತ್ಯತೆಯನಾ ಹರಿಯನಿತ್ಯತೆಯನು
ಭರದೆ ಕನ್ನಡಿಸುಗುಂ ನಿತ್ಯಂ[2]ಗೆ[2]ನಿತ್ಯನೆಂ
ತೊರೆಯೆ ಸರಿಯಕ್ಕುಮಿದನಱಿಯದೇ ಮೋಹದಿಂ
ಹರಿಹರರ ಸರಿಯೆಂಬವರ್ ಮಾನವರ್ ನಾಡೆ ಪೊಲೆಗುಲದೊಳೊಗೆಗುಮನಿಶಂ ೭೨

ಮಿನುಗುತುಂ ಯೋ ಮಹಾದೇವಮನ್ಯೇನ ಎಂ
ದೆನುತೆ ಮತ್ತಂ ಹೀನದೈವೇನ ಎನುತೆ ತೊ
ಟ್ಟನೆ ದುರ್ಮತಿಸ್ಸಕೃತ್ಯಾಧಾರಣಂ ಎನುತ್ತಂ ತ್ಯಜಃ ಎನುತೆ ಮತ್ತಂ
ವಿನಯದಿಂದಂ ನಾಂತ್ಯಜೋಂತ್ಯಜಃ ಎನುತೆ ಮ
ತ್ತನುನಯದಿನಿಂತು ಪೇಳ್ಗುಂ ವಾಕ್ಯಮದಱಿಂದೆ
ಬಿನುಗರಾದಜ ವಿಷ್ಣು ಹೀನದೈವಂಗಳಂ ಶೂಲಿಗೆಣೆಯೆನೆ ಪಾತಕಂ ೭೩

ಹರಿಹರರ್ಗೊಲ್ದು ಭೇದಂಬೇಳ್ವನಾವನವ
ನಿರದೆ ಪತಿತಂ ದಲೆನಿಕುಂ ವಾಕ್ಯಮೆಂತೆನಲ್
ಭರದಿಂದಮೀಶ್ವರಸ್ಯ ತಥಾ ಎನುತ್ತೆ ಮತ್ತಂ ಹರೇಃ ಎನುತೆ ಸತತಂ
ಪಿರಿದಿಂತು ಪೇಳ್ಗುಮದಱಿಂದಮವರೀರ್ವರುಂ
ಕರಮೆ ಭೇದಂ ದಲೆನಿಸುಗುಮೀಶಮಹಿಮೆಯುಂ
ಹ[1]ರಿಸ[1]ದಿಂ ನಿಂದಿಪರ ಕೂಡೆ ತರ್ಕಿಸಲನ್ಯದೈವಮುಂ ನೆನೆದುದರ್ಕಂ ೭೪

ಪಿರಿದು ಪರಿಹಾರಾರ್ಥಮಾಗಿ ಗುರುಪಾದಕ್ಕೆ
ವರವೃಷಭ ನಂದೀಶ್ವರರ ಭೃಂಗಿರಿಟಿಯ ಭಾ
ಸುರತರ ಪ್ರಮಥನಾಯಕರ ಬಸವೇಶ್ವರನ ಪಶುಪತಿಯ ಚರಣಮೆಂಬ

---

1 ಹಿ (ಗ)  2 ಗೆ (ಕ)

ಸರಸೀರುಹಕ್ಕೆ ನಿಜಭಕ್ತಿಪರವಶದಿಂದೆ
ಮರಳಿಮರಳಿಯುಂ [1]ಮತ್ತೆ[1] ಮಗುಳ್ದು ಮಗುಳ್ದುಂ ಕರಂ
ಹ[2]ರಿಸ[2]ದಿಂದಂ ತುಳಿಲ್ಗೆಯ್ದುಂ ತುಳಿಲ್ಗೆಯ್ದಮಘತತಿಯ ಪೆಱನೂಂಕುವೆಂ ೭೫

ಸದಮಲಪ್ರಚುರವಿಶ್ರುತ ಪರಮಭಕ್ತಗಣ
ಪದಸರೋರುಹಸಾಂದ್ರ ಮಕರಂದಪಾನ ಸ
ಮ್ಮುದಿತ ಚಂಚಚ್ಚಂಚರೀಕನನವರತ ಪಂಚಾಕ್ಷರೀಪ್ರಸಿತಹೃದಯಂ
ವಿದಿತ ಮಂಜುಳನೀಲಕಂಠಾಹ್ವಯಂ ಮನೋ
ಮುದದೆ ಪೇಳ್ದುರುತರಾರಾಧ್ಯಚಾರಿತ್ರದೊಳ
ಗಿದು ಹರಿಹರೈಕತ್ವ ನಿರಸನದ ಕಥನಮಿದನಾಲಿಪುದು ಶಿವಶರಣರು ೭೬

1 ಮಂತೆ (ಗ) 2 ಱುಷ (ಗ)

# ಹದಿನಾರನೆಯ ಸಂಧಿ

## ದಕ್ಷಾಧ್ವರದ ಕಥೆ

ಸೂಚನೆ: ದಕ್ಷಾಧ್ವರಧ್ವಂಸಕಥನಮಂ ಕೇಳ ಸೂರ
ವೃಕ್ಷಸನ್ನಿಭದಾನಶೀಲ ಹಗರಣಲೋಲ
ಋಕ್ಷಪತಿಜೂಟ ಭಕ್ತಾಂಬುಜಾದಿತ್ಯ ಸೂರಾಮಾತ್ಯ ಮನದಳ್ಕಱಂ

ಜೆಡೆಮುಡಿಯ ನಡುವೆ ಮಡುಗಟ್ಟಿಡ್ಡಮಾಗಿ ಬಿಡ
ದೊಡನೊಡನೆ ಕಡುನಿಮಿರ್ದು ಪೊಡಕರಿಪ ತೆರೆಗುಡಿಯೊ
ಳೆಡೆವಱಯದೋರಣಂಬಡೆದು ಸಡಗರಗೂಡಿ ತೂಗಾಡುತೆಸೆದು ತೋರ್ಪ
ನಿಡಿದಾದ ರಾಯಂಚೆ ಸಾಲ್ಗೆ ಗೆಡೆಯೆನಿಸಿ ಬೆ
ಳ್ಪಡರ್ದು ತಲೆದೊಡವಾದ ರುಂಡಮಾಲೆಗಳಿಂದೆ
ಪಡಪುದೋಱುವ ನೀಲಕಂಠಲಿಂಗಂ ಪೊರೆಗೆ ಪೊಡವಿಗಡಣಮನಣಿಯರಂ ೧

ಪುರಹರಂ ದಕ್ಷನತಿವಿಧಿಯಿಂದೆ ಮಾಡುವ
ಧ್ವರಮನೇತರ್ಕೆ ಕಿಡಿಸಿದನೆಂಬೊಡದನೊಲ್ದು
ಹ[1]ರಿಸ[1]ದಿಂ ಕೇಳ್ ಬೌದ್ಧ ದಕ್ಷನುರುಗರ್ವದಿಂ ಜನ್ನಮಂ ಮಾಡಲೆಸಗಿ
ಪರಮೇಷ್ಠಿ ವಿಷ್ಣುಮುಖದೇವ[2]ರ್ಕ[2]ಳಂ ಬರಿಸಿ
ಪಿರಿಯ ಪೆಣ್ಮಕ್ಕಳಂ ಜಾಮಾತೃವರ್ಣಮಂ
ಸರಸತಿಯನಿಂದಿರೆಯನಮರಸತಿಯರ್ಕಳಂ ಕರಸಿ ಸಂತೋಷದಿಂದಂ ೨

ಸಲೆ ಯಜ್ಞದೀಕ್ಷೆಯಂ ಕೊಳಪೋಪ ದಕ್ಷನಂ
ನಲವಿನಿಂ ನುಡಿದಳಾ ಶಿವೆ ಮಹಾದೇವನಂ
ಲಲಿತ ಯಜ್ಞೇಶ್ವರನನೇತರ್ಕೆ ಕರೆಯಿಸೆ ಎನಲ್ಕವಂ ದಕ್ಷನುಸುರ್ದಂ
ಎಲೆ ದೇವಿ ಮತ್ತಿನಳಿಯಂದಿರವೊಲೆನ್ನುವಂ
ನಲಿದು ಮನ್ನಿಸನವಂ ಶ್ವಶುರನಾನೆಂದು ತಾ
ನಲದರ್ು ವಂದಿಸನೆಯ್ದೆ ನಿನ್ನ ಧವನುಗ್ರನತಿದುಶ್ಚರಿತ್ರಂ ಸಂತತಂ ೩

---

1 ರುಷ (ಗ) 2 ತೆಗ (ಗ)

ಪರಿಕಿಸಲ್ಕಾತನೀ ಯಾಗಯೋಗ್ಯನೆ ಎಂದು
ಹರನನಾ ದಕ್ಷ ನಿಂದಿಸೆಯುದಂ ದೇವಿ ಕೇ
ಳ್ದುರುತರಾತ್ಮಕ್ರೋಧಶಿಖಿಯಲ್ಲಿ ತನ್ನ ತನುವಂ ಬೇಳಲಾಕ್ಷಣದೊಳು
ಹರಿಸುರಜ್ಯೇಷ್ಠಾದಿಗಳ್ ಭೀತಿಯಿಂ ನಡುಗೆ
ಹರಸಿಂದೆಯಂ ಕೇಳುತೀ ಶರೀರಂಬಿಡಿದು
ಮರಳಿಯಿರಬಾರದೆನುತಾ ದೇವಿ ಭಸ್ಮಮಾದಳೊ ಬಳಿಕವುದುಮಲ್ಲದೆ ೪

ಸುರರ ಮುನಿಗಳ ತನ್ನ ಜನಕ ದಕ್ಷನ ಸಾವ
ಭರದಿಂದೆ ನೋಡಲಾಱದೆ ಭಸ್ಮಮಾದಳೋ
ಹರಹರ ಮಹಾದೇವನುತ್ತೆ ಗೌತಮದಧೀಚ್ಯಾದಿ ವರ ಮುನಿನಿಕರವು
ವರಬಾಹ್ಯಮಾದ ಮಖಮಂಟಪದೊಳಿರ್ಪುದಿದು
ಪಿರಿದುದೋಷಂ ಶಿವದ್ರೋಹಿ ದಕ್ಷನ ಕೂಡೆ
ಹರಿಸ[1]ದಿಂ ನುಡಿವುದದುಮುದಱಿಂದಮತಿದೋಷಮೆನುತೆ ಮತ್ತಿಂತೆಂದರು ೫

ಮಿಗೆ ನಮೋ ರುದ್ರಾಯ ಮನ್ಯವೇ ಎಂದು ಸೊಂ
ಪೊಗೆವ ಋಗ್ವೇದಮುಭವಂಗೆ ನಮಿಸುತ್ತಿರಲ್
ಬಗೆದು ನೋಡಲ್ಕಿದಱವೊಲ್ ನಮೋ ರುದ್ರಾಯ ಮನ್ಯವೇ ಎಂದು ಮತ್ತಂ
ಸೊಗಸಿನಿಂದಂ ಯಜುರ್ವೇದಮುದಱಂತೆವೊಲ್
ಮುಗುಳ್ದು ರುದ್ರಾಯ ತೇ ರಸವತೇ ನಮ ಎಂದು
ನೆಗಳ್ದ ಸಾಮಂ ಮತ್ತೆ ರುದ್ರಾಯ ಎನುತಮಂ ನಮೋ ಅಸ್ತು ಎನುತಥರ್ವಂ ೬

ಹರಿಸ[1]ದಿಂದಿಂತು ವೇದಂಗಳೆಲ್ಲಂ ಶಂಭು
ಗಿರದೆ ಪೊಡಮಟ್ಟಂತೆ ಮಿಕ್ಕ ದೈವಂಗಳ್ಗೆ
ಕರಮೆ ಪೊಡಮಟ್ಟೆ ಸೂಕ್ತಿಗಳೊಳವೆ ಯಸ್ಮೈನಮಸ್ತುಚ್ಛಿರಃ ಎನುತ್ತೆ
ಪಿರಿದುಮಿಂತೆಂಬ ವೇದೋಕ್ತದಿಂದುಳಿದರ್ಗೆ
ಸುರರ್ಗೆ ಪೊಡಮಡಿಸಿಕೊಂಬಧಿಕಾರಮಿನಿತಿಲ್ಲ
ನಿರುತಮಾ ಭಾಳಾಕ್ಷನೊರ್ವನೇ ಪೊಡಮಡಿಸಿಕೊಂಬುದರ್ಕಧಿಪನೆಯ್ದೆ ೭

[1] ರುಷ (ಗ)

ಬಗೆದು ನೋಡಲ್ ದೇವತತಿಗೆ ನೆಱೆಕೊಡಪಟ್ಟ
ಮಿಗೆ ನಮಸ್ಕಾರಂಗಳೆಲ್ಲಮೀಶ್ವರನನೇ
ಸೊಗಸಿಂದಮೆಯ್ದುಗುಮದೆಂತೆನಲ್ ತದ್ದೇವತತಿಯಮಂ ಶಿರದೊಳಾಂತು
ವಿಗಡರಾಳ್ನನದೇವನಡಿಗೆಯ್ದಿ ಸುಗುಮುಱಿದೆ
ನೆಗಳ್ದ ನದನದಿಗಳೆಲ್ಲಂ ಸರಿತ್ಪತಿಯನೇ
ಪುಗುವಂತೆವೊಲ್ ನಮಸ್ಕಾರಾವಸಾನದಾಮಂ ಶಿವನೆ ಆದ ಕತದೆ ೮

ಹರಿವಿರಿಂಚೇಂದ್ರಾದಿ ದೇವತಾ ಸಮಿತಿ ಭಾ
ಸುರ ನಮಸ್ಕಾರಕ್ಕೆ ಯೋಗ್ಯಮಲ್ತೆಂತೆನಲ್
ಪಿರಿದು ಜೋರೋಪನೀತಂ ಕಿರೀಟಂ ಚಕ್ರವರ್ತಿಗಲ್ಲದೆ ಮತ್ತಿನ
ನರರ್ಗೆ ಧರಿಯಿಸಲೆಂತಯೋಗ್ಯತ್ವಮುದಱಂತೆ
ಪರಮೇಶ್ವರಂಗಲ್ಲದುಳಿದರ್ಗೆ ಯೋಗ್ಯತ್ವ
ಮರಿದದಱ ಫಲಮನೀಯಲ್ ಸಮರ್ಥರುಮಲ್ತು ಫಲದಾತೃ ಶಿವನೊರ್ವನೆ ೯

ಪರಮೇಶ್ವರಂದೊಱೆದು ಮಿಕ್ಕಸುರ ನಿಕರಮಂ
ಹ[1]ರಿಸ[1]ದಿಂ ಪೂಜಿಪುದಯೋಗ್ಯಮೆಂದಾವಗಂ
ನಿರುತದಿಂದಂ ಸರ್ವಮನ್ಯತ್ಪರಿತ್ಯಜ್ಯ ಎಂದಥರ್ವಣವೇದವು
ಕರಮೆ ಬೊಬ್ಬಿಡುತಿರ್ಕುಮುಳಿದ ವೇದಂಗಳೊಳ್
ಭರದಿಂದೆ ರಾಜಾನಮಧ್ವರಸ್ಯ ಎನುತ್ತೆ
ಪಿರಿದು ರುದ್ರಂ ಹುವೇ[ಮೇ][2] ಎನುತ್ತುಳಿದ ವೇದಂ ಪೇಳ್ಗುಮತಿಶಯದೊಳು ೧೦

ಮರಳಿ ಪೇಳ್ಗುಂ ವೇದಮಿದನುಸ್ತು ಹವ್ಯಮೆನು
ತುರುನಾದದಿಂ ಮತ್ತೆ ಯಜ್ಞೇಶ್ವರಸ್ತ್ವಮೆನು
ತಿರದೆ ಯಜ್ಞೇಶ್ವರೋ ಹವ್ಯಕವ್ಯಸಮಸ್ತಯೆಂಬ ಸದ್ವಾಕ್ಯಂಗಳಿಂ
ಕರಮೆ ಪೇಳ[3]ಶ್ವರನ ಬಿಟ್ಟು ಯಜ್ಞದೊಳೊಲ್ದು
ವಿರಚಿಸುವ ಕರ್ಮಸಮುದಾಯಮೆಲ್ಲಂ ವಿಕ
ಸ್ವರಮಾಗಿ ಸಾಂಗಂಗಳೆಂತಪ್ಪುದೋ ಜಗದ್ವಳಯದೊಳ್ ಪರಿಭಾವಿಸೆ ೧೧

ಮರಳಿ ಮಂತ್ರಂಗಳೆಂತೆಂದು ಪೇಳ್ಗುಂ ಮನೋ
ಹರಮಾಗಿ ಪ್ರಥಮಭಾಗಾರ್ಹಂ ಎನುತ್ತೆ ಮ
ತ್ತುರುವೋದದಿಂದೆ ನ ಯಜಥ್ನಂ ಮಹೇಶ್ವರಂ ಎನುತ್ತೆ ಮತ್ತದು ಕಾರಣಂ

---

[1] ರುಷ (ಗ) [2] ಗ್ನಿಮ (ಕಗಟ) [3] ಳ್ವೀ (ಗ)

ಹರನನುಳಿದೀ ದೇವತೆಗಳ ಮಧ್ಯದೊಳಾವ
ನುರು ಮಖಪ್ರಥಮ ಭಾಗಾರ್ಹನುಂಟೇ ಮತ್ತೆ
ಕರಮೆ ಪೂಜ್ಯರುವೆಂಬವರೊಳೆಯ್ದೆ ಯಜ್ಞಪೂಜ್ಯನುಮುಂಟೆ ಬೆದಕಿ ನೋಡೆ ೧೨

ಮರುಳನಪ್ಪೀ ದಕ್ಷನೊಲ್ದೆಸಗುನಧ್ವರಂ
ಪಿರಿದುಮಭಿಚಾರಮೆಯ್ದುಗೆ ವೇದಮಂತ್ರಂಗೆ
ಳುರುಶಕ್ತಿ ಕಿಡುಗೆ ವಿಷ್ಣ್ವಾದಿ ನಿರ್ಜರಸಮಿತಿ ಪರಿಭವಕೆ ಪಕ್ಕಾಗುತೆ
ಹ[1]ರಿಸ[1]ದಿಂದಿಲ್ಲಿರ್ದ ಋಷಿನಿಕರಕಾವಗಂ
ಹರನ ಸದ್ಭಕ್ತಿ ಗೆಂಟಾಗಿ ಪೋಗುಗೆ ಮತ್ತೆ
ಪರಮ ಪಾಷಂಡಿಗಳುಮಕ್ಕೆನುತೆ ಶಪಿಸುತ್ತೆ ಪೊಱಮಟ್ಟು ಪೋದುದೆಲ್ಲ ೧೩

ಇದೆಱ ವೃತ್ತಾಂತಮಂ ಹರನಱಿದು ಕೋಪಿಸುತೆ
ಪಡೆಯ ನರಸಿಂಹದಳನನನುಗ್ರಮೂರ್ತಿಯಂ
ಪುದಿದ ವೀರಾವತಾರನ ವೀರಭದ್ರನಂ ಕಳುಪಲಾಕ್ಷಣದೊಳೊಸೆದು
ಮುದದಿಂದ ವೀರಗಣದೊಡವೆರಸಿ ಬಂದು ದು
ರ್ಮದದ ದಕ್ಷನಧ್ವರಧ್ವಂಸನೋದ್ಯತ್ಕ್ರೋಧ
ವಿದಿತ ಪಟುಜನಿತ ನಿಟಿಲಾಂಬಕಾಗ್ನಿಯ ಕಿಡಿಗಳಿಂ ಜನ್ನಮಂ ಕಿಡಿಸಲು ೧೪

ಅನಿತಱೊಳ್ ಜನ್ನಸಾಲೆಯುದೆಲ್ಲ ಭಸ್ಮಮಯ
ವೆನಿಸಿ ಪೋದುದು ಭೂತಸಮಿತಿಯತಿಹರ್ಷದಿಂ
ಮಿನುಪ ಯೂಪಸ್ತಂಭದೊಳಗೆ ಕುಶರಜ್ಜುಗಳಿನೆಯ್ದೆ ಹೋತೃಗಳ ಕಟ್ಟಿ
ಮುನಿಯುತಮಂ ತ್ರೇತಾಗ್ನಿಗಳನಧ್ವರಕ್ಕೆ ಬಂ
ದನುಪಮಾಶ್ವಂಗಳಂ ನದಿಯೊಳಗೆ ಬಿಸುಟು ತೊ
ಟ್ಟನೆ ಭದ್ರರೋಮಜರ್ ಗಣಪುಂಗವರ್ ಸಭೆಯ ಬಱಿಕೆಯ್ದರಳ್ತಿಯಿಂದಂ ೧೫

ಭರದೆ ಹೋಮದ್ರವ್ಯಮಂ ಭಕ್ಷಿಸಲ್ಕೆಂದು
ಹ[1]ರಿಸ[1]ದಿಂ ಬಂದ ಮುನಿನಿಕರ ಮೂಷಕಚಯಮ
ನೊರಸಿಕೊಂಡಿಕ್ಕಿದರ್ ಗಣನಾಯಕರ್ ಮತ್ತೆ ಭೂತವೇತಾಳವಿತತಿ
ಸುರಲಲನೆಯರ ನೆರೆದು ಕಿಡಿಸಿದರ್ ಬಳಿಕಮಾ
ವರವೀರಭದ್ರೇಶ್ವರಂ ಗೋಕುಲಂಗಳಂ
ಕರಮೆ ಗೋಪಾಲಕಂ [2]ಬೆಂಗೊಳ್ವ[2] ಪಾಂಗಿನಿಂ ಸುರರನಱಿಯಟ್ಟೆ ಬಡಿದ ೧೬

---

1 ರುಷ (ಗ) 2 ಬೆನ್ನೊಳ್ (ಗ)

ಸರಸತಿಯ ತುಟಿವೆರಸು ಮೂಗನರಿದಂ ಮತ್ತೆ
ಭರದಿನದಿತಿಯ ಘೋಣಮಂ ಕೊಯ್ದು ನಿಂತೆನು
ತ್ತಿರೆ ನಾಸಿಕೋಧ್ರ್ವೋಷ್ಠ ಕೃಂತನಃ ಎನುತೆ ವೇದಂ ಪೂಷದಂತಂಗಳಂ
ಭರದಿಂದೆ ಮುರಿದು ವಹ್ನಿಯ ತೋಳ್ಗಳಂ ಕಿಳ್ತು
ಪಿರಿದು ಯಜ್ಞನ ಶಿರಂದರಿದನೆಂದೋದುಗುಂ
ನಿರುತದಿಂ ಯಜ್ಞಸ್ಯ ಶಿರವೆಂಬ ವಾಕ್ಯಮಾವಗಮೊಲ್ದು ಭೂಮಿಯೊಳಗೆ . ೧೭

ಭಗನ ಕಣ್ಣಂ ಕಿಳ್ತನೆಂದು ಪೇಳ್ಗುಂ ಮತ್ತೆ
ಭಗನೇತ್ರ ಎನುತಮಂ ನಿಪಾತನಃ ಎನುತೆ ಸೋಂ
ಪೊಗೆಯುತಮಂ ಮತ್ತಮಂಗುಷ್ಠೇನ ಸೋಮಾಂಗಪೇಷಕಃ ಎನುತೆ ಪೇಳ್ಗುಂ
ಮೃಗಧರನನಂಗುಷ್ಠದಿಂದೊರಸಿದುದನೊಲ್ದು
ನೆಗಳ್ದ ಹರಿಶಿರಮನಾಹವನೀಯವಹ್ನಿಯೊಳ್
ತೆಗೆದಿಟ್ಟನೆಂದು ಪೇಳುತ್ತಿರ್ಕುಮೆಯ್ದೆ ಪ್ರವಿವೇಶ ಕ್ಷಣಾದೆಂಬುದು ೧೮

ಹರಿಸುರಜ್ಯೇಷ್ಠೇಂದ್ರ ಯಮಮುಖ್ಯರಂಗಮಂ
ಭರದೆ ನೆರೆಶಿತರಿದಿಕ್ಕುವುದು ಶಂಭುಗದು ನೋಡೆ
ಪಿರಿದು ಭೂಷಣಮೆನುತ್ತಂಗತಕ್ಷಕ ಎಂಬ ವಾಕ್ಯಮುಸುರುತ್ತಿರ್ಪುದು
ಹ[1]ರಿಸ[1]ದಿಂದಿಂತೆಲ್ಲರಂ ಪಡಲ್ವಡಿಸಿ ನಿ
ಟ್ಟುರದಿಂದೆ ಶಿವನ ನಿಂದಿಸಿದ ತದ್ರೋಹಿಯಾ
ಪರಮಪಾತಕ ದಕ್ಷನುರುಶಿರಮನೆಚ್ಚು ತವಿಸಿದನಂದು ವೀರೇಶ್ವರಂ ೧೯

ಪಿರಿದುಃ ವಿಧ್ಯುಕ್ತಮಾಗೆಸಗಿದಧ್ವರಮೊಸೆದು
ನಿರುತದಿಂ ತನ್ನ ಫಲವೀಯದೀಯಿಳೆಯೊಳಗೆ
ಭರದಿಂದಮಭಿಚಾರಮಾದುದಾಕ್ಷಣದೊಳಗೆ ಶಿವಭಕ್ತಿಯಿಲ್ಲದುದರಿಂ
ಹರರಹಿತಮಾದ ಸತ್ಕ್ರಿ[2]ಯೆಗಳಣಿಯರಮೊಲ್ದು
ಸರಸಸಾಂಗಂಗಳಪ್ಪುವೆ ಧರೆಯೊಳೊರ್ವರಸು
ಕರಮೆ ದುಷ್ಟನ ಕೊಲಲ್ ಪೊರ್ದುವುದೆ ದೋಷಮಾ ನರಪನಂ ಪರಿಭಾವಿಸೆ ೨೦

ಮಿಗೆ ದುಷ್ಟನಪ್ಪ ದಕ್ಷನ ಕೊಂದ ದೋಷಮುದು
ಬಗೆದು ನೋಡಲ್ ಶೂಲಿಯಂ ಪೊರ್ದುವುದೆ ಮತ್ತ
ಮಗಲದೀ ಪಾತಕನ ದಕ್ಷನೊಡಗೂಟದಿಂ ಹರಿಮುಖ್ಯದೇವನಿಕರಂ

1 ರುಷ (ಗ) 2 ಕ್ರಿ (ಕ)

ನೆಗಳ್ದ ಪರಿಭವಮೆಯ್ದಿತೆಂತೆನಲ್ ಕರ್ಬೊನ್ನ
ತಗುಳ್ದ ಕೊಟದಿನಗ್ನಿ ಬಡಿವಡದ ತೆಱನಾಯ್ತು
ಮಿಗುವ ದುರ್ಜನ ಸಂಗಮೆನ್ನರುಮನೇಗೆಯ್ಯದೋ ಲೋಕದೊಳಗೆ ಸತತಂ ೨೧

ನಿರುತಮಿದು ಕಾರಣಂ ದಕ್ಷನಂ ವಿಷ್ಣ್ವಾದಿ
ಸುರನಿಕರಮಂ ಶಿಕ್ಷೆಗೆಯ್ದುದಿದು ಧೂರ್ಜಟಿಗೆ
ಪರಮೇಶ್ವರಂಗೆ ಶೂಲಿಗೆ ಕೃತ್ತಿವಾಸಂಗೆ ಕಾಲಮದಭಂಜನಂಗೆ
ಪಿರಿದು ಮಹಿಮೆಯೊ ನಿಂದೆಯೋ ವಿಚಾರಿಸಿ ನೋಡೆ
ಧರಣೀತಳಂಗಳೊಳ್ ಪೇಳ ನೀನೆಲೆ ಬೌದ್ಧ
ದುರುಳತನಮಂ ಬಿಟ್ಟೆನುತ್ತೆ ಗುರುಪಂಡಿತೇಶ್ವರನುಸುರ್ದನತಿಮುದದೊಳು ೨೨

ಸದಮಲಪ್ರಚುರವಿಶ್ರುತ ಪರಮಭಕ್ತಗಣ
ಪದಸರೋರುಹಸಾಂದ್ರ ಮಕರಂದಪಾನ ಸ
ಮ್ಮುದಿತ ಚಂಚಚ್ಚಂಚರೀಕನನವರತ ಪಂಚಾಕ್ಷರೀಪ್ರಸಿತಹೃದಯಂ
ವಿದಿತ ಮಂಜುಲ ನೀಲಕಂಠಾಹ್ವಯಂ ಮನೋ
ಮುದದೆ ಪೇಳ್ದುರುತರಾರಾಧ್ಯಚಾರಿತ್ರದೊಳ
ಗಿದು ವಲಂ ದಕ್ಷಾಧ್ವರಧ್ವಂಸನದ ಕಥನಮಿದನಾಲಿಪುದು ಶರಣರು ೨೩

# ಹದಿನೇಳನೆಯ ಸಂಧಿ

## *ಜಗತ್ಸಂಹಾರ ಕಥನಂ

ಸೂಚನೆ : ಮನವೊಸೆದು ಕೇಳ್ ಜಗತ್ಸಂಹೃತಿಯ ಕಥನಮಂ
ಮನಸಿಜಾಕಾರಸದ್ಭಕ್ತಿಸುವಿಚಾರ ಸ
ಜ್ಜನರತ್ನಹಾರ ಸದ್ಗುಣವಾರಶೂರ ಮಾರ್ಗಣಮಂಜುಮಂದಾರನೆ

ಸರಳಗಜಚರ್ಮಂಗಳೇ ಕಶಿಪು ತಾನಿರ್ಪ
ವರಗೃಹಮೆ ಕೈಲಾಸಪರ್ವತಂ ಗೇಹಿನಿಯೆ
ಸರ[1]ಸ[1]ಸೌಂದರ್ಯನಿಧಿ ಪಾರ್ವತೀದೇವಿ ಕೆಳೆಯನೆ ನೋಳ್ಪೊಡೈಳಬಿಳನು
ಪಿರಿಯ ಮಕ್ಕಳೆ ಗಜಾನನ ಷಣ್ಮುಖರ್ಕಳುರು
ತರ ಕರ್ಮವೇ ಜಗಂ ನಿರ್ಮಾಣಮಾಗಿಂತು
ಪರಮಭಕ್ತಕುಟುಂಬಿಯೆನಿಪ ಗುರುನೀಲಕಂಠಂ ಪೊರೆಗೆ ಲೋಕಂಗಳಂ ೧

ಸರಸಿಜಭವಾಂಡಕೋಟಿಗಳನಣಿಯರಮಾಗಿ
ವಿರಚಿಸುತೆ ತಾಂ ಮತ್ತೆ ನಿರ್ದಯೆಯೊಳವನೆಯ್ದೆ
ಹರಿಸುವಂ ಗಡ ಶಂಭುವೆಂಬೊಡದನೆಯ್ದೆ ಕೇಳ್ ಬೌದ್ಧ ನೀಂ ಪೇಳ್ದಪ್ಪೆವು
ಪರಮೇಶನಾದ ಪಶುಪತಿಯಿಂದಮಖಿಲಜೀ
ವರ ಗಡಣಮಾವಗಂ ಬದ್ಧಮಾಗಿರುತೆ ಮು
ತ್ತುರುತರೇಶ್ವರ ಪಶುಪನಿಂ ಮುಕ್ತಿಪಥಮನೆಯ್ದಲ್ಕಱಿಯದೀ ಧರೆಯೊಳು ೨

ನೆಲ[2]ನೆಲ್ಲಮಂ[2] ಧೂಳಿಯಂ ಮಾಡಿ ತೂಱಲಾ
ಲಲಿತಪರಮಾಣುಮೆನಿತೊಳವವಱ ಸಂಖ್ಯೆಯಿಂ
ಸಲೆ ತೋರ್ಪ ಯೋನಿಗಳೊಳೊಗೆದೇಳ್ಗಡಲೊಳಿರ್ಪ ಜಲದನಿತು ಮೊಲೆವಾಲನು
ನಲಿದೀಂಟೆ ವೃಷ್ಟಿಕಣ[3]ವೆನಿ[3]ತುಂಟು ಮತ್ತವಱ
ನೆಲೆಯಾದ ಸಂಖ್ಯೆಯಂ ಮಿಗುವ ಮರಣಂಬಡೆಯು
ತೊಲವಿನಿಂ ಯುಗಕೋಟಿಯೊಳ್ ಜನಿಸಿ ಬೇವಸಂಬಡುವ ಜೀವಿಗಳ ನೋಡಿ ೩

---

[1] ಳ (ಕ) [2] ವೆಲ್ಲವಂ (ಗ) [3] ವಂ (ಗ)

* (ಕಗ) ಪ್ರತಿಗಳಲ್ಲಿಲ್ಲ.

ಮೃಡನೊಸೆದು ಕರುಣವಂ ತಾಳುತಾ ಜೀವರಂ
ಸಡಗರದೆ ಮುಕ್ತಿಗೆಯ್ದಿಪ ಬವಸೆ[1]ಯಿಂದೆ[1] ಮು
ತ್ತೊಡರಿಸುವನಾ ಪ್ರಳಯಮಂ ಜೀವರಾಗಳತಿವಿಶ್ರಾಂತಿಯಂ ತಾಂಗುತೆ
ಬಿಡದೆ ಪುಟ್ಟುವ ಮರಣವೆಯ್ದುವೀ ದಂದುಗವು
ನು[2]ಡುಗಿ[2] ಕೆಲವುಂ ಪಗಲ್ ಸೊಕವಿ[3]ರ್ಪರಾ[3]ಗಳುಱೆ
ಕಡುಪಿನಿಂ ಹರನ ಪಾರ್ಶ್ವಮನೆಯ್ದಿ ರುದ್ರರುಂ ಪ್ರಮಥರುಂ ಭೂತಂಗಳುಂ ೪

ಇರೆ ಸರ್ವಜೀವರ್ಗೆ ಸಮಸುಪ್ತಿಯಲ್ಲಿ ಬಂ
ಧುರತರ ಸಮುತ್ಸುಖಂಗಳ್ ತೋಱುತಿರೆ ಮಹೇ
ಶ್ವರನ ನೇತ್ರೋತ್ಥಿತ ಜ್ವಾಲಾಕದಂಬಂಗಳೊಸೆದು ಚಿಳಿಚಿಟಿಲೆನುತ್ತೆ
ಭರದಿನಾವಗೆಯ ಘಟತತಿಗಳಂ ಕುಂಬಱಂ
ಪಿರಿದು ಸುಡುವಂತಜಾಂಡಂಗಳಂ ಮಿಗೆ ಸುಡಲ್
ಸುರುಚಿರಪ್ರಮಥರಾ ಜ್ವಾಲೆಯೊಳ್ ಕೌಮುದಿಯೊಳಾಡುವಂತೆಸೆದಿರ್ದರು ೫

ಆ ಗಣಂಗಳ ಮಧ್ಯದೊಳಗೊರ್ವ ಗಣವರಂ
ಬೇಗದಿಂ ಜಳನಿಧಿದ್ವೀಪಧರಣಿಗಳನುಱೆ
ಸಾಗರಂಗೂಡಿ ಕಿಳ್ತೆತ್ತಿ [4]ಮೇಲಿ[4]ಡುತೆ ಕೆಡಪುತ್ತೆ ಕೆಳಗಣ್ಗೆ ಭರದಿಂ
ಆಗಸವನಿಂತು ಚತುರಕ್ರೀಡೆಯಾಡುವಂ
ರಾಗದಿಂ ಬಡಬಾಗ್ನಿಯಂ ಪೊಸದು ಭಾಳದೊಳ
ಗಾ ಗರುವನೊರ್ವ ಗಣಪುಂಗವಂ ತಿಲಕದಂತೆವೊಲಿಟ್ಟು ಪಡಪುದೋರ್ಪಂ ೬

ಕಡಲೇಳರುದಕವಂ ಮು[5]ನಿದು[5] ಪಾನಂಗೊಂಡು
ಕಡುಪಿನಿಂ ತೇಗುವನದೊರ್ವ ಗಣವರನೊರ್ವ
ನಡಿಯಿಡಲ್ಕೀಯದೆಲ್ಲಾ ಗ್ರಹಾದಿಗಳನೊಲ್ದೊದಿ ಕೆಡಪುವನವನಿಗೆ
ಪಡಪಿನಿಂದೇಳ್ದೀವಿಗಳ ಕಿಳ್ತು ತಿರುಪಿ ಮು
ತ್ತೊಡನೆ ಪಾಱುಂಬಳೆಯ ಪಾಂಗಿನಿಂದಿಡುತಿರ್ಪ
ಕಡುಗಲಿಯೆನಿಪ್ಪನವನೊರ್ವ ಗಣಪುಂಗವಂ ಮತ್ತೊರ್ವನಳ್ತಿಯಿಂದಂ ೭

1 ಯಂತೆ (ಕ) 2 ಡಿದು (ಗ) 3 ರ್ಪೊಳಾ (ಗ) 4 ಮೆಲ್ದಿ (ಕ) 5 ದದೆ (ಕ)

ಸುರಪಕರಿದಂತನುಂ ತೊಣಕೋಣನ ಕೊಂಬ
ನಿರದೆ ಕಿಳ್ತಿರಡನುಱಿಪಿ[1]ಡಿ[1]ದು ತಾಳಂಗುಟ್ಟು
ತರರೆ ನ[2]ರ್ತಿ[2]ಸನಲ್ತಿಯಿಂ ಮತ್ತಮೊರ್ವ ಗಣಪುಂಗವಂ ಮುಳಿಸಿನಿಂದಂ
ಪಿರಿಯ ಮಿಳ್ತುವಿನ ದಾಡೆಗಳನಲುಗಿಸಿ ಕಿಳ್ತು
ಭರದಿಂದೆ ಲಾತಕೋಲಂತೆ ತಿರುಗಿಪನೊರ್ವ
ನುರುಮೇರುಮಂದರಾದ್ರಿಗಳ [3]ಪೊಡೆ[3]ಚೆಂಡಾಡುವಂ ಸಂತತಂ ಮುದದೊಳು ೮

ವರುಣಮಕರಮನನಿಲಮೃಗಮನಾಶಾಕರಿಗ
ಳಿರದಿವಂ ನೊಣೆದುಗುಳ್ವನೊರ್ವ ಗಣನಾಯಕಂ
ವರಕನಕಗಿರಿಮುಖ್ಯಶೈಲಂಗಳಂ ಪಾದದಿಂದೆ ಪುಡಿಮಾಡುತಿಸೆವಂ
ಮರಳಿಯೊರ್ವಂ ಗಣಪನೆಂಟುತೆಱದಹಿಗಳಂ
ಬೆರಲೊಳಳವಡಿಸುವಂ ಪೊಸವುಂಗುರದ ತೆಱದೆ
ಗರುಡಪಕ್ಷಂಗಳಂ ಕಿಳ್ತು ಶಿರದೊಳ್ ತಳೆದು ಮೆಱೆದನೊರ್ವಂ [4]ಗಣ[4]ಪನು ೯

ಮಿನುಪಾದಿಕಿಟಿಯ ದಂಷ್ಟ್ರಂಗಳಂ ಕಿಳ್ತು ತೊ
ಟ್ಟನೆ ಪಿಡಿದು ನರ್ತನಂಗೆಯ್ವನೊರ್ವಂ ಕರಂ
ಮುನಿದಾದಿಕೂರ್ಮನಾ ಬೆನ್ನನಿಱಿದಹಿಯ [5]ಕೋ[5]ದದನೆಯ್ದೆ ತಿರುಗಿಸುವನು
ನನಸು ಮತ್ತೊರ್ವ ಗಣಪಂ ನೃಸಿಂಹನೊಳಿಸೆವ
ವಿನುತ ಕೇಸರಜಟಾಕಂಧರಂಗಳ ಕಿಳ್ತು
ವಿನಯದಿಂ ಪಾರ್ವತಿಯ ಮಣಿಪೀಠದಲ್ಲಿರಿಸುವಂ ಮತ್ತಮೊರ್ವ ಗಣಪಂ ೧೦

ಸರಸಿಜಭವಾಂಡಭಾಂಡಂಗಳಂ ಕರದಲ್ಲಿ
ಧರಿಸಿ ಮತ್ತವನಿಟ್ಟು ನುರ್ಗುಗುಟ್ಟುವನೊರ್ವ
ನಿರದಬ್ಜಜನ ಕಪಾಲದೊಳಾ ತ್ರಿವಿಕ್ರಮನ ನಿಟ್ಟೆಲ್ವನುಱದೆ ಕೋದು
ಹರಿಣಾತಪತ್ರದಂದದೆ ಪಿಡಿವನೊರ್ವ ಗಣ
ವರನಜಾಂಡಾಳಿಯಂ ಕೊರಳೊಳಗೆ ತಾಳ್ದು ಭಾ
ಸುರತರಾಂಡಾಭರಣನೆನಿಸಿದಂ ಮತ್ತೊರ್ವನಭವಗಣಚಕ್ರೇಶ್ವರಂ ೧೧

ಪೊಡೆಯಲರ ಬಿದಿಗಳಿಂದರರ ತಲೆಮಾಲೆಯಂ
ಪಡಪಿನಿಂ ಗಳದೊಳಗೆ ಧರಿಸಿ ಮತ್ತೊರ್ವನು
ಗ್ಗಡದ ಗಣನಾಯಕಂ ರುಂಡಮಾಲಾಭರಣನೆನಿಸಿದಂ ಮತ್ತೊರ್ವನು

---

[1] ಠ (ಕ) [2] ಳ್ತಿ (ಗ) [3] ನೆಱೆ (ಗ) [4] ಜನ (ಗ) [5] ಕೊಂ (ಕ)

ಸಡಗರದೆ ಕುಲಗಿರಿಗಳಂ ಕೋದು ಗೆಳದಲ್ಲಿ
ಕಡುವೆಱತವವೊಲ್ ತಾಂಗಿ ಪರ್ವತಾಭರಣನೆಂ
ದೆಡೆಯುಡುಗದೊಪ್ಪಿದಂ ಮತ್ತಮೊರ್ವಂ ಗಣಶ್ರೇಷ್ಠನಾನಂದದಿಂದಂ ೧೨

ಪ್ರಳಯಕಾಲದೊಳೊಲ್ದು ಮೇರುವಂ ಬೇಗದಿಂ
ಮುಳಿದು ಕೆಡಪುವದಜಂ ಮೇರು ಪಾತನನಾದ
ನಳಿದ ವಿಧಿ ವಿಷ್ಣುಗಳ ಪೆಣಗಳಂ ಕೈಕಾಲ್ಗಳಂ ಪೆಣದು ಲೀಲೆಯಿಂದಂ
ಲಳಿತ ಕಂಧರದೊಳಗೆ ತಾಳ್ದೊಪ್ಪಿದಂ ನೀಲ
ಗಳನ ಗಣನೊರ್ವನಿಂತೀ ಪರಿಯೊಳೆಲ್ಲರುಂ
ನಳಿನಾಕ್ಷಮುಖ್ಯಸುರರಂ ಗಣವರರ್ ತವಿಸಿ ಲೋಕದೊಳ್ ತಾಮೆಸೆದರು ೧೩

ಗಗನಮೆಲ್ಲಂ ಪ್ರಮಥಮಯಮಾಗೆ ಸಂತತಂ
ಮಿಗೆ ವಿಷ್ಣುವಿದ್ಯಾದಿ ಸುರಲೋಕಮೆಲ್ಲಮುಂ
ನೆಗಳ್ದ ಗಣವರಲೋಕಮಾಗಲೀ ಪರಿಯೊಳಾ ಬ್ರಹ್ಮಾಂಡಕೋಟಿಗಳನು
ತಗುಳ್ದು ಸಮಸ್ತಿಯೊಡಗೂಡುತಾ ಪ್ರಮಥರ್ಕ
ಳಗಲದಿಂತೊಪ್ಪುವರ್ ಮತ್ತಮತಿಹರ್ಷದಿಂ
ಸೊಗಯಿಸುವರುನ್ನತರುಮಾಗಿ ಕುಬ್ಜರುಮಾಗಿ ಲೀಲೆಯಿಂದೆಸೆದಿರ್ಪರು ೧೪

ನಿರುತದಿಂ ಸ್ವೇಚ್ಛಾಸ್ವರೂಪರವರೆಂತೆನಲ್
ಪಿರಿದು ಲಂಬಾಕ್ಷರುಂ ಲಂಬಕರ್ಣರುಮೆಯ್ದೆ
ಕರಮೆ ಲಂಬೋಷ್ಟರುಂ ಲಂಬನಾಸಿಕರುಮಂತುರುಲಂಬಕಂಠರವರು
ಮರಳಿ ಗಜಹಯಕೋಲಶಾರ್ದೂಲತತಿಯವೋಲ್
ಉರುವದನ ಕರ್ಣಂಗಳುಳ್ಳವರ್ ಮತ್ತೆಯುಂ
ರುರುಶರಭ ಸಿಂಹಾಶ್ವ ಗೋ ಮಹಿಷ ಗಜವದನನಿಭವದನರಾಗಿರ್ಪರು ೧೫

ಮಿನುಪ ಬಹುವಕ್ತ್ರರುಂ ಬಹುಕರ್ಣರುಂ ಮತ್ತೆ
ವಿನುತ ಬಹುನೇತ್ರರುಂ ಬಹುಹಸ್ತರುಂ ಮಗುಳ್ದು
ನನಸು ಬಹುಪಾದರುಂ ಬಹುಜಾನುತಲ ಬಾಹು ಸಕ್ಥಿಕಾಂಡರುಮಾವಗಂ
ಅನುನಯಂ ದ್ವಿಮುಖ ತ್ರಿಮುಖ ಚತುರ್ಮುಖರುಮಿಂ
ಪಿನ ಪಂಚಷಷ್ಠಮುಖರುಂ ಮತ್ತೆ ತೋರ್ಪ ನೂ
ತನ ಸಹಸ್ರಾನನರುಮಿಂತು ನಾನಾವಿಕೃತರೂಪಸಂಯುಕ್ತರವರು ೧೬

ಮರಳಿ ನಾನಾವಿಧ ಮನೋಹರವೆನಿಪ್ಪ ಭಾ
ಸುರಮಾದ ಲಾವಣ್ಯಯುತ ಕಳೇವರರೆಂದು
ಭರದೆ ನ ಸ್ಮರ್ಯತೇ ನ ಚ ದೃಶ್ಯತೇ ಎಂದು ವೇದಮುಲಿಗುಂ ಸಂತತಂ
ಪಿರಿದಸಂಖ್ಯಾತಾಸ್ಸಹಸ್ರಾಣಿ ಎಂದು ಮ
ತ್ತುರುನಾದದಿಂ ನಿಬೋ ಧತ ಎಂದು ಮತ್ತೆಯುಂ
ಹರಿಸ[1]ದಿಂದಣುಶಶ್ಚ ಎಂದು ಮಹಶ್ಚ ಎನುತಂ ವೇದತತಿ ಪೊಗಳಲು ೧೭

ಶ್ರುತಿನಿಚಯಮಮಾ ಪ್ರಮಥರಂ ಬಳಿಕ್ಕಿಂತು ಮಿಗೆ
ನುತಿಸುತಿರೆ ಮತ್ತಿನವನೆಂತು ಪೊಗಳ್ವಂ ನೋಡ
ಲತಿಶಯದ ರೂಪರಂ ಶಿವಸಮಾನರನಭವಗಣವರರನೀ ಧರೆಯೊಳು
ನುತ ಶಿವಪುರಾಣೋಕ್ತರೀತಿಯಿಂದಾನೆನ್ನ
ಮತಿಗೆ ತಕ್ಕನಿತಱೊಳ್ ಪ್ರಮಥರಂ ವರ್ಣಿಸಿದೆ
ನತಿಶಯದಿನೀ ಗಣಾಡಂಬರಮನಾವನೊರ್ವಂ ಧರಾತಳದೊಳೊಸೆದು ೧೮

ನಲಿದು ಪಠಿಪಂ ಕೇಳ್ವನೊಸೆದು ಬರೆದಪನವಂ
ಲಲಿತ ಸುಖಜಾಲದೊಳಗೋಲಾಡುವಂ ಬಳಿ
ಕ್ಕಲಘುಪಾಪಂಗಳಂ ಬೀಸಾಡುವಂ ಕುಜನಸಂಗಮುಮನೀಡಾಡುವಂ
ಮಲಹರಣ ಪದಕಮಲಧೂಳಿಯಂ ಸೂಡುವಂ
ಸಲೆ ಪರಸ್ತ್ರೀಯರ್ಗೆ ಪೆಳಱ[2]ಯೋಡುವನೆಯ್ದೆ
ಪಲವಾತದೇನೊ ಯಮನಂ ನಾಡೆ ಕೋಱಚಾಡಿ ಕಾಡುವಂ ಹುಱುಗುಟ್ಟುತೆ ೧೯

ಪಿರಿದಿಂತು ವಿಕ್ರಮಯುತ ಪ್ರಮಥರೊಡಗೂಡಿ
ಚರಿಸುವ ಶಿವಂ ನಿಖಿಲಲೋಕಂಗಳಂ ಮನೋ
ಹರಮಾಗಿ ಸಮುಪ್ತಿಗೆಯ್ದಿ ಸುತ್ತುದ್ಭವ ಸ್ಥಿತಿಲಯಂಗಳ್ಗೆ ನಿಸದಂ
ಪರಮಕಾರಣನಪ್ಪ ಶಂಭು ಮತ್ತೀ ಜಗಮ
ನಿರದೆ ಪುಟ್ಟಿಸುತೆ ರಕ್ಷಿಸುತೆ ಸಂಹರಿಸುತ್ತೆ
ಕರಮೆಸೆವನೀ ಲೋಕದುದಯ ನಾಶಂಗಳೊಳ್ ಸೈಪು ಪಾಪಂ ಶೂಲಿಗೆ ೨೦

ಭರದೆ ಪೊರ್ದದದೆಂತೆನಲ್ ನೀರೊಳೊಗೆಯುತ್ತೆ
ಮರಳಿಯಲ್ಲಿಯೆ ನಾಶಮೆಯ್ದುಗುಂ ಪಲಕೆಲವು
ಸುರುಚಿರ ಪ್ರಾಣಿಜಾಲಂಗಳದಱುಂ ಪುಣ್ಯಪಾಪಂಗಳಾ ಜಲಕ್ಕೆ

1 ರುಷ (ಗ) 2 ನೋ (ಕ)

ನಿರುತಮುಂಟೇ ಶಂಭುಲೀಲಾರ್ಥಮಾಗಿ ಭಾ
ಸುರಕರುಣದಿಂ ಲೋಕವಿಶ್ರಮಕ್ಕಾಗಿ ಸಂ
ಹರಿಪನದಜಿಂದೆಂತೊ ನಿಂದೆಯಕ್ಕುಂ ಶಿವಂಗೆಲೆ ಬೌದ್ಧ ಪರಿಭಾವಿಸೆ ೨೧

ಸದಮಲಪ್ರಚುರವಿಶ್ರುತ ಪರಮಭಕ್ತಗಣ
ಪದಸರೋರುಹಸಾಂದ್ರ ಮಕರಂದಪಾನ ಸ
ಮ್ಮುದಿತ ಚಂಚಚ್ಚಂಚರೀಕನನವರತ ಪಂಚಾಕ್ಷರೀಪ್ರಸಿತಹೃದಯಂ
ವಿದಿತ ಮಂಜುಲನೀಲಕಂಠಾಹ್ವಯಂ ಮನೋ
ಮುದದೆ ಪೇಳ್ದುರುತರಾರಾಧ್ಯಚಾರಿತ್ರದೊಳ
ಗಿದು ಜಗತ್ಸಂಹಾರಕಥನವಿದನಾಲಿಪುದು ಶಿವಶರಣಸದ್ಭಕ್ತರು ೨೨

# ಹದಿನೆಂಟನೆಯ ಸಂಧಿ

## ಹರನ ನೃತ್ಯಾಡಂಬರ ಕಥನಂ

ಸೂಚನೆ : ಹರನ ನೃತ್ಯಾಡಂಬರದ ಕಥೆಯ ಕೇಳೊಲ್ದು
ಹರಿಸ[1]ದಿಂ ಸುರಸಚಿವಾಗ್ರೇಸರನೆ ಎಂದು
ಪರಮ ಪಾಲ್ಕುರಿಕೆ ಸೋಮೇಶನುಸುರ್ದಂ ರಸಸ್ಯಂದಿಸಲ್ಲಾಪದಿಂದಂ

ನಿರುತದಿಂ ವ್ಯಕ್ತಮವ್ಯಕ್ತಮೆನಿಸುವ ಗುಣೇ
ತರಮೆನಿಸುವಖಿಳ ತತ್ತ್ವಂಗಳಂ ಮೀರ್ದ
ನಿರುಪಮಾಮ್ನಾಯಕ್ಕೆ ಮಂತ್ರಶಾಸ್ತ್ರಂಗಳ್ಗೆ ಧಾಮವೆನಿಸುವ ಮುನಿಗಳ
ಸುರುಚಿರಧ್ಯಾನಕ್ಕೆ ಯೋಗ್ಯವೆನಿಸುವ ಸೂಕ್ಷ್ಮ
ತರಕೆ ಮಿಗೆಸೂಕ್ಷ್ಮವೆನಿಸುವ ಶಾಂತವೆನಿಪ ಬಂ
ಧುರತರೇಶಾನಮುಖದಿಂ ಶೋಭಿಸುವ ನೀಲಕಂಠನೆಮ್ಮಂ ಸಲಹುಗೆ ೧

ಮಸಕದಿಂ ಸೊಡಬಲಿಯೊಳೀತರ್ಕೆ ನಟಿಸಿದಂ
ಸಸಿಧರಂ ತಾನೆಂಬೊಡದನೆಯ್ದೆ ಪೇಳ್ದಪೆಂ
ನಿಸದಮಾ ಬ್ರಹ್ಮಾಂಡಕೋಟಿಗಳ ಸಂಹರಿಸಿ ತದ್ಭೂತಿಯಂ ಮೆಯ್ಯೊಳು
ಎಸೆವಂತೆ ಲೇಪಿಸಿಕೊಳುತ್ತೆ ವಿಷ್ಣ್ವಾದಿಗಳ
ಮಿಸುಗುವ ಕಪಾಲಮಾಲಾಸ್ಥಿಗಳ ಶಿರದೊಳಗೆ
ಪೊಸಪಚ್ಚದಂತೆ ತಳೆಯುತೆ ಮತ್ತೆ ಭರತನಂದಿಗಳನಣಿಯರಂ ಮುದದೊಳು ೨

ಭರತಶಾಸ್ತ್ರೋಕ್ತ ನಾನಾಪ್ರಬಂಧಂಗಳೊಳ್
ಪಿರಿದಾಗಿ ತಾಳಸಂಕುಳನುನುಗ್ಗಡಿಸುತಿರೆ
ನಿರುತಮುಂಡಾಭರಣ ರುದ್ರರ್ಕಳೊಸೆದಜಾಂಡಂಗಳಂ ಮದ್ದಳೆವೊಲು
ಹರಿಸ[1]ದಿಂ ಬಾಜಿಸುತ್ತಿರೆ ಮೇರುಪಾತಗಣ
ವರರೊಸೆದು ಗಿರಿಗಳಂ ಮುರಜೆಯಂದದೊಳೊತ್ತಿ
ಕರಮೆ ಬಾಜಿಸುತಿರಲ್ ಪರ್ವತಾಭರಣಾಖ್ಯರುದ್ರರ್ಕಳಳ್ತಿಯಿಂದಂ ೩

---

[1] ರುಷ (ಗ)

ಗಿರಿಗಳಂ ಶಂಖದಂತೆವೊಲೊಲ್ದು ಪೂರೈಸು
ತಿರೆ ಮುದದೊಳಂತೆ ರುಂಡಾಭರಣಗಣಪುಂಗ
ವರರೊಸೆದು ಕಹಳೆಯಂದದೊಳೂದುತಿರೆ ರುಂಡಮಾಲೆಗಳನಾದರದೊಳು
ಸರಸಿಜೋದ್ಭವ ಕಪಾಲಾವಳಿಗ[1]ಳಂ[1] ಕೂಡೆ
ಪಿರಿಯ ದುಂದುಭಿಗಳಂ ಮಾಡಿ ಕರತಲದೊಳಗೆ
ಹ[2]ರಿಸ[2]ದಿಂ ಬಾಜಿಸುವನಾ ಕಾಲಭೈರವಂ ನೀಲರುದ್ರರ್ಕಳೆಯ್ದೆ ೪

ಹರಿಯ ಬೆನ್ನೆಲ್ವುಗಳ ಕರತಲದೊಳಾಂತು ಭಾ
ಸುರದೆ ರಾಸಕ್ರೀಡೆಯಾಡುತಿರೆ ಮತ್ತೆಯುಂ
ಸರಳತತ್ತ್ವಾಭರಣ ರುದ್ರರ್ಕಳೊಸೆದು ತತ್ತ್ವಂಗಳಂ ಜಯಘಂಟೆಯಂ
ಕರಮೆ ಬಾಜಿಸುತಿರಲ್ಕಾ ಮಹಾಕಾಲಾಖ್ಯ
ನರಗಣೇಶರ್ ಗಗನಮಂ ತಾಳಮಂ ಮಾಡಿ
ಕರದಲ್ಲಿ ಪಿಡಿದು ಬಾಜಿಸುತಿರಲ್ ಸಂಭ್ರಮದೊಳಾಡುತ್ತೆ ಪಾಡುತೊಲ್ದು ೫

ಮಿಸುಗುವಾಶಾತತಿಗಳೆಂಬ ಕಂಸಾಳಮಂ
ಮಸಕದಿಂ ರುದ್ರಾಂಗನಾವಿತತಿ ಬಾಜಿಸಲ್
ನಿಸದಮಾ ಪ್ರಮಥಸತಿಯರ್ ಗೀತಜಾತಿಗಳನಿಂಪಾಗಿ ಪಾಡುತಿರಲು
ಒಸೆದು ಕೀರ್ತಿಸುತಿರಲ್ ಚಂಡಕೀರ್ತ್ಯಾದಿಗಳ್
ಪಸರಿಸುತ್ತಿರಲ್ ನುತಿಸಮೂಹಂಗಳಂ ಭಕ್ತಿ
ಯೆಸಕದಿಂ ಭೂತವೇತಾಳಸಂದೋಹಮತಿಸಿಂಹನಾದಂಗಳಿಂದಂ ೬

ನಿರುತಂ ಸಮುದ್ಭಟಾರ್ಭಟ ಪಟುತರಾರಾವ
ಮೊರೆಯುತಿರೆ ಸತತಂ ಮಹಾಪ್ರಳಯಕಾಲಾನು
ಕರಣ ತಾಂಡವಲೀಲೆಯಂ ಪ್ರವೇಶಿಸಿದನಾ ಶಂಕರಂ ಸಂತೋಷದಿಂ
ಹರಿವಿಧಾತ್ರರ್ಕಳಿಕ್ಕೆಲದಲ್ಲಿ ಕೀರ್ತಿಸು
ತ್ತಿರೆ [3]ಮುಂದೆ[3] ಕರಿದಾನವನ ಮೆಟ್ಟಿ ನಾಟ್ಯಮಂ
ವಿರಚಿಸಿದ ರೀತಿಯಂ ನರ್ತಿಸಿದನಾ ಶಂಭು ಮೊದಲ ನೃತ್ಯದೊಳಕ್ಕಜಂ ೭

---

[1] ಳಿಂ (ಕ) [2] ರುಷ (ಗ) [3] ಮುನ್ನೆ (ಕ)

ಮಿನುಗುವಾ ವ್ಯಾಘ್ರಪಾದನ ತಪಸ್ಸಿಂಗೆ ತೊ
ಟ್ಟನೆ ಹೃಷ್ಟಚಿತ್ತನಾಗುತ್ತೆ ಸಾಶ್ಚರ್ಯದಿಂ
ಕನದಮಲ ನೃತ್ಯವಾಡಿದ ಪಾಂಗಿನಿಂ ನಟಿಸಿದಂ ಮತ್ತಮುವನಿಯಲ್ಲಿ
ವಿನುತ ಗುಂಡಯ್ಯನತಿಸಂತೋಷದಿಂ ಘಟವ
ನನುನಯದೆ ತಟ್ಟುತಿರಲಾ ಘಟಧ್ವನಿಗೆ ತಾಂ
ಮನವೊಲ್ದು ನರ್ತಿಸಿದ ಭಂಗಿಯಿಂ ನಟಿಸಿದಂ ಭಕ್ತವತ್ಸಲನಭವನು ೮

ಮಸಕದಿಂ ಪಿಟ್ಟುವ್ವೆಗಾಗಿ ಬಿಟ್ಟಿಗೆ ಪೋಗಿ
ಯೆಸಕದಿಂ ಮಣ್ಣಪೊಱುವಾ ಮಕ್ಕರಿಯನಂದು
ಸಸಿನೆ ಬಾಜಿಸುತ್ತದಱ ಗತಿಗೆ ಕುಣಿವಂತೆ ನಟಿಸಿದನೀಶನಳ್ತಿಯಿಂದಂ
ಎಸೆವ ಶಿವಲಿಂಗಪೂಜಾಕಾಲದಲ್ಲಿ ರಾ
ಜಿಸುವ ಚೇರಮರಾಯನಣುಗಿನಿಂ ವಾದ್ಯಮಂ
ಪೊಸಗತಿಗಳಿಂ ಬಾಜಿಸಲ್ಮಾಡಿದಂತೆ ನಟಿಸಿದನೀಶ್ವರಂ ಮುದದೊಳು ೯

ವಿಲಯಕಾಲದ ಪರಿಜುವಿಂತಿರ್ಪುದೆಂಬುದಂ
ಸಲೆ ಕನ್ನಡಿಸುವ ರೀತಿಯೊಲೀಶನಣೆಯರಂ
ನಲಿದು ನರ್ತಿಸಿದನೆಂದಾ ಪ್ರಮಥವರರೊಸೆದು ಕೀರ್ತಿಸುತ್ತಿರೆ ಮುದದೊಳು
ಇಲೆಯೊಳಗೆ ಪುಟ್ಟಿದಂತಪ್ಪ ವರ್ಣನೆಗಳುಂ
ನೆಲೆಯಾಗಿ ಶೋಭಿಸುತ್ತಿರೆ ರಸಸಮೂಹಂಗ
ಳೊಲವಿನಿಂ ರಸಿಕರ್ಗೆ ಭೇದಿಸಲ್ಕಳವಲ್ಲದತಿಶೋಭಿಸುತ್ತುಮಿರಲು ೧೦

ಮಿನುಪಲಂಕಾರಂಗಳುಂ ತೆಱಂಬೊಳೆಯುತಿರೆ
ಕನದಮಲಭಾವಂಗಳುಂ ಜಲಕನೊಪ್ಪುತಿರೆ
ನನಸುಮಾರ್ಗಂಗಳುಂ ಗತಿಗಳುಂ ಗೀತಂಗಳುಂ ಮನೋಹರಮಾಗಲು
ಕನಸಿನೊಳ್ ಕೇಳ್ದಱಿಯದಾ ಪ್ರಬಂಧಗಳುಂ
ಘನಮಾಗಿ ಪಸರಿಸುತ್ತಿರೆ ತಾ[1]ನ[1]ಮಾನಂಗ
ಳನುವಿನಿಂ ಕಣ್ಗೆಡ್ಡಮಾಗಿರಲ್ಕಾಳಾಪಗಡಣಮತಿಶೋಭಿಸುತಿರೆ ೧೧

ಪಿರಿದುಮಿಂತುದ್ದಂಡತಾಂಡವನೀಶ್ವರಂ
ಭರದಿನೆಸಗುತ್ತಿರಲ್ ಪಾದಘಟ್ಟನೆಗಳಂ
ಕರವೆ ಕೇಳಲ್ ಬರ್ಕುಮಾ ಚರಣಮಂ ಕಾಣಲರಿದಾರ್ಗಮಂತೆ ನೋಡೆ

---

[1] ೪ (ಗ)

ಕರತಳಸ್ಫಾಳನರವಂಗೇಳಬರ್ಕುಮಾ
ಕರಕದಂಬಂಗಳಂ ನಿಟ್ಟಿಸಲ್ಕಳವಲ್ತು
ವರ ಕಿರೀಟಪ್ರಭೆಯ ಕಾಣಬರ್ಕುಂ ಮಕುಟದಗ್ರಮಂ ಕಾಣಲರಿದು ೧೨

ವರ ಜಟಾಚ್ಛಟವಿರಾವಂಗೇಳಲಕ್ಕುಮಾ
ಯುರು ಜಟಾಸಂದೋಹಮಂ ಕಾಣ್ಬರಿಲ್ಲ ಬಂ
ಧುರವಿನೋದದೊಳಿಂತು ನಾಟ್ಯವಾಡುತ್ತಿರಲ್ ಗಿರಿಜೆ ಕರತಳಯುಗಳಮಂ
ಹ[1]ರಿಸ[1]ದಿಂ ಮುಗಿಯುತಾದ್ಯಂತರಹಿತನೆ ದೇವ
ನಿರುಪಮ ಪರಾತ್ಪರ ಮಹೇಶ್ವರನೆ ನಿಮ್ಮ ಭಾ
ಸುರ ತಾಂಡವಾಡಂಬರಾಕಾರಮಂ ನೋಳ್ಪುದರ್ಕೆನಗೆ ಪೆಳಱ[3]ಸಗಿತು ೧೩

ನಿರುತಮೆಮ್ಮಂತಪ್ಪವರ್ಗೆ ನೋಡಲ್ಕಳವೆ
ಭರದಿಂದಮತ್ಯತಿಷ್ಠದ್ದಶಾಂಗುಲನೆಂದು
ಹರಿಸದಿಂದತ್ಯತಿಷ್ಠತ್ಸಹಸ್ರಾಂಗುಲಂ ಎಂದು ನುಡಿಯಲ್ ವೇದವು
ಪಿರಿದು ಮತ್ತೊಂದುವಾಕ್ಯಂ ಕಾಣಲಱಿಯದೆಂ
ದರರೆ ನಿಮ್ಮಯ ವಿರಾಡ್ರೂಪನಱಿಪಂದಮೋ
ಪರಿಭಾವಿಸಲ್ ಶ್ರುತಿಪುರಾಣಂಗಳೇಂ ಬಲ್ಲವೇ ನಿಮ್ಮ ನಿಜಮೂರ್ತಿಯಂ ೧೪

ಹರಿಸುರಜ್ಯೇಷ್ಠರ್ಕಳಾದಿಯಾಡರ್ ನಿ[2]ಮ್ಮ[2]
ನಿರುಪಮಸ್ಥೂಲಸೂಕ್ಷ್ಮಂಗಳೆನಿಸುವ ರೂಪಿ
ನಿರವನಱಿಯರುಮೆನಲ್ ಮತ್ತಿನವರಱಿ[3]ಯಲ್[3]ಳವೇ ಭವನ್ಮೂರ್ತಿಯಿರವಂ
ಹ[1]ರಿಸ[1]ದಿಂದೀ ತಾಂಡವಾಡಂಬರವನುಳಿದು
ನಿರುತದಿಂ ಜಗತ್ಸೃಷ್ಟಿಗನುವಾಗು ಭವನೆ ಶಂ
ಕರ ಎಂದು ಗಿರಿಜೆ ಮಗುಳ್ದೆಱಗಿ ಬಿನ್ನೈಸಲ್ಕೆ ತಾಂಡವಮನುಡುಗಿ ಭವನು ೧೫

ಮಸಕದಿಂ ಪ್ರತ್ಯಕ್ಷನಾಗೆ ಗಿರಿಸುತೆಗೆ ನಿ
ಟ್ಟಿಸುತಲಾ ಕಾಲದೊಳ್ ಗಣವರರ್ ಕೈಮುಗಿವು
ತೊಸೆದು ನ ಬ್ರಹ್ಮಾ ನ ವಿಷ್ಣುಃ ಎನುತ್ತೆ ನಾಗ್ನಿರ್ನ ಸೂರ್ಯಃ ಎನುತ್ತೆ
ನಿಸದಂ ನ ಚಂದ್ರ ಎನುತುಂ ತಾರಕಾಃ ಎನುತೆ
ಬಿಸವಂದಮಾಗಿ ನುಡಿವುಪನಿಷದ್ವಾಕ್ಯದಿಂ
ದೆಸೆವೇಕ ಏವ ರುದ್ರಃ ಎಂಬ ಶ್ರುತಿಗಳಿಂ ಶಂಕರನ ನೆಱ[3] ಪೊಗಳುತೆ ೧೬

---

[1] ರುಷ (ಗ) [2] ನ್ನ (ಕ) [3] ವರ (ಕಗ)

ಇರಲವರಭೀಪ್ಸಿತ ವರಂಗಳಂ ಕುಡುತೆ ಮ
ತ್ತುರುಸೃಷ್ಟಿಗುದ್ಯುಕ್ತನಾಗಿ ತನ್ನಂಗಮಂ
ಕರಮೆ ನೋಡಿದನೆಂದು ನುಡಿಗುಂ ಸ ಈಕ್ಷತೇ ಮಾಂ ಎನುತ್ತೆ ಮತ್ತೆ ವೇದಂ
ಹರಿಸ[1]ದಿಂ ಲೋಕಾಂಶ್ಚ ಲೋಕಪಾಲಾನಿ ಎನು
ತಿರದೆ ಘೋಷಿಸಿ ನುಡಿದವೊಲ್ ವಿಲಯಗತವಾದ
ವರಭೂತನಿಕರಜನಿಕಾರಣಮೆನಿಪ್ಪ ತನ್ನಂಗಮಂ ನೋಡಿ ಭವನು ೧೭

ಮಿನುಪ ನಯನಾದಿಯಿಂ ಸೂರ್ಯಾದಿಗಳನೆಯ್ದೆ
ವಿನಯದಿಂ ಪುಟ್ಟಿಸಿದನೆಂದು ಚಕ್ಷುಷ ಎನು
ತ್ತನುನಯದಿನಾದಿತ್ಯ ಎಂದು ಮತ್ತಂ ಮನಶ್ಚಂದ್ರಮಾ ಎನುತೆ ಮತ್ತಂ
ವಿನುತವಾಕ್ಯಂ ಮುಖಾದ್ವಾಚೋಗ್ನಿ ಎನುತೆ ಮ
ತ್ತನುವಿನಿಂ ನಾಸಿಕಾಭ್ಯಾಂ ಎನುತೆ ಮತ್ತೆಯುಂ
ನನಸು ಪ್ರಾಣಾದ್ವಾಯು ಎಂದು ಪದ್ಭ್ಯಾಂ ಭೂಮಿ ಎಂದು ಮತ್ತಂ ಮುದದೊಳು ೧೮

ಭರದಿಂದೆ ಶ್ರೋತ್ರಾದ್ದಿಶಃ ಎಂದು ಸಂತತಂ
ಮರಳಿ ರೇತಸ ಆಪ ಎಂದಾತ್ಮನಃ ಎಂದು
ಹರಿಸ[1]ದಿಂದಾಕಾಶಮೆನುತುಮಾತ್ಮನ ಆತ್ಮನಃ ಎಂದೆನುತ್ತುಮನಿಶಂ
ಇರದೆ ಶಿಶ್ನಾದ್ರೇತ ಎನುತೆ ಬಾಷ್ಕಳವೆಂಬ
ಪಿರಿಯುಪನಿಷದ್ವಾಕ್ಯಮುಲಿಗುಮಿಂತೀ ಪರಿಯೊ
ಳುರುತರ ಪ್ರಕೃತಿಬೀಜಾಷ್ಟತನುಗಳ್ ಪುಟ್ಟಿದುವು ಶಿವನ ನೋಟದಿಂದಂ ೧೯

ಅದಱಿಂದೆ ಮುನ್ನೆ [2]ಶಿವಕಂಠದೊಳಗೆಸೆದಿರ್ಪ
ಬಿದಿ ಕೇಶವರ ಕಪಾಲಂಗಳಾ ಶಿವಕೃಪೆಯಿ
ನುದಿತ ಚೈತನ್ಯಂಗಳಾಗುತ್ತೆ ಶಿವನ ನುತಿಗೆಯ್ಯುತ್ತಿರಲ್ ಶಂಕರಂ
ಪದೆದು ನೋಡುತ್ತಮಂ ಬ್ರಹ್ಮತ್ವ ವಿಷ್ಣುತ್ವ
ಪದವಿಗಳೊ[3]ಳೊಸೆದು ಸ್ಥಿತಿರಿಸಿದಂ ನಿಜವೆಂದು
ಮುದದೆ ಜನಿತಾರ್ಥ ವಿಷ್ಣೋ ಎಂಬ ಸದ್ವಾಕ್ಯಮನವರತಮುಲಿಯುತಿರ್ಕುಂ ೨೦

ಇಂತು ಪುಟ್ಟಿದ ಪಿತಾಮಹ ವಿಷ್ಣುಗಳ್ಗೆ ಮುಗು
ಳ್ದಂತಕಹರಂ ರಜಃಸತ್ವಗುಣಮಂ ಕುಡಲ್
ಸಂತತಂ ಸೃಷ್ಟಿಪಾಲನೆಗಳ್ಗೆ ಕರ್ತೃ[4]ಗಳ್ ತಾವೆನಿಸಿ ಮೆಱೆದರವರು

1 ರುಷ (ಗ) 2 ಸೆ (ಕಗ) 3 ಳೆ (ಕ) 4 ಗಳಾ (ಕ)

[1]ಅಂ[1]ತೆ ಕಣ್ಣನ್ನೆಯಿಂ ಬ್ರಹ್ಮಾಂಡತತಿ ಮುನ್ನಿ
ನಂತಿರ್ಪವೊಲ್ ನಿಜಿಸಿ ರಾಜಿಸುವ ಗಿರಿಶಂಗೆ
ಕಂತುಮದಮರ್ದನಂಗೀ ಸೃಷ್ಟಿಸಂಹಾರಲೀಲೆಗಳ್ ಬಳಿಕಮಂತೆ ೨೧

ವರ ತಾಂಡವಾದಿ ಲೀಲೆಗಳಾವಗಂ ತನ್ನ
ನಿರುಪಮ ಸ್ವಾತಂತ್ರ್ಯಮಂ ನಿತ್ಯತೆಯನಂತೆ
ಪರಮ ವಿಭುತೆಯುಮೈಶ್ವರ್ಯಮನಂತುಮೇ ತನ್ನ ಗಣವರರ ನಿಜಮಹಿಮೆಯಂ
ಧರಣೀತಳಕ್ಕೆ ತೋಱಲ್ ತೊಟ್ಟ ಲೀಲೆಗಳ್
ಕರಮೆ ತನ್ನಯೆ ಮಹಾಮಹಿಮೆಗಲ್ಲದೆ ಮತ್ತೆ
ಪುರಹರಂಗಿವು ನಿಂದೆಯೇ ಚಂದ್ರಧರಣಮುಖಲೀಲಾಸಮೂಹಂಗಳು ೨೨

ನಿರುಪಮಶ್ರುತಿಪುರಾಣೇತಿಹಾಸಾದಿ ಭಾ
ಸುರತರ ಸ್ಮೃತ್ಯಾಗಮಂಗಳೊಳಗುಸುರ್ದಂತೆ
ಕರಮೆ ಅಂ ಪೇಳ್ದೆನಲ್ಲದೆ ಭಕ್ತಿಯತಿಶಯದೆ ಪೇಳ್ದುದೆಳ್ಳನಿತುಮಿಲ್ಲ
ವರವಿಬುಧರೆಯ್ದೆ ಮಧ್ಯಸ್ಥಭಾವದೆ ನೋಡೆ
ಪರಮಾರ್ಥಮಾಗಿರ್ಕುಮಿನಿತೆಲ್ಲವುಂ ಮತ್ತೆ
ನಿರುತದಿಂದಂ ವ್ಯಾಸಮುನಿ [2]ನ ದೇವಃ ಕೇಶವಾತ್ಪರಂ[2] ಎಂದು ಮುನ್ನೆ ೨೩

ಮುಸಕದಿಂ ಕಾಶಿಯೊಳ್ ವಿಶ್ವೇಶಸನ್ನಿಧಿಯೊ
ಳೊಸೆದು ಕರಮಂ ನೆಗಪಿ ನಂದೀಶನುಗ್ರದಿಂ
ಮಿಸುಗುವಾಗಸದಲ್ಲಿಯವನ ತೋಳ್ಗಳ ಕಿಳ್ತು [3]ವಿಶ್ವೇಶಮಂದಿರದೊಳು[3]
ಬಿಸವಂದಮಪ್ಪಂತೆ ಕಟ್ಟಿದನೆನುತ್ತೆ ಸಂ
ತಸದಿಂದೆ ನಂದಿನಾಸ್ತಂಭಿತೌ ಎನುತೆ ಮ
ತ್ತೆಸಕದಿಂದಂ ಭುಜೌ ಎನುತೆ ಪೇಳ್ಗುಂ ವಾಕ್ಯಮನಿತಱೊಳಗಾ ವ್ಯಾಸನು ೨೪

ಪಿರಿದುಭಯಮಡರಿ ಬೆದಱುತ್ತುಮತಿಭಕ್ತಿಯಿಂ
ದುರುತರವ್ಯಾಸಾಷ್ಟಕದಿನಭವನಂ ನುತಿಸಿ
ಮರಳಿ ಪೊಗಳ್ದಂ ನ ದೇವಃ ಶಂಕರಾತ್ಪರಃ ಎನುತ್ತೆ ಮತ್ತಿದನೆಲ್ಲವಂ
ಹರನ ಮಾಹಾತ್ಮ್ಯನಿಜವೈಭವಂಗಳನಜಂ
ಹ[4]ರಿಸ[4]ದಿಂದಂ ಪ್ರತಿಷ್ಠೆಯನೆಂತುಮಾಡಿದಂ
ಭರದಿನಂತಾ ಶಿವಂಗಿಂದೆ ಮೇಲಾದ ದೈವಂಗಳಿಲ್ಲೆಂದು ಮುದದಿಂ ೨೫

---

[1] ಉಂ (ಟ) [2] ದೇವ ಕೇಶವಃ ಪರಂ (ಗ) [3] ಮತಿಭಕ್ತಿಯಿಂ ಘುರದೊಳು (ಗ)
[4] ರುಷ (ಗ)

ಮಿಗೆ ಕಾದ ಕರ್ಬೊನ್ನ ಘಟ್ಟಿಯಂ ಪಿಡಿದಸೆಂ
ಸೊಗಸಿನಿಂ ಶಿರವರಿದು ಮಗುಳ್ದು ಪಡೆದ[1]ಪೆ[1]ನ್ನೈದೆ
ಬಗೆಯು ವಾದವಿತಂಡ ಜಲ್ಪಾದಿಗಳಿನೊಸೆದು ಗೆಲ್ದು ತೋರ್ಪೆಂ ನಿಕ್ಕುವಂ
ನೆಗಳ್ದ ಶಿವನಿಂದನ್ಯದೈವವೊಂದುಂಟೆಂದು
ಬಗುಳ್ವವರ ಮಸ್ತಕಂಗಳೊಳೆನ್ನ ಕಾಲ ಕೆ
ರ್ಪುಗಳನಿಳುಪುವೆನೆನ್ನ ಭಾಷೆಯಿದು ಮೂಲೋಕಮಱಿಯೆ ಪರಿಭಾವಿಸುವೊಡೆ ೨೬

ಪಿರಿದಿಂತು ನುಡಿಯುತುಂ ಶ್ರೀರುದ್ರಮಹಿಮೆಯೆಂ
ಬುರು ಸತ್ಪ್ರಬಂಧದೊಳ್ ಶಿವನ ಮಹಿಮೆಯನೊರೆದು
ಧರಣಿಯೊಳ್ ನಿಱಿಸಿ ಗುರುಮಲ್ಲಿಕಾರ್ಜುನಪಂಡಿತಾರಾಧ್ಯರೊಸೆದಿರ್ದರು
ನಿರುತಮೆಸೆದಿರ್ಪ ವಾದಪ್ರಕರಣಂ ದಲಿದು
ಹ[2]ರಿಸದಿಂ[2]ದಂ ಕೇಳ್ವನಾವನವನೀ ವಸುಂ
ಧರೆಯೊಳತಿನಿರ್ವಿಘ್ನನಾಗಿ ಶಿವಭಕ್ತಿತತ್ಪರನಾಗಿ ಬಾಳ್ವನನಿಶಂ ೨೭

ಗುರುಲಿಂಗ ಕರಕಮಲಜಾತವಿಖ್ಯಾತ ಭಾ
ಸುರಪೂತ ಗಾತ್ರ ಶಿವಮಂತ್ರಪೂರ್ಣಶ್ರೋತ್ರ
ಗುರುಲಿಂಗಪಾದಸರಸಿಜದ ನಿರ್ಮಲಭೃಂಗ ಭ[3]ಕ್ತ[3]ತಟಿನೀತರಂಗ
ಹರಶರಣ[4]ಮುಖ[4]ಕಮಲಸೂರ ಸೋರಾಮಾತ್ಯ
ಹ[5]ರಿಸ[5]ದಿಂದೊಲ್ದು ವಾದಪ್ರಕರಣಮನೆಯ್ದೆ
ನಿರವಿಸಿದನೆಮ್ಮಳ್ತಿಯಿಂದೆ ನಿನಗೆಂದು ಪಾಲ್ಕುಱಿಕೆ ಸೋಮೇಶನುಸಿರ್ದಂ ೨೮

ಸದಮಲಪ್ರಚುರವಿಶ್ರುತ ಪರಮಭಕ್ತಗಣ
ಪದಸರೋರುಹಸಾಂದ್ರ ಮಕರಂದಪಾನ ಸ
ಮ್ಮುದಿತ ಚಂಚಚ್ಚಂಚರೀಕನನವರತ ಪಂಚಾಕ್ಷರೀಪ್ರಸಿತಹೃದಯಂ
ವಿದಿತ ಮಂಜುಲನೀಲಕಂಠಾಹ್ವಯಂ ಮನೋ
ಮುದದೆ ಪೇಳ್ದುರುತರಾರಾಧ್ಯಚಾರಿತ್ರದೊಳ
ಗಿದು ಮೆಱೆವ ಶಿವನ ನೃತ್ಯಾಡಂಬರದ ಕಥನಮಿದನಾಲಿಪುದು ಶರಣರು ೨೯

---

[1] ದ (ಕ) [2] ರುಷದಿನಿ (ಗ) [3] ಕ್ತಿ (ಗ) [4] ಕರ (ಗ) [5] ರುಷ (ಗ)

ಮೋನಭಾಷೇ ನಲೇಖೇನೇನ ಕರಿಲಪನ
ಸೇನಾನಿತಾತನಾಗೇ ಶಭಾಸ್ವದ್ಧಾರ
ಭೇನದಿವಸೇನಕಾಲಂ ಧ್ವಸುಷಮಾಂಬಕಾಗೋನಾಥಸತ್ಪತಾಕಾ
ಶೀನಸಖರಾಕೇಶರಾಂಬರನೆ ಮಾನೂನ
ಮಾನಪೀನೌನಿಕರವೇದಂಡ ರಕ್ಷಿಪುದು
ಮೇನಕಾತನುಜಾಮನಃಸರೋವರಹಂಸ ನೀಲಕಂಠೇಶ ಧರೆಯಂ ೩೦

# ಒಂದನೆಯ ಸಂಧಿ

ಸೂಚನೆ : ಭರದೆ ರೇವಯ್ಯ ದೇವಯ್ಯಂಗಳಿರ್ವರುಂ
ಪರವಾದಿ ಬೌದ್ಧನಂ ವೆಲ್ಪಾಡಹೋಳಭೂ
ವರನ ಗುರುವಂ ಕೊಂದ ಕಥನವಂ ಕೇಳ ಸೂರಾಪಾತ್ಯ ಸಂತಸದೊಳು

ಪರಮಭಾವೀತಿತಾಮ್ರಾದಿತ್ಯನಂ ಪಳಿವ
ಸುರುಚಿರಾರುಣಿಮಾಸ್ರದಿಂ ಪತ್ತುದೆಸೆಗಳಂ
ಭರದಿಂದೆ ಘುಸೃಣರಸದಿಂ ಬಳಿದವೊಲ್ ಮಾಳ್ಪ ಪಿಂಗಲಾಮಲಜೂಟದಿಂ
ಸರಳ ವಿಚಕಿಲದಾಮಗಂಧಲಬ್ಧ ಭ್ರಮರ
ದಿರವನಿಳಿಕೆಯ್ವ ಸಿತಗಳದೊಳಗೆ ಶೋಭಿಸುವ
ಗರಳದಿಂದಂ ಮೆಱೆವ ಕಾಂತ ಗುರು ನೀಲಕಂಠಂ ಪೊರೆಗೆ ಮೂಲೋಕವಂ ೧

ವರಖಂಡನಾದಿ ತರ್ಕಗ್ರಂಥಶಾಲಿಯಿಂ
ಗುರುಪಂಡಿತೇಶನಿಂ ಶ್ರುತ್ಯುಪನಿಷನ್ಮುಖ್ಯ
ಪರಮಾಗಮಾರ್ಥಕೋವಿದನಿಂದೆ ನುಡಿಯಪಟ್ಟನುಮತಾಲಾಪಂಗಳಿಂ
ಕರಮೆಸೆವ ಹೇತುದೃಷ್ಟಾಂತಾದಿಯುಕ್ತ ಭಾ
ಸುರಮಾನ ವಾಕ್ಯಂಗಳಿಂ ಸರ್ವವಾದಿಗಳ್
ಮರವಟ್ಟು ವಾದದೊಳ್ ಬೆಱಗೊಂದಿರಲ್ ಪ್ರಶ್ನೆಗುತ್ತರಂಗುಡಲಱಿಯದೆ ೨

ಅನಿತಱೊಳ್ ತತ್ಪಂಡಿತಾರಾಧ್ಯರುತ್ತರ
ಕ್ಕನುಸಾರಿಯುತ್ತರಂಗುಡಲಱಿಯದಾ ಬೌದ್ಧ
ನೆನಸುಮತಿಕುಪಿತನಾಗುತ್ತೆ ಕಣ್ಗಳೊಳೊಗೆಯೆ ಘನವಿಸ್ಫುಲಿಂಗನಿಕರಂ
ಮಿನುಪ ನಾಸಿಕದಿಂದೆ ಬಿಸುಸುಯ್ ಕರಂ ಸೂಸೆ
ತನಿಗೆತ್ತಲಧರಮನುಕಂಪಿಸಲ್ ಕರಯುಗಂ
ನನಸು ಗದ್ಗದಮುಣ್ಮೆ ಗಂಟಿರ್ಕೆ ಪುರ್ಬುಗಳ್ ರೋಷಶಿಖಿ ತನುವ ಮುತ್ತೆ ೩

ಅತುಳಸತ್ಕೀರ್ತಿಯುತನಂ ಮಾನ್ಯವರ್ತನನ
ನತಿಪುಣ್ಯರೂಪನಂ ಪಂಡಿತಾರಾಧ್ಯನಂ
ಮತಿವಿಕಲಬೌದ್ಧನಂ ಹೊಯ್ವುತಂ ಬಾಯ್ಗೆ[1]ವಂ[1]ದಂತೆ ಬಿಱುನುಡಿಗಡಣದಿಂ
ಅತಿಶಯದೆ ಧಿಕ್ಕರಿಸುತಾ ಸಭಾವಂ[2]ಟ[2]ಪಾ
ಸ್ವಿತವಾದಿಗಳ್ ಬೆರಸು ಪೋದನವನಿತ್ತಲು
ನ್ನತವಾದಿವೃಂದಭಂಜನವೈಭವಂ ಪಂಡಿತಾರಾಧ್ಯಗುರುವರೇಣ್ಯಂ ೪

ಶರಣರೊಡಗೂಡಿ ಬರುತಿರೆ ಶಿವನ ಮಹಿಮೆಯಂ
ಧರಣಿಯೊಳ್ ನಿಱಿಸಿದತ್ಯುನ್ನತ ಕೃಪಾಂಬುನಿಧಿ
ವರವೀರಶೈವಪಾಲಕನೆಂದು ಪುರಜನಂ ಕೀರ್ತಿಸುತ್ತಿರೆ ಸಂತತಂ
ಹ[3]ರಿಸ[3]ದಿಂ ನಿಜಮಂದಿರಂಬೊಕ್ಕು ಸೊಕಮಿರ್ದ
ನರರೆ ಜಯಲಕ್ಷ್ಮಿಯುಂ ಕೀರ್ತಿಲಕ್ಷ್ಮಿಯುಮಂತೆ
ವರವೀರಲಕ್ಷ್ಮಿಯುಮಿವೆಲ್ಲ[4]ವು[4] ತನ್ನ ತೊತ್ತಿರುಮಾಗಿ ಸೇವಿಸುತಿರೆ ೫

ಪುರದೊಳಲ್ಲಲ್ಲಿ ವಿದ್ವತ್ಸಮಿತಿ ಗಲ್ಲದೊಳ್
ಕರಮನಿಟ್ಟತಿದುಃಖದಿಂ ಸುಯ್ವುತಕಟಕಟ
ಗುರುಪಂಡಿತೇಶ್ವರನೆನಿಸಿ ತನಗಧಮ ಬೌದ್ಧಂ ಕೆಟ್ಟನುಡಿಗಳಿಂದಂ
ಪರಿಭವಿಸಿದಂ ಗಡ ಮದೋದ್ರೇಕದಿಂ ಮತ್ತೆ
ವಿರಚಿಸಿದನೇತರ್ಕೆ ತರ್ಕಮಂ ಸೋಲ್ತ[5]ನೇ
ಕ[5]ರದುತ್ತರಂಗುಡಲ್ಕಱಿಯದುಮಂತೆ ವಿಭಾಡಿಸಿದನೇಕೆ ಬಳಿಕಮವರಂ ೬

ಸದಮಲಾತ್ಮಕ ಪಂಡಿತೇಶ್ವರಂ ಮಾನವನೆ
ಮುದದಿನೀ ಧರೆಯ ರಕ್ಷಿಪ ಬವಸೆಯಿಂ ನಾಡೆ
ಪದೆದೆಯ್ದಿದಾ ದಕ್ಷಿಣಾಮೂರ್ತಿಯಿರವಲ್ತೆಯೀತನಂ ಕೆಡೆನುಡಿದುದು
ಒದವಿ ಕೇಡಂ ತರ್ಕುಮುಸಿಕನಿದು ಪೋಗದೆಂ
ದುದಿತ ಹೃತ್ತಾಪಮುಣ್ಮಲ್ ನುಡಿಯುತಿರ್ಕುವಿಂ
ತಿದುಮಲ್ತು ಮುನ್ನೆ ಭೀಮೇಶ್ವರನ ಗದ್ಯದೊಳಗಾದಿಪದ್ಯದ ಮೊದಲೊಳು ೭

ಪುದಿದ ಯತ್ಸಂವಿತ್ತಿಯೆಂಬ ಶಬ್ದಮನಿಟ್ಟು
ವಿದಿತ ಗುರುಮಲ್ಲಿಕಾರ್ಜುನಪಂಡಿತೇಶ್ವರಂ
ಪದೆದು ಪೇಳಲ್ ತಾಮುಮೆಲ್ಲರುಂ ವಿದ್ವಾಂಸರುಂ ನೋಡಿ ತಪ್ಪೆನಲದಂ

---

1 ತಂ (ಕ) 2 ದ (ಕಟ) 3 ರುಷ (ಗ) 4 ರುಂ (ಕ) 5 ನೆನೆ। ಕ (ಕ)

ಸದಮಲಾತ್ಮಕ ಗೌಳಭಟ್ಟಾರಕನನೆಯ್ದಿ
ಮುದದಿಂದೆ ಸಾಕ್ಷಿಯಂ ಕುಱಿತು ವಾರಾಣಸಿಗೆ
ಸದಪಿನಿಂ ಕಳುಪಲಾ ನಾಲ್ಕಕ್ಕರಕ್ಕರ್ಥವಂ ಬರೆದನಂಕಾತನು ೮

ಭರದಿಂದೆ ನಾಲ್ಸಾಸಿರ ಗ್ರಂಥವಂ ವಿಕ್ಕ
ಸುರುಚಿರಾಕ್ಷರಕೆ ಬಾಸುಗಿಯಱಿಯನರ್ಥವಂ
ನಿರುತವೆನುತಾ ಗೌಳಭಟ್ಟಾರಕಂ ಮಗುಳ್ದು ತಾನೆಸಗಿದರ್ಥಂಗಳಂ
ಬರೆದು ಕಳುಪಲ್ಕವಂ ನೋಡಿ ಲಜ್ಜಿತ[1]ನಾ[1]ಗಿ
ಹ[2]ರಿಸ[2]ಮುಡುಗುತೆ ತರ್ಕವಂ ಬಿಟ್ಟು ತಾನುಪುರು
ತರ ವಾವದೊಕರುಂ ಸರಿದುಪೋಗರೆ ಮುನ್ನೆ ಮತ್ತಮೇತರ್ಕಿಗಳು ೯

ಗುರುಪಂಡಿತೇಶ್ವರನ ಕೂಡೆ ವಾದಿಸಿದನತಿ
ಭರದಿಂದೆ ಮತ್ತವರ್ಗೆ ಸೋಲ್ತವರನೇತಕ್ಕೆ
ಪರಿಭವಿಸಿದಂ ನುಡಿಗಳಿಂ ಬಱಿದೆ ಪೋಗದಿದು ತ[3]ಕ್ಕರಂ[3] ಧಿಕ್ಕರಿಸಿದಂ
ಉರುಪಲಂ ಕೆಲವುದೆವಸಕ್ಕೆ ತೋಱುಗುವೆನುತೆ
ನಿರುತವಿದುವಲ್ತು ದುರ್ಮದಬೌದ್ಧನೆಂದು ಸುರು
ಚಿರಕಾಕುಲಾವಾಸ ಚನ್ನಮಲ್ಲೇಶ್ವರನ ನಿಜದೀಪಿಕಾಸ್ತಂಭವಂ ೧೦

ಒಡೆದು ತನ್ನಯ ಸಭಾಮಂಟಪಂಗಟ್ಟಿಸಿದ
ನೆಡೆಯುಡುಗದೆಲ್ಲಾ ಜನಂಗಳೀಕ್ಷಿಸುತಿರಲ್
ಪೊಡವಿಯೊಳಗಿದು ಪಾತಕಂ ನಿಂದೆಯೆನ್ನದಿದು ಕಾರ್ಯವಲ್ತೆಂದು ಮತ್ತಂ
ಪೃಡಭಕ್ತರಱಿದೊಡಿದು ಭಾರವೆನಗೆನ್ನದು
ಗ್ಗಡದುಪದ್ರವಮಕ್ಕು[4]ಮಿ[4]ದಱಿಂದೆ ಮುಂದೆನ್ನ
ದುಡಿದನಾ ದೀಪ್ತಿಕಾಸ್ತಂಭಮನೆನುತ್ತೆ ಜನರುಸುರುತಿರಲೀ ನುಡಿಗಳಂ ೧೧

ಭರದೆ ರೇವಯ್ಯ ದೇವಯ್ಯಂಗಳಾಲಿಸುತೆ
ದುರುಳನಂ ಬೌದ್ಧನಂ ಕೊಲ್ಲದಿರ್ದೊಡೆ ಮಹಾ
ಪರಮಪಾತಕಿಗಳಾವೆಮ್ಮಿಂದೆ ಪಾಪಿಷ್ಠರೊಳರೆ ಭೂಮಿಯೊಳಾವಗಂ
ನಿರುತವಿಂತೆಂದು ನಿಶ್ಚೈಸಿ ತಾಮಿರ್ವರುಂ
ಹ[5]ರಿಸ[5]ದಿಂ ಕಂಕಣಂಗಳ ಕಟ್ಟಿಕೊಂಡೊಂದು
ಬರಿಸಕ್ಕೆ ಮಾಱಿತಕ್ಕನಿತು ವಸ್ತುಗಳನಾಕ್ಷಣದಲ್ಲಿ ಮಾಱುಗೊಟ್ಟು ೧೨

---

1 ಠಾ (ಕಟ) 2 ರುಷ (ಗ) 3 ರ್ಕರಂ (ಗ) 4 ಮ (ಕ) 5 ರುಷ (ಕ)

ಪರರಾರು[1]ಮಱಿ[1]ಯದಂತಾ ಬೌದ್ಧನಂ ಕೊಲ್ವ
ಸರಳಬುದ್ಧಿಯನೂಹಿಸುತ್ತೆ ಮಿಗೆ ದೂರದೊಳ್
ಶರಧಿಮಧ್ಯದೊಳಿರ್ಪ ಜಿನಮಂದಿರಕ್ಕೆ ನಿಚ್ಚಂ ಪೋಗಿ ತಜ್ಜಿನಂಗೆ
ಕರಮೆ ಪೊಡಮಟ್ಟು ತಳ್ವಾಗಿ ಬರ್ಪುದನಱಿದು
ಭರದಿಂದಮಿವನ ನೊಸಲಕ್ಕರಂದೊಡೆವುದ
ರ್ಕಿರದಿದೇ ತಾಣಮೆನುತುಂ ಪೂಣ್ದು ತಾಮಿರ್ಬರತಿಮುದದೊಳುರ್ಬಿ ಕೊರ್ಬಿ ೧೩

ನಲಿಯುತಾ ದಿನದ ಮುಂಜಾವದೊಳಗೆಳ್ದು ನಿ
ರ್ಮಲಶಿವನ ಪೂಜೆಯನೊಡರ್ಚಿ ಮನದೆಱಕದಿಂ
ದಲಘುತೇಕಾಂಗವೀರರ್ ಶೂ[2]ರ[2]ಪುಂಗವರ್ ಶೂಲಿಪ್ರಸಾದಯುತರು
ಸಲೆ ಗುಪ್ತವೇಷಿಗಳ್ ನಿಜಶಿವಾಚಾರಮನೆ
ಲಲಿತಪ್ಲವಂಗೆಯ್ದು ಶರಧಿಯಂ ಪುಗುತಂದ
ರೊಲವಿನಿಂ ಮುಸುಟೆಚೌಡಯ್ಯನಂ ಗಜ್ಜೇಶಮಸಣಯ್ಯನಂ ಮತ್ತೆಯುಂ ೧೪

ಚೇರಮನನಾ ನಂಬಿಯಣ್ಣನಂ ಚೋಳನಂ
ಧೀರ ದಾಸಯ್ಯನಂ ವಾಗೀಶದೇವರಂ
ಸಾರತರ ಕೊಂಡಗುಡಿಕೇಶಿರಾಜಯ್ಯನಂ ಮತ್ತುಳಿದ ಶಿವಶರಣರಂ
ವಾರಿಪೂರಸ್ತಂಭನಂಗೆಯ್ದರಂ ನೆನೆದು
ಧೀರರ್ಕಳಾ ಶರಧಿಯೊಳ್ ನಡೆದು ತುರಿತದಿಂ
ಸೇರಿದರ್ ಬುದ್ಧಗೃಹಮಂ ಶಿವದ್ರೋಹಿಯಂ ಕೊಲ್ವವೀಗಲೆ ಬುದ್ಧನೆ ೧೫

ನಲಿದು ನಿಟ್ಟಿಸಬೇಡ ನೀನವನನಿಂದೆಂದು
ಸಲೆ ಬುದ್ಧಿವೇಳ್ವವೊಲ್ ತಾವೀರ್ವರಳ್ತಿಯಿಂ
ದಲದರ್ಪ ಬುದ್ಧನ ಪಿಂಗಡೆಯೊಳವಿದಿರಲ್ಕಾಗಳಾ ಬೌದ್ಧಮುನಿ ದುರಾತ್ಮಂ
ಒಲವಿನಿಂದೆಂದಿನಂದದೆ ಬಂದು ಬುದ್ಧಂಗೆ
ಪಲವುಸೂಳ್ [3]ಮೆ[3]ಯ್ಯಿಕ್ಕುತಿರೆ ನೋಡಿ ಘುಡುಘುಡಿಸು
ತಲಘುಪಲಿಗಳ್ ಕಿನಿಸಿ ಸಿಡಿಲೆಱಗುವಂತೆ ಬಂದೆಱಗಿದರ್ ಸಂಭ್ರಮದೊಳು ೧೬

ಕಡೆಕಡೆ ಶಿವದ್ರೋಹಿ ಎನುತೆ ಸುರಿಗೆಱಿದು ಮ
ತ್ತೊಡಲ ಸೀಳ್ದರ್ ಮುನ್ನೆ ದೀಪಿಕಾಸ್ತಂಭಮಂ
ಕಡುಪಿನಿಂ ತಾಂ ಸೀಳ್ದವೊಲ್ ಪೂಷದಂತಮಂ ವೀರಭದ್ರಂ ಕೋಪದಿಂ

1 ನುಡಿ (ಕ) 2 ಲಿ (ಗ) 3 ಕ (ಗ)

ಉಡಿದವೊಲ್ ತದ್ಬೌದ್ಧರದನವಮಂ ಕಿಳ್ತರಾ
ಕಡುಗಲಿಗಳವರಂದು ವೀರೇಶನಧಟನಿಂ
ಪೊಡಕರಿಸುವಗ್ನಿರಸನೆಗಳ ಕಿಳ್ತಿಕ್ಕಿದಂತವನ ಜಿಹ್ವೆಯ ಕಿಳ್ತರು ೧೭

ಪೊಟ್ಟೆಯಂ ಸೀಳ್ದವನ ಕರುಳನುಗಿಬಗಿಮಾಡಿ
ಮೆಟ್ಟಿ ತಲೆಗೊಯ್ದು[1]ದುದ[1] ಬಿಲದೊಳಗೆ ಮಡಗಿಟ್ಟು
ಕಟ್ಟಾಳ್ಗಳವನ ಕೈಮುಱಿದಿಟ್ಟು ಬಳಿಕಸಂಖ್ಯಾತರಾಣತಿಯಿಂದವೆ
ದುಟ್ಟನಂ ಕೊಂದೆವೆನುತವನುರದಮೇಲೆಯಿಂ
ಬಿಟ್ಟೊಂದು ಲೇಖನವುನಭವಮದಕರಿಗಳಂ
ದೊಟ್ಟಜೆಯಿನಬ್ಧಿಯಂ ಪಾಯ್ದರಾನಂದದಿಂ ಶಿವಗಣಸ್ಮರಣೆಯಿಂದಂ ೧೮

[2]ಕ್ಷು[2]ಲ್ಲ ಬಿಜ್ಜಳನಸುಂಗೊಂಡು ಶೋಭಿಪ ವೀರ
[3]ಮೊ[3]ಲ್ಲೆ ಬೊಮ್ಮಯ್ಯ ಜಗದೇವರಡಿಗಳ್ ಮತ್ತೆ
ಖುಲ್ಲವೆಂಗೀಶ್ವರನ ಹರಣಮಂ ಬಱಕೆಯ್ದ[4]ಡ[4]ಪದ ರೇಚಯ್ಯಂಗಳ
ಬಲ್ಲಿದನೆನಿಪ್ಪ ಶಂಕರಕೂಚಿ[5]ಯಂ ಕೊಂದ
ಸಲ್ಲಲಿತ ಬಂಕಿದೇವನ ಕೇಣಿಯೆಂಬವನ
ನಿಲ್ಲದಿಱದೊತ್ತಿ ಕೊಂದಾ ಸಗರದ ಬ್ರಹ್ಮದೇವಯ್ಯನಂಘ್ರಿಯುಗಳಂ ೧೯

ಎನಸುವಮಂಕರಸೆಟ್ಟಿಯಂ ಕೊಂದು ರಾಜಿಸುವ
ಘನರಾಜನ ಬ್ರಹ್ಮದೇವಯ್ಯನಂಘ್ರಿಗಳ್
ಮುನಿದು ಬಲ್ಪಿಂ ಮಲ್ಲಿಬೋವನಸುಗೊಂಡ ಬಸವಯ್ಯನಡಿದಾವರೆಗಳುಂ
ನೆನಸು ಬಡಗಂ ಎಂಬವನ ಪೊಟ್ಟೆಯಂ ಸೀಳ್ದು
ಕೊನರ್ವ ಕಲ್ಲಯ್ಯರಾಮಯ್ಯಂಗಳಡಿಗಳುಂ
ಮನಮಲರ್ದು ಮಲಧರನ ವಧಿಸಿದಾ ಮಾಕಯ್ಯ ದಸರಿದೇವಯ್ಯಂಗಳ ೨೦

ಅತಿಕೋಪದಿಂ ಸಮಯಚಕ್ರವರ್ತಿಯನಿಱದು
ಹತಮನೇಱಸಿದ ವೀರಬ್ರಹ್ಮದೇವಯ್ಯ
ನತುಳಚರಣಂಗಳುಂ ಮತ್ತೆ ಶಿವದೂಷಕರ ತಱದ ವೀರಗಣಾಳಿಯ
ವಿತತ ಪನ್ನಳಿನ ಸಂಸ್ಮರಣಂಗಳೇ ತನುಗೆ
ನುತ ನೌಗಳಾಗೆ ಶರಧಿಯ ದಾಂಟ ಪೋದರು
ನ್ನತಗರ್ವದಿಂದೆ ರೇಮಯ್ಯ ದೇವಯ್ಯಂಗಳಾರುಮಱಯದ ತೆಱದೊಳು ೨೧

1 ದರ (ಗ) 2 ಖು (ಗ) 3 ಮ (ಗ) 4 ದ (ಕಟ) 5 ಯುಂ (ಗ)

ಸದಮಲಪ್ರಚುರವಿಶ್ರುತ ಪರಮಭಕ್ತಗಣ
ಪದಸರೋರುಹಸಾಂದ್ರ ಮಕರಂದಪಾನ ಸ
ಮ್ಮುದಿತ ಚಂಚಚ್ಚಂಚರೀಕನನವರತ ಪಂಚಾಕ್ಷರೀಪ್ರಸಿತಹೃದಯಂ
ವಿದಿತ ಮಂಜುಳನೀಲಕಂಠಾಹ್ವಯಂ ಮನೋ
ಮುದದೆ ಪೇಳ್ದುರುತರಾರಾಧ್ಯಚಾರಿತ್ರದೊಳ
ಗಿದು ವಲಂ ಮಹಿಮಪ್ರಕರಣದೊಳ್ ಬೌದ್ಧನಂ ಕೊಂದ ಸತ್ಕಥನಮೊನಿಕುಂ ೨೨

## ಎರಡನೆಯ ಸಂಧಿ

### ಪಂಡಿತಾರಾಧ್ಯರು ನೇತ್ರವಂ ಕಿಳ್ತು ಪಡೆದ ಕಥನಂ

ಸೂಚನೆ: ಗುರುಪಂಡಿತೇಶ್ವರಂ ಭಾಷೆಗಳನುಸುರ್ದು ಮ
ತ್ತುರುನೇತ್ರಯುಗಳವಂ ಕಿಳ್ತಿಕ್ಕಿ ಮೂಮೆ ಭಾ
ಸುರ ಶಿವನ ಕೃಪೆಯಿಂದೆ ಕಣ್ಗಳಂ ಪಡೆದ ಕಥನಂಗೇಳ ಸೂರಸಚಿವ

ಚರಣವಿನಮಜ್ಜನಾಘಕ್ಷಪಾದಮನ ಪಟು
ತರ ಸುಷಮಸಪ್ತಾಶ್ವ ತೀವ್ರಕರಸದೃಶಭಾ
ಸುರದೃಗಂತಸ್ಫುರದಮಲ ಘೃಷ್ಟಿಸಂತಾನನನುಪಮ ಮಹಾಮಹಿಮನು
ಸರಳ ಸುರಗಂಗಾತರಂಗ ವಿಚಕಿಲದಾಮ
ಪರಿಕಲಿತ ಪಿಂಗಲಜಟಾರಾಮನಾವಗಂ
ಹರಿಸ[1]ದಿಂ ಭಕ್ತಜನರಂ ಪಾಲಿಸುತ್ತಿರ್ಕೆ ಪರಮಗುರು ನೀಲಕಂಠಂ ೧

ಅನಿತಱಿಂ ಪೊಳಗಿತ್ತಲಪರಾಹ್ಣಕಾಲಂಬರಂ
ಮಿನುಪ ತಮ್ಮಯೆ ಬೌದ್ಧಗುರು ಬಾರದಿರಲವನ
ಮನದನ್ನರೆನಿಪ ಶಿಷ್ಯರ್ ಬುದ್ಧಸದನಕ್ಕೆ ತುರಿತದಿಂದೆಯ್ದಿ ಬಂದು
ಅನುವಿನಿಂ ತತ್‌ಕವಾಟಂದೆಗೆದು ಬಿಳ್ದಿರ್ದ
ಮುನಿಯ ಕಂಡತಿದುಃಖದೊಳಗಾಳುತೆಳ್ತಂದು
ಜನಪಂಗೆ ತತ್‌ಬೌದ್ಧಮುನಿಯ ಬರ್ದುಗೆ ಸುದ್ದಿವೇಳೆ ನೋವುತೆ ತನ್ನೃಪಂ ೨

ನಡೆತಂದು ಕಂಡನುದರಂ ಸೀಳಿಯುದಱಿಂ ಪೊಳಗೆ
ಕಡುವೇಱಿಂ ಶವ ಶಿರವಿಟ್ಟು ಕೆಯ್ಯೆರಡನುಡಿದು ಮ
ತ್ತಡಸಿಯವನಾ ಪೊಟ್ಟೆಯೊಳಗಿಂತು ವಿಚ್ಛಂದಮಾಗಿರ್ದ ಬೌದ್ಧಶಬಮಂ
ಮಿಡುಮಿಡನೆ ಮಿಡುಕುತ್ತೆ ತನ್ನೃಪಂ ದುಃಖದೊಳ
ಗಡರಿ ನೋಡುತ್ತಿರಲ್ಕನಿತಱಿಂ ಪೊಳಗಾ ಪೆಣನ
ಪೊಡೆಯ ಮೇಲಿರ್ದೋಲೆಯಂ ಕಳೆದುಕೊಂಡೋದಿಕೊಂಡನಾ ಭೂಮಿಪಾಲಂ ೩

---

[1] ರುಷ (ಗ)

ಪಿರಿದುಚಿತ ಸತ್ಕ್ರಿಯೆಗಳಂ ಮಾಡಿ ತಚ್ಛಬಕೆ
ಮರಳಿಯಾಸ್ಥಾನಮಂಟಪಕೆಯ್ದೆ ಬಂದು ನಿ
ಷ್ಠುರತರ ಕ್ರೋಧಾಗ್ನಿಕೀಲಾಲಿಗಳ್ ಕಿಡಿಯನುಗುಳೆ ಕಣ್ಗುಡಿಗಳಿಂದಂ
ಕರಸಿ ಬೇಗದೆ ಪಂಡಿತೇಂದ್ರನಂ ಮೇಲಜಱಿಯು
ದಿತವಿನಿಂದಂ ಮಹಾತ್ಮರಕೂಡೆ ಸೆಣಸುವುದು
ಕರಮಯುಕ್ತಮದೆನ್ನದೇ ಶ್ವೇತನಂ ನೋಡಿ ಮುಳಿದ ಕಾಲನ ಪಾಂಗಿನಿಂ ೪

ಮಿಗೆ ನಿತ್ಯನಾದ ಮಾರ್ಕಂಡೇಯ ಮುನಿಪನಂ
ತಗುಳ್ದ ಕೋಪದೆ ಶಮನನೀಕ್ಷಿಪಂದದೆ ದಕ್ಷ
ನಗಲದತಿರೋಷದಿಂ ಗೌತಮಮುನೀಶನಂ ನೋಳ್ಪ ಭಂಗಿಯಿನಾ ನಗಂ
ಬಗೆಯದಾ ಕ್ಷುಪನಣಿಯರಂ ದಧೀಚಿಯ[1]ನಿ[1]ಳಿಸಿ
ಮಗುಳ್ದು ನಿಟ್ಟಿಪ ತೆಱದೊಳೀಕ್ಷಿಸುತೆ ನುಡಿದನಾ
ನೆಗಳ್ದ ಪಂಡಿತವಿಭುವನತಿದುಃರಾಲಾಪಂಗಳಿಂದೆ ತದ್ಭೂಮಿಪಾಲಂ ೫

ಎಲವು ನಿನ್ನಯೆ ಕುಟಿಲವೇಷಮಂ ಭೂಜನಂ
ನಲಿದೀಕ್ಷಿಸುತೆ ಪಂಡಿತಯ್ಯನೆಂದೇಗಳುಂ
ಸುಲಭದಿಂ ಕರೆಯೆ ಬೆಬ್ಬನೆ ಬೆಱತುಕೊಂಡಿರ್ಪಯವನಿಯೊಳ್ ತಕ್ಕನಂತೆ
ಲಲಿತ ನಾನಾವಾದದೊಳ್ ವಾದಿವೃಂದಮಂ
ಗೆಲಲಜಱಿಯದೇ ಸೋಲ್ತು ನಾಣಿಲಿತನಕ್ಕೆ ನೀಂ
ಸಲೆಜೀವಮಂ ಬಿಡುವುದುಚಿತಮಲ್ಲದೆ ಸರಸವಿದ್ವಾಂಸನಂ ಪಾರ್ವನಂ ೬

ಸದಸದ್ವಿವೇಕಿಯಂ ಬೌದ್ಧಮತಸಿದ್ಧಾಂತ
ವಿದಿತಸನ್ಮಾರ್ಗಕಾಚಾರ್ಯನಂ ಕೊಲ್ವುದಿಂ
ತಿದು ನಿನಗೆ ಯೋಗ್ಯವೆ ಎನುತ್ತೆ ಮುಂ ಬೌದ್ಧನಂ ಕೊಂದು ಪೋಗುತ್ತುಮವರು
ಮುದದೆ ಬೌದ್ಧನ ಸೆಣ[2]ನ[2] ಮೇಲಿರಿಸಿದೋಲೆಯಂ
ಪುದಿದ ಕೋಪದೊಳೆಯ್ದೆ ವೆಲ್ನಾಡಜೋಳ[3]ನಾ[3]
ಸದಮಲಾತ್ಮಕ ಪಂಡಿತೇಶ್ವರನ ಮೇಲಿಟ್ಟನೋದಿಕೊಳ್ಳೆನುತೆ ಜವದಿಂ ೭

ಗುರುಪಂಡಿತೇಶನೋದಲ್ಕಸಂಖ್ಯಾತಗಣ
ವರರಾಜ್ಞೆಯಿಂ ಶಿವದ್ರೋಹಿಯಂ ಕೊಂದೆವೆಂ
ದಿರಲದಂ ಕಾಣುತ್ತೆ ತತ್ಪತ್ರಮಂ ತನ್ನ ಶಿರದೊಳಾಂತತಿಮೋದದಿಂ

---
[1] ನ (ಗ) [2] ದ (ಗ) [3] ನಂ (ಗ)

ಪಿರಿದು ಭಕ್ತ್ಯುದ್ರೇಕದಿಂ ಕಣ್ಣೊಳೊತ್ತಿಕೊಳು
ತಿರೆ ಜನಂ ಕಂಡಕ್ಕಜಂಬಟ್ಟು ನೋಡುತಿರೆ
ದರಹಾಸವೊಗೆಯುತಿರಲಾ ಭೂಪನಂ ನುಡಿದನೊಲ್ದು ತತ್ಪಂಡಿತೇಂದ್ರಂ ೮

ಎಲೆ ಭೂಪ ಕೇಳ್ ಬಲ್ಲೆನೆನಬಾರದಾನಿದಱ
ನೆಲೆಯಱಿಯದುದಱಿಂದಮಱಿಯೆನೆನಬಾರದಿದು
ಲಲಿತಗಣವರರಾಜ್ಞೆಯಿಂ ಕೊಂದೆನೆಂದಿರಲ್ಕದಱಿಂದಮಱಿಯೆನೆನಲು
ಸಲೆ ಅಱಿಯೆನಾಗಸಂ ಕಿಳ್ತು ಮೇಲ್ಬಿಳ್ದೊಡಂ
ಮಲಹರದ್ರೋಹಿಯಂ ಶ್ರುತಿಬಾಹ್ಯನಂ ನಿನ್ನ
ಕುಲಗುರುವೆನಿಪ್ಪ ಬೌದ್ಧನನಿಱಿಸಿ ಕೊಲಿಸಿದೆಂ ನೋಡ[1]ಲಿ[1]ದು ನಿಸದಮಕ್ಕುಂ ೯

ನಿನಗೆ ಗುರುವಾ ಬೌದ್ಧನವನ ಕೊಂದವರ ತೊ
ಟ್ಟನೆ ಕೊಲ್ವುದೇ ನಿನಗೆ ಧರ್ಮಮವನಂ ಯಮನ
ಮಿನುಪ ಮನೆಗಟ್ಟಿದವನಾಂ ಬಳಿಕ್ಕದಱಿಂದೆ ದಂಡನೆಗೆ ಯೋಗ್ಯನಪ್ಪೆಂ
ಮನಕೆ ಬಂದಂತೆ ದಂಡಿಪುದೆನುತ್ತುದ್ದಂಡ
ನನಘ ಗುರುಪಂಡಿತೇಶಂ ನುಡಿಯೆ ತನ್ನೃಪಂ
ಘನ[2]ಕೋಪ[2]ವಹ್ನಿನಿರ್ದಗ್ಧ ಸುವಿವೇಕನುನ್ನತಪಾಪಸಂಯುಕ್ತನು ೧೦

ಬಗೆಯದೇನಂ ವಿಪ್ರನೆನಿತುತಪ್ಪಂ ಮಾಡೆ
ನೆಗಳ್ದಧಮರಂ ಶಿಕ್ಷೆಗೆಯ್ವಂತೆ ಶಿಕ್ಷಿಸಲ್
ತೆಗಳಕ್ಕುಮೆಂದು ಯಾಮಿಯೊಳಾವಗಂ ಘೋಷಿಸುತ್ತಿರ್ಕುಮತಿಶಯದೊಳು
ಮಿಗೆ ಬ್ರಾಹ್ಮಣೋ ನ ಹಂತವ್ಯ ಎಂದಿಂತು ತೊ
ಟ್ಟಗೆ ಮತ್ತಮದಱಿಂದೆ ವಿಪ್ರರಪರಾಧಕ್ಕೆ
ತಗುಳ್ದು ಚಕ್ಷುರ್ದಂಡವೇ ಪ್ರಾಪ್ತಿಯೆಂದು ಮಗುಳ್ದಿದುವಲ್ಲದೆಯುಮಾವಗಂ ೧೧

ವರವಿಪ್ರಮುಖ್ಯಚಾಂಡಾಲಾಂತ್ಯಮಾಗಿಯಿಾ
ಧರೆಯೊಳಾರಾದೊಡಂ ಶಿವಭಕ್ತರಾಗಿಯು
ತ್ಯುರುತರಮೆನಿಪ್ಪ ಪಾಪಂಗೆಯ್ದೊಡಂ ಪಾರ್ವನಂತೆ ಶಿಕ್ಷಿಸಲಾಗದು
ನಿರುತಮೆಂದೋದುಗುಂ ವಾಕ್ಯಮನವರತಮುಂ
ಭರದೆ ಶಿವಸಾನ್ನಿಧ್ಯಕಾರಣಾದೆಂದು ಮ
ತ್ತಿರದಿಂತು ವೇದಾದಿಗಳ್ ಪೇಳುತಿರಲಿವಂ ಮಾಱಿ ದುರ್ಬುದ್ಧಿಯಿಂದಂ ೧೨

---

[1] ಲ (ಕ) [2] ತೋಷ (ಕ)

ಮಸಕದಿಂ ಬೌದ್ಧಗುರುವಂ ಕೊಲಿಸಿದೀತನಂ
ನಿಸದವೆರಡಾಲಿಗಳ ಕಿತ್ತಿರ್ಕೆವೆನುತೆ ನಿ
ಟ್ಟಿಸಿ ತನ್ನ ಬಂಟರ್ಗೆ ಪೇಳ್ದ ವೆಲ್ನಾಡಚೋಳನನೀಕ್ಷಿಸುತ್ತೆ ಮುದದಿಂ
ಬಿಸವಂದಮಾಗಿ ನುಡಿದಂ ಪಂಡಿತೇಶ್ವರಂ
ವಸುಧಾಧಿಪತಿ ಕೇಳ ಶಿವನಲ್ಲು ದೈವಮಿಾ
ವಸುಮತಿಗೆ ಬುದ್ಧನೇ ದೈವಮಂತೆವೊಲ್ಪೆದೆ ಬುದ್ಧರೇ ಶಿಷ್ಟರ್ಕಳು ೧೩

ಮಿಗೆ ವಾದದೊಳ್ ಪರಾಜಿತರಾದರಾವು ತೊ
ಟ್ಟಗೆ ನಿನ್ನ ಗುರು ಶಿವದ್ರೋಹಿಯಲ್ತವನ ಕೆ
ಪ್ಮಗೆ ವಧಿಸಿದವರಾವು ನಿಸದ[1]ವೆನಿಪೀ[1] ಬುದ್ಧಿ ಸಜಿಗೊಂಡು ನಿನ್ನೆರ್ದೆಯೊಳು
ಅಗಲದಿರುತಿದೆ ಜಗ[2]ಕ್ಕ[2]ಭವನೇ ದೈವಮಂ
ತೊಗೆದ ಶಿವಭಕ್ತರೇ ಶಿಷ್ಟರ್ಕಳೇಗಳುಂ
ಬಗೆದುನೋಡಲ್ಕಿದರ್ಕಾ ಬೌದ್ಧವದನ[3]ದೊಳ್ ಪುಳ್ಸಜಿ[3]ದುದೇ ದೃಷ್ಟವು ೧೪

ಪಿರಿದು ಮತ್ತಾ ಶಿವದ್ರೋಹಿ ಬೌದ್ಧಂ ದುಷ್ಟ
ಮರಣಮೆಯ್ದಿದುದೆ ಸಲೆಸಾಕ್ಷಿ ತದ್ಬೌದ್ಧನುರು
ತರ ಶಿವದ್ರೋಹಕರನೆಂಬುದರ್ಕಾವಗಂ ಸ್ವಪರದೇಶಿಗಳೆ ಸಾಕ್ಷಿ
ಸರಳವಾದದೊಳಾವು ಸೋಲ್ತವರುವೆಂಬುದ
ರ್ಕಿರದೆ ಮುಂ ನಿಮ್ಮಿಂದೆ ವಾದದೊಳ್ ಸೋಲ್ತ ಭಾ
ಸುರವಾದಿಗಳೆ ಸಾಕ್ಷಿಯಿನಿತು ದುಷ್ಟಪ್ರತ್ಯಯಂಗಳಂ ಕಂಡರಿಯದೆ ೧೫

ದುರುಳತನದಿಂ ಮುಂದುಗೆಟ್ಟೆರ್ಪ ನಿನ್ನ ನಿ
ಷ್ಠುರದಂಡನೆಗೆ ತನುವನಿತ್ತಪೆವು ಕೇಳ ನೀಂ
ಹರಭಕ್ತರೇ ಶಿಷ್ಟರೆಂಬುದರ್ಕವರ ನೋಡಿದ ಕಣ್ಗಳಂ ಕೀಳಲು
ಹರಮಹತ್ವದೆ ಮೂಮೆಯೊಗೆಯುವೇಳ್ಕುಂ ಮತ್ತೆ
ಭರದೆ ವಿಶ್ವಾಧಿಕಂ ಶಿವನೆಂಬುದರ್ಕೆ ಬಂ
ಧುರತರಶ್ರುತಿ ತಚ್ಛಿರೋಧರ್ಮವೆಂದಂತೆ ತಲೆಯ ಮೂರ್ಸೂಳರಿಯಿಸೆ ೧೬

ಮಿನುಗುತೊಗೆಯಲ್ವೇಳ್ಕು ನಿರ್ಮಾಲ್ಯದತಿಶಯಮ
ನನುವಿನಿಂ ತೋಱಲ್ಕೆ ನಿರ್ಮಾಲ್ಯಮಾಗೆಸೇವ
ತನುವ ಮೂಸೂರ್ಳ್ ತುಂಡಿಸಿರ್ಕೆಂದಿನಂತೆ ತೋಱಲ್ವೇಳ್ಕು ತೋಱದಿರಲು

[1] ಮೆಂಬೀ (ಗ) [2] ದ (ಕ) [3] ದೊಳುಳ್ಪಸಿರಿ (ಗ)

ನೆನಸು ಶಿವನೆಲ್ಲಿದಂ ಭಕ್ತರೆಲ್ಲಿದರಮಲ
ಘನಶಿವನ ನಿರ್ಮಾಲ್ಯವೆಲ್ಲಿತ್ತೊ ಶಿವಪೂಜೆ
ಯೆನಸುಮೆಲ್ಲಿತ್ತೊ ಬೌದ್ಧರೆ ಪೂಜ್ಯರವರ ಮತವೇ ಸಮ್ಮತಂ ಮತ್ತೆಯುಂ ೧೭

ಧರೆಗೆ ಬುದ್ಧನೆ ದೈವಮಿದು ಭಾಷೆಯೆನಗೆ ನೀ
ನಿರದೀಗಳೀಕ್ಷಿಸೆಲೆ ಭೂಪ ತದ್ದೃಷ್ಟಮಂ
ಕರಮೆನುತೆ ಪಂಡಿತೇಶಂ ಖಂಡಿತಾಶುಭಂ ನಡೆತರಲ್ ಬೀದಿಯೊಳಗೆ
ಭರದೆ ಕೇ[1]ಳೀ[1] ವಾರ್ತೆಯಂ ಪುರದ ವನಿತೆಯರ್
ಪುರುಷರ್ಕಳುಂ ದುಃಖದಿಂ ಬಂದು ನೋಡುತಿರೆ
ಸರಳಲಿಂಗೋದ್ಭವ ಮಹಾದೇವನಾಲಯದ ಮುಂಗಡೆಯ ತೋರಣದೊಳು ೧೮

ಹ[2]ರಿಸ[2]ದಿಂದಿರ್ಪ ಸದ್ಭಕ್ತತತಿಯಂ ಕಂಡು
ಪಿರಿದುಮನಮಲರ್ದವರ್ಗೆ ಮೂಮೆ ಬಲಸಂದು ತನು
ಧರೆಯೊಳೊರಸುವ ಪಾಂಗಿನಿಂ ತುಳಿಲ್ಗೆಯ್ದು ತದ್ವೃತ್ತಾಂತಮಂ ಸೂಚಿಸಿ
ಮರಳಿ ಲಿಂಗೋದ್ಭವಂ ಗದ್ಯಮಂ ಮುದದಿಂದೆ
ವಿರಚಿಸುತೆ ಲಿಂಗೋದ್ಭವಾಖ್ಯದೇವರ ನುತಿಸಿ
ವರದನಂ ಮಾಡಿಕೊಳುತಾ ದೇವ ನಿರ್ಮಾಲ್ಯಮಂ ಸೂಡಿ ಮಸ್ತಕದೊಳು ೧೯

ಪರಭಕ್ತಿಸಾಮ್ರಾಜ್ಯ ಪಟ್ಟಬದ್ಧಾಳಿಕರ
ದರಹಾಸಕೌಮುದೀವಕ್ತ್ರೇಂದುಮಂಡಲಂ
ಹರನಾಮಪೀಯೂಷಪೂರ್ಣನಿರ್ಮಲಕರ್ಣಸೌವರ್ಣ ಕಲಶದ್ವಯಂ
ನಿರುಪಮಾನಂದಾಶ್ರುವರ್ಧನಾಂಬಕಯುಗಂ
ಸುರುಚಿರ ದೃಗಂತನಿರ್ಯತ್ಕೃಪಾರಸಕಲಿತ
ಸರಸಗಂಡಸ್ಥಲಂ ಶಂಭುಪ್ರಸಾದತಾಂಬೂಲೋರುರಾಗಾಧರಂ ೨೦

ಮಿನುಪ ಸಲ್ಲಾಪವಿಸ್ಫುರಿತದಂತಾಂಶುಯುತ
ನನವರತ ಪಂಚಾಕ್ಷರೀಮಂತ್ರಮಾಣಿಕ್ಯ
ಘನತರ ಕರಂಡರಸನಂ ಗಿರಿಶನಿರ್ಮಾಲ್ಯಗಂಧಪೂರಿತನಾಸಿಕಂ
ನೆನಸು ಪೂರ್ವಾರ್ಚನಾಧೂಪಧೂಮಾಮೋದ
ವೆನಸುಮುಣ್ಮುವ ದಿವ್ಯವಸನಯುಕ್ತಂ ಭಸಿತ
ವಿನುತರುದ್ರಾಕ್ಷಾನ್ವಿತಾಂಗಂ ತ್ರಿಪುಂಡ್ರಯುತಮನಘನಾ ಪಂಡಿ[3]ತೇಶಂ[3] ೨೧

---

[1] ಳ್ದೀ (ಕ) [2] ರುಷ (ಕ) [3] ತೇಂದ್ರಂ (ಗ)

ಹರನ ಮದಗಜದಂತೆ ನಿಂದು ಸಭೆಯಂ ನೋಡು
ತುರುನಾದದಿಂ ನುಡಿದನೆಲೆ ನಿಖಿಲಜನರಿರಾ
ವರವಿಪ್ರರಾದಿಯಾಗಧಮಜಾತ್ಯಂತ್ಯಮಾ[1]ದೆ[1]ಲ್ಲರುಂ ಪಾರ್ವರ್ಕಳುಂ
ಪರಮಪಂಡಿತರುಮಾ ಕವಿಗಳುಂ ಸುಗತರುಂ
ಧರಣಿಪನ ಸೇವಕರುಮೆಯ್ದೆ ನೀವೆಲ್ಲರುಂ
ಭರದಿನೆನ್ನಯ ಭಾಷೆಯಂ ಕೇಳಿಮೇಕಾಗ್ರಚಿತ್ತದಿಂ ಸಂತಸದೊಳು ೨೨

ಎನುತೆ ಮುನ್ನಿರ್ದ ಶಿವಶರಣಚರಣಂಗಳಂ
ಮನಮೊಸೆದು ತನ್ನ ಶಿರದೊಳ್ ತಳೆದು ಬಳಿಕೆ ತೊ
ಟ್ಟನೆ ಏಕ ಏವ ರುದ್ರಃ ಎಂದು ವಿಶ್ವಾಧಿಕೋ ರುದ್ರ ಎಂದು ವೇದಂ
ವಿನಯದಿಂ ನುಡಿದಂತೆ ವಿಶ್ವಾಧಿಕಂ ಶಂಭು
ವೆನಸುಮೊರ್ವನೆ ಮತ್ತೆ ಸರ್ವಪೂತ ಎನುತ್ತೆ
ವಿನುತವಾಕ್ಯಂ ಮತ್ತಮನ್ಯಾವಶಿಷ್ಟಾನಿ ಎಂದೊಲ್ದು ಪೇಳ್ದ ತೆಱದಿಂ ೨೩

ವಿದಿತಶರಣರೆ ವಿಶಿಷ್ಟರ್ಕಳಾವಗವೆಂಬು
ದಿದುಭಾಷೆ ಮತ್ತಂ ಪಿತಾತದಾಸ್ಯಾಮ ಎಂ
ದೊದವಿ ವೇದಂ ಪ್ರಸಾದಾನ್ಮುಕ್ತಿಸಂಭವಃ ಎನುತಱ[3] ಪುರಾಣಮನಿಶಂ
ಮುದದೆ ನುಡಿದಂತುಮಾಪತಿಯಾದ ಶಂಭುವಿಂ
[2]ದೊದಗಿದ[2] ಮಹಾಪ್ರಸಾದವೆ ಮುಕ್ತಿಕಾರಣಂ
ಪಡೆದುನೋಡಲ್ಕೆಂಬುದಿದುವೆನ್ನ ಭಾಷೆ ಮತ್ತಂ ಕೇಳಿ ನೀವೆಲ್ಲರು ೨೪

ಮುನಿಸಿನಿಂದೀ ಮನುಜನಾ[3]ಥ[3]ನೆನ್ನಕ್ಷಿಗಳ
ನೆನಸುವೆರಡಂ ಕಿಳ್ತು ಬಿಸುಡಿಸಲ್ ಮರಳಿ ತೊ
ಟ್ಟನೆ ಮುನ್ನಿನಂತೆ ಬಾರದೊಡಾಂ ಶಿವನ ಪೂಜೆಯಂ ಮಾಡಿದವನುಮಲ್ತು
ಮಿನುಪ ಶರಣರ್ಗೆಱಗಿದವನಲ್ತು ಭಾಷೆಯಿದು
ನನಸು ತಳ್ವಿನ್ನೇಕಿದರ್ಕೆ ಕಣ್ಗಳ ಕೀಳಿ
ಸೆನುತೆ ಗುರುಮಲ್ಲಿಕಾರ್ಜುನಪಂಡಿತೇಶ್ವರಂ ನುಡಿಯೆ ಕಿಸುಗಣ್ಚಿ ಜನಪಂ ೨೫

ಪಿರಿದು ನಿಟ್ಟಿಸಿ ನೋಡುತುಂ ತಳಾಱಿರ ಕರೆದು
ಭರದೆ ನುಡಿದಂ ಬಳಿಕ್ಕೀತನೆಂ[4]ದಂ[4]ತೆಯೆದ್ದು
ಯಿರದೆ ಮೂರ್ಸೊಳ್ ಕಣ್ಗಳಂ ಕೀಳೆ ಮತ್ತವುಂ ಬರ್ಪು[5]ದುಂ[5] ಬಾರದುದನು

---

1 ಗೆ (ಕ) 2 ಗೊಡವಿದ (ಗ) 3 ದ (ಕ) 4 ದಿಂ (ಗ) 5 ದಂ (ಕ)

ಪರಿಭಾವಿಸುವೆನೊಂದುಸೂಳ್ ಕಣ್ಗಳಂ [1]ಕಿಳ್ತು[1]
ಧರೆಗಿಕ್ಕುವೆನುತವರ್ಗೆ ಬೆಸಸಿ ಕಳುಪಲ್ಕಾಗ
ಪುರಜನಂಗಳ್ ಭಯಂಗೊಳುತಿರಲ್ ನಖರಂಜಿನೀಯುಕ್ತರಾಗಿ ಬರಲು ೨೬

ತಗುಳ್ದೆನ್ನ ಕಣ್ಗಳಂ ಮಿಾಂಟುವಾಗೆನ್ನನು
ಣ್ಮೊಗದ ಪೊಗರಡಗಿದೊಡಮಧರರಸವಿಂಗಿದೊಡೆ
ಬಗೆ ತಡಬಡಂಬೋ[2]ದೊ[2]ಡಂ ಮನದೊಳೀಶಸಂಸ್ಮರಣೆಯುಳಿದೊಡಮಾವಗಂ
ನೆಗಳ್ದ ಶಿವಶರಣನುತಿ ಪೈಸರಿಸಿದೊಡಮೆನ್ನ
ಸೊಗಯಿಸುವ ತನುಕಾಂತಿ ನೀರೋಡಿದೊಡಮೆಯ್ದೆ
ಮಗುಳ್ದು ಶಂಕರಕಿಂಕರರ ಭೃತ್ಯನಾನಲ್ತು ನಿಕ್ಕುವಮಿದೆನುತೆ ನುಡಿದು ೨೭

ಗುರುಪಂಡಿತೇಶನೀಕ್ಷಿಸಿ ತಳಾಬರನೊಸೆದು
ಭರದಿಂದೆ ಪದ್ಮಾಸನಸ್ಥನಾಗುತ್ತೆ ಸುರು
ಚಿರತರಪ್ರಾಣೇಶನಂ ಪ್ರಾಣಪದ್ಮದೊಳಗಿರಿಸಿ ಸದ್ಭಕ್ತಿಯಿಂದಂ
ಪಿರಿದುಮಾನಂದಾಶ್ರುನಯನನಾಗುತ್ತೆ ಕರ
ಸರಸೀಜಮಂ ಮುಗಿದು ಹ[3]ರಿಸ[3]ದಿಂ ನುತಿಸಿದಂ
ಗಿರಿಶನಂ ಶ್ರೀಮಲ್ಲಿಕಾರ್ಜುನನಸಳ್ಳೂರ್ತ್ಯ ನಾನಾಪ್ರಕಾರದಿಂದಂ ೨೮

ಶ್ರೀಮಲ್ಲಿನಾಥಾಯ ಶೂ[4]ಲಾಯುಧಾ[4]ಯ ಜಿತ
ಕಾಮಾಯ ಭಸ್ಮೀಕೃತಾಘಾಯ ಗಿರಿಶಾಯ
ಸೋಮಾಂಕಜೂಟಾಯ ನರಸಿಂಹಚರ್ಮವಸನಾಯ ತೇಜೋಮಯಾಯ
ವ್ಯೋಮಕೇಶಾಯ ವರದೇವಾಧಿದೇವಾಯ
ಭೀಮಾಯ ವೀರಭದ್ರಾಯ ನಿತ್ಯಾಯ ವಿಧಿ
ತಾಮರಸ ನಯನಾರ್ಚಿತಾಯ ತಸ್ಮೈ ನಮಃ ಶ್ರೀಗಿರೀಶಾಯ ಎಂದು ೨೯

ಉರುತರ ಪ್ರಮಥಾಯ ರುದ್ರಾಯ ವಿಮಲಾಯ
ವರಭಕ್ತಸಮುದಾಯ ನಿತ್ಯರೂಪಾಯ ಭಾ
ಸುರ ಫಾಲನೇತ್ರಾಗ್ನಿ ವಿಗತಾಧ್ವರಾಯ ಭಸ್ಮಾಂಗ ಸುವಿಲೇಪನಾಯ
ದರಹಾಸವದನಶತಪತ್ರಾಯ ಶಾಂತಾಯ
ಸುರುಚಿರಶ್ರೀವೃಷಭನಾಥಾಯ ಕಮನೀಯ
ಹರವಾಹನಾಯ ತಸ್ಮೈ ನಮಶ್ರೀಶೈಲಪತಿಮಂದಿರಾಯ ಎಂದು ೩೦

---

[1] ಕಿತ್ತು (ಗ) [2] ದ (ಕ) [3] ರುಷ (ಗ) [4] ಲಧಾರಾ (ಗ)

ಉರುತರ ಶ್ರೀದೇಶಿಕೇಂದ್ರಾಯ ಕನದಮಲ
ಹರಸನ್ನಿಭಾಯ ಸಮ್ಯಗ್ವೇದಿತಾತ್ಮೀಯ
ವರಲಸದ್ವೀರವ್ರತಾಯ ವೇದಾಗಮಸದಾಚಾರಪರಿವೃಢಾಯ
ಪರಮತೇಜಃಪುಂಜದೇಹಾಯ ನಿರ್ಭಿನ್ನ
ದುರಿತನಿಕುರುಂಬಾಯ ಮೋಕ್ಷಪ್ರದಾಯ ಬಂ
ಧುರಕೃಪಾಲಸದರ್ಣವಾಯ ತಸ್ಮೈ ನಮಶ್ಶ್ರೀಶೈಲಲೋಲುಪಾಯ ೩೧

ಎಂದು ಶಿವನಂ ಪ್ರಮಥರಂ ತನ್ನ ಗುರುವನಾ
ನಂದದಿಂ ನುತಿಗೆಯ್ದು ವಂದಿಸುತೆ ಮನದೊಳಗೆ
ಮುಂದಿರ್ದ ಯಾಮಿಕರಕರದೊಳೆಸೆದಿರ್ದ ನಖರಂಜನಿಯ ಮೇಲೆ ಮುದದಿಂ
ಚಂದಮಪ್ಪಂತೆ ತಳಿಯುತೆ ಮೂಲಮಂತ್ರದಿ
ದೊಂದಿ ಮಂತ್ರಿಸೆ ಪಟ್ಟಭೂತಿಯಂ ಬಳಿಕೆ ತಜಃ
ಸಂದ ತನ್ನಖರಂಜನಿಯನೊಸೆದು ಕಳಕೊಂಡು ಲಿಂಗಜಲದಿಂದೆ ಕರ್ಚಿ ೩೨

ಅನಿಶಮುಂ ಯಾ ಯ ಕ್ರಿಯಾವಿಧಾತವ್ಯ ಎಂ
ದನುನಯಂ ಪೇಳ್ದ ವಾಕ್ಯಾನುಸಾರದೆ ಮಹಾ
ಘನಲಿಂಗಕದನರ್ಪಣಂಗೈದು ಬಳಿಕೆ ಶಂಕರಕೃಪಾವಾರಿನಿಧಿಯೆ
ಮನಸಿಜಾಂತಕ ಚನ್ನಮಲ್ಲಿಕಾರ್ಜುನ ನಿಮ್ಮ
ವಿನುಪ ಮಾಹಾತ್ಮ್ಯಮಂ ಪಸರಿಸಲ್ ಭೂಮಿಯೊಳ್
ವಿನಯದಿಂದೆನ್ನ ಕಣ್ಗಳ ನಿನ್ನ ಕೈಮುಟ್ಟೆ ಮೂಮೆ ಕಿಳ್ತಿರಿಪುದೆಂದು ೩೩

ಪಿರಿದು ಬಿನ್ನೈಪಂತೆ ಕಣ್ಮುಚ್ಚಿ ಹೃದಯದೊಳ್
ಗಿರಿಶನಂ ನಿಲಿಸಿ ಸುಧ್ಯಾನದಿಂ ತನ್ನ ಭಾ
ಸುರದೇಹಮಂ ಶಿವಾರ್ಪಣಮಂ ನಿಮಿರ್ಚಿ ಬಳಿಕಂ ಕಣ್ಣ ಕೀಳ್ವೆಸಕದಿಂ
ಹೊರಿಸಾದಿಂ ಬಲಗಡಗೆ ಜೋಲ್ದು ವಾಯುವನೊಲ್ದು
ಕರಮೆ ಕುಂಭಕಮನೆಯ್ದಿಸುತೆ ಮುಯ್ಪಂ ನೆಗಪಿ
ಕೊರಲ ಕೊಂಕಿಸಿ ಕಣ್ಗಳಂ ತೆಱೆಯುತೆಡಗಯ್ಯೊಳೆವೆಗಳಂ ಕೆಲಕೊತ್ತುತೆ ೩೪

ಬಲಗೈಯೊಳಿರ್ದ ನಖರಂಜನಿಯ ನಳ್ಕಱಂ
ಬಲದ ಕಣ್ಗುಡಿಯೊಳೂಱುತ್ತೆ ಕಣ್ಗೊಡೆಯದಂ
ತೊಲವುಮಿಗೆ ನರತತಿಯನೊಯ್ಯನೊಯ್ಯನೆ ಬಿಡಿಸಿ ಬಲದ ಕಣ್ಗೆತ್ತು ಮತ್ತಂ

---

[1] ರುಪ (ಗ)

ಅಲರುತಂತೆಡದ ಕಣ್ಣಿಂ ಕಿಳ್ತು ಗಾಂಭೀರ್ಯ
ಜಲಧಿಪಂಡಿತವಿಭುವನಂ ಕನಕಪಾತ್ರೆಯೊಳ್
ನಲಿದಿರಿಸಿ ಕೆಂಬರಲ ನೀರಾಜನಮನೆತ್ತುವಂತೆ ತದ್ಭಕ್ತತತಿಗೆ ೩೫

ಹಾರಿಸ[1]ದಿಂದಾರತಿಯನೆತ್ತಿ ಬಳಿಕಾ ನೃಪನ
ಪೊರೆಗವಂ ಕೊಂಡೊಯ್ಯೆ ಕಂಡು ತದ್ಭೂವಿಪಂ
ಪಿರಿದುವಿಂದೆನ್ನ ಕೊಲೆ ಬಂದಿತೆಂದುಸುರ್ದವರ ರಕ್ತವಂ ಬೆರಲೊಳಂಟ
ಇರದಳಿಕದೊಳ್ [1]ಬೊ[1]ಟ್ಟನಿಟ್ಟುಕೊಂಡಂ ಮತ್ತೆ
ಹರನ ಮಾಹಾತ್ಮ್ಯವೊಗೆವಂತೆ ಪಂಡಿತವಿಭುವ
ವರನಯನವೊಂದನೊಂದಂ [2]ಮುಂಚಿ[2] ಪುಟ್ಟದುವು ಬಿಸವಂದವೊಗೆಯೆ ರಸೆಗೆ ೩೬

ಗುರುಪಂಡಿತೇಶ್ವರನ ಚರಣಯುಗವಂ ಸಕಲ
ಶರಣರೆಲ್ಲರ್ ತಮ್ಮ ಶಿರದೊಳಗೆ ತಾಳ್ದು ಮ
ತ್ತುರುಕೌತುಕಂಬಡುತೆ ಮನದೊಳಗೆ ಸಂತಸಂ ಮೇರೆಯಂ ಮೀಱಿ ಬಳಿಕಂ
ಪಿರಿದು ನುತಿಸುತೆ ಬಂದ ಕಣ್ಗಳಂ ನೋಡುತ್ತೆ
ಮರಳಿ ಮರಳೀಕ್ಷಿಸುತ್ತವನಿದುಂ ಮಿಗೆ ಪೊಸತು
ಧರಣಿಯೊಳಗೆನುತೊರ್ವರೊರ್ವರೊಸೆದುಸುರುತ್ತೆ ನಲಿದು ಕೀರ್ತಿಸುತಿರ್ದರು ೩೭

ಮರಳಿ ಕೇಳಿಕೆಗಳಂ ಸದ್ಭಕ್ತರಲ್ಲಲ್ಲಿ
ವಿರಚಿಸುತೆ ಱಂಗಣಂಗುಣಿದಾಡಿ ಪಾಡುತಂ
ಪರಿತೋಷದಿಂ ಶರಣಸಭೆಯೊಪ್ಪುತಿಂತಿರಲ್ ಮನದಳ್ಕೆಯಿಂದೆ ಬಂದು
ಪುರಜನಂ ಪಂಡಿತೇಶಂಗೆಱಗಿ ಕಣ್ಗಳಂ
ಭರದಿನೀಕ್ಷಿಸುತೆ ನೆರೆದಿರೆ ನಿಬಿಡಮಾಗಿ ಮ
ತ್ತಿರದೊರ್ವರೊರ್ವರಂ ಮೆಟ್ಟಬಂದಾ ಪಂಡಿತೇಂದ್ರಂಗೆ ನಮಿಸುತಿರಲು ೩೮

ಧರಣಿಪನ ಲೆಕ್ಕಿಸದೆ ಮೇಲ್ಬಿಳ್ದು ಬಂದು ನಿ
ರ್ಭರದೆ [3]ಪೌರರ್[3] ನೋಡುತಿರೆ ಜನಪನಾ ನರರ
ನೆರವಿಯಂ ಪಿಂಗಿ ಬಳಿಕೊಂದುನ್ನತಸ್ಥಾನಮಂ ಸಾರ್ದು ನಿಂದು ಬೆಱಗಿಂ
ಮರಳಿ ನೋಡುತಿರ್ದನುಳಿದ ಜನರಲ್ಲಲ್ಲಿ
ಪಿರಿಯ ಕರುಮಾಡಂಗಳಂ ಗೋಪುರಂಗಳಂ
ಭರದಿನಡರ್ದೀಕ್ಷಿಸುತ್ತಿದಱಿಂದೆ ವಿಘ್ನಮೆಯ್ದದೆ ಪೋಗದೆನುತಿರ್ದರು ೩೯

---

[1] ಬ (ಕ) [2] ಮುಚ್ಚಿ (ಗ) [3] ಪೌರಜನ (ಗ)

ನಿರುತಮಿಾ ಪಂಡಿತೇಶಂ ನೋಡೆ ಸಾಮಾನ್ಯ
ಪುರುಷನೇ ಬಂದ ಕಣ್ಗಳ ಕಂಡು ಮತ್ತಮಿಾ
ಧರಣಿಪಂ ಮತ್ತೆ ಕಣ್ಗೆಳ್ವುಜ್ಜುಗಮನೆಯ್ದೆ ಬಿಡಿಸಬೇಡವೆ ನಿಕ್ಕುವಂ
ಪಿರಿದುಮಿದಱಿಂದೆ ತನಗಿಂಚೆ ತೋಱದೆ ಪೋಗ
ದಿರದೆನುತೆ ಜನರುಲಿಯುತಿರಲಾಗ ಸತ್ಕೀರ್ತಿ
ವರಪಂಡಿತೇಶ್ವರಂ ಕರಸಂಜ್ಞೆಯಿಂ ಜನದ ಕಳಕಳಮನೊಸೆದು ನಿಲಿಸಿ ೪೦

ವಿದಿತ ತದ್ಗೋಪುರದ ಕನಕಹರ್ಮ್ಯದ ಸಮಿಾ
ಪದೊಳಿಟ್ಟ ನಿಜತನುಸ್ತಂಭಕೀಲಿತ ನಯನ
ಸದಮಲಾನರ್ಘ್ಯರತ್ನದ್ವಯಂ ಗುರುಕೃಪಾಮೃತಸರೋವರದೊಳೊಗೆದು
ಪುದಿದ ಸದ್ಭಕ್ತಿಗಂಧಾನ್ವಿತಾಂಬಕಕಮಲ
ನುದಿತಸದ್ಭಕ್ತದಿವ್ಯಾಂಗರುಚಿಯೆಂಬ ಸವಿ
ಯೊದವಿದುಡುಪತಿಕಿರಣಪಾನಸರಸಿಜನಯನ ವಿಲಸಚ್ಚಕೋರಯುಗಳಂ ೪೧

ಪರದೈವಸೇವಾಸಮುದ್ಭೂತ ಪಾಪೌಘ
ದಿರವಿನಿಂ ನೊಂದು ಜನದಂತರ್ಬಹಿಸ್ತಮಮ
ನಿರದೆ ಪುಚ್ಚಳಿಗೆಯ್ವ ದೀಪಿಕಾಕೃತಿವಿಲೋಚನಯುಗ್ಮನಾಗಿ ಬಳಿಯಂ
ಹರಗಣಾಳಿಗೆ ಭೂತಿತಾಂಬೂಲಮಂ ಕಳುಪಿ
ನರಪನಂ ಸಭೆಯುಮಂ ನೋಡಿ ನುಡಿದಂ ಮಹೇ
ಶ್ವರಮಹಿಮೆಯಂ ಭಕ್ತವೈಭವಮನೀಕ್ಷಿಸಿದಿರಿಂದು ನೀವೆಲ್ಲರೊಸೆದು ೪೨

ಜನಪ ನೀಂ ಕಿಳ್ತಿಕ್ಕಿಸಿದ ಕಣ್ಗಳಿವೆ ಮತ್ತ
ಮೆನಗೀಶನಿತ್ತ ನಯನಂಗಳಿವೆ ನೋಡು ನೀಂ
ಮಿನುಪ ದೃಷ್ಟಪ್ರತ್ಯಯಂಗಳಂ ಬಳಿಕಮಿದು ಮೊದಲ ಮದ್ಭಾಷೆ ನಿಸದಂ
ಎನಸುಮವನಿಪ ಕೇಳ ಮುಂದೆನ್ನ ಭಾಷೆಯಂ
ಜನರೆಲ್ಲರುಂ ಕೇಳಿನೊಂದುಕಣ್ಣಂ ಕಿಳ್ತು
ಮುನಿದು ಮತ್ತೊಂದುಕಣ್ಣಂ ಮಿಾಂಟುವನಿತಱೊಳೆ ಮುಂ ಕಿಳ್ತ ತನ್ನೇತ್ರವು ೪೩

ತ್ವರಿತದಿಂ ಬಾರದಿರ್ದೊಡಮೆನ್ನ ಭಾಷೆಗಿದು
ಪಿರಿದು ಭಂಗಂ ಮುನ್ನೆ ಕೇಳ್ದಱಿಯಿರೇ ಮಹೇ
ಶ್ವರನ ಮಹಿಮೆಯನಂಬುಜಾಕ್ಷಂಗೆ ಕಣ್ಗಿತ್ತನಭವನಂತದುಮಲ್ಲದೆ

ಹರಿಸ[1]ದಿಂ ಶಿವನಾಗಮಯ್ಯಂಗೆ ಕಣ್ಗೊಟ್ಟ
ನುರುತರಪ್ರೀತಿಯಿಂ ಕಾಳಿದಾಸಂಗಂದು
ಸುರುಚಿರಾಂಬಕರಾಶಿಯಂ ಕುಡನೆ ಕಣ್ಣಪ್ಪದೇವಂಗೆ ಕಣ್ಣಿತ್ತನು ೪೪

ನಲಿದು ಕಣ್ಣಿತ್ತನಾ ಯಕ್ಷಪಾದನ ಚರಣ
ಕೊಲವಿನಿಂದಂ ಶಿವಂ ಶ್ರೀಗಿರೀಶಾಯವೆನು
ತಲಸದೇ ನಯನಾದ್ರಿಪತಿಯೆನುತೆ ಮತ್ತಯಂ ಮಲ್ಲಿನಾಥಃ ಎನುತ್ತೆ
ಸಲೆ ವಾಕ್ಯಮುಸುರ್ದಂತೆ ಕಿಳ್ತರ್ಪಿಸುತ್ತೆ ನೋ
ಡಲಘುನಯನಂಗಳಂ ಶ್ರೀಶೈಲದೊಳ್ ಮಗುಳ್ದು
ಸುಲಭದಿಂ ಪಡೆವರೇಗಳ್ ಮತ್ತಮೊರ್ವನವಿಚಾರಿ ಗೊಲ್ಲಂ ಮುದದೊಳು ೪೫

ಕುಱಿಗಳಂ ಕಾದು ಬೇಸತ್ತು ಕೈಯೊಳಗಿರ್ದ
ಮಿಱುಪ ಬಡಿಗೆಯ ಬಿಸುಟು ಕಣ್ಗಳಂ ಕಿಳ್ತು ಬಾಂ
ದೊಱೆದಾಳ್ದ ಮಲ್ಲಿಕಾರ್ಜುನನಂಘ್ರಿಗಿತ್ತು ಪಡೆದಂ ಮರಳಿ ಕಣ್ಣೆರಡನು
ಕುಱುಬನೊಳಗಾಗಿ ನಯನಾದ್ರಿಯೊಳ್ ಕಣ್ಗಳಂ
ತಱಿಸಂದು ಪಡೆದನೆನೆ ಮತ್ತಿನರ್ಗಾ ಶೈಲ
ದೆಱೆಯ ಮಲ್ಲೇಶ್ವರಂ ಕಣ್ಗಳಂ ಕುಡುವದೇಂ ಚೋದ್ಯಮಿಾ ಭೂಮಿಯೊಳಗೆ ೪೬

ಅವರ್ಗೆ ಕಣ್ಣಿತ್ತ ಶಿವನೀಗಱತುಪೋದನೇ
ಭುವನದೊಳ್ ಬೀಜಂಗಳಂ ಕರ್ದಮದೊಳಿಟ್ಟು
ತವಕದಿಂದಾ ಮಹತ್ಫಲಮನನುಭವಿಸಂತೆ ಜನನಿಕರಮಳ್ತಿಯಿಂದೆ
ಶಿವಸಮರ್ಪಿತ ಸತ್ಕ್ರಿಯಾಸಮಿತಿ ತನ್ನ ಫಲ
ನಿವಹಮಂ ಕುಡದಿರ್ಕುಮೇ ಪಾರ್ವರಾವಗಂ
ಭವನನುದ್ದೇಶಿಸಿ ಘೃತಾಕ್ಷತತಿಲಾದಿಗಳನಗ್ನಿಯೊಳ್ ಬೇಳಲೊಸೆದು ೪೭

ಪಿರಿದವಱ ಫಲಮನೆಯ್ದುವರವರ್ ಗಡ ಮತ್ತೆ
ಪರಮೇಶ್ವರಾರ್ಪಿತ ನಿಜಕ್ರಿಯಾಫಲಮುಸಿಕ
ನಿರದಳಿದುಪೋಕುಮೆ ನರರ್ಗೆ ಬಿಟ್ಟೆಚ್ಚಕೋಲ್ ತಪ್ಪುಗುಮೆ ಭಾವಿಸುವೊಡೆ
ನಿರುತಮತ್ಯುತ್ಕಟೈಃ ಪುಣ್ಯಪಾಪೈಃ ಎಂದು
ಭರದೆ ವಾಕ್ಯಂ ನುಡಿದ ತೆಱದೊಳೀ ಲೋಕದೊಳೆ
ಹರನ ಕುಱಿತೆಸಗಿದುನ್ನತ ಪುಣ್ಯಪಾಪಂಗಳಿಲ್ಲಿಯೆ ತೋರ್ಕುಮೆಯ್ದೆ ೪೮

---

[1] ರುಷ (ಗ)

ಶಿವನ ನುತಿಸಿದ ಭಟ್ಟಬಾಣನಾ ಪರಶಿವನ
ತವೆಪಳಿದ ದಕ್ಷನೀಶಂಗಿಂದೆ ಮೇಲೊರ್ವ
ಭುವನಪತಿಯಿಲ್ಲೆಂದ ಗೌತಮಂ ಹರನಿಂದೆ ಮೇಲೊರ್ವನುಂಟು ದೈವಂ
ಸವಿನಯದಿನಿಂತು ನುಡಿದಾ ಬಾದರಾಯಣಂ
ಭವನನರ್ಚಿಸಿದ ಬಾಣಾಸುರಂ ಶಂಕರನ
ನವಿರತಂ ಭಜಿಸಿದ ಸನತ್ಕುಮಾರಂ ನೋಡೆ ತತ್ಕರ್ಮಫಲನಿಕರಮಂ ೪೯

ಭರದೆ ದೇಹಾಂತರಂಬೊಂದದೀ ದೇಹದೊಳೆ
ಪಿರಿದುಮನುಭವಿಸಿದರ್ ಶಿವಶಕ್ತಿಗಿಂತಿದೇಂ
ಕರಮೆ ಸೋಜಿಗಮೆ ಆಂ ನುಡಿದೀ ಪ್ರತಿಜ್ಞಾನರೂಪದೃಷ್ಟಪ್ರತ್ಯಯಂ
ಧರೆಗೆ ಕೌತುಕಮದೆಂತೆನಲೊಂದು ನಯನಮಂ
ಕರದಿಂದೆ ಮಿಾಂಟಕ್ಕಿ ಮತ್ತೊಂದು ನೇತ್ರಮಂ
ಹ[1]ರಿಸ[1]ದಿಂ ತೆಗೆವನಿತಱೊಳಗೆ ಮುಂ ಕಿಳ್ತ ಕಣ್ ಬಾರದಿರ್ದೊಡೆ ಮತ್ತದಂ ೫೦

ತೆಗೆವನಿತಱೊಳೆ ಪಿಂತೆ ಕಿಳ್ತ ಕಣ್ ಬಾರದೊಡೆ
ಮಗುಳ್ದು ಮಗುಳ್ದಿಂತು ನೇತ್ರಂಗಳೆಯಲೊಡನೊಡನೆ
ತಗುಳ್ದಕ್ಷಿಗಳ್ ಬಾರದೇ ತಳ್ವಿ ಬಂದೊಡವು ಶಿವನಿತ್ತುವಲ್ತು ಮತ್ತಂ
ಸೊಗಸಿನಿಂದಾಂ ಪಡೆದವನುಮಲ್ತು ನಿಕ್ಕುವಂ
ನೆಗಳ್ದೆನ್ನ ಭಾಷೆಯಿದು ಕೇಳಿ ನೀಮೆಲ್ಲರೆಂ
ದಗಜೇಶ ಸದ್ಭಕ್ತಮಲ್ಲಿಕಾರ್ಜುನಪಂಡಿತೇಶ್ವರಂ ನುಡಿದು ಬಳಿಯಂ ೫೧

ವರ ಭಕ್ತಿಸಂಯುಕ್ತನಾಗಿ ಮುನ್ನೆಸಗಿದಂ
ತರರೆ ಸದ್ಭಕ್ತಚರಣಾಂಬುಜಕ್ಕೆಱಗಿ ಭಾ
ಸುರತರಪ್ರಮಥರಂ ನೆನೆದವಿಚ್ಛಿನ್ನಪರಮಾನಂದಯುತನಾಗುತೆ
ಹರಯೋಗರತಿಸುಖಸಮಾಧಿಯಿಂದೊಪ್ಪುತ್ತೆ
ನಿರುಪಮಾದ್ಭುತವೀರಭಕ್ತಿಯೊಡಗೂಡುತ್ತೆ
ಹ[1]ರಿಸ[1]ದಿಂ ಮುನ್ನಿನಂತೆವೊಲೆಸೆದು ಕಣ್ಗಳೆರಡಂ ಕೀಳಲನಿತಱೊಳಗೆ ೫೨

ಭರದಿಂದೆ ಕಣ್ ಮೂಡೆ ಮತ್ತವಂ ಕಿಳ್ತಿಕ್ಕ
ಲಿರದೆ ಬಳಿಕೊಗೆಯೆ ನಯನಂಗಳಂತವನೆಯ್ದೆ
ಹ[1]ರಿಸ[1]ದಿಂ ಮತ್ತೆ ಕಿಳ್ತಿಕ್ಕೆ ಬಳಿಕಂ ಪುಟ್ಟೆ ನೇತ್ರಂಗಳತಿಶಯದೊಳು

---

[1] ರುಷ (ಗ)

ಮರಳಿಯುವನತಿವೇಗದಿಂ ಕಿಳ್ತು ಬಿಸುಡಲಾ
ಪುರಜನಂ ನೋಡಿಯಕ್ಕಜವಟ್ಟು ಮರವಟ್ಟು
ಹ[1]ರಿಸ[1]ವಱತಿರೆ ಮಹೇಶ್ವರಶರಣರೊಲ್ದು ಕೀರ್ತಿಸುತಿರಲ್ಕನಿತಱೊಳಗೆ ೫೩

ಗುರುಪಂಡಿತೇಶ್ವರಂ ಸದ್ಭಕ್ತಿಯಿಂದೆ ಶಿವ
ಶರಣರತ್ನಕ್ಕೆ ರತ್ನಾದ್ರಿಯಂ ಮನವುಣ್ಮಿ
ಪಿರಿದುಂ ನಿವಾಳಿಯೆತ್ತುವ ತೆಱದೆ ನಸುರಕುತ ಪುದಿದ ನಯನಾಳಿಗಳನು
ಭರದಿಂದೆ ನೀರಾಜನಾಕಾರದಿಂದೆತ್ತಿ
ಮರಳಿ ನೃಪನೆಡೆಗಟ್ಟೆ ತನ್ನೃಪಂ ನೋಡಿ ಬಂ
ಧುರಪಂಡಿತೇಶ್ವರಂ ಮುಂಕಿಳ್ತ ಕಣ್ಗಳಂ ಮಗುಳ್ದು ಕಿಳ್ತಿರಡಾಲಿಯಂ ೫೪

ಮರಳಿ ತತ್ಪಂಡಿತೇಂದ್ರನ ವದನದೊಳ್ ತೊಳಪ
ವರನೇತ್ರಯುಗಳಮಂ ನೋಡುವಂ ತನ್ನುಮಂ
ಕರಮೆ ನೋಡುವನೆಯ್ದೆ ಮಗುಳ್ದುಮಗುಳ್ದಾ ಕಿಳ್ತ ಕಣ್ಗಳಂ ತಾಂ ನೋಡುವಂ
ಭರದಿಂದೆ ಜನಸಮಿತಿಯಂ ನೋಡುವಂ ಮತ್ತೆ
ಧರಣಿಯಂ ನೋಡುವಂ ಮಾನಭಂಗಂ ತನಗೆ
ಪಿರಿದುಮೆಯ್ದಿತ್ತೆನುತೆ ಚಿಂತೆಯೊಳ್ ಮೂಡಿಮುಳುಗುತ್ತೆ ಮತ್ತಿಂತೆಂದನು ೫೫

ಎನಿತನಾಂ ಕ್ರೋಧಿಸಿದೊಡನಿತೆಲ್ಲವುಂ ಮಗುಳ್ದು
ಮಿನುಪ ತತ್ಪಂಡಿತಂಗವು ಭೂಷಣಂಗಳಾ
ಗನುನಯದಿನೊಪ್ಪಿದುವು ಬಱಿದೆ ದೂಱಾಯ್ತುವನಿಯೊಳಗೆನಗೆ ಪರಿಭಾವಿಸೆ
ಎನುತುಮತ್ಯಂತಕೋಪದೆ ತಳಾಱರ ಕರೆದು
ಘನತರಮೆನಿಪ್ಪ ಬೌದ್ಧಾಚಾರ್ಯನಂ ಕೊಂದ
ವನನೆನ್ನ ಮುಂಬಿಂಗೆ ತರ್ಪುದೆಂದವರ್ಗೆ ಮುನಿಸಿಂ ಬೆಸನನಿತ್ತ ಬೇಗಂ ೫೬

ತರಿಸಿ ಮುಂ ಕಣ್ಣಿತ್ತ ಶಿವನ ನೋಡುವೆನೆನುತೆ
ಭರದಿಂದೆ ವೆಲ್ನಾಡಚೋಳನುಗ್ರತ್ವದಿಂ
ಪಿರಿದುಮೆಯ್ತರ್ಪ ತನ್ನ[2]ಯ[2] ಕೇಡನಿನಿತನಱಿಯದೆ ಪಂಡಿತೇಶ್ವರನನು
ಉರುಕೋಪದಿಂ ನೋಡಿ ಮತ್ತಿವನ ಕಣ್ಗಳಂ
ನಿರುತಮೆನ್ನಿದಿರೊಳೀಗಳ್ ಕೀಳಿ ಮತ್ತವುಂ
ಕರಮೆ ಬರ್ಪುದನೆಯ್ದೆ ನೋಳ್ಪೆನೆನುತವು ಪುಟ್ಟದಂತೆ ಮಗುಳ್ದಕ್ಷಿಗಳನು ೫೭

---

1 ರುಷ (ಗ) 2 ಯೆ (ಗ)

ಮಿಗೆ ಚುರ್ಚಿ ನಿರ್ಬಂಧದಿಂ ತೆಗಸಿ ಮತ್ತಮವಱ
ನೆಗಳ್ದ ರಂಧ್ರದೊಳೊಸೆದು ಸೈಕತಮುಮಂ ಬಳಿ
ಕ್ಕಗಲದರ್ಕಕ್ಷೀರದೊಳ್ ಕೂಡಿ ತಿಂಬಿಸಿದನತಿಪಾಪಿ ಮುಳಿಸಿನಿಂದಂ
ತಗುಳ್ದದೆಲ್ಲವನಾ ಸಭಾಮಧ್ಯದೊಳಗಿರ್ದ
ಮೃಗಧರಾಂಕಿತಜೂಟಭಕ್ತಗಣವೀಕ್ಷಿಸುತೆ
ಭುಗಿಲೆನುತ್ತಿಳ್ದದಂ ನೋಡಲಕ್ಕುಮೆ ಶಿವಶಿವೆನುತೆ ಕಿವಿಗಳ ಮುಚ್ಚುತೆ ೫೮

ಜನಪ ಚೋಳಂ ಕಿಡುವನಿದಱ ಕತದಿಂ ಕರಂ
ನನಸಿಂದೆನುತ್ತೆ ತಮ್ಮಯೆ ಕಣ್ಗಳಂ ತಾಮೆ
ಮುನಿದು ಕೀಳ್ದಿಕ್ಕಿದರೆತಳ್ಸೊಳದಂ ಕಂಡು ಮಗುಳ್ದಿಂತು ಮಾಳ್ಪುದಯಶಂ
ಎನುತೆ ತನ್ನಯೆ ಕುಲದ ಬೇರ್ಗೆ ಗುದ್ದಲಿಗೊಂಡ
ನೆನುತೆ ತನ್ನಯೆ ದೇಶಕೋಶಂಗಳಂ ತಾನೆ
ಮುನಿದು ಪಾಳ್ಮಾಡಲನುಗೆಯ್ದನೆನುತಂ ಮತ್ತೆ ಶಿವಶರಣರಿಂತೆನುತ್ತೆ ೫೯

ಬಲ್ಲಿದಂ ವೆಲ್ನಾಡಚೋಳಭೂವರನೆನಸು
ಮೆಲ್ಲಿದಂ ಸನದವೋಲಾಖ್ಯಪುರವೆಲ್ಲಿಯದೊ
ಎಲ್ಲಿದನೊ ಬೌದ್ಧನೀ ವಾದಮಂತೆಲ್ಲಿಯದೊ ಬೌದ್ಧಮುನಿಪಂಚತ್ವವು
ಎಲ್ಲಿಯದೊ ಪಂಡಿತೇಶ್ವರನ ನಯನಂ[1]ಗೀ[1]ಳ್ವು
ದೆಲ್ಲಿಯದೊ ಇಂತೆಂದು ನೋವುತ್ತೆ ಮತ್ತಮಂ
ತಲ್ಲಲ್ಲಿ ವೆಲ್ನಾಡಚೋಳನಂ ನಿಂದಿಸುತೆ ತತ್ಸಭೆಯ ಪೊಱಮಟ್ಟರು ೬೦

ಜನರೆಲ್ಲರಕ್ಕಜಂಬಡುತೀ ಮಹಾಮಹಿಮ
ನನ[2]ಘ[2] ಗುರುಪಂಡಿತೇಶ್ವರನವನಿಯೊಳಗೆಸೆವ
ಮನಸಿಜಹರಂ ತಾನೆನಿಪ್ಪನೇಗಂ ಮನುಜನೇ ಭಾವಿಸಲ್ಕೆ ಸತತಂ
ಮಿನುಪ ಕಣ್ಗಳನೆಲ್ಲರಱಿವಂತೆರಳ್ಸೊಳೊ
ಳನುವಿನಿಂ ಪ್ರತ್ಯಕ್ಷಮಾಗಿ ಕಿೞ್ತಿಕ್ಕಿದಂ
ಮುನಿದು ಮತ್ತೀ ನೃಪಂ ಸಮೆದ ಕಜ್ಜಂ ಬಱಿದೆ ಪೋಗದಿದು ಪೊಲ್ಲಗೆಯ್ಗುಂ ೬೧

ನನಸಿದೆಂದೆನುತೆ ನುಡಿಯುತ್ತಿರಲ್ ಮಲ್ಲಿಕಾ
ರ್ಜುನಪಂಡಿತೇಶ್ವರಂ ತತ್ಸ[3]ಭೆ[3]ಗೆ ನುಡಿದನಾಂ
ಮನವೊಸೆದು ನುಡಿದ ಭಾಷಾಕದಂಬಂಗಳ್ಗೆ ನೀಮೆಲ್ಲರಱಿವಂದದಿಂ

---

1 ಸೀ (ಕ)  2 ಸು (ಕ)  3 ತಿ (ಕ)

ಇನಿಸೂಣಯಂ ಪೊರ್ದಿತಿಲ್ಲ ಮತ್ತೀ ನೃಪಂ
ಮುನಿದೆಸಗಿದಂ ಕೆಟ್ಟ ಕಜ್ಜಮಂ ಮ[1]ತ್ತಿ[1]ದಱಿ
ನೆನೆಸುವಡಿಗಳ್ಡವಂ ನಿಸದವೆನುತಂ ಮತ್ತೆ ಶಿವನೊಡನೆ ನುಡಿದನೊಸೆದು ೬೨

ಸದಮಲಪ್ರಚುರವಿಶ್ರುತ ಪರಮಭಕ್ತಗಣ
ಪದಸರೋರುಹಸಾಂದ್ರ ಮಕರಂದಪಾನ ಸ
ಮ್ಮುದಿತ ಚಂಚಚ್ಚಂಚರೀಕನನವರತ ಪಂಚಾಕ್ಷರೀಪ್ರಸಿತಹೃದಯಂ
ವಿದಿತ ಮಂಜುಲ ನೀಲಕಂಠಾಹ್ವಯಂ ಮನೋ
ಮುದದೆ ಪೇಳ್ದುರುತರಾರಾಧ್ಯಚಾರಿತ್ರದೊಳ
ಗಿದು ಪಂಡಿತೇಶ್ವರಂ ನಯನಂಗಳಂ ಪಡೆದ ಕಥನಮಿದನಾಲಿಸುವುದು ೬೩

---

[1] ತ್ತ (ಗ)

# ಮೂರನೆಯ ಸಂಧಿ

## ಪಂಡಿತಾರಾಧ್ಯರು ವೆಲ್ನಾಡ ಚೋಳನಂ ಶಪಿಸಿದುದು

ಸೂಚನೆ : ಗುರುಪಂಡಿತೇಶ್ವರಂ ವೆಲ್ನಾಡಚೋಳನಂ
ತ್ವರಿತದಿಂ ಶಪಿಸಿ ತನ್ನಗರದಿಂ ಪೊಱಮಟ್ಟು
ಭರದಿನಮರಾರಾಮದತ್ತಲಭಿಮುಖಮಾದ ಕಥೆಗೇಳ ಸೂರಸಚಿವ

ನಡುವಣೆಯೊಳಿಸೆವಗ್ಗಿ ಪೊಗೆಗಡಣಮೆಯ್ದೆ ತ
ನ್ನೊಡಲನಾವರಿಸಿ ಕಲ್ಪಾಂತದೊಳ್ ತೋರ್ಪ ಸೋಂ
ಪಡರ್ದ ಕಾರ್ಗಾಲಮುಗಿಲಂತೆ ಕೃಷ್ಣತ್ವಮಂ ಪಡೆದು ನೆಱಶೋಭಿಸುತ್ತೆ
ನಿಡಿದಾದ ಪಾಪರಂಭಾಸ್ತಂಭಮಂ ಕೂಡೆ
ಕಡಿದಿಕ್ಕುವಸಿಲೇಖೆಯಂತೆ ಚೆಲ್ವಂ ತಳೆದು
ಬಿಡದೊಪ್ಪುವಹಿಪನಱ ಜಡೆಯ ಸು[1]ತ್ತಿರೆ[1] ಮೆಱವ ಗುರುನೀಲಕಂಠ ಶರಣು ೧

ಪರಮಸದ್ಭಕ್ತ ಹೃತ್ಪದ್ಮಮಂದಿರನೆನಿಪ
ಸುರುಚಿರ ಶ್ರೀಮಲ್ಲಿಕಾರ್ಜುನಮಹಾದೇವ
ಭರದೆ ನಿನ್ನಯ ಮಹಿಮೆಯಂ ಲೋಕದೊಳಗೆ ಪಸರಿಪೆನಾನೆನುತ್ತುಮಿರಲು
ತ್ವರಿತದಿಂ ದುರ್ಮತಿನೃಪತಿಯಿಂತು ನೆಗಳಿದಂ
ಪಿರಿದು ನಿನ್ನಯ ಮಹಿಮೆಯಂ ನಿನ್ನ ಭಕ್ತರ್ಕ
ಳುರುತರಾಧಿಕ್ಯಮಱಯದೆ ತನ್ನ ಮುಳಿಸಿನಿಂದದುಮಿರ್ಕೆ ಪರಿಭಾವಿಸೆ ೨

ನೆರೆದಿರ್ದ ಜನರಱವವ್ವೋಲಿರ್ಮೆ ಕಣ್ಗಳಂ
ಹ[2]ರಿಸ[2]ದಿಂ ಕಿಳ್ತಿಕ್ಕಿ ನಯನರಾಶಿಯನಿತ್ತ
ಕರಮೆ ಬೋಳೆಯರರಸ ನೀನೆನ್ನ ಕಣ್ಗಳಂ ಪಿರಿದೀಯವೇಡ ನಿಸದಂ
ಪರಮೇಶ್ವರಾ ನಿನ್ನ ಭಕ್ತರೊಸೆದಾವಗಂ
ಭರದೆ ಶಾಪಾದಪಿ ಶರಾದಪಿ ಎನಿಪ್ಪ ಭಾ
ಸುರವಾಕ್ಯಮೊರೆದಂತೆ ನಡೆವರೀ ದ್ರೋಹಿಯಂ ಕೊಲ್ವನ್ನೆವರೆಗಮೆಯ್ದೆ ೩

---

[1] ತ್ರಿಂ (ಕ) [2] ರುಷ (ಗ)

ಇವನ ವಂಶಕದಂಬವೆಲ್ಲವುಂ ಶೀಘ್ರದೊಳ್
ಜವಹುರಂಬುಗುವನ್ನೆವರೆಗವೆನಗಕ್ಷಿಗಳ
ತವಕದಿಂದಿಕ್ಕೊಡೆಲೆ ಶಂಕರಾ ನಿನಗೆ ಶಿವಭಕ್ತರ್ಕಳಾಣೆ ಮತ್ತಂ
ತವೆ ನಿನಗೆ ನಿನ್ನಾಣೆಯಾಂ ಮುನ್ನೆ ಬಯಸಿದೊಡೆ
ಶಿವನೆ ನಿಮ್ಮಾಣೆ ಶಿವಶರಣರ್ಕಳಾಣೆ ಮ
ತ್ತಿವನ ವಂಶಂ ತವಿಸಿಪೋಗಲಪುರಾರಾಮದೊಳಗೆನಗೆ ಕಣ್ಣೆರಡನು ೪

ಜನರಕ್ಕಜಂಬಡುವ ಪಾಂಗಿನಿಂ ಬೌದ್ಧರ್ಕ
ಳನುವಳಿದು ನೋಳ್ಪಂತೆ ಸದ್ಭಕ್ತ[1]ರ[1]ತಿಮುದದೆ
ವಿನುತಿಸುವ ರೀತಿಯಿಂ ರಯ್ಯನಾಗೆನಗೂರ್ಧ್ವಮಾಗೀಯುವ್ವಿದಳಿಕನಯನ
ಎನುತೆ ಕೀರ್ತಿಸುತೆ ಮತ್ತೆನ್ನೀ ದುರಾತ್ಮಕನ
ಜನಪದದೊಳಿಪ್ಪುದಲ್ತೆಂದು ಭಕ್ತರ್ಗೆಱಗಿ
ವಿನಯದಿಂದನರಾಜ್ಞೆಯಿಂದೆ ಶಾಪೋದಕಮನಂಗ್ಸೆಯೊಳಾಂತು ಬಳಿಯಂ ೫

ಗುರುಪಂಡಿತೇಶ್ವರಂ ಸರ್ವರುಂ ಕೇಳ್ವಂತೆ
ಹರಕಾಲಸಂಹಾರ ರುದ್ರೋಗ್ರಭಾಳಾಕ್ಷ
ಗರಳಧರ ಕಾಲಾಗ್ನಿರುದ್ರಭೀಷಣ ವೀರಭದ್ರಾದಿಗಣವರೇಣ್ಯ
ಪಿರಿದೆನ್ನ ಬಿನ್ನಪಮನವಧರಿಪುದೆಲೆ ದೇವ
ಭರದೆ ನಿನ್ನಯ ಶಾಪದಿಂ ಬ್ರಹ್ಮನೆಂತು ನಿಂ
ದಿರಲೆಡೆಯ ಕಾಣದಾದಂ ಗೌತಮನ ಶಾಪದಿಂ ದಕ್ಷನಳಿದ ತೆಱದಿಂ ೬

ಮಿನುಪ ದೂರ್ವಾಸಶಾಪದೆ ಯದುಕುಲಕ್ಷಯಮ
ನೆನಸುಮೆಯ್ದಿದವೊಲ್ ದಧೀಚಿಶಾಪದೆ ಸುರರ್
ಮುನಿಗಳುಂ ಕೆಟ್ಟವೊಲ್ ವ್ಯಾಸಶಾಪದೆ ಪಾರ್ವಗಡಣಕ್ಕೆ ಶಿವನ ಭಕ್ತಿ
ಇನಿತಿಲ್ಲದಳಿದಂತೆ ತಿರು[2]ನೀಲನ[2]ಕ್ಕನೆಂ
ಬನಘಗಣವರ ಶಾಪದಿಂ ಜೈನಬೌದ್ಧರುಂ
ನೆನಸು ಪುಟ್ಟಡಗಿ ಮತ್ತಾ ದ್ರವಿಡಮಂಡಲದೊಳಳಿದ ಪಾಂಗಿಂ ಮತ್ತೆಯುಂ ೭

---

[1] ತ (ಕ) [2] ಗಿ ನೀಲ (ಕ)

ಮಿಗೆ ಪಿಳ್ಳೈ[1]ನ[1]ಯ್ನಾರ ಶಾಪದಿಂ ಬೌದ್ಧರುಂ
ನೆಗಳ್ದ ಜೈನರುಮೆಲ್ಲರುಂ ತವಿಸಿ ಪೋದಂತೆ
ಮೊಗಸಿಯರ್ಯಮನಿತ್ತ ಶಾಪದೆ ಮಹೇಂದ್ರಪುರವರಕಧಿಪನೆನಿಸಿ ಮೆಱೆವ
ಅಗಣಿತೈಶ್ವರ್ಯಯುತಮಂಗಲನರೇಶ್ವರಂ
ಬಗೆಗೆಟ್ಟು ಕೆಟ್ಟವೊಲ್ ಮತ್ತಿವರ್ ಮೊದಲಾದ
ವಿಗಡರೆನಿಸುವ ಭಕ್ತಕೋಪಶಿಖಿಯೆನ್ನ ಶಾಪಾಗ್ನಿಯೊಳ್ ಪ್ರಜ್ವಲಿಸುತೆ ೮

ದುರುಳನೀ ವೆಲ್ನಾಡಚೋಳಕುಲವೆಂಬ ಭಾ
ಸುರಪತಂಗಾನೀಕಮಂ ಭಸ್ಮಮಂ ಮಾಳ್ಕೆ
ತುರಿತದಿಂದೆಂದು ಶಾಪಂಗೊಟ್ಟು ಮಲ್ಲಿಕಾರ್ಜುನ ಪಂಡಿತೇಶನೊಸೆದು
ಭರದೆ ಮುಂಕಿಳ್ತಿಕ್ಕಿದಾ ನಾಲ್ಕುನೇತ್ರಮಂ
ಹ[2]ರಿಸ[2]ಮಿಗೆ ಲಿಂಗೋದ್ಭವಾಖ್ಯದೇವಂಗೆ ಬಂ
ಧುರಭಕ್ತಿಯಿಂ ಸಮರ್ಪಿಸಲಾ ಮಹಾದೇವನಾ ಕಣ್ಗಳಂ ಪ್ರೀತಿಯಿಂ ೯

ಮಿನುಪ ತನ್ನಯ ಮೂಱುಕಣ್ಣೊಳಳವಡಿಸಿದಂ
ವಿನುತಮಪ್ಪೀ ಮೂಱುಕಣ್ಗಳಂ ಮತ್ತೊಂದು
ಘನನೇತ್ರಮಂ ವಿಷ್ಣುನಯನಮಿರ್ಪೆಡದಂಘ್ರಿಯುಳಿದು ಜಲಕನೆ ತೊಳಪ್ಪ
ಕನದಮಲ ದಕ್ಷಿಣಕ್ರಮದೊಳಗೆ ರಯ್ಯಮಾ
ಗೆನೆಸುಮೊಪ್ಪುವ ತೆಱದೊಳಭವನಿಂಬಿಟ್ಟುಕೊಂ
ಡನಿಶಮೊಪ್ಪಿದನೆಂತೆನಲ್ ನಾಲ್ಕುಕಣ್ಗಳಂ ಧರಿಸಿದೆಡೆಗಳನುಸುರ್ವೆನು ೧೦

ಶರಣರಂ ನೋಳ್ಪ ಸದಯಾಂಬಕಮನಿರಿಸಿದಂ
ಹರನೊಸೆದು ತನ್ನಮೃತಕರನಯನದೊಳ್ ಭಕ್ತ
ರುರುತರೈಶ್ವರ್ಯಕಾರಣ ನಯನಮಂ ಸೂರ್ಯನೇತ್ರದೊಳಗಿರಿಸಿ ಮೆಱೆದಂ
ದುರುಳಚೋಳನನುಗ್ರದಿಂ ನೋಡಿದಕ್ಷಿಯಿಂ
ಮರುತಸಖನಯನದೊಳಗಿರಿಸಿದಂ ಭಕ್ತಿಯಿಂ
ಕರಮೆ ರಂಜಿಪ ನಯನಮಂ ಬಲದ ಚರಣತಳದೊಳಗಿರಿಸಿದಂ ಪ್ರೀತಿಯಿಂ ೧೧

ಇಂತು ಪಂಡಿತವಿಭುವ ನಾಲ್ಕುನಯನಂಗಳಂ
ಕಂತುಹರನೊಲ್ದು ತನ್ನಂಗದೊಳ್ ತಳೆದನೋ
ರಂತೆ ಬಳಿಕಂ ಪಂಡಿತೇಶ್ವರಂ ಭಕ್ತಸಮುದಾಯಮೊಡನೆಯ್ದಿ ಬರಲು

---

[1] ನಾ (ಕ) [2] ರುಷ (ಗ)

ಸಂತಸದೆ ತಳರ್ದನೀಯಧಮನ್ನೃಪ ದೇಶದೊಳ
ಗೆಂತಿರಲ್ ಬರ್ಪುದೆನುತುಂ ಮನೋಹರಮಾದ
ಮುಂತಣಮರಾರಾಮಪುರಕೆ ಮತ್ತೀ ಚೋಳನೃಪನ ಪಟ್ಟಣದೊಳೆಯ್ದೆ ೧೨

ಮಸಕದಿಂದೆಸಗಿತದ್ಭುತಮೇನನೆಂದಪೆಂ
ಮಿಸುಪ ನಗರಂ ಶೂನ್ಯತೆಯನೆಯ್ದ ತೊಡಗಿತ್ತು
ವಸುಧಾಧಿಪನ ಮುಂದೆ ನೆಳಲೊಂದು ತೋಱುತ್ತು ಬಱುಮುಂಡದಾಕಾರದಿಂ
ನಿಸದಮಾ ನೃಪತಿ ಕನಸಿನೊಳಂತಕನ ರೂಪ
ನೊಸೆದುಕಂಡಂ ಸಾರಮೇಯಾ[1]ಳಿ[1]ಗಳ್ [2]ನಾೞಡೆ
ಮುಸುಡನಂಬರಕೆತ್ತಿಯೂಳಿಡಲ್ ತೊಡಗಿದುವು ಪಗಲುಮಿರುಳುಂ ಪುರದೊಳು ೧೩

ದೆಸೆಗಳುಂ ಗಗನಮುಂ ಪಗಲೊಳಗೆ ತಿಮಿರತತಿ
ಮುಸು[3]ಕಿ[3]ದಂದದೆ ತೋಱಿದುವು ವಾಜಿಗಳ್ ವಾಲ
ವಿಸರದೊಳ್ ವಿಸ್ಫುಲಿಂಗಾನೀಕಮುಣ್ಮಿದುದು ದಿವದೊಳೊಗೆದುವು ಮಿನ್ನುಗಳು
ಮಸಕದಿಂ ಭೂಮಿಮೆಲ್ಲೆಡೆಯೊಳುಂ ಕವಿಯಿತ್ತು
ಮಿಸುಪೋದನಂ ಪುಳಿತುದಲ್ಲಲ್ಲಿ ಧರಣಿ ಮ
ತ್ತುಸವಸಂ ಮೊಳಗಿ ಕಂಪಂದೋಱಿದತ್ತು ಜಂಬುಕಮಱಚಿದವು ಪುರದೊಳು ೧೪

ಮಿಗೆ ಕಾಕಘೂಕಂಗಳಿರುಳೊಳತಿರಾವಂಗ
ಳೊಗೆವವೊಲ್ ಕೂಗಿದುವು ಪಶುಕದಂಬಂ ತನ್ನ
ಮೊಗಮನಾಗಸಕೆತ್ತಿಯುನ್ನತಧ್ವನಿಗೆಯ್ದುದನಿಶಮಾ ನಗರದೊಳಗೆ
ಮೃಗಧರಾದಿತ್ಯಪರಿವೇಷಂಗಳೊಡನೊಡನೆ
ಸೊಗಸಿನಿಂ ತೋಱಿದುವು ಮತ್ತಿವುಂ ಮೊದಲಾದ
ವಿಗಡಂಗಳಾದಮುತ್ಪಾತಂಗಳೊದಗಿದುವು ತದ್ದೇಶದೊಳಗೆ ಸತತಂ ೧೫

ಪಿರಿದುಮಿರ್ದಂತಿರ್ದು ಮಂತ್ರಿ ನೃಪಸೂನು ಬಂ
ಧುರಭಟರ್ಕಳ್ ಭೂಪನೊಡನೆ ವೈರಂದೆಗೆದು
ಭರದೆ ಪೋರ್ಕುಳಿಗೊಳಲ್ ತೊಡಗಿದರ್ ಪೆರ್ಮಾರಿ ಪುರಮನೆಡೆಗೊಂಡಿತೊಸೆದು
ಮರಳಿಯನ್ಯೋನ್ಯಕಲಹಂ ಪುರದೊಳೆಸಗಿತ್ತು
ಪುರಜನಮಿದೆಲ್ಲಮುಂ ಕಂಡು ನುಡಿದರ್ ಮಹೇ
ಶ್ವರಭಕ್ತನಂ ನೋಯಿಸಿದ ಫಲಂ ತಾನುಸಿಕನಳಿವುದೇ ಲೋಕದೊಳಗೆ ೧೬

---

[1] ದಿ (ಕಗ) [2] ಸೋ (ಕ) [3] ಗಿ (ಕ)

ನರ ಪಂಡಿತೇಶ್ವರಂ ಮೊನ್ನೆ ಶಾಪಂಗೊಟ್ಟು
ಭರದೆ ಪೋದಂ ನಿನ್ನೆಯುತ್ಪಾತಮೊಗೆಯಿತ್ತು
ಪಿರಿದಿಂದು ಗೋತ್ರಕಲಹಂ ಪೊಣ್ಮಿತಿನ್ನಿದಱ ಮೇಲೆ ತಾನೇನಪ್ಪುದೊ
ಕರಮೆ ಚೋಳಂಗೆನುತುಮವರೆಲ್ಲರುಂ ನೆರೆದು
ಪಿರಿದು ಮಂತಣಗೆಯ್ವುತಿನ್ನಿರ್ಪುದನುಚಿತಂ
ಪುರಮನೀಗಳ್ ಪೊಱಮಡಲ್ವೇಳ್ಕೆನುತ್ತೆಲ್ಲರುಂ ಪೋದರೆತ್ತೆತ್ತಲು ೧೭

ನರಪನಾ ದೆವಸಮಿರುಳೊಳ್ ಪಟ್ಟಿರಲ್ ಭೂತಿ
ಪೊರೆದ ಸರ್ವಾಂಗಮಾಲಂಬಿತಜಟಾಜಾಲ
ನುರುಕಪಾಲಾಲಿಮಂಡಿತನೆಯ್ದೆ ಕಂಕಾಳಮಂ ಧರಿಸಿ ಕಟಿತಟದೊಳು
ಕರಮೆ ಕಟ್ಟಿದ ಘಂಟೆಕಾರಾವಮಾವಗಂ
ಹರಿದಂಬರಂಗಳ ಪಳಂಚಲೆಯೆ ಕಣ್ಣಿಂದ
ಮುರಿಸೂಸುತಿರಲೊರ್ವ ತಾಪಸಂ ಗಳಗಳನೆ ಬಂದು ತನ್ನೆರ್ದೆಯ ಮೆಟ್ಟೆ ೧೮

ತಿಸುಳದಿಂದೊತ್ತಿಱಿವ ಕನಸುಗಂಡಾಕ್ಷಣದೊ
ಳಸು ಪಾಱಿಪೋದಂತೆ ಹಮ್ಮೈದಂಬೋಗಿ ಮ
ತ್ತಸವಸದೊಳೆಚ್ಚತ್ತು ಕಟ್ಟಿನಾಂ ಹಾಹಾ ಎನುತ್ತೊಱಲೆಯನಿತಱೊಳಗೆ
ಬಸವಳಿಯುತೆಳ್ದು ತದ್ವನಿತೆ ಬೆದಱುತ್ತೆ ನಾ
ಲ್ದೆಸೆಯನೀಕ್ಷಿಸುತಿರಲ್ ತನ್ನೃಪಂ ತಾಂ ಕಂಡ
ಬಿಸವಂದಮಾದ ಕನಸಂ ಪೇಳುತಿಱಿದೆಡೆಯನಂಟೆಂಟೆ ತೋಱುತಿರಲು ೧೯

ಅನಿತಱೊಳಗಾ ಶೂಲಿ ತಿಸುಳದಿಂದಿಱಿದೆಡೆಯೊ
ಳಿನಿಸುರ್ಬಿ ತೋಱಿದುವು ಮೂಱುತಲೆಗಳ್ ಮತ್ತ
ಮನಿತಱೊಳ್ ಮಿಗೆಯುರ್ಬಿ ತೋಱಿದುವದೆಂತೆನಲ್ಕಾ ದುಷ್ಟಭೂನಾಥನ
ಮಿನುಪ ದುಷ್ಕೀರ್ತಿಕಾಂತೆಗೆ ಸೋಜಿಗಂಬಡೆದ
ಘನತರೋರೋಜತ್ರಿತಯಮುಣ್ಮಿದಂತೆ ಮ
ತ್ತನಿತಱೊಳಗವನ ಕೋಪಂ ಮದಂ ದುಷ್ಕೃತಂ ಪೊಣ್ಮುವವೊಲೊಡೆ[1]ದುವೆಯ್ದೆ[1] ೨೦

ನರಪನಾ ವ್ರಣತತಿಯ ಕಂಡು ಪೆಳಱುತ್ತೆ ಮ
ತ್ತಿರದೆ ಬೌದ್ಧರ ಜೈನ ಮಂತ್ರಸಿದ್ಧರ ಪಂಡಿ
ತರ ಕರಸಿಯವರ್ಗಳಿಂದಂ ಶಾಂತಿಯಂ ಮಾಡಿಸುತ್ತಿರಲ್ಕಾ ಪುಣ್ಗಳು

---

[1] ದರೆಯ್ದೆ (ಕ) ದ ವೆಯ್ದೆ (ಗ)

ಪಿರಿದಾಗುತಿರೆ ಸಿದ್ಧಮಂ[1]ತ್ರೌಷಧ[1]ಚ್ಛೇದ
ಕರದಾಹಬಂಧನಕ್ರಿಯೆಗಳ್ಗೆ ಸೆರ್ಚುತಿರೆ
ವರಬೌದ್ಧಜೈನರಿಂ ಮಾಳ್ಪಿಂದ್ರಜಾಲಾದಿ ವಿದ್ಯಕ್ಕೆ ಪೋಗದಿರಲು ೨೧

ಮಗುಳ್ದವರ್ ನುಡಿದರೀ ಪ್ರಣಮಂ ನಿವಾರಿಪೊಡೆ
ನೆಗಳ್ದ ಧನ್ವಂ[2]ತ್ರಿಗಮ[2]ಸಾಧ್ಯಮೆನುತೆಲ್ಲರುಂ
ಬಗೆಗೆಟ್ಟು ಪೋದರಾ ನೃಪನಿಯೋಗಿಗಳೊಸೆದು ಭೂಪನೊಡನಿಂತೆಂದರು
ಬಗೆಯ ದುರ್ಜನಸಂಗದಿಂ ತಕ್ಕರೊಡನೆಯ್ದೆ
ಪಗೆತನಂ ಲೇಸೆಂಬ ನಾ[3]ಣ್ಣು[3]ಡಿಯವೊಲ್ ಶಿವನ
ಸೊಗಯಿಸುವ ಮಹಿಮೆಯಂ ಕಾಣುತ್ತೆ ಭಕ್ತರೊಡನತಿವಿರೋಧಂ ಮಾಡಿದ ೨೨

ಮದಬುದ್ಧಿಯಂ ಬಿಟ್ಟು ಪಂಡಿತೇಶ್ವರನ ಸ
ತ್ಪದಪದ್ಮಮಂ ಪೊರ್ದು ಮುನ್ನೆಮ್ಮ ವಂಶದೊಳ
ಗುದಿಸಿದ ನೃಪರ್ ಪರಮಶಿವಭಕ್ತರೆಲ್ಲರುಂ ನೀನೊರ್ವನಜ್ಞಾನದಿಂ
ಪುದುಗಿ ವೇದವಿರುದ್ಧಮಾದ ಶಿವಭಕ್ತಿಯಿ
ಲ್ಲದ ಬೌದ್ಧಮತಮನಂಗೀಕರಿಸಿಯಣಿಯರಂ
ಸದಮಲೇಶ್ವರಭಕ್ತರಂ ನಿಂದೆಗೆಯ್ದು ಫಲವಿನಿತವಸ್ಥೆಗೆ ತಂದುದು ೨೩

ಎನಲದಂ ಕೇಳ್ದು ತನ್ನೃಪತಿ ನುಡಿದಂ ತನ್ನ
ಮನದನ್ನರೆನಿಪ ಮಂತ್ರಿಗಳೊಡನೆ ನೀ[4]ಮೆ[4]ಲ್ಲ
ರನುನಯಂ ಪೋಗಿ ತತ್ಪಂಡಿತೇಂದ್ರನ ಬರಿಸಿದೊಡೆ ಬಳಿಕ್ಕಾನುಮೊಸೆದು
ನನಸು ತಚ್ಛಿಷ್ಯನಪ್ಪೆಂ ನಿಸದಮೆನ್ನಾಳ್ವ
ಮಿನುಪ ದೇಶಂಗಳೆಲ್ಲಮನರ್ಪಿಪೆಂ ಮತ್ತೆ
ಮನಸಿಜಾಂತಕನನರ್ಚಿಸುವೆನಿದು ನಿಕ್ಕುವಂ ಎಂದವರನಟ್ಟಲೊಡನೆ ೨೪

ಹ[5]ರಿಸ[5]ಮಿಗೆ ಪಂಡಿತೇಶ್ವರನಿರ್ಪ ತಾಣಕ್ಕೆ
ಭರದಿನವರೆಯ್ತಂದು ಭಕ್ತಿಯಿಂ ತತ್ಪಾದ
ಸರಸೀಜಯುಗಳಕ್ಕೆ ವಂದನಂಗೆಯ್ದು ಶರಣಾಗತಜನಾರ್ತಿಹರನೆ
ನರಪಚೋಳಂ ಶಿವದ್ರೋಹಿ ಪಾಪಾತ್ಮಕಂ
ಕರಮೆ ಸರ್ವಾಪರಾಧಂಗೆಯ್ದವಂ ಮಗುಳ್ದು
ಮರುಳನತಿಜಡನವಂ ನೀಂ ಕೃಪಾಶರಧಿ ಸುರುಚಿರಲೋಕಪರಿಪಾಲಕಂ ೨೫

---

1 ತ್ರೋದಕ (ಕ) 2 ತರಿಗ (ಗ) 3 ಳ್ನು (ಕ) 4 ವೆ (ಗ) 5 ರುಷ (ಗ)

ಶರಣಾಗತತ್ರಾಣ ಬಿರುದಪ್ರಸಿದ್ಧ ಯಶ
ನುರುತರಾಮಲಚಿತ್ತನವನ ತಪ್ಪಂ ಕ್ಷಮಿಸಿ
ಹರಣವಿತ್ತವನ ಕಾಯಲ್ವೇಳ್ಕು ನಿಮ್ಮ ಶಿಷ್ಯಂ ದಲಾಗಿರ್ಪನೆಂದು
ಭರದಿನೆಮ್ಮಂ ಕಳುಪಿದಂ ತನ್ನ ರಾಜ್ಯಮಂ
ಹ[1]ರಿಸ[1]ದಿಂ ನಿಮಗರ್ಪಿಸುವೆನೆನುತ್ತಿರ್ದಪಂ
ಗುರುವೆಯಿಾ ಬಿನ್ನಪವನಂಗೀಕರಿಪುದೆನುತೆ ಮಗುಳ್ದು ವಂದಿಸಿದರವರು ೨೬

ಮಗುಳ್ದು ತತ್ಪಂಡಿತೇಶ್ವರನವರ ನು[2]ಡಿ[2]ಗೇಳಿ
ಮೃಗಧರಾಂಚಿತಜೂಟ ಸರ್ವಜ್ಞಮೂರ್ತಿಯೇ
ಸೊಗಸಿನಿಂ ಚೋಳ ಕಿಂಕರರ ವಾಕ್ಯಂಗೇಳ್ವುದನುಚಿತಂ ಮತ್ತಮವರ
ಮಿಗೆ ನೋಳ್ಪುದದು ಕಷ್ಟಮವನ ನೆನೆವುದು ಮತ್ತೆ
ತೆಗಳಕ್ಕುಮೆಲೆ ಶಿವ ಶ್ರೀಚನ್ನಮಲ್ಲೇಶ
ನೆಗಳ್ದ ಮತ್ಪ್ರಾಣೇಶ್ವರನೆ ಮಹಾರಾಜಾಯ ಎಂದು ವೇದಂ ನಿನ್ನನು ೨೭

ಪೊಗಳುತಿರೆ ರಾಜರಾಜನೆ ಶೌರಿರಾಜ ತೊ
ಟ್ಟಗೆ ಮಹಾರಾಜರಾಜನೆ ರಾಜವಂದಿತನೆ
ಸೊಗಯಿಸುವ ರಾಜಶೇಖರನೆ ನೀಂ ರಾಜನಾಗಿರೆ ದೇವಸಮಿತಿಗೆಲ್ಲಂ
ಜಗದೊಳಗೆ ರಾಜನೀಯಲ್ ಕರ್ತೃವೇ ನಿನ್ನ
ವಿಗಡಮಪ್ಪಾಜ್ಞೆಯಿಂ ರಾಜನೀವಂ ಮತ್ತೆ
ನೆಗಳ್ದ ನಿನ್ನಾಜ್ಞೆಯಂ ತೊಲಗಿ ರಾಜಂ ಕುಡಲ್ ಬಗೆಯೆ ರಾಜನುಮಪ್ಪನೆ ೨೮

ಪಿರಿದುಂ ದುರಾಶಾನುಗತನೆ ಮತ್ತಿನರವೊಲ್
ಪುರಹರನೆ ನಿನ್ನ ಸೇವಕನವನಿಯೊಳ್ ಕರಂ
ಹ[3]ರಿಸ[3]ದಿಂ ಕಳರವಂಗೆಯ್ಗುಮೇ ಆಕಾಲದೊಳ್ ಕೋಕಿಲಂ ಪರಿಭಾವಿಸೆ
ಸರಳ ಚಾತಕ[4]ಪೋತ[4]ಕಂ ತೃಷಿತಮಾದೊಡಂ
ಭರದೆ ಭೂಗತವಾರಿಯಂ ಸೇವಿಸುವುದೆ ಮ
ತ್ತಿರದೆ ಪಸಿದಡೆ ಕಲಭಮೊಲ್ದು ಸೂಕರನ ಮೊಲೆಯುಂಬುದೇ ದೇಶದೊಳಗೆ ೨೯

ಮದನಹರ ನಿನ್ನ ಸೇವಕರುದರಪೋಷಣಕೆ
ಪದೆದು ದೈನ್ಯಂಬಡುವರೇ ಎನುತವರ್ಗೆ ಸ
ಮ್ಮುದದಿಂದೆ ವಿಮುಖನಾಗುತ್ತುಮನ್ಯಾಪದೇಶ ದೆನಿಸ್ಥುರಂ ನುಡಿಯಲು

1 ರುಷ (ಗ) 2 ತಿ (ಗ) 3 ರುಷ (ಗ) 4 ಪಾತ (ಕ)

[1]ಮು[1]ದವಱಿತಿದೆಲ್ಲವಂ ಕೇಳ್ದು ತನ್ಮಂತ್ರಿಗಳ್
ಪುದಿದ ಪಾಪಾತ್ಮರ್ಗೆ ಸತ್ಕರ್ಮದೂರರ್ಗೆ
ವಿದಿತ ಶಿವಭಕ್ತಕೃಪೆಯೆಂತೊದಗುವೆನುತೆ ಪೋದರ್ ತಮ್ಮ ನರಪನೆಡೆಗೆ ೩೦

ಅನಿತಱೊಳಗಾ ನೃಪನಪೂರ್ಣ ದೆವಸದೆವಸಕೆ
ಘನಮುಬ್ಬುತೆಲ್ಲೆಡೆಯೊಳಂ ರಂಧ್ರ[2]ಮುಂ[2] ತೋಱು
ತೆನಸಂ ಪುಗುಳ್ ನೆಗೆಯುತೆತ್ತಲುಂ ರಕ್ತಘಾಯಂಗಳುಂ ಪೊಱಪೊಣ್ಮುತೆ
ಅನಿಶಮುಂ ಕ್ರಿಮಿಕುಲಂ ಪೆರ್ಚಿ ತತ್ಕಾಯದೊಳ್
ನನೆದು ಬೀಳುತ್ತೆ ದುರ್ಗಂಧಮಂ ಸೇರಿರ್ದ
ಜನಕೆ ಕೊಕ್ಕರಿಕೆಯಿಾಯುತ್ತತಿಶಯಮದಾಗೆ ಮಡಿದನದಱೊಳ್ ಚೋಳನು ೩೧

ಮರಳಿ ರಾಜ್ಯಾಭಿಲಾಷೆಯೊಳೊರ್ವರೊರ್ವರತಿ
ಭರದೆ ಯುದ್ಧಂಗೈದು ತನ್ನೃಪನ ಸಂತಾನ
ಮಿರದೆ ನಿಸ್ಸಂತಾನಮಾಗಿ ಪೋದುದು ಬಳಿಕ್ಕಾ ನಗರಮುಂ ದೇಶಮುಂ
ಉರಿದುಪೋದುದು ಪಂಡಿತೇಂದ್ರವಿಭುವಿನ ಶಾಪ
ಮರುತಸಖನಂ ಬಳಿಕ್ಕೀ ವಾರ್ತೆಯೆಲ್ಲಮಂ
ಹ[3]ರುಷ[3]ದಿಂ ಮಲ್ಲಿಕಾರ್ಜುನಪಂಡಿತೇಂದ್ರವಿಭು ಮಾರ್ಗದೊಳ್ ಕೇಳುತೊಸೆದು ೩೨

ಸದಮಲಪ್ರಚುರವಿಶ್ರುತ ಪರಮಭಕ್ತಗಣ
ಪದಸರೋರುಹಸಾಂದ್ರ ಮಕರಂದಪಾನ ಸ
ಮ್ಮುದಿತ ಚಂಚಚ್ಚರೀಕನನವರತ ಪಂಚಾಕ್ಷರೀಪ್ರಸಿತಹೃದಯಂ
ವಿದಿತ ಮಂಜುಳನೀಲಕಂಠಾಹ್ವಯಂ ಮನೋ
ಮುದದೆ ಪೇಳ್ದುರುತರಾರಾಧ್ಯಚಾರಿತ್ರದೊಳ
ಗಿದು ಪಂಡಿತೇಶ್ವರಂ ವೆಲ್ನಾಡಚೋಳಂಗೆ ಶಾಪಮಂ ಕೊಟ್ಟ ಕಥನಂ ೩೩

---

[1] ಮ (ಗ) [2] ಮಂ (ಗ) [3] ರುಷ (ಗ)

# ನಾಲ್ಕನೆಯ ಸಂಧಿ

## ಪಂಡಿತಾರಾಧ್ಯರೂರ್ಧ್ವನಯನಂಗಳ ಪಡೆದ ಕಥನಂ*

ಸೂಚನೆ : ಹ[1]ರಿಸ[1]ದೆ ಸಹಸ್ರಗಣನಾಮಸ್ತವಂಗೆಯ್ದು
ಗುರುಪಂಡಿತೇಶ್ವರಂ ಬಳಿಕಮಮರಾರಾಮ
ಪುರದೊಳೂರ್ಧ್ವಾಂಬಕಂಬಡೆದ ಕಥನಂಗೇಳ ಸೂರಸಚಿವೇಂದ್ರ ಮುದದಿಂ

†ಪ್ರಳಯಾಗ್ನಿವಾಡಬ ದ್ವಾದಶಾದಿತ್ಯರಿಂ
ದಳಘುತೇಜಃಕಲಿತಮಾಗಿ ಶಿವಭಾಳದೊಳ್
ವಿ[2]ಳ[2]ಸಿತಾಮಲಮಸೃಣಘುಸೃಣಕರ್ದಮವಿಶೇಷಕದಂತೆ ಮೆಱೆಯುತನಿಶಂ
ಅಳವಿನಿಂ ಬರ್ಪ ಕಾಮನ ಸುಡುವ ಪದದಲ್ಲಿ
ಘಳಿಲನೆಸಗಿದ ಧೂಮಮಾವರಿಸೆ ಕ[3]ತ್ತು[3]ರಿಯ
ವಿ[2]ಳ[2]ಸಿತ ಸ್ಥಾಸಕದವೋಲ್ ತೋರ್ಪ ಪಣೆಗಣ್ಣ ಸುಭಗ ಜಯ ನೀಲಕಂಠ ೧

ಬಳಿಕಮಾ ವಾರ್ತೆಯಂ ಪಂಡಿತೇಶಂ ಕೇಳ್ದು
ತಳರುತ್ತಮಿಂತೆಂದನಾ ದುಷ್ಟಬೌದ್ಧನಂ
ಮಿಳಿರ್ವೊಂದು ಸಮಯದವನೆಂದೂಹಿಸಿದ ತಪ್ಪನವನನೆನ್ನಯ ಹಸ್ತದಿಂ
ಘಳಿಲನೆ ಪಡಲ್ವಡಿಸದಿರ್ದೊಂದು ತಪ್ಪನವ
ನಳಿಕಲೋಚನನ ದೂಷಿಸುತಿರಲ್ ಕೇಳುತಿ
ರ್ದಳಘುತಪ್ಪಂ ಮತ್ತೆ ಶರಣರಂ ನಿಂದಿಸಲ್ಕದನಾಲಿಸಿದ ತಪ್ಪನು ೨

ಪರಸಮಯಿಗಳ ಕಿಡಿಸದಪರಾಧಮಂ ಚೋಳ
ನರಪನೊಡನುಸುರ್ದ ತಪ್ಪಂ ಮತ್ತಮವನನಾ
ನಿರದೀಕ್ಷಿಸಿದ ತಪ್ಪನೆನ್ನ ದೇಹಮನದೀಕ್ಷಿತನಂಟಿದಾ ತಪ್ಪನು

---

1 ರುಷ (ಗ) 2 ಲ (ಕ) 3 ಸ್ತು (ಗ)

* ಅಮರಾರಾಮಪುರದಲ್ಲಿ ಪಂಡಿತಾರಾಧ್ಯರು ಸಹಸ್ರಗಣನಾಮಸ್ತೋತ್ರಮಂ ಮಾಡಿ ಊರ್ಧ್ವಲೋಚನಮಂ ಪಡೆದುದು (ಟ). † (ಗ) ಪ್ರತಿಯಲ್ಲಿ ೧ ರಿಂದ ೨೭ನೆಯ ಪದ್ಯದವರೆಗೆ ಅರ್ಧಓಲೆ ಮುರಿದುಹೋಗಿದೆ.

ಪರಿಭವಿಪುದಕ್ಕಾವ ಮಾರ್ಗಂಗಳಿಲ್ಲ ಶಿವ
ಶರಣನುತಿಯಂ ಪಿಂಗಿಯೆನುತೆ ಗುರುಪಂಡಿತೇ
ಶ್ವರನಲ್ತಿಯಿಂ ವರಸಹಸ್ರಗಣನಾಮಮಂ ಕೀರ್ತಿಸಿದನೆಂತೆನಲದು ೩

ಉರುತರ ಶ್ರೀನಂದಿ ಶಿವಕರರ್ ನಂದಿಕೇ
ಶ್ವರನುಮಾನಂದನುಂ ನಂದಿನಾಥಾಕ್ಷಯಂ
ವರ ವಿಜಯಭದ್ರನುಂ ವೀರಕಂ ವೀರಭದ್ರಂ ಭದ್ರಭದ್ರಾಕ್ಷರು
ಉರುಮಹಾಕಾಳ ತ್ರಿಯಕ್ಷರ ದ್ವ್ಯಕ್ಷರರ್
ಪರಮಪಂಚಾಕ್ಷರೈಕಾಕ್ಷರಾಕ್ಷರ ಷಡ
ಕ್ಷರರುಮಂತುಗ್ರಾಕ್ಷ ಧೂಮ್ರಾಕ್ಷರನಲಾಕ್ಷ ವಿಕಟಾಕ್ಷ ವಿಮಲಾಕ್ಷರು ೪

ವರ ವಿಶ್ವ ವಿಶ್ವಾಕ್ಷ ವಿಕಟಾಂಗ ಗಗನಾಂಗ
ರುರುವಿಜಯ ಜಯ ಮಹಾಭೈರ[1]ವರ್[1] ಶ್ರೇಷ್ಠರುಂ
ನಿರುತಾಭ್ರವರ್ಣಂ ಮಹಾಜ್ವರಂ ಸೋಮವರ್ಣಂ ಸೂರ್ಯವರ್ಣರೆಸೆವ
ಜ್ವರನಿರದ ನಿಷ್ಕಂಪ ನಿತ್ಯನಿಶ್ವನರೆಯ್ದೆ
ಸರಳ ನಿಷ್ಕಳ ಪುಷ್ಕಳರ್ ಕಾಳರೂಪನುರು
ತರ ವಿರೂಪಾಕ್ಷನೀರೂಪ ನಿಶ್ಶಂಕರುಂ ವಿಶ್ವರೂಪಂ ಸೌಂದರಂ ೫

ಸಲೆ ಶಾಂತರೂಪೋಗ್ರರೂಪರುಂ ಮತ್ತೆ ಕೋ
ಕಿಲ ಕುಮುದ ಕುಂದಕಂಕಣಿಯರುಂ ಬಳಿಕೆ ಪಿಂ
ಗಲ ಕಾಕಪಾದ ಕಟಕಾಹಿಕಟಕರ್ ಪಾದಪಿಂಗಲಾಂಬಕರುಮಂತೆ
ಸುಲಲಿತಮನಕ್ಷರಂ ಮಧುಪಿಂಗಲಂ ಮಧುಪ
ನಲರ್ದೆಸೆವ ಲೋಕವಿಜಯಂ ಶಿಷ್ಟವಿಷ್ಟಂಭ
ಲಲಿತಸದ್ಯೋಜಾತರುಂ ಮತ್ತೆ ನಿಜಬಲಶ್ರೀಕಂಠರುಂ ನೀಲನು ೬

ನಿರುತಂ ಸಮಸ್ತಭೂತವಿಜೃಂಭಣಂ ಮತ್ತೆ
ವರಸೂರ್ಯಪಾತನಂ ಸೋಮಪಾತನನೆಯ್ದೆ
ಸರಳ ಸುರಗಿರಿಪಾತನಂ ವಿಂಧ್ಯಪಾತನಂ ಸರ್ವಪಾತನನುಮಂತೆ
ಉರುತರಾಂಗಾರಭಕ್ಷಣ ಸರ್ವದಾಹಕರ್
ಪರಸರ್ವಕಂಪನಂ ಚಂಡಿಕೀರ್ತೀಶಾನ
ರುರುದಂಡಪಾಣಿ ಹರಿಹರಮಹಾಕಾಯರುಂ ಚಂಡಘರ್ಘರರುಮಂತೆ ೭

---

[1] ವ (ಗ)

ಪರಮ ಚಂಡೀಶಂ ಕಪಾಲಧರ ಸಹನೇಶ
ರುರುತರ ಸ್ಥೂಲಸೂಕ್ಷ್ಮಹ್ರಸ್ವದೀರ್ಘರುಂ
ವರಭೃಂಗಿರಿಟಿ ಮೃತ್ಯುಹರಣ ಗುಹರೌದ್ರ ಕೂಷ್ಮಾಂಡ ಗೋಪತಿ ಜಟಿಲರು
ಸರಳ ರುಂಡಾಭರಣ ಭಿಂಡಿ ಮುಂಡಧರರ್ಕ
ಳುರು ಶಂಖಕರ್ಣ ಘಂಟಾಕರ್ಣ ಲಂಬಕ
ರ್ಣರುಮಂತೆ ಗಜಕರ್ಣ[1]ನುಂ[1] ಶಿಖಂಡಿಯುಮೆಯ್ದೆ ಮಿನುಗುದಂಡಾಭರಣನು ೮

ಎನಸುಂ ದ್ವಿಕರ್ಣ ತ್ರಿಕರ್ಣರ್ ಸಹಸ್ರಕ
ರ್ಣನುಮೆಯ್ದೆ ಗೋಕರ್ಣನುಂ ವಿಕರ್ಣನುಮಂತೆ
ಮಿನುಗುವ ವಿಕರ್ಷಣಂ ವಾರಾಹಕರ್ಣನುಂ ಕರಮೆಸೆವ ಸಂಕರ್ಷಣಂ
ನನಸುತ್ಕರ್ಷಣವಿಪುಲರ್ ಪರ್ವತಾಭರಣ
ನನಘ ದರ್ಪಕಠೋರವಚನರುಂ ಸರ್ವಜ್ಞ
ನೆನಿಪನುಂ ಸರ್ವಾತ್ಮನುಂ ಸರ್ವಸಂಹರಣ ಕರಿಮುಖರ್ ನಂದಿ ಮತ್ತಂ ೯

ವರ ಮಹಾಕಾಲ ನರಮುಖ ಕಪಿಮುಖರ್ ಮತ್ತೆ
ಶರಭಮುಖಮುಷ್ಟ್ರಮುಖ ಶಾರ್ದೂಲಮುಖರೆಯ್ದೆ
ಪಿರಿದುಮಹಿಮುಖ ಮುಮುಖ ಸಿಂಹಮುಖ ಮೇಷಮುಖರೆನಿಸಿ ಸೆಲೆಸಂದು ಮೆಱೆವ
ಸರಳ ಗೋಮುಖಮಶ್ವಮುಖ ಪಂಚಮುಖ ವಿಮುಖ
ರುರುಚತುರ್ಮುಖ ಷಣ್ಮುಖಾಷ್ಟಮುಖ ನವಮುಖರ್
ಕರಮೆ ದಶಮುಖನುಂ ಸಹಸ್ರಮುಖನುಂ ದ್ವಿಮುಖನುಂ ತ್ರಿಮುಖನುಂ ಮತ್ತೆಯುಂ ೧೦

ಎನಸುಂ ವರಾಹಮುಖ ದಕ್ಷಭಾಸ್ಕರರೆಯ್ದೆ
ಮಿನುಪ ವಿಷಭಕ್ಷಣಂ ಬ್ರಹ್ಮಭಕ್ಷಣನಮಲ
ಶನಿ ಭಾಸ್ಕರರ್ ಶತಸಹಸ್ರಾಕ್ಷ ಪಂಚಾಕ್ಷ ಭದ್ರಕರ್ಣರ್ ಮತ್ತೆಯುಂ
ಕನದಂತಕಾಂತಕಂ ಪೂರ್ಣಭದ್ರಾಸ್ಖಲಿತ
ರನುಪಮ ಮಹೇಶ್ವರಂ ಪುಷ್ಪದಂತಂ ಬಳಿ
ಕ್ಕನಘಂ ಗುಹೇಶ್ವರಂ ವಜ್ರಕಾಯಂ ಮಹಾಭದ್ರಂ ವಿಯೋಕ್ತೃ ವೃಷಭಂ ೧೧

ವಿನುತ [2]ಭು[2]ಗ್ವಜ್ರದಂತಂ ಸಾಂಬರಂ ಮತ್ತೆ
ಘನಚಂದ್ರ ಗಂಗಾಂಬುಶೇಖರ ದಿಗಂಬರರ್
ಮಿನುಪ ಡಮರುಗ ಹಸ್ತ ರೇಣುಕರ್ ದಾರುಕ ಸುಹೋತೃ ದರ್ದರರುಮಂತೆ

---

1 ಮಂ (ಕಗ)   2 ಭೃ (ಕ)

ಎನಸುಮಸಿತಗ್ರೀವನುಂ ಕಾಲಮರ್ದನಂ
ನನಸು ದಕ್ಷವಿಮರ್ದನಂ ತ್ರ್ಯಂಬಕಂ ಮತ್ತೆ
ಕನದರ್ಧನಾರೀಶ್ವರಂ ಹಾಟಕೇಶ್ವರಂ ದೇಹಾರ್ಧವಕ್ತ್ರಾರ್ಧರು ೧೨

ಉರುಶರ ಘಟಾರ್ಧ ನಾಸಾರ್ಧರುಂ ಮತ್ತೆ ಸುರು
ಚಿರ ಫಣಿವಿಭೂಷಣ ಕ್ಷೇತ್ರಪಾಲರ್ ಮಗುಳ್ದು
ವರಕರಾಳಂ ಮಣಿವಿಭೂಷಣಂ ವಿಪ್ರಮಾಲಿ ಕಪಾಲಿ ಕಾಲನೆನಿಪಂ
ವರ ವಷಟ್ಕಾರವೋಂಕಾರ ಶಂಕರರೆನಿಪ
ರುರುಸುಷೇಣಂ ಧೂಮಕೇತು ಕಂಕಾಳಧರ
ಸರಳಧೂಮಾಂಗರುಂ ವಾಮದೇವಾರ್ಧೋರ್ಧವಾಹ ನರವಾಹರ್ಕಳು ೧೩

ಸರಳ ಪ್ರಪಂಚಾಂತಕಂ ತ್ರಿಭುವನಾಂತಕಂ
ನಿರುತ ಸಂತಾನಕಂ ದೈತ್ಯಾಂತಕಂ ಮ[1]ಹೋ
ದ[1]ರ ಮೇಘವಾಹ[2]ನರ್[3] ವ್ಯಾಘ್ರವಕ್ತ್ರಂ ಸುಮನ ಸುಗತಿ ಗುರುಲಘುಭರ್ಗರು
ಪರಮ ಸಿತಕಾಯ ಶೂಲಾಯುಧ ಸುಕೇಶರುಂ
ನಿರುಪಮ ಸುಪಾಣಿಕೋಲಾಹಲಂ ಭವನೆಯ್ದೆ
ವರಸುದರ್ಶನಪಾಣಿಯುತ್ತುಂಗರುಂ ವಜ್ರಪಾಣಿ ಸುಪಿನಾಕಪಾಣಿ ೧೪

ಸಲೆ ಮಹಾಕೇಶ ಭರ್ಗರ್ ಸುಕೇಶಂ ಮತ್ತೆ
ಲಲಿತ ಭವ ಶಿವ ಮೇಘವಾಹನರ್ ಮಗುಳ್ದು ವಿಷ
ಬಲ ಮಹಾವ್ರತ ಮಹಾಬಾಹುಗಳ್ ಶ್ವೇತಸರ್ವಾಂಗದಮನರ್ ಭೀಮನು
ಸುಲಲಿತ ಮಹೇಂದ್ರಝುಂಕಾರರರ್ ಸುರಾರ್ಚಿತಾ
ಮಲ ಬಭ್ರುಕಾಮಾಂಗದಹನ ಮೃತ್ಯುಂಜಯರ್
ಲುಲಿತ ನಿರ್ಮಲನಾಗತಾಭ್ರಕಾಯರ್ಕಳುಭಯಶಿರನತಿಕಾಯ[3][ರ್ಕಳು][3] ೧೫

ಪಿರಿದುಮಪ್ರತಿಮ ಪ್ರಕಂಪನೋನ್ನತರೆಯ್ದೆ
ವರ ಭಾನುಕಂಪನಂ ಸೋಮಕಂಪನನಮಲ
ತರ ಶತೋದರನೆಸೆವ ಸಂವರ್ತಕಂ ಪ್ರಚಂಡಶ್ರೀಧರಂ ಮತ್ತೆಯುಂ
ಪಿರಿಯ ಚಂಡೋದರಂ ಕುಂಡೋದರಂ ಮಗುಳ್ದು
ಪರಮಪ್ರಚಂಡ ಕುಂಭೋದರರ್ ಘೋರನುರು
ತರ ವೃಷಾಂಕಾಂಬೋಧನಾದರ್ ಮಹೋದರಂ ಕಂಕಟ ನಿಕುಂಭರ್ಕಳು ೧೬

---

1 ಹಾ|ಧ (ಕಗ) 2 ನಂ (ಕಗ) 3 ನು (ಕಗಟ)

ಕುಲಿಶೋದರೇಂದುಖೇಟಕ ಸೂರ್ಯಖೇಟಕರ್
ಲಲಿತ ನಕ್ಷತ್ರಕೃಂತಸ ಸೂರ್ಯಪೇಷಕರ್
ಸಲೆ ಹರಿಜಟಾಕೇಸರಂ ಸೋಮಪೇಷಣಾಂದೋಳಕರ್ ಪರಿಭಾವಿಸೆ
ಸುಲಲಿತ ಬ್ರಹ್ಮಾಂಡಪೇಷಣಂ ಮೇಘನಂ
ತಲಘುಸೂತ್ರನಿಪೀಡನಂ ಸೋಮದತ್ತನುಂ
ಲುಲಿತ ಲಾಲಾಸುರಾಂತಕಶೂಲಿಗಳ್ ಸ್ವಯಂಜ್ಯೋತಿಯತಿಹಾಸನಂಗಂ ೧೭

ಪಿರಿದಟ್ಟಹಾಸ ಭಸ್ಮೇಶ್ವರ ಗುಹಾವಾಸ
ಹರ ಮಹಾಮಾಯು ದಿಕ್ಪಾಲಕಾರಿಗಳೆಯ್ದೆ
ಸರಳ ದಿಗ್ವಾಹನಾಶನನೆಸೆವ ದಿಗ್ವಾರಣಾಹಾರಿ ಹಾಲಾಹಲಂ
ಉರುತರ ದ್ವೀಪನಿರ್ದಲನ ಸಂಹಾರಕಾ
ಲರುಮಂತೆ ಸಾಗರಾಪೋಶನಂ ಸ್ಥಾಣು ಶಶಿ
ಧರ ಸಾಗರಧ್ವಾನ ರುದ್ರಾಷ್ಟನಾಗಾಂಗುಲೀಯಕಂ ವರ ಕಪರ್ದಿ ೧೮

ಗರುಡಪಕ್ಷಚ್ಛೇದ ಕಾಲಾಪಹರಣರುಂ
ಗಿರಿಕಂದುಕಾಟನಂ ಖಟ್ವಾಂಗಪಾಣಿ ಬಂ
ಧುರವಿಧಿಶಿರಚ್ಛತ್ತು ವಿಷ್ಣುಕಂಕಾಲಾಂಕ ವಿಷ್ಣುನೇತ್ರಾದಾನರು
ವರ ವಿಧಿತಿರಸ್ಕರಣನುಂ ಕ್ಷಿತಿವಿಯತ್ತಾಳ
ಪರಮ ಬಡಬಾಗ್ನಿತಿಲಕೈಕಪಾದರ್ ಮತ್ತ
ಮುರುತರ ಪ್ರಳಯಾಗ್ನಿನೇತ್ರ ವಡಬಾನಲಾನನ ಪಂಚಶಿಖರುಮಂತೆ ೧೯

ವಿಲಯಾಗ್ನಿಖೇಲನಂ ವಿದ್ಯುತ್ಪ್ರಭಾವನುಂ
ಲಲಿತ ಕುಲಗಿರಿಶಾತನೋರ್ಧ್ವಪಾದರ್ ಮರಳಿ
ಸುಲಭಕೂರ್ಮಾಹಿನಟನಂ ಕಾಲರುದ್ರನುಂ ಲಿಂಗಾಕ್ಷನಕ್ಷಪಾದಂ
ಲಲಿತಮಾಗೆಸೆದು ನರ್ತಿಪ ಭಗವಮಾತಂಗ
ವಿಲುಲಿತ ಮಹಾರಥಾಂಗದರೆಯ್ದೆ ಮತ್ತೆ ಸ
ಲ್ಲಲಿತೇಭಚರ್ಮಚೇಲ ವ್ಯಾಘ್ರಚರ್ಮೋತ್ತರೀಯರ್ಕಳುಂ ಮತ್ತೆಯುಂ ೨೦

ವರ ಬಾದರಾಯಣ ಭುಜೋತ್ಪಾಟನಂ ಮತ್ತೆ
ಪಿರಿದುಂ ವರಾಹದಂಷ್ಟ್ರಾಂಕಿತವದನನೆಯ್ದೆ
ಹರಿರಥಾರೂಢ ಚಕ್ರಾಪಹ ಕ್ಷೀರಶರನಿಧಿಪಾನರೆನಲೊಪ್ಪುವ

ಉರುಯಜ್ಞಚರ್ಮಾಸನಂ ಭೀಮಕಾಯನುಂ
ಸರಳವಿಷ್ವಕ್ಸೇನಹರಣನುಂ ಮತ್ತೆ ಬಂ
ಧುರ ಸಿಂಹಚರ್ಮಾ[1]ಸನಾಕಾಯ[1]ರುಂ ಮತ್ತೆ ಸೋಮದತ್ತಾಭೀಲರು ೨೧

ಸರಳ ಪೃಥು ಭಗದತ್ತ ಸುಚರಿತ್ರ ಮೇಘಮುಖ
ರುರುಪಾದಮುಖ ಕುಕ್ಷಿಮುಖ ಬಾಹುಮುಖರೆಯ್ದೆ
ವರಸುಮುಖ ಜಾನುಮುಖ ವಿಶ್ವಮುಖರುಂ ಮಹಾಭೀಳ ಬಹುವಕ್ತ್ರರೆಯ್ದೆ
ಕರಮೆ ಬಹುನೇತ್ರ ಬಹುಕಾಲಜಿಹ್ವರ್ ಮತ್ತೆ
ಸರಳಬಹುಕರ್ಣ ಬಹುವರ್ಣ ಬಹುಘೋಣರುಂ
ನಿರುತಮೊಪ್ಪುವ ಲೋಹಜಂಘ ದುರ್ದರ ಮಹಾಜಂಘರುಂ ಮತ್ತಮೆಸೆವ ೨೨

ಸಲೆ ವರಪ್ರಚ್ಛಂದ ಚಾರುದಂತಾಭ್ರ ಸ
ಲ್ಲಲಿತೋರು ತಾಲುಜಂಘರ್ ತತ್ತ್ವಮತಿ ಮತ್ತೆ
ಲಲಿತಪ್ರಚಂಡಬಲ ದೀರ್ಘದಂಷ್ಟ್ರ ಕುಠಾರದಂತರ್ ಸುಬಾಹು ಬಳಿಯಂ
ವಿಲಸಿತ ಮಹೋಕ್ಷವಾಹನ ಮಹೋಕ್ಷಪಾತಕ
ರಲಘು ಪಾತಾಳತಳವಾಸಿ ರಕ್ತಾಕ್ಷರುಂ
ಲುಲಿತ ತ್ರಿಯಕ್ಷಂ ಸಹಸ್ರೋದರಂ ದೀರ್ಘಲೋಚನಂ ಹ್ರಸ್ವಕಂಠಂ ೨೩

ವರ ವರ್ತುಳಾಕ್ಷ ವರ್ಣಾಕ್ಷರುಂ ಶೂಲಾಕ್ಷ
ನುರುಕಾಲಕಂಠಂ ಮಯೂರಕಂಠಂ ಮಿಸುಪ
ಸರಳೋರ್ಧ್ವಬಾಹು ಲಂಬಾಕ್ಷಂ ಸುಘೋಣಾದ್ರಿಕುಂಡಲರ್ ನೀಲಾಂಬರಂ
ಪಿರಿದಗ್ನಿಕುಂಡಲಂ ಕ್ರತುಹರಂ ಮತ್ತೆ ಭಾ
ಸುರತರಾನಂಗೋಗ್ರಕುಂಡಲರ್ ಬಳಿಕೆ ಬಂ
ಧುರ ಪಾಂಡುರಾಂಗಾಸಿತಾಂಬರಾಜಾಂಡಬಾಹುಗಳೆಯ್ದೆ ಪರಿಶೋಭಿಪ ೨೪

ಪಿರಿದಂಡಘರ್ಘರಂ ಗಗನಮಾನಂದನಂ
ದರುಮೆಯ್ದೆ ಕುಂಡಕರ್ಣಂ ಲಂಬಕರ್ಣನುಂ
ಸರಳಲಂಬೋಷ್ಠ ದೀರ್ಘೋಷ್ಠರುಂ ಲಂಬಾಕ್ಷ ಲಂಬೋದರರ್ ಪ್ರಲಂಬಂ
ವರ ಲಂಬಹನು ಲಂಬಜಿಹ್ವ ಲಂಬಾನನರ್
ಕರಮೆಸೆವ ಲಂಬಕನು ಲಂಬನಾಸಿಕರಮಲ
ತರ ದಶಭುಜ ದ್ವಿಭುಜ ಸೋಮಾಕ್ಷ ರೌದ್ರಾಕ್ಷ ಸೂರ್ಯಾಕ್ಷ ಲಲಿತಾಂಗರು ೨೫

---

[1] ನನಾಹಾರ (ಕ)

ವರ ಸೋಮ ಭೀಮಾಂಗ ರೋಮಾಂಗರುಂ ಮತ್ತೆ
ಕರಮೆಸೆವ ಕರ್ಣಸೇನಂ ಮಹಾಸೇನ ದು
ಸ್ಕರರಗ್ನಿ ಜಿಹ್ವಾಗ್ನಿಕೇಶ ಶಾಶ್ವತಸುಖಾನಂದರುಂ ಪರಿಶೋಭಿಪ
ಉರುಕಾಷ್ಠಕೂಟ ಧೂರ್ಜಟಿ ಮಹಾಕೇಶರುಂ
ಪರಮ ತ್ರಿಜಟಿ ಸುಕೇಶೋರ್ಧ್ವಕೇಶರ್ ಮಗುಳ್ದು
ಸರಳ ನಾಕಿಪಶಿರೋಹರ ಸುಜಿಹ್ವ ತ್ರಿಜಿಹ್ವ ದ್ವಿಜಿಹ್ವರ್ ಶೋಭಿಪ ೨೬

ಪರಮ ವಿದ್ಯುಜ್ಜಿಹ್ವ ಜಿಹ್ವೋದರೋರುಜಿ
ಹ್ವರುಮಂತೆ ಶೋಭಿಪ ಸಹಸ್ರಜಿಹ್ವಂ ಮತ್ತೆ
ವರಮಹಾಜಿಹ್ವ ಜಿತುಕರ್ಣರುಂ ವಹ್ನಿಜಿಹ್ವ ನಿಕೃಂತನಂ ಮತ್ತೆಯುಂ
ಉರುಲಂಬ[1]ಕರ್ಣರುಂ[1] ಶ್ರೀಧರಾರಾಧ್ಯನುಂ
ನಿರುಪಮ ಮಹಾಲಯ ಮಹಾದಂಷ್ಟ್ರ[2]ಬಿಂ[2]ಬೋಷ್ಠ
[3]ರು[3]ರುತರ ಸ್ಥೂಲವಿಗ್ರಹ ಶಂಭು ಪೀತಾಂಬರರ್ ಪ್ರಬಲವಿಕಟರ್ಕಳು ೨೭

ಮಿನುಪ ಕಂಬುಗ್ರೀವ ಧೂಮವಿಗ್ರಹರೆಸೆವ
ವಿನುತ ಸಿಂಹಗ್ರೀವ ದೀರ್ಘಬಾಹುಗಳ[4]ಮಲ[4]
ಘನತರ ಸಹಸ್ರಬಾಹು ದ್ವಿಬಾಹು ತ್ರಿಬಾಹೂರುಬಾಹುಗಳೊಪ್ಪುವ
ಕನದೂರುಪಾದೋರುಬಾಹುಮುಖರೆಸೆವ ಸೊಂ
ಪಿನ ಮಹಾಬಾಹೂರ್ಧ್ವಬಾಹು ಪ್ರಮುಖರೆಲ್ಲ
ರನಘಸತ್ಪ್ರಮಥಗಣರೆನಿಸುಗುಂ ಸಂತತಂ ವಿಶ್ವವಿಶ್ವಂಭರೆಯೊಳು ೨೮

ಮರಳಿ ಭುವನೇಶ್ವರರಾಜರ್ ವಿಭೂತಿ ಕಪಾಲಿ
ವರಭೂತಿ ಕರಭೂತಿಪಾಲನಭವರ್ ಮತ್ತ
ಮುರು ಚಕ್ರಧರ ಮಹಾಬಲ ದಂತದಂಷ್ಟ್ರರುಂ ದಹನಪ್ರಚಂಡಧರರು
ಉರುತರ ಕ್ರೂರದಂ[5]ಷ್ಟ್ರೋರ್ಧ್ವ[5]ದೇಹರ್ ಮಗುಳ್ದು
ಕರವೆಸೆವ ವೇದಪಾರಗ ಮೇಘನಾದರುಂ
ಪಿರಿದುಂ ಸುನಾದ ತ್ರಿಕಲಕಪರ್ದಿ ಧನಂಜಯರ್ಕಳುಂ ಶ್ವೇತನೆಯ್ದೆ ೨೯

ಬಲನೀಲರುದ್ರರುಂ ಶಾಶ್ವತಂ ಭದ್ರನುಂ
ಸಲೆಕಾಲರುದ್ರರ್ ಪಿನಾಕಿಗಳ್ ಮತ್ತೆಯುಂ
ಲಲಿತ ದೀರ್ಘಹ್ರಸ್ವನುಂ ಸ್ಥೂಲರುದ್ರನುಂ ಸರ್ವಜ್ಞನುಂ ರಂಜಿಪ

---

[1] ಕಂಧರಂ (ಟ) [2] ನಿಂ (ಕ) [3] ನು (ಗ) [4] ಲಮ (ಕಗ) [5] ಷ್ಟ್ರಾರ್ಧ (ಕಗ)

ಲುಲಿತ ಸುಖಕರ ಮೇಘವಾಹನ ಕ್ರೋಧಿಶರ
ಲರುತಿರ್ಪ ನೀಲಾಶನಂ ಹರಂ ಸರ್ವೇಶ
ವಿಲಸಿತ ಜ್ವಲನಾಶ ವಟರುದ್ರ ಧೂಮ್ರವರ್ಣಂ ವಿವಾಹನನುಮೆಯ್ದೆ ೩೦

ಉರುತರ ಹಿತಂ ನಿಧೀಶಂ ಮಹೇಶಂ ಕಾಲ
ನುರು ಕಲವಿಕರಣ ರುದ್ರಂ ಪ್ರಮಥನಂ ಮತ್ತೆ
ಸರಳ ಸರ್ವಮನೋನ್ಮನಂ ಪೂರಕಜ್ಯೋತಿಸಂಹಾರ ಭರ್ಗರೆಯ್ದೆ
[1]ನಿರುಪಮ[1]ಸ್ಥಾಣು ವೀರೇಶ್ವರಾನೇಕ ವೀ
ರರುಮಂತಘೋರ ವಿದ್ವೇಷರುಂ ವಿಶ್ವೇಶ
ನರರೆ ಪಿಂಗೇಕ್ಷಣಂ ಪಿಂಗಲಾನಂತಾಂತರಿಕ್ಷಾಂಗ ಮಾತಂಗರು ೩೧

ಪಿರಿದುಂ ತ್ರಿದಂಷ್ಟ್ರ ವೃಷಭರ್ ಗಣಪ್ರಿಯನೆಯ್ದೆ
ವರವಿಭು ವಿರೂಪಾಕ್ಷ ವಿಷಧರಾಕ್ಷಯ ರುದ್ರ
ಹರ ರತ್ನಧರ ಬಲವಿಕರಣ ರುದ್ರರ್ ತ್ರಿಣೇತ್ರಂ ಮಾರುಹತನೆಸಗುವ
ಹರಿಹರಂ ಬಭ್ರುಕ್ಷಯಾಂತರ್ಕಳುಂ ದು
ಷ್ಕರಭಯಾನಕ ವಿಚಕ್ಷಣ ಕರ್ತೃಗಳ್ ಶೂಲ
ಧರ ಸುದುಂಬರ ಜಟಾಧರ ಗಣಾಧ್ಯಕ್ಷ ಧಾತೃಪ್ರಮರ್ದಕರೊಪ್ಪುವ ೩೨

ಸಲೆ ವಿಧಾತೃಗ್ರಸನ ಪಂಚಶಿಖಿಗಳ್ ಮತ್ತೆ
ಸುಲಲಿತ ಪರಂಧಾತೃ ಯಾಮ್ಯ ಸೂಕ್ಷ್ಮರ್ ಮಗುಳ್ದು
ಲಲಿತಾತಿವೇಗನುಂ ತ್ರಿಕ್ಷಣಂ ಸೌಮ್ಯದೇಹೋರ್ಧ್ವಕೇಶಂ ಸುಕೇಶಂ
ಜ್ವಲನಪ್ರಕಾಶನುಂ ಕಾಲಲೋಹಿತನೆಸೆವ
ಲುಲಿತ ಭಸ್ಮಾಂಕಿತಂ ರುದ್ರಾಗ್ನಿಭೀಮ ಭವ
ಕಲಘೂದ್ಭವಂ ಹುತಾಶನ ಶೀಘ್ರಬುದ್ಧ ಸರ್ವಾತ್ಮ[2]ರುಂ[2] ಸಹನೇಶನು ೩೩

ಉರು ವಾಮದೇವ ಪ್ರಭುಸ್ವಾಮಿಗಳ್ ಮತ್ತೆ
ಕರಮೆ ಗೌರೀಶ ಗಗನೇಶ ಶಂಭುಗಳೆಯ್ದೆ
ಸರಳಗುಹ ರೌದ್ರ ಪರಮಾತ್ಮ ಗೋಪತಿಗಳುಂ ಕ್ಷೇಮಿಶನುಂ ಬಳಿಕ್ಕಂ
ವರ ವಜ್ರದಂತಾವ್ಯಯರ್ ವಾಯುವೇಗನುಂ
ಪಿರಿದುಗ್ರವಜ್ರಕಾ[3]ಯರ್[3] ಸಾಧ್ಯವೃಷಪರಾ
ಪರ ವಿಯೋಕ್ತೃಗಳೆಯ್ದೆ ವಡಬಾಮುಖಂ ಪಾವಕಶ್ರೇಷ್ಠನಸಿತವರ್ಣಂ ೩೪

---

[1] ಪರಮ (ಗ) [2] ನುಂ (ಗ) [3] ಯಂ (ಕ)

ವರ ಕಲಾವೋಯ ಲಘುರೂಪಧರ ಪಾಶಹ
ಸ್ತರುವೆಯ್ದೆ ಮೃತ್ಯುಂಜಯಂ ಫಣೀಂದ್ರಂ ಮಗುಳ್ದು
ಪಿರಿದುಮೀಶಾನರುದ್ರಂ ಗಣೇಂದ್ರಂ ವಿಕರಣಾರ್ಚಿವರ [1]ವಿ[1]ಟರುದ್ರರು
ಶರಭರುದ್ರಂ ಮೃತ್ಯುಹರನೆಯ್ದೆ ಹರರುದ್ರ
ನುರುಮಹಾವೃಷಭರುದ್ರಂ ಶಬರರುದ್ರನುಂ
ಸರಳವಿಶ್ವಾಧಿಕೋರುದ್ರಂ ಮಹಾಕಾಲರುದ್ರಂ ಕಿರಾತರುದ್ರಂ ೩೫

ಕರವೆ ಸಂಹಾರರುದ್ರಂ ನಾಟ್ಯರುದ್ರನುಂ
ಸರಳಾರ್ಧನಾರೀಶರುದ್ರನುಂ ಸಂತತಂ
ಪರಿಕಿಸೆ ಮಹೋಗ್ರರುದ್ರಂ ಬಳಿಕೆ ಮೃತ್ಯುಂಜಯಾಖ್ಯರುದ್ರಂ ಮತ್ತೆಯುಂ
ವರಸದಾಶಿವರುದ್ರ ವಿಜ್ಞಾನರುದ್ರರುಂ
ಪರಮವೀರಾಖ್ಯರುದ್ರಂ ಮಹಾಶಿವರುದ್ರ
ನುರುವಿಜಯರುದ್ರ ಜಯರುದ್ರರ್ಕಳುಂ ಮಗುಳ್ದು ಕರ್ಮಾಖ್ಯರುದ್ರನೆಸೆವ ೩೬

ಲಲಿತೈಕಪಾದ ರುದ್ರಾದಿರುದ್ರರ್ ನೋಡೆ
ಸಲೆ ಆದಿರುದ್ರಗಣರೆನಿಸಿ ಮೆಱೆವರ್ ಮತ್ತೆ
ಸುಲಲಿತ ಶ್ರೀಮದ್ಧಮನ ವೇದಶಿಖಿಗಳ್ ಜಟಾಮಾಲಿ ಸರ್ವೇಶ್ವರಂ
ಅಲಘುಶೂಲಿ ಸಹಿಷ್ಣು ಮುಂಡಿ ಜೇಗೀಷವ್ಯ
ರಲರ್ವಾ ಲಾಂಗುಲೀ ಡಿಂಡಿಕರ್ ದಧಿವಾಹ
ರೊಲವುಮಿಗೆ ದಾರುಕಸುಹೋತ್ರಗಳ್ ಚಾರುಹಾಸಂ ಗುಹಾವಾಸನೆಸೆವ ೩೭

ವರ ಸುಧಾ[2]ರ[2]ವನುಗ್ರಲೋಕಾಕ್ಷ ಲಕುಲೀಶ್ವ
ರರುಮಂತೆ ಗೋಕರ್ಣಮುಖ ಯುವಾಲೋಕರುಂ
ಸರಳಗೌತಮಶಿಖಂಡಿಗಳೆಸೆದು ತೋಱುವ ಮಹಾಕಾಯನುಂ ಮತ್ತೆಯುಂ
ಪಿರಿದುಂ ವೃಷಭಮಹಾಕಾಯನುಂ ಬಳಿಕಿವರ್
ಪರಮಯೋಗಾಚಾರ್ಯರಿವರ ಶಿಷ್ಯರ್ ಮಗುಳ್ದು
ಕರವೆ ಧರ್ಮಾಚಾರ್ಯರುಂ ನೂಱಪನ್ನಿರ್ವರೆನಿಸುವರ್ ಧರಣಿಯೊಳಗೆ ೩೮

ತಿರುನೀಲಕಂಠ ತಿರುಮೂಲದೇವರ್ ಮತ್ತೆ
ತಿರುನೀಲನಕ್ಕ ತಿರುನಾಳ್ಪೋವರುಂ ಮಗುಳ್ದು
ವರಮಂಗಯಕ್ಕರ[3]ಸಿ[3] ಮಾನಕಂಜಾರ ವಾನಾಯ್ನಾರು ಮೊನೆಯಧರನು

[1] ವಿಕ (ಗ) [2] ನ (ಗ) [3] ಸ (ಕ)

ಉರುಪಿಟ್ಟನಂಗರೋಹಿಣಿ ಪಿಳ್ಳೈನಾಯ್ನಾರು
ಪಿರಿಯಂಗಸಂಗ ಪೂಸಲನಾಯಿನಾರರುಂ
ಕರನೆ ಚಂಡೇಶಂ ಪರಮನಾಚಿ ಕಲಿಕಾಮದೇವ ಕಲಿಗಣನಾಥರು ೩೯

ಇರುವದಾಂಡಾರಿ ಮುರುಘಂ ಸಾಂಖ್ಯತೊಂಡನುಂ
ಪಿರಿಯಮರನೀತಿ ನಮಿನಂದಿ ಯೇಣಾಧಿನಾ
ಥರುಮಂತೆ ರುದ್ರಪಶುಪತಿ ನಂಬಿಯಣ್ಣ ಚಿಱುತೊಂಡ ಚೀಲಾಳರಸೆನ
ತಿರು[1]ಕುಱುಪಿತೊಂ[1]ಡ ಸೋಮಾಸಿಮಾರರುಮಂತೆ
ವರ ಸೇದಿರಾಜಯ್ಯ ಕಾರಿಕಾಲವ್ವೆಯರ್
ಪಿರಿದುಮೇಕಾಳಿ ಜಡೆಯಾರಿಯುಂ ವೀರಪೆರ್ಮಾಡಿದೇವಂ ರಂಜಿಪ ೪೦

ಸಲೆ ವೀರಚೋಳನೆಲ್ಪಘಜಿಲಂದಿಗಳೆಯ್ದಿ
ಲಲಿತ ವಾಗೀಶನಾಯ್ನಾರುಮಿಱುಮಿಂಡಿ ಕೊ
ಲ್ಪುಲಿಯುಳಯಡಂಗುಲಿಯ ನಾಯ್ನಾರು ಮಿಗೆತೊಳಪ ನಿಜದೀಪದ (?)
ಕಲಿಯಾರು ಕಲಿಕಂಬ ಕಲಿಯಂಬರುಂ ಮತ್ತೆ
ಸುಲಲಿತ ನಮಿತ್ತಾಂಡಿಯಾರು ಚಿಱುಪುಲಿಯಾರು
ಕಲಿಯನಯ್ನಾರು ಕಡಮಲನಂಬಿಯುಂ ಕುಲಚ್ಚಿ[2]ಱ[2]ಯಾರು [3]ಕಣ್ಣಪ್ಪನು[3] ೪೧

ಅರಿವಾಳಗುಗ್ಗುಳಂ ಚನ್ನಯ್ಯ ಚೇರಮರ್
ಕರವೂರ ಚೋಳ ತಾಪಸಿಗಳುಂ ಮತ್ತೆ ಬಂ
ಧುರ ಚೋಳ ನೀ[4]ಡು[4]ಮಾರಿದೇವರಿಡುಗುಡಿಮಾರದೇವಯ್ಯನಣುಮೂರ್ತಿಯುಂ
ಪಿರಿದುಮಿಱುಭಕ್ತ ಮೊನೆಯಾಧಿಪರ್ ಚಿಱುವುಲಿಯು
ಮಿರದಿವರ್ ಭಾವಿಸಲ್ ಧರಣಿಯೊಳಗೆಸೆವ ಶಿವ
ಶರಣರ್ಕಳಱುವತ್ತುಮೂವರೆನಿಸ್ಪೆದೆ ವಿಖ್ಯಾತಿವಡೆದರ್ ಸಂತತಂ ೪೨

ಮಿನುಪ ಹೊನ್ನಯ್ಯ ಕೇತಲದೇವಿ ಗುಡ್ಡವ್ವೆ
ಕನದಮಲ ಕಿನ್ನರಬ್ರಹ್ಮಯ್ಯನುಂ ಮತ್ತೆ
ಘನಪಾಂಡ್ಯನಾಯಕಂ ಚಿಕ್ಕ[5]ಲಿಗೆನಾಗಯ್ಯ ಪುಷ್ಪಬೋಜಯ್ಯಂಗಳು[5]
[6]ನೆ[6]ನಸು ಬಿಜ್ಜಯ್ಯ ನಾಗಯ್ಯಂಗಳುಂ ಮತ್ತೆ
ಕೊನರ್ವ ಬಾಚಲದೇವಿ ಪಡಿಹಾಱ[7]ಸೋ[7]ವಣ್ಣ
ನನಘಬೀರಯ್ಯ ಹಂದಯ್ಯಂಗಳುಂ ಮಗುಳ್ದು ಕಾಳವ್ವೆಯುಂ ರಂಜಿಪ ೪೩

---

[1] ಪುರುಪಿಕೊಂ (ಕ) [2] ಲೆ (ಕ) [3] ಕಂಗೊಪ್ಪುಗುಂ (ಕ) [4] ರು (ಕ) [5] ಯ್ಯ ಪುಷ್ಪಬಾಚಯ್ಯಂಗಳುಂ (ಕ) [6] ಎ (ಕ) [7] ಸಾ (ಕ)

ವರ ಸೇನನಾಥದೇವರ ಬಾಚಿದೇವನುಂ
ಪಿರಿದು[1]ಘೇ[1] ನಾಗಯ್ಯನುಂ ಮತ್ತಿವರ್ ನೋಡೆ
ಹ[2]ರಿಸ[2]ದಿಂ ಷೋಡಶರೆನಿಕ್ಕುಮಿಾ ಭೂಮಿಯೊಳ್ ಮತ್ತಮಿನ್ನೊಸೆದು ಕೇಳು
ನಿರುಪಮಿತ ವೀರಘಂಟಾಮೌನಿ ಸಿಂಗಯ್ಯ
ನುರುಡೋರಿ ದೇವಯ್ಯ ಮಾರಿದೇವಯ್ಯಂಗೆ
ಳರರೆ ಬೊಪ್ಪಲದೇವಿ ಮಗುಳ್ದು ಕಾಮಲದೇವಿ ಬಿಜ್ಜಯ್ಯನೆಯ್ದೆ ಮೆಱಿಪ ೪೪

ಮಿಸುಪ ದಶಗಣಸಿಂಗಿದೇವಯ್ಯನುಂ ಮತ್ತ
ಮೆಸೆವ [3]ಚೌಂಡಲ[3]ದೇವಿಯನ್ನಮರಸಿಯುಮೆಯ್ದೆ
ಮುಸಕದಿಂ ದಶಗಣಂಗಳೆನಿಪ್ಪರಿವರಾವಗಂ ಮತ್ತಮಿನ್ನೆ ಕೇಳು
ಬಸವರಾಜಯ್ಯಂ ಪ್ರಭಾತಗಣಸಿಂಗಯ್ಯ
ನೆಸೆವೋಹಿಲಂ ಬೊಮ್ಮಸೆಟ್ಟಿ ಪಡಿ[4]ಹ[4]ರಿಯಾಖ್ಯ
ಬಸವಯ್ಯ [5]ಮೆಲ್ಗಿ ನಿಜ[5]ಸಂಗವ್ವೆ ದೇವರಸರೆಸೆವ ಕಾಮಲದೇವಿಯುಂ ೪೫

ವರಪುಷ್ಪ ಬಾಚಯ್ಯನುಂ ಬೊಪ್ಪಿದೇವಿಯುಂ
ಸರಳದೇವಯ್ಯ ಕನ್ನವ್ವೆಯರ್ ಮತ್ತೆ ಭಾ
ಸುರದ ಸಾತ್ವಿಕದ ಸಂಗಯ್ಯನೆಂಬಿವರೆಯ್ದೆ ತೇರಸರೆನಿಪ್ಪರೊಸೆದು
ಪಿರಿಯ ಶ್ರೀಪತಿಪಂಡಿತರ್ ಸಿಂಧುಬಲ್ಲಹಂ
ಪರಮಧೂರ್ಜಟಿಕೇಶಿ ಬಳ್ಳೇಶಮಲ್ಲಯ್ಯ
ನುರುಮುಟ್ಟಮಾರಯ್ಯನಲ್ಲಯ್ಯನೆಸೆವ ಧೂಪದ ಮಾಚಿದೇವಯ್ಯನ ೪೬

ವರವೀರನಾಚಯ್ಯ ಮಾದಿರಾಜಯ್ಯಂಗೆ
ಳುರುಬಾಚಿರಾಜಯ್ಯ ಮಡಿವಳ್ಳಮಾಚಯ್ಯ
ಸರಳ ಕಕ್ಕಯ್ಯಂಗಳುಂ ಬಿಬ್ಬಬಾಚಯ್ಯ ಕೇಶಿರಾಜಯ್ಯಂಗಳು
ಕರಮೆಸೆವ ಬಡವರ ಬ್ರಹ್ಮಯ್ಯನುಂ ಮತ್ತ
[6]ಮು[6]ರುತರೋನ್ನತ ಕಿನ್ನರಬ್ರಹ್ಮದೇವಯ್ಯ
ನಿರದೆಸೆವ ಕನ್ನದ ಬ್ರಹ್ಮಯ್ಯ ಕಾಚಿರಾಜಯ್ಯಂಗಳುಂ [7]ರಂ[7]ಜಿಪ ೪೭

ಸಲೆ ಶೂಲದ ಬ್ರಹ್ಮದೇವಯ್ಯನುಂ ಮತ್ತೆ
ಲಲಿತ ಮೋಳಿಗೆ ಮಾರದೇವಯ್ಯನೆಸೆವ ಸ
ಲ್ಲಲಿತ ಹೊನ್ನಬ್ರಹ್ಮದೇವಯ್ಯನುತ್ತಮಾಂಗದ ಕೇಶಿದೇವಯ್ಯನು

[1] ಮೋ (ಕ) [2] ರುಷ (ಗ) [3] ಚಾಕಲ (ಗ) [4] ಹಾ (ಗ) [5] ಮೆಲ್ಲಿನಿಜ (ಕ)
[6] ಸು (ಕ) [7] ರಾ (ಗ)

ಕಲಕೇತಬೊಮ್ಮಯ್ಯ ಸುರಗಿಚೌಡಯ್ಯಂಗ
ಳಲರ್ವ ಮಸಣಯ್ಯನುಂ ಶ್ವಪಚಯ್ಯನುಂ ಮತ್ತೆ
ವಿಲುಲಿತ ತೆಲುಂಗಜೊಮ್ಮಯ್ಯಂ ತೆಲುಂಗೇಶಮಸಣಯ್ಯನೆಸೆದು ತೋರ್ಪ ೪೮

ವರ ಹಲಾಯುಧ ಮಾರಗೌಡದೇವಯ್ಯಂಗ
ಳುರುಮುಷ್ಟಿಚೌಡಯ್ಯ ಕಾಲಾಗ್ನಿರುದ್ರರುಂ
ಸರಳಹೊನ್ನಯ್ಯಂ ಮಹಾಕಾಲದೇವನುಂ ಪೋತಿದೇವಯ್ಯನೆಸೆವ
ಉರುತರೋನ್ನತ ಗಂಡಗತ್ತರಿಯ ನಾಚಯ್ಯ
ನಿರದೊಪ್ಪುವುರದ ರಾಮಯ್ಯ ಮಧುವಯ್ಯಂಗ
ಳರರೆ ಮೊಲ್ಲೆಬ್ರಹ್ಮದೇವಯ್ಯನುಂ ದಾಸ ಕೇಶಯ್ಯನಲರ್ದು ತೋರ್ಪ ೪೯

ಸರಳಸನದರ ನಾಚದೇವಯ್ಯನುಂ ಮಗುಳ್ದು
ಪರಮ ಹಡಪದ ರೇಚಿದೇವಯ್ಯನುಂ ಮತ್ತ
ಮುರುಗೊಲ್ಲಮಲ್ಲಯ್ಯನುಂ ವೆಲ್ಲಕೊಂಡದ ಮಹಾದೇವನುದ್ಭಟಯ್ಯಂ
ವರ ಕದಿರರೇಮಯ್ಯನಾಮಾತ್ಯಮಲ್ಲಯ್ಯ
ನಿರದೆಸೆವ ನಿಜಲಿಂಗಚಿಕ್ಕಯ್ಯ ಭೋಗಯ್ಯ
ನರರೆ ನಿರ್ಲಜ್ಜಶಾಂತಯ್ಯನುಂ ಗಜ್ಜೇಶಮಸಣಯ್ಯನಣ್ಣ ಬೊಮ್ಮಂ ೫೦

ಕರಮೆಸೆವ ನಿತ್ಯನೇಮದ ಮೌಲಿ ಶಿವನುತಿಯ
ನಿರದೆಸೆಗುಮಜ್ಜದಾಸಯ್ಯನುಂ ಶೋಭಿಸುವ
ವರಗೌಳಭಟ್ಟಾರ ಕೊಂಕಿದೇವರ್ ಮಗುಳ್ದು ಪಂಚಾಗ್ನಿಸೂರ್ಯದೇವಂ
ಸರಳ ದಸರಯ್ಯ ವೊರಟದ ಬಂಕದೇವಯ್ಯ
ವರ ವೀರಕಲ್ಲಯ್ಯ ಗೋವಿಂದಭಟ್ಟಾರ
ಕರುಮಂತೆ ಹಾಟಕೇಶ್ವರ ಮಲ್ಲಿನಾಥ ದೇವರದಾಸಿಗಳ್ ಮತ್ತೆಯುಂ ೫೧

ಲಲಿತ ನಿಂಬಾಣದ ಗಣೇಶ್ವರಂ ಪಿಟ್ಟವ್ವೆ
ಸಲೆ ಚಿಕ್ಕರಮುಗಿದೇವಂ ಸುಂಕಿಬಂಕಯ್ಯ
ನಲಘುದಾರಯ್ಯನುಂ ಕೆಂಭಾವಿಭೋಗಯ್ಯನಮುಗಿದೇವಂ ರಾಜಿಪ
ಮಲಯರಾಜಯ್ಯನುಂ ವೀರಮಾಚಯ್ಯನುಂ
ಲುಲಿತ ಸನ್ಯಾಸಿಮಂಚಯ್ಯ ನಾಗಯ್ಯಂಗ
ಳಲರ್ವ ಶಂಕರದಾಸ ವೀರನಾಚಯ್ಯಂಗಳುರಗರಾಯಣ್ಣ[1]ನೆ[1]ಯ್ದೆ ೫೨

---

[1] ರೆ (ಗ)

ವರವೇಗಿಸಂಗಯ್ಯ ಸೂರಪಾನಿಗಳೆಯ್ದೆ
ಪಿರಿದಮರಗುಂಡಮಲ್ಲಯ್ಯ ಮುದ್ದಯ್ಯಂಗ
ಳುರು ವೀರಕೇದಾರ ಬಾಚಯ್ಯ ಬಾಹೂರ ಬ್ರಹ್ಮದೇಸಯ್ಯಂಗಳು
ಪರಮ ವೀರಬ್ರಹ್ಮದೇವ ಹಂಪಯ್ಯಂಗ
ಳುರುತರೋನ್ನತ ಚಿಕ್ಕಸೋಮಯ್ಯನೆಸೆವ ಭಾ
ಸುರದಮೃತನಾಥನಪ್ಪಯ್ಯನುಂ ಮೞಜಾವದದೇವರೆಯ್ದೆ ಪುತ್ತಂ ೫೩

ಪಿರಿಯ ವಿಜಯಾಪುರದ ಸೋಮಯ್ಯ ರೇವಣಾ
ರ್ಯರುಮಂತೆ ಶಿವನಾಗಮಯ್ಯ ಬಲದೇವರುರು
ತರ ಸಿದ್ಧಬುದ್ಧಯ್ಯ ಬೆಲ್ದೇವಿ ವೇಮನಾರಾಧ್ಯರುಂ ವೀರಯ್ಯನು
ಪರಮ ಶಿವನೂತನಪ್ಪಯ್ಯ ಮಾರಯ್ಯಂಗ
ಳುರು ಸಕಲಿದೇವ ಮಾದರದೂಡದೇವಯ್ಯ
ರೊರೆಯೆ ಗೊ*ಗ್ಗಿ ರಿ*ತಿಯಾಕ್ಕಯ್ಯನುಂ ಮತ್ತಮವಿರತಮೆನಸುಮೊಪ್ಪುತಿರ್ಪ ೫೪

ಮಿನುಪ ಶೂಲಾಯುಧಯ್ಯನುಮಿಂಡೆಶಾಂತಯ್ಯ
ನನಘಬಾಲಬ್ರಹ್ಮದೇವಯ್ಯಮೊಪ್ಪುವಾ
ನನಸು ಕೋಮೂರಬೊಮ್ಮಯ್ಯನುಂ ಮುಂಡುಬೊಮ್ಮಯ್ಯನುಂ ಮತ್ತಮಿನ್ನು
ವಿನಯನಿಧಿ ಸಗರದ ಬ್ರಹ್ಮಯ್ಯನುಂ ಮತ್ತ
ಮೆನಸುಂ ವಿರಾಜಿಸುವ ಮೊಜನವೇಮಯ್ಯನುಂ
ಕೊನರ್ಪ ಕೆಲವೂರಬೊಮ್ಮಯ್ಯನುಂ ಸತ್ಯಸಾಹಿತ್ಯ ಬೊಮ್ಮಯ್ಯದೇವಂ ೫೫

ವರಬುಡ್ಡಬೊಮ್ಮಯ್ಯ ಭಾನುದೇವಯ್ಯಂಗ
ಳುರುಕಲ್ಲಿನಾಥ ಭೀಮಂ ವಿರುಪ ಕಲ್ಲಯ್ಯ
ನರರೆ ಶೂಲದ ಬೊಮ್ಮದೇವಯ್ಯನುಂ ಇಡುಬನಾಥ ತಿಪ್ಪಯ್ಯನೆಸೆವ
ಪಿರಿಯರಕ್ಕಸ ಬೊಮ್ಮದೇವಯ್ಯನುಂ ಮತ್ತ
ಮುರುಲಿಂಗಪೆದ್ದಯ್ಯ ವೀರಸಂಗಯ್ಯಂಗ
ಳೊರೆಯೆ ಮೇಧಾವಿರುದ್ರಂ ಸಿದ್ಧರಾಮಯ್ಯ ಪರಮಹಂಸಯ್ಯಂಗಳು ೫೬

ಸರಳಪೆದ್ದಿಗದೇವನೋಹಿಲಯ್ಯಂಗಳುರು
ತರ ರಾಚಮಲ್ಲಯ್ಯ ರೇಮಯ್ಯ ದೇವಯ್ಯ
ಪರಮನಿರ್ವಿಷಸಂಗ ವೀರಶಿವ್ವಯ್ಯಂಗಳುಂ ಗಂಗಮಲ್ಲಯ್ಯನು

* ಗುಜಿ (ಗ)

ಸಿರಿದುಂ ಕುಮಾರಪಾಲಕಘೂರ್ಜರಂ ಮಗುಳ್ದು
ಕರಮೆ ಜೂಟೂರಮಲ್ಲಯ್ಯ ವೈದುನರಾಮ
ನಿರುಪಮಿತ ಪಿಂಡಸಂಗಯ್ಯ ರಾಜಾರ್ಧದೇವಯ್ಯಂಗಳುಂ ಮತ್ತ್ರಿಯುಂ ೫೭

ಸಲೆ ಶಿವಕುಮಾರಕಂ ಸಂಗಿ[1]ಬೊಪ್ಪ[1]ಯ್ಯನಂ
ತಲಘುರಾಮಯ್ಯ ಸಹಣಿಚಟ್ಟಯ್ಯನೆಸೆವ ಸ
ಲ್ಲಲಿತ[2]ತಾ[2]ಲ್ಪೊಱತಿ ಬೊಲ್ಲಯ್ಯ ಕೊಟ್ಮಾರಬಾಚಯ್ಯ ಶಿವದೇವರೆಯ್ದೆ
ತಿಲಕವ್ವೆಯಂಗರಾ[3]ಯಂ[3] ಚಕ್ರವರ್ತಿ ಮ
ತ್ತಲರ್ವ ಚಾಳುಕ್ಯಭೀಮಂ ರಾಮದೇವಯ್ಯ
ನಿಲೆಹಾಳಬೊಮ್ಮಯ್ಯ ಕುಱುಳುಂತೆ ಡೇವಯ್ಯರೆಸೆವ ಭಾಸ್ಕರದೇವನು ೫೮

ವರ ಕಾಳಿಮರಸನೇಲೇಶಕೇತಯ್ಯನುರು
ತರ ಕೋಟಿವಲ್ಲಯ್ಯ ಗಣದಾಸಿಗಳ್ ಮಗುಳ್ದು
ಸರಳಪಾದಾರಕ್ಕ ವೈಚಿದೇವಂ ವೀರನಾದಯ್ಯನುಂ ಶೋಭಿಪ
ಉರು ವೀರಬಲ್ಲಾಳ ಶಿಖರೇಶಮಲ್ಲಯ್ಯ
ಪರಮ ಮಲ್ಲೇಶ ಸೋಮಯ್ಯಂಗಳುಂ ಬಳಿ
ಕ್ಕರರೆ ಅಲ್ಲಮದೇವ ಚನ್ನಬಸವಯ್ಯ ಸದ್ಯೋಜಾತದೇವರೆಸೆವ ೫೯

ಮಿನುಗುನರ್ಯಮರಾಜನಾತ್ಮದೇವಯ್ಯನುಂ
ವಿನಯನಿಧಿಯೇಕಾಂತರಾಮಯ್ಯ ಗುರುಭಕ್ತ
ಕನದಮಲ ಚಾಂಗು ಬೊ[4]ಲ್ಲ[4]ಯ್ಯಂಗಳುಂ [5]ಮುಗ್ಧ[5]ಸಂಗಯ್ಯನೆಸೆದು ತೋರ್ಪ
ಅನುಪಮನಿರಾಳದೇವಯ್ಯ ಶಿವಮುದ್ದಯ್ಯ
ಘನಸುಪ್ರಸಾದಿ [6]ಬಂ[6]ಕಯ್ಯಂಗಳುಂ ಮಗುಳ್ದು
ನನಸುಜಗದೇವಯ್ಯನಾಣತಿಯಚಂದಯ್ಯ ಭಾನುದೇವಯ್ಯಂಗಳು ೬೦

ಘನಚಿಕ್ಕರಾಚಮಲ್ಲಯ್ಯನುಂ ನಿರ್ಘನ
ಯ್ಯನುಮಂತೆ ವತ್ಸೇಶ ಸೋಮಯ್ಯನುಂ ಬಳಿ
ಕ್ಕನುಪಮದ್ರೋಹೇಶ ಮಲ್ಲಯ್ಯನಾಚಾರ್ಯ ಭೀಮಯ್ಯನುಂ ಮಿಱುಗುವ
ಎನಸುಂ ಪ್ರಸಾದಿದಾಸಯ್ಯನುಂ ಮಗುಳ್ದೆಸೆವ
ನನಸು ಕೆಱಿಯೂರ ದಾಸಯ್ಯನುಂ ಶಿವನಯ್ಯ
ನನಘಮಹಬಲದೇವ ಯೋಗಿದೇವಂಗಳುಂ ಬೈತಲೆಯ ಮಾಯಿದೇವಂ ೬೧

1 ಬೋಪ (ಟ) 2 ಕಾ (ಕ) 3 ಜಂ (ಕ) 4 ಮ್ಮ (ಕ) 5 ಮೂಗ (ಗ)
6 ಬೊಂ (ಕಗ)

ಪಿರಿದಿಂಡಸೋವಣ್ಣ ಧವಳೇಶನಾಮಯ್ಯ
ನಿರುಪಮಿತ ದಂಡಿಪ್ರಸನ್ನಬಸವಯ್ಯಂಗೆ
ಳರರೆ ಸುಂಕದ ಸೋಮ ಜತ್ತರಟ್ಟದ ಸೋವಣಂಗಳುಂ ಮಗುಳ್ದು ಮೆಱೆವ
ವರಗೊಂಡಚಕ್ರವರ್ತಿಯುಮಂತೆ ರಾಜಿಸುವ
ಸರಳನಿಲವೇಗೆಬ್ಬೈಚಯ್ಯನುಂ ಶೋಭಿಸುವ
ಕರಮೆ ಬಿಸಿಗೆಲಸದೇವಣ್ಣನುಂ [1]ಗೊನೆಯಮಾಡ[1]ಯ್ಯನುಂ ರುದ್ರಿಯಣ್ಣಂ ೬೨

ಪಿರಿದೆಸೆವ ಸೆಟ್ಯಾಣಿಸೆಟ್ಟಿಯಯ್ಯಂ ಮಗುಳ್ದು
ಕರಮೆ ಬೆರಲದ ಮಾರದೇವಯ್ಯನುಂ ಮೆಱೆವ
ಪರಮವೀರ ಪ್ರೋಲದೇವಯ್ಯ ವೆಡ್ಡಸೋಮಯ್ಯಂಗಳುಂ ಶೋಭಿಪ
ಸರಳವನಿಪುರದ ಶಂಕರದೇವನುಂ ಮತ್ತೆ
ನಿರುತ [2]ಬಲಗರಮಾಚಿ[2]ದೇವಯ್ಯನೊಪ್ಪುವಾ
ಸರವೂರ ಬಂಕಿದೇವಯ್ಯ ಬೆಟ್ಟದ ದೇವರಸರೆಯ್ದೆ ಮಿಱುಗುತಿರ್ಪ ೬೩

ಸೊಗಯಿಸುವ ಲೆಂಕಮಂಚಣ್ಣ ಧರ್ಮಯ್ಯಂಗೆ
ಳೊಗೆದ ಜೋದಲಮಾಯಣಂ ಪುರದ ಬಸವಣಂ
ಮಿಗೆ ಹಸಿಯೆ ಮಸ್ತಕದ ಮಾಚಯ್ಯನೊಪ್ಪುತಿರ್ಪಾಯ್ದಕ್ಕಿಮಾ[3]ರ[3]ದೇವಂ
ನೆಗಳ್ದ ಹಾವಿನಹಾಳಕಲ್ಲಿದೇವಯ್ಯನಿಂ
ಪೊಗೆವ ಪಡಿಹಾಱಬಸವಣ್ಣ ಪಲ್ಲವರಾಯ
ರಗಲದೆಸೆದಿರ್ಪ ಗೊಲ್ಲಳರಾಯನೆಯ್ದೆ ಗಂಗಾಪುರದ ಬಸವಣ್ಣನು ೬೪

ಪಿರಿದಿಂಗುಳಿಗೆ ವೈಜಕವ್ವೆ ಶಂಕರಸೆಟ್ಟಿ
ಸರಳ ಕಂಗಳಬಸವನವಗಡದ ಬಸವಯ್ಯ
ನುರು ಸಿಗುಱಚಂದಯ್ಯ ಶಿವರಾತ್ರಿಸಂಕಣಯ್ಯಂಗಳುಂ ಮತ್ತೆ ಮೆಱೆವ
ಉರುತರ ಶ್ವೇತಯ್ಯನನಿಮಿಷಯ್ಯಂ ಮಗುಳ್ದು
ವರವೀರಗುಡ್ಡವ್ವೆ ರೇಕವ್ವೆ ಧವಳಯ್ಯ
ನರರೆ ಚಾಕಲದೇವಿ ಕಮಲವ್ವೆ ವೀರರೆಮ್ಮವ್ವೆ ಬೊಂತಾದೇವಿಯುಂ ೬೫

ಮಿನುಗುವುಡುತಡಿಯ ಮಹದೇವಿಯಕ್ಕಂ ನಾಡೆ
ನನಸು ರೆಬ್ಬವ್ವೆಯುಂ ಬಿಜ್ಜಮಹದೇವಿಯುಂ
ವಿನಯನಿಧಿ ಸತ್ಯಕ್ಕನಮ್ಮವ್ವೆ ನಿಂಬವ್ವೆ ಕೊಡಗೂಸು ವೈಜಕವ್ವೆ

---

[1] ಕೊನೆಯ ಮಾಕ (ಗ) [2] ಜಲಗರಮಾಚ (ಗ) [3] ೦ (ಗ)

ಘನ ಪೊಟಲಕೆಱತ ವೀರಜೋಳವ್ವೆ ಯಾದವ್ವೆ
ಯೆನಸುವೊರಸವ್ವೆಯೆನಲೆಸೆವ ಗಣಪುಂಗವರ
ಘನತರ ಸಹಸ್ರನಾಮಂಗಳೀ ತ್ರಿಭುವನದೊಳತಿಸೇವ್ಯಮಾಗಿ ತೋರ್ಕುಂ ೬೬

ಘನತರ ಸಹಸ್ರಗಣನಾಮಮೆಂಬೀ ಸ್ತವಮ
ನನುನಯಂ ಭಕ್ತಿಯಿಂದಾವನೋರ್ವಂ ಪಠಿಪ
ನನುನಯಂ ಕೇಳ್ವನಲಸದೆ ಬರೆದಪಂ ಬಳಿಕ್ಕವನೆಯ್ದೆ ಲೋಕದೊಳಗೆ
ಕನದಮಲಭಕ್ತಿವಿಸ್ಫೂರ್ತಿವಡೆವಂ ಶುಭಮ
ನೆನಸುವೊಂದುವನಘಕದಂಬಂಗಳಂ ತವಿಪ
ನನುದಿನಂ ಪರಮೇಶ್ವರಪ್ರಸನ್ನತೆವೊಡೆದು [1]ಸೊಕ[1]ಮಿರ್ಪನವನಿಯೊಳಗೆ ೬೭

ಪಿರಿದುಮೀ ಸ್ತೋತ್ರಮಂ ಪಠಿಸುತಿರೆ ದುಷ್ಕರ್ಮ
ಮಿರದಳಿಗುಮಾವಗಂ ದುಃಸ್ವಪ್ನ ದುಶ್ಶಕುನ
ಪರಮದುಗ್ರಗ್ರಹದೋಷ ಪಾವಕಾಹಿಜ್ವರಂಗಳ ಭೀತಿ ಸಂದೋಹವು
ಮರಳಿ ವೃಶ್ಚಿಕಚೋರರಪಮೃತ್ಯುವಿನ ಬಾಧೆ
ಯಿರದಳಿಗುಮರಿಪಮನ ಭೂತ ಪವಿ ದಾರಿದ್ರ್ಯ
ನರಪರಿಂದೊಗೆದ ಭಯವಿತತಿಗಳ್ ನಿಮಿಷಾರ್ಧದೊಳ್ ಕೆಟ್ಟುಪೋಕುಮನಿಶಂ ೬೮

ಮಗುಳ್ದು ಧನದಿಚ್ಛೆಯಿಂದೀ ಮಹಾಸ್ತೋತ್ರಮಂ
ಸೊಗಸಿನಿಂ ಪಠಿಸೆ ಧನಮೆಯ್ದುಗುಂ ಪುತ್ರಾರ್ಥಿ
ಬಗೆದು ಪಠಿಸಲ್ ಪುತ್ರರೊಗೆಗುಮಂತೆಯ್ದೆ ಶತ್ರುಕ್ಷಯಾರ್ಥಿಗಳಳ್ತಿಯಿಂ
ತಗುಳ್ದು ಪಠಿಸಲ್ ವಿಪಕ್ಷಕ್ಷಯಂ ಸಲೆ ಅಕ್ಕು
ಮಗಲದೇಗಂ ಭಕ್ತಿರತಿಗಳುಚ್ಚರಿಸಲ್ಕೆ
ನೆಗಳ್ದ ಸದ್ಭಕ್ತಿ ಕೈಸಾರ್ಗುಮಾ ಮುಕ್ತಿಚ್ಛೆಯಿಂ ಪಠಿಸೆ ಯುಕ್ತಿಯಕ್ಕುಂ ೬೯

ಇಂತು ಸಂತೋಷದೆ ಸಹಸ್ರಗಣನಾಮಮಂ
ಕಂತುಹರನಿಭ ಪಂಡಿತೇಶನುಚ್ಚರಿಸಿದಂ
ಮುಂತಿದಂ ಪಂಚಾಕ್ಷರೀಮಂತ್ರದಂತೆ ಮನಮೊಲ್ದೇಗಳುಂ ಪಠಿಯಿಪಂ
ಅಂತೆ ಜನನೀಜಠರ[2]ಪೀಠಕ[2]ಮನೆಯ್ದನೋ
ರಂ[3]ತಿದುಂ[3] ಪರಮಾರ್ಥಮಕ್ಕುಮುದಱಿಂದಾವ
ನೆಂತೆ ಪಠಿಸಲ್ ಸರ್ವಕಾರ್ಯಸಿದ್ಧಿಗಳಕ್ಕುಮವನಿಯೊಳವಂಗೆ ಸತತಂ ೭೦

---

[1] ಸುಖ (ಗ) [2] ಪಿಠರ (ಗ) [3] ತಿಂದು (ಗ)

ಇಂತುಱಿ ಸಹಸ್ರಗಣನಾಮಮಂ ಪಂಡಿತೇ
ಶಂ ತಗುಳ್ದು ಪಠಿಸುತ್ತೆ ಭಕ್ತರೊಡಗೂಡಿ ಮಿಗೆ
ಸಂತಸಂದಳೆಯುತಮರಾರಾಮನಗರಮಂ ಸಾರ್ತಂದು ಪೊಕ್ಕು ಬಳಿಯಂ
ಮುಂತೆ ತನ್ನಗರದೊಳ್ ಶೋಭಿಸುತ್ತಿರ್ಪ ನಿ
ಶ್ಚಿಂತನನಮರೇಶ್ವರನ ಕಂಡು ಸದ್ಭಕ್ತಿಯಿನ
ನಂತಬಗೆಯಿಂದಮಮರೇಶಾಷ್ಟಕದೆ ಪೊಗಳ್ದನಾ ಶಿವನ ಸನ್ಮೂರ್ತಿಯಂ ೭೧

ಮಗುಳ್ದು ಸದ್ಭಕ್ತಪುಂಗವಸಮಿತಿಗೂಡಿ ತೊ
ಟ್ಟಗೆ ಮುಂದೆ ತೋರ್ಪ [1]ತ[1]ದ್ದೀರ್ಘಿಕಾಮಧ್ಯದೊಳ್
ಸೊಗಸಿನಿಂ ಪಂಡಿತೇಶಂ ನಿಂದು ಗಣವರರ್ಗೆ ಬಿನ್ನೈಸಿದಂ ಭಕ್ತಿಯಿಂ
ಬಗೆಯಲೀ ನದಿಯ ಮಧ್ಯಕ್ಕೆ ತೆಂಕಣದಿಕ್ಕು
ನೆಗಳ್ದ ಚೋಳನ ಭೂಮಿಯುತ್ತರಾಶೆಯೆನೆ ನಸು
ತಗುಳ್ದು ಮತ್ತಿನ ನೃಪನ ದೇಶಮದಱಿಂದೆನ್ನ ಭಾಷೆ ಸಲೆಸಂದಿತೀಗ ೭೨

ಮಿನುಪ ವೆಲ್ನಾಡಮಂಡಲ ಸೀಮೆಯಂ ಕಳಿದೆ
ನೆನೆಸುಮಿನ್ನೆನ್ನ ನಯನಂಗಳಂ ನಿಮ್ಮ ಕೃಪೆ
ಯನುವಿನಿಂ ಪಡೆವೆನೆನುತಲ್ಲಿಯೇ ಗಣವರರ್ಗೊಡ್ಡೋಲಗಮನಳ್ತಿಯಿಂ
ಅನುನಯಮೊಡರ್ಚೆ ತದ್ಭಕ್ತಸಮುದಾಯಕ್ಕೆ
ವಿನಯದಿಂದಂ ತುಳಿಲ್ಗೆಯ್ದಿನ್ನೆವರೆಗಮಾ
ಮನುಜಪತಿ ಜವಹುರಂಬುಗುವನೆನುತುಂ ಬಿನ್ನಯಿಸುತಿರ್ಪ ಸಮಯದೊಳಗೆ ೭೩

ಪಡಿಹಾಱಿಯೊರ್ವನೆಯ್ತಂದು ತಚ್ಚೋಳನೆಡೆ
ವಿಡದಡರಿದಂ ತೂಣಕೋಣಕೋಡುಗಳನೆನು
ತೊಡನೆ ಬಿನ್ನೈಸಿದಂ ತದ್ಭಕ್ತಸಂದೋಹಕಣಿಯರಂ ಸಮ್ಮದದೊಳು
ಮೃಡಭಕ್ತರಾ ವಾರ್ತೆಯಂ ಕೇಳ್ದು ಸಂತಸದ
ಕಡಲೊಳೀಸಾಡುತಿರೆ ತತ್ಪಂಡಿತೇಶ್ವರಂ
ಸಡಗರದೆ ಭಕ್ತರ್ಗೆ ಭೂತಿವೀಳಯವಿತ್ತು ವಂದನಂಗೆಯ್ದು ಬಳಿ[2]ಯಂ[2] ೭೪

ಪಿರಿದು ಶಾಪಾನುಗ್ರಹೋನ್ನತಾಮಲಕೀರ್ತಿ
ಪರಮಸನ್ಮಾರ್ಗಾನುವರ್ತಿ ಸುವ್ರತಪೂರ್ತಿ
ಯುರುತರಾರಾಧ್ಯಸನ್ಮೂರ್ತಿ ವಿತವಿನತಾರ್ತಿ ಪಂಡಿತೇಶಂ ಭಕ್ತಿಯಿಂ

---

[1] ಸ (ಕ) [2] ಕಂ (ಗ)

ನಿರುಪಮ ಪ್ರಥಮರುದ್ರರ ಪುರಾತನ ನೂತ್ನ
ಸರಳಭಕ್ತರ ಚರಣಸರಸೀರುಹಂಗಳಂ
ಕರಮೆ ಮನದೊಳ್ ಜಾನಿಸುತ್ತಕ್ಷಿರಂಧ್ರವಮಂ ಮುನ್ನೆ ಬಾಸಣಿಸಿ ಮೆಱೆವ ೭೫

ಪರಮ ಪ್ರಸಾದಪ್ರಸೂನಾಂಬರಮನೊಯ್ಯ
ನಿರದೆ ತೆಗೆವನಿತಱೊಳ್ ಪ್ರತ್ಯಕ್ಷಕರುಣದಿನೊಗೆದು (?)
ವರರೆ ಶಿವಭಂಡಾರ ಮನೆಯೊಳಗೆ ಶೋಭಿಸುವ ಮಾಣಿಕ್ಯಯುಗಳದಂತೆ
ಗುರುಪಂಡಿತೇಶೋರ್ಧ್ವನಯನಯುಗ್ಮಂ ಬಳಿಯ
ಮುರುತರೋನ್ನತಹರ್ಷದಿಂ ಭಕ್ತಸಮಿತಿ ನಿ
ರ್ಭರದೆ ಪುಳಕಂಬೆತ್ತು ಕೀರ್ತಿಸಿದರಾ ಪಂಡಿತೇಶ್ವರನ ನಿಜಮಹಿಮೆಯಂ ೭೬

ಸದಮಲಪ್ರಚುರವಿಶ್ರುತ ಪರಮಭಕ್ತಗಣ
ಪದಸರೋರುಹಸಾಂದ್ರ ಮಕರಂದಪಾನ ಸ
ಮ್ಮುದಿತ ಚಂಚಚ್ಚಂಚರೀಕನನವರತ ಪಂಚಾಕ್ಷರೀಪ್ರಸಿತಹೃದಯಂ
ವಿದಿತ ಮಂಜುಳನೀಲಕಂಠಾಹ್ವಯಂ ಮನೋ
ಮುದದೆ ಪೇಳ್ದುರುತರಾರಾಧ್ಯಚಾರಿತ್ರದೊಳ
ಗಿದು ಪಂಡಿತಾರಾಧ್ಯರೂರ್ಧ್ವನಯನಂಗಳಂ ಪಡೆದ ಕಥನಂ ಭಾವಿಸೆ ೭೭

# ಐದನೆಯ ಸಂಧಿ

## ನಯನಂಗಳ ಪಡೆದ ಪುರಾತನರ ಕಥೆ

ಸೂಚನೆ : ಮಿನುಪ ನಯನಂಗಳಂ ಮನಮೊಸೆದು ಶಂಭುವಿಂ
ದನುನಯಂ ಪಡೆದ ಶರಣರ್ಕಳೊಳ್ಗತೆಗಳಂ
ವಿನಯದಿಂ ಕೇಳ ಸೂರಾಮಾತ್ಯ ಶರಣಸಂದೋಹಕಾದಿತ್ಯಕುಜನೆ

ವಡಬಶಿಖಿಕಾಂತಿಯಂ ಕಿಡಿಸುತ್ತೆ ಸಂತತಂ
ಪಡಪಿನಿಂದಿಂದುಲೇಖೆಯ ತೊಲಗಲೀಯದು
ಗ್ಗಡದಮರದೈತ್ಯರಿಂ[1]ದು[1]ಲಿಯಿಸುವ ಮಂದರಶ್ರೀಯುಮಿಲ್ಲದೆ ಮತ್ತೆಯುಂ
ಸಡಗರದ ಕೇಶಾತ್ಮತೆಯಿನೊಪ್ಪುತಿರ್ಪ ಸೊಂ
ಪಡರ್ದ ಹಿಮಕರಕರಾಳಾಕೃತಿತ್ವದಿನೆಯ್ದೆ
ಬಿಡದಬ್ಧಿಯಂತೆಸೆವ ಮಕುಟದಿಂ ಶೋಭಿಸುವ ಗುರುನೀಲಕಂಠ ಜಯತು ೧

ಪೊಸಗದಿರ ಗಡಣದಿಂ ದಿನಮಣಿಯ ಕಾಂತಿಯಂ
ಮಸುಳಿಪ್ಪ ಪಂಡಿತೇಶೋದ್ವಾಕ್ಷಿಗಳ್ ನಾಡೆ
ಸಸಿಯ ಕಳೆಗಳೊ ಮುಕ್ತಿಗೋಳಕಂಗಳೊ ಭಕ್ತಿದರ್ಪಣಂಗಳೊ ಭಾವಿಸೆ
ಎಸೆವಮೃತಪಿಂಡಂಗಳೋ ನಿರ್ಮಲಜ್ಞಾನ
ವಿಸರಬೀಜಂಗಳೋ ಭಕ್ತಿವನಿತೆಯ ಸೊಬಗು
ಮಿಸುಪ ನಯನಂಗಳೋ [2]ತ[2]ನ್ನೊಳಗೆ ತೋಱುವೀಶಾಂಘ್ರಿನಖಧಾವಲ್ಯಮೊ ೨

ಪರ ನಯನಕಾಂತಿರಾಗಮೊ ಭಕ್ತಿಮೇರುವೊ
ಳ್ಕರಮೆಸೆದುತೋರ್ಪ ಚಿಂತಾಮಣಿಗಳೋ ಮತ್ತೆ
ಸರಳ ನಿಜಹೃದಯದೊಳ್ ನೆಲಸಿರ್ಪ ಪರಶಿವನ ಪದಶೋಣಶತಪತ್ರದ
ನಿರುಪಮಾರುಣಿಮಕಾಂತಿಯೊ ನೋಡಿಮೆಂದು ಬಂ
ಧುರಭ[3]ಕ್ತ[3]ನಿಕರಮೊಲ್ದೋರೋರ್ವ ಶರಣರ್ಗೆ
ಹ[4]ರಿಸ[4]ದಿಂ ತನ್ನೇತ್ರಯುಗ್ಮಮಂ ತೋಱಿಸುತೆ ನಲಿದಾಡುತಿರ್ದರೊಸೆದು ೩

---

[1] ಚ (ಗ)  [2] ನ (ಗ)  [3] ಕ್ತಿ (ಗ)  [4] ರುಷ (ಗ)

ಸ್ಫುರಿತ ಕಮನೀಯಂಗಳಾಗಿ ಬೆಳತಿಗೆಬೆಳಗ
ನಿರದೆಂಟುದೆಸೆಗಳೊಳ್ ಬಿಚ್ಚಳಿಸಿ ಥಳಥಳಿಸು
ತಿರಲ[1]ವಂ[1] ಕಂಡು ಪುರಜನ ಮುನಿಜನಂಗಳುಂ ತೊಳಗುವೀ ನಯನಗಳು
ಪುರಹರನ ನಯನಶಿಶುಗಳೊ ಎಂದು ಪೊಗಳುತಿರೆ
ಹರಗಣಂಗಳು ಮಗುಳ್ದು ಮಗುಳ್ದೀಕ್ಷಿಸುತ್ತೆ ಕಡು
ಹ[2]ರಿಸ[2]ದಿಂ ಪಂಡಿತೇಶ್ವರನೂರ್ಧ್ವನಯನಮಂ ನುತ್ತಮಿವರಿಂತೆಂದರು ೪

ಹರಕರುಣದಿಂದೆ ನೇತ್ರಂಬಡೆದವರ್ ನೋಡೆ
ಪಿರಿದುಮೊಳರಿಂತೂರ್ಧ್ವನಯನಮಂ ಪಡೆದವರ
ಧರಣಿಯೊಳ್ ಕಾಣೆವೆಂದುಂ ಮುನ್ನೆ ಕಮಲಾಕ್ಷನತಿಕೋಪದಿಂದೆ ಮಸಗಿ
ವರ ಜಲಂಧರನೆಂಬ ದೈತ್ಯನೊಳ್ ಕಾದೆ ತ
ತ್ಪುರವೈರಿ ತನ್ನ ಪನ್ನತಿಕೆಯಂ ನೆಱಮುಱಿದು
ಮರಳಿ ಹರಿಯಂ ಪಿಡಿದು ತಿರುಪಿ ಗಗನಕ್ಕಿಡಲ್ ಸಿಲ್ಕಿಯಾಗಸದೊಳಲ್ಲಿ ೫

ಪಿರಿದು ಮೊಱೆಯಿಡುತಿರ್ದನಾ ವಿಷ್ಣು ಕಣ್ಗೆಟ್ಟು
ಭರದೆ ಷೋಡಶಸಹಸ್ರಾಬ್ದಂಬರಂ ಬಳಿ
ಕ್ಕಿರದದಂ ನಂದಿಕೇಶ್ವರನಿಂದೆ ಶಿವನಱಿದು ತದ್ದೈತ್ಯನಲ್ಲಿಗೆಯ್ದಿ
ಹರನುಸುರ್ದನಾ ಜಲಂಧರನೆಲೇ ದೇವಾರಿ
ಹ[1]ರಿಸ[1]ದಿಂ ಕಾಳೆಗಕ್ಕನುವಾಗು ಕಯ್ದುಗೊಳ್
ಕರಮೆ ಎನ್ನೊಳ್ ಪೊಣರ್ದು ನೋಡೆಂದು ಶಂಕರಂ ನುಡಿಯಲತಿಕೋಪದಿಂದಂ ೬

ಅಸುರನುಸುರ್ದಂ ವೃದ್ಧತಾಪಸರ್ಗೇತಕ್ಕೆ
ಮಿಸುಪ ಭಂಡಣದ ಮಾತೇಕೆ ನಿನ್ನಯ ಕೂಡೆ
ಮಸಕದಿಂ ಕಾದುವೊಡೆ ಕೈದುವೇತರ್ಕೆ ಬಱುಗೈಯೊಳಗೆ ನಿನ್ನನರಿವೆಂ
ನಿಸದವೆಂದಮರಾರಿ ನುಡಿಯೆ ಹರನಿಂತೆಂದ
ನೊಸೆದು ಶಸ್ತ್ರವಿಹೀನರೊಡನೆ ಯುದ್ಧಂಗೆಯ್ವ
ದಸಮ ಸಮರನ್ಯಾಯಮಲ್ತೆನುತ್ತಬ್ಧಿಯೊಳ್ ತನ್ನೆಡದ ಕಾಲ ಬೆರಲಿಂ ೭

1 ಡಂ (ಗ) 2 ರುಷ (ಗ)

ತಿರುಪಲ್ಕೆ ಕೋಟಿಸೂರ್ಯಪ್ರಭೆಯನಿಳಿಸುತ್ತೆ
ಭರದೆ ಚಕ್ರಾಕಾರದಿಂ ತೋಱದತ್ತು ನೀ
ನಿರದಿದಂ ಪಿಡಿದೆನ್ನೊಡನೆ ಯುದ್ಧಮಂ ನಿರ್ಮಿಸೆಂದು ಹರನಸುರಲೊಡನೆ
ಸುರವೈರಿ ಕೈಗಳಿಂದೆತ್ತಿ ಬಿಣ್ಪೊಱೆಯ ನಿ
ರ್ಭರವೆ ನೆಗಪುವ ಪಾಂಗಿನಿಂ ಕೊರಲ್ವರೆಗಮು
ದ್ಧುರಸತ್ವದಿಂದೆತ್ತಲನಿತಱೊಳಗದು ಜಲಂಧರಕಂಧರಂದರಿದುದು ೮

ಅನಿತಱೊಳಗಾ ವಿಷ್ಣು ಸಿಂಧುರಾಸುರಮುಖ್ಯ
ದನುಜಕುಲದಳನನಂ ಖಂಡಪರಶುವನೊಲ್ದು
ವಿನಯದಿಂ ಭಜಿಸಿ ತಚ್ಚಕ್ರಮಂ ಪಡೆದು ಮತ್ತದಱ ಬಲದಿಂದಸುರರಂ
ಇನಿತು ಕೆಲಹಂ ಪಾರ[1]ದಿ[1]ಕ್ಕಿದಂ ಭೂಮಿಯೊಳ್
ಮನಸಿಜಹರಾನುಮತದಿಂ ವಿಷ್ಣು ಚ[2]ರಿ[2]ಸುತಿರ
ಲನಘಂ ದಧೀಚಿಯೊಡನೊಂದುದೆವಸಂ ವಿಷ್ಣು ಯುದ್ಧಂಗೆಯುತ್ತೆ ಮುಳಿದು ೯

ಭರದಿನಾ ಚಕ್ರಮನಿಡಲ್ ದಧೀಚಿಯ ಮೇಲೆ
ಪಿರಿದು ಕೋಪದೊಳೆ ತಚ್ಚಕ್ರಮನವಂ ಮುಱಿಯೆ
ಮರಳಿ ದನುಜರ್ ವಿಜೃಂಭಿಸುತಿರಲ್ ತದ್ವಿಷ್ಣು ಮುನ್ನಿನಂತೆವೊಲೀಶನಂ
ಹ[3]ರಿಸ[3]ದಿಂ ಭಜಿಸಿ ಚಕ್ರಂಬಡೆವೆನೆಂದು ಭಾ
ಸುರ ಕಮಲಸಾಹಸ್ರಮಂ ಷಡಕ್ಷರಿಗೂಡಿ
ಹರನ ಸಾಸಿರಪೆಸರ್ಗಳಂ ಪಠಿಸುತೊಂದೊಂದು ಕಮಲದೊಳ್ ಶಿವಚರಣಮಂ ೧೦

ಮಿಗೆ ಭಕ್ತಿಯಿಂ ಪೂಜಿಸುತ್ತಿರಲ್ ಬಳಿಕೊಂದು
ನೆಗಳ್ದ ಕಮಲಂ ಕೊಱತೆಯಾಗೆ ತನ್ನಲರ್ಗಣ್ಣ
ಸೊಗಸಿನಿಂ ಕಿಳ್ತು ಶಿವನಡಿಗಿತ್ತು ಚಕ್ರನೇತ್ರಂಗಳಂ ವಿಷ್ಣು ಮುನ್ನೆ
ಬಗೆಯೆ ಪಡೆದನೆನುತ್ತೆ ವಾಕ್ಯಮುಸುರ್ಗುಂ ನಾಡೆ
ತಗುಳ್ದುದಾಸ್ಯಾದೆನುತೆ ತದಸಂಭವಃ ಎನು[4]ತ
ಮ[4]ಗಲದುಱ ನೇತ್ರಮುತ್ಪಾಟ್ಯ ಎನುತಿಂತು ನೇತ್ರಂಬಡೆದರುಂಟು ಮತ್ತಂ ೧೧

ವರ ಕಾಳಿದಾಸನೀ ಸ್ಥಿತಿಯಱತು ಮುನ್ನೆ ಹರಿ
ಕರಮುಗ್ರತಪಮಂ ನಿರ್ಮಿಚೆ ಶಿವನಿಂದೆ ಬಂ
ಧುರಮಾಗಿ ನಯನಮೊಂದಂ ಪಡೆದನಂತೆ ಗಡ ಶಿವನಮಂಗಿತ್ತನಂತೆ

---

[1] ಲಿ (ಗ) [2] ಲಿ (ಕ) [3] ರುಷ (ಗ) [4] ತ್ತ।ಮ (ಟ)

ಪಿರಿದುಮೊಳ್ಪಿತು ವಿಶ್ವತಶ್ಚಕ್ಷು ಎನುತೆ ಭಾ
ಸುರದಿಂದೆ ಸರ್ವತೋಕ್ಷಿಶಿರೋಮುಖಂ ಎನು
ತ್ತಿರದಾವಗಂ ವೇದಮುಲಿಯುತಿರೆ ತನ್ಮಹಾದೇವಪ್ರಸನ್ನತ್ವದಿಂ ೧೨

[1]ಸ[1]ರಿರವೆಲ್ಲಂ ಮೂಱುಮೂಱು ಕಣ್ಣಂ ಪಡೆಯ
ದುರುನೇತ್ರಮೊಂದನೀಶ್ವರನಿಂದೆ ಪಡೆವುದಿದು
ಕರವೊಳ್ಪಿತೆನುತೆ ತನ್ನಯ ಕಣ್ಗಳಂ ಕಿಳ್ತು ಕಾಳಿದಾಸಂ ಮುದದೊಳು
ಹರಚರಣಯುಗ್ಮದೊಳ್ ನಿರಿಸಿ ಶಂಕರನಿಂದೆ
ಮರಳಿ ಕಣ್ಗಳ ರಾಶಿಯಂ ಪಡೆದನಾ ಕಥಾ
ವಿರಚನೆಯದೆಂತೆನಲ್ ಮುನ್ನೆ ಭಲ್ಲಟ ಭೋಜ ಗೋಪಾಲಿಗಳ್ ಮತ್ತೆಯುಂ ೧೩

ವರವೀರ ಕರ್ಪೂರಭಾನು ಭಾರವಿ ಮತ್ತೆ
ಭರತ ಶಂಕರ ಶಾಕಟಾಯನರ್ ಭವಭೂತಿ
ಕರಮೆಸೆವ ರುದ್ರಭಟ್ಟಂ ಮಾಘ ಜಯಕೀರ್ತಿಗಳ್ ಮುಖ್ಯಕವಿವರರೊಳು
ಪಿರಿದು ಪೆಸರುಳ್ಳ ಬಾಣಂ ಕಾಳಿದಾಸನುರು
ತರ ಮಯೂರಂ ನಿಚ್ಚಲುಂ ತಮ್ಮೊಳೋರೋರ್ವ
ರಿರದೆ ಕವಿತಾಧಿಕ್ಯತೆಗೆ ಪೋರ್ದು ಪೋರ್ದು ಜಯಕಾಂಕ್ಷೆಯಿಂದಂ ಮಯೂರಂ ೧೪

ಜನಸಮೂಹಂ ಬುಧಪ್ರತತಿ ನೋಡುತ್ತಿರಲ್
ಮನ[2]ಮಲರ್ದು[2] ಸೂರ್ಯಶತಕಂ[3]ಬೇ[3]ಳೆ ಭಾಸ್ಕರಂ
ಸನಯದಿಂ ಪ್ರತ್ಯಕ್ಷನಾಗಿ ನುಡಿದಂ ನಿನ್ನ ಪೊರೆಗೆ ತೋಱುವ ಕುಷ್ಠನು
ವಿಃನುಪೆನ್ನ ಕಿರಣದಿಂದಾಚ್ಛಾದಿಪೆಂ ನಿನ್ನ
ತನುವಿನೊಳಗಿರ್ಪ ಕುಷ್ಠಮದಭವನಿಂದಲ್ಲ
ದಿನಿತಳಿಯದಾರಿಂದೆ ಮುನ್ನೆನ್ನ ಕುಷ್ಠನಾನೀಶನಿಂ ಪರಿಹರಿಸಿಡೆಂ ೧೫

ಪಿರಿದು ಮಾರ್ತಾಂಡಭಾನೋಃ ಕುಷ್ಠಮೆಂದು ಮು
ನ್ನೊರೆದ ವಾಕ್ಯವೆ ಮಾನಮದಱಿಂದೆ ನೀಂ ಚಂದ್ರ
ಧರನ ಮಱೆವುಗೆ ನಿನ್ನ ಕುಷ್ಠಮಳಿಗುಂ ಎಂದು ರವಿ ಪೇಳಲಾ ಮಯೂರಂ
ಗಿರಿಜಾಧಿಪನ ಮಯೂರಸ್ತೋತ್ರದಿಂ ನುತಿಸಿ
ನಿರುತಮಂತಃಕುಷ್ಠ ನೀಗಿದಂ ಮತ್ತದಂ
ವರ ಭಟ್ಟಬಾಣನೀಕ್ಷಿಸಿಯಿದಾವ[4]ರಿ[4]ದೆಂದು ತ[5]ನ್ನ[5] ಕೈಗಳ ತುಂಡಿಸಿ ೧೬

---

[1] ಶ (ಗ) [2] ಮೊಲ್ದು (ಗ) [3] ಪೇ (ಗ) [4] ದರಿ (ಗ) [5] ನ್ನಯ (ಗ)

ಪುರಹರನ ಮುಂದಿರಿಸಿ ಬಾಣಗದ್ಯಮನುಸುರ್ದರ್
ಕರಯು[1]ಗಂಗಳ್[1] ಮುನ್ನಿನಂತೆ ಪಡೆದಂ ನೋಡು
ತಿರೆ ಪುರಜನಂ ಬೆಕ್ಕಸಂಬಟ್ಟು ಬಿಸವಂದದಿಂ ಮತ್ತಮಿದನೀಕ್ಷಿಸಿ
ಕರಮಿದೇಂ ಚೋದ್ಯಮೆನುತಂ ಕಾಳಿದಾಸನತಿ
ಭರದಿಂದೆ ತನ್ನೆರಳ್ಕಣ್ಗಳಂ ಕಿಳ್ತು ಶಂ
ಕರಪದಾಂಬುರುಹಕರ್ಪಿಸಿ ಭಕ್ತಿಯಿಂ ಕಾಳಿದಾಸಗದ್ಯಂ[2]ಬೇ[2]ಳಲು ೧೭

ಪರಮೇಶ್ವರಂ ಮೆಚ್ಚಿ ತನ್ನೇತ್ರಯು[3]ಗ್ಮ[3]ಮಂ
ಹ[4]ರಿಸ[4]ದಿಂ ಕುಡಲಿದೇಂ ಚೋದ್ಯಮೇ ಕೊಟ್ಟುದುಂ
ಮರಳೀವುದೆನುತೆ ಶಿವನಿಂ ನೇತ್ರರಾಶಿಯುಂ ಬಿಸವಂದಮಾಗಿ ಪಡೆದು
ಧರಣಿಯೊಳಗುಳ್ಳ ಜಾತ್ಯಂಧರಂ ಕರಸಿ ಭಾ
ಸುರ ನೇತ್ರರಾಶಿಯೊಳ್ ತಾನೆರಳ್ಕಣ್ಗಳಂ
ಧರಿಸಿಕೊಳುತುಂ ಮತ್ತಿನಂಧರ್ಗೆ ಕಣ್ಗಳಂ ಕುಡುತಿರ್ದನತಿಮುದದೊಳು ೧೮

ಜನರೆಯ್ದೆ ಕಾಳಿದಾಸನ ಕೀರ್ತಿಸುತ್ತಿರಲ್
ಘನಕಾಚಕಾಮಲಾವೃತಮುಖ್ಯಮಾದ ನೂ
ತನ ನಯನರೋಗಿಗಳ್ಗೊಲ್ದು ಕಣ್ಗಳನೀಯುತಿರಲವರೊಳೊರ್ವಭಕ್ತಂ
ಎನಸುಮಂಬ್ಯಣ್ಣನೆಂಬಂಧಕಂ ಕಾಳಿದಾ
ಸನ ಕಯ್ಯೊಳಂಬಕಂಗಳ ಪಡೆವುದನುಚಿತಂ
ನನಸವನವೊಲ್ ವಿದ್ಯೆಯೆನಗಿಲ್ಲದಿರ್ದೊಡಂ ಶಿವಭಕ್ತಿಯೆ[5]ನ್ನೊ[5]ಳುಂಟು ೧೯

ಸ್ತುತಿನಿಂದೆಯೆಂಬೆರಡು ದೇವದೇವೇಶಂಗೆ
ಹಿತಮಕ್ಕುಮುಭವಸದ್ಭಕ್ತಿಯುಂಟಾಗಿರಲ್
ಸತತಮುದಱಿಂದೆನಗೆ ವಿದ್ಯೆಯಿಲ್ಲದೊಡೀಶ್ವರಂಗೆ ವ್ಯೆದುನತನದೊಳು
ಅತಿಭಕ್ತಿಯಿಂ ಸರಸವಾತುಗಳನಾಡುತ್ತೆ
ಮತಿಯ ಮೊನೆಯೊಳ್ ಶಿವನ ನಿಲಿಸಿಕೊಂಡೇಗಳುಂ
[6]ಹಿ[6]ತದೆ ಗಿರಿಶನ ನಗಿಸಿ ಕಣ್ಗಳಂ ಪಡೆವೆನೆನುತುದ್ಯುಕ್ತನಾಗಿ ನಿಸದಂ ೨೦

ಮಿಗೆ ಕೊಟ್ಟಿದೊನೆ ಶಂಕರೇಶ್ವರಾಲಯದ ಸೊಂ
ಪೊಗೆದು ತೋರ್ಪಪದಟಿ ಪಿಂಗಡೆಗೆಯ್ದಿ ಹಾಸ್ಯರಸ
ಮೊಗೆವವೊಲನೇಕಪದ್ಯಂಗಳಂ ಶಿವನ ಕುಱಿತುಸುರೆ ಪರಮೇಶನೊಲ್ದು

---

[1] ಗಳಮಂ (ಗ) [2] ಪೇ (ಕ) [3] ಗಳ (ಕ) [4] ರುಷ (ಗ) [5] ಮ್ಮೊ (ಕ)
[6] ಧೃ (ಗ)

ನಗೆಮೊಗಂಗೂಡಿ [1]ಯಂ[1]ಬ್ಯಣ್ಣನಂ ನುಡಿದನೆಲೆ
ಸೊಗಪೆನ್ನಯೇ ಮುದ್ದುಮೈದುನನೆ ಹಾಸ್ಯಮಂ
ಮಗುಳ್ದು ನುಡಿಯದೆ ಕೆಮ್ಮನೆಮ್ಮ ಸಮ್ಮುಖಕೆ ಬಾ ನಿನಗೆ ಕಣ್ಗಳನೀವೆನು ೨೧

ಎನೆ ನುಡಿದ [2]ನಂ[2]ಬ್ಯಣ್ಣನಭವನಂ ಎಲೆ ಭಾವ
ನನಸು ಕುರುಡಂ ಪಿಡಿದ ಕೋಲಾನದೆಂತು ಚ
ಕ್ಕನೆ ನಿನ್ನ ಸಮ್ಮುಖಕೆ ಬರ್ಪೆನಿದನಱಿತುಮೆನ್ನಂ ಕುಱಿತು ಕೊಱಚಾಡುತೆ
ಮಿನುಪ ನೀನಂಧಕನೊ ಆನಂಧಕನೊ ಎನಗೆ
ಘನಯಷ್ಟಿಯಂ ಕುಡುವ[3]ನೀ[3] ಗುಡಿಯೊಳಿರ್ದಪಂ
ಕೊನ[4]ದು[4] ನೀ ನಂಬಯಾಯಂಬಾ ಎನುತ್ತೆನ್ನ ಕರೆದೊಡಾನೆಂತು ಬರ್ಪೆಂ ೨೨

ಎಲೆ ಸರ್ವಗತನೆ ಮುಂದುಂ ಪಿಂದುಮೆಂಬ ಸ
ಲ್ಲಲಿತಬಗೆ ನಿನಗುಂಟೆ ಬಳಿಕೆನಗೆ ಭಾವಿಸಲ್
ಸಲೆ ನಿಮ್ಮ ದಿಕ್ಕಲ್ಲದೇ ಮತ್ತೆನೊಂದು ದಿಕ್ಕಿಲ್ಲ ಪರಮಾರ್ಥಮಾಗಿ
ಅಲರ್ದು ನೀನೆನ್ನ ಸಮ್ಮುಖಕೆಯ್ದಿ ಕಣ್ಗಳಂ
ನಲವಿನಿಂದೀವುದೆನೆ ಶಂಕರಂ ಕಡುಮೆಚ್ಚಿ
ಲಲಿತ ಪರಿವಾರದೇವತೆಯರೊಡಗೂಡಿ ತಿರುಗಿದನವನ ಮುಂದಕೊಲ್ದು ೨೩

ಅನಿತಱೊಳ್[5]ಗಂ[5]ಬ್ಯಣ್ಣ ಭಕ್ತಂಗೆ ಚಕ್ಷುಗಳ್
ಮಿನುಗುತ್ತೆ ಬಂದುವೀ ಪರಿಯೊಳಾಯಂಬ್ಯಣ್ಣ
ನನಘಮಿಾಶ್ವರನಿಂದೆ ಕಣ್ಗಳಂ ಪಡೆದನತಿಹರುಷದಿಂ ಮತ್ತೊರ್ವನು
ವಿನುತ ಗಣಪುಂಗವನಿಱುತ್ತಾಂಡಿಯೆಂಬ ಭ
ಕ್ತನುಮೆಯ್ದಿ ಕಾಳಿದಾಸಂ ಪುಟ್ಟುಗುರುಡರ್ಗೆ
ನನಸು ಕಣ್ಗಳನಿತ್ತು ಬಳಿ[6]ಕೆ ತನ್ನಯ[6] ಕಣ್ಗಳಂ ಪಡೆದನೆಂದು ಕೇಳ್ದು ೨೪

ಎನಗಹಿತರಾಗಿರ್ಪ ಜೈನರಕ್ಷಿಗಳ ತೊ
ಟ್ಟನೆ ಕಿಡಿಸಿ ಬಳಿಕೆನ್ನ ಕಣ್ಗಳಂ ಪಡೆವೆನೆನು
ತನುನಯಂಬಗೆದು ಶಾಪದೆ ಜೈನರಂಬಕಂಗಳ ತವಿಸಿ ಮಗುಳ್ದು ತನ್ನ
ಮಿನುಪ ನಯನಾಂಬುಜಂಗಳನೀಶನಿಂ ಪಡೆದು
ಕನದಮಲಸುಖನೀರಧಿಯೊಳೊಪ್ಪುತಿರ್ದನಿಂ.
ತನುಪಮಗಣೇಶ್ವರನಿಱುತ್ತಾಂಡಿಬಳಿಕೊರ್ವ ಶಿವಭಕ್ತನಮೃತಕಾಯಂ ೨೫

---

1 ಯ (ಕ) 2 ನ (ಕ) 3 ಂೀ (ಗ) 4 ರ್ದು (ಗ) 5 ಗ (ಕ) 6 ಕ
ತನ್ನಯ (ಗ)

ಪರಮ ಶಿವನಾಗಮಯ್ಯಂ ತನ್ನ ಕಣ್ಗಳಂ
ಭರದಿಂದೆ ಕಿಳ್ತು ಮೂಱವಸರದೊಳೀಶಂಗೆ
ಹ[1]ರಿಸ[1]ದಿಂದರ್ಪಿಸಿ ಬಳಿಕ್ಕವಂ ಪಡೆವನೀ ಪರಿಯೊಳನುದಿನವಿರುತಿರೆ
ಪಿರಿದು ಸಂತುಷ್ಟನಾದೆಂ ನಿನ್ನ ಸದ್ಭಕ್ತಿ
ಯಿರವಿಂಗೆ ಮ[2]ತ್ತೀ[2]ಮೊದಲ್ ಸೋಮವಾರದೊಳ್
ಕರವೆಸೆವ ನೇತ್ರಪೂಜೆಯನೊಡರ್ಚನಿಶಮುಂ ಬೇಡೆಂದು ಶಿವನುಸುರಲು ೨೬

ಹರನ ವಾಕ್ಯಂಗೇಳ್ದು ಶಿವನಾಗಮಯ್ಯನುರು
ತರಭಕ್ತಿಯಿಂದಂದುಮೊದಲೀಶ್ವರಂಗೆ ಭಾ
ಸುರ ನಯನಪೂಜೆಯಂ ಪ್ರತಿಸೋಮದಿನದೊಳೆಸಗುತ್ತೆ ಮತ್ತಾ ನಯನಮಂ
ಕರಮೆ ಪಡೆಯುತ್ತೆಸೆದನವನಿಯೊಳ್ ಮತ್ತೊರ್ವ
ಹರಶರಣ ಕಣ್ಣಪ್ಪನಭವನಯನಂಗಳ್ಗೆ
ಹ[3]ರಿಸ[3]ದಿಂ ತನ್ನ ಕಣ್ಗಿತ್ತಿಕ್ಕಿ ಬಳಿಕವಂ ಪಡೆದನೀಶ್ವರ ಕೃಪೆಯೊಳು ೨೭

ಹರನುದಯದಭಿಷೇಕಸಮಯದೊಳ್ ಕಣ್ಗಳಿವು
ಪಿರಿದು ನಿದ್ರೆಯೊಳೊಲ್ದು ಮದಿಸಿದುವೆನುತ್ತೆ ನಿ
ಷ್ಠುರಕೋಪದಿಂ ತನ್ನ ಕಣ್ಗಳೆರಡಂ ಕಿಳ್ತು ಮ[4]ಗು[4]ಳ್ದಪ್ರಮತ್ತಮಾದ
ಸುರುಚಿರಾಂಬಕಯುಗ್ಮಮಂ ಪಡೆದನಂದು ಪುರ
ಹರನಿಂದೆ ಭಕ್ತರೆಲ್ಲರ್ ಕೀರ್ತಿಸುತ್ತಿರಲ್
ಕರಮೆಸೆವ ವೆಲ್ಲಕೊಂಡದ ಮಹಾದೇವನಘತರುನಿಚಯದಹನದಾವಂ ೨೮

ಮರಳಿ ಕಣ್ಗಳದೇವನೆಂಬ ಭಕ್ತಂ ಮುದದೆ
ಪರಿ[5]ಸೆ[5]ಯೊಡಗೂಡಿ ಪರ್ವತಕೆಯ್ದಿ ತನ್ನ ಭಾ
ಸುರ ನಯನಯುಗಳಮಂ ಕಿಳ್ತಲ್ಲಿ ಮಲ್ಲಿಕಾರ್ಜುನನಂಘ್ರಿಗೀಯಲೊಡನೆ
ಭರದಿ ನೇತ್ರಂಗಳೊಗೆಯಲ್ ಕಂಡು ದುರ್ಜನರ್
ಪಿರಿದು ಕೌಟಿಲ್ಯಮಿದು ಕಣ್ಗಳಂ ಕೀಳಲೊಡ
ನಿರದೊಗೆವುದೆಂದು ನಿಂದಿಸಲದಂ ಕೇಳ್ದು ಕಣ್ಗಳದೇವಣಯ್ಯನೊಸೆದು ೨೯

ತರಿಸಿ ಮಾರ್ಜಾರನೊಂದಂ ಸಭೆಯ ಸಮ್ಮುಖದೊ
ಳಿರಿಸಿ ತನ್ನೇತ್ರಂಗಳಂ ಕಳೆದುಬಿಸುಟು ಮ
ತ್ತಿರದಾಗಳಂತೆ ಶಿವಶರಣಪಾದಸ್ಮರಣೆಗೆಯ್ದು ಬಳಿಯಂ ಗಿರಿಶನ

---

1 ರುಷ (ಗ) 2 ತ್ತಿದು (ಗ) 3 ರುಷ (ಗ) 4 ಸು (ಕ) 5 ಷೆ (ಗ)

ಚರಣಮಂ ನೆನೆದು ಶಿವಕೃಪೆಪಡೆದು ಶೀಘ್ರದಿಂ
ಪರಮಕಣ್ಗಳದೇವನಾ ಬಿಡಾಲದ ಕಣ್ಗ
ಳೆರಡನಾ ಸಭೆ ನೋಡುತಿರೆ ಪಡೆದನಂದು ಲೋಕಂ ಪೊಗಳೆತತಿಶಯದೊಳು ೩೦

ಗಿರಿಶಂಗೆ ನಯನಂಗಳಂ ಸಮರ್ಪಿಸಿ ಮಗುಳ್ದು
ಹರನಿಂದೆ ನೇತ್ರಂಗಳಂ ಪಡೆವುದೇನರಿದೊ
ಧರಣಿಯೊಳಗೆಂದು ಕಣ್ಣಂ ಶಿವಂಗೊಲ್ದು ಪೂಜಿಸಿದಕ್ಷಿಗಳ ಪಡೆವುದು
ಕರಮರಿದೆನುತ್ತೆ ವಿಸ್ಫುರಿತಕೀರ್ತಿವಿಶಾಲ
ನುರುಗಣಂ ಮುಕ್ಕಂಟಿ ಕಾಲಿ[1]ವೆಟ್ಟಿ[1]ಯೆನಿಪ್ಪ
ಹರಶರಣನೊರ್ವ ಪೂರ್ವಾರ್ಜಿತಾಮಲಪುಣ್ಯದಿಂದಮಿಾ ಭೂಮಿಯೊಳಗೆ ೩೧

ಮಿನುಪ ನೇತ್ರತ್ರಯಂಗೂಡಿ ಭಾಸುರಮಾಗಿ
ಜನಿಸಿದಂ ಸಾಕ್ಷಾತ್ರಿಲೋಚನಂ ತಾನಾಗಿ
ಘನಮಹಿಮೆವೊಡೆದಿರುತಿರಲ್ಕಿತ್ತ ಕರಿಕಾಲಚೋಳಭೂವರನಿಗೆ
ಕನಕವರ್ಷಂ ಮವರ್ಷೆಂಬ ಬಂಧುರವಾಕ್ಯ
ಮನುನಯಂ ಪೇಳುತಿರ್ಕುಂ ಕನಕವರ್ಷಮಂ
ವಿನಯದಿಂ ತಂದನೆಂದಾ ಮಳೆವೊನಲ್ ಮೇಘಮಂ ಮುಟ್ಟಿಬಂದುದೆಯ್ದೆ ೩೨

ಹ[2]ರಿಸ[2]ದಿಂ ಕಾವೇರಿಯಂ ಕಟ್ಟವೇಳ್ಕೆಂದು
ಕರಿಕಾಲಚೋಳನೆಲ್ಲಾದೇಶದರಸುಗಳ
ಬರಿಸಿ ಮತ್ತೀ ಕಾಳಿವೆಟ್ಟಿ ನೃಪನಂ ಬಿಟ್ಟಿಬರವೇಳ್ಕುಮೆಂದು ಕರೆಸಿ
ಕರಮೆ ಕಿನಿಸುತ್ತೆರಡುಕಣ್ಣುಳ್ಳ ಭೂಪರ್ಗೆ
ಸರಳತ್ರಿನೇತ್ರಮುಳ್ಳರಸು ಬೆಸಗೆಯ್ವುದೆನೆ
ಧರಣಿಯೊಳಗೆಲವೊ ಪೋಗೆಂದು ತಚ್ಚರನನಟಿತಯಟ್ಟಲಿದನಱದು ಚೋಳಂ ೩೩

ತನಗೆ ಪಣೆಗಣ್ಣಿತ್ತನಾರೆಂದು ಕೋಪದಿಂ
ಮಿನುಪ ತನ್ನೇತ್ರದಾಕೃತಿಯನವನಿಯ ಮೇಲೆ
ಮನವೊಲ್ದು ಬರೆದದಂ ತನ್ನೆಡದ ಕಾಲುಂಗುಟದಿನೊತ್ತಿ ಮೆಟ್ಟಲವನ
ಘನಲಲಾಟಾಂಬಕಂ ಘಳಿಲನೊಡೆಯಲ್ ಬೆದಱ
ಯನುಗುಂದಿ ತತ್ಕಾಳಿವೆಟ್ಟಿಭೂಪಂ ಬಂದು
ವಿನಯದಿಂ ಕರಿಕಾಲಚೋಳನಡಿಗೆಱಗಿ ಮಗುಳ್ದಾ ನಯನಮಂ ಪಡೆದನು ೩೪

---

1 ವೇಟ (ಗ) 2 ರುಷ (ಗ)

ಇನಿತುಗಡ ತತ್ಕಾಳಿವೆಟ್ಟಿಮಾಹಾತ್ಮ್ಯವೆಂ
ದನಘ ಶಂಕರದಾಸನೆನಿಪೂರ್ವ ಸದ್ಭಕ್ತ
ನೆನಸುಮಾ ಮುಕ್ಕಣ್ಣನಿಂ ತ್ರಿಣೇತ್ರಂಬಡೆದು ಮತ್ತುಳಿದ ದೈವಂಗಳಂ
ನನಸು ಪಣೆಗಣ್ಗಿಡಿಗಳಿಂ ಸುಟ್ಟು ಬಿಸುಡುತ್ತೆ
ವಿನುಪ ಕುಟಿಲಾನ್ಯದೈವಂಗ[1]ಳಿಂ[1] ಸೇವೆಯಂ
ಮನನೊಸೆದು ಮಾಡಿಸಿಕೊಳುತ್ತಿರ್ದನೀ ಭೂಮಿಯೊಳಗಂದು ಹ[2]ರಿಸ[2]ದಿಂದಂ ೩೫

ಪರದೈವದರ್ ಪೋಪಶಮನಕ್ಕೆ ಮುನ್ನೆ ಶಂ
ಕರದಾಸನೀಶನಿಂದೊಂದೂರ್ಧ್ವನಯನಮಂ
ಭರದೆ ಪಡೆದಂ ಬಳಿಕ್ಕೀ ದಂಡಿ[3]ತಾ[3]ಶುಭಂ ಪಂಡಿತಸ್ತುತಿಪಾತ್ರನು
ಗುರುಪಂಡಿತಾರಾಧ್ಯನೀಭಕ್ತ ಕರುಣದಿಂ
ಹ[4]ರಿಸ[4]ಮಿಗಲೆರಡೂರ್ಧ್ವನಯನಂಗಳಂ ಪಡೆದ
ನಿರದಿದಚ್ಚರಿಯೆನುತೆ ಮುಗುಳ್ದು ಸದ್ಭಕ್ತತತಿಯಿಂತೆಂದು ನುಡಿದುದೊಸೆದು ೩೬

ಸದಮಲಪ್ರಚುರವಿಶ್ರುತ ಪರಮಭಕ್ತಗಣ
ಪದಸರೋರುಹಸಾಂದ್ರ ಮಕರಂದಪಾನ ಸ
ಮ್ಮುದಿತ ಚಂಚಚ್ಚಂಚರೀಕನನವರತ ಪಂಚಾಕ್ಷರೀಪ್ರಸಿತಹೃದಯಂ
ವಿದಿತ ಮಂಜುಲನೀಲಕಂಠಾಹ್ವಯಂ ಮನೋ
ಮುದದೆ ಪೇಳ್ದುರುತರಾರಾಧ್ಯಚಾರಿತ್ರದೊಳ
ಗಿದು ನಯನಲಬ್ಧಶಿವಶರಣಕಥನಂ ಭಕ್ತರೊಸೆದಾಲಿಪುದು ಸಂತತಂ ೩೭

---

1 ಳಂ (ಕ) 2 ರುಪ (ಗ) 3 ಕೋ (ಗ) 4 ರುಷ (ಗ)

# ಆರನೆಯ ಸಂಧಿ

## ನಂಬಿಯಣ್ಣನ ಕಥೆ

ಸೂಚನೆ: ಕನಕಲತೆ ಕಾಂತಿಮತಿಯೊಡಗೂಡಿ ಸೌಂದರಂ
ಮಿನುಪವನಿಯೊಳ್ ಪುಟ್ಟ ಪರಮನಾಚಿಯೊಳಿಸೆವ
ವಿನಯನಿಧಿಯಂಗಸಂಗ[1]ದೊ[1]ಳೊಲ್ದು ಪಸೆಯಿರ್ದ ಕಥೆಯ ಕೇಳ್ ಸೂರ
ಸಚಿವ

ಮಿಸುಫಣಾ[2]ಮಣಿ[2]ಕಿರಣಕಾಂತಿಯೊಡವೆರೆದು ರಾ
ಜಿಸುವ ಮಕುಟಂ ಸುತ್ತಿದಸಿತಾಹಿ ತನುಶೋಭೆ
ಸಸಿನೆ ಮಾಪ್ರೊಳೆಯೆ ತನ್ನಯ ಜಲದೊಳಾವಗಂ ಮತ್ತಮಡಲಿಂದೆ ಸತತಂ
ಪೊಸತಪ್ಪ ಜಂಬೂಫಲದ ರಸದ ಧುನಿಯೆಂಬ
ಬಿಸವಂದಮಂ ಸೇವಿಸುವ ದೇವತತಿಗೀಯು
ತೆಸೆದಿರ್ಪ ವಿಬುಧತಟನಿಯ ತಾಳ್ದು ಕಡುವೆಳಗಿನ ಗುರುನೀಲಕಂಠ ಶರಣು ೧

ಮುನ್ನೆ ನಂಬ್ಯಣ್ಣನುಂ ತನ್ನ ನೇತ್ರಂಗಳಂ
ಪನ್ನಗಾಭರಣನಿಂ ಪಡೆವಂದು ಪಡೆದನೇ
ಸನ್ನುತೋರ್ಧ್ವಾಕ್ಷಿಗಳನವನ ಮಾಹಾತ್ಮ್ಯಮಂ ಪೊಗಳ್ವೊಡೀಶಂಗಕ್ಕಜಂ
ಸನ್ನಿದಂ ಕಾವೇರಿಯಿಂ ತೆಂಕಗಡೆಯಲ್ಲಿ
ಯುನ್ನತಮೆನಿಪ್ಪಾವಲೂರೊಪ್ಪುಗುಂ ಬಳಿ
ಕ್ಕಂ ನಿಸದಮಾಯಗ್ರಹಾರಕ್ಕೆ ವರಧಾನ್ಯಮಂ ಬೇಳ್ಪ ಬೆಸನದಿಂದಂ ೨

ಭರದೆ ಚರಲಿಂಗಮೂರ್ತಿಗಳೀರ್ವರೆಯ್ತಂದು
ವರಧಾನ್ಯಮಂ ಮಾಡುತೊಲ್ದು ನಂಬ್ಯಣ್ಣನುಸು
ರ್ದುರುತರಮೆನಿಪ್ಪ ತಿರುಪಾ[3]ಟು[3]ಗಳ ಪಾಡುತಿರಲವನೆಯ್ದಿ ಕೇಳ್ದು ಮುದದಿಂ
ತರುಣೀಶಿರೋರತ್ನ ಪಿರಿಯನಂಗೆಯೆನಿಪ್ಪ
ವರ ಶಿವದ್ವಿಜಕಾಂತೆಯವರ ಬೆಸಗೊಂಡಳೀ
ತಿರುಪಾಟುಗಳ ಪೇಳ್ದರಾ[4]ರಿ[4]ವರ್ಕೇನರ್ಥಮಿವಱ ಫಲವೇನೆಂಬುದಂ ೩

1 ದೊ (ಕಗ) 2 ವಳಿ (ಗ) 3 ಡು (ಗ) 4 ಗಿ (ಕ)

ಪಿರಿದುಮೆನಗುಸುರಿಮೆನಲವಱರ್ಥಮಂ ಸವಿ
ಸ್ತರದೆ ಪೇಳುತ್ತಿರ್ಪುಂ ಕಾಮ್ಯಾರ್ಥಮಂ ಕುಡುಗು
ವಿರದಿಪಂ ಪೇಳ್ದಪಂ ನಂಬ್ಯಣ್ಣನಭವಂಗೆ ಹಿತಮೆನಿಪ ಸದ್ಭಕ್ತನು
ಕರಮವನ ಸುಚರಿತ್ರಮೆಂತೆನಲ್ ಕೇಳ್ ಮುನ್ನೆ
ಗಿರಿಜಾವಿವಾಹಕಾಲದೊಳೊಲ್ದು ಶಂಕರಂ
ಹ[1]ರಿಸ[1]ದಿಂ ತಾಂ ಸಿಂಗರಂಗೆಯ್ದುಕೊಂಡು ನಿಲಗನ್ನಡಿಯ ನೋಡಲಲ್ಲಿ ೪

ಪರಿಭವಂಗೆಯ್ಯುತ್ತೆ ಕೋಟಿಸೂರ್ಯಪ್ರಭೆಯ
ನುರುದರ್ಪಣಾಂತರದೊಳಗೆ ತನ್ನ ಪಡಿರೂವು
ಪಿರಿದು ಪೊಳೆಯಲ್ಕದಱ ಸೌಂದರ್ಯಮಂ ಕಂಡು ವಿಸ್ಮಯಂಗೊಂಡು ಶಿವನು
ಪರಮ ಸೌಂದರ್ಯಯುತನಾನೊರ್ವನೇ ಎಂದು
ಹ[1]ರಿಸ[1]ವಡೆಯುತ್ತಿರ್ದ್ದ ತೊಲಗೆನಲ್ಕಾ ಪರಿಜು
ಭರದಿ ದರ್ಪಣದಿಂದೆ ಪೊಱಮಟ್ಟು ವಂದಿಸುತ್ತಭವಂಗೆ ಭಕ್ತಿಯಿಂದಂ ೫

ನಗುತೆ ಶಿವನಾ ಮೂರ್ತಿಯಂ ಭರದಿನಮರ್ದಪ್ಪಿ
ನೆಗಳ್ದೆನ್ನ ಸುಂದರಪ್ರತಿಬಿಂಬಮಾದುದಱಂ
ನಗಲದೇ ನೀಂ ಸೌಂದರಂ ಎಂಬ ಪೆಸರಿಂದೆ ಗಣವರರೊಳಿರ್ಪುದೆಂದು
ಮಿಗೆ ಗಣತ್ವಂಗೊಟ್ಟು ಬಳಿಕೆ ಸಂತೋಷದಿಂ
ದಗಜೆಯಂ ಕೈಗೂಡಿ ತದ್ಗಿರಿಜೆಯೊಡನೆ ನೆಱೆ
ಸೊಗಸಿನಿಂದನ್ಯೋನ್ಯಸಂಪ್ರೀತಿಯಿಂ ಕ್ರೀಡಿಸುತ್ತಿರಲುಮಾಧೀಶನು ೬

ವರ ಸೌಂದರಂ ಶಿವನ ಮುಡಿಗೆ ಕುಸುಮಂಗಳಂ
ಭರದೆ ತರವೇಳ್ಕೆನುತ್ತುದ್ಯಾನಕೆಯ್ದೆ ಭಾ
ಸುರದೇವಿಯುವರ್ಗೆ ಪುಷ್ಪಂಗಳಂ ತರವೇಡಿ ತನ್ನಿಂದೆ ಮುನ್ನೆ ಪೋದ
ಗಿರಿಸುತೆಯ ಕೆಳದಿಯರ ಕನಕಲತೆ ಕಾಂತಿಮತಿ
ಯರ ಕಂಡು ಪಿರಿದುಮನ್ಯೋನ್ಯಾನುರಾಗರಸ
ಮಿರದೆ ಪುಟ್ಟಲ್ಕನಿತಱೊಳೆ ಕಾಮನೆಚ್ಚನೊರ್ಮೊದಲೆ ಮಗ ಳ್ದಾ ಮೂವರಂ ೭

ಹ[1]ರಿಸ[1]ದಿಂದಾ ವನದೊಳಾ ಮೂವರುಂ ಕಾಮ
ಶರನಿಧಿಯೊಳೋಲಾಡಿ ಬಳಿಕೊಯ್ಯನಂತಂತೆ
ಹರಸಮುಖಕ್ಕೆ ಬರಲವರಿಂಗಿತಮನಱಿದು ಗಿರಿಜೆಯುಂ ಶಶಿಜೂಟನುಂ

---

[1] ರುಷ (ಗ)

ಧರಣೀತಳಕ್ಕೆ ನೀವೆಯ್ದಿ ಮನ್ಮಥಸುಖಮ
ನುರುತರಾನಂದದಿಂದನುಭವಿಸಿ ಬನ್ನಿಮೆನೆ
ಗಿರಿಜೆಗಂ ಶಂಭುವಿಂಗಂ ತುಳಿಲ್ಗೆಯ್ದವರ್ ಭೂಮಂಡಲಕ್ಕೆ ಬಂದು ೮

ಸೊಗಯಿಸುವ ದ್ರವಿಡಮಂಡಲದಲ್ಲಿಯೊಪ್ಪುವಾ
ನೆಗಳ್ದ ತಿರುವಾವೂರೊಳಗೆ ಶಿವದ್ವಿಜನಿರ್ಪ
ಬಗೆಯೆ ಜಡೆಯಾರಿಯೆಂಬಂ ಬಳಿಕ್ಕವನ ಗರ್ಭದೆ ಜನಿಸಿದಂ ಸೌಂದರಂ
ತಗುಳ್ದು ನಂಬ್ಯಣ್ಣನೆಂಬಭಿಧಾನದಿಂದೆ ಮ
ತ್ತಗಲದಾ ಕನಕಲತೆ ಪಂಚಮರ ಗರ್ಭದೊಳ
ಗೊಗೆದಳ್ ಪರಮನಾಚಿಯೆಂಬ ಪೆಸರಿಂದೆ ತಿರುವಾ[1]ರೂ[1]ರೊಳೇ ಮುದದೊಳು ೯

ವರ ಕಾಂತಿಮತಿ ಜನಿಸಿದಳ್ ಮಂಗಲೂರೊಳಗೆ
ಹ[2]ರಿಸ[2]ದಿಂ ಶೂದ್ರಜಾತಿಯೊಳಂಗಸಂಗೆಯೆಂ
ಬುರು ನಾಮಧೇಯದಿಂ ಬಳಿಕಿತ್ತ ಜಡೆಯಾರಿ ಮುದದೆ ಶಾಂಭವದೀಕ್ಷೆಯಂ
ಪರಮ ನಂಬ್ಯಣ್ಣಂಗೊಡರ್ಚಿ ಸ[3]ಲಪು[3]ತ್ತಿರಲ್
ಪಿರಿದು ದಿನದಿನದೊಳಭಿವೃದ್ಧಿಯಿಂ ಬಳೆಯುತಿರೆ
ಸರಳ ಗರ್ಭಾಷ್ಟಕವಮುದಾಗೆ ನಂಬ್ಯಣ್ಣಂಗೆ ಜಡೆಯಾರಿ ಮಂದಮತಿಯಿಂ ೧೦

ಹ[4]ರಿಸ[4]ದಿಂದುಪನಯನಮಂ ನಿರ್ಮಿರ್ಚಿಪುದರ್ಕೆ
ಪಿರಿದು ಸಡಗರಗೊಳುತಿರಲ್ಕನಿತಱೊಳಗಿತ್ತ
ನಿರುತಂ ಜರದ್ವಿಪ್ರತನು ಎಂದು ಮುದದೆ ಯಾತೇ ರುದ್ರ ಎಂಬ ವಾಕ್ಯಂ
ಒರೆದಂತೆ ಶಂಕರಂ ವೃದ್ಧವಿಪ್ರಾಕೃತಿಯ
ನಿರದೆ ತಳೆಯುತ್ತಲ್ಲಿಗೆಯ್ತಂದು ಸಂತಸದೆ
ವರ ಬಾಲಕಂ ಎಮ್ಮ ದಾಸೀಸುತಂ ನೀನವಂಗುಪನಯನವಿಧಿಯನು ೧೧

ಅನುಗೊಳಿಪುದನುಚಿತಮೆನುತ್ತೆ ಜಡೆಯಾರಿಯಂ
ಮನಸಿಜಹರಂ ನುಡಿದು ಪುಣ್ಯಾಹವಾಚನೆಯ
ನನುವಿನಿಂ ಮಾಡಲೆಯ್ತಂದ ಪಾರ್ವರ್ ಸೋಜಿಗಂಬಟ್ಟು ನೋಡುತಿರಲು
ಮುನಿದು ನಂಬ್ಯಣ್ಣನಂ ಕೈವಿಡಿದು ಬರಸೆಳೆಯ
ಲನಿತಱೊಳಗಾ ಸಭೆಯಿದೇಂ ವೃದ್ಧವಿಪ್ರಂಗೆ
ನೆನಪುಗುಂದಿತ್ತೊ ಮತ್ತಿವನಸುರನೋ ತಸ್ಕರನೊ ಎಂದು ನುಡಿಯುತಿರಲು ೧೨

---

1 ಲೂ (ಗ) 2 ರುಷ (ಗ) 3 ಲೊಪ್ಪು (ಗ) 4 ರುಷ (ಗ)

ಜಡೆಯಾರಿ ಬಂಧುಗಳ್ ಬಂದು ಮುನಿಯುತ್ತೆ ತ
ನ್ಮೃಡಕರದಿನೀಳ್ದುಕೊಳೆ ನಂಬ್ಯಣ್ಣನಂ ಬಳಿ
ಕ್ಕೊಡನೆ ಶಿವಧೋ ಎನುತ್ತವನಿಯೊಳ್ ಬಿಳ್ದು ಪೊರಳುತೆ ಪೂರ್ಣಕುಂಭಂಗಳಂ
ಒಡೆಯುತ್ತೆ ಮಗುಳ್ದೆಳ್ದು ನಂಬ್ಯಣ್ಣನಂ ಪಿಡಿಯೆ
ಕಡುಮುಳಿದವರ್ ನೂಂಕೆ ಚಷಕಭಾಂಡದ ಮೇಲೆ
ಪೊಡೆಗೆಡೆಯುತವಱೊಳಿರ್ದುದಕಮಂ ಚೆಲ್ಲಿ ಮತ್ತೆಯ್ದಿ ತುಡುಕಲ್ ನಂಬಿಯಂ ೧೩

ಮುನಿದು ಮತ್ತವರೆಯ್ದೆ ಕಂಧರಂಬಿಡಿದು ಚ
ಕ್ಕನೆ ನೂಂಕೆ ಕಾಯಮಾನದ [1]ಕಂಭ[1]ಗಳ ಮೇಲೆ
ತೊನೆಯುತ್ತೆ ಬೀಳೆ ಮತ್ತಾ ಕಾವಣಂ ಮುಱಿದು ಹೋಮಾಗ್ನಿಯೊಳ್ ಕೆಡೆಯಲು
ಮಿನುಪಗ್ನಿ ಭುಗಿಲನುರಿಯೇಳೆಯುದಱೊಳಗಿರ್ದ
ಜನರೆಲ್ಲರೋಡಿಪೋಗಲ್ ದಾರಿಗಾಣದಾ
ಮನೆಗಳಂ ಭರದಿನಡರ್ದೇಱಿ ಧುಮ್ಮಿಕ್ಕಿಯೋಡಿದರರೆಬರಂತೊಱಲುತೆ ೧೪

ಮರಳಿ ಪಾರ್ವರ್ ಕೆಲಬರುರಿಯೊಳಗೆ ಬಿಳ್ದೋಡ
ಲುರುತರ ಸ್ಮಶ್ರುಗಳ್ ತಲೆನವಿರ್ ಬೇಯೆ ಮ
ತ್ತರೆಬರಂಗಂ ಸುಡಲ್ಕಿಂತೆಲ್ಲರೋಡಲಾ ಜಡೆಯಾರಿ ನಂಬ್ಯಣ್ಣನ
ಕರಯುಗಳಮಂ ಪಿಡಿದುಕೊಂಡೊಯ್ವುತಿರೆ ಕಂಡು
ಪರಿದು ಬಂದಾ ದ್ವಿಜಂ ವೀಥಿಯೊಳ್ ಮೊಱೆಯಿಡು
ತ್ತಿರದೆನ್ನ ದಾಸೀಸುತನ ತನ್ನ ಮಗನೆಂದು ಬಲ್ಮೆಯಿಂದೀಳ್ದೊಯ್ದಪಂ ೧೫

ಪುರಜನಂಗಳ್ ನೀವು ನೋಡಿಮೆನುತೊಱಲುತ್ತೆ
ಪುರವೀಥಿಯೊಳ್ ಕುಟಿಲವಿಪ್ರನೆಳ್ತರುತಿರಲ್
ಭರದಿನಾ ಪುರದೆಱೆಯ ಕರಿಕಾಳಚೋಳನೀ ಕದನಮೆಲ್ಲಂಗೇಳುತೆ
ತ್ವರಿತದಿಂದೀರ್ವರಂ ಕರಸೆ ಜಡೆಯಾರಿ ಬಂ
ಧುರಸುತನ [2]ಕಕ್ಷದೊ[2]ಳಿಱುಂಕಿಕೊಳುತೆಯ್ತಂದು
ಪಿರಿದೆಸೆವ ತದ್ಭೂಮಿಪಾಲಸಭೆಯಂ ವ್ಯಾಕುಲೀಭೂತನಾಗಿ ಪೊಕ್ಕಂ ೧೬

ಮರಳಿ ಕುಂಟುತ್ತೆ ದೂಂಟಕ್ಕಿ ನಡೆಯುತ್ತೊಮ್ಮೆ
ಕರದೊಳಗೆ ಲೇಖ್ಯಮಂ ಪಿಡಿದೆತ್ತಿಕೊಂಡು ಬಂ
ಧುರನಾದದಿಂ ಪ್ರವರ್ಶಿತ ಕಪಟಲೇಖ್ಯಃ ಎನುತ್ತೆ ಶ್ರುತಿ ಪೇಳ್ದಂದದಿಂ

---

[1] ಕಚ್ಛ (ಕ) [2] ಕಂಕುಳೊ (ಕ)

ಹ[1]ರಿಸ[1]ದಿಂ ಕುಟಿಲವಿಪ್ರಂ ಸಭೆಯ ಪುಗುತಂದು
ನರಪಂಗೆ ತತ್ಕಥನವೆಲ್ಲಮಂ ಪೇಳ್ದು ಭಾ
ಸುರಲೇಖ್ಯಮಂ ನೃಪನ ಮುಂದಿರಿಸಿ ನುಡಿದನಾ ಸಭೆ ಮೆಚ್ಚುವಂತೆ ವೃದ್ಧಂ ೧೭

ನರಪ ಕೇಳ್ ಜಡೆಯಾರಿ ಮುನ್ನೆ ತನಗೆಡರೆಯ್ದೆ
ಭರದಿಂದಮಿ‌ಾ ಶಿಶುವನೆನಗೆ ಮಾಱಿದನೊಲ್ದು
ಮರಳಿವಂ ಬಾಲಕನಗಲ್ದೆನ್ನನೆಂಟುಬರಿಸಮುದಾದುದೆಂದುಮೊದಲು
ಧರಣಿಯೊಳಗಱಿಸುತೆಯ್ತಂದಿಲ್ಲಿ ಕಂಡೆನಾಂ
ನಿರುತಮಿದು ತನ್ನಣುಗನೆಂತಪ್ಪನೋ ಇವಂ
ಪಿರಿದುಸುರಲೇತರ್ಕೆ ಪತ್ರಾರ್ಥಮಂ ಕೇಳಿನುತ್ತೆ ಮತ್ತಿಂತೆಂದನು ೧೮

ಪಿರಿದುಂ ಸ್ವಹಸ್ತಲಿಖಿತಂ ಪತ್ರದೊಳಗಿಲ್ಲ
ದಿರಲಿವಂ ಮದ್ಭೃತ್ಯನಲ್ತಾಂ ದ್ವಿಜನ್ಮಗ್ರ್
ಕರಮೆ ಪೊಱಗೆನಲರಸನೊಪ್ಪಿಯದನೋದಿಸಿದನದಱರ್ಥಮಂ ಕೇಳ್ದನು
ಪರಮ ವಿಪ್ರಂಗೆ ಭೃತ್ಯಂ ನಂಬಿ ಮತ್ತಿದ
ಕ್ಕಿರದೆ ನಿರು[2]ತಂ[2] ಸಹಸ್ತದ ಬರೆಪಮಂತೆ ಬಂ
ಧುರ ಸಾಕ್ಷಿಗಳ್ ದೇವರುಂ ಗ್ರಾಮಮುಂ ವ್ಯಕ್ತಮಾಗಿರಲ್ಕಿದು ತಥ್ಯವು ೧೯

ಇದನೆಯ್ದೆ ತೊಲಗಿಸಲ್ಕಾರ್ಗಮಳವಲ್ತು ಮು
ತ್ತಿದಱ ತೆಱನಂ ವಿಪ್ರನೀನಱಿವ ಎಂದರಸ
ನುದಿತಹರ್ಷದೆ ನುಡಿಯೆ ಬಳಿಕಮಾ ಜಡೆಯಾರಿ ಪಾರ್ವನೊಡನಿಂತೆಂದನು
ಸದಮಲಾತ್ಮಕ ನಿನ್ನ ಶಿಶುವಿದಂ ನೀಂ ಮುಂದೆ
ಪಡೆದು ರಕ್ಷಿಸು ಶಿಕ್ಷಿಸಲ್ಲದೊಡೆ ನಿನ್ನೊಡವೆ
ಯಿದೆಯೆನುತೆ ತನ್ನ ಕಕ್ಷದೊಳಿರ್ದ ನಂಬಿಯಂ ತೆಗೆದಿತ್ತನಾ ದ್ವಿಜಂಗೆ ೨೦

ಬಳಿಕಿತ್ತ ಜಡೆಯಾರಿ ದುಃಖದೊಳ್ ಪೊರಳುತ್ತೆ
ತಳರ್ದು ಪೋದಂ ಗೃಹಕೆ ಮತ್ತಮಾ ನಂಬಿಯಂ
ಲಳಿತವೇದಂ ಸಭೃತ್ಯತ್ವೇನಜಗ್ರಾಹ ಎಂದುಸುರ್ದ ಪಾಂಗಿನಿಂದಂ
ಮಳಹರಂ ಭೃತ್ಯನಂ ಮಾಡಿಕೊಂಡೊಯ್ದನಾ
ಲುಳಿತ ತಿರುವಾರೂರ್ಗೆ ಸುಪ್ರಮೋದದೊಳೆಯ್ದೆ
ತಿಳಿಯನ್ನವಾಸವಿದು ಸುಖದೊಳಿಲ್ಲಿರ್ಪೆನಾನೆಂದು ನಂಬಿಗೆ ಪೇಳ್ದನು ೨೧

1 ರುಷ (ಗ) 2 ತದ (ಗ)

ಪರಮ ವಲ್ಮೀಕನಾಥನ ಮಂದಿರಂ ದಲಿದು
ಹ[1]ರಿಸ[1]ದಿಂದಾನಿಲ್ಲಿ ಜಪವೊಡರ್ಚುತುಮಿರ್ಪೆ
ವರಿದೆನಲ್ ನಿನಗಾವುದಾದೊಡಂ ಬೇಕಾದೊಡಯ್ಯಾ ಎನುತ್ತೆಮ್ಮನು
ಭರದಿಂದೆ ನೀಂ ಕರೆಯುಲಾವೆಯ್ದಿ ಶೀಘ್ರದಿಂ
ಪಿರಿದು ನಿನಗಿಷ್ಟಮಾದನ್ನಪಾನಾದಿಗಳ
ವರವಸ್ತ್ರಭೂಷಣಾದಿಗಳ ಶೈಶವಯೋಗ್ಯವಸ್ತುಗಳ ನಿನಗೀವೆವು ೨೨

ಎಲೆ ಮಗನೆ ನೀನವಂ ಲಿಂಗಾರ್ಪಿತಂಗೆಯ್ದು
ನಲಿದು ನೀಂ ಮತ್ತೆ ಭುಂಜಿಸು ನಿಚ್ಚಮೆಂದು ಸ
ಲ್ಲಲಿತಜಂಗಮವಶಂಗತನಾಗಿರೆಂದು ಪಟ್ಟಾಂಬರಾದಿಗಳನಿ[2]ತ್ತು[2]
ಸಲೆ ಷೋಡಸಾಭರಣವಿತತಿಯಂ ಕೊಟ್ಟು ನಿ
ರ್ಮಲಗಂಧಮಾಲ್ಯಾದಿಗಳನಿತ್ತು ಸಂತಸದೊ
ಳಲರ್ದು ಸುಖದಿಂ ಕ್ರೀಡಿಸೆನುತೆ ನಂಬ್ಯಣ್ಣಂಗೆ ಶಿವನೊಲ್ದು ಕೃಪೆಗೆಯ್ಯಲು ೨೩

ಪರಮ ನಂಬ್ಯಣ್ಣನತಿಹರ್ಷಮಂ ಪಡೆದು ನಿ
ರ್ಭರದಿಂದೆ ಪುಲ್ಗುಡಿಸಿಲಿಕ್ಕಿ ಮತ್ತಲ್ಲಿ ಶಂ
ಕರನನುದಿತ ಪೂಜಿಸುತ್ತತಿಭಕ್ತಿಯಿಂದೆ ತಿರುಪಾಟುಗಳನೊಸೆದು [3]ಪಾ[3]ಡಿ
ಶರಣಸುತರಂ ಕರೆದವರ್ಗೆ ಭಕ್ಷಾದಿಗಳ
ಸರಳನಿರ್ಮಾಲ್ಯಕುಸುಮಂಗಳಂ ಕುಡುತೆ ಭಾ
ಸುರ ಜಂಗಮಪ್ರತತಿಗಿಷ್ಟಾರ್ಥಮಂ ಮನೋಮುದದಿಂದೆ ಕುಡುತೆ ಮತ್ತಂ ೨೪

ತನಗಿಷ್ಟ[4]ಮಾ[4]ದ ವಸ್ತುಗಳನಯ್ಯಾ ಎಂದು
ಮನಸಿಜಾಂತಕನನತಿಭಕ್ತಿಯಿಂದಂ ಕರೆದು
ಘನಮಾಗಿ ಪಡೆಯುತ್ತುಮಿಂತು ಕೆಲದೆವಸ [5]ಪೋಗಲ್[5] ನಂಬಿಯಂ ನೋಡುತೆ
ಮಿನುಪ ವಲ್ಮೀಕನಾಥಂ ಮುನ್ನೆ ತೊಟ್ಟ ನೂ
ತನ ವಿಪ್ರನಾಕಾರಮಂ ಧರಿಸಿ ತನ್ನ ಸುತ
ನೆನಿಪ ನಂಬಿಯ ಮುಂದೆ ನಿಂದು ಸಂತೋಷದಿಂ ನುಡಿದನಾ ನಂಬ್ಯಣ್ಣನಂ ೨೫

ಪಿರಿದೆನ್ನ ಮುದ್ದು[6]ಗಂ[6]ದನೆ ನಂಬಿಯಣ್ಣ ನೀಂ
ಹ[7]ರಿಸ[7]ದಿಂ ರಯ್ಯಮಾಗೆನ್ನ ಮುಂದೊಲ್ದು ಭಾ
ಸುರ ತಾನಮಾನಂಗಳಿಂದೆ ಪೊಸಬಗೆಯಿಂದಮೆನ್ನ ಕುಡುತನವರತ[8]ಮುಂ[8]

[1] ರುಷ (ಗ) [2] ಟ್ಟು (ಕ) [3] ನೋ (ಗ) [4] ವಾ (ಕ) [5] ಪೋಗಳಲ್ (ಗ)
[6] ಕಂ (ಗ) [7] ರುಷ (ಗ) [8] ವು (ಗ)

ತಿರುಪಾಟುಗಳ ಪಾಡೆನುತ್ತೆ ನೂತನಗಾನ
ವರವಿದ್ಯೆಯಂ ಕೃಪೆಯೊಳಿತ್ತು ಮತ್ತಂ ಮನೋ
ಹರ ಕನಕತಾ[1]ಳಂ[1]ಗಳಂ ಕುಡಲ್ ನಂಬ್ಯಣ್ಣನಳ್ತಿಯಿಂದಂ ಪಾಡಿದಂ ೨೬

ಹರನ ಕಿವಿಗಾ ಗಾನರಸಮಮರಗಾಯಕರ
ಸರಳ ತುಂಬುರನಾರದರ ಗೇಯರಸದಿಂದೆ
ಪಿರಿದು ಸಾಸಿರ್ಮಡಿಯೆನಿಪ್ಪವೋಲಿನಿದಾಗೆ ಸಂತಸಂಬೆತ್ತು ಶಿವನನು
ಕರುಣಿಸಿದನಾ ನಂಬಿ ತುಷ್ಟನಪ್ಪಂತೆ ಭಾ
ಸುರ ಕನಕರತ್ನಾದಿವಸ್ತುನಿಚಯಂಗಳಂ
ಮರಳಿ ತಾಂ ಮುನ್ನಿನಂತೆವೊಲೆಯ್ದೆ ವಲ್ಮೀಕನಾಥನಿರದೊಳಗವಿದನು ೨೭

ಮಗುಳ್ದಿತ್ತ ವನಿತಾಶಿರೋಮಣಿಯೆನಿಪ್ಪ ಸೊಂ
ಪೊಗೆವ ಪಂಚೇಷುತಿಲಕಂ ದಲೆನಿಸುವ ಮುದ್ದು
ಮೊಗದಿನೊಪ್ಪುವ ಹಾವಭಾವಾದಿಗಳಿನೆಸೆವ ಪರವೆಯುಂ ನಂಬ್ಯಣ್ಣನು
ನೆಗಳ್ದ ಬಾಲಕ್ರೀಡೆಗುಚಿತವಿಧಿಗಳ ಸಮಂ
ತಗಲದೊಡನಾಡುತ್ತೆ ಶಿವಸೇವೆಗನುದಿನಂ
ಸೊಗಸಿನಿಂ ತಾವಿರ್ವರೊಡನೆಯ್ದಿ[2]ಬಂ[2]ದು ಮತ್ತೊಡನೆ ಗೃಹಕೆಯ್ದುತಿಂತು ೨೮

ಇರುತಿರಲ್ ಕೆಲವುದಿವಸಕ್ಕೆ ತಮ್ಮಿರ್ವರ್ಗೆ
ಸರಿದುಪೋಗಲ್ ಶೈಶವತ್ವಮುದನಱಿದು ಪೂ
ಸರಲನೊಯ್ಯನೆ ಬಿತ್ತಿದಂ ಮೋಹಬೀಜಮಂ ಮತ್ತವರ ಹೃದ್ಧರೆಯೊಳು
ಭರದಿನದು ಬೇರ್ವರಿದು ಮೊಳೆದೋಱಿಯೆಲೆಯಿಟ್ಟು
ಪರಿದು ದಾಂಗುಡಿಯೊರ್ವರೊರ್ವರೊಳ್ ನೆಱೆಪರ್ವಿ
ಸುರತಫಲಮಾಗಲನುಗೆಯ್ವವೇಳೆಯೊಳಿರ್ವರೊಳ್ ಕಾಮತಾಪಮೊಗೆಯೆ ೨೯

ಭರದೆ ನಿಟ್ಟುಸುರುಷ್ಣಮಾಗಿ ಪೊಱಸೂಸುತ್ತು
ಮಿರೆ ತೊಂಡೆದುಟಿರಸಂಬಱಿತಯೆ ಪಣೆಯೊಳಗೆಸೆವ
ಸಿರಿಕಂಡ[3]ವೊಟ್ಟು ಕತ್ತುರಿ[3]ವೊಟ್ಟುವೋಲಾಗೆ ತೊಟ್ಟ ಮುತ್ತೊಳ್ಯಾರವು
ಪುರಿದವೊಲ್ ಬಿಸುಪೇಱಿ ಮೂರ್ಛೆ ತಲೆದೋಱುತಿರೆ
ಸರಸರತಿಸುಖಕೆ ಮನವಾಟಿಸುತ್ತಿರೆ ಕಾಮ
ಶರದಂಡಲೆಗೆ ನಂಬಿ ಬೆಂಬಿಳ್ದು ಕಣ್ಗೆಟ್ಟು ಬಾಯ್ಬಿಡುತೆ ಶಿವನಿದಿರೊಳು ೩೦

---

[1] ನಂ (ಕ) [2] ವಂ (ಕ) [3] ಪಟ್ಟುಕತ್ತುರಿ (ಕ)

ಕನಕತಾಳಂಬಿಡಿದು ತಿರುಪಾಟನಂತಂತೆ
ಮನಸಿಜಾರಿಯ ಮುಂದೆ ಪಾಡುತಯ್ಯಾ ಎನಗೆ
ಘನಕುಚೆಯ ಪರಮನಾಚಿಯ ತಂದುಕುಡೆವೆಂದು ಬಿನ್ನೈಸೆ ಗಿರಿಜೇಶನು
ಮನಮುಣ್ಮೆ ಮುನ್ನಿನಂತೆಯ್ದೆ ವಿಪ್ರಾಕೃತಿಯ
ನನುವಿನಿಂ ತಾಳುತಾ ಪರಮನಾಚಿಯ ಪಿತನ
ಮನೆಗೆಯ್ದಿ ತದ್ದಂಪತಿಗಳನೊಲ್ದೀಕ್ಷಿಸುತೆ ನುಡಿದನವರೊಡನೀಶ್ವರಂ ೩೧

ಮಿಸುಪೆನ್ನ ಪುತ್ರ ನಂಬ್ಯಣ್ಣಂಗೆ ನಾಡೆ ಸಂ
ತಸದಿಂದೆ ನಿಮ್ಮ ಮಗಳಂ ಪರಮನಾಚಿಯಂ
ಮಸಕದಿಂದೀಯ್ವುದೆನಲವರೆಂದರೀಶನಂ ಮೂಱುವೇಳೆಯೊಳನುದಿನಂ
ಒಸೆದು ಸೇವಿಪ ಕಾಮಿನೀರತ್ನಮಂ ಬಳಿ
ಕ್ಕಸವಸದಿನೊರ್ವ ಪತಿಗೀಯೆಂದು ಸೀವೊಸೆದು
ಬೆಸಸುವುದು ಅನುಚಿತಂ ಬಳಿಕವಂಗಾರೊ ತಾಯ್ತಂದೆಗಳ್ ಭೂಮಿಯೊಳಗೆ ೩೨

ಪರಮಸಖರಾ ದೇವಗಾವಗೃಹವೆಂಬುದಂ
ಹ[1]ರಿಸ[1]ದಿಂ ನೀವೆ ಪೇಳಲೆ ವಿಪ್ರ ಮತ್ತನುಜೆ
ಸುರಪನಂ ಕಣ್ಣೆಟ್ಟು ನೋಡಳೀ ನಂಬಿಯನಪೇಕ್ಷಿಪಳೆ ಮನದೊಳನಿಸಂ
ಪಿರಿದು ನಿಮ್ಮಯ ತೊ[2]ಳ್ತ್ರಿ[2]ನಿರವನೇಂ ನೀವಱಿಯ
ದಿರವೆ ಸಾಕ್ಷಾದ್ದೇವವನಿತೆ ಮಗುಳ್ದೀಕ್ಷಿಪೊಡೆ
ವರಪದ್ಮಿನೀಜಾತಿಯಿಾ ಕನ್ನೆಗೆಣೆಯಾದ ಪುರುಷರೊಳರೇ ಧರೆಯೊಳು ೩೩

ಪಿರಿದವಳನಾಶ್ರೈಸಿ ಬರ್ದುಕುವುದು ಸಂತಸವೆ
ಕರಮೆಮ್ಮ ಬಾಂಧವಸಮೂಹವೆಲ್ಲಂ ನಿಮ್ಮ
ವರಸುತಂಗೀ ಕನ್ನೆಯಂ ಬೇಳ್ಪೊಡೆಮಗೆ ಸಾಸಿರಪೊನ್ನ ನಿಚ್ಚನಿಚ್ಚಂ
ಭರದಿಂದೆ ಕುಡಿಮೆನಲ್ಕಾ ವಿಪ್ರರೂಪಶಿವ
ನಿರದವರ ಮಾತಸಂಗೀಕರಿಸಿ ನಿಜಸೂನು
ಗರರೆ ನಂಬ್ಯಣ್ಣಂಗೆ ಸುವಿಟಾದಿ ರಾಜಪಟ್ಟಂಗಟ್ಟಿದಂ [3]ಮುಡ[3]ದೊಳು ೩೪

ಬಳಿಕೆ ಸಾಸಿರಪೊನ್ಗಳಂ ನಂಬಿಗನುದಿನಂ
ಘಳಿಲನೀಶ್ವರನೀವುತಾತಂಗೆ ತಾನೊಸೆದು
ಮಿಳಿರ್ವ ದೂತ್ಯಾಚರಣೆಗೆಯ್ವುತ್ತೆ ಪರಮನಾಚಿಯ ಗೃಹದೊಳನವರತವು

[1] ರುಪ (ಗ) [2] ತ್ರಿ (ಗ) [3] ಮನ (ಗ)

ತಳಿತ ಹ[1]ರಿಸ[1]ದೊಳಿರ್ಪ ನಂಬ್ಯಣ್ಣನೆಡೆಗೆ ಸ
ಲ್ಲಳಿತಮುದದಿಂ ಪೋಗುತೆಳ್ತರುತೆ ರತಿಸುಖ
ಕ್ಕೆಳಸಿದ ಸುವಸ್ತುಗಳನೀಯುತ್ತೆ ತಾಂ ವಿಟತ್ವವನೆಸಗುವಂ ನಂಬಿಗೆ ೩೫

ಪಿರಿದುಂ ವಿದೂಷಕನವೋಲ್ ಮತ್ತಮಿರ್ವರ್ಗೆ
ಭರದೆ ಕೂರ್ಮೆಗಳ ಪುಟ್ಟಿಸಪನಣಿಯರಂ ಮಗುಳ್ದು
ಸರಸೋಕ್ತಿಗಳ ವಿರಚಿಪಂ ನಾಗರಿಕನಂತೆ ಪೀಠಮರ್ದನ ಪಾಂಗಿನಿಂ
ನಿರುತಮೆಲ್ಲಾ ಕರ್ಮನಿವಹಂಗಳಂ ಮಾಳ್ಪ
ನುರುತರಪ್ರೇಮದಿಂ ಪೊನ್ಗಳಂ ಸಾಸಿರಮ
ನಿರದೀವನನುದಿನಂ ನಂಬಿಯಣ್ಣಂಗೆ ವಲ್ಮೀಕನಾಥಂ ಮುದದೊಳು ೩೬

ಪರಮನಾಚಿಯುಮೆಸೆವ ನಂಬ್ಯಣ್ಣನುಂ ಕಾಮ
ಶರನಿಧಿಯೊಳೋಲಾಡುತೊಂದುದಿವಸಂ ಮನೋ
ಹರ ಸಮರತಕ್ರೀಡೆಯೊಳ್ ಸುಖಾಕ್ರಾಂತಮಾನಸರಾಗಿ ತಾ[2]ಮಿ[2]ರ್ವರು
ಕರಮೆ ಮೂರ್ಛೆಯೊಳಿರ್ಪ ಕಾಲದೊಳ್ ನಂಬ್ಯಣ್ಣ
ನುರುತಿಥಿನಿಯುಕ್ತಾಷ್ಟಮದ ಕಲೆಯುಮೊಪ್ಪುವಾ
ಪರಮನಾಚಿಯ ಘನಸ್ತನತಟದೊಳಗೆ ತನ್ನ ಕೈಯನಿಂಬಿಟ್ಟೊಬಗಿರೆ ೩೭

ಪಿರಿದುಮುಮರ್ದಪ್ಪಿ ಚಪ್ಪಲರ್ದ ಪೆರ್ಮೊಲೆಯಲ್ಲಿ
ಕರಮೆಸೆವ ಘರ್ಮಜಲಹಾರಂಗಳುಂ ಮತ್ತೆ
ಸಿರಿಕಂಡದಣ್ಪಿಂಬಿವುಂ ಮಜ್ಜನೋದಕದ ಪೂಜಿಸಿದ ಪೂಮಾಲೆಯ
ಹ[3]ರಿಸ[3]ದಿಂ ಲೇಪಿಸಿದ ಚಂದನದ ರೀತಿ[4]ಯಂ[4]
ಭರದೆ ತನ್ನಯ ಕೈಗೆ ತೋಱೆ ಮಗುಳ್ದೆಚ್ಚತ್ತು
ಕರಯುಗಳಮಂ ತೆಗೆಯೆ ತನ್ನಿಷ್ಟಲಿಂಗದಾಕೃತಿಯೊಳೆಸೆಯಲ್ ಮೊಲೆಗಳು ೩೮

ನಿರುತಮಯ್ಯಾ ಎಂದು ಕರೆಯುತ್ತೆ ನುತಿಸುತಿರೆ
ಭರದಿನಾ ದನಿಗೇಳ್ದು ಕಣ್ದೆಱೆದು ನೋಡುತ್ತೆ
ವರನಂಬಿಯುಂ ಪರಮನಾಚಿ ನುಡಿದಳ್ ಕಟಕಿಯಿಂದೆ ನಿನ್ನಯೆ ಭಾವವು
ಕರಮೆ ಎಲ್ಲಾಗಳುಂ ಲಿಂಗಾವಧಾನಸುಖ
ದಿರವಿನೊಳಗಿಂತಪ್ಪುದೋ ನೆನಪಿನಭಿರತಿಯೊ
ಪಿರಿದುಮುಚಿತಕ್ರಿಯಾಲಾಪಕಲಿತಾರ್ಪಣಮೊ ಕಾಮುಕತ್ವದ ನುಡಿಗಳೊ ೩೯

---

[1] ರುಷ (ಗ) [2] ವೀ (ಗ) [3] ರುಷ (ಗ) [4] ಯಿಂ (ಗ)

ಮಿನುಪ ಮೊಲೆ ಲಿಂಗಮೆಂಬೀ ನುಡಿಯದೆಂತಾಯ್ತೊ
ಘನಕು[1]ಚಂ[1] ಲಿಂಗಮಾದೊಡೆ ನಿನಗೆ ಮುನ್ನೀವ
ಕನದಮಲ ನಿಷ್ಕಸಾಹಸ್ರಮಂ ಪಡೆ[2]ಯಿ[2]ಲ್ಲಿಯೆಂದು ಮೂದಲಿಸಲಾಗ
ವಿನಯನಿಧಿ ನಂಬ್ಯಣ್ಣನತಿಭಕ್ತಿಯಿಂದೆ ಘ
ಮ್ಮನೆ ಶಂಭುಮಂ ಕರೆದನಯ್ಯಾ ಎನುತ್ತೆ ಮಗು
ಳ್ದನುನಯದಿನಾ ದನಿಯ ಶಂಕರಂ ಕೇಳ್ದು ಸಾಸಿರಪೊನ್ನ ಕೊಟ್ಟನಲ್ಲಿ ೪೦

ಇಂತು ನೆಱೆ ಅನ್ಯೋನ್ಯಸಂಪ್ರೀತಿಯಿಂ ನಂಬಿ
ಸಂತಸದೆ ಪರಮನಾಚಿಯ ಸಂಗದಿಂ ಪ್ರೀತಿ
ಯಂ ತಳೆದು ಕೆಲದೆವಸದಿಂ ಮೇಲೆ ಮಂಗಲೂರ್ಗೆಯ್ತಂದು ನಂಬ್ಯಣ್ಣನು
ಕಂತುಹರಕೃಪೆಯಿಂದಮಂಗಸಂಗಾಸತಿಯ
ನಂತೆ ಸಂಭ್ರಮ:ದಿಂದೆ ಮದುವೆಯಾಗಲ್ಲಿ ಸುಖ
ಮಂ ತೋರ್ಪ ತೆಱದೆ ರತಿಸೌಖ್ಯದೊಳಗೋಲಾಡುತಿರ್ದನತಿಹರ್ಷದಿಂದಂ ೪೧

ನಿರುತಮಲ್ಲಿರ್ದ ಗಣಿಕಾಜನಂ ವಿಟಸಮಿತಿ
ಭರದೆ ತನ್ನಂ ಕೀರ್ತಿಸುತ್ತಿರಲ್ ಶಂಕರನ
ವರಮೂರ್ತಿಯೆನಿಪ ನಂಬಿಯ ಮಹಿಮೆಯಂ ಬಲ್ಲನಾವನೀ ಧರಣಿಯೊಳಗೆ
ಹ[3]ರಿಸ[3]ದಿಂ ಮುನ್ನಿರಿಸಿಕೊಂಡಿರ್ದ ಬೆಲೆವೆಣ್ಣ
ಪರಮನಾಚಿಯ ಗೃಹಾಂಗಣದ ಮಹಿಮೆಯ ಪೊಗಳ್ವೊ
ಡುರಗರಾಜಂಗಮದು ಶಕ್ಯಮಲ್ತಾದೊಡಂ ಪೇಳ್ವೆವಾವಱಿವನಿತನು ೪೨

ಸದಮಲಪ್ರಚುರವಿಶ್ರುತ ಪರಮಭಕ್ತಗಣ
ಪದಸರೋರುಹಸಾಂದ್ರ ಮಕರಂದಪಾನ ಸ
ಮ್ಮುದಿತ ಚಂಚಚ್ಚಂಚರೀಕನನವರತ ಪಂಚಾಕ್ಷರೀಪ್ರಸಿತಹೃದಯಂ
ವಿದಿತ ಮಂಜುಳನೀಲಕಂಠಾಹ್ವಯಂ ಮನೋ
ಮುದದೆ ಪೇಳ್ದುರುತರಾರಾಧ್ಯಚಾರಿತ್ರದೊಳ
ಗಿದು ವಲಂ ನಂಬಿಯಣ್ಣನ ಕಥನಮಿದನಾಲಿಪುದು ಪರಮಸದ್ಭಕ್ತರು ೪೩

---

[1] ಚಾ (ಕಗ) [2] ಯ (ಕ) [3] ರುಷ (ಗ)

# ಏಳನೆಯ ಸಂಧಿ

## *ಪರಮನಾಚಿಯ ಗೃಹಾಂಗಣದ ಮಹಿಮೆ

ಸೂಚನೆ : ಪರಮನಾಚಿಯ ಗೃಹಾಂಗಣದ ಮಾಹಾತ್ಮ್ಯವಂ
ಕರಮೆಸೆವೊರುಮುಕ್ಕಾಳುವಾರಿಚೋಳಂಗೆ ಪೇ
ಳ್ದುರುಕಥನಮಂ ಕೇಳ ಸೂರಸಚಿವೇಂದ್ರ ನೀಂ ಮನದಲಂಪಿಂ ಸಂತತಂ

ನಿರುಪಮೂರ್ಧ್ವೇಕ್ಷಣಾಗ್ನಿಜ್ವಾಲೆ ಮೇಗಣ್ಗೆ
ಭರದೆ ನೆಗೆಯಲ್ಕದಱ ಕೊನೆಯೂಮೆ ತಾಗಿ ಭಾ
ಸುರಕೃಷ್ಣತೆಯೊಳೊಂದಿ ಜಡೆಮುಡಿಯೊಳಿರ್ಪ ಶಶಿಯಂ ಪಿಡಿಯಲೆಯ್ದಿ ಬಂದ
ಪಿರಿಯ ರಾಹುವೊ ಎಂಬ ಶಂಕೆಯಂ ಬೀಱುತ್ತೆ
ವರ ಕಪರ್ದದೊಳೆಸೆವ ನೃಕರೋಟಿಯಿಂದೆ ಸೌಂ
ದರಮಾಗಿ ದೇವತತಿಯೊಳ್ ಶೋಭಿಸುವ ನೀಲಕಂಠ[1]ನೆಮಗೀಗೆ ಶುಭಮಂ[1] ೧

ಎಲೆ ಪಿರಿಯನಂಗೆ ಕೇಳ್ ಚೋಳಭೂಮೀಶ್ವರನ
ಲಲನೆ [2]ಮ[2]ಡಿಯಲ್ ತದಸ್ಥಿಗಳನಾ ಭೂಮಿಪಂ
ನಲಿದು ಪಾರ್ವರ ಕಯ್ಯೊಳಾ ಗಯೆಗೆ ಕಳುಪುತಿರಲಾ ವೇಳೆಯೊಳ್ ಚೋಳನ
ಕುಲಗುರುವೆನಿಪ್ಪ ಶಿವಭಕ್ತಿತತ್ಪರನಪ್ಪ
ಲಲಿತಮೊರುಮುಕ್ಕಾಳುವಾರಿಯಾ ಗಯೆಯ ಸ
ಲ್ಲಲಿತ ಮಹಿಮೆಯ ಕೇಳೆನುತ್ತೆ ತಚ್ಚೋಳಂಗೆ ಪೇಳ್ದಂ ಪುರಾಣಕಥೆಯಂ ೨

ಅತಿಬಲನೆನಿಪ್ಪೊರ್ವ ದಾನವಂ ಮುನ್ನೆ ಪಶು
ಪತಿಯನುದ್ದೇಶಿಸಿಯಘೋರತಪಮಂ ರಚಿಸಿ
ರತಿಪಮದಹರಣನಾತಂಗೆ ನಿಜಮಂ ತೋಱೆ ತದ್ದೈತ್ಯನಳ್ತಿವಟ್ಟು
ಅತಿಶಯದ ಭಕ್ತಿಯಿಂದೆಱಗಿ ಸರ್ವೇಶ್ವರಾ
ಕ್ರತುಹರನೆ ಮಗುಳ್ದಾಂ ಶಿಲಾರೂಪನಪ್ಪೆನ್ನು
ನ್ನತಮಾದ ನಿನ್ನ ವಾಮಾಂಘ್ರಿಯಂ ಕುಱುಪುಮಾಡೆನ್ನ ಬೆನ್ನೊಳ್ ಸೊಬಗಿನಿಂ ೩

[1] ನೆಮ್ಮಂ ಸಲಹುಗೆ (ಗ) [2] ನು (ಕ)
(ಕಗ) ಪ್ರತಿಗಳಲ್ಲಿಲ್ಲ.

ಅದಱಲ್ಲಿ ಚರಣದೊಳ್ ಭಕ್ತಿಪೂರ್ವಕದಿಂದೆ
ಸದಮಲರ ತನ್ನ ಪಿತೃಗಳ ಕುಱಿತು ಪಿಂಡಮಂ
ಪದೆದಿಡುವನಾವನೊರ್ವಂ ಬಳಿಕ್ಕವರ ಪಿತೃನಿಚಯಮಾ ಪಿಂಡಂಗಳಂ
ಮುದದೆ ತಂತಮ್ಮ ಕೈಗಳಿನವಂ ಸ್ವೀಕರಿಸಿ
ವಿದಿತ ಪಿತೃಲೋಕಕೆಯ್ದುವ ವರವನೀಯೆನಲ್
ಮದನಾರಿಯೊಲ್ದು ಗಯಾಸುರಂಗಾ ವರಮನಿತ್ತನಿಂತಿದು ಚೋದ್ಯಮೆ ೪

ಬಳಿಕಮೊಂದೇಪಾದಮಾ ಗಯಾಸು[1]ರ[1]ನ ಬೆ
ನ್ನೊಳಗೆ ಸೊಗಯಿಪ್ಪ ತಿರುವಾರೂರೊಳಗೆ ಮಿನುಪ
ಲಲನಾಶಿರೋರತ್ನ ಪರಮನಾಚಿಯ ಮನೆಗೆ ಮೂವತ್ತುಬರಿಸದಿಂದಂ
ಮಿಳಿರ್ವ ನಂಬಿಯ ಕುಱಿತು ವಲ್ಮೀಕನಾಥನೊ
ಲ್ದೆಳಸಿ ಕೊಂಟಣಿತನಕೆ ನಿಚ್ಚನಿಚ್ಚಂ ಪೋಪ
ನಿಳೆಯಱಿಯೆ ತಚ್ಛಂಭುಚರಣಮಾಯೆಡೆಯಲ್ಲಿ ಶತಕೋಟಿಗಧಿಕಮುಂಟು ೫

ಹರಪಾದಸಮುದಯಂ ಪರಮನಾಚಿಯ ಮನೆಯ
ಪಿರಿಯಂಗಣದೊಳೊಪ್ಪುತಿರಲಸ್ಥಿಯಂ ಗಯೆಗೆ
ಹ[2]ರಿಸ[2]ದಿಂ ಕಳುಪುವುದು ಮತಮಲ್ತೆನುತ್ತದಂ ಬಿಡಿಸಿ ತಚ್ಚೋಳಗುರುವು
ಪರಮನಾಚಿಯಗೃಹಕೆ ಚೋಳಭೂಪಂಗೂಡಿ
ನಿರುತದಿಂ ತಚ್ಛಲ್ಯನಿಕರಂಗಳಂ ಕೊಂಡು
ತುರಿತದಿಂದೆಯ್ದಿ ವಿಧ್ಯುಕ್ತದಿಂ ಪಿಂಡಪ್ರದಾನಂಗೆಯಲ್ ತತ್‌ಕ್ಷಣಂ ೬

ತೊಳಪ ತತ್ಪಿತರರ್ಕಳೆಲ್ಲ ತಂತಮ್ಮ ಕೈ
ಗಳ ನೀಡಿ ಪಿಂಡಂಗಳಂ ಗ್ರಹಿಸಿ ತುಷ್ಟಿವಡು
ತಿಳಿಯ ಜನರೆಲ್ಲ ನೋಡುತ್ತುಮಿರೆ ರುದ್ರಲೋಕಪ್ರಾಪ್ತರಾದರವರು
ತಿಳಿಯೆ ಕುಲಕೋಟಿಂ ಸಮುದ್ಧರೇದೆಂಬ ಸ
ಲ್ಲಲಿತವಾಕ್ಯಂ ಚೋಳಭೂಮೀಶ್ವರಂಗೆ ಕೈ
ಯೊಳಗಾದುದೆಂದು ಲೋಕಂ ಕೀರ್ತಿಸುತ್ತಿರ್ದುದಾ ಚೋಳಭೂಪಾಲನಂ ೭

ಹ[2]ರಿಸ[2]ದಿಂದುತ್ತುಂಗಚೋಳಭೂಪಂ ತನ್ನ
ಗುರುಗೆಱಗಿ ಬಾಯ ಪಸ ಪರಿವಂತೆ ಕೊಂಡಾಡಿ
ಪರಮ ತಿರುಚಿಟ್ಟಂಬಲೇಶ್ವರಂ ತಾನೀತನಲ್ತೆ ಪರಿಕಿಸೆ ಭೂಮಿಗೆ

---

[1] ತ (ಟ) [2] ರುಷ (ಗ)

ನಿರುಪಮಂಗೀತಂಗಿದೇನರಿದು ಮುನ್ನೊಂದು
ಸರಳಶುನಕಂ ಪ್ರತಿದಿನಂ ಮನೆಗಳಂ ನಾಡೆ
ಭರದೆ [1]ಪುಗು[1]ತಂದು ಭಾಂಡಂಗಳಂ ಮುಟ್ಟಲವನೆಯ್ದೆ ಬಿಸುಡಲ್ಕಾಱದೆ ೮

ತೊಳಪ ತಚ್ಛುನಕಭಾಳದೊಳೊಲ್ದು ತಿಸುಳಮಂ
ಘಳಿಲನೊತ್ತಿಬಿಡಲ್ಕೆ ತನ್ನಿಚ್ಛೆಯಿಂದ[2]ಮಾ[2]
ಮಿಳಿರ್ವ ಶುನಕಂ ಭೀತಿಯಂ ಬಿಟ್ಟು ಮನೆಮನೆಗಳೊಳಗೆ ವಿಸಟಂಬರಿಯುತೆ
ತೊಳಲುತಿರ್ಪಾ ಶುನಕನಂ ದ್ವಿಜರ್ ನೋಡಿ ಮ
ತ್ತಳಘುಕೋಪದೆ ನುಡಿದರೀ ಶುನಕನೆಂಜಲಂ
ಘಳಿಲನಂಗೀಕರಿಪುದೇಂ ಭಕ್ತಿಯೇ ಲೋಕದೊಳಗಱಯೆವಾವಿಂತುಟಂ ೯

ಪಿರಿದಿಂತು ನಿಂದಿಸಲ್ ಕೇಳಿಯಾ ಶುನಕನುಱ
ನಿರುತಮೇಂ ಶುನಕನೇ ಆದನೆಯ್ದೆ ಶುನಕನೆಂ
ಬುರುತರ ದ್ವಿಜರೆ ಶುನಕರ್ ತ್ರಿಶೂಲದ ಮಹತ್ವಮನೊಸೆದು ಕೇಳ್ದಱಯಿರೆ
ಕರಮಗ್ನಿನಾ ಪಚ್ಯಮಾನಾದೆನುತ್ತೆ ಮ
ತ್ತಿರಲುಂ ತ್ರಿಶೂಲನಿಹಿತಸ್ಯಧಾವತಿ ಎಂಬ
ಪರಮವಾಕ್ಯಂ ತ್ರಿಶೂಲಂದಾಳ್ದಪಂ ಮುನ್ನ ತಂನಾಡೆ ಭೂಮಿಯೊಳಗೆ ೧೦

ಎನುತಲಾ ಶುನಕನಿಂದಂ ವೇದಮೋದಿಸಲ್
ಮನುಜರೆಲ್ಲರ್ ಕೇಳ್ದು ಬಿಸವಂದಮಂ ತಾಳ್ದ
ರನುನಯಂ ವಿಪ್ರತತಿ ನುಡಿಸುತ್ತೆ ಭಕ್ತಿಯಿಂದಂ ತುಳಿಲ್ಗೆಯ್ದರೊಸೆದು
ಅನಘ ಹಾವಿನಹಾಳ ಕಲ್ಲಿದೇವಂ ಮುನ್ನೆ
ಮಿನುಗುತಿರ್ಪಾ ಸಾರಮೇಯನಿಂದೋದಿಸಿದ
ನೆನಸುಮಾಮ್ನಾಯಂಗಳಂ ಮತ್ತೆ ಪೂರ್ವದೊಳಗಾ ಮಹಾಕಾಲದೇವಂ ೧೧

ವರ ಶುನಕನಿಂದೆ ವೇದಂಗಳಂ ಪಠಿಯಿಸಿದ
ನಿರದವಂ ಕೇಳ್ದಱವೆವೀಗ ಸಮ್ಮುಖದಲ್ಲಿ
ಕರಮೆ ಕಂಡೆವೆನುತ್ತೆ ಮಸ್ತಕನ್ಯಸ್ತಹಸ್ತರುಮಾದರಾ ಭಕ್ತರು
ಪಿರಿದುಮಿದುಮಲ್ತು ಮತ್ತೊರ್ವನುಗ್ರದ್ವಿಜಂ
ನಿರುತದಿಂ ಬ್ರಹ್ಮಹತ್ಯಂಗಳನನೇಕಮಂ
ಪರುಠವಿಸಲವನ ಬೊಮ್ಮಕ್ರೀತಿಗಳನಾ ದ್ವಿಜರ್ ಪರಿಹರಿಸಲಱಯದವರು ೧೨

---

1 ಪಠಿ (ಗ) 2 ಲಾ (ಗ)

ಭರದೆ ನಿಮ್ಮಡಿಯನೆಯ್ದಲ್ಕಾಗ ವಿಪ್ರರೊಡ
ನಿರದಿಂತು ನುಡಿ[1]ದಿ[1]ರಿಲೆ ಮದ್ಗುರುವೆ ವೇದಮಂ
ಪರಿಕಿಸಿತ್ತಿಲ್ಲವೋವೋದಿ ಮಱದಿರೊ ನೀಂ ನಮಶ್ಶಿವಾಯ ಚ ಎನುತ್ತೆ
ನಿರುತದಿಂದಂ ಶಿವತರಾಯ ಎನುತುಂ ಮುದದೆ
ಕರಮೆ ಶತರುದ್ರೀಯಮುಲಿಗುಮಂತೆವೊಲೆಯ್ದೆ
ಸರಳನಾರಾಯಣಯೆನಿಪ್ಪುಪನಿಷತ್ತು ವಿರಜಾವಸರದಲ್ಲಿ ನುಡಿಗುಂ ೧೩

ಪಿರಿದುಂ ನಮಶ್ಶಿವಾಯ ಸ್ವಾಹ ಎಂದು ಮ
ತ್ತಿರದೆ ಶತರುದ್ರೀಯ ಮಧ್ಯಗಾ ಎಂದು ಭಾ
ಸುರವೋನ್ನಮಶ್ಶಿವಾ ಎಂದಂತ್ಯಜೋವಾಗ್ರಜೋವಾ ಎನುತ್ತೆ ಮತ್ತಂ
ನಿರುತದಿನನೇನಸದೃಶಂ ಜಪ್ಯವೆಂದು ನಿ
ರ್ಭರದೆ ನಾಸ್ತಿ ಎನುತ್ತೆ ಯಸ್ಮರಂತಿ ಎನುತ್ತೆ
ಮರಳಿ ಜಪತೋವಾಪ್ನುಯಾಚ್ಛಿವಂ ಎನುತೆ ವಾಕ್ಯಂಗಳುಲಿಯುತ್ತುಮಿರಲು ೧೪

ಮಿಸುಪ ಪಂಚಾಕ್ಷರೀಮನುವನೊರ್ಮೊದಲೊಸೆದು
ವಿನಯದಿಂದುಚ್ಚರಿಸಲಾಕ್ಷಣಂ ಭಾವಿಸಲ್
ಘನತರಬ್ರಹ್ಮಹತ್ಯಾರ್ಬುದಂ ಬೆಂದುಪೋಕುಮಿದಲ್ಲದುಳಿದ ಮಂತ್ರಂ
ಕನದಘಂಗಳ ಕಿಡಿಸಶಕ್ತಿಯುಂಟೇ ನೀಮೆ
ಮನವೊಲ್ದು ಪೇಳಿಮೆನಲಾ ವಿಪ್ರರಿಂತೆಂದ
ರನುನಯದೆ ಕೃಚ್ಛ್ರಚಾಂದ್ರಾಯಣಪ್ರಮುಖಸುವ್ರತಚರ್ಯೆಗಳನಸವಸಂ ೧೫

ಧರಣೀಪ್ರದಕ್ಷಿಣಂಗಳನೊಲ್ದು ಭೈಕ್ಷಾನ್ನ
ವರ ಕಪಾಲಾದಿಧಾರಣವಿತತಿಗಳನುಳಿದು
ಪಿರಿದು ಪ್ರಾಯಶ್ಚಿತ್ತಮಂ ಪೇಳ್ವುದಾವ ವೇದಂ ಬ್ರಹ್ಮಹತ್ಯಕನಿಶಂ
ಕರಮೆ ಪಂಚಾಕ್ಷರೀಮಂತ್ರದಿಂ ಬೊಮ್ಮೆತಿ
ನಿರುತಮಳಿವೊಡೆ ಪೂರ್ವದೊಳ್ ಪೇಳ್ದ ವೇದಾದಿ
ಪರಮಾಗವೋದ್ದಿಷ್ಟ ಸರ್ವವಿಧಿಗಳ್ ಪುರಾಣಂ ಪೇಳ್ದ ಸತ್ಕ್ರಿಯೆಗಳು ೧೬

ವರ ಭಾಟ್ಟಶಾಸ್ತ್ರಾದಿಗಳೊಳೆಯ್ದೆ ಪೇಳ್ದ ಸುರು
ಚಿರತರನ್ಯಾಯವಿಧಿಗಳ್ ವ್ಯರ್ಥಮೇ ಧರೆಯೊ
ಳುರುತರ ಬ್ರಹ್ಮಹತ್ಯಂಗಳಂ ಪಲವಂ ನಿಮಿರ್ಚಿ ಬಳಿಕಂ ಸಂತತಂ

---

1 ದ (ಕಗ)

ಪಿರಿದುಂ ನಮಃಶ್ಶಿವಾ ಎಂದೊಡದು ತವಿಸುಗುಮೆ
ನಿರುತಮೆತ್ತೀಯಿತೆಂದೊಡೆ ಗುಂಟದೊಳ್ ಬಂಧಿ
ಸಿರಿಸೆಂಬವೊಲ್ ಕದ್ರುಪ್ಪಂಬಡೆದ ಸಂಬಂಧಮಂ ನುಡಿಯವೇಡೀಗಳು ೧೭

ಪರಮವಿಧಿಪೂರ್ವಕಂಗಳುಮಾದ ವಿಧಿಗಳಂ
ನಿರುತದಿಂ ಪೇಳಿಮಲ್ಲದೊಡುಸಿಕನಿರಿಮೆಂದು
ಭರದಿಂದೆ ಪಾರ್ವರೆಲ್ಲರ್ ನುಡಿಯೆ ಕೇಳಿಯುದನಿಂತೆಂದು ನುಡಿದರಂದು
ಪರ ಗೌತಮವ್ಯಾಸಭೃಗುದಧೀಚ್ಯಾದಿಗಳ
ಸರಳಶಾಪದೆ ನಿಮಗೆ ಶಂಭು ಸಾಮರ್ಥ್ಯಮುಂ
ಪಿರಿದುಮಯಮರ್ಥೋ ನ ರೋಚತೇ ಎಂಬ ವಾಕ್ಯಾನುಸಾರದೆ ಸೊಗಸದು ೧೮

ದುರಿತಸಂಯುಕ್ತರಿರ ವಿಪ್ರರಿರ ಮುನ್ನೆ ಸರ
ಸಿರುಹಭವಪಾತ್ರ ದಶಮುಖನ ಕೊಂದಿಕ್ಕಿದಾ
ಯುುರುತರಬ್ರಹ್ಮಹತ್ಯಮ[1]ನಂ[1]ದು ರಾಮನೀಶ್ವರಪೂಜೆಗೆಯ್ದು ಬಳಿಕಂ
ಪರಮಪಂಚಾಕ್ಷರೀಜಪದಿಂದೆ ನೀಗಿದಂ
ಸ್ಫುರಿತಮಿಾ ಪಂಚಾಕ್ಷರೀಮಂತ್ರಸಿದ್ಧಿಯಿಂ
ಶರಣನರ್ಯಮರಾಜನೆಯ್ದೆ ಪಾರ್ವನ ಕೊಂದ ಪಾಪಮಂ ನೆಱತವಿಸನೆ ೧೯

ತನ್ನ ಪಿತನಂ ಕ್ರೋಧದಿಂ ಕೊಂದು ಚಂಡೇಶ
ನುನ್ನತ ಬ್ರಹ್ಮಹತ್ಯಂದೊಲಗನೇ ಮುನ್ನೆ
ಸನ್ನುತಂ ಪಂಚಾಕ್ಷರೀಜಪಂ ಪಿಂಗಿ ಮತ್ತಾವವಿಧಿಗಳ್ ಧರೆಯೊಳು
ಸನ್ನಿದಂ ಬ್ರಹ್ಮಹತ್ಯಂಗಳಂ ತವಿಸುಗುಂ
ನನ್ನಿಯಿಂ ಶ್ರುತಿಯೇಕಮೇವಾದ್ವಿತೀಯಮೆನು
ತುಂ ನಿಕ್ಕುವಂ ನ ದ್ವಿತೀಯಾಯತಸ್ಥೇ ಎನುತ್ತೆ ಮತ್ತಂ ವೇದವು ೨೦

ನಿರುತದಿಂ ನ ದ್ವಿತೀಯಾಸ್ತಿ ಕುತ್ರಚಿದೆನುತೆ
ಭರದಿಂದೆ ಪಂಚಾಕ್ಷರೀಸ್ಥಿತಾಃ ಎನುತೆ ಮ
ತ್ತಿರದೆ ಶಾಸ್ತ್ರಾಣೀ ಶ್ರುತಯೊ ಎನುತೆ ತಂತ್ರಂಗಳೊರೆದಂತೆ ವಿಲಯದಲ್ಲಿ
ಪರಮ ಪಂಚಾಕ್ಷರಿಯೊಳೆಲ್ಲವೇದಂಗಳುಂ
ಸರಳ ಶಬ್ದಪ್ರಪಂಚಂಗಳುಂ ಮಂತ್ರತತಿ
ಪಿರಿದಡಂಗಿರ್ಕುಮಂತಾ ಸೃಷ್ಟಿಸಮಯದೊಳಗದಱಿಂದಮುದ್ಭವಿಸುಗುಂ ೨೧

---

[1] ನೊಂ (ಕ)

ಅದಱಿಂನೀ ಪಂಚಾಕ್ಷರೀಮಂತ್ರವೈಭವವು
ನೊದವಿ ಪೇಳಲ್ ನುಡಿಗೆ ಮನಕಗೋಚರವೆಂದೊ
ಡುದಿತವಿದಱಾಧಿಕ್ಯಮಂ ಪೇಳ್ವೆನೆಲ್ಲಿದಂ ಭ್ರಾಂತರಿರ ಮತ್ತೆ ವೇದಂ
ವಿದಿತದಿಂ ಬ್ರಹ್ಮಹತ್ಯಾಂ ಚ ಕೃ[1]ತ್ವಾ[1] ಎನುತೆ
ಮುದದಿಂದಮುಚ್ಯತೇ ಸರ್ವಪಾಪೈಃ ಎನುತೆ
ಪದೆದು ನುಡಿದಂತೆಲ್ಲ ಪಾತಕಂಗಳ್ ಕಿಡುಗುವಿಾ ಮಂತ್ರವೊಂದಱಿಂದಂ ೨೨

ಮರಳಿ ಪೂತೋ ಭವತಿ ಎಂದಂತೆ ಮನವೊಲ್ದು
ಸರಳಭಸ್ಮೋದ್ಧೂಳನಂಗೆಯ್ಯೆ ಬೊಮ್ಮೆಂತಿ
ಯಿರದೆ ತವಿಕುಂ ಪಾತಕಾಪಹಂ ಎಂದಂತೆ ಮತ್ತೆ ವೇದಂ ಮುದದೊಳು
ಪರಮ ನಿರ್ಮಾಲ್ಯಧಾರಣಮಂತೆ ಕಿಡಿಸುಗುಂ
ಕರಮೆ ಬೊಮ್ಮೆಂತಿಗಡಣಂಗಳಂ ಮತ್ತೆಯುಂ
ನಿರುತದಿಂ ವ್ಯಂಹೋವ್ಯಮಿಾವ ಪೂತಾತೇ ಭವಂತಿ ಎಂದಂತೆ ವೇದಂ ೨೩

ವಿತತ ಪ್ರಸಾದಭೋಗದೆ ಸರ್ಬಬೊಮ್ಮೆಂತಿ
ಹತವೆಯ್ದುಗುಂ ತೇಪಿ ಪೂತಾ ಭವಂತಿ ಎನು
ತತಿಶಯದೊಳೆಯ್ದೆ ಮುತ್ಪಾದಾಂಬುವೆನಿಕುಂ ನಿಷೇವಣಂ ಎಂದ ಸೆಱದಿಂ
ಸತತಮಿಾಶಪದಾಂಬುಸೇವನದೆ ಬೊಮ್ಮೆಂತಿ
ಯತಿನಾಶಮೆಯ್ದುಗುಂ ಮತ್ತೆ ವೇದಂ ಮಹೋ
ನ್ನತಿಯಿಂದೆ ನುಡಿದವೋಲಿವಱಿಂದೆ ಕಿಡುಗುಮಾ ಬ್ರಹ್ಮಹತ್ಯಂ ಧರೆಯೊಳು ೨೪

ಪಿರಿದು ಶಿವಭಕ್ತಸ್ಯ ದರ್ಶನಾ ದೇವ ಎನು
ತ್ತಿ[2]ರೆ[2] ಸರ್ವಶಃ ಎನು[3]ತ ದಿಷ್ಪತ್ರಿ ಎನುತೆ ಮ[3]
ತ್ತುರುನಾದದಿಂ ಸುಪರ್ಣೇ ವಿಶೇಷತ ಎನುತೆ ಸೋಮಃ ಪವಿತ್ರವೆನುತೆ
ಮರಳಿಯು[4]ಮ[4]ಯಾ ಎನುತೆ ಸಹಿತೋ ಎನುತ್ತೆ ಮ
ತ್ತಿರದೆ [5]ದೇವಸ್ಸೋಮ[5] ಎನುತೆ ಸಂತೋಷದಿಂ
ವರಸೋಮಶಬ್ದಮುಚ್ಚರಿಸಲೊಡನಳಿಗುಮಾ ಬ್ರಹ್ಮಹತ್ಯಂ ಸಂತತಂ ೨೫

ಸಲೆ ಯಶ್ಶಿವೇತಿ ಸ್ಮರೇತ್ಸಕಚಿದೆನುತ್ತೆ ಮ
ತ್ತಲದರ್ಪ ಶಿವಮೇವಾನುಚಿಂತಯೇದೆನುತೆ ಮ
ತ್ತಲಘು ಶಿವಯಿತ್ಯಕ್ಷರದ್ವಯಂ ಎನುತೆ ಮತ್ತಂ ವೇದಮುಲಿಯುತಿರ್ಕುಂ

---

[1] ಛ್ಪಾ (ಕ) [2] ರದೆ (ಗ) [3] ತೆ ವಿಷ್ಪತ್ರಿಯೆನುತೆಮು (ಗ) [4] ವ (ಗ) [5] ಸೋಮ ದೇವಃ ಸೋಮ (ಗ)

ಅಲಸದೆ ಶಿವೇತಿ ವಾಚಂ ವದೇದೆಂದುಮಿಂ
ತೊಲವಿನಿಂ ಸೂಕ್ತಿವಿಸರಂಗಳೆಲ್ಲಾಗಳುಂ
ನಲಿದು ಪೇಳುತ್ತಿರಲ್ ಶಿವನ ಸಂಸ್ಮರಣೆಯಿಂ ಕಿಡದೆ ಬೊಮ್ಮೇತಿ ಸತತಂ ೨೬

ಬಿನುಗು ಪಕ್ಷಿ[1]ಯು ಕೊಲೆಗೆ[1] ಪಾಶುಪತಬಾಣಮಂ
ಮುನಿದು ತುಡುವರೆ ಶಿವನ ಪೂಜೆಯಿಂ ಪಾತಕಂ
ಘನಮಳಿದುಪೋಕುಮನಿಶಂ ಭಸ್ಮ ಶಿವಪದಾಂಬುಪ್ರಸಾದಂಗಳಿಂದಂ
ಕನದಮಲನಿರ್ಮಾಲ್ಯದಿಂ ಭಕ್ತದರ್ಶನದೆ
ಮಿನುಪ ಸೋಮಂ ಎಂಬ ಪಠಣೆಯಿಂ ಕಿಡುತಿರ
ಲ್ಕನಘಪಂಚಾಕ್ಷರೀಮನುವರೆಗಮೇತರ್ಕೆ ಬೊಮ್ಮೇತಿಯಂ ತವಿಸಲು ೨೭

ಪಿರಿದಿಂತು ನುಡಿದ ವಾಕ್ಯಂಗಳುಂ ನಿಮಗೆ ಮ
ತ್ತಿರದೇಗಳುಂ ಪ್ರವೃತ್ತಿನಿವೃತ್ತಿಗ[2]ಳಿ[2]ನೊಸೆದು
ಭರದಿಂ ಪ್ರಮಾಣಂಗಳಲ್ಲವೋ ಮತ್ತೆ ಧರ್ಮಾಧರ್ಮವಿತತಿಗಳ್ಗೆ
ವರ ಸಮ್ಮತಂಗಳಲ್ಲವೊ ಶಿವನ ಮಹಿಮೆಯಂ
ಹರಿಸ[3]ದಿಂ ವ್ಯಕ್ತಮಾಗಲ್ ಪೊಗಳ್ವ ವಾಕ್ಯಂಗ
ಳುರುತರಾಮ್ನಾಯಮೂಲಂಗಳಲ್ಲವೊ ನಿಮಗೆ ಪಿರಿದು ಸೊಗಸುಗಳಲ್ಲವೊ ೨೮

ಮಿಗೆ ಋಷಿಪ್ರೋಕ್ತಂಗಳಲ್ಲವೋ ಬಳಿಕಿವುಂ
ತಗುಳ್ದೀಗಲಾದುವೋ ಪ್ರಕ್ಷಿಪ್ತವಾಕ್ಯಗಳೊ
ಸೊಗಸಿನಿಂ ಸ್ವಮತಾಭಿಮತದ ವಾಕ್ಯಂಗಳೋ ಸ್ತುತಿಪರಂಗಳೊ ಸಂತತಂ
ಬಗೆದು ನೋಡಲ್ ಶ್ರೌತಸೂತ್ರಕ್ಕೆಯುಂ ಸ್ಮೃತಿಗೆ
ತೆಗಳಾಗಿ ತೋರ್ಕುಮೋ ಎಲೆ ವಿಪ್ರರಿರ ನಿಮಗೆ
ನೆಗಳ್ದ ತದ್ವಾಕ್ಯಂಗಳೆಂತುಜಿತನಿಷೇಧಂಗಳೆಂತುಮತಿಪರಿಭಾವಿಸೆ ೨೯

ಪಿರಿದು ಧರ್ಮಾಧರ್ಮನಿರ್ಣಯದೊಳೀ ವಾಕ್ಯ
ದೊರೆಗೆ ಬರ್ಪೊಂದು ಪವಣೀ ಲೋಕದೊಳಗಿಲ್ಲ
ಭರದಿಂ ಶಿವಾಧಿಕ್ಯನಿರ್ಣಯದೊಳುಂ ಮತ್ತಮೀ ವಾಕ್ಯವೇ ಪ್ರಮಾಣಂ
ವರ ಭಕ್ತಿಮಹಿಮೆಯಿಂ ಪ್ರತ್ಯಕ್ಷಮಂ ನಿಮಗೆ
ಕರಮೆ ತೋಱಿಸಿ ಪರಮಪಂಚಾಕ್ಷರೀಮನುವ
ಸರಳಮಹಿಮೆಯನವನಿಯೊಳ್ ನಿಱಿಸಿದಪೆನೀಗಳೆಲ್ಲರಱುವಂತೆ ಮುದದಿಂ ೩೦

---

[1] ಯಣಲಿಗೆ (ಗ) [2] ಳ (ಕಗ) [3] ರುಷ (ಗ)

ಮಿನುಪ ದೃಷ್ಟಪ್ರತ್ಯಯಂದೋಱಿದಪೆನೆನುತೆ
ಘನತರ ಬ್ರಹ್ಮಹತ್ಯಾಕಾರಿಯಂ ಕರೆದು
ವಿನಯದಿಂ ತೃಣಮನಿತ್ತವನ ಕೈಯೊಳ್ ಪಸಿದ ಕಪಿಲೆಯೊಂದರ್ಕೆ ಕುಡಿಸೆ
ಮನವೊಲ್ದದಂ ನೋಡದಾ ಕಪಿಲೆಯುಸಿಕನಿರೆ
ಸನಯದೆ ನಮಶ್ಶಿವಾ ಎನುತೀಯುವ್ವೆದೆಂದವಂ
ಗನುನಯಂ ಪೇಳಲವನಂತೆನುತೆ ಕುಡೆ ಮುದದೆ ಕಪಿಲೆ ಪುಲ್ ಮೇಯಿತಂದು ೩೧

ಹ[1]ರಿಸ[1]ದಿಂದೆಲ್ಲ ವಿಪ್ರರ್ ನಿಟಲತಟನಿಹಿತ
ಕರಯುಗಳರಾಗಿ ನುತಿಸುತ್ತಿರಲ್ ಮತ್ತೆ ಭಾ
ಸುರ ವೇದಸಮ್ಮತದಿನಾ ಮಹಾಸ್ತೋತ್ರಪ್ರಬಂಧಮಂ ವಿರಚಿಸಿದಿರಿ
ವರ ಗುರುವೆ ನಿಮ್ಮ ಮಹಿಮೆಯ ಪೊಗಳ್ವೊಡಾರ್ಗಮದು
ಕರಮಶಕ್ಯಮೆನುತ್ತೆ ಚೋಳಭೂಪಾಲನತಿ
ಭರದಿಂದಮೆಱಗಿ ಸದ್ಭಕ್ತಿಯಿಂ ಸ್ತುತಿಸಿದಂ ಮನದಲಂಪುಣ್ಮುತಿರಲು ೩೨

ಪಿರಿದುಮೊರುಮುಕ್ಕಾಳುವಾರಿ ನಂಬಿಯ ವ[2]ನಿ[2]ತೆ
ಪರಮನಾಚಿಯ ಗೃಹಾಂಗಣದ ಮಾಹಾತ್ಮ್ಯಮಂ
ನರರ್ಗೆ ತೋಱಿದನದಱಿನದೆ ವಲಂ ಶ್ರೀಶೈಲವಾ[3]ರಾಣ[3]ಸೀ ಗಯೆಗಳು
ನಿರುತಮೆಂದಾ ಜಂಗಮ[4]ರ್ ಪಿರಿಯನಂಗೆಯೊಡ
ನಿರದೆಲ್ಲಮಂ ಪೇಳಲಾ ಕಾಂತೆ ಮನವಿಟ್ಟು
ಹ[4]ರಿಸ[4]ದಿಂ [5]ತ[5]ತ್ಕಥನಮೆಲ್ಲಮಂ ಕೇಳ್ದು ಮತ್ತವರೊಡನೆ ನುಡಿದಳೊಸೆದು ೩೩

ಎಲೆ ಜಂಗಮಶ್ರೇಷ್ಠರಿರ ಬಳಿಕ್ಕೆನಗೆ ಸ
ಲ್ಲಲಿತ ಸುತರೆನಿತಾದೊಡವರೆಲ್ಲರುಮನೆಯ್ದೆ
ನಲಿದು ನಂಬ್ಯಣ್ಣನಾಮಂಗೆಯ್ವೆನತಿಮುದದೆ ಶಿವನಾಣೆ ಎಂದು ನುಡಿಯೆ
ಒಲವಿನಿಂದಾ ಜಂಗಮರ್ ಪ್ರೀತಿಮಿಗೆ ಮನದೊ
ಳಲರುತ್ತೆ ನಿನಗೆ ನಂಬ್ಯಣ್ಣ ಕೃಪೆಯಾಗಲೆಂ
ದಲಘುಭೂತಿಯನಿಟ್ಟರಾ ಪಿರಿಯನಂಗೆಯಾ ಮಿನುಪ ಭಾಳಸ್ಥಳದೊಳು ೩೪

ಬಳಿಕಮಾಶೀರ್ವಾದಮಂ ಮಾಡಿ ಪೋದರಾ
ಲಳಿತಚರಲಿಂಗಮೂರ್ತಿಗಳಿತ್ತಲಾ ತರುಣಿ
ಯೊಳಗೆ ಗರ್ಭಂ ನೆಲಸಿತಾ ಕಾಲದೊಳ್ ತನ್ನ ಯಾತೃವಿಂಗಂ ಗರ್ಭವು

---

[1] ರುಷ (ಗ) [2] ತಿ (ಕಟ) [3] ರಣಾ (ಕಗ) [4] ರುಷ (ಗ) [5] ಸ (ಕ)

ನೊಳಿತು ತಮ್ಮಿರ್ವರ್ಗೆ ನವಮಾಸಮಾಗಿ ಸ
ಲ್ಲಳಿತಸುಕುಮಾರರಂ ತಾವೀರ್ವರುಂ ಪಡೆದು
ಘಳಿಲನಾ ನಂಬಿಯಣ್ಣನ ಪೆಸರನಿಟ್ಟಳಾ ತನುಜನಂ ಪಿರಿಯನಂಗೆ ೩೫

ಒಸೆದು ತನ್ನಯ ಯಾತ್ರ ಮುದದಿಂದೆ ನಿಜಪಿತನ
ಪೆಸರ್ಗರೆದಳಾತ್ಮಸುತನಂ ಬಳಿಕ್ಕೀರ್ವರುಂ
ಶಿಶುಗಳುಂ ದಿನದಿನದೊಳಭಿವೃದ್ಧಿವಡೆದು ಬಳೆಯುತ್ತುವಿರಲೊಂದುದೆವಸಂ
ಅಸವಸಂ ತನುಮ್ಮತೀರ್ವರ್ ತಮ್ಮ ಮಕ್ಕಳಂ
ಮಿಸುಪ ಕೌಂಕುಳೊಳೌಂ[1]ಚಿಕೊಂ[1]ಡು ನೀರ್ದರಲೆಂದು
ಮಸಕದಿಂ ಕಾವೇರಿಗೆಯ್ದಿ ಸುತಲೀರ್ವರಂ ತತ್ತೀರದಲ್ಲಿ ಬಯ್ತು ೩೬

ಪೋದರಿರ್ವರ್ ಜಲಸ್ಪರ್ಶನಂಗೆಯ್ಯೆ ಸಲೆ
ಸಾದರದೊಳೀ ಶಿಶುಗಳೀರ್ವರ್ ನದೀತಟದೊ
ಳಾದರದೆ ಕೆಱಱಗಟ್ಟಿಯಾಡುತಿರೆ ನಂಬ್ಯಣ್ಣನಂ ನೀರೊಳಿರ್ದ ಮೊಸಳೆ
ಭೇದಿಸಿಉತೀವಭರದಿಂ ಬಂದು ಪಿಡಿದೊಯ್ಯೆ
ಮೇದಿನಿಯ ಮೇಲೆ ಬಿಳ್ದೊಱಲುತಿರಲೀ ಶಿಶುವ
ನಾದಮಂ ಕೇಳ್ದು ಬೇಗದೆ ಸತಿಗಳೀರ್ವರುಂ ಶಿಶುಗಳೆಡೆಗೆಯ್ದಿ ಬಂದು ೩೭

ಮೊಸಳೆ ನಂಬ್ಯಣ್ಣನಂ ನುಂಗಿದುದನಱಿದು ಮ
ತ್ತಸವಸಂ ಪಿರಿಯನಂಗಾದೇವಿ ಬಾಯ್ವಿಟ್ಟು
ಮಸಕವಱಱಯುತ್ತೆ ಹಾ ಮಗನೆ ಹಾ ಸುತನೆ ಕೆಟ್ಟೆಂ ಕೆಟ್ಟೆನಾನೆನುತ್ತೆ
ಬಸುಱ ಪೊರೆಯುತ್ತಳಲ ಮುನ್ನೀರೊಳಾಳುತ್ತೆ
ಮಿಸುಪ ವದನಮನೆರಳ್ಕಯ್ಯಿಂದೆ ಪೊಯ್ದುಕೊಳು
ತೆಸೆವುರಮನತಿಭರದೆ ತಾಡನಂಗೆಯ್ದುಕೊಳುತಿಳೆಯೊಳಗೆ ಮಿಗೆ ಪೊರಳುತೆ ೩೮

ಇರುತಿರಲ್ ಮಗುಳ್ದು ನಿಜಯಾತ್ರ ಮನೆಗೊಡಗೊಂಡು
ಭರದಿನೆಯ್ತರೆ ನಂಬಿ ನಂಬಿಯೆಂದೇಗಳುಂ
ಪಿರಿದುಂ ಪಲುಂಬುತಿರೆ ಮತ್ತೊಂದುದೆವಸಮಾ ಕಾವೇರಿಗೆಯ್ದೆವಂದು
ಪಿರಿಯನಂಗಾದೇವಿ ನೀರ ಬೀಳ್ಪನಿತಱಱೊಳೆ
ಭರದೆ ತತ್ಪತಿಬಾಂಧವರ್ಕಳೊಡನೆಯ್ತಂದು
ಮರಳಿ ಕೊಂಡೊಯ್ದರಾ ಶಿಶುಗೆ ನೆಱಱಪಾರಲೌಕಿಕಮಪ್ಪ ಸತ್ಕ್ರಿಯೆಗಳಂ ೩೯

---

[1] ಕಿಕೊಂ (ಗ)

ಪರಮ ಶೈವೋಕ್ತವಿಧಿಯಿಂ ರಚಿಸಿಯಿರುತಿರಲ್
ಪಿರಿಯನಂಗಾದೇವಿ ಮಗುಳ್ದು ಮಗನಂ ನೆನೆದು
ಪೊರಳೆ ಪುಡಿಯೊಳಗೆ ಮುಡಿಗೆದಱಿ ಭೂಮಿಯೊಳಲೆಯೆ ಶೋಕಿಸುತ್ತಿರ್ದಳೆಯ್ದೆ
ವರ ಕುಮಾರಕ ನಿನ್ನ ತೊಲಗಿ ನಾನೆಂತು ಬೆಂ
ದುರುಜೀವಮಂ ಪಿಡಿವೆನೊರ್ಮೊದಲ್ ಮಱೆದೆನ್ನ
ವರಭುಜಂಗಳ್ ನಿನ್ನನಪ್ಪದೊಂದಿನಿತುಸೈರಿಸಲಾಱೆವೆಲೆ ಕಂದನೆ ೪೦

ಅನಿಶಮುಂ ಮಗ್ಗುಲಿಂದಿನಿತಗಲೆ ಸೈರಿಸದೆ
ಘನಭಯಂಬಡುತಿರ್ಪೆನೀಗಳೀ ನಕ್ರಂಗೆ
ಮಿನುಪ ಸೌಂದರರೂಪ ನಿನ್ನ ಕೊಟ್ಟೆಂತುಜೀವಿಪೆನಾಂ ಮಹೀತಳದೊಳು
ಇನಿ[1]ಸು[1] ತನು ಬೆಮರೆ ರಕ್ತಮದೆಂದು ಕಾಣ್ಬೆನೀ
ಘನಕುಚಂದೊರೆದು ಪಾಲುರ್ಕುತಿವೆ ಚಿಣ್ಣನೀಂ
ಮನವೊಸೆದು ಪೀರ್ವೊಡೆಯ್ತ್ತಪ್ಪುದೆನುತಂ ಪಲುಂಬುತ್ತಿರ್ಪಳನುದಿನದೊಳು ೪೧

ಪಿರಿದೆನ್ನ ಚಿಣ್ಣ ಮುದ್ದುಗಳ ಮೋಹದ ಕಂದ
ಸರಸಸಲ್ಲಾಪಶರನಿಧಿಯೆ ದಟ್ಟಡಿಯೊಡೆಯ
ಪರಿಪರಿಯ ಲಲ್ಲೆವಾತುಗಳರಸ ನಸುನಗೆಯ ಮಿಸುಪ ಪಸರದ ಕಂದನೆ
ಭರದೆ ತೊದಳಿಸೆವ ನುಡಿಗಳ ಚದುರನೇ ನಿನ್ನ
ನಿರದಿಕ್ಕಿಯಾನೆಂತು ಮಗು[2]ಳ್ದೊ[2]ರ್ವಳಿರ್ಪೆನೆಲೆ
ನಿರುತದಿಂದೆನ್ನ ದೇವರ ಹೊನ್ನೆ ಹಾಯೆಂದು ಬಾಯ್ಬಿಡುತ್ತಿರ್ಪಳಿಂತು ೪೨

ಪಸುಗೂಸುಗಳ ಕಂಡು ತನ್ನ ಮಗನಂ ನೆನೆವ
ಳೊಸೆದವರ ಮಾತುಗಳನಾಲಿಸುತ್ತೀಗಳುಂ
ಮಿಸುಪ ತನ್ನಯ ಸುತನ ಲಲ್ಲೆವಾತಂ ನೆನೆವಳವ[3]ರಿ[3]ಡುವ ದಟ್ಟಡಿಗಳಂ
ಒಸೆದೀಕ್ಷಿಸುತೆ ತನ್ನ ಮಗನ ನಡೆಯಂ ನೆನೆವ
ಳಸವಸದಿನಿಂತು ಪಂಬಲಿಸುತ್ತುಮೊಱಲುತ್ತೆ
ನಿಸದಮಿರುತಿರೆ ಪಿರಿಯನಂಗೆ ದುಃಖಾಂಬುಧಿಯೊಳದ್ದಳದನೇವೊಗಳ್ವೆನು ೪೩

---

1 ತು (ಗ)  2 ಳೋ (ಕ)  3 ನಿ (ಗ)

ಸದಮಲಪ್ರಚುರವಿಶ್ರುತ ಪರಮಭಕ್ತಗಣ
ಪದಸರೋರುಹಸಾಂದ್ರ ಮಕರಂದಪಾನ ಸ
ಮ್ಮುದಿತ ಚಂಚಚ್ಚಂಚರೀಕನನವರತ ಪಂಚಾಕ್ಷರೀಪ್ರಸಿತಹೃದಯಂ
ವಿದಿತ ಮಂಜುಳನೀಲಕಂಠಾಹ್ವಯಂ ಮನೋ
ಮುದದೆ ಪೇಳ್ದುರುತರಾರಾಧ್ಯಚಾರಿತ್ರದೊಳ
ಗಿದು ಪರಮನಾಚಿಯ ಗೃಹಾಂಗಣದ ಮಾಹಾತ್ಮ್ಯಮಿದನಾಲಿಪುದು ಶರಣರು ೪೪

# ಎಂಟನೆಯ ಸಂಧಿ

## *ಮೊಸಳೆಯ ಕಯ್ಯ ಮಗನ ಪಡೆದುದು

ಸೂಚನೆ: ಮೊಸಳೆಯುದರದೊಳಿರ್ದ ಪಿರಿಯನಂಗೆಯ ಸುತನ
ನೆನೆವ ನಂಬ್ಯಣ್ಣನೀಶ್ವರನ ಕೃಪೆಯಿಂ ತಂದು
ಮಸಕದಿಂದಾ ಪಿರಿಯನಂಗೆಗಿತ್ತಾ ಕಥನಮಂ ಕೇಳ ಸೂರಸಚಿವ

ಪಿರಿದುಮಪ್ರೇಕ್ಷಾಸುಭೂಮಿಗೋನಿಕರದಿಂ
ಕರಮೆ ಜಡತೆಯನೀವುದಱಿನಾವಗಂ ಮಗುಳ್ದು
ನಿರುತ ದೋಷಾಕರಾಹ್ವಯದಿನತಿಕೀರ್ತಿಯುತ ಶಂಕರಶಿರಸ್ಸಿನಲ್ಲಿ
[1]ತುರಿ[1]ತದಿಂ ಪಾದಪಾತಂಗೆಯ್ದುದಱಿನೆಯ್ದೆ
ಪರಮದುರ್ಜನನಂತೆ ಶೋಭಿಸುವ ಚಂದ್ರನಂ
ಹ[2]ರಿಸ[2]ದಿಂ ಜಡೆಮುಡಿಯೊಳೆಡೆವಿಡದೆ ಧರಿಸೆಸೆವ ಗುರುನೀಲಕಂಠ ಜಯತು ೧

ನಿರುಪಮಾನಂದಮೂರ್ತಿಯನಮಲಕೀರ್ತಿಯಂ
ದುರಿತವರ್ಜಿತನನನುಪಮಗುಣೋರ್ಜಿತನನುರು
ತರಕೃಪಾರಸಪೂರಿತಾಂತರಂಗನನೆಯ್ದೆ ರೂಪವಿಜಿತಾನಂಗನಂ
ವರ ವಿಬುಧನುತಿಪಾತ್ರನಂ ಪುಣ್ಯ[3]ಗಾ[3]ತ್ರನಂ
ಸರಸವಿದ್ಯಾಕಲ್ಯನಂ ವಿನಯಕುಲ್ಯನಂ
ಸರಳ ಶಿವಭಕ್ತಿವಲ್ಯಾಲವಾಲನನೆಸೆವ ಶಿವಗಣಾವಲಿಪಾಲನಂ ೨

ಹರನ ಕರುಣಾಮತ್ರನಂ ಕೃಪಾಪಾಂಗನಂ
ಪರಮದೃಷ್ಟಪ್ರತ್ಯಯಪ್ರವಿಖ್ಯಾತನಂ
ಕರಮೆ ಹೃದ್ಧ್ಯಾನವದ್ಯೋರುವರ್ತನವಿರಾಜಿತನನತಿವಿಟವೇಷನಂ
ಗಿರಿಶಸ್ವರೂಪನಂ ಸ್ಮರಕಲಾದಕ್ಷನಂ
ಪರಮೇಶ್ವರಸ್ಥಗಿತತೇಜೋವಿಲಾಸನಂ
ಪರಮನಾಚಿಯ ಹೃದಯಕಾಸಾರಹಂಸನಂ ಶಿವಭಕ್ತಸಂದೋಹನಂ ೩

---

1 ನಿರು (ಕ) 2 ರುಷ (ಗ) 3 ಪಾ (ಗ)

* (ಕಗ) ಪ್ರತಿಗಳಲ್ಲಿಲ್ಲ

ಹರಸಮಯವಾರ್ಧಿವರ್ಧನಶೀತಭಾನುವಂ
ಪರಮಸತ್ಕೀರ್ತಿಪೂರಿತ ಹರಿನ್ನಿಕರನಂ
ಪರಮೇಶ್ವರಪ್ರಥಿತಸಾಮರ್ಥ್ಯರೂಪನಂ ಸರ್ವಪ್ರಸಾದಾಂಗನಂ
ವರ ಗಾನವಿದ್ಯಾವಿಚಕ್ಷಣನನಾವಗಂ
ನಿರುಪಮಾಕಾರನಂಬ್ಯಣ್ಣನಂ ಭಕ್ತತತಿ
ಹ[1]ರಿಸ[1]ದಿಂ ತಮತಮಗೆ ದಿಕ್ಸಮೂಹಂಗಳೊಳ್ ಪಿರಿದು ಪೊಗಳುತ್ತುಮಿರಲು ೪

ಸುಗುಣಚಿಂತಾರತ್ನ ಕನಕಾದ್ರಿಸಂತತಂ
ವಿಗತ ಶಿವಭಕ್ತಹೃದ್ದುಃಖನಿಕುರುಂಬಕಂ
ಮೃಗಧರಧರಪ್ರಥಿತ ಚರಣಸರಸಿರುಹಭೃಂಗಾಯಮಾನಂ ನಿಶ್ಚಲಂ
ಅಗಜೇಶಭಕ್ತವಾಂಛಿತಫಲಪ್ರದನೆನಿಪ
ನೆಗಳ್ದ ಚೇರಮಚಕ್ರವರ್ತಿ ಮನದಣಿಗಿಂದ
ಸೊಗಯಿಸುವ ನಂಬ್ಯಣ್ಣ ಮಹಿಮೆಯಂ ಕೇಳ್ದಾತನಂ ನೋಳ್ಪ ಬವಸೆಯಿಂದಂ ೫

ಬರುತಿರಲ್ಕೀ ವಾರ್ತೆಯಂ ಕೇಳ್ದು ನಂಬ್ಯಣ್ಣ
ನುರುತರಾನಂದದಿಂದಿದಿರ್ವಂದು ಕಂಡು ಮ
ತ್ತಿರದೊರ್ವರೊರ್ವರಾಲಿಂಗನಾದಿಗಳನತಿಭಕ್ತಿಯಿಂದಂ ವಿರಚಿಸಿ
ವರ ವಿನಯಸತ್ಕಾರಪೂರ್ವಕದೆ ಮನವೊಸೆದು
ಪರಮಚೇರಮರಾಜನಂ ಭಕ್ತತತಿಗೂಡಿ
ಕರೆದೊಯ್ದು ತನ್ನ ಗೃಹದೊಳ್ ಸುಖಾಸನವಿತ್ತು ತದನಂತರಂ ಪ್ರೀತಿಯಿಂ ೬

ಮಿನುಪ ನಂಬ್ಯಣ್ಣನಾ ಚೇರಮೇಂದ್ರಂಗೆ ಸ
ದ್ವಿನಯದಿಂ ಲಿಂಗಾರ್ಚನಂಗೆಯ್ಸಿ ಮಗಳ್ದು ತೊ
ಟ್ಟನೆ ವಿಮಲನೈವೇದ್ಯಮಂ ತಂದಿಡಲ್ಕೆ ನಿಜಶೀಲಸಂಪನ್ನನೆನಿಪ
ಕನದಮಲಗುಣ ಚೇರಮೇಂದ್ರನುಸುರ್ದಂ ನಂಬಿ
ಗನುನಯದಿನೆಮ್ಮ ಲಿಂಗಕ್ಕೆ ಪಾಲಿಡವೇಡ
ಘನಸುವ್ರತಂಬಿಡಿದು ಪೂರ್ವದಿಂದಿರ್ಪೆನೆನೆ ನಂಬಿ ಬೆಸಗೊಂಡನದನು ೭

---

1 ರುಷ (ಗ)

ವರಸುವ್ರತಂ ತಾನದೆಂತೆನಲ್ ಚೇರಮಂ
ಹ[1]ರಿಸ[1]ದಿಂದೆಳ್ದು ಬಿನ್ನೈಸಿದಂ ಪೂರ್ವದೊಳ
ಗುರುತರವ್ಯಾಘ್ರಪಾದನ ಮುಂದೆ ತಾಂಡವಂ ರಚಿಸುತ್ತೆ ಪರಮೇಶ್ವರಂ
ಭರದಿಂದೆ ಮೇಗಣ್ಗೆ ನೆಗಪಿದಾ ಪಾಂಗಿನೊಳೆ
ಹರನ ದಕ್ಷಿಣಚರಣಮಂ ನೋಡುವನ್ನೆಗಂ
ಧರಣಿಯೊಳ್ ಪಾಲ್ಮುಟ್ಟದಿರ್ಪ ನೇಮಂಬಿಡಿದೆನೆನೆ ಕೇಳ್ದು ನಂಬ್ಯಣ್ಣನು ೮

ಇನಿದಿದಾವರಿದೆನುತ್ತಳ್ತಿಯಿಂದೆಳ್ದು ತಾಂ
ಕನಕತಾಳಂಗಳಂ ಕರದೊಳಳವಡಿಸುತ್ತು
ಮಿನಿದೊಸರ್ವ ಪಾಂಗಿನಿಂ ತಿರುಪಾಟುಗಳ ಪಾಡೆ ಭಕ್ತಿಯಿಂ ನಂಬ್ಯಣ್ಣನು
ಮನಸಿಜಹರಂ ಮೆಚ್ಚಿ ನಿಜರೂಪ[2]ನುಱಿ[2] ತೋಱಿ
ಲನುನಯದೆ ಬಿನ್ನೈಸಿದಂ ನಂಬಿ ಶರ್ವಂಗೆ
ಘನದಯಾಂಬುಧಿಯೆ ನಿಚ್ಚಂ ಚೇರಮೇಂದ್ರನಿದಿರೊಳ್ ನಿಂದು ಹ[3]ರಿಸ[3]ದಿಂದಂ ೯

ವರ ತಾಂಡವಮನೊರ್ಮೆ ರಚಿಸಿ ನಿಮ್ಮಯ ಪಾದ
ಸರಸಿಜಂದೋಱಿ ರಕ್ಷಿಸು ಶಂಕರಾ ಎನುತೆ
ಭರದಿಂದೆ ಚೇರಮಂಗೂಡಿ ವಂದಿಸಿ ಶಿವಂ ಬಳಿಕದಂ ಮನದೆಗೊಂಡು
ಮರಳಿ ಶಿವಪೂಜಾಂತದೊಳ್ ಚೇರಮೇಂದ್ರನುರು
ಮುರಜವಾದ್ಯಂಗಟ್ಟೆ [4]ಬಾ[4]ಜಿಸಲ್ ಶಶಿಧರಂ
ಹ[5]ರಿಸ[5]ದಿಂ ತಾಂಡವಮನಾಡಲುಜ್ಜುಗಿಸಿದಂ ನಿಖಿಲವಾದ್ಯಂ ಮೊರೆಯಲು ೧೦

ಮಿಸುಪ ಮಾಣಿಕ್ಯಘಂಟಿಕೆಗಳುಲಿಯುತ್ತಿರಲ್
ಮಸಕದಿಂ ನರ್ತಿಸುತೆ ತನ್ನರುಣಪಾದಮಂ
ಬಿಸನಂದಮಪ್ಪಂತೆವೋಲ್ ತೋಱಿ ನಂಬಿ ಚೇರಮರಖಿಳಸದ್ಭಕ್ತರುಂ
ವಸುಧೆಯೊಳ್ ಮೆಯ್ಯನೀಡಾಡಿ ವಂದಿಸುತೆ ನುತಿ
ವಿಸರದಿಂ ಪೊಗಳುತಿರೆ ಸದ್ವ್ರತೋ[6]ದ್ಯಾಪ[6]ನಮ
ದೆಸಕದಿಂ ಚೇರಮಂಗಾಗೆ ಲಿಂಗಾರ್ಚನೆಯ ರಚಿಸಿ ಬಳಿಕಂ ಮುದದೊಳು ೧೧

ಹರಭಕ್ತರೊಡಗೂಡಿ ನಂಬಿಚೇರಮರಿರ್ವ
ರುರುಹರ್ಷದಿಂದೆ ಶಂಭುಪ್ರಸಾದಂಗೊಂಡು
ಗಿರಿಶಸದ್ಭಕ್ತಿ ತತ್ತ್ವತತ್ತ್ವಗೋಷ್ಠಿಪ್ರಸಂಗದೆ ಕೆಲವು ದೆವಸಂಬರಂ

---

1 ರುಷ (ಗ) 2 ನೆಱೆ (ಗ) 3 ರುಷ (ಗ) 4 ಪೂ (ಕ) 5 ರುಷ (ಗ)
6 ಶಾಸ (ಗ)

ಇರುತೆ ಸುಖದಿಂ ಮಗುಳ್ದು ಚೇರಮೇಂದ್ರಂ ತನ್ನ
ಪುರಕೆ ಪೋಗಲ್ ಬಗೆಯೆ ನಂಬಿಯಣ್ಣಂ ಹರ್ಷ
ಭರದೆ ವಾಹನಕನಕಭೂಷಣಾಂಬರಮುಖ್ಯ ಸದ್ವಸ್ತುನಿಕರದಿಂದಂ ೧೨

ಪಿರಿದು ಪೂಜಿಸಿ ಚೇರಮೇಂದ್ರನಂ ಮಗುಳ್ದು ತಾ
ನಿರದೆ ಸದ್ಭಕ್ತರೊಡಗೂಡಿ ಚೇರಮನೊಡನೆ
ಭರದಿಂದೆ ಮೂವಲೂರ್ಮುಟ್ಟೆಬಂದಲ್ಲಿ ಮಿನುಗುವ ಪರಮಕಾವೇರಿಯ
ಸತಳತೀರದೊಳೆಸೆವ ಶಿವಗೃಹಸಮೀಪದೊಳೆ
ಹ[1]ರಿಸ[1]ದಿಂದೋಲಗಂಗೊಟ್ಟು ಕುಳ್ಳಿರ್ದನಾ
ಪರಸಮಯಕೋಳಾಹಳಂ ಕಾಲಮರ್ದನಂ ನಂಬಿಯಣ್ಣಂ ಮಿನುಗುತೆ ೧೩

ಇರಲಿತ್ತಲತ್ತಲಾಯೂವಲೂರೊಳ್ ಮುದದೆ
ಪಿರಿಯನಂಗೆಯ ತನೂಭವನೋರಗೆಯ ಶಿಶುಗೆ
ಕರಮೆ ಗರ್ಭಾಷ್ಟಕದೊಳುಪವೀತಮಾಗಿ ತತ್ಸುತನೆಯ್ದೆ ವಿಧ್ಯುಕ್ತದಿಂ
ಹ[1]ರಿಸ[1]ದಿಂ ಪೊಡಮಡಲ್ ಸ್ವರ್ಣಭಿಕ್ಷೆಯನಿಕ್ಕಿ
ತಿರಲನಿತಱೊಳ್ ತನ್ನ ಮಗನ ನೆನೆಯಲ್ ದುಃಖ
ಭರದೆ ಕಣ್ಗಳೊಳಶ್ರುಗಳ್ ತೋಱಲವನೆಯ್ದೆ ತಗ್ಗಿಸುತೆ ಮುದಪಡಗುತೆ ೧೪

ಈ ಸಮಯದೊಳ್ ಶೋಕಿಸುವುದಿಲ್ಲಿಯಾಗದೆಂ
ದಾ ಸುದತಿ ಘಟವನೊಂದಂ ತಳೆದು ಬೇಗದಿಂ
ದಾಸಿಯೊಡಗೂಡಿ ಜಲಮುಂ ತರ್ಪ ನೆವದಿಂದೆ ಕಾವೇರಿಗೆಯ್ದೆ ಬಂದು
ಆಸುರದ ಮೊಸಳೆ ತನ್ನಣುಗುಗಂದನ ನುಂಗಿ
ದಾ ಸೀಮೆಯೊಳ್ ನಿಂದು ನಂಬಿಯಣ್ಣಾ ನಂಬಿ
ಭಾಸುರಾಮಲಶಿವಪ್ರತಿಬಿಂಬನೇ ನಂಬಿ ಹಾ ನಿನ್ನ ನಂಬಿರ್ದೆನು ೧೫

ನಂಬ್ಯಣ್ಣ ನಿನ್ನ ಪೆಸರಿಟ್ಟೆ ನಾಂ ಮನಮೊಸೆದು
ನಂಬ್ಯಣ್ಣನೆಂದೆನ್ನ ಮುದ್ದುಗಂದನನಯ್ಯ
ನಂಬ್ಯಣ್ಣ ನಿನ್ನ ನಾಮದ ಶಿಶುವನಿಲ್ಲಿ ಬಲ್ಮೊಸಳೆ ಪಿಡಿದೊಯ್ದುದಯ್ಯ
ನಂಬ್ಯಣ್ಣ ನಿನ್ನ ಪೆಸರಿಡದವಳ ಮಗನೊಲ್ದು
ನಂಬ್ಯಣ್ಣ ನಿನ್ನಂತೆ ಮಿನುಗುತದೆಯಾನೆಯ್ದೆ
ನಂಬ್ಯಣ್ಣನೆಂದು ಪೆಸರಿಟ್ಟು ಕೆಟ್ಟೆಂ ಕೆಟ್ಟೆನೆಲೆ ನಂಬಿ ನಂಬಿಯಣ್ಣ ೧೬

1 ರುಷ (ಗ)

ನಂಬಿ ಹಾಹಾ ಇಂತು ನಂಬಿದೆನ್ನಂ ನಾಡೆ
ಇಂಬುಗೆಡಿಸಿಡೆಯೊಳೀಡಾಡಿ ಪೋದಯ್ ಕಂದ
ನಂಬಿ ಕೆಟ್ಟೆಂ ನಿನ್ನ ನಂಬಿಯಣ್ಣಾ ನಂಬಿಯಣ್ಣ ಎಂದತಿದುಃಖದಿಂ
ಮುಂಬಿಟ್ಟು ಬಾಯ್ವಿಟ್ಟೊಱಲ್ದು ಶೋಕಿಸುತಿರಲ್
ನಂಬಿಯಣ್ಣಂ ಕೇಳುತೀ ಸಮೀಪದೊಳಿಲ್ಲಿ
ನಂಬಿ ನಂಬಿ ಎನುತ್ತೆ ಬಾಯ್ವಿಡುವಳಾರೆಂದು ಕೇಳ್ದೀಗ ಬನ್ನಿಮೆಂದು ೧೭

ಕರೆದು ದೂತರ್ಗೆ ಬೆಸಸಲ್ಕವರ್ ತುರಿತದಿಂ
ಪರಿದೆಯ್ದಿವಂದು ತದ್ವನಿತೆಯಂ ಕಾಣುತೆಲೆ
ತರುಣಿ ನೀನಾರ್ಗೆ ಶೋಕಂಗೆಯ್ಯಲೇಂ ನಿನ್ನ ಪೊಳಲಾವುದೆಂದು ಕೇಳೆ
ಭರದೆ ಕಿನಿಸುತ್ತವರ ನುಡಿದಳೆಲೆ ಪಥಿಕರಿರ
ಪಿರಿದು ನಿಮಗಿದನೊರೆದು ಪೇಳಲೇಂಕಾರಣಂ
ಮರುಳರಿರ ವಿಪ್ರಸತಿಯಾನೊರ್ವಳಿರ್ಪೆಡೆಗೆ ಬಪ್ಪುದಿದು ನಿಮಗುಚಿತವೆ ೧೮

ಮರಳಿ ನೀಂ ಪೋಗಿಮೆನೆ ಬಳಿಕಮವರಿಂತೆಂದ
ರುರುಪತಿವ್ರತೆಯೆ ತಾಯೇ ನಿನ್ನ ದುಃಖಕ್ಕೆ
ಪಿರಿದುಕಾರಣಮಾವುದೇಗಳುಂ ನಂಬ್ಯಣ್ಣ ಕೆಟ್ಟೆ ನಾಂ ಕೆಟ್ಟೆನೆಂದು
ಭರದೆ ಮೊರೆಯಿಡಲೇಕೆ ನಂಬಿ ತಾಂ ನಿನ್ನ ಮಗ
ನಿರದದೆಂತಾದನಾ ನಂಬಿಯಣ್ಣಂಗೆ ನೀಂ
ಕರಮೆಯೆಂತಪ್ಪ ತಾಯ್ ನಂಬ್ಯಣ್ಣನೆಲ್ಲಿದಂ ನೀನೆಲ್ಲಿದಳ್ ಭಾವಿಸೆ ೧೯

ಇದೆಱ ವೃತ್ತಾಂತಮಂ ಕೇಳಿಪೋದಪೆವಾವು
ಸುದತಿ ನೀಂ ಪರಮಾರ್ಥಮಾಗುಸುರ್ವುದೆನೆ ಬಳಿ
ಕ್ಕುದಿತದುಃಖದೆ ನುಡಿದಳವರೊಡನೆ ನಂಬಿಯೆಂಬವನೊರ್ವನೀ ಧರೆಯೊಳು
ಮದನಾರಿಯಂ ತನಗೆ ಕೂಂಟಣಿಯಮಾಡಿಕೊಂ
ಡೊದವಿದತಿಮುದದಿಂದಮಿರ್ಪ ಗಡ ಬಳಿಕಮಾ
ವಿದಿತ ಶಿವನಾತಂಗೆ ಪೊನ್ಗಳಂ ಸಾಸಿರಂಗಳನೀವುತಿರ್ಪನೆಂದು ೨೦

ಚರಲಿಂಗಮೂರ್ತಿಗಳ್ ಬಂದು ಪೇಳಲ್ ಕೇಳ್ದು
ಭರದಿನಾಂ ಪಡೆದ ಸುತನಂ ಭ್ರಾಂತಿಯಿಂದೆ ಸೌಂ
ದರನೆನಿಪ ನಂಬಿಯಣ್ಣನ ಪೆಸರನಿಟ್ಟೆನಾ ಶಿಶುವಿಲ್ಲಿಯಾಡುತಿರಲು

ಪಿರಿಯ ಮೊಸಳೆಯದೊಂದು ಬಂದು ಪಿಡಿದೊಯ್ಯುದೀ
ವರನದಿಯ ತೀರದೊಳಗೈದನೆಯ ಬರಿಸದೊಳ್
ಕರಮುದಱನಿಲ್ಲಿಗೆಯ್ದಲ್ ದುಃಖಮೆನಗಣಿಯರಂ ತೋಱುತೀಯೆಡೆಯೊಳು ೨೧

ಮಿಗೆ ದೂತ್ಯಮಂ ವಿರಚಿಸುವ ಶಿವಂ ದೂತ್ಯಮಂ
ಬಗೆದೊಡರ್ಚಿಸಿಕೊಂಬ ಪರಮಭಕ್ತಂ ಮತ್ತೆ
ತಗುಳ್ದು ಧನಮಂ ಕುಡುವ ಶಂಕರಂ ಧನವನತಿವೇಗದಿಂದಂ ಗ್ರಹಿಸುವ
ನೆಗಳ್ದ ಭಕ್ತಂ ಬಳಿಕೆ ತಮ್ಮುತೀರ್ವರುಮೆನ್ನ
ಸೊಗಯಿಸುವ ಸುಕುಮಾರನಂ ನಕ್ರನೊಯ್ದಲ್ಲಿ
ಬಗೆಗೆಟ್ಟು ನೋಡುತಿರ್ದರ್ ಕಾಯಲಱಿಯದೆ ಭ್ರಾಂತಿಗೊಂಡವರ ತೆಱದಿಂ ೨೨

ಎನ್ನ ಪೆಸರಣುಗನೆಂದಾ ನಂಬಿ ಕಾಯಲ್ಕೆ
ಮುನ್ನರ್ಹನಲ್ಲದೇ ಪೋದನಾ ಶಂಕರಂ
ತನ್ನ ನಂಬಿಯ ಪೆಸರ ಮಗನೆಂದು ತಿಳಿದ ಬಳಿಕಂ ಪೊಱೆಯಲಾಱದಾದಂ
ಇನ್ನದಂತಿರ್ಕೆ ಪಳವಾತಿನಿಂದೇಂ ಫಳಂ
ನನ್ನಿಯಿಂದೀಗಳಾ[1]ನ[1]ಳುತಿರ್ಪ ಕಜ್ಜಮಂ
ಸನ್ನಿದಂ ಪೇಳ್ದಿನಾಂ ಕೇಳಿಮೆನುತಿಂತೆಂದಳವರೊಡನೆ ದುಃಖದಿಂದಂ ೨೩

ನಿರುತದಿಂದೆನ್ನೋರಗಿತ್ತಿಯ ಸುತಂಗಿಂದು ..
ಹ[2]ರಿಸ[2]ದಿಂದುಪನಯನಮಂ ಮಾಡುತಿರ್ದಪರ್
ಭರದಿನದನೀಕ್ಷಿಸುತ್ತೆನ್ನ ಮಗನಿವನೋರಗೆಯ ಕಂದನವನಿರ್ದೊಡೆ
ಪಿರಿದು ಸಂತೋಷದಿಂದಾನಿಂದು ಮತ್ಸುತಂ
ಗಿರದೆ ಮುಂಜಿಯ ಕಟ್ಟಿಸುವೆನೆಂದು ನೆನೆಯಲುಱು
ತರದುಃಖಮುಣ್ಮಲಾಯೆಡೆಯೊಳತಿಶೋಕಿಸುವುದನುಚಿತಮೆನುತ್ತೆ ಬಗೆದು ೨೪

ಪಿರಿದುಮೇಕಾಂತಸ್ಥಳಕ್ಕೆಯ್ದಿ ಮತ್ತಿಲ್ಲಿ
ವರಸುತನ ದುಃಖದಿಂ ಬಾಯ್ಬಿಡುತಿರ್ದಪೆಂ
ನಿರುತಮೆಂದೆಲ್ಲಮಂ ಬಿತ್ತರದೆ ಪೇಳಲದನೆಯ್ದೆ ಕೇಳುತ್ತುಮವರು
ಭರದಿಂದೆ ಮಗುಳ್ದು ನಂಬ್ಯಣ್ಣನೆಡೆಗೆಯ್ತಂದು
ಪಿರಿಯನಂಗಾದೇವಿ ಪೇಳ್ದ ವೃತ್ತಾಂತಮಂ
ಕರಮೊರೆಯೆ ಕೇಳ್ದು ನಂಬ್ಯಣ್ಣನಾ ದಂಪತಿಗಳಂ ಕರಸಿದಂ ತುರಿತದೆ ೨೫

---

[1] ವ (ಗ) [2] ರುಷ (ಗ)

ಬಂದ ವಿಪ್ರನ ನುಡಿಸಿದಂ ನಂಬಿಯಣ್ಣನತಿ
ಮಂದಹಾಸಂ ಮೊಗದೊಳೊಗೆಯುತಿರಲಲೆ ಪಾರ್ವ
ಚಂದವಡೆಯುತ್ತುಮಿವೆ ನಿನ್ನಳಿಕದೊಳೆ ಹಳದಿವಣ್ಣದಿಂದಕ್ಷತೆಗಳು
ಒಂದಿರ್ತೋಱುತ್ತುಮಿದೆ ಜನ್ನಿವರವಮರಿಸಿನದೊ
ಳಿಂದು ನಿಮ್ಮಯ ಗೃಹದೊಳೇನುತ್ಸವಂ ನಿಮಗೆ
ಸಂದ ಪೆಸರೇನೆನಿತುಮಕ್ಕಳೀ ವನಿತೆ ಮತ್ತೀಗ ದುಃಖಿಪ[1]ಳಿ[1]ದೇನು ೨೭

ಎನುತೆ ಕೇಳಲ್ ವಿಪ್ರನುಸುರ್ದನೆಮ್ಮಯ ಗೃಹದೊ
ಳನುನಯದಿನೆನ್ನನುಜ ಪುತ್ರೋಪನಯನಮಿಾ
ವನಿತೆ ಪಲದೆವಸಕ್ಕೆ ಸುತನೊರ್ವನಂ ಪಡೆದು ನಂಬಿಯೆಂಬವನ ಪೆಸರಂ
ಘನಹರ್ಷದಿಂದೆ ಕರದಳ್ ಮತ್ತಮಾ ಕೂಸು
ಮಿನುಗುವೀ ನದಿಯೊಳಗೆ ಕೆಱಿಗಟ್ಟೆಯಾಡುತಿರೆ
ಮುನಿದೊಂದು ನಕ್ರನವನಂ ನುಂಗಿರಿನ್ನೊರ್ವ ಸುತನಿಲ್ಲ ಮದ್ಭಾರ್ಯೆಗೆ ೨೭

ಪಿರಿದುಮುದಱಿಂದೆ ದುಃಖಿಪಳೆನ್ನ ಸತಿಯಾಕೆ
ಮರುಳಾಗಿ ಜಂಗಮದ ಮಾತುಗಳ ಕೇಳ್ದು ನಿಜ
ವರಸುತನ ನರನ ಪೆಸರಿಟ್ಟಳಾ ಮನುಜನವನಿಯೊಳೆ ರಕ್ಷಿಸಲಾರ್ಪನೆ
ಹ[2]ರಿಸ[2]ದಿಂದಾ ನಂಬಿಯಣ್ಣಂಗೆ ದೂತ್ಯಮಂ
ವಿರಚಿಸುತೆ ಮತ್ತಮಂಗನುದಿ[3]ನಂ[3] ಶಂಭು ಸಾ
ಸಿರಪೊನ್ಗಳಂ ಪ್ರಿಯದಿನೀವ ಗಡ ಮತ್ತಮಾ ಶಂಕರಂ ನಂಬ್ಯಣ್ಣನು ೨೮

ಭರದೆ ತಾವೀರ್ವರುಂ ನಂಬಿಯಣ್ಣನ ಪೆಸರ
ವರಸುತನ ಪೊರೆದರೇ ಮತ್ತೀಕೆ ಯಾತ್ಮವಿನ
ಪಿರಿಯಣುಗನುಪನಯನಮಂ ಮಾಳ್ಪುದಂ ಕಂಡು ಮುನ್ನೆ ನಕ್ರಂ ಗ್ರಹಿಸಿದ
ಸರಳಸುಕುಮಾರನಿರ್ದೊಡಮವಂಗಾನಿಂತು
ಹ[4]ರಿಸ[4]ದಿಂ ಮುಂಜಿಗಟ್ಟಿಪೆನೆಂದು ದುಃಖಿಪಳ್
ಪಿರಿದುಮೆಲೆ ಭೂಪ ಕೇಳ್ ಮತ್ತದಂತಿರ್ಕೆ ದಾನಂಗೊಟ್ಟು ಕಳುಪೆಮ್ಮುಮಂ ೨೯

ಪರಮ ಶಿವವಿಪ್ರನಾಂ ಸ್ವಾಧ್ಯಾಯಪರನೆಯ್ದೆ
ವರಪತಿವ್ರತೆ ಭಕ್ತಿನಿರತೆ ಮದ್ವನಿತೆ ಸುರು
ಚಿರದಾನ ಯೋಗ್ಯರಾವದಱಿಂದವೆಮಗೆ ದಾನಂಗೊಟ್ಟ ಸತ್ಫಲವದು

[1] ಳ (ಗ) [2] ರುಷ (ಗ) [3] ನದೆ (ಗ) [4] ರುಷ (ಗ)

ನಿರುತದಿನುಮಾಮಹೇಶ್ವರ ಪ್ರೀತಿಯಕ್ಕುಮಂ
ತುರುತರಾಕ್ಷಯಮಕ್ಕುಮಿಂತೆಂದು ವಾಕ್ಯಮುಂ
ಭರದಿಂದೆ ದಾನಮಣ್ಪಿ ಚಾಕ್ಷಯಂ ಎಂದು ಪೇಳುತಿರ್ಕುಂ ಸಂತತಂ ೩೦

ಇಂತೆಂದು ನುಡಿದು ನಂಬ್ಯಣ್ಣನಂ ಪರಸುತ್ತೆ
ಮುಂತೆ ನಿಂದಿರ್ದ ಶಿವವಿಪ್ರನಂ ನೋಡುತ್ತೆ
ಕಂತುಸಮರೂಪ ಕರುಣಾಪೂರಿತಾಂತರಂಗಂ ವಿಮಲನಂಬ್ಯಣ್ಣನು
ಸಂತಸದೆ ನಸುನಗುತೆ ನುಡಿದನಾ ವಿಪ್ರನೊಡ
ನಿಂತೆಂದು ನಿನಗೆ ದಾನಂ ಬೇ[1]ಟ[1]ದೇಕೆ ನೋ
ಡಂತೆ ನಿನ್ನಯೆ ಮಗನನೇ ದಾನಮಂ ಕುಡುವನಾ ನಂಬಿ ಮನದಲಂಪಿಂ ೩೧

ನನಸು ನೀನೆಂದಂತೆ ನಂಬಿಗಾ ಶಿವನೊಡೆಯು
ನೆನಿಸುವೊಡೆ ಶಿವನವಂಗೊಲ್ದು ದೂದವಿಗೆಲಸ
ವನೆ ಮಾಳ್ಪುದುಂಟಾದೊಡಂ ಮತ್ತವಂಗೆ ಧನವಂ ಕುಡುವದುಂಟಾದೊಡಂ
ಎನಸುಮಭವನುಮಂತೆ ನಂಬಿಯುಂ ಲೋಕದೊಳ್
ಮನಸಿಜಾಂತಕಭಕ್ತಿವ್ಯೆಭವಮುಮುಂಟಾದೊ
ಡನುನಯದೆ ನಿನ್ನ ಸುತನೆಯ್ತುಪ್ಪನಿದು ನಿಕ್ಕುವಂ ಬಂದೊಡಾ ಸೂನುಗೆ ೩೨

ಹ[2]ರಿಸ[2]ದಿಂ ನಿನ್ನನುಜ ಸುತನಂತೆ ಮುಂಜಿಯಂ
ಕರಮೆಸಗಿದಪ ಎಲೇ ಪಾರ್ವ ನೀನೇ ಕೇಳ
ವರ ವಿಪ್ರನಿಂತೆಂದನವನಿಯೊಳ್ ಸತ್ತವರ್ ಬರ್ಪರೇ ಮರಳಿ ಮನೆಗೆ
ಪಿರಿದು ನೀವಿಂತುಸುರ್ವುದುಚಿತಮೋ ಭಾವಿಸಲ್
ಪರಮಸದ್ಭಕ್ತ ನೀಂ ಪುಣ್ಯಾಧಿಕಂ ಸತ್ಯ
ನುರುತರೈಶ್ವರ್ಯಯುತನೆಮ್ಮೊಡನೆ ಹಾಸ್ಯಮಂ ನುಡಿಯಲೇಕೆಲೆ ಭೂಮಿಪ ೩೩

ತನಿಬೆಂದ ಪುಣ್ಣ [3]ಕಂಬಿಯೊ[3]ಳೊರಸಿದಂತೆ ನೀ
ನೆನಗೆ ದುಃಖಮನೆಬ್ಬಿಸಿದ ಎನ್ನ ಕಂದನಂ
ನೆನೆಯಿಸಿಯದಂತಿರ್ಕೆ ನೀಂ ಕುಡುವ ದಾನಮದು ಕೈಸಾರ್ದುದೆನಗಣಿಯರಂ
ಕೊನರ್ದು ಕೊಬಿಚಾಡಲೆಮ್ಮಂ ಕರಸಿದಪ ಭೂಪ
ವಿನಯದಿಂದಾವು ದೀನರ್ಕಳೆಂದಱಿದಿರ್ದು
ಘನಧೈರ್ಯಮಂ ಕಿಡಿಪುದುಚಿತಮೇ ನೀಂ ಮುನ್ನೆ ಶಿವಪೂಜೆಗೆಯ್ದ ಫಲದಿಂ ೩೪

[1] ಕ (ಗ) [2] ರುಷ (ಗ) [3] ಸುಣ್ಣದೊ (ಗ)

ಧರೆಯೊಳೀ ಭೋಗಭೋಗ್ಯಕ್ಕರ್ಹನಾದ ಇ
ನ್ನಿರದೆಮ್ಮನಿಂತು ಕೊಱಚಾಡದಿ[1]ರ್ದ[1]ಡೆ ನಿನಗೆ
ಪರಲೋಕಸೌಖ್ಯಮೆಂತೆಯ್ದುಗುವೆನುತ್ತುಮಾ ದಂಪತಿಗಳತಿಕೋಪದಿಂ
ತಿರುಗುತಿರೆ ಕಂಡು ನಂಬ್ಯಣ್ಣನವರಂ ಕರೆದು
ಹ[2]ರಿಸ[2]ದಿಂ ನುಡಿದನಾನೀಗ ನಿಮ್ಮಯ ಸುತನ
ನಿರದೆ ಪೆಸಗೊಂಡು ನಂಬ್ಯಣ್ಣನೆನುತುಂ ಮತ್ತಮಿಂತೆಂದನವರ್ಗಳೊಡನೆ ೩೫

ಹಱನ ದೂದವಿಗೆಲಸಕೆಯ್ದಿಸಿದ ನಂಬಿಯಾಂ
ಪರಮೇಶನಿಂ ಪೊನ್ಗಳಂ ಪಡೆದ ನಂಬಿಯಾಂ
ಭರದೆ ನಿಮ್ಮಯ ಸುತನ ಪಿಡಿದ ಮೊಸಳೆಯ ಬಲ್ಪನುಡುಗಿ ಗಿರಿಜೇಶನಿಂದಂ
ಕರಮೆ ನಿಮ್ಮಣುಗನಂ ತಂದೀವ ನಂಬಿಯಾಂ
ನಿರುತಮೆಂದವರ್ಗೆ ನುಡಿದಂ ನಿಮ್ಮ ಕಂದನಂ
ತ್ವರಿತದಿಂ ನುಂಗಿದಾ ಮೊಸಳೆ ತಾನುಗುಳ್ದಪುದು ನೀಮೆಯ್ದಿ ಹ[2]ರಿಸ[2]ದಿಂದಂ ೩೬

ಸಲೆ ಮುಂಜಿಗಟ್ಟಲುತ್ಸವಮಂ ನಿಮಿರ್ಚಿಮೆನು
ತಲರ್ದು ಬಹುಧನಮನೀಯುತ್ತವರ ಪೋಗೆನಲ್
ನಲಿಯುತ್ತೆ ರೋಮಾಂಚಿತಾಂಗನಾಗುತ್ತೆ ನಿಜಸಂತೋಷದಿಂ ನಂಬಿಗೆ
ಒಲವಿನಿಂದಂ ತುಳಿಲ್ಗೆಯ್ದು ಸಂಭ್ರಮದೊಡನೆ
ಲಲಿತಗೃಹಕೆಯ್ದಿ ಪುತ್ರೋಪನಯನಕ್ಕೆ ತ
ಕ್ಕಲಘುವಸ್ತ್ವಾನೀಕಮಂ ಕೂಡುತಿರಲತ್ತ ನಂಬ್ಯಣ್ಣನತಿಮುದದೊಳು ೩೭

ಹರಶರಣರೊಡಗೂಡಿ ತತ್ಪುತ್ರನಂ ಮೊಸಳೆ
ಯಿರದೆ ನುಂಗಿದ ತಾಣಕೆಳ್ತಂದು ಭಕ್ತರ್ಗೆ
ಕರಮೆ ಪೊಡಮಟ್ಟು ತಚ್ಛೇರಮೇಂದ್ರನ ಪಾದಸರಸೀರುಹಕ್ಕೆ ನಮಿಸಿ
ಶರಣರನುಮತವಾಂತು ಸದ್ಭಕ್ತಿಯಿಂದೆ ಸುರು
ಚಿರ ಶಿವನ ಕರೆಯುತ್ತೆ ಕನಕತಾಳಂಗಳಂ
ಕರದೊಳನುಗೆಯ್ದು ಸಪ್ತಸ್ವರಂಗಳ್ ಮನೋಹರಮಾಗೆ ತಿರುಪಾಟನು ೩೮

ಹ[2]ರಿಸ[2]ದಿಂ ಪಾಡುತ್ತಿರಲ್ ಶಿವಂ ಪ್ರೀತಿಮಿಗೆ
ಭರದಿಂ ಪ್ರಸನ್ನನಾಗುತ್ತೇನೊ ನಂಬಿಯೆನೆ
ದುರುಳನಪ್ಪೊಂದು ನಕ್ರಂ ಶಿವಬ್ರಾಹ್ಮಣ[3]ತ[3]ನುಜನನೊಣೆದುದು ಶೀಘ್ರದಿಂ

[1] ರ್ದೊ (ಟ) [2] ರುಷ (ಗ) [3] ನ (ಗ)

ತರಿಸಿ ಕುಡವೇಳ್ಪುದೆನೆ ಶಂಕರಂ ಮುದದಿಂದ
ಮಿರದೆ ನೆನೆಯಲ್ ಜನಂ ಬಂದನಾಕ್ಷಣದಲ್ಲಿ
ಪರಮೇಶ್ವರಂ ನುಡಿದನಾ ತೂಣನಂ ವಿಪ್ರಸುತನ ತಂದೀಯ್ಪುದೆನಲು ೩೯

ಅನಿತಱಿೞೊಳೆ ಚಿತ್ರಗುಪ್ತಂ ಧರೆಯೊಳಡೆಗೆಡೆದು
ಮನಸಿಜಾಂತಕ ಕಾಲಹರ ಬಿನ್ನಪಂ ನಂಬಿ
ಯೆನಿಪ ಶಿಶು ನಿತ್ಯಸಾಯುಜ್ಯಪದವಿಯನೆಯ್ದಿ ಶಿವಲೋಕದೊಳಗಿರ್ದಪಂ
ಮಿನುಪ ಮರ್ತ್ಯನಲೋಕದೊಳಗಿಲ್ಲ ನಿಸದಮೆನು
ತನುವಿನಿಂ ಬಿನ್ನೈಸೆ ತತ್ಕ್ಷಣದೊಳೀಶ್ವರಂ
ವನಜಭವನಂ ಸ್ಮರಿಸೆ ಪರಮೇಷ್ಠಿಯೈತಂದು ಸಾಷ್ಟಾಂಗವೆಱಗಿ ನಿಂದಂ ೪೦

ಎಲೆ ಬಿದಿಯೆ ಎರಡು[1]ಬರಿಸದ[1] ಹರೆಯದಲ್ಲಿಯಿಾ
ಜಲದೊಳಿರ್ಪುಗ್ರನಕ್ರಂ ಪಿಡಿದು ತಿಂದ ನಿ
ರ್ಮಲವಿಪ್ರಸುತನನೀಂ ಗರ್ಭಾಷ್ಟಕದ ಹರಯದವನ ಮಾಡೀಗಳದಱ
ಲಲಿತ ಗರ್ಭದೊಳಿರಿಪುದೆಂದು ಶಿವ ಬೆಸಸಲಾ
ಸಲಿಲಜೋದ್ಭವನಾಕ್ಷಣಂ ನಕ್ರದೊಡಲೊಳಗೆ
ಸಲೆ ಅಂತೆ ಶಿಶುವ ನಿರ್ಮಿಸಿಯಿರಿಸಿದಂ ಮನೋನುದದಿಂದೆ ಜೋದ್ಯಮಾಗಿ ೪೧

ಬಳಿಕಮಾ ಕಾವೇರಿಯೊಳಗಿರ್ಪ ನಕ್ರನೆಡೆ
ಗಳವಿನಿಂ ಕಾಲನೆಳ್ತಂದು ನಿನ್ನುದರದೊಳ್
ತೊಳಗುತಿರ್ಪಾ ಶಿಶುವನೊಪ್ಪಿಸೆಂದಾ ನಕ್ರನುಂ ಯಮಂ ನುಡಿಯಲೊಡನೆ
ಗಳಗಳನೆ ಯಮನ ಸಮ್ಮುಖಕೆಯ್ದಿ ಬಂದು ಕೋ
ಮಳಸುತನ ಜನರೆಲ್ಲರೀಕ್ಷಿಸುತಿರಲ್ ನದಿಯ
ಮಿಳಿರ್ವ ತಟದೊಳಗುಗುಳ್ದು ಪೋದುದಾ ನಕ್ರನೀ ಭೂಮಿಗಾಶ್ಚರ್ಯಮಾಗೆ ೪೨

ಅಸಿತಱಿೞೊಳ್ ಕೇಳ್ದದಂ ತನ್ಮಾತೃಪಿತರರ್ಕ
ಳನುನಯದೆ ಬರುತಿರಲ್ಕವರೊಡನೆ ತತ್ಪುರದ
ವನಿತೆಯರ್ ಪುರುಷರುಂ ಭರದಿನೆಯ್ತಂದು ನೋಡುತ್ತಿರಲ್ ಗೆಂಟಱಲ್ಲಿ
ಮಿನುಪ ಸುತನಂ ಕಂಡು ಸಂತೋಷಮುಣ್ಮುತ್ತೆ
ಮನದಳ್ಕಱಿಂದವನ ತಾಯ್ ಮೋಹದಿಂದೆ ಘ
ಮ್ಮನೆ ನಂಬಿಯಣ್ಣ ಮತ್ಪ್ರಿಯಸುತನೆ ಎಂದು ಕರೆಯುತ್ತೆ ಬಿಗಿ[2]ದಪ್ಪಿಕೊಂಡು ೪೩

---

[1] ವರುಷದ (ಕ) [2] ಯ (ಕಗ)

ಹರಿಸ[1]ದಿಂದೆನ್ನ ತಂದೆಯೆ ಬಂದೆಯಾ ಎನು
ತ್ತುರುಮುದಶ್ರುಗಳೊಗೆಯೆ ಮೆಯ್ನವಿರ್ ಮೂಡುತಿರೆ
ಗುರುಕುಚಂ ತೊರೆಯೆ ಮುಂಡಾಡುತಿರೆ ತಜ್ಜನಕನೆಯ್ತಂದು ಸುತನ ಕಂಡು
ಭರದಿನುರಮೆಯ್ದೆ ಗಾಢಾಲಿಂಗನಂಗೆಯ್ದು
ಪರಮೋತ್ಸವದೆ ನಂಬಿಯಣ್ಣ ಪದಯುಗದಲ್ಲಿ
ಪೊರಳ್ದರಾ ಸೂನುವೊಡಗೂಡಿ ಪತಿಸತಿಗಳುಂ ಭೂಜನಂ ಕೀರ್ತಿಸುತಿರೆ ೪೪

ನರಪ ಚೇರಮನಡಿಗೆ ಮುಗುಳ್ದವರ್ ಭಕ್ತಿಯಿಂ
ಕರಮೆ ಪೊಡಮಟ್ಟರಾ ನಕ್ರದುದರದೊಳೆಯ್ದೆ
ಪಿರಿದು ಕಾಲಂ ಜೀರ್ಣಮಾದ ವಿಪ್ರಾತ್ಮಜನನಂತಕನ ಮುಖದೆ ತರಿಸಿ
ಇರದಿತ್ತನಾ ನಂಬಿಯೆಂದು ವೇದಂ ಮತ್ತೆ
ಭರದೆ ನುಡಿಗುಂ ಗೃಹೋದರಜೀರ್ಣಮೆಂದು ಭಾ
ಸುರದಿನಂತಕಮುಖಾದಾನೀತವಾನೆಂತು ಸಂತತಂ ಲೋಕದೊಳಗೆ ೪೫

ಮುನ್ನೆ ವಿಷ್ಣುವ ಪೂಜಿಸುವ ಭರದಿನೊಂದುಗಜ
ವುನ್ನತ ಮದೋದ್ರೇಕದಿಂದಿಲ್ಲಿಗೆಯ್ತಂದು
ಸನ್ನಿದಂ ಕಮಲಂಗಳಂ ತಿಱುವುತಿರಲದಂ ಕಾಣುತೀ ಮೊಸಳೆ ಪಿಡಿಯೆ
ಪನ್ನಗಭುಜನನಡರಿ ಚಕ್ರಮಂ ಪಿಡಿದು ಸಂ
ಪನ್ನ ವೈಷ್ಣವಭಟರ್ ಬೆರಸಿ ಹರಿಯೆಯ್ತಂದು
ಸನ್ನಿದಂ ನಕ್ರದೊಡನೆಸಗಿದಂ ಯುದ್ಧಮಂ ಕರಿಯನೀಳ್ಕೊಂಡುದಿಲ್ಲ ೪೬

ಪಿರಿದುಮೆಂತಪ್ಪ ಸಾಮರ್ಥ್ಯಮೋ ಈ ನಂಬಿ
ಭರದಿನಾ ಮೊಸಳೆ ಪಿಡಿದಾ ಬ್ರಾಹ್ಮಣನ ಸುತನ
ನಿರದೆ ಯಮನಿಂ ತರಿಸಿಕೊಟ್ಟನವ ರಕ್ಷಿಸುತ್ತವನ ತಾಯ್ತಂದೆಗಳ್ಗೆ
ಪಿರಿದು ಹರಿಸಂ[2]ಗರೆದನೆಂದು ಚೇರಮಮುಖ್ಯ
ಹರಶರಣರೆಲ್ಲರುಂ ನಂಬಿಯುಂ ಕೀರ್ತಿಸು
ತ್ತಿರೆ ಸಕಲಜನರೆಯ್ದೆ ನಿಟಿಲತಟಘಟಿತಕರಪುಟರಾಗಿ ಪೊಡಮಟ್ಟರು ೪೭

ಮಿನುಗುವಾನಂದಸ್ವರೂಪಸಂಹೃತತಾಪ
ವಿನುತಾರ್ಥಿ ದೂರ ಕಾರುಣ್ಯಪಾರಾವಾರ
ಕನದಮಲಭಕ್ತಹೃದ್ಗ್ರಹದೀಪವರ್ತಿ ಹರಶರಣಕುಲಚಕ್ರವರ್ತಿ

---

[1] ರುಷ (ಗ) [2] ರುಷಂ (ಗ)

ಎನುತಲಾ ಬ್ರಾಹ್ಮಣಂ ತನ್ನ ಸತಿಯೊಡಗೂಡಿ
ಘನಹರ್ಷದಿಂ ನುತಿಸುತೆಮಗೆ ಗತಿಮತಿ ನೀನೆ
ಸನಯದಿಂದಂ ಪುತ್ರದಾನಮಂ ನಿನ್ನಿಂದೆ ಪಡೆದೆವಾವೀ ಧರೆಯೊಳು ೪೮

ಮಿಗೆ ನನ್ನ ಪೆಸರ ಮಗನಂ ನಂಬಿಯಣ್ಣನಂ
ಸೊಗಸಿನಿಂ ಪಾಲಿಸು ಕೃಪಾಪೂರ್ಣಜಲಧಿಯೆನು
ತಗಲದಾನಂದದಿಂ ತದ್ದಂಪತಿಗಳೆಯ್ದೆ ನಂಬಿಯಂ ಸಲೆ ಪೊಗಳುತೆ
ಮಗುಳ್ದು ತದ್ಗೃಹಕೆಯ್ದಿ ನಂಬ್ಯಣ್ಣನಾಜ್ಞೆಯಿಂ
ನೆಗಳ್ದ ತನ್ನಂದನಂಗುಪನಯನಮಂ ಮಾಡಿ
ಬಗೆಯೊಳತಿಸಂತೋಷನಂ ತಳೆದು [1]ಸೊಕ[1]ದಿಂದೆ ತನುಜನೊಡಗೂಡಿರ್ದರು ೪೯

ಪಿರಿದಿಂತು ಭೂರುದ್ರನೆನಿಪ ನಂಬ್ಯಣ್ಣನುರು
ತರ ಮಹಿಮೆಯಂ ಪೊಗಳ್ವನೆಲ್ಲಿದಂ ಲೋಕದೊಳ
ಗರರೆ ಗುರುಮಲ್ಲಿಕಾರ್ಜುನಪಂಡಿತೇಂದ್ರ ನಿನ್ನಯೆ ಮಹಿಮೆಯುದಲಿತ್ತಣಿಂ
ನಿರುತಂ ಪಯಿಂಛಾಸಿರಂ ನೋಳ್ಪೊಡಗ್ಗಳಂ
ಕರಮೆನುತೆ ತದ್ಭಕ್ತಸಂದೋಹಮಳ್ಕಜಿಂ
ದಿರದೆ ಕೀರ್ತಿಸುತಿರಲ್ಕಾ ನದೀತೀರದೊಳ್ ಪಂಡಿತೇಶ್ವರನಿರ್ದನು ೫೦

ಸದಮಲಪ್ರಚುರವಿಶ್ರುತ ಪರಮಭಕ್ತಗಣ
ಪದಸರೋರುಹಸಾಂದ್ರ ಮಕರಂದಪಾನ ಸ
ಮ್ಮುದಿತ ಚಂಚಚ್ಚಂಚರೀಕನನವರತ ಪಂಚಾಕ್ಷರೀಪ್ರಸಿತಹೃದಯಂ
ವಿದಿತ ಮಂಜುಲ ನೀಲಕಂಠಾಹ್ವಯಂ ಮನೋ
ಮುದದೆ ಪೇಳ್ದುರುತರಾರಾಧ್ಯಚಾರಿತ್ರದೊಳ
ಗಿದು ಪಿರಿಯನಂಗೆಯ ಸುತನ ಹರಣಮಂ ನಂಬಿ ಪಡೆದ ಕಥನಂ ಭಾವಿಸೆ ೫೧

[1] ಸುಖ (ಗ)

# ಒಂಬತ್ತನೆಯ ಸಂಧಿ

## ಧವಳೇಶನಾಮಯ್ಯನ ಕಥೆ

ಸೂಚನೆ : ಧವಳೇಶನಾಮಯ್ಯನಮಲಕಥೆಯಂ ಕೇಳ
ಶಿವ[1]ಶರಣ[1]ಪತ್ಕನತ್ಕಮಲ ನವಮಕರಂದ
ನಿವಹ ಪಾನೋನ್ಮತ್ತರೋಲಂಬನೆನಿಪ ಸೂರಾಮಾತ್ಯ ಮನದಣುಗಿನಿಂ

ಹರಿಣಚಿಹ್ನಂದಳೆಯದೇಹಾರಿಣಿಯುಮೆನಿಸಿ
[2]ಕಿ[2]ರಣಂಗಳಿಂದೆ ತಾಪೋಚ್ಛೇದಕಂಗೆಯ್ವು
ತಿರದೆ ತಾರಿಣಿಯೆನಿಸಿಯತ್ಯಂತಜಡಭಾವದೊಳಗೊಂದಿ ತೋಱತೆತ್ತಂ
ವರ ಕಲಾಸಾರಮಾಗುತ್ತುಮಿಂತಾವಗಂ
ಪಿರಿದುಂ ವಿರುದ್ಧಮಾಗೆಸೆವ ಚಂದ್ರನನೆಯ್ದೆ
ಭರದಿಂ ಕಪರ್ದದೊಳ್ ತಾಳ್ದಿಸೆವ ಗುರುನೀಲಕಂಠನೆಮ್ಮಂ ಸಲಹುಗೆ ೧

ಬಳಿಕಮಾ ಪಂಡಿತೇಶಂ ಭಕ್ತತತಿಗೂಡಿ
ಮಿಳಿರ್ವ ಹ[3]ರಿಸ[3]ದಿನಿರುತ್ತೊಂದುದೆವಸಂ ಮಹಾ
ಲಳಿತ ಗಣಪರ್ವಮಂ ರಚಿಸಿ ಸದ್ಭಕ್ತರಂ ವಸ್ತ್ರಭೂಷಣವಿತತಿಯಿಂ
ತೊಳಗುವಾನಂದದಿಂದಂ ಪೂಜೆಗೆಯ್ದು ಸ
ಲ್ಲಲಿತ ಕರ್ಪೂರವೀಟಿಕೆಗಳಂ ಕೊಟ್ಟವರ್ಗ
ಳಳಘುತರವೆನಿಸುವಾನಂದಗೀತಂಗಳಂ ಪಾಡುತ್ತೆ ಮನದಲಂಪಿಂ ೨

ಮಿಸುಗುವ ಶಿವಾನಂದಲೀಲೆಯಿಂ [4]ನ[4]ರ್ತಿಸುತೆ
ಮಸಕದಿಂ ಶಂಕರಸುಗೀತಂಗಳಂ ಪಾಡು
ತೊಸೆದು ಶಂಕರಲೀಲೆಯಿಂದೆ ಕುಣಿದಾಡುತ್ತೆ ಭಕ್ತರೊಡನತಿಹರ್ಷದಿಂ
ಎಸುಗುವಾನಂದಪೂರಿತಚಿತ್ತನಾಗಿರ
ಲ್ಕಸವಸದೆ ಕರ್ಣಾಟಭಾಷೆಯಂ ಬಯಸಿ ತಾಂ
ಬಸವಣ್ಣನೆಡೆಗೆ ಮುಂಕಳುಪಿದಾ ಭಕ್ತರೆಯ್ತಂದರಾ ಸಮಯದೊಳಗೆ ೩

[1] ಭಕ್ತ (ಗ) [2] ಕ (ಗ) [3] ರುಷ (ಕ) [4] ವ (ಗ)

ಹರಿಸ[1]ದಿಂ ಬಸವೇಶನಟ್ಟಿದಾ ಭೂತಿಯಂ
ಗುರುಪಂಡಿತೇಶಂಗೆ ಕೊಟ್ಟರಾ ಭಕ್ತರ್ಕ
ಳುರುತರ ಪ್ರೇಮದಿಂ ಬಸವಮಾಹಾತ್ಮ್ಯಮಂ ಸ್ಮರಿಸುತ್ತೆ ಪಂಡಿತೇಶಂ
ವರ ಬಸವಹಸ್ತದಿಂ ಬಂದ ತದ್ಭಸಿತಮಂ
ಧರಿಸಿಕೊಳಲನಿತಱೊಳ್ ಕರ್ಣಾಟಭಾಷೆ ಭಾ
ಸುರಮಾಗಿ ಬರಲದಱಿನಿಷ್ಟಲಿಂಗಸ್ತೋತ್ರಮಂ ಮಾಡಿದಂ ಭಕ್ತಿಯಿಂ ೪

ಬಸವಮಾಹಾತ್ಮ್ಯಗೀತಂಗಳಂ ಸೊಗಸುಮಿಗೆ
ಮಸಕದಿಂ ಕರ್ಣಾಟಭಾಷೆಯೊಳ್ ಪಾಡುತ್ತೆ
ಬಸವನಂ ನೆನೆದು ವಂದಿಸುತೆ ತದ್ಭಸನಮಹಿಮೆಯ ಕೇಳುತಳ್ಕಱಿಂದಂ
ಬಸವನಿರವಂ ಕೇಳ್ದ ಸೌಖ್ಯದಿಂ ತನುವುರ್ಬಿ
ಪಸರಿಸಲ್ ಪುಳಕಾಳಿ ಹರ್ಷಾಶ್ರು ಸುರಿಯೆ ತ
ದ್ಭಸವನಂ ನೋಳ್ಪುತ್ಸುಕಂ ಪಂಡಿತೇಶ್ವರನ ಮನಮನೆಡೆಗೊಂಡಿತಂದು ೫

ಬಸವ [2]ಎಂ[2]ಬಕ್ಷರತ್ರಯಮನಾವಂ ಪಠಿಪ
ನೊಸೆದವನನಸಮನಯನಂ ಕರಂ ರಕ್ಷಿಪಂ
ನಿಸದಮಂ ತ್ರ್ಯಕ್ಷಪ್ರಸಾದ ಪಕ್ವಾಕ್ಷನಂ ಶಿಕ್ಷಿತ ಪ್ರತಿಪಕ್ಷನಂ
ಮಿಸುಗುವಕ್ಷೀಣಕರುಣಾಕಟಾಕ್ಷನನೆಯ್ದಿ
ಮಸಕದಿಂ ಭವಪಾಶಮೋಕ್ಷನಮಂ ಮಾಳ್ಪನಂ
ಸಸಿನೆ ಭಾಳಾಕ್ಷನಮಂ ಶಂಭುವಿಂಗಿತ್ತನಂ ಸಾಕ್ಷಾನ್ಮಹೋಕ್ಷನಿಭನಂ ೬

ವರ ಮುಮುಕ್ಷುಗಳಿಂದೆ ಸೇವ್ಯನಾಗಿರ್ಪನಂ
ಸರಳ ದಕ್ಷಾಧ್ವರಕ್ಷಯಕರಸದೃಕ್ಷನಂ
ಶರಣಸಂಯುಕ್ತನಂ ಹರಸಮಯಪಕ್ಷನಂ ರಕ್ಷಿತಾಮಲಭಕ್ತನಂ
ಉರು ಸತ್ಕ್ರಿಯಾದಕ್ಷನಂ ವಿಚಕ್ಷಣನನುರು
ತರ ಬಸವನಂ ನೋಳ್ಪ ಕಾಂಕ್ಷೆಯಿಂ ಭಕ್ತರೊಡ
ವರೆ ನಡೆದನಾ ಪಂಡಿತೇಶ್ವರಂ ಕಲ್ಯಾಣದತ್ತಲಭಿಮುಖನಾಗುತೆ ೭

---

1 ರುಷ (ಗ) 2 ನೆಂ (ಕಗ)

ಭರದಿನೆಳ್ತರುತೆ ತಿರು[1]ಗುಡುಮುಲು[1]ಗ್ರಾಮಮಂ
ಹರಿಸದಿಂ ಸಾರ್ದು ಮತ್ತಲ್ಲಿ ರಾಜಿಸುವ ಭಾ
ಸುರ ವೀರಚಾಕಿರಾಜನ ಮಹಿಮೆಯಂ ಮತ್ತಮವರೊಲ್ದು ಮಿಗೆ ರಚಿಸುವ
ಸರಳ ಸಾರಂಗೇಶ್ವರನ ಭಕ್ತಿಯಂ ಮಗುಳ್ದು
ಪಿರಿದು ಸೀಮಾಲಂಘನವ್ರತಮನೆಯ್ದೆ ಬಂ
ಧುರ ಶಿವನ ಪೂಜಾನುರಕ್ತಿಯಂ ಸಂತತಂ ಚರಲಿಂಗಸೇವೆಗಳನು ೮

ಹರನ ಸದ್ಭಕ್ತಿಗೋಷ್ಠಿಗಳಲ್ಲಿಯೆಱಕವಂ
ಪಿರಿದುನೋಂಕಲ್ಪಟ್ಟ ವರ್ಣಾಶ್ರಮಂಗಳಂ
ಪರಮವೇದೋಕ್ತಮಾರ್ಗಾನುಸಕ್ತಿಯನೆಯ್ದೆ ಮೋದದಿಂ ವರ್ಣಿಸುತ್ತಂ
ಗುರುಪಂಡಿತೇಶ್ವರಂ ಮನಮಲರುತಂ ತನ್ನ
ಪಿರಿಯ ಶಿಷ್ಯಂ ದಲೆನಿಸುವ ದೋನಮಯ್ಯಂಗ
ಳುರು ವೀರಚಾಕಿರಾಜನ ಸರಳಭಕ್ತಿಯಿಂ ಪೂಜೆಯಂ ಸ್ವೀಕರಿಸುತೆ ೯

ಹರಿಸದಿಂ ಪಾನುಗಲ್ಲೆಂಬ ಪುರಕೆಳ್ತರು
ತ್ತಿರಲದಂ ತತ್ಪುರದೊಳಿರ್ಪ ನಿಜಶಿಷ್ಯನ
ಪ್ಪುರುಭಕ್ತಭಂಡಾರಿ ಗೋವಿಂದಪೆಗಡೆ ಕೇಳುತ್ತುಮತಿಸಂಭ್ರಮದೊಳು
ಹರಶರಣರೊಡಗೂಡಿ ಪುರದ ವೀಧಿಗಳ ಭಾ
ಸುರ ಹಿಮಾಂಬುಗಳಿಂದೆ ಸೇಚನಂಗೆಯ್ದು ಸುರು
ಚಿರರಂಗವಲ್ಲಿಗಳ ಚಿತ್ರತರಮಾಗಿ ರಚಿಸುತ್ತಲ್ಲಿಗಲ್ಲಿಗೊಲ್ದು ೧೦

ಮಿಳಿರ್ದೆಸೆವ ಮಕರತೋರಣ ಮುಕುರತೋರಣಂ
ಗಳಿನೆಸೆವ ಮಾಣಿಕ್ಯಮೌಕ್ತಿಕದ ಮಂಟಪಂ
ಗಳ ವೃಷಧ್ವಜವ್ರಾತಪೂರಂಗಳಲರ ತೋರಣ ನೆರವಿಗಳನಳ್ಕಱಂ
ತೊಳಪ ಮಾರ್ಗದ ಪಾರ್ಶ್ವದೊಳ್ ಶೋಭಿಪಂತೆ ಸ
ಲ್ಲಳಿತಮಾಗನುಗೆಯ್ದು ವಾದ್ಯಸಂದೋಹರವ
ಮಳುರ್ದು ದೆಸೆಗಳ ಪಳಂಚಲೆಯುತಿರೆ ಶುದ್ಧಸಾಳಗಗೀತನಿಕರಮೆಸೆಯೆ ೧೧

ಲಲಿತ ಪೇರಣ ನೃತ್ಯಮುಖ್ಯಮಾದಾಟಂಗ
ಳಲರ್ದು ಶೋಭಿಸುತಿರಲ್ ಶರಣಜನರಲ್ತಿಯಿಂ
ನಲಿದುಘೇ ಜಯಜಯ ಎನುತ್ತೊಡನೆವರೆ ಮುದದಿನಿದಿರ್ವಂದು ಗುರುಪಾದಮಂ

---

[1] ಮುಲುಗುಡು (ಕ) [2] ರುಷ (ಗ)

ಸಲೆ ಕಾಣುತವನಿಯೊಳ್ ಮೆಯ್ಯನೀಡಾಡಿ ಸ
ಲ್ಲಳಿತ ಸದ್ಭಕ್ತಿಯಿಂ ವಂದನಂಗೆಯ್ದು ನಿ
ರ್ಮಲಪುಳಕಿತಾಂಗನಾಗುತ್ತೆ ಹರ್ಷಾಂಬುಗಳ್ ಮುಗುಳೊತ್ತೆ ನಯನದೊಳಗೆ ೧೨

ಹರಿಸ[1]ದಿಂ ದಿವ್ಯಭೂಷಾಂಬರಾನೀಕಮಂ
ವರ ಕನಕಪಾತ್ರಂಗಳಂ ವಿವಿಧಫಲಪುಷ್ಪ
ಸುರುಚಿರ ಸುಗಂಧಕರ್ಪೂರವೀಟಿಕೆಗಳಂ ಸದ್ಭಕ್ತಿಯಿಂದರ್ಪಿಸಿ
ಮರಳಿ ಸಾಷ್ಟಾಂಗದೊಡಗೂಡಿ ವಂದನೆಗೆಯ್ದು
ಪಿರಿದುಮಾನಂದಾಶ್ರುಸಂದೋಹದಿಂದಮಾ
ಗುರುಚರಣಮಂ ಕರ್ಚಿ ಹೃತ್ಪ್ರಸೂನದೆ ಪೂಜೆಗೆಯ್ದು ಮತ್ತಂ ಮುದದೊಳು ೧೩

ವರ ಭಕ್ತಿವಾಸನಾಧೂ[2]ಪ[3]ಮಂ ಸಲಿಸಿ ಭಾ
ಸುರತರ ಸ್ತೋತ್ರವಾಗ್ಮಣಿದೀಪಸಂತತಿಯ
ನಿರದೆತ್ತಿ ನಿಜಮನೋನೈವೇದ್ಯಮಂ ಮಾಡಿಯನುರಾಗತಾಂಬೂಲಮಂ
ಹರಿಸ[3]ದಿಂದಿತ್ತು ಮಾಣಿಕ್ಯಹೇಮಂಗಳಿಂ
ವಿರಚಿಸಿದ ಪುಷ್ಪಸಂದೋಹಂಗಳಿಂದೆ ಬಂ
ಧುರಮಾದ ಪುಷ್ಪಾಂಜಲಿತ್ರಯಂಗೆಯ್ದಂಗಕರ್ಮದಿಂ ಮುದದೊಳಿಂತು ೧೪

ಗುರುಪೂಜೆಯಂ ರಚಿಸಿ ಮಗುಳ್ದು ಸದ್ಭಕ್ತಿಯಿಂ
ಸುರುಚಿರ ಪ್ರಾಣದೇಹಾರ್ಥಂಗಳಂ ಗುರುಗೆ
ಭರದಿ[4]ನರ್ಪಿ[4]ಸಿದನಾ ಶ್ರುತಿ ಸದ್ಗುರುಭ್ಯೋ ನಿವೇದಯೇದೆಂಬ ತೆಱದಿಂ
ಮರಳಿ ತನ್ನಂ ದರ್ಶಿಸಲ್ಬಂದ ಭಕ್ತರ್ಗೆ
ಪಿರಿದುಮನ್ಯೋನ್ಯವಂದನೆಗಳಿಂದನ್ಯೋನ್ಯ
ವರ ನುತಿಗಳಿಂ ತುಷ್ಟರಂ ಮಾಡಿ ಪಂಡಿತೇಶ್ವರನವರ್ಗೂಡಿ ಮುದದಿಂ ೧೫

ವರ ಶೋಭೆವಡೆದು ಪುರಮಂ ಪೊಕ್ಕು ಬಪ್ಪಾಗ
ಳುರುಪುಣ್ಯಪುರುಷರುಂ ಪುಣ್ಯಸತಿಯರ್ಕಳುಂ
ಭರದಿಂದೆ ನೆರೆದು ಶಿವಭಕ್ತೈಕಗುಣ್ಯನಂ ಸುಗುಣಮಣಿಗಣಪುಣ್ಯನಂ
ಸರಳ ಸಜ್ಜನಶರಣ್ಯನನೆಸೆವ ಶಿವಭಕ್ತಿ
ಗರರೆ ವೀರಾಗ್ರಗಣ್ಯನನಾವಗಂ ಮನೋ
ಹರ ಸಮುನ್ನತಪರಮಕಾರುಣ್ಯನಂ ಮತ್ತಗಣ್ಯಪುಣ್ಯನನೊಪ್ಪುವ ೧೬

---

[1] ರುಷ (ಗ) [2] ಮ (ಗ) [3] ರುಷ (ಗ) [4] ನೊಪ್ಪಿ (ಗ)

ಗುರುಪಂಡಿತೇಂದ್ರನಂ ನೋಡಿ ನಿಜಭಾಳದೊಳ್
ಕರಮೆಸೆವ ಹಸ್ತಕೀಲಾಲಜಂಗಳನಿಟ್ಟು
ಪಿರಿದು ಸದ್ಭಕ್ತಿಯಿಂ ನುತಿಸುತಿರ್ದರ್ ಮಗುಳ್ದು ತತ್ಪುರೀನರನಾಥನು
ಹರಿಸದಿಂದೆಯ್ದಿ ವಂದಿಸಿಪೋದನಿತ್ತಲುಱೆ
ಭರದಿಂದೆ ಗಚ್ಛತಃ ಪೃಷ್ಠತೋ ಎನುತೆ ಮ
ತ್ತಿರದೆ ಗಚ್ಛೇದ್ಗುರೋಶ್ಛಾಯಾಂ ನಲಂಘಯೇದೆನುತೆ ಮತ್ತಂ ವೇದವು ೧೭

ಪಿರಿದು ಗಚ್ಛೇನ್ನಮಸ್ಕೃತ್ವಾ ಎನುತ್ತೆ ನಿ
ರ್ಭರದೆ ನಿಜಗುರುಮೂರ್ತಿಮೆನುತುಸುರ್ದ ಪಾಂಗಿನಿಂ
ಗುರುಭಕ್ತಿಸಂಪದಂ ಗೋವಿಂದಪೆಗಡೆ ವರಗುರುಶರೀರಚ್ಛಾಯೆಯಂ
ಕರಮಿನಿಸು ಮಿಱದೇ ದಾಂಟದೇ ಮತ್ತಮಾ
ಗುರು ಮೆಟ್ಟಿದೆಡೆಗಳಂ ಮಱೆದು ಮೆಟ್ಟದೆ ಮತ್ತೆ
ಗುರು ಮೆಟ್ಟಿದೆಡೆಗೆ ವಂದಿಸುತುಮತಿಭಕ್ತಿಯಿಂ ನಿಜಗೃಹಕೆ ಕೊಂಡೊಯ್ದನು ೧೮

ಮುದದೆ ಸಿಂಹಾಸನಾಸೀನನಂ ಮಾಡಿ ಗುರು
ಪದಸರಸಿಜಕ್ಷಾಲನಂಗೆಯ್ದು ತತ್ಪಾದ
ಸದಮಲಾಂಬುವನೀಂಟಿ ಗಂಧಪುಷ್ಪಾಕ್ಷತೆಗಳಿಂದೆ ನಲಿದರ್ಚಿಸುತ್ತೆ
ಪದೆದು ಧೂಪಾದಿಗಳನರ್ಪಿಸಿ ಸಮಂತು ಸ
ದ್ವಿದಿತವಾಕ್ಯಂಗಳುಂ ಸ್ವಗೃಹಂ ಎನುತ್ತುಮಿಂ
ಪೊದವಿ ಮತ್ತೀಗಳುಂ ಸ್ವಧನಂ ಚ ಎನುತೆ ಪೇಳ್ದಂತೆ ಸಂತೋಷದಿಂದಂ ೧೯

ತನ್ನ ಮನೆಯೊಳಗಿರ್ದ ಸರ್ವಧನಧಾನ್ಯಾದಿ
ಯಂ ನಲಿಯುತಿತ್ತು ಸದ್ಗುರುವಿಂಗೆ ಮತ್ತವರ
ಸನ್ನುತ ನಿಜಪ್ರಸಾದಾಂಬುಧಿಯೊಳೋಲಾಡುತಿರ್ದನನವರತಮೊಸೆದು
ಸನ್ನಿದಂ ಸದ್ಭಕ್ತಗೃಹದೊಳಗೆ ನಿಚ್ಚ ನಿ
ಚ್ಚಂ ನೆಱೆಯೆ ಪಂಡಿತೇಶಂಗೆ ಪರ್ವಂಗಳುಂ
ನನ್ನಿಯಿಂದೆಸಗುತಿರೆ ಶಿವತತ್ತ್ವಗೋಷ್ಠಿಗೆಯ್ಯುತಿರ್ದನತಿಮುದದೊಳು ೨೦

ಮಿನುಗುವಾ ಪುರದೊಳಗೆ ಲಿಂಗನಿಷ್ಠಾಪರಂ
ಮನಸಿಜಾಂತಕಭಕ್ತನತಿವೀರಸುವ್ರತಂ
ಕನದಮಲ ಧವಲೇಶನಾಮಯ್ಯನಿರ್ಪನುದಯಕ್ಷ್ಮಾಪ ಸನ್ನಿಧಿಯೊಳು

---

1 ರುಷ (ಗ)

ಮುನಿದಸಹ್ಯದೆ ತನ್ನ ಸಂಗಡದ ಲೆಂಕರಾ
ಮನುಜಪತಿಯೊಡನೆ ಪೇಳ್ದರ್ ನಿನ್ನ ಲೆಂಕರೊಳ್
ಘನಮುಖ್ಯಲೆಂಕನಾ ಧನಲೇಶನಾಮಯ್ಯನೆಂಬವಂ ಪರಿಭಾವಿಸೆ ೨೧

ಭರದೆ ನಿನ್ನಂ ಲೆಕ್ಕಿಸಂ ನಿನ್ನ ತಂಬುಲವು
ನಿರದೆ ಬಿಸುಡುವನದಂ ತಾಂ ಕೊಳ್ಳನೆಂದುವುಚಿತ
ಪರಮಸದ್ಭಕ್ತನೆನುತುಂ ಬಳಿಕ್ಕಂ ನಿನ್ನ ಸೇವಿಸಲ್ ಬಪ್ಪುದಿಲ್ಲ
ಕರೆದೊಡಂ ಬಾರನಾ ಪಂಡಿತೇಂದ್ರನ ಪೊರೆಯೊ
ಳಿರುಳುಂ ಪಗಲ್ವರೆಗವಿರ್ದಪಂ ನೀನೆಮ್ಮ
ಕರಮೆ ನಂಬದೊಡೀಗ ಬರಿಸಿ ತಂಬುಲಮನಾತನ ಕರದೊಳಿತ್ತು ನೋಡು ೨೨

ಎನೆ ಕರಸಿಯಾತನಂಗೈಯೊಳಗೆ ತಂಬುಲವ
ನನುವಿನಿಂ ಕೊಟ್ಟದಂ [1]ಕೊಳ್ಳೆನಲ್ ತನ್ನೃಪಂ[1]
ವಿನಯನಿಧಿ ಕೊಳ್ಳದದನಲ್ಲಿ ಭೂಮಿಯೊಳಿಟ್ಟು ಸದ್ಗುರುಸ್ಮರಣೆ[2]ಗೂ[2]ಡಿ
ಮಿನುಪ ಸಿತಭಸಿತಮಂ ಕರದೊಳಗೆ ಲೇಪಿಸಲ್
ಮನುಜಪತಿಯುದನೆಯ್ದೆ ಕಂಡು ನುಡಿದಂ ನಿನಗೆ
ಘನಸೇವಕಂಗೆ ತಾನಿನಿತೇಕೆ ಕೊಳ್ಳದಾ ತಂಬು[3]ಲಂ[3] ಬಿಸುಟ ಎನಲು ೨೩

ಪರಮ ಧನಳೇಶನಾಮಯ್ಯನಾ ನೃಪನೊಡನೆ
ಭರದೆ ನುಡಿದಂ ಸೇವೆಗೊಡೆಯನಲ್ಲದೆ ನಾಡೆ
ನಿರುತದಿಂ ನೀಂ ಪ್ರಸಾದಂಗುಡಲ್ ಕರ್ತೃವೇ ಭಕ್ತಿಧರ್ಮದೊಳಾವಗಂ
ಪರಿಭಾವಿಸಲ್ ಪ್ರಸಾದೇತರಪದಾರ್ಥಕ್ಕೆ
ಕರಮನೊಸೆದೀಯುವುದುಚಿತಮೆ ಭಕ್ತಸಂತತಿಗೆ
ಪರಮೇಶ್ವರಂಗರ್ಪಿಸಲ್ ತಕ್ಕುದೇ ನಿನ್ನ ತಂಬುಲಂ ಲೋಕದೊಳಗೆ ೨೪

ಪರಮೇಶ್ವರಂಗರ್ಪಿಸದ ವಸ್ತುತತಿಗಳಂ
ಕರಮೆ ಭುಂಜಿಪುದಯುಕ್ತಂ ಪರಮಭಕ್ತರ್ಗೆ
ನಿರುತದಿಂ ಜೋಳವಾಳಿತನಕ್ಕೆ ನಿನ್ನನಾಂ ಸೇವಿಸಿದೊಡಾ ಸೇವೆಗೆ
ಪಿರಿದು ನೀಂ ಕರ್ತೃವಲ್ಲ[4]ದೆ[4] ಮಗುಳ್ದು ಭಾವಿಸಲ್
ಸರಳ ಮುಕ್ತ್ಯರ್ಥಸೇವೆಗೆ ಭರ್ತೃ ನೀನಲ್ತು
ಚರಲಿಂಗಪೂಜಾರ್ಥಮಾಗಿ ಧನಮಂ ಪಡೆವೆನಾ ಧನಂಗುಡುತು ನಿನ್ನಂ ೨೫

---

1 ತನ್ನೃಪಂ ಕೊಳ್ಳೆನಲ್ (ಗ) 2 ಮಾ (ಕ) 3 ಲಮ (ಗ) 4 ವೆ (ಕ)

ಕರಮೆ ಸೇವಿಪೆನದರ್ಕೀ ತನುವನಿತ್ತಪೆಂ
ಭರದಿಂದೆ ನಿನಗೆ ಮತ್ತಾಚಾರಮಂ ಮಾಱಿ
ಪೊರೆವೆನೇ ಮಚ್ಛರೀರಮನೆನಲ್ಕಾ ನೃಪತಿ ಕೋಪಾಗ್ನಿ ಕಿಡಿಗೆದಱಲು
ಉರಿದೇಳುತೆಲೊ ನಾಮ ನೀನೆನ್ನ ತಂಬುಲಮ
ನಿರದಿಕ್ಕಿದಯ್ ಭಕ್ತನೆಂಬಹಂಕಾರದಿಂ
ಧರೆಯೊಳಗೆ ನಿನ್ನಿಂದೆ ಹೀನರೇ ಭೂಮಿಪರ ಸೇವಿಸುವ ಸದ್ಭಕ್ತರು ೨೬

ನರಪರ್ಗೆ ವಿಶ್ವಾಸಮಾಗಿರ್ದ ಮಂತ್ರಿಗಳ್
ಕರಮೆ ತಂಬುಲದಿಂಬರೊಲ್ದು ತಮ್ಮಂ ಕುಡುವ
ರಿರದೆ ಮತ್ತೇಕೆ ಪಲವಾತುಗಳ್ ನಿಮ್ಮ ಬಸವೇಶ್ವರಾದಿಗಳಣಿಯರಂ
ಹ[1]ರಿಸ[1]ದಿಂ ನೃಪಸೇವೆಗೆಯ್ಯರೇ ನೀನೆಲವೊ
ಪಿರಿದುಮವರಿಂದಧಿಕನೇ ಎನ್ನ ತಂಬುಲಮ
ನಿರದಿಕ್ಕಿದಪರಾಧಮಂ ಕಾದೆನೊರ್ಮೆ ನೀನಳುಕದಿರೆನುತ್ತೆ ನೃಪನು ೨೭

ಮಗುಳ್ದು ಕರೆದೆಲೊ ನಾಮ ಬಾರೆನ್ನ ತಂಬುಲಕೆ
ಸೊಗಸಿನಿಂ ಕೈಯೊಡ್ಡಿಕೊಳ್ಳಲ್ಲದಿರ್ದೊಡೀ
ಗಗಲದೆನ್ನಯ ತನುವನೆನಗೊಪ್ಪಿಸೆನೆ ನುಡಿದನಾ ಭೂಪನಂ ಕೋಪದಿಂ
ನೆಗಳ್ದ ಧವಳೇಶನಾಮಯ್ಯನೆಲೆ ನರಪ ಕೇಳ್
ತಗುಳ್ದು ನಿನ್ನಂ ಸೇವಿಸಿದ ದೂಸಱಿಂದೆನ್ನ
ಬಗೆಯನಱಿಯದೆ ನುಡಿದೆಯಘದೂರರಂ ಭಕ್ತರಂ ನುಡಿವುದಿಂತುಚಿತವೆ ೨೮

ಧರೆಯೊಳಗೆ ಭವಿಗಳಂ ಭಕ್ತರೇಂ ಸೇವಿಪರೆ
ಕರಮೆಯೆಂತರ್ಕೆ ಸೇವಿಸಿದೊಡಾ ಲೌಕಿಕರ
ನರಪರಾಲಯದ ಕಿಂಕರರೆ ಸದ್ಭಕ್ತರ್ಕಳತಿಮಾನ್ಯಶಿವಶರಣರು
ಪೊರೆದ ದುಷ್ಕರ್ಮಿಗಳ ತಂಬುಲಂದಿಂಬರೇ
ಗುರುಲಿಂಗಸುಪ್ರಸಾದಿಗಳೊಲ್ದು ಸಂತತಂ
ನರರೆಂಜಲಂ ಭಕ್ಷಿಪರೆ ಭವ್ಯಲಿಂಗಪ್ರಸಾದ[2]ಭೋ[2]ಗಿಗಳಣಿಯರಂ ೨೯

ಮಿಗುವಿಷ್ಟಲಿಂಗಪ್ರಸಾದೇಚ್ಛಕರ್ ನಾಡೆ
ಮಿಗೆ ಕಷ್ಟಮಾನವೋಚ್ಛಿಷ್ಟಮಂ ಭಕ್ಷಿಪರೆ
ಸೊಗಸಿನಿಂ ಬಸವೇಶ್ವರಂ ಭವಿಯ ಸೇವಿಸಿದನೆಂದು ನಿನ್ನಯ ಮನದೊಳು

---

[1] ರುಷ (ಗ) [2] ಭಾ (ಕ)

ಬಗೆದೈ ಮಹಾಮಹಿಮನೆನಿಪ ಬಸವೇಶ್ವರನ
ನೆಗಳ್ದ ಮಹಿಮೆಯ ಕೇಳ ಶಂಕರಂ ಮುನ್ನೆ ತೊ
ಟ್ಟಗೆ ತನ್ನ ಸದ್ಭಕ್ತಿವರ್ಧನಕೆ ಧರಣಿಯೊಳಗೊಗೆಯವೇಳ್ದಾ ಬಸವನಂ ೩೦

ಹ[1]ರಿಸ[1]ದಿಂ ಕಳುಪುವವಸರದೊಳೊಂದಂ ಶಂಭು
ಕರಮೆ ನೆನೆದಂ ಭೂಷಣಾದಿಗಳ ತೂಕವಂ
ಪರಿಕಿಪೊಡೆ ಗುಂಜಾದಿಗಳುವಿಲ್ಲದಱಿಯಲಳವಲ್ತು ಕನಕಾಂತರವನು
ಒರೆಗಲ್ ಧರಿತ್ರಿಯೊಳಗಿಲ್ಲದಿರಲಱಿಯಲ್ಕೆ
ಪಿರಿದಶಕ್ಯಂ ರತ್ನದಿರವಱಿವುದರಿದು ಭಾ
ಸುರ ಶಾಣೆ[2]ಯಿ[2]ಲ್ಲದಿರೆ ಕುಲಟೆಯಲ್ಲದೆ ಪತಿವ್ರತೆಯಱಿಯಬಾರದಂತೆ ೩೧

ವರ ಭೀರುವಿಲ್ಲದಿರೆ ಶೂರನಂ ದುರ್ಜನಂ
ಧರೆಯೊಳಿಲ್ಲದೊಡೆ ಸಜ್ಜನನನತಿಪಾಪವುದು
ಕರವಿಲ್ಲದೊಡೆ ಸ್ಪೈಪನಂತೆ ತೊದಳಿಲ್ಲದೊಡೆ ಸತ್ಯವಂ ರೂಢಿಯಾಗಿ
ಪರಿಕಿಪುದ[3]ಶಕ್ಯ[3]ಮದಱಂತೆ ಬಸವೇಶ್ವರನ
ಸರಳ ಮಹಿಮೆಯನಱಿಯಲಳವಲ್ತು ಲೋಕದೊಳ
ಗಿರದಿರ್ದೊಡೊರ್ವದೂಷಕನೆಂದು ಮತ್ತಮಾ ಕಂಟಕಾಸುರನನೊಸೆದು ೩೨

ಬಸವಣ್ಣನೊಡನೆ ಹರನಟ್ಟಲಾ ದಾನವಂ
ರಸೆಯೊಳಗೆ ಬಲ್ಲಹಾನ್ವಯದೊಳಗೆ ತಂದು ರಾ
ಜಿಸುವ ಬಿಜ್ಜಲನಾಮದಿಂ ಪಟ್ಟಬದ್ಧನಾದಂ ಮತ್ತಮಿತ್ತಲೊಸೆದು
ಬಸವೇಶ್ವರಂ ಭೂಮಿಗೆಯ್ದಿ ವಿಶ್ರುತಮಾಗಿ
ಮಿಸುಪ ಕಪ್ಪಡಿಸಂಗಮದೊಳೊಪ್ಪುತಿರಲದಂ
ನಿಸದಮಾಗಱಿದು ಮಗುಳ್ದಾ ಬಿಜ್ಜ[4]ಳಂ[4] ಕರಸಿ ಕೋಶದೊಡೆತನವನಿತ್ತಂ ೩೩

ಮರಳಿ ಸಕಲನಿಯೋಗಕೆಲ್ಲಕ್ಕೆ ಕರ್ತೃವನಂ
ಹ[5]ರಿಸ[5]ದಿಂ ಬಸವಣ್ಣನಂ ಮಾಡಿದಂ ನಾಡೆ
ವರ ಬಸವದಂಡನಾಥಂ ಜಂಗಮಾರ್ಚನೆಯನೊಲವಿನಿಂದಂ ರಚಿಸುತೆ
ನರಪತಿಯ ಸರ್ವರಾಜ್ಯಂಗಳಂ ಪಾಲಿಸು
ತ್ತುರುಮುದದಿನಿರುತಲುಂ ಸ್ವಾಮಿ ಬಿನ್ನಪಮೆಂದು
ನಿರುತಮುಸುರಂ ಕರಮನೆತ್ತಿ ಮುಗಿಯಂ ಬಿಜ್ಜಳಂಗೆ ಬಸವೇಶನೊಸೆದು ೩೪

---

[1] ರುಷ (ಗ) [2] ಯ (ಗ) [3] ಸತ್ಯ (ಗ) [4] ಲಂ (ಗ) [5] ರುಷ (ಗ)

ಎಸೆವ ನೃಪಸಿಂಹಾಸನದೊಳೆಂದುಕುಳ್ಳಿರಂ
ಮಸಕದಿಂ ಭಕ್ತರ್ಗೆ ಜೀಯೆಂಬವೊಲ್ ನಾಡೆ
ನಿಸದಮಾ ನೃಪತಿಗೆನ್ನಂ ಪಿರಿದುಮಾ ನೃಪನ ಭಂಡಾರದೊಡವೆಗಳನು
ಎಸಕದಿಂ ಪಿಂಡಜಂಗಮಕಿತ್ತನಲ್ಲಿಯಿಂ
ವಸುಧಾಧಿಪನ ಸುದತಿಯಂ ಮತ್ತಮವನ ರಾ
ಜಿಸುವ ತೇಜಿಯನಿತ್ತನೊರ್ವ ವಿಟಜಂಗಮಕೆ ನಿರ್ಭೀತಿಯಿಂದೆ ಬಸವಂ ೩೫

ಧರಣಿಯೊಳಗುಂಟೆ ಸೇವಕಧರ್ಮಮಿಂತಪ್ಪು
ದೊರೆದುನೋಡಲ್ ಮತ್ತಮಿಂತಪ್ಪ ತಪ್ಪುಗಳ
ನಿರದನೇಕಂಬಿಡಿದು ಬಿಜ್ಜಲಂ ಬಸವನಂ ದಂಡಿಪೆನೆನುತ್ತೆ ಬಗೆಯೆ
ಮರಳಿಯಾಯವಸರದೊಳೀಶಮಹಿಮೆಗಳನುರು
ತರಭಕ್ತಿಯಿಂ ತೋಱಿ ಬಸವೇಶ್ವರಂ [1]ಸೊಕ[1]ದೊ
ಳಿರಲೊಂದುದೆವಸವಲ್ಲಯ್ಯ ಮಧುವಯ್ಯಂಗಳಂ ಬಿಜ್ಜ[2]ಳಂ[2] ಶಿಕ್ಷಿಸೆ ೩೬

ಮಿನುಪ ಬಿಜ್ಜ[3]ಳ[3]ನ ಸಂಪನ್ನಿಕರಮಾಯಿಸಂ
ಎನಸುಮಂತವನ ಚಾಳುಕ್ಯವಂಶಮನೊಲ್ದು
ವಿನಯದಿಂ ಹರನ ಕವಳಿಗೆಗೆಯ್ದಿಸಿದನೆಯ್ದೆ ಕಲ್ಯಾಣಕಟಕಮೆಲ್ಲಂ
ಘನಶೂನ್ಯಮಕ್ಕೆಂದು ಕೋಪದಿಂ ಶಾಪಮಂ
ನನಸಿತ್ತು ಮೊಲ್ಲಬೊಮ್ಮಯ್ಯ ಜಗದೇವಂಗ
ಳೆನಿಪ ಭಕ್ತರ್ಕಳಿಂದಂ ಪಡಲ್ವಡಿಸಿದಂ ಬಸವೇಶನಾ ಭೂಪನಂ ೩೭

ಮರಳಿ ಹರಭಕ್ತನೊರ್ವಂ ರಾಜಿಸಂ ಧರೆಯೊ
ಳರರೆ ಹಡಪದ ರೇಚದೇವಯ್ಯನಾಮದಿಂ
ದಿರುತಿರ್ಪ ವೆಂಗಿಭೂಪತಿಗಡಪವಳ್ಳನಾಗುತ್ತುಮತಿಸಂತೋಷದಿಂ
ಸರಳನಾ ವೆಂಗೀಶ್ವರಂ ತನ್ನ ಸತಿಯೊಡನೆ
ಹ[4]ರಿಸ[4]ದಿಂದಂ ಪ್ರಿಯಾಲಾಪಂಗಳಂ ನುಡಿಯು
ತಿರಲೊಂದುದೆವಸಮಾ ವೇಳೆಯೊಳ್ ಭರದಿಂ ತಳಾಱರೆಯ್ತಂದುಸುರ್ದರು ೩೮

ಎಲೆ ರಾಜ ಬಿನ್ನಪಂ ಕುಡಿಯನೊರ್ವಂ ಮಱೆದು
ಲಲಿತವೃಷಭನ ಲಿಂಗಮುದ್ರೆಯಂ ತೊಡೆದು ತಾ
ನೊಲವಿನಿಂದುಳುತುಮಿರಲದನಱಿದು ಭಕ್ತರವನಂ ಪಡಲ್ವಡಿಸಿದರೆನೆ

---

[1] ಸುಃಖ (ಗ) [2] ಲಂ (ಟ) [3] ಲ (ಟ) [4] ರುಷ (ಗ)

ಲಲನೆ ಕೇಳ್ದಾ ಮಾತನಳ್ಕಱಿಂ ತನ್ನ ಪತಿ
ಗಲರ್ದು ನುಡಿದಳ್ ವೃಷಭನೆಂತಿರ್ಕುಮದಱಲ್ಲಿ
ಸಲೆ ಲಿಂಗಮುದ್ರೆಯೆಂತಿರ್ಕುಮದನಳಿವ ಪರಿ ತಾನೆಂತು ಬೆಸಸೆನುತ್ತೆ ೩೯

ತರುಣಿಯುಂ ತದ್ಗೃಹನಿವಾಸಿನಿಯುಮಪ್ಪುದಱಿ
ನಿರದದಂ ವೃಷಭನಂ ತಾನಱಿಯಳೆನುತೆ ಮಿಗೆ
ದರಹಸಿತನಾಗುತ್ತೆ ಫಲಕಮೊಂದಂ ತರಿಸಿ ಬಸವರೂಪಂ ವಿರಚಿಸಿ
ಕರಮೆಸೆವ ಲಿಂಗಮುದ್ರೆಯನದಱ ತೊಡೆಯೊಳಗೆ
ಬರೆದುನೋಡೀ ರೂಪು ವೃಷಭನೀ ಮುದ್ರೆಯಂ
ಭರದೆ ತೊಡೆಯದುಮಿಂತೆನುತ್ತೆ ತನ್ಮುದ್ರೆಯಂ ಕರತಲದೊಳೊಸೆದೊರಸಿದಂ ೪೦

ಅದನೆಯ್ದೆ ಕಾಣುತಡಪದ ರೇಚದೇವಯ್ಯ
ನುದಿತಹರ್ಷದಿ ತನ್ನ ಕೆಯ್ಯೊಳೆಸೆದಿರ್ಪ ಪೊಗ
ರೊದವಿರ್ಪ ಸುರಗಿಯುಂ ಝಳಪಿಸುತ್ತಿರಿದಿಕ್ಕಿದಂ ವೆಂಗಿಭೂಪಾಲನಂ
ಸದಮಲಾತ್ಮಕಭಕ್ತರಸುಗಳನಾವಗಂ
ಪದೆದು ಸೇವಕಧರ್ಮದಿಂದೋಲಯಿಸಿದೊಡಂ
ಪುದಿದ ಸತ್ಪಥಮನುಱಿ ಬಿಡುವರೇ ಪ್ರಾಣಮಂ ಬಿಡುವರಲ್ಲದೆ ಧರೆಯೊಳು ೪೧

ಹರಭಕ್ತತತಿ ಮುನ್ನೆ ಭವಿಗಳಂ ಸೇವಿಸರೆ
ನಿರುತಮೆಂದಿಂತು ನುಡಿವುದು ನಿನಗನುಚಿತಮದು
ಧರಣಿಯೊಳ್ ಬಸವೇಶ್ವರಂ ಮುನ್ನೆ ಭವಿಯನೋಲೈಸನೇ ಎಂಬೊಡೀಗ
ಧರೆಯೊಳಗೆ ಭವಿಗಳಂ ಸೇವಿಸುವ ಮನುಜರುಂ
ವರಬಸವನಂತೆ ಜಂಗಮಕೆ ಸತ್ಪ್ರಾಣಪದ
ದಿರವ ಸಂಬಂಧಿಸಲ್ವೇಡವೇ ನೊಸಲಕಣ್ಣೆಯವೇಡವೆ ಶಂಭುಗೆ ೪೨

ಮರಳಿ ವಿಟಜಂಗಮಂ ಕಾಮಿನಿಯ ಹುಟ್ಟಿಗೆಯ
ನಿರದೆ ಬೇಡಲ್ಕುಗಿದು ಕುಡುತಿರಲ್ಕಿತ್ತ ಬಂ
ಧುರಮಾಗಿಯುಂಬರಂ ತವಿಸದಂತಿರವೇಡವೇ ಭವಿಯ ಸೇವಿಪರ್ಗೆ
ಭರದಿನಳೆಗೊಡನೊತ್ತು ಗೊಲ್ಲಿತಿ ಬರುತ್ತೆ ಭಾ
ಸುರ ಕರ್ದಮದೊಳೆ ಬೀಳ್ವಾಗ ಬಸವಾ ಎನಲು
ಕರಮೆ ದೂರದೊಳಿರ್ದು ತದ್ಘಟಮನಾಂತಂತೆ ಪಿಡಿವರೇ ಮತ್ತಿನವರು ೪೩

ಹರಭಕ್ತಕರದಿನಮೃತಂಗಱಿದವೋಲ್ ಭವಿಯ
ನಿರದೆ ಸೇವಿಸ ಮನುಜರೀಯುವೇಡವೆ ಮಗುಳ್ದು
ವರಕಾಮಿ ಜಂಗಮರ್ಗವನಿಪನ ಭಂಡಾರಮಂ ಸೂಱಗೊಟ್ಟು ಶಿವನ
ಕರುಣದಿಂ ಮುನ್ನಿರ್ದವೊಲ್ಮಾಡಿದಂತೆ ತಾ
ನಿರದೆ ಮಾಡಲ್ವೇಡವೇ ಲಿಂಗಕರ್ಪಿಸದ
ಗರಳಮಂ ಪೀರ್ದವೊಲ್ ಪಾನಂಗೆಯಲ್ವೇಡವೇ ನೋಡೆ ಭವಿ ಲೆಂಕರು ೯೮

ನಿರುತಂ ತೆಲುಂಗಜೊಮ್ಮಯ್ಯನಾ ಖೇಟದೊಳ
ಗಿರದೆ ಮಿಗಮಂ ಕೊಂದು ತನ್ನೃಗಂಗಳನೊಲ್ದು
ಹರನ ಪುರಿಗಟ್ಟುವಂತುಳಿದವರ್ ಬೇಂಟೆಯೊಳ್ ಸತ್ತ ಮೃಗಗಣನಿಕರಮಂ
ಭರದೆ ಶಿವಪುರಿಗೆ ಕಳುಪಲ್ ಬಲ್ಲರೇ ಮುನ್ನೆ
ಪಿರಿಯ ಕಣ್ಣಪ್ಪನತಿಹಿಂಸೆಗೆಯ್ದನೆನುತ್ತು
ವೊರೆಯುತುಮಂ ಹಿಂಸೆಗೆಯ್ವವರೆಲ್ಲರುಂ ಪಲಂ ಕಣ್ಣಪ್ಪನಂತೆ ಮುದದೆ ೮೫

ಪರಮೇಶ್ವರಂಗೆ ನಿರ್ವ್ಯಾಜದಿಂ ಕಣ್ಗಳಂ
ಹರಿಸದಿಂ[1] ಕಿಳ್ತರ್ಪಿಸಲ್ ಬಲ್ಲರೇ ಅವರ
ಪರಮಪುರುಷರ ಸಚ್ಚರಿತ್ರಂಗಳುಂ ಮಹಿಮೆಗಳುಮವರ್ಗೆ ಸಾಜಮೆನಿಕುಂ
ಪಿರಿದುಮಾ ಸತ್ಪುರುಷರಿರವಿನಿಂ ಪಡಿಯಿಟ್ಟು
ಭರದೆ ನುಡಿಯಲ್ ಸಲ್ಲದಾ ಮಾತದಂತಿರ್ಕೆ
ಕರಮೆ ಪಲವಾತಿದೇಂ ನಿನ್ನ ಸೊಮ್ಮಾದ ತನುವಂ ಇದಂ ನಿನಗೀವೆನು ೮೬

ನಿರುತಮೆಂದಿಂತು ನುಡಿಯುತೆ[1] ಮಗುಳ್ದು ನಾಮಯ್ಯ
ನರಪ ಕರದೊಳಗಿರ್ದ ಸುರಗಿಯುಂ ಕಳಕೊಂಡು
ಭರದಿಂದೆ ಗೋಪುರದ್ವಾರಹರ್ಮ್ಯಮನಡರಿ ಪ್ರಮಥರಡಿಗಳನಳ್ಕಱಿಂ
ವರ ಪುರಾತನರ ಪದಪದ್ಮಂಗಳಂ ನೆನೆದು
ಸರಳ ಮುನಿಶಾಪದಿಂ ಮುನ್ನೆ ಯಾದವಕುಲಂ
ಕರಮೆ ಮುಸಲಾವಶಿಷ್ಟದೆ ನಷ್ಟಮಾದವೋಲೀ ಸುರಗಿಯಿಂದಮಿವನ ೮೭

ಮಿನುಪ ಕುಲಮೆಯ್ದೆ ನಿರ್ಮೂಲಮಕ್ಕೆಂದು ಘ
ಮ್ಮನೆ ಶಾಪಮಂ ಕೊಟ್ಟು ಶಿವಮಂತ್ರಯುಕ್ತಮಾ
ದನುಪಮವಿಭೂತಿಯುಂ ತಚ್ಛುರಿಕೆಗಂ ತಳಿದು ಲಿಂಗಾರ್ಪಿತಂಗೆಯ್ಯುತೆ

1 ರುಷ (ಗ)

ಅನುವಿನಿಂದದಟಿ ಪರಜಿನೊಳೊಲ್ದು ಕೈಯಿಕ್ಕೆ
ವಿನಯನಿಧಿ ಝಳಪಿಸುತ್ತೆಡಗೈಯೊಳಗೆ ತನ್ನ
ವಿನುತ ಶಿಖಿಯಂ ಪಿಡಿದು ಬಲಗಯ್ಯ ಸುರಗಿಯಿಂ ಶಿರನರಿದುಕೊಂಡನೊಸೆದು ೪೮

ಅದನೆಯ್ದೆ ಕಂಡು ಸಾದ್ಭುತಚಿತ್ತರಾಗುತ್ತೆ
ವಿದಿತಜನರಿರಲೆಡದ ಕೈಯೊಳಗೆ ತಚ್ಛಿರಂ
ಪಸೆದು ಧವಳೇಶ ಧವಳೇಶ ಎಂದಡಿಗಡಿಗೆ ಘೋಷಿಸುತ್ತಿರೆ ಸಂಪದಂ
ಪುದಿದ ರಜತಾದ್ರಿಗೆಯ್ದಿದನಂದು ಘಂಟೆಯಂ
ಮುದದೆ ಬಾಜಿಸುತೋಹಿಲಂ ರೌಪ್ಯಪರ್ವತ
ಕ್ಕೊದ[1]ವಿ[1] ಪೋಪಂತೆ ಮತ್ತೀ ವಾರ್ತೆಯೆಲ್ಲಮಂ ಪಂಡಿತಾರಾಧ್ಯರಱಿದು ೪೯

ಮುನಿದು ಶಾಪೋದಕಮನಂಗೈಯೊಳಾಂತು ತೊ
ಟ್ಟನೆ ಗಿರಿಶಗಣಕೋಪದಿಂದೊಗೆದು ನಾಮಯ್ಯ
ನನುಪಮಾಭೀಳಕೋಪದಿನೊಗೆದು ಭುಗಿಲಿಡುವುಷರ್ಬುಧನೊಳೆಯ್ದೆ ಬಿಳ್ದ
ಮಿನುಗುವುದಯಕ್ಷ್ಮಾಪನುಂ ತತ್ಸುತಾದಿಗಳ್
ಘನ ಕಲತ್ರಾಪ್ತಬಂಧುಗಳೆಯ್ದೆ ನಾಶವ
ಕ್ಕೆನುತೆ ಶಾಪೋದಕವನಿಟ್ಟು ತತ್ಪಂಡಿತೇಂದ್ರಂ ದೂಷಕಾಬ್ಜಚಂದ್ರಂ ೫೦

ಪುರದೊಳಿದಱಿಕೊಳಗಿರ್ಪುದನುಚಿತಂ ಶಿವಭಕ್ತ
ವರರ್ಗೆನುತೆ ಪಾನುಗಲ್ಲಿಂ ಪೊಱಮಡಲ್ಕೆ ತ
ತ್ಪುರದೊಳಿರ್ಪುರುಶಿಲಾಪುನ್ನಾಗಭೂರುಹಂ ಕುಸುಮಮಂಜರಿಯಾಂತುದು
ಭರದೆ ಕುಕ್ಕೂ ಎನುತೆ ಕೂಗಿದುದು ಕಲ್ಗೋಳಿ
ನಿರುತಮಿವು ಮೊದಲಖಿಳಮುತ್ಪಾತಮುಣ್ಮಿದುವು
ಪುರಜನಂ ಕಂಡಿನಂ ಪೊಱಮಟ್ಟು ಪೋದುದ[2]ತ್ತಿ[2]ತ್ತ ಪುರ ಶೂನ್ಯಮಾಯ್ತು ೫೧

ಹರಭಕ್ತಶಾಪಾಗ್ನಿಯಿಂದುದಯಭೂಮೀಶ
ನುರಿದು ಕರಿಮುರಿವೋದನವನ ಸುತ ಪೌತ್ರಾದಿ
ವರಬಾಂಧವರ್ಕಳೆಲ್ಲರ್ ತಮ್ಮೊಳೋರೋರ್ವರ್ಗತಿಶಯದ ಶತ್ರುತ್ವದಿಂ
ಪಿರಿದು ಕಳ್ತಲೆಕಾವಣಂಗಳೊಳ್ ಸಮರಮಂ
ಭರದಿನೆಸಗುತ್ತೆ ಮತ್ತಾ ಸುರಗಿಘಾಯದಿಂ
ಮರಣಮೆಯ್ದಿದರಿಂ[3]ತು[3] ನಿರ್ಮೂಲಮಾಯ್ತುದಯಭೂಮಿಪನ ಸಂತಾನವು ೫೨

---

[1] ಗಿ (ಗ) [2] ಲ್ಲಿ (ಗ) [3] ದು (ಕಗ)

ಸದಮಲಪ್ರಚುರವಿಶ್ರುತ ಪರಮಭಕ್ತಗಣ
ಪದಸರೋರುಹಸಾಂದ್ರ ಮಕರಂದಪಾನ ಸ
ಮ್ಮುದಿತ ಚಂಚಚ್ಚಂಚರೀಕನನವರತ ಪಂಚಾಕ್ಷರೀಪ್ರಸಿತಹೃದಯಂ
ವಿದಿತ ಮಂಜುಲ ನೀಲಕಂಠಾಹ್ವಯಂ ಮನೋ
ಮುದದೆ ಪೇಳ್ದುರುತರಾರಾಧ್ಯಚಾರಿತ್ರದೊಳ
ಗಿದು ವಲಂ ಧವಳೇಶನಾಮಯ್ಯಕಥನವಿದನಾಲಿಪುದು ಸದ್ಭಕ್ತರು ೫೩

# ಹತ್ತನೆಯ ಸಂಧಿ

## ಬಸವೇಶ್ವರನ ಕುರಿತು ಪಂಡಿತಾರಾಧ್ಯರ ಪ್ರಳಾಪ

ಸೂಚನೆ: ಬಸವೇಶನಂ ಕುಱಿತು ಪಂಡಿತಾರಾಧ್ಯವಿಭು
ನಿಸದಂ ಪ್ರಲಾಪಮನೊಡರ್ಚಿದಾ ಕಥನಮಂ
ಮಸಕದಿಂ ಸೂರಸಚಿವೇಂದ್ರ ಕೇಳೆನುತೆ ಪಾಲ್ಕುಱಿಕೆ ಸೋಮೇಶನುಸುರ್ದಂ

ಸ್ಫುರಿತಕರಝಷಮುಳ್ಳ ತೀಕ್ಷ್ಣಂ ದಲಾದ ಬಂ
ಧುರಮಂಡಲಾಗ್ರದಿಂದೆಸೆವ ಮೂಲೋಕಮಂ
ಪಿರಿದು ನಡುಗಿಸುವ ತೇಜಸ್ಸಿಂಗೆ ನೆಲೆಯಾಗಿ ಸತತಮೊಪ್ಪುತ್ತುಮಿರ್ಪ
ಉರುತರ ಸಮಸ್ತಭೂಭೃನ್ಮಸ್ತಕಾಗ್ರದೊಳ್
ಕರಮೆ ರಂಜಿಪ ಪಾದದಿಂ ವಿರಾಜಿಸುತಿರ್ಪ
ಧರಣಿಪನವೊಲ್ ಮೆಱೆವ ಚಂದ್ರನಂ ಸೂಡಿರ್ದ ಗುರುನೀಲಕಂಠ ಜಯತು ೧

ಬಳಿಕಿತ್ತ ಪರವಾದಿ ಕರಿಮೃಗೇಂದ್ರನೆನಿಪ್ಪ
ಲಳಿತ ಗುರುಪಂಡಿತೇಶ್ವರನಲ್ಲಿಯಿಂದೆ ಸ
ಲ್ಲಳಿತ ಸದ್ಭಕ್ತರೊಡಗೂಡಿ ವನಿಪುರದತ್ತ ಬರುತಿರಲ್ಕಾ ವಾರ್ತೆಯಂ
ಮಿಳಿರ್ವ ವನಿಪುರ ಶಂಕರಯ್ಯಂಗಳಱಿತು ನಿ
ರ್ಮಳ ಪರಮಭಕ್ತರೊಡನಿದಿರ್ವಂದು ಭಕ್ತಿಯಿಂ
ಪುಳಕಿತಾವಯಮನಾಗುತ್ತುಮೋರೋರ್ವರಭಿವಂದನೆಗಳಂ ರಚಿಸುತೆ ೨

ಹ[1]ರಿಸ[1]ದಿಂ ಪುರಜನಂ ನೋಡಿ ನುತಿಸುತ್ತಿರಲ್
ಗುರುಪಂಡಿತೇಶ್ವರನ ನಿಜಗೃಹಕೆ ಕರೆದೊಯ್ದು
ಪರಮಸಿಂಹಾಸನದೊಳಿರಿಸಿ ಸದ್ಭಕ್ತಿಪೂರ್ವಕದೆ ವಂದಿಸಿ ತುತಿಸುತೆ
ಇರಲಿಂತು ಕೆಲವುದಿವಸಂಬರಂ ಪಂಡಿತೇ
ಶ್ವರನಲ್ಲಿಯಿಂದೆ ವನಿಪುರದೊಳಗೆ ಭಕ್ತರೊಡ
ವೆರದು ಶಿವತತ್ತ್ವಪ್ರಸಂಗದೊಳ್ ಶಂಕರಯ್ಯಂಗೂಡಿ ತದ್ಗೃಹದೊಳು ೩

---

1 ರುಷ (ಗ)

ಪಿರಿದು ದಿನವಾಯ್ತು ಬಳಿಕಿನ್ನೆಸೆವ ಕಲ್ಯಾಣ
ಪುರಕೆ ಪೋಪೆವೆನುತ್ತೆ ಗುರುಪಂಡಿತೇಶ್ವರಂ
ಭರದಿನುಜ್ಜುಗಿಸಲನಿತಱೊಳೊರ್ವನಭವಭಕ್ತಂ ನುಡಿದನಿಂತೆನುತ್ತೆ
ಪರಮಕಲ್ಯಾಣಮಳಿಯಿತ್ತು ಶಿವಭಕ್ತಿ ತಾಂ
ಕರಮೆ ಕೆಟ್ಟತು ಮೊಲ್ಲೆಬೊಮ್ಮಯ್ಯ ಜಗದೇವ
ರಿರದಿಸರ್ ಬಿಜ್ಜ[1]ಲ[1]ನ ಕೊಂದರಾ ಬಸವಣ್ಣನೊಪ್ಪುವಾ ಕಪ್ಪಡಿಯೊಳು ೪

ಗುರುಸಂಗಮೇಶ್ವರನ ಗರ್ಭಮಂ ಪೊಕ್ಕನತಿ
ಭರದಿಂದಮಿದುನಿಕ್ಕಮಂ ಮತ್ತಮಲ್ಲಿಂದೆ
ತೆರಳಿ ನಾವೆಂಟುದಿನಮಿಂದಿಂಗೆ ನಿಜಮೆನಲ್ ಕೇಳಿ [2]ಮು[2]ದವಱತು ನಸಿದು
ವರ ಪಂಡಿತೇಶ್ವರಂ ಬಸವ ಬಸವಾ ಬಸವ
ಪರಮಗುರು ಬಸವ ಮತ್ಸ್ವಾಮಿ ಸಂಗನಬಸವ
ಹರಸದೃಶ ಬಸವಭಂಡಾರಿ ಬಸವಾ ಎಂದು ಪಂಬಲಿಸಿದಂ ಭಕ್ತಿಯಿಂ ೫

ಹರಭಕ್ತಿರಸಕೂಪ ಸಂವಿತ್ಪ್ರದೀಪ ಜಿತ
ಸರಳೇಕ್ಷುಚಾಪ ಸತ್ಯಪ್ರಲಾಪಾ ಬಸವ
ಚರಲಿಂಗರೂಪ ಸವಿನುತಭೂಪ ಹತಪಾಪ ಭವಲೋಪ ಬಸವ ಬಸವ
ಪರಮಪ್ರತಾಪ ಬಂಧುರಗುಣಕಲಾಪ ಸು
ಸ್ಥಿರಭಕ್ತಿಗಣ್ಯ ಜಗದಗ್ರಗಣ್ಯಾ ಬಸವ
ಕರುಣಾಬ್ಧಿ ಬಸವೇಶ ಮಾರನಿರ್ಧೂತಕಾರ್ಪಣ್ಯ ಬಸವಾ ಬಸವನೆ ೬

ನಿರುತ ನಿಖಿಲಶರಣ್ಯವಿಸ್ಫುರಿತಸತ್ಪುಣ್ಯ
ಸರಳ ಶರಣವರೇಣ್ಯ ಮಹಿತಪ್ರಮೋದ ಬಂ
ಧುರ ಸುನಾದಾ ಬಸವ ಸದ್ಯಃಪ್ರಸಾದಸೇವಾವಿನೋದಾ ಬಸವನೆ
ಉರುಜಂಗಮಾಹ್ಲಾದಶರ್ವಾ ವಿಭೇದ ಸುರು
ಚಿರಮಿದ್ಧ ವೇದಧಿಷ್ಟ್ಯತವಿಷಾದಾ ಬಸವ
ವರ ಸಂಯಮಾಧಾರ ಬಸವ ಸೌಮ್ಯಶರೀರ ಜಗದೇಕವೀರ ಬಸವ ೭

ಬಸವ ಸಂಸೃತಿದೂರ ಬಸವ ಶಮಿತವಿಕಾರ
ಬಸವ ಶಂಭುಕುಮಾರ ಬಸವಣ್ಣ ಸುವಿಚಾರ
ಬಸವ ನಿಜಸಮಯೋಚಿತಾಚಾರಬಸವ ಸದಸದ್ವಿಚಾರಾ ಬಸವನೆ

---

1 ಳ (ಕ) 2 ಮ (ಕಗ)

ಎಸೆವ ಸದಯಾಪ್ರಚಾರಾ ಬಸವ ಬಸವೇಶ
ಬಸವ ಸದ್ಭಕ್ತಿಶರಣಾ ಶೈವವಿಸ್ಫುರಣ
ಬಸವ ಶಾಂತಿಸ್ಥಲೀವಿಹರಣಾ ಬಸವಣ್ಣ ನಿಜಮತೋದ್ಧರಣ ಬಸವಂ ೮

ಬಸವ ಸುಪಥಾಚಾರ್ಯ ಸಂಗೀತಧುರ್ಯ ರಾ
ಜಿಸುವಿದ್ಧಧೈರ್ಯ ಬಸವಾ ಸಹಜಗಂಭೀರ್ಯ
ಮಿಸುಗುವುಪಚಿತಶೌರ್ಯ ಸಾತ್ವಿಕಸ್ಥೈರ್ಯ ಭಾಸುರತರೋದಾರ್ಯ ಬಸವ
ಬಸವ ಸೌಮ್ಯೋರುಚಾರಿತ್ರ ಕರುಣಾಮತ್ರ
ಬಸವ ಸದ್ಧರ್ಮಗಾತ್ರಾ ಬಸವ ಬಸವಯ್ಯ
ಬಸವ ಷಡ್ವರ್ಗಜೈತ್ರಾ ಸಾಧಿತಾಮಿತ್ರ ಜಂಗಮಕ್ಷೇತ್ರ ಬಸವ ೯

ಬಸವೇಶ ಸದ್ವ್ರತೋತ್ತುಂಗ ಕರುಣಾಪಾಂಗ
ಬಸವಣ್ಣ ಸಂಹೃತಾನಂಗ ಸತತಾಭಂಗ
ಬಸವ ಸದ್ಭಕ್ತಿಪುಂಗವ ಬಸವ ಸಂಗೀತರಂಗ ವೇದಪ್ರಸಂಗ
ಬಸವ ಸಾಕ್ಷಾನ್ಮಹೇಶಾಂಗ ಸದ್ಗುರುಲಿಂಗ
ಬಸವ ಚರಲಿಂಗಪದಪದ್ಮವಿಲಸದ್ಭೃಂಗ
ಬಸವ ಪಶುಪತಿಚರಣಸಿಹಿತಾಂತರಂಗ ಮದ್ಭರ್ತೃ ಮತ್ತ್ರಾತ ಬಸವ ೧೦

ಬಸವಣ್ಣ ಬಸವಸುಕುಮಾರ ಬಸವೇಶ್ವರನೆ
ಬಸವ ಎನ್ನಣ್ಣ ಎನ್ನಯ್ಯ ಎನ್ನಯ ಮನೋ
ಬಿಸಜವಿಕಸನಸೂರ್ಯನೇ ಎನ್ನನಿಲ್ಲಿರಿಸಿ ನೀನೊರ್ವನೇ ಮುದದೊಳು
ಕುಸುಮಶರಹರಗರ್ಭವಂ ಪುಗುವುದುಚಿತಮೋ
ಬಸವಣ್ಣ ಹಾ ಬಸವದೇವ ಹಾ ಎನ್ನಾಳ್ದ
ಬಸವಯ್ಯ ಹಾ ಬಸವಗುರುವೆ ಹಾ ಬಸವಲಿಂಗವೆ ಹಾ ಎನುತ್ತಳಲುತೆ ೧೧

ಎಲೆ ಶಿವನೆ ಸದ್ಭಕ್ತಿಮಾಣಿಕ್ಯಕಷಣ ಸ
ಲ್ಲಲಿತ[1]ಶಾ[1]ಣಾ ಸತ್ಕಲಾಪ್ರವೀಣಾ ಮಹೋ
ಜ್ವಲ ಸುರಗಿರಿದ್ರೋಣ ವೃಷವಿಷಾಣೇಕ್ಷಣ ವಿಲೋಲಭಕ್ತತ್ರಾಣನೆ
ಸಲಿಲಜೋದ್ಭವನ ಕಂಕಾಲವೀಣಾಗರಳ
ಲಲಿತಕಂಠಪ್ರಭಾಕ್ಷೀಣಾಪುರಾಣ ನಿ
ರ್ಮಲಗೇಯ ನಿರ್ಮಾಣ ಹರಿವಿಧಿಪ್ರಮುಖರ್ಗಭೇದ್ಯಪ್ರಮಾಣ ಗಿರಿಶ ೧೨

---

1 ತಾ (ಗ)

ನಿರುತಮಾ ಬ್ರಹ್ಮಾಂಡಯುತಗರ್ಭಕೋಣ ಭಾ
ಸುರ ಭೋಗದೇವಯ್ಯ ಸಾಕಪ್ರಯಾಣ ಶಶಿ
ಧರದತ್ತಹಸ್ತಾಬ್ಜಯುಗ ಭಟ್ಟಬಾಣನೇ [1]ಕೃತ್ತ[1]ವಾಣೀಘೋಣನೆ
ವರ ಸಹಜಕಲ್ಯಾಣಪದ್ಮಾಕ್ಷಬಾಣನೇ
ಸುರುಚಿರೋಷರ್ಬುಧಕೃಪಾಣಪಶುಪತಿಯೆ ಶಂ
ಕರ ಪೂರ್ವಗೀರ್ವಾಣನಿರ್ವಾಣಶೋಣಮಣಿಮೌಲಿರಂಜಿತಚರಣನೆ ೧೩

ಲಸಿತ ಲಿಂಗತನೂಜನಂ ಪುಣ್ಯಭಾಜನಂ
ಮಿಸುಪ ಶಿವಶರಣಸುರಭೂಜನಂ ತೇಜನಂ
ನಿಸದಮಾ ತತ್ತ್ವೈಕಬೀಜನಂ ಜಿತಮನೋಜನಸಮಲಗುಣರಾಜನಂ
ಎಸೆವ ಧರ್ಮಾಧಿರಾಜನ ಸುಗುಣಸೈಜನಂ
ಲಸಿತಸದ್ಭಕ್ತಿಗಧಿರಾಜನಂ ಕರಮೆ ರಾ
ಜಿಸುವ ರಾಜಾಧಿರಾಜನನಾವಗಂ ವಿನುತ ಕೇಶಿರಾಜನನೊಪ್ಪುವ ೧೪

ಪರಮಾಪ್ತಮಾದಿರಾಜನನಣಿಯರಂ ಮಿಸುಪ
ಕರುಣಾರ[2]ಸಾ[2]ಪೂರ್ಣನೇತ್ರಸರಸೀಜನಂ
ಕರಮೆ ಸುವಿನುತದೇವರಾಜನಂ ಗತಭವವ್ಯಾಜನಂ ಸತತಮೆಸೆವ
ಪಿರಿದುಂ ನಿರಸ್ತಚಾಳುಕ್ಯರಾಜನನೆಯ್ದೆ
ಸರಳಮುದ್ರಾಜನಂ ಬಸವರಾಜನನಿಂತು
ಪರಮೇಶ್ವರಾ ಸಂಗಮೇಶ್ವರಾ ನಿನ್ನ ಗರ್ಭಂಬುಗಿಪುದೇನೊಳ್ಳಿತೆ ೧೫

ಧರಣಿಯೊಳ್ ಮಹಿಮಾವತಾರನೆನಿಸುವ ವಿಮಲ
ತರ ವೀರಭದ್ರಾವತಾರನೆನಿಸುವ ರುದ್ರ
ಸರಳಾವತಾರನೆನಿಸುವ ವೀರಭಕ್ತಿಸ್ಥಲಾಚಾರನೆನಿ[3]ಸಿ ಮೆಱೆವ[3]
ಪರಮಪ್ರಸಾದಾವತಾರನೆನಿಸುವ ಸುಷುಮ
ಚರಲಿಂಗಕಿಷ್ಟಾರ್ಥಮೀವ ಸತತಾಭ್ಯುದಯ
ನಿರತಪ್ರಚಾರನೆನಿಸುವ ಚಿತ್ರಶಿವಪಥಾಚಾರನೆನಿಸುವ ಬಸವನಂ ೧೬

ವರ ಲಿಂಗಸಾಮ್ರಾಜ್ಯಪಟ್ಟಬದ್ಧನೆ ಶಿವನೆ
ಭರದೆ ನಿನ್ನುದರದೊಳಗಿಂಬಿಟ್ಟುಕೊಂಡ ಇ
ನ್ನಿರದೆ ಸದ್ಭಕ್ತಿಸಾಮ್ರಾಜ್ಯಪದವೀಪಟ್ಟಬದ್ಧನಾವಂ ಧರೆಯೊಳು

---

[1] ಕೃಂತ (ಗ) [2] ಸಂ (ಗ) [3] ಸುತೆಸೆವ (ಕ) –

ಉರುಮುಕ್ತಿಸಾಮ್ರಾಜ್ಯವಿಸ್ಫುರಿತವೈಭವನೆ
ಕರಮೆ ಸದ್ಭಕ್ತಿಸಾಮ್ರಾಜ್ಯಕ್ಕದಾರೊಡೆಯ
ನರರೆ ಸದ್ಭಕ್ತದೇಹನೆ ನನಸುತೋರ್ಪ ಭಕ್ತಪ್ರಾಣಿಯಾವನಿನ್ನು ೧೭

ಹರನೆ ನಿನ್ನರ್ಚನಾಫಲವನೊಲ್ದೀವನಾ
ರಿರದೆ ನಿನ್ನಯ ಗಣಸ್ಥಾನರಂಗಕ್ಕೆ ಮ
ತ್ತುರುತರಜ್ಯೋತಿಯಾವಂ ನಿನ್ನ ಭಕ್ತರ್ಗೆ ಕರದ ಕೈಪಿಡಿಯದಾವಂ
ಶರಣರ್ಗೆ ಹರಣಮಾಗಿರ್ಪನಾವಂ ಧರೆಯೊ
ಳುರುವೀರಮಾಹೇಶ್ವರಾಚಾರವರ್ತನೆಗೆ
ಪಿರಿದು ದಿಕ್ಕಿನ್ನಾವನೀ ವೀರಸಮಯಮಂ ಸ್ಥಾಪಿಸುವನಿನ್ನಾವನು ೧೮

ಮಸಕದಿಂದೀ ವೀರಶೈವಮಾರ್ಗಮನೊಲ್ದು
ನಿಸದಮಿನ್ನಾವನುೞಿ ಕೊಂಡುಕೊನೆದಾಡುವಂ
ಮಿಸುಪ ಶಿವದೂಷಕರನೞಿಯಟ್ಟಿ ನಾಶಮಂ ಮಾಳ್ಪನಾವಂ ಧರೆಯೊಳು
ಅಸವಸದೆ ವೀರಮಾಹೇಶ್ವರರ್ಕಳನೆಯ್ದೆ
ಹಸನಾಗಿಯು[1]ಕ್ಕಱಿಂ ಮನ್ನಿಸ[1]ನದಾವನೀ
ವಸುಧೆಯೊಳ್ ಜಂಗಮಕ್ಕಿಷ್ಟಾರ್ಥಸಿದ್ಧಿಯಂ ಕುಡುವನಾವಂ ಶಂಕರ ೧೯

ಸನಯದಿಂ ಚರಲಿಂಗಮೂರ್ತಿಗಳನೀಶನೆಂ
ದನುನಯಂ ನೋಳ್ಪನಾವೊಂ ಪ್ರಾಣಲಿಂಗಮೆಂ
ದನವರತಮಾವಂ ಪ್ರತಿಜ್ಞೆಯನೊಡರ್ಚುವಂ ಮತ್ತವರ್ಗೆ ಸರ್ವಾರ್ಥಮಂ
ವಿನಯದಿಂ ನಿರ್ವಂಚಕತ್ವದಿಂ ಕುಡುವವಂ
ನನಸು ರಜಮಂ ಪಿಡಿದು ಕನಕಮಂ ಮಾಡಿ ತೊ
ಟ್ಟನೆ ಮಿನುಗುತಿರ್ಪನಾವಂ ಬಯಲ ಪಿಡಿದು ಮೂರ್ತಿಯ ಮಾಳ್ಪ ನಿಪುಣನಾವಂ ೨೦

ಶರಣರಿಷ್ಟಾರ್ಥಮಂ ಸಲಿಸುವನದಾವನಿ
ನ್ನಿರದೆ ವಾರ್ತಾಕಂಗಳಂ ನೋಟಮಾತ್ರದಿಂ
ವರಬಾಣಲಿಂಗಂಗಳಂ ಮಾಳ್ಪನವನಾವನೀ ಧರಣಿಯೊಳಗಣಿಯರಂ
ಪಿರಿದು ಸುಜನರ್ಗೆ ಜಂಗಮಲಿಂಗಭಕ್ತಿಯಂ
ಹ[2]ರಿಸ[2]ದಿಂ ಮಾಡಿಮಿನ್ನೆಂದು ಪೇಳ್ವವನಾವ
ನುರುಗರಳಮಂ ಶರಣರೊಡಗೂಡಿ ಕೊಂಬದಟನಾವನಿನ್ನೆಲೆ ಶಂಕರ ೨೧

---

1 ಳ್ಕರಿಂ ಮನ್ನಿಪ (ಗ) 2 ರುಷ (ಗ)

ವರ ಭಕ್ತಿನಿಷ್ಠೆಯಿಂ ಶಿವರಾತ್ರಿಯಂ ನಿತ್ಯ
ಮರಿದೆಂಬವೊಲ್ ಮಾಳ್ಪ ವೀರನಾವೊಂ ಮತ್ತೆ
ಚರಲಿಂಗದಲ್ಲಿ ಮಿಗೆ ಜಾತಿಭೇದಂಗಳಂ ಕನಸಿನೊಳ್ ನೆನೆಯದಿರ್ಪ
[1]ಗ[1]ರುವನಿನ್ನಾವನೆಲೆ ತನ್ನ ತಲೆ [2]ಪ[2]ಱೆದೊಡಂ
ಶರಣರ್ಗೆ ವಂದನೆಯನಮಾಳ್ಪುದಂ ಮಱೆಯದಿ
ರ್ಪುರುನಿಷ್ಠೆಯುಳ್ಳವೊಂ ತಾನದಾವೊಂ ಮತ್ತಮೀ ಧರಣಿಯೊಳ್ ಭಾವಿಸೆ ೨೨

ಪಿಡಿದ ಸದ್ವ್ರತಮುಮಂ ಪ್ರಾಣಬಾಧೆಗಳಲ್ಲಿ
ಬಿಡದೆಸೆವನಾವನಿಂತಪ್ಪ ಮಾಹಾತ್ಮ್ಯಮಂ
ಸಡಗರದ ಸಚ್ಚರಿತ್ರಮು[3]ಮವನಿಯೊಳಗಲ್ಪ[3]ಮಾನವರ್ಗುಂಟೆ ಬಳಿಯಂ
ಕಡುಪಿನಿಂ ಪ್ರಮ[4]ಥ[4]ಸತ್ಪ್ರಾಣನೆನಿಸುವ ಶಿವನೆ
ಪೊಡವಿಯೊಳ್ ಬಸವನಾ ಪ್ರಾಣಂಗಳುಂ ಪ್ರಮಥ
ರೊಡಲಲ್ಲವೇ ಬಸವನಿಂದ್ರಿಯಂಗಳ್ ಪ್ರಸಾದೇಂದ್ರಿಯಂಗಳ್ ಭಾವಿಸೆ ೨೩

ಮಿನುಪಂಗಕಳೆಗಳೆಲ್ಲಂ ಪ್ರಸಾದಾಂಗಕಳೆ
ಯೆನಿಸುಗುಂ ಕರಣಂಗಳೆಲ್ಲಮುಂ ಲಿಂಗದೇ
ವನ ಕಿರಣತತಿಗಳೆನಿಕುಂ [5]ಕ[5]ರಣಮುಂ ಮುಕ್ತಿಜನನ ಶರಣಂ ಭಾವಿಸೆ
ನನಸು ಬಸವಾಧಿಪನ ವಿಮಲಗುಣರಾಜಿಗಳ್
ಕನದಮಲ ಭಕ್ತಿಬೀಜಾಳಿಗಳ್ ಮತ್ತೆ ಸೊಂ
ಪಿನ ಚರಿತ್ರಂಗಳ್ ವಿಚಿತ್ರಂಗಳೆನಿಕುಮಂತಾ ಬಸವಗಣನಾಥನ ೨೪

ಕರದಂಗುಲಿಪ್ರತತಿಗಳ್ ಪರ್ಷವೇದಿಗಳ್
ವರ ಕಟಾಕ್ಷಂಗಳುಱೆ ಸುರಧೇನುಗಳ್ ಮತ್ತೆ
ಸರಳಚಿಂತಾರತ್ನಖನಿಗಳಾ ಬಸವ ನೆನಪಿನ ಗಡಣಮವನಿಯೊಳಗೆ
ಪರತತ್ತ್ವಲತೆಯ ಕುಡಿಗಳ್ ಬಸವ ನುಡಿಗಳತಿ
ಪರಮಲಿಂಗಪಸಾಯತಾಯುಧಂ ದಲೆನಿಕ್ಕು
ಮರರೆ ಬಸವನ ಕರದೊಳಿರ್ಪಾಯುಧಂ ಮತ್ತಮದಱ ಮಹಿಮೆಯದೆಂತೆನೆ ೨೫

ಘನಮೌಕ್ತಿಕಂಗಳಂ ಪೆತ್ತ ನಿಜಶುಕ್ತಿಭೂ
ವನಿತಾಧಿಪಂಗೆ ವಸುವಿತ್ತ ಶಿವಲಕ್ಷ್ಮಿ ತೊ
ಟ್ಟನೆ ಗರಳಮಂ ಸುಧೆಯ ಮಾಳ್ಪೌಷಧಂ ಭಾಳನೇತ್ರಮಂ ಪರಶಿವಂಗೆ

---

1 ಗು (ಕ) 2 ಯ (ಗ) 3 ಧರಣಿಯೊಳಲ್ಪ (ಕ) 4 ದ (ಕ) 5 ಚ (ಗ)

ವಿನಯದಿಂದಿತ್ತ ದೈವಂ ಪರಮಬಸವೇಶ
ವನಿತೆಗಂಬರನಿಕರವಿತ್ತ ಪೇಟಿಕೆ ನನಸು
ಮಿನುಪ ಶಿವನಾಗಾರ್ಯಹಸ್ತದಿಂ ಪಾಲ್ಗಱೆದ ಸುರಧೇನುವೆನಿಕುಮನಿಶಂ ೨೭

ಕರಮೆ ಚೋರರ್ಗೆ ಭಕ್ತಿಯ ತೋಱಿದಾಚಾರ್ಯ
ನುರುಪಂಕದೊಳ್ ಬೀಳ್ವ ಗೊಲ್ಲಿತಿಯ ಪಿಡಿದ ಬಂ
ಧುರಪಾಣಿ ಜಂಗಮಪ್ರಾಣಮಂ ಸಂಗತಂಗೆಯ್ವ ಕೀಲ್ ಪರವಾದಿಯ
ನರಪ ಬಿಜ್ಜಲನ ಶಾಪಿಸಿದ ಸುರುಚಿರಜಿಹ್ವೆ
ನಿರುತಮಿಷ್ಟಾರ್ಥಮಂ ಕುಡುವ ಸುರಭೂರುಹಂ
ವರ ಬಸವಕರದೊಳಿರ್ಪಾಯುಧಂ ಸಂತತಂ ಪಿರಿದಿಂತುಮೊಪ್ಪುತಿರ್ಕುಂ ೨೭

ಬಸವರಾಜನ ಮೂರ್ತಿ ವೈಭವಂಗಳನಱಿದು
ನಿಸದಮುಂ ಪೊಗಳ್ವನಾವೊಂ ತನ್ನ ಮಹಿಮೆಯುಂ
ಬಸವ ತಾನೇ ಬಲ್ಲನೆಸೆವ ಬಸವಾಕ್ಷರತ್ರಯದ ಪಾಠದ ಫಲವನು
ರಸೆಯೊಳಗದಾವನಱಿವಂ ಬ ಎಂಬಕ್ಷರಂ
ಮಿಸುಪ ಶಿವಸಂಬಂಧಸೌಖ್ಯಮದುಮಣಿಯುರಂ
ಸಸಿನೆ ನೋಡಲ್ ಸ ಎಂಬಕ್ಷರಂ ಸದ್ಗುರುಕೃಪಾಸಮುನ್ನತಿ ಸಂತತಂ ೨೮

ಪಿರಿದುಂ ಬ ಎಂಬಕ್ಷರಂ ಪ್ರಸಾದದ ವಹನ
ಕಿರದೆ ಯೋಗ್ಯಂಮಾಡುಗುಂ ಭಕ್ತಿಯಿಂದೊರ್ವ
ವರ ಬಸವ ಎಂದುಸುರಲನಿತಱೊಳ್ ತ್ರಿಸ್ಥಲಾದ್ಯದ್ಭಕ್ತಿಯುಕ್ತಿಯಕ್ಕುಂ
ಹರನೆ ಬಱಿವೆಸರ ಭಕ್ತನೆ ಬಸವರಾಜನುರು
ತರವಾಕ್ಯಮುಱಿದೆ ತವಪುತ್ರೋಭವಿಷ್ಯಾಮಿ
ಯಿರದಿಂತೆನುತ್ತೆ ನುಡಿಗುಂ ನೀನೆ ಎರಡನೆಯ ಶಂಭುವೆನಿಪಭಿಧಾನದಿಂ ೨೯

ನಿಸದಂ ಶಿಲಾದಂಗೆ ಸುತನೆನಿಸಿ ಮತ್ತಮಿಾ
ವಸುಧೆಯೊಳ್ ಬಸವಾಭಿಧಾನದಿಂ ಜನಿಸಿದೈ
ಮಿಸುಪ ಭಕ್ತಿಹಿತಾರ್ಥಮಾಗಿ ನೀನೆ ಹರನೇ ನೀನೆಂದೊಡಂ ಬಸವನು
ಬಸವಣ್ಣನೆಂದೊಡಂ ನೀನೆ ಭೂಲೋಕದೊಳ್
ಬಸವಂಗೆ ಭೇದಮಿನಿತಿಲ್ಲ ಸಸಿನೆ ನೋಡಲ್
ವೃಷಭಮೂರ್ತಿಯುಂ ಬಸವಲಿಂಗನನಮಲಕೀರ್ತಿಯುತನಂ (?) ೩೦

ಹರನೆ ನಿನ್ನಯ ದಿವ್ಯಲಿಂಗಗರ್ಭಾಂಬುಧಿಯ
ಸರಳೋರ್ವೀಗತವಿಗ್ರಹನನೆಯ್ದೆ ಮಾಳ್ಪಾಗ
ವರಗಣಾಧಿಪರಾರುಮಱಿಯರೇ ಮಡಿವಳ್ಳಮಾಚಯ್ಯನೇನಱಿಯನೆ
ಗುರು ಮಾದಿರಾಜಂಗೆ ಮಱವೆಯಂ ಮಾಡಿದೆಯೊ
ಕರಮೆ ಅಲ್ಲಯ್ಯ ಮಲ್ಲಯ್ಯಂಗಳಂ ನಿರುತ
ವಿರದಟ್ಟಿದೆಯೊ ಕಜ್ಜವೇಳ್ದು ನೀನಾ ಬಸವನಂ ನುಂಗುವೆಡೆಯೊಳೀಶ ೩೧

ಕಿನ್ನರಬ್ರಹ್ಮಯ್ಯನಂ ವಂಚಿಸಿದೆಯೊ ಮ
ತ್ತನ್ನೆಱೆಯ ಮಱಪಿಟ್ಟೆಯೋ ತೆಲುಗಜೊಮ್ಮಂಗೆ
ಕನ್ನದ ಬ್ರಹ್ಮದೇವಂ ಕಾಣದಾದನೋ ನಿನ್ನ ಕೌಳಿಯ ಬಲ್ಮೆಯಿಂ
ನನ್ನಿಯಿಂ ಶೂಲದ ಬ್ರಹ್ಮಯ್ಯನಂ ನಾಡೆ
ನಿನ್ನೊಳಗುಮಾಡಿಕೊಂಡೆಯೊ ಮುಸುಟಿಚೌಡಂಗೆ
ಸನ್ನಿದಂ ಬೇಱಿಕೊಂದು ಗಸಣಿಮಾಡಿದೆಯೊ ನೀಂ ಬಸವನಂ ನುಂಗುವಾಗ ೩೨

ಮಿಸುಪ ಸೊಡ್ಡಳಬಾಚನಂ ಮೂಢನಂ ಮಾಡಿ
ನಿಸದಮಿರಿಸಿದೆಯೊ ಕಲಕೇತಬೊಮ್ಮಯ್ಯನಂ
ಸಸಿನೆ ಬಿಲ್ಲುಂಬೆಱಗುಮಾಡಿದೆಯೊ ಕಕ್ಕಯ್ಯನಂ ಠಕ್ಕಿಸಿದೆಯೊ ಮೇಣು
ಎಸೆವ ಕಲ್ಲಯ್ಯನಂ ಕಲ್ಮಾಡಿದೆಯೊ ಮಗುಳ್ದು
ನಸು ಸಿಕ್ಕನಿಕ್ಕಿದೆಯೊ ಚಿಕ್ಕಲಿಂಗಯ್ಯಂಗೆ
ಮುಸಕಮಂ ಬಱಕೆಯ್ದೆಯೋ ಚನ್ನಬಸವಂಗೆ ಬಸವನಂ ನುಂಗುವಾಗ ೩೩

ಇಂತು ನೀನವರ ಚಿತ್ತಕ್ಕೆ ನೆಱೆಮಱಪಿಟ್ಟು
ಕಂತುಹರನೇ ಬಸವನಂ ನೋಣದೆಯಲ್ಲದೊಡೆ
ಮುಂತುಗೊಂಡಾ ಶರಣರೀವರೇ ಬಸವಣ್ಣನಂ ನಿನಗೆ ಸಂಗಮೇಶ
ಸಂತಸದೆ ನಿಚ್ಚನಿಚ್ಚಂ ಪ್ರಸ್ಥಮಾತ್ರ ಪಯ
ಮಂ ತಡೆಯದೇ ನಿನಗೆ ಕುಡುವ ಕೊಡಗೂಸನಂ
ದಂತೆ ನುಂಗಿದ ಪಾಂಗಿನಿಂ ಬಸವರಾಜನಂ ನುಂಗಿದಯ್ ಗರಳಧರನೆ ೩೪

ಪಿರಿದು ಘಟಮಧ್ಯದೊಳ್ ಮಱಿಸಿ ನಿಚ್ಚಂ ನಿನ್ನ
ಹ[1]ರಿಸ[1]ದಿಂ ಪೂಜಿಸುವ ಬಲ್ಲವ್ವೆಯಂ ಮುನ್ನೆ
ಗರಳಧರ ನೀಂ ನುಂಗಿದಂತೆ ಶಿವಮಹಿಮೆಯಂ ಲೋಕದೊಳ್ ನೆಱೆನಿಱಿಸಿದ

---

[1] ರುಷ (ಗ)

ಸರಳ ಬಾಚರಸರಂ ನುಂಗಿದಂತೆವೊಲೆಯ್ದಿ
ದುರಳಜೈನಾದಿಗಳ ಸಂಹರಿಸಿ ಲೋಕದೊಳ್
ಕರವೆಸೆವ ಪಿಳ್ಳೆನಾಯ್ನಾರಿಯಂ ಸಡಗರದೆ ನೋಣೆದ ಪಾಂಗಿಂ ಮತ್ತೆಯುಂ ೩೫

ಪಿರಿದನ್ಯನಾಮವುಮಂ ನುಡಿದವನ ಕೊಂದಿಕ್ಕಿ
ತುರಿತದಿಂದಂ ನಿನ್ನ ಮಹಿಮೆಗಲ್ ಬಂದಸಂ
ಕರವೆ ಅರಿಯಮರಾಜನಂ ನೋಣೆದ ಪಾಂಗಿನಿಂ ನಿನ್ನ ಮೂರ್ತಿಯ ನೋಡಲು
ಹ[1]ರಿಸ[1]ದಿಂ ಬಂದ ತಿರಿನಾಳ್ಪೋವನಂ ಮುನ್ನೆ
ಭರದೆ ನುಂಗಿದ ರೀತಿಯಿಂ ದೃಷ್ಟಸದ್ಭಕ್ತಿ
ನಿರತನಂ ವಾಗೀಶ್ವರನನಿಳಿಯನುಂಗಿದಂತೆವೊಲೆಯ್ದಿ ಮತ್ತಮಿನ್ನುಂ ೩೬

ಮಿಗೆ ಸಿದ್ಧಬುದ್ಧಯ್ಯನೆಂಬ ಭಕ್ತನನೊಲ್ದು
ಸೊಗಸಿನಿಂ ನೊಣೆದಂತೆ ಬಸವದಂಡೇಶನಂ
ತೆಗಳಂ ವಿಚಾರಿಸದೆ ಸಂಗಮೇಶ್ವರ ನುಂಗುವುದು ನೀತಿಯೇ ಧರೆಯೊಳು
ನೆಗಳ್ದ ವಿಷಕಂಧರಾ ದಾಸಕೇಸಯ್ಯನಂ
ಬಗೆಯೆ [2]ದಾ[2]ಸಯ್ಯನಂ ನಿಧನಯ್ಯನಂ ಮತ್ತೆ
ಜಗದೇವ ಮೊಲ್ಲೆಬೊಮ್ಮಯ್ಯಂಗಳಂ ವೀರಶಂಕರಯ್ಯನನೊಪ್ಪುವ ೩೭

ಪರಮ ನೇಮದ ಮೌಲಿಯಂ ಭೋಗದೇವನುರು
ತರ ಮಲಯರಾಜಯ್ಯನುದ್ಭಟಯ್ಯನ ಮುಗುಳ್ದ
ಸರಳಗೋವಿಂದಭಟ್ಟಾರಕನ ಮಧುವಯ್ಯ ಬಲ್ಲಾಳದೇವಂಗಳ
ಇರದೆಯ್ದಿ ನುಂಗಿ ಮತ್ತಿನ ಶರಣರಂ ನೊಣೆದು
ಪಿರಿದುಮುಬ್ಬುತ್ತುಮದೆ ನಿನ್ನೊಡಲ್ ಮತ್ತಮಾ
ವರಬಸವನಂ ನುಂಗಿದಲ್ಲದೇ ನಿನ್ನ ಪೊಡೆ ತುಂಬದೇ ಸಂಗಮೇಶ ೩೮

ವರ ಶಿಶುವ ಭಕ್ಷಿಸಲ್ ನಿನ್ನ ಪೊಡೆ ತುಂಬದೊಡೆ
ಕರವೆ ಬಸವಣ್ಣನಂ ನೊಣೆದೆಯೋ ಮನವೊಲ್ದು
ಗರಳಧರ ಕಂಕಾಳಮೂರ್ತಿಯೇ ಮೃಗಭಕ್ಷಣಂಗೆಯ್ದ ಸೊವಡಿನಿಂದಂ
ಪಿರಿದು ನಾಲಗೆತೀಂಟೆ ಮಸಗೆ ಬಸವಣ್ಣನಂ
ಹ[3]ರಿಸ[3]ದಿಂ ನುಂಗಿದೆಯೊ ಭೋಗಯ್ಯನೊಸೆದಿತ್ತ
ಪರಮಗೋವತ್ಸಭಕ್ಷಣದ ಕೈಪೆಗೆ ಬಸವನಂ ನುಂಗಿದೆಯೊ ಶಶಿಧರ ೩೯

---

1 ರುಷ (ಗ)   2 ದೋ (ಕ)   3 ರುಷ (ಗ)

ಮಿಸುಪ ಲೋಕಂಗಳಂ ಭಕ್ಷಿಸಲ್ ದಂತಂಗ
ಳಸವಸಂ ಮಲಿನಂಗಳಾಗೆ ಮತ್ತಾ ಕರ್ಸ
ನೊಸೆದು ತೊಡೆಯಲ್ಕೆ ರಕ್ಕಸತನದೆ ಬಸವಣ್ಣನಂ ಭಕ್ಷಿಸಿದೆಯೊ ಪಶುಪ
ಮುಸಕದೆ ಶಿವಾಚಾರಮಂ ರಕ್ಷಿಸುತ್ತಿರ್ಪ
ನಿಸದಂ ದಯಾಪೂರಿತಾಂತರಂಗನುಮಪ್ಪ
ಬಸವಣ್ಣನಿಲ್ಲದಿರ್ದೊಡೆ ಪಶುಪ ಲೋಕೇಶ ಶಂಕರಾ ಭೂಮಿಯೊಳಗೆ ೪೦

ಮಿನುಪ ಸೊಡರ್ಗದಿರಿಲ್ಲದಿರ್ಪ ಮಂದಿರದಂತೆ
ವಿನುತ ಸತ್ಕವಿಗಳಿಲ್ಲದ ರಾಜಸಭೆಯಂತೆ
ನನಸುಪರಿಮಳಮಿಲ್ಲದಿರ್ಪ ನವಕುಸುಮದಂತುರುದಾನಮಿಲ್ಲದಿರ್ಪ
ಕನದಿಭದ ಪಾಂಗಿನಿಂ ಸನ್ಮಾ[1]ರ್ಗ[1]ಮಿಲ್ಲದಾ
ವನಿತೆಯಂದದೆ ಹಳಣಮಿಲ್ಲದೊಡಲಂತೆ ತೊ
ಟ್ಟನೆ ಶಾಂತಿ ನೆಱಕೆಟ್ಟ ತಪದಂತೆ ಕಾಂತಿತೋಱದ ರನ್ನಗಡ[2]ಣ[2]ದಂತೆ ೪೧

ಸಲೆ ಸತ್ಯಮಿಲ್ಲದುಱುಜಪದಂತೆ ಶಶಿ ತೊಲಗಿ
ದಲಘುರಾತ್ರಿಯ ತೆಱದೆ ವಾಸರೇಂದ್ರಂ ಪಿಂಗಿ
ಯಲರ್ದು ತೋಱುತ್ತಿರ್ಪ ದಿನಲಕ್ಷ್ಮಿಯಂತೆ ಸದ್ಭಕ್ತವತ್ಸಲನೆನಿಸುವ
ಲಲಿತ ಬಸವೇಶ್ವರನ ನೀನಡಂಗಿಸಿಕೊಳ
ಲ್ಕೊಲವಿನಿಂ ಭಕ್ತಸಂದೋಹಮೆಂತೊಪ್ಪುಗುಂ
ಲಲಿತಶೈಲಾತ್ಮಜಾತಾರುಣ್ಯಸಹಕಾರವನವಿಮಲಮಧುಮಾಸನೆ ೪೨

ಸುರನದೀರಂಗತ್ತರಂಗನಿರ್ಮಲಜೂಟ
ವರಭುಜಂಗಮ ಲಲಿತಕರಕಟಕಪರಮೇಶ
ಶರಣಜನಮಂದಾರನಂ ಪಾಪದೂರನಂ ಸುರುಚಿರಾಕಾರನೆನಿಪ
ಪರಮ ಗುರುಃಬಸವೇಶನಂ ತೋಱನಿಕ್ಕುವಂ
ಪಿರಿದು ಸದ್ಭಕ್ತೇಷ್ಟಲಿಂಗಗರ್ಭಂಗಳೊಳ್
ಕರಮೆ ನೀಂ ಬಸವನಿಜಮೂರ್ತಿಯಂ ತೋಱದೊಡವರ್ಗೆ ದುರಿತಂ ಕಿಡುಗುಮೆ ೪೩

ಬಸವನಿಜಮೂರ್ತಿಯಂ ಭಕ್ತನಯನಂಗಳೊಳ್
ಪಸರಿಸದೆ ನೀನಿರ್ದೊಡವರ ದೃಷ್ಟಿಗಳೆಯ್ದೆ
ಮುಸಕದಿನನರ್ಪಿತಂಗಳೊಳಿಚ್ಛೆಪುಟ್ಟಿ ಕಿಡವೇ ಧರೆಯೊಳೆಲೆ ಶಂಕರ

---

[1] ನ (ಗ) [2] ಗ (ಕಗ)

ಬಸವಾಕ್ಷರಂಗಳಂ ಭಕ್ತರಸನೆಗಳಲ್ಲಿ
ವೊಸದು ನೀನಿರಿಸಿದೊಡವರ್ಗೆ ಕಿಲ್ಬಿಷವಿತತಿ
ನಿಸದವೇಂ ತಳಿದುಪೋಕುಂ ಮತ್ತಮವರ ತದ್ರಸನೆಗಳ್ ಭೂಮಿಯೊಳಗೆ ೪೪

ಪಿರಿದನರ್ಪಿತಕೆಳಸಿ ಕಿಡವೆ ಶಶಿಶೇಖರಾ[1]
ಕರಮವರ ಚಿತ್ತಂಗಳೊಳ್ ಬಸವಯೆಂಬ ಸುರು
ಚಿರವರ್ಣತತಿಯಿಲ್ಲದಿರಲಿಂದ್ರಿಯಭ್ರಾಂತಿಗಳಿನವುಂ ಕೆಟ್ಟುಪೋಕುಂ
ವರ ಭಕ್ತವಾಕ್ಯಂಗಳೊಳ್ ಬಸವಯೆಂಬ ಸೌಂ
ದರವರ್ಣತತಿಯ ನೀನಿರಿಸದೊಡೆ ಕೆಟ್ಟನುಡಿ
ಯಿರವಿನಿಂದಮನರ್ಪಿತಾಭಿರತಿಪುಟ್ಟಿ ಕಿಡವೇ ಲೋಕವಿಸರದೊಳಗೆ ೪೫

ಅದಱಿಂದೆ ಸದ್ಭಕ್ತರಿಂದ್ರಿಯಂಗಳೊಳೆಯ್ದಿ
ಮುದದಿಂದೆ ಬಸವನಿಜಮೂರ್ತಿ ನೆಲಸಿರ್ಪಂತೆ
ಪದೆದಿನಿತನೇಗೆಯ್ದು ಮಾಡುಗಡ ಶಂಕರಾ ಎನುತೆ ತತ್ಪಂಡಿತೇಂದ್ರಂ
ಪುದಿದ ಶೋಕಾಗ್ನಿಯೊಳ್ ಮಗ್ನನಾಗುತ್ತೆ ಮ
ತ್ತದವಳಲ್ ಪೆರ್ಚಿ ಪಂಬಲಿಸುತ್ತೆ ಮನದೊಳಗೆ
ಕುದಿಯುತ್ತೆ ಭಕ್ತತತಿಯೊಡಗೂಡಿ ಲಿಂಗಾರ್ಚನಂಗೆಯ್ವ ವೇಳೆಯಲ್ಲಿ ೪೬

ಗುರುಪಂಡಿತೇಶ್ವರಂ ನೀರಾಜನಂಗಳಂ
ಪರಮೇಶ್ವರಂಗರ್ಪಿಸುತ್ತುಮಾ ಲಿಂಗದುರು
ತರಗರ್ಭದೊಳ್ ಪೊಳೆಯೆ ಬಸವರಾಜನ ರೂಪು ಕಂಡದಂ ಪಂಡಿತೇಂದ್ರಂ
ಪಿರಿದುಮಾನಂದಾಶ್ರು ನಯನದೊಳ್ ಪೊಣ್ಮೆ ಬಂ
ಧುರ ಪುಳಕಿತಾಂಗನಾಗುತ್ತೆ ಸಂತೋಷದಿಂ
ದಿರದೆ ಗ[1]ದ್ಗ[1]ದಕಂಠನಾಗುತ್ತೆ ಕೈಗಳಂ ನೆಗಪಿ ವಂದಿಸಿ ತುತಿಸುತೆ ೪೭

ಮಿನುಗುವೀ ಮೂರ್ತಿ ಎನ್ನಿಷ್ಟಲಿಂಗದ ಮೂರ್ತಿ
ಘನವೃಷಾಧೀಶನೀಮೂರ್ತಿಯೇ ಮಗುಳ್ದೆನ್ನ
ವಿನುತೇಷ್ಟಲಿಂಗದ ಮಹಾಕಾಂತಿ ವೀರಭದ್ರನ ದಿವ್ಯಮೂರ್ತಿ ಮತ್ತಂ
ಕನದಮಲಮೂರ್ತಿಯಿದು ಪರಿಭಾವಿಸಲ್ಕೆ ತೊ
ಟ್ಟನೆ ತೋಱುವೆನ್ನಿಷ್ಟಲಿಂಗದ ಮಹಾಲೀಲೆ
ಯನುಪಮಪ್ರಮಥಾದಿನಾಥನಾಯತ ದಿವ್ಯಮೂರ್ತಿಯೆನಿಕುಂ ಸಂತತಂ ೪೮

---

1 ರಂ (ಕಗ) 2 ದಗ (ಕಗ)

ಮಿಸುಗುವೀ ಮೂರ್ತಿ ಎನ್ನಿಷ್ಟಲಿಂಗದ ಸರಿರ
ದೆಸೆವ ಸತ್ಕಾಂತಿವಿಸರಂ ಮತ್ತಮಿಾ ಮೂರ್ತಿ
ನಿಸದಂ ಪ್ರಸಾದತೇಜದ ದಿವ್ಯಮೂರ್ತಿ ಎನ್ನಿಷ್ಟಲಿಂಗಂ ಪ್ರೀತಿಯಿಂ
ಅಸವಸಂ ತೊಟ್ಟ ಜಂಗಮಲಿಂಗಮೂರ್ತಿ ಇದು
ಮಸಕದಿಂದೆನ್ನಿಷ್ಟಲಿಂಗಗರ್ಭದೊಳೆ ರಾ
ಜಿಸುವವಯವಂ ಚಿತ್ತಲಿಂಗದೇವನಮ್ಮೂರ್ತಿ ತಾನಿದೇ ಪರಿಭಾವಿಸೆ ೪೯

ಎನಿಷ್ಟಲಿಂಗಕ್ಕನನ್ಯನಾಗೆಸೆದಿರ್ಪ
ಸನ್ನುತಾಮಲ ಲಸದ್ಗುರುಲಿಂಗಮೂರ್ತಿಯಿದು
ನನ್ನಿಯಿಂ ಬಸವೇಶ್ವರಾಹ್ವಯದಿನೆನ್ನಿಷ್ಟಲಿಂಗವಂಗೀಕರಿಸಿದ
ಸನ್ನಿದಂ ನಂದೀಶದಿವ್ಯಮೂರ್ತಿಯಿದಲ್ತೆ
ಚನ್ನಮರ್ದು ತೋಱುವೆನ್ನಿಷ್ಟಲಿಂಗದೊಳೆಸೆವ
ಪನ್ನಗಾಭರಣನಿಭ ಬಸವೇಶಸನ್ಮೂರ್ತಿ ಮತ್ತಮಿಾ ನಿಜಮೂರ್ತಿಯ ೫೦

ಕರಮೆ ಭಾವಿಪುದಱಿಂ ಭವರೋಗಮಾದಿ ಬಂ
ಧುರದುಃಖಮುಖ್ಯಂಗಳೆಲ್ಲಮಳಿಗುಂ ಸದಾ
ಹರಕರುಣಮೊದವುಗುಂ ಮಗುಳ್ದೈಹಿಕಾಮುಷ್ಮಿಕಂ ಸೌಖ್ಯಮನಿಶಮಕ್ಕುಂ
ನಿರುತಮಿಾ ಮೂರ್ತಿಸ್ತವದೆ ಭಕ್ತಿಕಾಮಿನಿಯ
ವರಕಟಾಕ್ಷೇಕ್ಷಣಂ ಕೈಸಾರ್ಗೆನುತ್ತೆ ಭಾ
ಸುರಭಕ್ತಿಯಿಂ ಬಸವಮಹಿಮೆಯುಂ ಪೊಗಳುತ್ತೆ ಪಂಡಿತೇಶ್ವರನಾವಗಂ ೫೧

ಮಿನುಗುವಾ ಶಂಕರಯ್ಯಂಗೂಡಿ ಸದ್ಭಕ್ತ
ಜನರೊಡನಿರುತ್ತಮೋರೋರ್ವರತಿವಿಸ್ಮಯದೊ
ಳೆಸುಮೋಲಾಡುತ್ತೆ ಸುಖ[1]ದಿನ[1]ರ್ದಂ ಕೇಳ ಜಂಗಮಾಭೀಷ್ಟಕರನೆ
ವಿನಯನಿಧಿ ಜಂಗಮಶ್ರೀಪಾದಸರಸೀಜ
ವಿನುತ ಮಕರಂದಪಾನಾಹ್ಲಾದಮಧುಕರನೆ
ಕನದಮಲ ಮಹಿಮಾಪ್ರಕರಣಮಿದು ಸೊರಸಚಿವೇಂದ್ರಗುಣಮಣಿಮಹೀಂದ್ರ ೫೨

ಜಂಗಮಧ್ಯಾನನಿಶ್ಚಿಂತಾತ್ಮಯೋಗವರ
ಜಂಗಮಾಭೀಷ್ಟಪೂಜಾಬಹಿರ್ಯೋಗ ಚರ
ಲಿಂಗಲಬ್ಧವರಪ್ರಸಾದೋಪಭೋಗಾ ಸೊರಸಚಿವೇಂದ್ರ ನಿನಗೆ ಸತತಂ

---

[1] ದೊಳ (ಕ)

ಜಂಗಮಪ್ರಕರಕರುಣಂ ಸಾರ್ಗೆ ಭೂಮಿಯೊಳ್
ಪಿಂಗದಾಯುಂ ಶ್ರೀಯುಮನವರತಮಕ್ಕೆ ನಿಜ
ಮಂಗಳೋದಯಮನಿಶಮುಂ ತೊಲಗದಿರ್ಕೆನ್ನ ಪರಕೆಯಿಂದಂ ಧರೆಯೊಳು ೫೩

ಸದಮಲಪ್ರಚುರವಿಶ್ರುತ ಪರಮಭಕ್ತಗಣ
ಪದಸರೋರುಹಸಾಂದ್ರ ಮಕರಂದಪಾನ ಸ
ಮ್ಮುದಿತ ಚಂಚಚ್ಚಚರೀಕನನವರತ ಪಂಚಾಕ್ಷರೀಪ್ರಸಿತಹೃದಯಂ
ವಿದಿತ ಮಂಜುಲನೀಲಕಂಠಾಹ್ವಯಂ ಮನೋ
ಮುದದೆ ಪೇಳ್ದುರುತರಾರಾಧ್ಯಚಾರಿತ್ರದೊಳ
ಗಿದು ಬಸವನಂ ಕುಜಿಂತು ಪಂಡಿತೇಶಂ ಪ್ರಲಾಪಿಸಿದ ಸತ್ಕಥನಮೆನಿಕುಂ ೫೪

ದುರಿತವಲ್ಯಭಿಲಾವದಾತ್ರಾಯಮಾನವಿ
ಸ್ಫುರಿತೋದ್ಗಮಪ್ರದರ ಕಾಳೀಭುಜಗಸದೃಕ್ಷ
ವರಭೇಶವಿಷ್ಣುಕೋಷ್ಣೀಷಾಗ್ರಖಚಿತಮಾಣಿಕ್ಯೋಸ್ರವಿಶ್ರಪಾದ
ಪರಮಾಗಜೋರು ನವವಿಲಸಿತೋರೋಜ ಬಂ
ಧುರಮಸೃಣಘುಸೃಣಪಂಕಾಂಕಿತೋರಸ್ಥಲಾ
ಕರುಣದಿಂ ಭಕ್ತೇಪ್ಸಿತಾರ್ಥಂಗಳಂ ಕೊಟ್ಟು ರಕ್ಷಿಪುದು ನೀಲಕಂಠ ೫೫

# ಒಂದನೆಯ ಸಂಧಿ

## ಪರ್ವತದ ಮಾಹಾತ್ಮ್ಯ ಕಥನಂ

ಸೂಚನೆ: ಗುರುಪಂಡಿತೇಶ್ವರಂ ಶ್ರೀಪರ್ವತಂಗಂಡು
ಹ[1]ರಿಸ[1]ದಿಂದದಱ ಮಾಹಾತ್ಮ್ಯವಂ ಸ್ತುತಿಯಿಸಿದ
ಸರಳಕಥನಂಗೇಳ ಸೂರಸಚಿವೇಂದ್ರ ನೀನೆಂದು ಸೋಮೇಶನುಸುರ್ದಂ

ಸರಳ ತಾರಾಚ[2]ಲ[2]ದ ಗಂಡಶೈಲಂಗಳಂ
ತುರುತರಸ್ಫಾರಿಫೇನಸ್ತಬಕಮೊಪ್ಪುತಿರೆ
ಪರಮಧಿಷ್ಣ್ಯಪ್ರಚಿತಿಯಂತಿರಾಕೀರ್ಣಲುಠಜ್ವಲಕಣಂಗಳೊಪ್ಪೆ
ಉರಗಭೃನ್ನಿರ್ಲಯಿನಿಯೆಂಬಂತೆ ಸಂತತಂ
ತರಳೋಲ್ಬಣೋರ್ಮಿಮಾಲಾರಚನೆ ಸೊಗಸುತಿರೆ
ಕರಮೆಸೆವ ಸುರನಿಮ್ನಗೆಯ ತಾಳ್ದು ರಾಜಿಸುವ ಗುರುನೀಲಕಂಠ ಜಯತು ೧

ವರ ಕೀರ್ತಿಯುತ ಶಂಕರಾರ್ಯನನುಮತದಿಂದೆ
ಪರಮಗುರುಪಂಡಿತೇಶಂ ಭಕ್ತರೊಡಗೂಡಿ
ಬರುತಿರಲ್ ಶ್ರೀಪರ್ವತಂ ಸರಿತ್ಪತಿಯ ನೀಲಾಬ್ದದಭವಗ್ರೀವದ
ಗರಳದುರುಕಾಳಿಮಂಗಳ್ ಕೂಡಿಬಳೆದು ಬಂ
ಧುರ ಪರ್ವತಾಕಾರಮಾದುದೆಂಬಂತೆ ಸುಂ
ದರಮಾಗಿ ಕಟ್ಟಿದಿರೊಳೆಸೆದು ತೋಱಿತ್ತು ಮತ್ತದನೆಯ್ದೆ ಪೊಗಳ್ವನಾವಂ ೨

ಸಲೆ ಪಂಕವಿಚ್ಛೇದಮಾಹಾತ್ಮ್ಯ ಸಲಿಲದಿಂ
ವಿಲುಲಿತೋತ್ತುಂಗ ಶೃಂಗೌಘವೀಚಿಗಳಿಂದ
ಮಲಘುಗಿರಿ ಚೂತಾವಿಭಾಸಿನೀಹಾರಾಳಿವಿಸ್ಫಾರಫೇನಂಗಳಿಂ
ಲಲಿತ ಶೈಲಾಗ್ರವಿಹರ ಪ್ರಮಥನಾಯಕರ
ಸುಲಭ ಪುಷ್ಪಕನೌಕದಂಬಂಗಳಿಂದೆ ಸ
ದ್ವಿಲಸಿತವಿಮಾನ ಕೇತುಸ್ತಂಭ ಸೌರಂಭ ಕೂಪದಂ[3]ಡಂ[3]ಗಳಿಂದ ೩

---

[1] ರುಷ (ಗ) [2] ಳ (ಕ) [3] ತಂ (ಕ)

ಪಿರಿದು ನಾನಾದಿಕ್ಕಿನೊಳ್ ತೊಳಗುತಿರ್ಪ ಬಂ
ಧುರ ಪುಣ್ಯಸುಸ್ಥಾನ ಸಮುದಾಯವೆಂಬ ಭಾ
ಸುರತರ ದ್ವೀಪಂಗಳಿಂದೆ ತದ್ಗಿರಿಯ ಪಾರ್ಶ್ವದೊಳಿಳಿವ ನದಿಗಳೆಂಬ
ಉರುತರ ದ್ವೀಪಮಾರ್ಗಂಗಳಿಂದಂ ಮನೋ
ಹರ ಶೈವ ಪಾಶುಪತ ಮುಖ್ಯಮುನಿಚಯವೆಂಬ
ವರ ರತ್ನನಿಕರದಿಂ ವೀರಮಾಹೇಶ್ವರಾನರ್ಘ್ಯನಾಯಕಮಣಿಗಳಿಂ ೪

ತನ್ನೊಳಗಡಂಗಿರ್ಪನಂತಶೈಲೌಘವೆಂ
ಬುನ್ನತ ಪ್ರಚುರ ವೈನಾಕಾದಿಗಿರಿಗಳಿಂ
ಸನ್ನಿದಂ ಸೋಂಕಿದ ನರರ ಪಿಡಿದುಕೊಂ[1]ಬಂ[1]ಟುಗಲ್ಲೆಂಬಯಃಕಾಂತದ
ಸನ್ನುತ ಮಹೀಧ್ರಂಗಳಿಂದೆ ತ್ರಿಂಶದ್ಯೋಜ
ನನ್ನೆರೆಯೆ ಮತ್ತುಳಿದ ಭೂಮಿವೇಳೆಗಳಿಂದೆ
ಸನ್ನಿದಂ ಶ್ರೀಪರ್ವತಾಂಭೋಧಿಯೊಪ್ಪಿತ್ತು ಲೋಕಪಾವನವೆನಿಸುತೆ ೫

ಮುಗುಳ್ದು ಮುನಿಚಯಚಾತಕಾನೀಕದಿಂದೆ ತೊ
ಟ್ಟಗೆ ಮುದಿತ ನೀಲಕಂಠನಿನಣಿಯರಂ ನೋಡೆ
ಬಗೆಯೆ ಸನ್ಮಾರ್ಗ ಸೋಪಾನಾಂಚಿತಾಭ್ರಾ ಪ್ರಲೀನವರ್ತನದೆ ಮತ್ತಂ
ಮಿಗೆ ತೃಣಜ್ಯೋತಿ ವಿದ್ಯುಲ್ಲತಾನಿಕರದಿಂ
ತಗುಳ್ದೆತ್ತಲುಂ ಬೀಳ್ವ ನಿರ್ಜರಧ್ವಾನದಿಂ
ಸೊಗಯಿಸುವ ತದ್ಗುಹಾಗಹ್ವರೋದ್ಭೂತ ಪ್ರತಿಧ್ವಾನಗರ್ಜನೆಗಳಿಂ ೬

ಕರಮಿಷ್ಟಫಲಕಾಂಕ್ಷೆಯಿಂದಂ ಬರುತ್ತಿರ್ಪ
ಪರಿಷತ್ಕರ್ಷಕಾಲಿಯಿಂ ಸ್ವರ್ಗಮೋಕ್ಷಾದಿ
[2]ಸರಳೇಷ್ಟ[2]ಫಲವೀವ ನಿಜದೃಗಂಚಲ ಕೃಪಾರಸವೆಂಬ ವೃಷ್ಟಿಯಿಂದಂ
ಪಿರಿದು ಕಾರ್ಗಾಲಮೇಘದ ತೆಱದೆ ತೋಱುತ್ತು
ನಿರುಪಮ ಶ್ರೀಪರ್ವತಂ ನೋಳ್ಪ ಜನರ ಭಾ
ಸುರ ನಯನಮುತ್ಪರ್ವಮುರುಪುಣ್ಯ ಪುಂಡ್ರೇಕ್ಷುನವಪರ್ವವೆನಿಸಿ ಸತತಂ ೭

ಮರಳಿ ಧರೆಯೆಂಬ ಪೀಠದೆ ಗಗನವೆಂಬ ಭಾ
ಸುರಲಿಂಗದಿಂದಾಶೆಯೆಂಬ ದಿವ್ಯಾಂಬರದೆ
ವರಮೇಘವೆಂಬ ಮೇಖಳೆಯಿಂದೆ ತಾರಾಳಿಯೆಂಬ ಪುಷ್ಪಪ್ರಕರದಿಂ

---

1 ಬೊಂ (ಕ) 2 ಗುರುಗಳಿಷ್ಟ (ಗ)

ಪಿರಿದೆಲ್ಲ ತತ್ತ್ವೋರ್ಧ್ವ ಚಿಚ್ಛಕ್ತಿಯೆಂಬ ಸುರು
ಚಿರ ಜಟಾಜೂಟದಿಂ ಪುಷ್ಪದಂತಂಗಳಿಂ
ಬುತು ದೀಪತತಿಗಳಿಂ ನಿಜಕೃಷ್ಣವೆಂಬ ಗರಳದ ಕರ್ಪಿನಿಂದೆ ಸತತಂ ೮

ವರ ಲಿಂಗದಾಕೃತಿಯೊಳಾ ಪರ್ವತಂ ಮನೋ
ಹರಮಾಗಿ ಪಂಡಿತೇಂದ್ರನ ಕಣ್ಗೆ ಸೊಗಯಿಸಲ್
ಹರಿಸ[1] ನೀರೊಱತೆಯೆ ಕಣ್ಗುಡಿಯೊಳಗೆ ರೋಮಾಂಚಿತಾಮಲಾಂಗನುಮಾಗುತೆ
ಭರದೆ ಗದ್ಗದಕಂಠನಾಗುತ್ತುಮುಣ್ಮುತಿ
ರ್ಪುರು ಲಸದ್ಭಾವ[2]ಸ್ವರಾಂಬಕಾವ[2]ಯುವ ವಿ
ಸ್ಫುರಿತ ವಿಕ್ರಿಯನಾಗುತಂ ಪಂಡಿತೇಶ್ವರಂ ನೋಡುತಂ ಸಂತಸದೊಳು ೯

ಮುಗುಳ್ದಿಕ್ಷಿಸುತೆ ವಂದಿಸುತೆ ಕೆಲವು ಪಯಣಕ್ಕೆ
ಸೊಗಯಿಸುವ ವೆಲ್ಲಟೂರ್ಗೆಯ್ತಂದು ಸಿರಿಗಿರಿಗೆ
ತಗುಳ್ದ ಸದ್ಭಕ್ತಿಯಿಂದಂ ತುಳಿಲ್ಗೆಯ್ದು ಬಳಿಕಾ ಗಿರಿಯನೀಕ್ಷಿಸುತ್ತೆ
ಬಗೆದು ನುಡಿದಂ ಪಂಡಿತೇಶ್ವರಂ ಮುನ್ನೆ ಸೊಂ
ಪೊಗೆವಗಸ್ತ್ಯಂ ತನ್ನ ಕಾಲುಂಗುಟದೆ ಮೆಟ್ಟೆ
ಮಿಗೆ ಭೂಮಿಯೊಳಗಾಳ್ದ[3] ವಿಂಧ್ಯಪರ್ವತದ ಸತ್ವಂ ತಾನೆನಿತ್ತೊ ಮತ್ತಂ ೧೦

ಮುರವೈರಿ ಕಿಳ್ತಿತ್ತಿದಾ ಮಂದರಾಚಲದ
ಸರಳ ಗಾಂಭೀರ್ಯಮೆಂತುಟೊ ದಶಾಸ್ಯಂ ತನ್ನ
ಕರದಿಂದೆ ನೂಂಕಲೊಲೆದಾಡಿದಾ ಬೆಳ್ಳಿ[4]ವೆಟ್ಟಿನ ಬಲ್ಪು ತಾನೆಂತುಟೊ
ಪರಮೇಶ್ವರಂಗೆ ಧನುವಾಗೆಡದ ಹಸ್ತದೊಳ್
ಪಿರಿದಡಂಗಿದ ಮೇರುವಿನ ಗುಣ್ಪದೆಂತುಟೋ
ಮರುದಿನಂಗಳ್ಕಿ ಶರಧಿಯ ಪೊಕ್ಕ ಮೈನಾಕಗಿರಿಯ ವೈಭವಮದೆಂತೊ ೧೧

ತರಣಿಕಿರಣಕ್ಕೆ ಪೆಳಱದ ಹಿಮಾಚಲದ ವಿ
ಸ್ಫುರಿತ ಮಹಿಮೆಯದೆಂತುಟೋ ಸೂರ್ಯನುದಯದೊಳ್
ಪರಿಶೋಭೆವೆತ್ತು ಮತ್ತಂ ಶೋಭೆಗಿಡು ಉದಯಗಿರಿಯ ಚೆಲ್ವೆಂತುಟೆಳೆಗೆ
ಪಿರಿದು ತನ್ನುದರದೊಳ್ ಪೊಕ್ಕ ಮಿತ್ರನ ನಾಡೆ
ಭರದೆ ತೇಜಂಗಿಡಿಸುವಸ್ತಶೈಲದ ಪೆರ್ಮೆ
ಯಿರವದೆಂತುಟೊ ಬಳಿಕ್ಕಿವು ಮುಖ್ಯಮಾಗೂಣೆಯುಂಬಡೆದ ಶೈಲನಿಕರಂ ೧೨

---

1 ರುಷ (ಗ) 2 ವಸ್ವರಾಂಬಕಾವ (ಗ) 3 ರ್ದ (ಕ) 4 ಬೆ (ಗ)

ಪರಿಭಾವಿಸಲ್ಕೆ ಭೂಭಾರಕತ್ವದೊಳೊಂದಿ
ಪರಿಶೋಭಿಸಿರ್ಪ ಕುಲಗಿರಿಗಳಂತಿರ್ಕೆ ಬಂ
ಧುರತರಾಭಂಗದಿಂದೆಸೆದಿರ್ಪ ಸಿರಿಗಿರಿಗೆ ಮತ್ತುಳಿದ ಗಿರಿಕದಂಬಂ
ಪಿರಿದು ಪಾಸಟಿಯೆ ಮತ್ತೀ ಪರ್ವತಂ ನಾಡೆ
ಧರಣಿಯೊಳ್ ಸ್ತೋತ್ರಪಾತ್ರಂ ದಲೆನಿಕುಂ ಪುಣ್ಯ
ದುರುರಾಸಿಯಸ್ತೋಕವೈಭಸಂ ಶೈಲಾಧಿರಾಜನೆನಿಕುಂ ಸಂತತಂ ೧೩

ಪಿರಿದಯತ್ನದೆ ಸರ್ವಕಾಮ್ಯಾರ್ಥಮಂ ನರರ್ಗೆ
ಕರಮೆ ಕುಡುತಿರ್ಕುಮಪವರ್ಗಸುಖಮಂ ಮನೋ
ಹರಮಾಗಿ ಮನುಜಕುಲಕೀವುತಿರ್ಕುಂ ಸ್ಪರ್ಶವೇದಿಗಂ ಸುರಕುಜಕ್ಕಂ
ಪರಮಧಾಮಂ ಗಿರಿಶ ಕರುಣಾಲವಾಲದಿಂ
ದುರು ಪೂರ್ವಪುಣ್ಯದಿಂದಾದ ತನುಬೇರಿಂದೆ
ವರ ಪರ್ವತಾಖ್ಯಮುನಿಯೆಂಬ ಲತೆಯಂತೆ ಸುರಗಿರಿ ಕಣ್ಗೆ ಸೊಗಸಾದುದು ೧೪

ಲಲಿತ ಪರ್ವತಮುನಿಯ ತಪದ ಫಲವೇ ದೇಹ
ಮಲಘುತರ ಮಲ್ಲಿಕಾರ್ಜುನ ವರಸ್ಥಾನಮೇ
ಸಲೆ ಮುಖಂ ಧರ್ಮಾರ್ಥಕಾಮಮೋಕ್ಷಂಗಳೇ ಚರಣಂಗಳೆಯ್ದೆ ಮೆಱೆವ
ಸುಲಭ ಶೃಂಗಂಗಳೇ ಶೃಂಗಂಗಳೆನಿಕು ಮ
ತ್ತುಲರ್ವ ದೀಪಕುಜಂಗಳೇ ಕಣ್ಗಳೊಪ್ಪುವಾ
ಉಲಿತಗುಹೆಗಳೆ ಗೋಣಕುಹರಂಗಳವನಿಜಂಗಳೆ ರೋಮಸಮುದಾಯವು ೧೫

ಪರಿಷಜ್ಜನಂಗಳೇ ವತ್ಸಂಗಳೆನಿಸುಗುಂ
ಸರಳಶ್ರುತಿ ಸ್ಮೃತಿಗಳೇ ಶ್ರುತಿಗಳೆನಿಸುಗುಂ
ವರ ಗುಹಾಮಾರುತನೆ ನಿಶ್ವಾಸಮಾ ಪ್ರಮಥರೇ ರಕ್ಷಕರ್ ಭಾವಿಸೆ
ಉರುಪುಣ್ಯಮೇ ಕಱೆವ ಪಾಲ್ ವಿಮಲಕೀರ್ತಿಯೇ
ಪರಮಲಾಂಗೂಲಂ ಚತುರ್ದ್ವಾರದಲ್ಲಿರ್ದು
ಕರಮೊರೆವ ದಿವ್ಯಲಿಂಗಂಗಳೇ ಮೊಲೆಗಳೆನಿಸುಗುಮಿಂತು ನೋಳ್ಪ ನರರ್ಗೆ ೧೬

ಉರುತರ ಶ್ರೀಪರ್ವತಂ ಕಾಮದುಘದಂತೆ
ಪಿರಿದಿಷ್ಟಸಿದ್ಧಿಗಳನೀವುದದು ಮತ್ತೆಯುಂ
ಭರದೆ ನಾಲ್ದೆಸೆಯೊಳೆಸೆದಿರ್ಪುನ್ನತಾದ್ರಿಗಳ್ ವೇದಿಕೆಗಳಂತೆ ಮೆಱೆಯೆ

ಸರಳಾಶ್ವಮೇಧಮಮುಖ್ಯಾದ್ರಿಗಳ್ ಮಿನುಗುತಿ
ರ್ಪುರುಶಾಖೆಗಳ ಪಾಂಗಿನಂತೆಸೆಯೆ ಮತ್ತೆ ಸುರು
ಚಿರಮಾದ ಪಾತಾಳಗಂಗಾದಿನದಿಗಳುನ್ನತ ಲತೆಗಳಂತೆ ತೋಱಿ ೧೭

ಮರಕತದ ನಿಬಿಡೋಸ್ರತತಿಯೆ ಪಚ್ಚಲೆಗಳುರು
ತರ ಪದ್ಮರಾಗ ಪ್ರವಾಳರತ್ನಾದಿಗಳ
ಸುರುಚಿರಾಂಶುಗಳೆ ಕೆಂದಳಿರ್ಗಡಣಮಿಂದುಕಾಂತದ ಬಜ್ಜರದ ಮುತ್ತಿನ
ಪರಮಕಾಂತಿಗಳೆ ಪುಷ್ಪಸ್ತಬಕಮಾವಗಂ
ಚರಯಿಸುವ ಕಾಮ್ಯಾರ್ಥ ಸಾಧಕವ್ಯೂಹಮೇ
ಕರಮೆಸೆವ ಪಱಮೆಗಳ್ ಸಿದ್ಧಲಿಂಗಸ್ವಯಂಭೂಲಿಂಗವೇ ಸತ್ಫಲಂ ೧೮

ಮುನಿ ತಪಸ್ವಿಗಳೆ ಆ ಸತ್ಫಲಂ [1]ಸವಿವ ಸೊಂ
ಪಿನ ಶುಕಾನೀಕಂಗಳಾಗೆ ನರತತಿಗೊಲ್ದು
ಮಿನುಗುವಿಷ್ಟಾರ್ಥಫಲವಂ ಪ್ರೀತಿಯಿಂ ಕುಡುವ ನಿರ್ಜರದ್ರುಮದ ಪಾಂಗಿಂ
ಘನತರ ಶ್ರೀಪರ್ವತಂ ನಾಡೆ ಕಣ್ಗೆಡ್ಡ
ಮೆನಿಸಿ ತೋಱುತ್ತು ಮತ್ತದಱ ಮಹಿಮೆಯ ಧರೆಯೊ
ಳನುವಿನಿಂ ಪೊಗಳಬಲ್ಲವನೆಲ್ಲಿದಂ ಮಹಾಶೇಷಂಗಶಕ್ಯಮೆನಿಕುಂ ೧೯

ಮುಸಕದಿಂ ಸ್ವರ್ಣಂ ಭವತಿ ಎಂದು ವಾಕ್ಯವಿಂ
ಪೆಸೆವವೊಲ್ ನುಡಿದಂತೆ ತಮ್ಮೊಳೀಗಂ ವಿರಾ
ಜಿಸುತಿರ್ಪ ಪರಿಸವೇದಿಯನೆಯ್ದೆ ತಾರಾದಿಲೋಹಚಯವರ್ಣಂಗಳಂ
ಸಸಿನೆ ಕೆಲನೂಂಕಿ ಕನಕಂ ಮಾಳ್ಪ ತೆಱದೆ ಶೋ
ಭಿಸುವ ಮುತ್ತಿನ ಗಿರಿಕದಂಬಂಗಳೇಂ ಲೋಕ
ವಿಸರಂಗಳೊಳಗುಂಟೆ ಪರಿಭಾವಿಸಲ್ಕೆ ಮತ್ತೀ ಶೈಲಮೊಂದಲ್ಲದೆ ೨೦

ಕರಮಂತ್ಯಜಾನ್ಸ್ಪೃಷ್ಟ್ವ [2]ಎಂದಂತೆ ವಾಕ್ಯಮದು
ಭರದೆ ತನ್ನಂ ಬ್ರಾಹ್ಮಣಾದಿಗಳ್ ಸೋಂಕಲೊಡ
ನಿರದಳಿಗುಮವರ್ಗೆ ಕಲ್ಮಷಸಂಚಯಂ ಸ್ಪರ್ಶವೇದಿಯಂತತಿಶೋಭಿಪ
ಉರುತರ ಶ್ರೀಪರ್ವತಂ ಲೋಕನಿಕರಕ್ಕೆ
ಪಿರಿದುಮಿಷ್ಟಾರ್ಥಫಲವಂ ಕುಡುಗುಮವನಿಯೊಳ್
ಪರಿಶೋಭಿಸಿರ್ಪದೊಂದದ್ರಿಯೆನಲಕ್ಕುಮೇ ಶ್ರೀಗಿರೀಂದ್ರಮನಾವಗಂ ೨೧

1 ನಲಿ (ಕ) 2 ವೆಂ (ಕ)

ವರ ಲಿಂಗಮೂರ್ತಿಗಳ ಸಂಚಯಂ ಶಿವನ ಬಂ
ಧುರ ಲೀಲೆಯೊಳ್ ಪಲಂ ಭವನ ಮಹಿಮೆಯ ಮೆಱೆವ
ಪರಮಾರ್ಥದಾದಿ ನಿಷ್ಕರ್ಮಂಗಳಾಲಯಂ ತ್ರಿದಶಜನರೆಸೆದಾಡುವ
ಪಿರಿಯಾಗರಂ ಪ್ರಮಥರಾಡುಂಬೊಲಂ ರುಚಿರ
ಸುರಭಿಗಳ ಪಕ್ಕೆದಾಣಂ ಸಿರಿಯ ಪೆತ್ತ ಮನೆ
ಪರಮಚಿಂತಾಮಣಿಯ ಕಣಿ ಮುದದ ಸದನ[1]ಮಾ[1] ಸತ್ಯದನುಪಮಹರ್ಮ್ಯವು ೨೨

ಲಲಿತ ಚರಲಿಂಗಂಗಳುತ್ಸವಂ ಶರಣರಾ
ವಿಲಸತ್ಸುವೃತ್ತಿ ಮತ್ತಂ ಸ್ಪರ್ಶವೇದಿಗಳ
ಸಲೆ ಮೊತ್ತಮಮಲತತ್ತ್ವದ ಗೊತ್ತು ಚಾಗಿಗಳ ಬಲ್ಲಹಂ ಮುಕ್ತಿಪಥಮಂ
ಅಲರ್ದುತೋಱುವ ಸೋ[2]ಡರ್[2] ಶಿವಯೋಗಿಗಳ್ಗೆ ನಿ
ರ್ಮಲಭೂಮಿ ನಿತ್ಯದಾವಾಸಮೆನಿಸುಗುಮೆಯ್ದೆ
ವಿಲುಲಿತನದೀ ವಿಲಾಸಂ ಶಿವನ ಸೆಜ್ಜಾಗೃಹಂ ತಕ್ಕರಾನಂದವು ೨೩

ವರ ಸಿದ್ಧಸಂಘಕ್ಕುಪಾಯಂ ಪ್ರಸಾದಕ್ಕೆ
ಪಿರಿಯ ನೆಲೆವೀಡು ಮೋಕ್ಷಕ್ಕವಧಿ ಮುನಿಗಳ್ಗೆ
ಪರಮಮಾರ್ಗಂ ಜಪಸಮಾಧಿಗಳ ಕಾಲಮುನ್ನತಶಿವನ ಭಕ್ತತತಿಗೆ
ಕರಮೆಸೆವ ಪಚ್ಚಂ ವಿರಕ್ತರ್ಗೆ ಸುಖಧಾಮ
ವರರೆ ಭವವಾರಿಧಿಗೆ ತರಣಿ ಸಂಪತ್ತಿಂಗೆ
ನಿರುಪಮಾಧಾರಮೀಶ್ವರಭಕ್ತಗಣಕೆ ಶಿಖರಂ ಶ್ರೀಗಿರೀಂದ್ರಮನಿಶಂ ೨೪

ಪಿರಿದುಮಿಂತೊಪ್ಪುವಾ ಶ್ರೀಪರ್ವತಕ್ಕೆ ಸಲೆ
ದೊರೆಯಾದ ಮತ್ತಿನದ್ರಿಗಳೊಳವೆ ಲೋಕದೊಳ್
ಸಿರಿಗಿರಿಯೊಳೊಸರ್ವ ನಿರ್ಜರಸಮಿತಿ ಶಿವಮೌಲಿಗಂಗಾಂಬುಬಿಂದುನಿಕರಂ
ನಿರುತಮೀ ಗಿರಿಯೊಳಿಪ್ಪಲ್ಪಗಿರಿಗಳ್ ನೋಡೆ
ಪರಮಕೈಲಾಸಾದ್ರಿಗಳ್ ಮತ್ತಮೀ ಗಿರಿಯೊ
ಳಿರದೆ ಚರಿಯಿಸುವ ಧೇನುಗಳೆಲ್ಲವುಂ ಕಾಮಧೇನುಗಳ್ ಪರಿಭಾವಿಸೆ ೨೫

ಹ[1]ರಿಸ[1]ದಿಂದಿಲ್ಲಿಯಾಡುವ ಕಱುಗಳೆಲ್ಲವುಂ
ಹರನ ಮುಂದಿರ್ಪ ಗೋಮಾತೃವ್ರಜಂಗಳುಱೆ[3]
ಪಿರಿದುಮಾ ಬ್ರಹ್ಮಾಂಡಮಂ ಪೊತ್ತ ಶತರುದ್ರರಿಲ್ಲಿಯಾಡುವ [4]ಪ[4]ಶುಗಳು

---

[1] ಮುಂ (ಗ) [2] ಡಲ್ (ಗ) [3] ರುಷ (ಗ) [4] ಶಿ (ಗ)

ಕರವಿಲ್ಲಿ ತೋರ್ಪ ಗುಲ್ಮಾನೀಕಮನಿಶವುಂ
ವರ ಕಾಯಸಿದ್ಧಿಕರ ದಿವ್ಯೌಷಧಿವ್ರಜಂ
ನಿರುತವಿಲ್ಲಿಯ ಕೆಂಬರಲ್ಗಡಣಮಹಿನಾದ ಭೋಗವಣಿಗತ್ಯಧಿಕವು ೬೭

ಮಸಕದಿಂದಿಲ್ಲಿರ್ಪ ಬಗರಗೆಗಳೆಲ್ಲವುಂ
ರಸರಸಾಯನ ಸುಧಾವಾರಿಗಳ್ ಮತ್ತಿಲ್ಲಿ
ಯೆಸೆವ ಧರಣೀರುಹಂಗಳ್ ನಾಡೆ ಮಂದಾರಮುಖ್ಯ ತರುನಿಕರಂಗಳು
ನಿಸದವಿಲ್ಲಿಯ ಕೊಟಿಡುಗಳ್ ಪಟೀರದ್ರುಮದ
ವಿಸರಂಗಳಿಲ್ಲಿರ್ಪ ಸಜ್ಜುಗಳೆಲ್ಲಂ ಸಮು
ಲ್ಲಸಿತ ಚಿಂತಾಮಣಿಯ ಕಣಿಗಳಿಲ್ಲಿಯ ಬೆಂಚೆಗಳ್ ಕ್ಷೀರವಾರಿಧಿಗಳು ೨೭

ಇಲ್ಲಿರ್ಪ ಬಿಯದರಾಲಯವಿತತಿಗಳ್ ನಾಡೆ
ಸಲ್ಲಲಿತ ವಿಷ್ಣ್ವಾದಿ ಸುರರ ಮುಕ್ತಿಸ್ಥಾನ
ಮಿಲ್ಲಿರ್ಪ ಚಂಡಾಲಕರ್ ಚತುರ್ವೇದಿಗಳಿನಧಿಕಮಂತೆವೊಲಾವಗಂ
ಇಲ್ಲಿ ಚರಿಯಿಪ ದನಂಗಾಹಿಗಳ್ ಶ್ರುತಿತತಿಗೆ
ಸಲ್ಲೀಲೆಯಿಂದೆ ಟೀಕಂ ಬರೆವ ಚತುರರ್ಕ
ಳಿಲ್ಲಿರ್ಪ ಪಾರ್ವರಾತ್ಮಜರಜಂಗೊಲ್ದು ಮಪೌಂಜೀಬಂಧಕೃತರಳುಂಬಂ ೨೮

ಪಿರಿದಿಲ್ಲಿ ಕಡೆವನೆಯೊಳಿರ್ಪ ಗಣಪುಂಗವಂ
ನಿರುತದಿಂದಂ ಸ್ಥಿತಿಗೆ ಕರ್ತೃವೆನಿಸುವ ಹರಿಗೆ
ಕರಮಧಿಕನೆನಿಸುವಂ ಮತ್ತಿಲ್ಲಿ ಸುಳಿವ ಜತಿಕುವರನೊರ್ವಂ ಮುದದೊಳು
ಸ್ಮರನ ದರ್ಪಂಗಿಡಿಸುವಂ ಮತ್ತ[1]ಮ[1]ಲ್ಲಿ ಸಂ
ಚರಿಯಿಸುವ ವೀರಗಣನೊರ್ವನಾ ದಕ್ಷಮುಖ
ಹರನೆನಿಸುವಂ ಪ್ರಮಥಶಿಶುವೊರ್ವನುಂತೆ ಕರಿದಾನವಾದಿಗಳ[2]ನ[2]ರಿವಂ ೨೯

ಪಿರಿದುಮಿಾ ಗಿರಿಯುತ್ತರದ್ವಾರಪಾಲಕನ
ನುರುತರ ಪ್ರಮಥಪುಂಗವನನುಟಿಅ ಕಳುಪೆ ಬಂ
ಧುರ ಲೋಕನಿಕರವಂ ಹರಿಸಿಬರ್ಪಂ ಮೂಡಗಡೆಯ ಬಾಗಿಲ್ಗಾವನು
ವರ ಗಣಶ್ರೇಷ್ಠನಂ ಕಳುಪೆ ಮುಪ್ಪುರಗಳಂ
ತ್ವರಿತದಿಂ ಸುಟ್ಟುಬರ್ಪಂ ತೆಂಕವಂಕವಂ
ಪರಿಪಾಲಿಪಂ ಪರಂಜ್ಯೋತಿಸ್ವರೂಪನಾಗೆಸೆದಿರ್ಪನಾ ಶೈಲದ ೩೦

---

[1] ಮೆ (ಕ) [2] ನಿ (ಕ)

ಉರು ಪಶ್ಚಿಮದ್ವಾರನಾಯಕಂ ಬ್ರಹ್ಮರ್ಗೆ
ವರ ಜನಕನೆನಿಸುನಂ ಮತ್ತಮಿಾ ಗಿರಿಯಲ್ಲಿ
ಹರಿಸ[1]ದಿಂ ದೇವಕುಲಸಾರ್ವಭೌಮಂ ದೇವವೇಶ್ಯಾಭುಜಂಗನೆನಿಪ
ನಿರುಪಮ ಶ್ರೀಮಲ್ಲಿಕಾರ್ಜುನಂ ನೆಲಸಿರ್ಪ
ನರರೆ ಅಲ್ಲಿರ್ದ ಶುನಕಾದಿ ಖಗಮೃಗಮುಖ್ಯ
ಸರಳ ಜಂತುಪ್ರಚಯಮಲ್ಲಿರ್ಕುಮಲ್ಲದೊಡೆ ಕೈಲಾಸದೊಳಗಿ[2]ರ್ಪುದು[3] ೩೧

ಲಲಿತ ತತ್ಪ್ರಾಣಿಗಳ್ ಬೇಱೊಂದುತಾಣದೊಳ್
ನಲಿದು ವರ್ತಿಸವೆಂದೊಡಾ ಪರ್ವತದ ಮಹಿಮೆ
ಯಲಘುತರಮಕ್ಕುಮದನುಱೆ ಪೊಗಳಲಾ ಸುರಜ್ಯೇಷ್ಠಂಗಶಕ್ಯಮನಿಶಂ
ಸಲೆ ಶಿವನನತಿಭಕ್ತಿಯಿಂ ಪೊತ್ತ ಶೈಲಕ್ಕೆ
ನೆಲೆಯಾಗಿ ತೋಡಪ್ಪವೇ ಭೂಮಿಯುಂ ತಳೆದ
ಲಲಿತ ಗಿರಿನಿಕರಂಗಳಿಂದಿಂತು ಭಕ್ತಿಯಿಂದಂ ಪಂಡಿತೇಶನೊಲ್ದು ೩೨

ಪೊಗಳುತಂ ಶ್ರೀಗಿರಿಯ ನೋಡಲಾಕ್ಷಣದಲ್ಲಿ
ಸೊಗಯಿಸುವ ಲಿಂಗದಾಕೃತಿಯಾಗಿ ತೋಱಿತ್ತು
ನೆಗಳ್ದ ಪಂಡಿತವಿಭುಗೆ ತಚ್ಛೈಲವಲಯಮೆಲ್ಲಂ ನಿಸದಮಾಗಿ ಸತತಂ
ಬಗೆದು ದುಷ್ಕರ್ಮಿಗಳ್ ನೋಡಲೀಪರ್ವತಂ
ಮಿಗೆ ಶಿಲಾರೂಪಾಗಿ ತೋಱುಗುಂ ಕೃತಪುಣ್ಯ
ರಗಲದೀಕ್ಷಿಸೆ ಲಿಂಗದಾಕಾರದೊಳ್ ತೋರ್ಕುಮೆಂದು ಪೌರಾಣಮುಲಿಗುಂ ೩೩

ಫಲನಿಕರಮಂ ಕಾಂಕ್ಷಿಸರ್ಗೆ ಮತ್ತೀ ಶೈಲ
ಮಲಘು ಲಿಂಗಾಕೃತಿಯೊಳೆಸೆದಿರ್ಕುಮಣಿಯರಂ
ಸಲೆಯೋಗ ಸೌಖ್ಯಾರ್ಥಿಗಳ್ಗೀಗಳುಂ ನಲಿದು ಪೆರವೇ[?]ಗೆ ಸೂಕ್ಷ್ಮರೂಪದೆ ತೋರ್ಕು
ಮತಿಶಯದೊಳು (?)
ಅಲರ್ವ ಸದ್ಭಕ್ತಿಸೌಖ್ಯಾತಿಗಳ್ಗೀಗಳುಂ
ನಲಿದು ಪರಮಾಕೃತಿಯೊಳೊಸೆದು ತೋಱಿಸುಗುಮೆಂ
ದೊಲವಿನಿಂದಂ ವಾಯುವೀಯಸಂಹಿತೆ ಪೇಳ್ಗುಮೆಂತೆಂ[4]ದೋ[4]ಡದನುಸುರ್ವೆನು ೩೪

ಮಿಗೆ ತದೀಯಂ ತ್ರಿವಿಧಮೆನುತೆ ರೂಪಂ ಎನುತೆ
ಸೊಗಸಿನಿಂದಂ ಸ್ಥೂಲಮೆನುತೆ ಸೂಕ್ಷ್ಮಂ ಎನುತೆ
ಬಗೆದು ನೋಡಲ್ ತತಃಪರಮೆನುತ್ತಿಂತು ಸಂತೋಷದಿಂ ಪೇಳ್ದ ತೆಱದಿಂ

---

[1] ರುಷ (ಗ) [2] ರ್ಪುವು (ಗ) [3] ದಮಿ (ಕ) [4] ಬೊ (ಗ)

ನೆಗಳ್ದ ಸದ್ಭಕ್ತಿಭಾವೈಕನಿಯತಾತ್ಮರ್ಗೆ
ಮಿಗುವ ಲಿಂಗಸ್ವರೂಪದೆ ತೋರ್ಪ ಭಾವಮಿಾ
ನಗಕೆ ಪರಮಾರ್ಥದಿಂ ಸಾಜಮಾಗಿರ್ಕುಮೆಂತೆನೆ ಮುನ್ನೆ ಬಸವವಿಭುಗೆ ೩೫

ಪರಮಸದ್ಭಕ್ತಿಯಿಂ ನೋಡೆ ಜಂಗಮಮೂರ್ತಿ
ವರಲಿಂಗದಾಕಾರದಿಂ ತೋಱಿದಂತೆ ಸುರು
ಚಿರ ಭಕ್ತಿಯಿಂ ನೋಡೆ ಸಿದ್ಧರಾಮಯ್ಯಂಗೆ ಪರ್ವತೇಶ್ವರನಳುಂಬಂ
ಕರಮೆಸೆವ ಶುದ್ಧಲಿಂಗದ ಮೂರ್ತಿಯಾದಂತೆ
ನಿರುತಮಾ ಪಿಳ್ಳೆನಾಯ್ನಾರ್ಗೆ ತತ್ಪ್ರಾಣೇಶ
ನುರುಲಿಂಗರೂಪಾಗಿ ಕಣ್ಗೆಡ್ಡಮೆನಿಸಿ ತೋಱಿದ ಪಾಂಗಿ[1]ನಿಂದೆ[1] ಮತ್ತಂ ೩೬

ಸರಳ ಕೋಡಾರಬಾಚರಸಂಗೆ ಸೌರಾಷ್ಟ್ರ
ಪುರನಾಥನಪ್ಪ ಸೋಮೇಶ್ವರಂ ಮುನ್ನೆ ಭಾ
ಸುರಲಿಂಗರೂಪದಿಂ ಪ್ರತ್ಯಕ್ಷನಾದಂತೆ ಗುಡ್ಡವ್ವೆಗಂದು ಮುದದಿಂ
ಮರಳಿಯಾ ಸೋಮನಾಥಂ ಲಿಂಗರೂಪದಿಂ
ಕರಮೆ ನಿಜಮಂ ತೋಱಿದಂತೆ ಸೂರಾಂಬಿಕೆಗೆ
ಪಿರಿದು ಪೋರಂಡ್ಲ[ದ]ಗ್ರಾಮದೊಳ್ ಶಂಕರಂ ಲಿಂಗರೂಪಾದ ತೆಱದಿಂ ೩೭

ಮಿಸುಪ ವಿಶ್ವೇಶ್ವರನ ಶಿರದಲ್ಲಿ ಶಂಬ ರಾ
ಜಿಸುವ ಲಿಂಗಾಕೃತಿಯಿನಿರ್ದಂತೆ ಸಂತತಂ
ನಿಸದಮಾ ಪರ್ವತನ ಮಸ್ತಕಾಗ್ರದೊಳೀಶ್ವರಂ ಲಿಂಗರೂಪಿನಿಂದೆ
ಎಸೆದಂತೆ ನುತಿಸುತಿರ್ದೀ ಪಂಡಿತೇಶ್ವರನ
ಪೊಸಪೊಗಳ್ತೆಗೆ ಮೆಚ್ಚಿ ಮಲ್ಲಿಕಾರ್ಜುನಲಿಂಗ
ನೊಸೆದು ತೋಱಿದ ತೆಱದೆ ತನ್ನಗಂ ಲಿಂಗರೂಪಿಂ ನಾಡೆ ಸೊಗಯಿಸಿತ್ತು ೩೮

ಮಿನುಗುವಾ ನಗದೊಳ್ ನಿಮಗ್ನದೃಷ್ಟಿಗಳೆಯ್ದೆ
ಘನತರ ಸ್ನಾನವಾರಿಗಳಾಗೆ ಪರಿಲಿಪ್ತ
ವೆನಿಪ ದೃಷ್ಟಿಗಳಮಲಗಂಧಂಗಳಾಗೆ ಸನ್ನಿಹಿತದೃಷ್ಟಿಚಯಂಗಳು
ನನಸುದ್ಗಮಂಗಳಾಗಲ್ ಮುಸುಕಿದಾ ದೃಷ್ಟಿ
ಯೆನಸುಮುನ್ನತಧೂಪ ಧೂಮಂಗಳಾಗೆ ತೊ
ಟ್ಟನೆ ಎಲ್ಲೆಡೆಗಳ ಸುತ್ತಿದ ದೃಷ್ಟಿಗಳ್ ಮತ್ತೆ ನೀರಾಜನಂಗಳಾಗೆ ೩೯

1 ನಂತೆ (ಗ)

ಒಡವೆರೆದ ದೃಷ್ಟಿಗಳ್ ನೈವೇದ್ಯಚಯಮಾಗೆ
ಮಿಡುಕುವನುರಾಗದೃಷ್ಟಿಗಳೆಯ್ದೆ ಕರ್ಪೂರ
ದೊಡನೆಸೆವ ವೀಟಿಕೆಗಳಾಗಲ್ ಸಮುಲ್ಲಸಿತ ದೃಷ್ಟಿಗಳ್ ಪೂವಲಿಗಳು
ಪಡಪಿನಿಂದಾಗೆ ಶ್ರೀಗಿರಿಲಿಂಗಕಳ್ಕಱಿಂ
ಕಡುಮೆಱಿವ ದೃಷ್ಟಿಪೂಜೆಯನಿಂತು ಮಾಡಿದಂ
ಸಡಗರದೆ ಮಲ್ಲಿಕಾರ್ಜುನ ಪಂಡಿತಾರಾಧ್ಯವಿಭುವಣಿಯರಂ ಸಂತತಂ ೪೦

ಎಸಗುವೀ ಶ್ರೀಪರ್ವತದೊಳಿರ್ದ ಕಲ್ಗಡಣ
ವೊಸೆದು ನೋಡಲ್ಕೆಲ್ಲವುಂ ಲಿಂಗರೂಪುಗಳ್
ನಿಸದಮುಕ್ಕುಂ ಯದ್ಧಿಮನಸಾ ಎನುತ್ತಲುಂ ಧ್ಯಾಯತಿ ಎನುತ್ತೆ ಮತ್ತಂ
[1]ಒ[1]ಸೆದು ತದ್ವಾಚಾವದತಿ ಎನುತೆ ಮತ್ತೆಯುಂ
ಮಸಕದಿಂ ತತ್ಕರ್ಮಣಾಕರೋತಿ ಎನುತ್ತು
ಮುಸವಸಂ ವೇದಮುಸುರ್ದಂತೆ ತತ್ಪಂಡಿತಾರಾಧ್ಯವಿಭುವಳ್ಕಱಿಂದಂ ೪೧

ಮಿನುಗುವೀ ಶ್ರೀಪರ್ವತಂ ಲಿಂಗಮೆಂದು ತೊ
ಟ್ಟನೆ ಹೃದಯದೊಳ್ ನೆನೆದು ವಾಕ್ಯದಿಂದಂ ನುತಿಸಿ
ಘನಪೂಜೆಯಂ ಪ್ರೀತಿಯಿಂ ರಚಿಸಿ ಕೂಡೆಯ್ದಿ ಬರ್ಪ ಸದ್ಭಕ್ತನಿಕರಂ
ವಿನಯದಿಂದಂ ಪಂಡಿತೇಶನಂ ಪೊಗಳುತ್ತೆ
ಕನದಮಲಸುಖದೊಳಿರೆ ತತ್ಪಂಡಿತೇಶ್ವರಂ
ಸನಯಪೂರ್ವಕದೊಳಾ ಗಿರಿಯನೀಕ್ಷಿಸುತೆ ತಚ್ಛೈಲನಿಕಟದೊಳಿರ್ದನು ೪೨

ಸದಮಲಪ್ರಚುರವಿಶ್ರುತ ಪರಮಭಕ್ತಗಣ
ಪದಸರೋರುಹಸಾಂದ್ರ ಮಕರಂದಪಾನ ಸ
ಮ್ಮುದಿತ ಚಂಚಚ್ಚಂಚರೀಕನನವರತ ಪಂಚಾಕ್ಷರೀಪ್ರಸಿತಹೃದಯಂ
ವಿದಿತ ಮಂಜುಲನೀಲಕಂಠಾಹ್ವಯಂ ಮನೋ
ಮುದದೆ ಪೇಳ್ದುರುತರಾರಾಧ್ಯಚಾರಿತ್ರದೊಳ
ಗಿದು ಪರ್ವತದ ವೈಭವಂ ಸಕಲಸದ್ಭಕ್ತರೊಸೆದಾಲಿಪುದು [2]ಹರ್ಷದಿಂ[2] ೪೩

---

[1] ಪೊ (ಕ) [2] ಸದ್ಭಕ್ತಿಯಿಂ (ಗ)

## ಎರಡನೆಯ ಸಂಧಿ

### ಪರ್ವತದ ಮಹಿಮೆ

ಸೂಚನೆ: ಶ್ರೀಗಿರಿಯ ಮಹಿಮೆಯಂ ಪಂಡಿತೇಶಂ ಮನೋ
ರಾಗದಿಂ ದೋನಮಾರ್ಯಂಗೆ ಬಿತ್ತರಿಸಿದಂ
ಬೇಗದಿಂದಾ ಕಥನವಂ ನಿನಗೆ ಪೇಳ್ದಪೆಂ ಕೇಳ ಸೂರಾಮಾತ್ಯನೆ

ಸದಮಲ ಪ್ರಥಿತ ವಿಲಸದ್ಧಿಷ್ಣ್ಯ ಸಮುದಯಂ
ಮುದದಿನಾಕಾಶಗಂಗೋತ್ತುಂಗ ಭಂಗದೊಳ್
ಪದೆದು ಜಲನರ್ಮವನೊಡರ್ಚುತಿರ್ದಪುದೆಂಬ ಶಂಕೆಯಂ ಮಿಗೆ ಬೀಱುವ
ವಿದಿತ ಸುರಕಾಂತೆಯರ್ ಚಾಮರಂಗಳನಿಕ್ಕೆ
ಪುದಿದವರ ಗಾಳಿಯಿಂದೂರ್ಮಿಮಾಲೆಗಳಿಂದ
ಮುದಿತ ಶೀಕರವೊಪ್ಪಲೆಸೆವ ಗಂಗೆಯ ತಾಳ್ದ ಗುರುನೀಲಕಂಠ ಜಯತು ೧

ಮಗುಳ್ದು ತತ್ಪಂಡಿತೇಶಂ ಶ್ರೀಗಿರಿಯನೊಸೆದು
ಪೊಗಳುತುಂ ಭಕ್ತಿಯಿಂ ಮತ್ತದಕ್ಕೆಯ್ದೆ ತೊ
ಟ್ಟಗೆ ಸಂತಸದೆ ವಂದಿಸುತ್ತೆ ಮತ್ತದನಭಿಮುಖಂಗೆಯ್ದು ನೋಡುತೊಲ್ದು
ಸೊಗಸುಮಿಗೆ ಕರುಣಾಕಟಾಕ್ಷದಿಂದಂ ತನ್ನ
ನೆಗಳ್ದ ಶಿಷ್ಯನೆನಿಪ್ಪ ದೋನಮಯ್ಯನ ನೋಡಿ
ನಗುತೆ ನುಡಿದಂ ಪಂಡಿತೇಶ್ವರಂ ದೋನಮಾರ್ಯನೆ ಗುರುಕೃಪಾಪಾತ್ರನೆ ೨

ಭರದೆ ನೀನೀ ಶ್ರೀಗಿರಿಗೆ ಪೋಗಿ ಸಂತಸದೊ
ಳುರುತರ ಶ್ರೀಮಲ್ಲಿಕಾರ್ಜುನಪದಾಬ್ಜಮಂ
ಹರಿಸ[1]ದಿಂ ಭಜಿಸು ಸದ್ಭಕ್ತವ್ರಜಕ್ಕೊಲ್ದು ವರಪರ್ವಮಂ ನಿಮಿರ್ಚು
ಪಿರಿದು ಶಿವರಾತ್ರೀವ್ರತಮನಿಲ್ಲಿಯೇ ರಚಿಸು
ಮರಳಿ ತಚ್ಛೈಲ ಪ್ರದಕ್ಷಿಣಂಗೆಯ್ದು ಮಿಗೆ
ನಿರುತದಿಂದೆಮ್ಮ ಸದ್ವ್ರತಮಂ ಮನೋಮುದದೆ ಪರಿಪೂರ್ಣಮಂ ಮಾಡೆನೆ ೩

---

1 ರುಷ (ಗ)

ಗುರುಕೃಪಾಪಾತ್ರನಾ ದೋಣನಮಾರ್ಯಂ ತನ್ನ
ಗುರುಗೆ ಪಂಡಿತವಿಭುಗೆ ವಂದನಂಗೆಯ್ದು ಬಂ
ಧುರಭಕ್ತಿಯಿಂ ನುಡಿದನೆಲೆ ಪರಮಸರ್ವಜ್ಞಮೂರ್ತಿಯೇ ಪಂಡಿತೇಶ
ನಿರುತಮಿಾ ಶ್ರೀಪರ್ವತಂ ಮುನ್ನೆ ರುಷಿಯೊ ಭಾ
ಸುರತರ ಪ್ರಮಥನೋ ಗೋತ್ರಪ್ರಕೃತಿಯೊ ಮತ್ತೆ
ವರ ಗಂಗೆಯಿಾ ಪರ್ವತದೊಳೆಂತು ಜನಿಸಿತ್ತು ಮತ್ತಮಿಾ ಪ್ರಚುರಗಿರಿಗೆ ೪

ಸಲೆ ಪರ್ವತಾಭಿಧಾನಂ ತಾನದೇಕಾಯ್ತು
ಲಲಿತ ಗಿರಿನಿಕರಕ್ಕೆ ತಾನೊಡೆಯನೆಂತಾಯ್ತು
ನಲಿದು ಶಿಖರಂಗಂಡ ಮುನಿಗಳ್ಗೆ ಮುಕ್ತಿಯನದೆಂತುಕುಡುಗುಂ ಸಂತತಂ
ಲುಲಿತ ಶಿವಸಂಯುಕ್ತ ಪಂಚವದನತ್ವಮಿಾ
ಯಲಘುಗಿರಿಗೆಂತಾಯ್ತು ಶೇಷಶೈಲಂಗಳೊಳ್
ನೆಲಸಿರ್ಪ ಸರ್ವತೀರ್ಥಂಗಳ್ಗೆ ತಾನೆಂತು ಪುಟ್ಟುವನೆಯಾಯ್ತು ನಿಸದಂ ೫

ಗಿರಿಶಂಗದೆಂತು ಸಿಂಹಾಸನಂ ತಾನಾಯ್ತು
ಸುರಗಿರಿ ಪ್ರಮುಖಸರ್ವಾದ್ರಿಗಳಿರಲ್ಕೆ ಸುರು
ಚಿರ ಗಣೇಂದ್ರರ್ಗೆ ತಾಂ ಕ್ರೀಡಾದ್ರಿಯೆಂತಾಯ್ತು ರಸರಸಾಯನ ತುಂಬಿದ
ವರ ಸುಧಾಕಾಸಾರಮೆಂತಾಯ್ತು ಸುರಧೇನು
ಸುರಕುಜಾಮರ ಸಿದ್ಧ ಸುರಮಣಿವಿತಾನಕ್ಕೆ
ಪಿರಿದು ನೆಲೆವೀಡದೆಂತಾಯ್ತು ನಾಲ್ದೆಸೆಯೊಳುಂ ನಾಲ್ಕು ಬಾಗಿಲ್ಗಳಿಂದಂ ೬

ಪಿರಿದುಂ ವಿದಿಕ್ಕಿನೊಳ್ ತೋರ್ಪೆಂಟು[1]ದಿಡ್ಡಿ[1]ಗಳಿ
ನುರುತರೋನ್ನತ ಮಕುಟತೋರಣಂಗಳ್ ಭವ್ಯ
ತರಮಾದ ಪದಿನಾಱುಱುಂ ನಗದ ಬಿಲನಿಚಯದಿಂ ಮಹಾಸ್ಥಾನಂಗಳಿಂ
ವರ ದಿವ್ಯಲಿಂಗಂಗಳಿಂ ಜ್ಯೋತಿಲಿಂಗಂಗ
ಳಿರವಿನಿಂದೆಸೆದಿರ್ಪುದೇಂಕಾರಣಂ ಮಗುಳ್ದು
ನಿರತಮಿಾ ಗಿರಿಪೀಠದಲ್ಲಿ ಮಣಿಲಿಂಗಂಗಳುಂ ರತ್ನಲಿಂಗಂಗಳುಂ ೭

ಕನಕಲಿಂಗಂಗಳುಂ ರಜತಲಿಂಗಂಗಳುಂ
ಘನತಾಮ್ರಲಿಂಗಂಗಳುಂ ಕಾಂಸ್ಯಲಿಂಗಂಗ
ಳೆನಸುಂ ವಿರಾಜಿಸುವ ಲೋಹಲಿಂಗಂಗಳುಂ ಶಶಿಕಾಂತಲಿಂಗಚಯಮುಂ

[1] ವಿಧಿ (ಗ)

ಮಿನುಪ ರವಿಕಾಂತಲಿಂಗಂಗಳುಮುಯುಸ್ಕಾಂತ
ಕನದಮಲಲಿಂಗಂಗಳುಂ ಸ್ವಯಂಭುಗಳೆನಿಪ
ವಿನುತಲಿಂಗಂಗಳುಂ ಪೀಯೂಷಲಿಂಗಂಗಳಿವು ಮುಖ್ಯಲಿಂಗಂಗಳು ೮

ಪಿರಿದಪರಿಮಿತಮೊಳವಿದೇಂಕಾರಣಂ ಮತ್ತೆ
ಸುರದನುಜಮುನಿ ಸಿದ್ಧ ಸಾಧ್ಯಮನುಜರ್ಕಳಿಂ
ದುರಗ ಗಂಧರ್ವ ಗರುಡಪ್ರವರರಿಂ ಪ್ರತಿಷ್ಠಿತಮಾದ ಲಿಂಗಂಗಳು
ಕರಮಗಣಿತಂಗಳೊಳವೀ ಪರ್ವತಕ್ಕಿನಿತು
ಪರಮಸೌಭಾಗ್ಯಮೆಂತೊಸೆದೆಯ್ದಿದತ್ತು ಸರ
ಸಿರುಹಭವ ಶಕ್ರವಿಷ್ಣ್ವಾದಿ ಸನ್ನುತಪರಾಕ್ರಮಶಾಲಿಯೆನಿಸಿ ಮೆಱೆವ ೯

ಉರುಲಿಂಗ ಚಕ್ರವರ್ತಿಗೆ ಶೂಲಿಗೇಗಳುಂ
ವರ ಮಲ್ಲಿಕಾರ್ಜುನನೆನಿಪ್ಪ ಪೆಸರನ್ವರ್ಥ
ಮಿರದದೆಂತಾಯ್ತು ಮತ್ತಾ ಗಿರಿಯೊಳಾವೆಡೆಯೊಳಾವ ಪರ್ವತಮಿರ್ಪುವು
ಪರಮ ತೀರ್ಥಂಗಳಾವೆಡೆಯೊಳಿರ್ಪುವು ನದಿಗ
ಳಿರವಾವ ದಿಕ್ಕಿನೊಳಗಾವ ಸುಸ್ನಾನಂಗ
ಳಿರುತಿರ್ಪುವಾವ ದೆಸೆಗಳೊಳಾವ ಲಿಂಗಕ್ಕೆ ಮಗುಳ್ದಾವಪೂಜೆ ನಿಸದಂ ೧೦

ಫಲಮಾವುದಾವಪುಣ್ಯಂ ಮೋಕ್ಷಮಾವುದತಿ
ಲಲಿತಭೋಗಪದಂಗಳಾವಲೋಕಂ ಸೌಖ್ಯ
ಮಲರ್ಗುವೆಂತೆಂಬಿವುಂ ಮೊದಲಾಗಿ ಸಿರಿಗಿರಿಯ ಪರಮಮಾಹಾತ್ಮ್ಯದಿರವಂ
ನಲಿದು ಕೃಪೆಯಿಂದೆನಗೆ ಪೇಳೆಮೆಂದಡಿಗೆಱಗಿ
ದಲಘು ದೋನಮರಾಜನಂ ನೋಡಿ ಸನ್ಮುದದಿ
ನೊಲವು ಮಿಗೆ ಪಂಡಿತೇಶಂ ಪೇಳ್ದನಾ ಗಿರಿಯ ಮಹಿಮೆಯಂ ಮನದಲಂಪಿಂ ೧೧

ಪಿರಿದನಂತೋರ್ವೈ ಎನಿಪ್ಪ ವೇದಾಳಿಯಿಂ
ಪರಮೇಷ್ಠಿ ಮೊದಲಾದ ಸುರಕದಂಬಂಗಳಿಂ
ಸಿರಿಗಿರಿಯ ಮಹಿಮೆಯಂ ಪೊಗಳ್ವೊಡಳವಲ್ತು ತತ್ಪಿತೃ ಶಿಲಾದಂಗಾದೊಡಂ
ಕರಮಶಕ್ಯಂ ನೀಲಗಳನೊರ್ವನೇ ಬಲ್ಲ
ನುರು ಪರ್ವತಾಧಿಕ್ಯಮಂ ಮುನ್ನೆ ಗಿರಿಜಾತೆ
ಗೊರೆದನೀಶಂ ಶಿವೆಯುದಂ ತನ್ನ ಕುವರಂಗೆ ಪೇಳ್ದಳತಿ ವಿಸ್ತರದೊಳು ೧೨

ಬಳಿಕಾ ಗುಹಂ ಸುರರ್ಗಂ ಮುನಿವಿತಾನಕ್ಕ
ಮಳರ್ದು ಪೇಳ್ದಂ ಪುರಾಣೋಕ್ತಿಯಿಂದಂ ಮಗುಳ್ದು
ಲಲಿತಮಾದಾ ಪುರಾಣಂ ಪೇಳ್ದುದೆಲ್ಲಮಂ ಪೇಳ್ವೊಡೆನಗವಶಕ್ಯವು
ಘಳಿಲನದಱೊಳಗರ್ಬುದಾಂಶಮಂ ವಿರಚಿಪೊಡೆ
ತೊಳಗುವಹಿಪಂಗಾಗದಾದೊಡೆನ್ನಱಿವನಿತ
ನಲಘುಶಿವಕೃಪೆಯಿಂದೆ ಪೇಳ್ದಪೆಂ ಕೇಳ್ ದೋಣಮಯ್ಯ ನೀಂ ಮನದಣಿಗಿನಿಂ ೧೩

ಶರಧಿವೇಷ್ಟಿತಮಹೀಮಂಡಲದೊಳೆಯ್ದೆ ಮು
ನ್ನಿರದಾದಿಗಾದಿಯಾದಾ ಯುಗದೊಳೊಸೆದು ಭಾ
ಸುರ ಶಿಲಾದಂ ಶಿವಂಗುಱಿತು ತಪಮಂ ರಚಿಸೆ ಶಿವನಾ ತಪಕ್ಕೆ ಮೆಚ್ಚಿ
ಹ[1]ರಿಸ[1]ದಿಂ ಮೂವರ್ ಸುತರ ಪಡೆವ ವರವೀಯೆ
ಮರಳಿ ನುಡಿದಂ ಶಿಲಾದಂ ಮಹಾದೇವಗಂ
ಗಿರಿಶ ನೀನಿತ್ತ ಸುತರೊಳಗೊರ್ವನಾದೊಡಂ ನಿನ್ನ ಭಕ್ತಿಯ ಬಿಸುಟ್ಟ ೧೪

ಪಿರಿದುಮುದ್ವೃತ ಬುದ್ಧನುಮಾದೊಡವನ ಸಂ
ಹರಿಪೆನಾಂ [2]ನೀನ[2]ಡ್ಡವಾಯ್ದೊಡದಱಿಂದೆನಗೆ
ಹರಭಕ್ತಿಯುಕ್ತಸುತರಂ ಕುಡುವುದೆನುತೆ ನುಡಿಯಲ್ ಶಂಭು ಮೆಚ್ಚಿ ಬಳಿಕಂ
ಉರುತರ ಶ್ರೀವೃಷಾಧೀಶನಂ ನಿರ್ಮಲನ
ನೆರಡನೆಯ ಶಂಭುವೆನಿಸುವ ಧರ್ಮವಿಗ್ರಹನ
ನರರೆ ಸತ್ಪ್ರಮಥಾಗ್ರಗಣ್ಯನಂ ನಂದಿಕೇಶ್ವರನನತಿಸರ್ವಜ್ಞನಂ ೧೫

ಮಿನುಪಯೋನಿಜನನುನ್ನತ ಕೀರ್ತಿವಂತನಂ
ಸುನಯದಿಂದಗ್ರಸುತನಾಗಿತ್ತನವನೆಯ್ದೆ
ಘನನಂದಿಕೇಶ್ವರಂ ವೀರೋಗ್ರತಪದಿಂದೆ ಶಿವನ ಮೆಚ್ಚಿಸಿ ಬಳಿಕ್ಕಂ
ಮನಸಿಜಹರಂಗೆ ತಾಂ ವಾಹನತ್ವದೊಳೊಂದಿ
ನನಸು ಸರ್ವಜ್ಞತ್ವಮಂ ಪಡೆದು ಸಂತತಂ
ವಿನಯದೆ ವೃಷಾಧೀಶತೆಯೊಳೊಂದಿ [3]ಸೊಕ[3]ವಿರ್ದನತ್ತಲ್ ಶಿಲಾದಮುನಿಗೆ ೧೬

ಎರಡನೆಯ ಸುತನಾದನತಿಪುಣ್ಯವಂತನುರು
ತರ ಸುಜನಪಾಲಕಂ ವಿಖ್ಯಾತಕೀರ್ತಿ ಭಾ
ಸುರ ಶಂಭುಮೂರ್ತಿ ವಿಧ್ವಸ್ತ ವಿನತಾರ್ತಿ ಮಂಗಲಶರೀರಂ ನಿಶ್ಚಲಂ

---

[1] ರುಷ (ಗ) [2] ಖಿನಗ (ಗ) [3] ಸುಖ (ಗ)

ಪರಮ ಲಿಂಗೋತ್ತಮಾಂಗಂ ದಿವ್ಯಚಾರಿತ್ರ
ಸುರುಪಾತಕೌಘಾಪಹಂ ದಿವ್ಯಮುನಿವಾರ
ವರ ಸಾರ್ವಭೌಮಸುನ್ನತಪರ್ವತೇಂದ್ರನೀ ಭೂಮಿ ಪೊಗಳಲ್ ಸಂತತಂ ೧೭

ಭರದಿನಾ ಪರ್ವತೇಂದ್ರಂ ಶಿವನ ಕೃಪೆಯಿಂದೆ
ವರ ತಪಶ್ಚರ್ಯಾಸಮುದ್ಯತಂ ತಾನಾಗಿ
ಪಿರಿದು ಮುನ್ನಿನ ಮುನೀಂದ್ರರ ತಪದ ವರ್ತನೆಯ ನೆನೆದು ಬಳಿಕಿಂತೆಂದನು
ಧರೆಯೊಳಗಜಾದಿ ಜೀವಾನೀಕದೊಳ್ ಕೆಲರು
ಸರಳಜೀವಂಗಳೆಲೆಗಳ ಮೆಲ್ದು ಜೀವಿಸುಗು
ಮಿರದೆ ಪಾರಾವತ ಪ್ರಮುಖ ಖಗಸಮುದಯಂ ಶಿಲೆದಿಂದು ಬರ್ದುಕುತಿರ್ಕುಂ ೧೮

ಕೆಲವು ಸರ್ಪಾದಿಜೀವಂಗಳನಿಲಂಗೊಂಡು
ನಲಿದು ಜೀವಿಸುಗುಂ ಪಿಪೀಲಿಕಾಮುಖ್ಯ ಸ
ಲ್ಲಲಿತ ಜೀವಂಗಳ್ ಕಣಾಶಿಗಳ್ ತಾವಾಗಿ ಜೀವಿಸುತ್ತಿರ್ಕುಮನಿಶಂ
ಜಲಚರೋರ್ವಿಜ ಮುಖ್ಯ ಜೀವರಾಶಿಗಳೆಯ್ದೆ
ಸುಲಭದಿಂ ನೀರ್ಗುಡಿದು ಬರ್ದುಕುಗುಂ ಬಳಿಕಿಂತು
ಲಲಿತ ಪರ್ಣಾದಾನಿಲಾದರ್ ಶಿಲಾದಂ ಕಣಾದ ಪ್ರಮುಖಮುನಿಗಳು ೧೯

ಚರಿಸುವ ತಪೋವರ್ತನಂಗಳತಿ ಭಾರಮೆಂ
ದಿರದವಂ ಬಿಸುಟಧಿಕಮಾದ ಶುಭಮಾದ ಭಾ
ಸುರನಿರಾಹಾರ ಪ್ರಯುಕ್ತದಿಂ ಪಂಚಾಗ್ನಿಮಧ್ಯದೊಳ್ ಶಿವನ ಕುಱಿತು
ವರ ಶರೀರೇಂದ್ರಿಯ ಪ್ರಮುಖವಿಷಯಂದೊಱೆದು
ಸರಳ ವ್ರತಾಚಾರದಿಂದೆ ಸದ್ಭಕ್ತಿಯಿಂ
ತಿರಮಾದ ಶಕ್ತಿಯಿಂದತಿಘೋರತಪಮಂ ನಿಮಿರ್ಚುತ್ತುಮತಿಹರ್ಷದಿಂ ೨೦

ಉರುತರ ಪ್ರಮಥರಿದು ಚಿತ್ರಮೆನೆ ದೇವರ್ಕ
ಳರದಿದಾಶ್ಚರ್ಯಮೆನೆ ದಾನವರ್ ನೋಡಿ ಭಾ
ಸುರವಿಸ್ಮಯಂದಳೆಯೆ ಸನಕಾದಿಗಳ್ ಕಂಡಿದನುಪಮಂ ಎನುತುಮಿರಲು
ನರರೀಕ್ಷಿಸುತ್ತುಮಾವೆಂದುಮಿಂತಪ್ಪುಗ್ರ
ತರತಪಂಗಾಣೆವೆನುತುಂ ಕರಂ ಪೊಗಳುತಿರೆ
ವರ ಪರ್ವತೇಶ್ವರಂ ಸಲೆದಿವ್ಯ ಕೋಟಿವರ್ಷಂಬರಂ ತಪಮಿರ್ದನು ೨೧

ವರ ತಪದ ಪೆಂಪಿಂಗೆ ಧರಣಿ ಕಂಪಿಸೆ ಜಲಧಿ
ಕರಮೆ ಕದಡಲ್ ನಾಡೆ ಜಲಶಯನನಳ್ಕೆ ಸುರು
ಚಿರವಡಬ ವಹ್ನಿ ನೆಱೆ ಪಡಪುಗುಂದಲ್ ದೆಸೆಗಳೊಡೆಯರಳಜಲ್ ಗಗನದಿಂ
ಧರೆಯೊಳುದುರಲ್ ತಾರಗೆಗಳೆಯ್ದೆ ಬಾಸುಗಿಯ
ಕೊರಲಾವಗಂ ಕೊಂಕೆ ದಿಗ್ಗಜಂಗಳನೆತ್ತಿ
ಭರದೆ ಬಿರಿಯಲ್ ವ್ಯೋಮಮವನಿಯೊಳ್ ಬೀಳೆ ತಪದುಗ್ರದಿಂದಂ ಸಂತತಂ ೨೨

ಮಿಸುಪಜಾಂಡೌಘಮದಿರಲ್ ದ್ಯುಮಣಿ ಕರ್ಪಾಗೆ
ನಸಿದು ಪೋಗಲ್ ಕಮಠನವನಿಯಂ ಪೊತ್ತು ರಾ
ಜಿಸುವದ್ರಿಗಳ್ ಜರಿಯೆ ದಿಕ್ಕುಗಳ್ ದೆಸೆಗಿಡಲ್ ತತ್ತಪಸ್ಸಿಂಗೆ ಮೆಚ್ಚಿ
ಕುಸುಮಶರಹರ ಶಿವಂ ಪ್ರತ್ಯಕ್ಷನಾಗಿ ಸಂ
ತಸದೆ ನುಡಿದಂ ಪರ್ವತಂಗೆ ನೀನಸವಸದಿ
ನೊಸೆದು ಮಾಳ್ಪುಗ್ರಭಾಸುರ ತಪಃಫಲವೀವೆನಳ್ತಿಯಿಂ ಬೇಡು ನಿಸದಂ ೨೩

ಎನೆ ಪರ್ವತೇಶ್ವರಂ ಭಕ್ತಿಯಿಂದಂ ಶಿವನ
ಮಿನುಗುವಡಿದಾವರೆಗೆ ವಂದಿಸುತೆ ವೈ[1]ನವಿರ್[1]
ನನಸು ಪೊಱಪೊಣ್ಮಿಯಂಗದೊಳೆಯ್ದೆ ಗದ್ಗದಂ ಕೊರಲೊಳುಣ್ಮಲ್ ಕಣ್ಗಳಿಂ
ಎನಸುಮಾನಂದಾಶ್ರುಗಳ್ ಸುರಿಯೆ ಸಂತಸದೊ
ಳೆನಿಸು ಮೈಮಱೆದು ಮಗುಳ್ದೆಚ್ಚತ್ತು ಸರ್ವೇಶ
ಮನಸಿಜಾಂತಕ ಕೃಪಾಶರನಿಧಿಯೆ ಶಂಕರನೆ ಭಕ್ತೇಷ್ಟಫಲದಾತೃವೆ ೨೪

ಎನುತೆ ನುತಿಸುತೆ ಜೀಯ ಭಕ್ತಜನ ಚಿತ್ತನವ
ವನಜ ಶಯ್ಯಾಶರಣ ಸಮುದಯ ಪರಿತ್ರಾಣ
ವಿನುತಪ್ರವೀಣ ಕರುಣಾರಸಾಸ್ಪದನಯನಕೋಣ ಜಿತಪುಷ್ಪಬಾಣ
ಮಿನುಗುವಾಮ್ನಾಯಾಂತ ವೇದ್ಯವೇದಾಭೇದ್ಯ
ನನಸು ಸಂಸಾರರುಗ್ವೈದ್ಯ ಬಿನ್ನಪಮೆನುತೆ
ಘನತರ ಶ್ರೀಪರ್ವತಾಷ್ಟಕಸ್ತುತಿಯಿಂದೆ ಪೊಗಳುತ್ತೆ ಪರ್ವತೇಂದ್ರಂ ೨೫

ಹ[2]ರಿಸ[2]ದಿಂದೀ ಪರ್ವತಾಷ್ಟಕಮನಾವಗಂ
ಭರದೆ ಪಠಿಪರ್ಗಭೀಷ್ಟಾರ್ಥಂಗಳಂ ಕುಡುವು
ದುರು ಕೃಪಾಪಾಂಗ ಸಜ್ಜನ ಕಮಲಭೃಂಗ ಮತ್ತೆನಗೆ ಮನವೊಸೆದು ನೀನು

---

[1] ಗದಿಳ್ (ಗ) [2] ರುಷ (ಗ)

ಪಿರಿದೀವ ವರಮಾವುದೆಂದೊಡುಸುರ್ವೆಂ ಕೇಳ
ಪುರಹರನೆ ಎನಗೆ ಪರ್ವತನೆಂಬ ಪೆಸರೆಯ್ದೆ
ಪರಮಾರ್ಥಮಪ್ಪಂತೆ ಪರ್ವತಾಕಾರಮಂ ಧರಿಸಿಯಾಸಿರಲೆನ್ನಯ ೧೬

ಶಿರದಗ್ರದೊಳಗೊಲ್ದು ನೀಂ ಮೂರ್ತಿಗೊಂಡಿರ್ಪು
ದುರುದಿವ್ಯಲಿಂಗಾಂಗ ಶಂಕರನೆ ನೀಂ ಮುನ್ನೆ
ಹರಿಸುರ ಜ್ಯೇಷ್ಠಾದಿಗಳ್ ಸೇವಿಸುತ್ತುಮಿರೆ ಮನದಲಂಪಿಂದೆ ಸತತಂ
ಸುರಗಿರಿಯೊಳಿರ್ಪಿರವನೊಲ್ಲೆನಾಂ ಮತ್ತೆ ನೀಂ
ವರ ಗಣರ್ವೆರಸು ಕೈಲಾಸಾದ್ರಿಯೊಳ್ ನಾಡೆ
ಹ[1]ರಿಸ[1]ದಿಂ [2]ಕ್ರೀ[2]ಡಿಸುತ್ತಿರ್ಪಿರವನೊಲ್ಲೆನಾಂ ಶಶಿಧರಾ ಮತ್ತೆ ನೀನು ೧೭

ಸುರಕದಂಬಂಬೆರಸಿ ಮಂದರಾಚಲದೊಳಿ
ರ್ಪಿರವನೊಲ್ಲೆಂ ಶ್ರುತಿಯಣೋರಣೀಯಾ[3]ನೆಂ[3]ದು
ಭರದೆ ನುಡಿದಂತೆಲ್ಲ ಜೀವರೊಳಗಿರ್ಪಿರವನೊಲ್ಲೆನಾಂ ವೇದತತಿಯ
ಶಿರದೊ[4]ಳೀ[4]ಗಳ್ ನೀನೆ ಸೂಕ್ಷ್ಮರೂಪದೊಳೆಸೆದು
ಭರದಿನೊಪ್ಪಿರ್ಪನೆಂಬೀ ಮಾರ್ಗದಿರವೊಲ್ಲೆ
ನುರು ಸನಕಮುಖ್ಯಯೋಗಿಗಳ ಚಿತ್ತದೊಳಿರ್ಪ ತೆಱನನೊಲ್ಲೆಂ ಸಂತತಂ ೧೮

ಮಿಗೆ ಮಹಾಶೈವನಿಷ್ಠೆಯೊಳೆ ರಾಜಿಸುತಿರ್ಪ
ನೆಗಳ್ದ ಗೌತಮಮುಖ್ಯಮುನಿವರರ ಸೆಜ್ಜೆಯೊಳ
ಗಗಲದಿರ್ಪಿರವನೊಲ್ಲೆಂ ಪಾಶುಪತ ಮಹಾವ್ರತಚರ್ಯರಾಗಿ ಮಿನುಪ
ಸೊಗಯಿಸುವಗಸ್ತ್ಯಾದಿಗಳ ಸೆಜ್ಜೆಯೊಳಗೆ ತೊ
ಟ್ಟಗೆ ತೋಱುವಿರವನೊಲ್ಲೆಂ ವಶಿಷ್ಠಾದಿಗಳ್
ಮೊಗಸಿ ಸೆಜ್ಜೆಯೊಳಿಟ್ಟುಕೊಂಡಿರ್ಪ ತೆಱನನೊಲ್ಲೆಂ ಮತ್ತೆಯುಂ ಭಾವಿಸೆ ೧೯

ಪುರುಹೂತ ಮುಖ್ಯಾಷ್ಟದಿಕ್ಪತಿಗಳೆಲ್ಲರುಂ
ಪರಮೇಷ್ಠಿ ವಿಷ್ಣ್ವಾದಿ ಸುರಕದಂಬಂ ನಲಿದು
ಭರದೆ ಸೆಜ್ಜೆಗಳೊಳೊಲ್ದೀಗಳುಂ ತಾಳ್ದಂದಮಂ ಪರಿಕಿಸೆಂ ಶಂಕರ
ಹ[5]ರಿಸ[5]ದಿಂದೆನ್ನ ಮಸ್ತಕಪೀಠದಲ್ಲಿ ನೀಂ
ಕರಮೆ ಲಿಂಗಾಂಗದೊಡಗೂಡಿ ಭಾಸುರಮಾಗಿ
ನಿರುತದಿಂದಂ ಸ್ವಯಂಭೂಲಿಂಗಮೂರ್ತಿಯಿಂ ನೆಲಸಿರಲ್ವೇಳ್ಕು ಸತತಂ ೨೦

---

1 ರುಷ (ಗ)  2 ಪೀ (ಕ)  3 ಯೆಂ (ಗ)  4 ಳೀ (ಗ)  5 ರುಷ (ಗ)

ಸ್ಫುರಿತ ನಿತ್ಯನೆಯೆಂದು ಬಿನ್ನೈಸುತುಂ ಮತ್ತೆ
ಭರದಿನವಿನಾಭಾವ ಸಂಬಂಧದಿಂದ ನಾಂ
ಕರವೆ ನಿನ್ನೊಳಗಿರ್ಪುದಂ ಕರುಣಿಸೆನಗೆನುತೆ ಮತ್ತಮಾ ವೇದವೊಂದು
ಹ[1]ರಿಸ[1]ದಿಂ ಸರ್ವತಃ ಪಾಣಿಪಾದಾಂತವೆನು
ತಿರದೆ ನುಡಿದಂತೆ ಮದ್ದೇಹವೆಲ್ಲಂ ನಿನ್ನ
ಕರಚರಣಮಾಗಿ ತೋರ್ಪಂತೆ ಕರುಣಿಪುದೆನುತೆ ಮತ್ತಮಿಂತೆಂದು ನುಡಿದಂ ೩೧

ಸಲೆ ಯಥಾ ರಾಜಾ ತಥಾ ಪ್ರಜಾಃ ಎಂದು ಸ
ಲ್ಲಲಿತ ವಾಕ್ಯಂ ನುಡಿದ ತೆಱದಿ ನಾಂ ಗಿರಿರೂಪ
ನೊಲವಿನಿಂ ತಾಳ್ದಿರಲ್ ನೀನೆನ್ನ ಶಿರದೊಳಗೆ ಮೂರ್ತಿಗೊಂಡಿರಲೆನ್ನಯು
ಲಲಿತಾಂಗನಿಚಯುವೆಲ್ಲಂ ಕಣ್ಗಳಾಗಿ ಮ
ತ್ತಲದರ್ಱ ನಿನ್ನಂ ನೋಡಲೆನ್ನಂಗವೆಲ್ಲವುಂ
ಸುಲಲಿತ ಶ್ರೋತ್ರಂಗಳಾಗಿ ನಿನ್ನಂ ಕೇಳಲೆನ್ನಂಗವೆಲ್ಲಮನಿಶಂ ೩೨

ಕರವೆ ಜಿಹ್ವೆಗಳಾಗಿ ನಿನ್ನ ನುತಿಯಿಸಲೆನ್ನ
ಶರಿರವೆಲ್ಲಂ ಕಣ್ಗಳಾಗಿ ನಿನ್ನರ್ಚಿಸಲ್
ನಿರುತದಿಂದೆನ್ನಂಗವೆಲ್ಲವುಂ ಚಿತ್ತಂಗಳಾಗಿ ನಿನ್ನಂ ನೆನೆಯಲು
ಭರದಿನಾಟಂದು ಲಟಲಟಪಂತೆ ಮಾಡು ಮ
ತ್ತಿರದೆ ನಿನ್ನಯ ಭೃತ್ಯ ನಾನೆಂಬ ವರವೀವು
ದುರುತರಾದ್ವೈತವಂ ಪೊರ್ದಲೀಯದೆ ನಿನ್ನ ಸದ್ಭಕ್ತಿಯಂ ಕುಡುವುದು ೩೩

ಭರದೆ ರಕ್ಷಿಸು ಶಿಕ್ಷಿಸೆನ್ನ ನಿನ್ನಯ ಭೃತ್ಯ
ರಿರವಿನಂದದೆ ಮತ್ತೆ ಕೈಲಾಸವೈನಾಕ
ಗಿರಿಶುಕ್ತಿವಂ ನೀಲಪರ್ವತಂಗಳ್ ಶ್ವೇತಪರ್ವತಂ ತುಹಿನನಗವು
ವರಗೌರಿ ಮಾಣಿಕ್ಯಮಾಹೇಂದ್ರ ಸಾರಂಗ
ಗಿರಿಗಳ್ ವಿಶಾಲೋದಯಂ ಗಂಧಮಾದನಂ
ಮರಳಿ ವಜ್ರಾಗ್ರಕಲ್ಯಾಣ [2]ಸಹ್ಯಾ[2]ದ್ರಿಗಳ್ ಮಾಲ್ಯವಂತಂ ಕುಂಜರಂ ೩೪

ಎನಿಪಿವುಂ ಮೊದಲಾದ ಗಿರಿವರಂಗಳ್ ಮತ್ತೆ
ಮಿನುಪ ಭಾಗೀರಥೀಗಂಗೆಗಳ್ ಗಾಂಧಾರಿ
ನೆನಸು ಸರಸತಿ ತುಂಗಭದ್ರೆ ಕೌಶಿಕಿ ವರುಣೆ ನಂದೆ ನರ್ಮದೆ ಜಗುನೆಯುಂ

---

1 ರುಷ (ಗ) 2 ಸಿಂಹಾ (ಗ)

ಕೊನರ್ವ ಸೌಗಂಧಿಕಾಪಂಜರಾಮರಿಗಳುಱಿ
ಅನಘ ಗಂಗಾವತೀ ಕೃಷ್ಣವೇಣೀ ನದಿಗ
ಳಿನಸುಮಾ ಕಾವೇರಿ ಮೊದಲಾದ ಪುಣ್ಯತೀರ್ಥಾನೀಕಮೆಲ್ಲಮೊಸೆದು ೩೫

ಹರಿಸ[1]ದಿಂದೆನ್ನಲ್ಲಿಯೇ ತಮ್ಮ ರೂಪದಿಂ
ದಿರವೇಳ್ಕು ಮತ್ತೆಯುಂ ಬ್ರಾಹ್ಮಣ ಕ್ಷತ್ರಿಯರ್
ವರ ವೈಶ್ಯ ಶೂದ್ರರಕುಲೀನರ್ ಕುಲೀನರ್ಕಳಾದಿಯಾದೆಲ್ಲ ನರರು
ಭರದೆ ಮದ್ಗಿರಿಯನಂಟಿದರಾದೊಡವರ ದು
ರ್ಧರ ಪೂರ್ವಜನ್ಮಕೃತ ದುಷ್ಕರ್ಮಸಂದೋಹ
ಮಿರದಳಿದುಪೋಪಂತೆಮಾಡಿ ಮತ್ತವರಿಷ್ಟಸಿದ್ಧಿಯಂ ಸಲಿಪುದಭವ ೩೬

ಇನಿತುವರಮಲ್ಲದಾನೊಂದುವರಮಂ ಬೇಡೆ
ನೆನುತೆ ಸಲೆ ಮೂರ್ಸೊಳೆದಂ ನುಡಿದು ಶಿವನಿಂದ
ಮಃನಘ ಪರ್ವತಮುನಿಪನನುಲತರ ಪರ್ವತಾಕಾರಮಂ ಪಡೆದನೊಸೆದು
ಮಿನುಗುವಾ ಪರ್ವತೋತ್ತುಂಗ ಶೃಂಗಾಗ್ರಮಂ
ಬನುಪಮೋತ್ತಮ ಶಿರಃಪೀಠದೊಳ್ ಶಂಕರಂ
ಮನಮೊಸೆದು ಶ್ರೀಸ್ವಯಂಭೂಲಿಂಗಮೂರ್ತಿಯಂ ತಾಳ್ದಿರ್ದನೆಂತೆಂದೊಡೆ ೩೭

ಪಡಪಿನಿಂ ಶ್ರೀಶೈಲಭರ್ಮಹರ್ಮ್ಯಾಗ್ರದೊಳ್
ಕಡುಮೆಱೆವ ಮಾಣಿಕ್ಯಕಲಶದಂದದೆ ನಾಡೆ
ಸಡಗರದೆ ತದ್ದಿವ್ಯಲಿಂಗಾಂಗವೊಪ್ಪಿತ್ತು ತಚ್ಛೃಂಗ ಮಧ್ಯದಲ್ಲಿ
ಕಡುಪಿನಿಂದಾ ವೇಳೆಯೊಳ್ ದೇವದುಂದುಭಿಗ
ಳೊಡನೊಡನೆ ಮೊಳಗಿದುವು ಪುಷ್ಪವೃಷ್ಟಿಗಳೊಸೆದು
ಬಿಡದೆ ಸುರಿದುವು ಶಿವಂ ನೆನೆಸಲಾ ಕಾಲದೊಳ್ ಶಿವನೊಡನೆ ಧರೆಯೊಳಿರ್ಪ ೩೮

ವರ ಪುಣ್ಯತೀರ್ಥಂಗಳುಂ ಪುಣ್ಯನದಿಗಳುಂ
ಕರಮೆಸೆವ ಪುಣ್ಯಲೋಕಂಗಳುಂ ಪುಣ್ಯಮಾ
ದುರುತರಸ್ಥಾನಂಗಳುಂ ಪುಣ್ಯಮಾರ್ಗಂಗಳುರುಪುಣ್ಯಶೈಲಂಗಳು
ನಿರುತಮಾ ಪುಣ್ಯಕಾಸಾರಂಗಳುಂ ಪುಣ್ಯ .
ತರ ವನಂಗಳ್ ಪುಣ್ಯದಿವ್ಯೌಷಧಂಗಳುಂ
ಭರದಿನಿವು ಮೊದಲಾದ ಪುಣ್ಯವಸ್ತುಗಳೆಲ್ಲ ತದ್ಗಿರಿಯನೆಯ್ದಿರ್ದುವು ೩೯

---

1 ರುಷ (ಗ)

ಹ[1]ರಿಸ[1]ದಿಂದೆಯ್ದಿದರ್ ಪ್ರಮಥರ್ಕಳೆನಗೆ ಸೌಂ
ದರಕರ ಕ್ರೀಡಾದ್ರಿ[2]ಯಿ[2] ಗಿರಿಯೆನುತ್ತೆ ಸುರು
ಚಿರತರ ಪ್ರತ್ಯಕ್ಷಕೈಲಾಸವೆಮಗಿದೇ ಎನುತೆ ರುದ್ರಗಣಾಳಿಯುಂ
ಕರವೊಸೆದು ನೆಲಸಿರ್ಪುದೀ ಗಿರಿಯೆ ಸುಸ್ಥಲಂ
ಹರಪೂಜೆಗೆಯ್ವುದರ್ಕೆನುತೆ ಸುರಸಂದೋಹ
ಮಿರದಿಲ್ಲಿ ವಸಿಸಿರ್ಕುಮಸುರರೊಸೆದೀ[3]ಶ[3]ನಂ ಪೂಜಿಸುತ್ತಿಲ್ಲಿರ್ಪರು ೪೦

ಮಿಗೆ ಪರ್ವತನ ಕೃಪಾವಶದಿನೀ ಗಿರಿಯಲ್ಲಿ
ಸೊಗಸಿನಿಂ ಶಂಭುಸೇವೆಯನೊಡರ್ಚುತ್ತೆ ಕೊ
ಟ್ಟಗೆಯಿರ್ಪೆವೆಂದು ಪರ್ವತನ ನುತಿಸುತ್ತೆ ವಿಷ್ಣುಪ್ರಭೃತಿಯಿಲ್ಲಿ[4]ರ್ಪರು[4]
ನೆಗಳ್ದ ಗಂಗಾಸಂಗಮವನಿಲ್ಲಿ ಕಂಡೆವೆಂ
ದಗಲದೆಲ್ಲಾ ನರರ್ ತುತಿಸುತಿರೆ ಜಪತಪ
ಕ್ಕೊಗೆದ ತಾಣವಿದೆಮಗೆ ತಾನೆಂದು ಮುನಿಗಳಳ್ತಿ[5]ಯಿನಿ[5]ರ್ಪರಿಲ್ಲಿ ಸತತಂ ೪೧

ಪಿರಿದಿಷ್ಟಸಿದ್ಧಿಗಳ್ ಸಿದ್ಧಿಸುಗುಮಿಲ್ಲಿಯೇ
ನಿರುತಮೆನುತುಂ ಸಿದ್ಧಸಾಧ್ಯರ್ಕಳಿಲ್ಲಿರ್ಪ
ರರರೆ ಗಂಧರ್ವ ಗರುಡಾಳಿ ಕಿಂಪುರುಷನಿಕರಂ ನೋಡಿ ಸಂತಸದೊಳು
ಕರಮೆ ಜಲವನವಿಹಾರಕ್ಕಿದೇ ತಾಣಮೆಂ
ದುರುಮೋದದಿಂದಿಲ್ಲಿ ದಂಪತಿಗಳೊಡಗೂಡಿ
[6]ತು[6]ರಿತದಿಂದಂ ಬಂದು ವಿಹರಿಸುತ್ತಿರ್ಕುಮನಿಶಂ ಮನಂ ಮಿಗೆ ನಲಿಯುತೆ ೪೨

ಪಡಪಿನಿಂದೀ ಗಿರಿಯ ನೋಡಿದಾಗಳ್ ತಮಗೆ
ಬಿಡದೆ ಕೈಸಾರ್ಗುಮಪವರ್ಗಮೆನುತುಂ ಮುದದೆ
ನುಡಿಯುತೆ ಮುಮುಕ್ಷುಜನಮಿಲ್ಲಿರ್ಪುದಾವಗಂ ಚಿತ್ರಮಾಗೀ ಶೈಲವು
ಮೃಡನ ಧರಿಸಿತ್ತೆಂದು ಭಕ್ತತತಿ ಕೊಂಡಾಡೆ
ಸಡಗರದೆ ಕಣ್ವೋಪಮನ್ಯು ಗೌತಮಮುಖ್ಯ
ರುಡುನಾಥಜೂಟ ಸತ್ಪ್ರಮಥರ್ಗೆ ತತ್ಪ್ರಮಥಪದವಿಗಳನಿತ್ತೆ ಮುದದಿಂ ೪೩

ವಿದಿತ ರುದ್ರರ್ಗೆ ನಿಜರುದ್ರಪದಮಂ ಬ್ರಹ್ಮ
ಪದಮನಾ ಬ್ರಹ್ಮಂಗೆ ವಿಷ್ಣುತ್ವಮಂ ಹರಿಗೆ
ಮುದದಿನಿಂದ್ರಾಗ್ನಿಯಮ ದನುಜ ವರುಣ ಸ್ಪರ್ಶನೈಕ ಪಿಂಗಾದಿಗಳ್ಗೆ

---

[1] ಋಷ (ಗ) [2] ಯಾ (ಗ) [3] ತ (ಕ) [4] ರ್ಪುದು (ಗ) [5] ಯೊಳಿ (ಗ)
[6] ತ್ವ (ಕ)

ಪದಪಿನಿಂ ದಿಕ್ಪಾಲಕತ್ವಮನವರ್ಗಿ[1]ತ್ತ।
ತ್ರಿದಶದಾನವ ಗರುಡಮುಖ್ಯರ್ಗೆ ತಂತಮ್ಮ
ಪದವಿಗಳನಿತ್ತ್ರೈ ಮಹಾದೇವ ಮತ್ತಮಿಾ ಪರ್ವತಮುನೀಶ್ವರನನು ೪೪

ಮನುಪ ನಿನ್ನಯ ಕೃಪಾವಾರಿಧಿಯೊ[2]ಳಿಲ್ದ[3] ತೊ
ಟ್ಟನೆ ಅವನ ಶಿರಮೆಂಬ ಪೀಠದೊಳ್ ನೀನೊಲ್ದು
ವಿನಯದಿಂ ಪ್ರತ್ಯಕ್ಷಲಿಂಗರೂಪದಿನಿರ್ದೆಯಿಾ ವರಮನೆಯ್ದೆ ಮುನ್ನೆ
ಮನವೊಸೆದು ಪಡೆದನಾವ್ಪೊಂ ಶಂಭುಶಂಕರಾ
ಕನದಮಲ ವೀರೇಶನೊರ್ವನೇ ನಿನ್ನಂಶ
ನೆನಿಸಿ ತನ್ನುತ್ತಮಾಂಗದೊಳೆ ನಿನ್ನಂ ಭಕ್ತಿಯಿಂ ತಾಳ್ದನನವರತವು ೪೫

ಪರಿಕಿಪೊಡೆ ತದ್ವೀರಭದ್ರನೊಲ್ದಾವಗಂ
ಶಿರವೊಂದಱೊಳೆ ನಿನ್ನ ಧರಿಸಿದಂ ಮತ್ತಮಿಾ
ವರ ಪರ್ವತೇಂದ್ರಾಂಗವೆಲ್ಲಮುಂ ಲಿಂಗದಾಕೃತಿಯಾಯ್ತು ಧರೆಯೊಳನಿಶಂ
ಉರು ಪೀಠಮಿದು ಲಿಂಗಮಿದು ನಿಕ್ಕುವಂ ಎಂದು
ಪಿರಿದು ಭೇದಿಪೊಡಾರ್ಗಮಳವಲ್ತು ತನ್ಮನಿಯು
ಪರಮದೇಹಂ ಪರ್ವತಂ ತದಗ್ರಮೆ ಪೀಠಮದೆ ಶಿ[3]ವೋ[3]ತ್ಪತ್ತಿಭೂಮಿ ೪೬

ನಿರುತಮಾ ಲಿಂಗಮೇ ಸನ್ಮೋಕ್ಷಫಲದಾತೃ
ವರ ಪರ್ವತನೆ ಮುನಿಶ್ರೇಷ್ಠಮಂತೆವೊಲೆಯ್ದೆ
ಪರಮಪರ್ವತ[4]ನೆ[4] ಶಿವಪೀಠಮಾ ಪರ್ವ[5]ತನೆ[5] ತಲ್ಲಿಂಗ ರೂಪನಪ್ಪಂ
ಸುರುಚಿರ ಪ್ರಮಥಾಧಿಪತಿ ಪರ್ವತಂ ನೋಡೆ
ಸರಳಮೋಕ್ಷಮನೀವನವನಿಯೊಳ್ ತನ್ನನುರು
ತರಭಕ್ತಿಯಿಂ ನೋಡಿದರ್ಗಣಿಯರಂ ಪರ್ವತೇಶ್ವರಂ ಪ್ರೀತಿಯಿಂದಂ ೪೭

ಮಿಗೆ ಜಗತ್ಪಾವನಶರೀರನೀ ಪರ್ವತಂ
ಮೃಗಧರಾಂಛಿತಜೂಟ ಸದ್ಭ[6]ಕ್ತಿ[6]ಶಿಖರನೀ
ಸೊಗಯಿಸುವ ಪರ್ವತಂ ಮುನ್ನಿವನ ಪಾಂಗಿನಿಂದೀ ವರಂಬಡೆದರೊಳರೆ
ನೆಗಳ್ದ ಮುನಿಗಳ್ ತಮ್ಮ ಶಕ್ತಿಗನುಸಾರದಿಂ
ಬಗೆದು ಪೂಜಿಸಿ ಪಡೆದರಿಲ್ಲ ನಿಸ್ಪೃಹರಿಂತು
ತಗುಳ್ದು ಪಡೆದವರಿಲ್ಲ ಕಾಮುಕರ್ ಕಾಮಿಸುತೆ ಪಡೆದರಿಲ್ಲೀ ಧರೆಯೊಳು ೪೮

---

[1] ತ್ತಿ (ಕ) [2] ಳಾಳ್ದ (ಕ) [3] ರೋ (ಗ) [4] ಮೆ (ಕಗ) [5] ತೇ (ಗ) [6] ಕ್ತ (ಕ)

ಶರಣರುಂ ಪ್ರಮಥರುಂ ಮುಖ್ಯಮಾದೆಲ್ಲರುಂ
ಹರನೆ ನಿನ್ನಂ ಭಜಿಸಿ ಪಡೆದರೇ ಇಂತಪ್ಪ
ಪರಮಪದವಿಯನಂದು ತನ್ನ ನೇತ್ರಂಗಳಿತ್ತು ನಿನ್ನಂಘ್ರಿಗಳ್ತ್ತು ಮುದದಿಂ
ಹರಿ ಚಕ್ರವಂ ಪಡೆದನಸುರವಧೆಗಾಗಿ ತ
ನ್ನುರು ಶಿರಂಗೊಟ್ಟು ನಿನಗಳ್ತಿಯಿಂ ಪರಶುವಂ
ಪರಶುರಾಮಂ ಪಡೆದನವನಿಪರನುಱ್ಱು ಪಡಲ್ವಡಿಪೆನೆಂದನವರತವು ೪೯

ಸುರರ ವಧೆಗಾಗಿ ಮತ್ತಾ ರಾವಣಂ ಭಕ್ತಿ
ಭರದಿಂ ಶಿರಂಗಳಂ ತಱಿದು ನಿನಗಿತ್ತು ಭಾ
ಸುರ ಚಂದ್ರಹಾಸಮಂ ಪಡೆದನಾ ಪಾರ್ಥನತಿತಪದಿಂದೆ ನಿನ್ನ ಮನಮಂ
ಕರಮೆ ಮೆಚ್ಚಿಸಿ ಬಾಂಧವರ್ಕಳಂ ಕೊಲ್ವುದ
ರ್ಕರರೆ ಪಾಶುಪತಾಸ್ತ್ರಮಂ ಪಡೆದನವನಿಯೊಳ್
ಪಿರಿದಿವರ್ ಮೊದಲಾದರೆಲ್ಲರುಂ ಸ್ವಾರ್ಥಕ್ಕೆ ತಕ್ಕ ವರವಂ ಪಡೆದರು ೫೦

ಮಿನುಗುವೀ ಪರ್ವತಂ ಲೋಕಕ್ಕೆ ಹಿತಮಾಗಿ
ವಿನಯದಿಂ ನಿಮಗೆ ತನ್ನಂ ಕೊಟ್ಟು ತನ್ನನುಱ್ಱು
ಸನಯದಿಂ ಕಂಡರ್ಗೆ ಮುಕ್ತಿಯಂ ಕೊಡುವ ವರವಂ ಪಡೆದನೀ ಧರೆಯೊಳು
ನನಸು ತಪದಿಂ ನಿನ್ನ ಭಜಿಸಿ ಮತ್ತಾ ಗಿರಿಜೆ
ಯನುವಿನಿಂದಂ ನಿನ್ನ ದೇಹಾರ್ಧಮಂ ಪಡೆದ
ಳೆನಸುಮಿಾ ಪರ್ವತಂ ಸರ್ವಾಂಗಲಿಂಗಮಯನಾದನೀ ಭೂಮಿಯೊಳಗೆ ೫೧

ಪಿರಿದುಂ ಸನತ್ಕುಮಾರಂ ಬ್ರಹ್ಮಸೂನು ಮ
ತ್ತುರುತರಾದ್ವೈತಬುದ್ಧಿಯಿನುಪ್ಪನಾದನೀ
ವರ ಶಿಲಾದಜಪರ್ವತಂ ಭಕ್ತಕಾಯೋ ಎನುತ್ತೆ ಮಮಕಾಯ ಎನುತಮಂ
ಪರಮವಾಕ್ಯಂ ಪೇಳ್ದ ತೆಱದೆ ನಿನಗೇಗಳುಂ
ಸರಳಪೀಠಂ ದಲೆನಿಸೊಪ್ಪಿದಂ ನಿನ್ನ ಕೃಪೆ
ಯಿರವಿನಿಂ ಸರ್ವೇಶ [1]ಶಂಕರಾ[1] ಶಶಿಜೂಟ ಮತ್ತುಳಿದ ಮುನಿನಿಕರವು ೫೨

ವರ ತಪಂಗಳ ಬಿಸುಟ್ಟನ್ಯದೈವದ ಸೇವೆ
ಯಿರವಿನಿಂದನ್ಯಜಪಲೋಲುಪತ್ವದೆ ಮತ್ತೆ
ಕರಮೆ ಜಡಬುದ್ಧಿಯಿಂ ಕೆಟ್ಟುದರೆಬರ್ ಜತಿಗಳಂಗನಾದೃಷ್ಟಿಹತಿಯಿಂ

---

[1] ಶೇಖರಾ (ಗ)

ಭರದೆ ಕೆಟ್ಟರ್ ಮಿಕ್ಕ ಧಾರ್ಮಿಕರ್ ಮುನಿಗಳುೞಿ
ಪಿರಿದುಮದ್ವೈತವಿಷಯದಿನಿಂತು ಪಲಕೆಲರ್
ಸರಳತಪಮಂ-ರಚಿಸಿ ನಿಮ್ಮನಱಿಯದೆ ಕೆಟ್ಟರೀ ಧರಣಿಯೊಳ್ ನಿಕ್ಕುವಂ ೫೩

ಮಿಗೆ ವಿಕಲ್ಪಂಗಳಿಂ ವಿಘ್ನಂಗಳಿಂದೆ ತೊ
ಟ್ಟಗೆ ದುರಾಶೆಗಳಿಂದಕಾರ್ಯಂಗಳಿಂದೆ ಸೊಂ
ಪೊಗೆವ ವಿಷಯದ ಗರ್ವದಿಂದಪಾಯಂಗಳಿಂ ಕಾಮಸಮುದಾಯಂಗಳಿಂ
ನೆಗಳ್ದಿವುಂ ಮುಖ್ಯಂಗಳಿಂ ತಪಸ್ಸಿಂಗೆ ಕೆ
ಮ್ಮಗೆ ನಿರೋಧಂಮಾಡದುರುಬುದ್ಧಿನಿಕರದಿಂ
ದಗಲದೆಸೆದಿರ್ಪ ಶಿವಪಾದಪಂಕೇಜಸದ್ಭಕ್ತಿಸಂದೋಹಂಗಳಿಂ ೫೪

ಮಿಗೆ ನಿಷ್ಠೆಯಿಂ ನಿನ್ನ ಸಂತುಷ್ಟನಂ ಮಾಡಿ
ಸೊಗಸುವೀ ಪರ್ವತಮುನೀಂದ್ರನೊರ್ವನೆ ನಾಡೆ
ಬಗೆಯೆ ಕಡು[1]ಹೊ[1]ನ್ಯವಂತಂ ನೋಡಲಿಂತಪ್ಪ ಸುತನ ಪಡೆದಿಳೆಯೊಳೆಸೆವ
ಸುಗುಣಂ ಶಿಲಾದಮುನಿಪಂ ತಾನದೆಂತಪ್ಪ
ನೆಗಳ್ದ ಪುಣ್ಯಸ್ವರೂಪನೊ ತನುಜನಂ ಪಡೆವೊ
ಡೊಗೆಯುವೇಡಾ ಧರೆಯೊಳೀ ಪರ್ವತೇಂದ್ರನಂತಪ್ಪ ಸುಕುಮಾರನೊಸೆದು ೫೫

ಕಡುತಪಂಗೆಯ್ದು ಋಗನಂ ಮಹಾದೇವನಿಂ
ಪಡೆವೊಡಿಂತಪ್ಪನಂ ಕೂಸನುೞಿ ಪಡೆಯದೊಡೆ
ಪೊಡವಿಯೊಳ್ ನಾಣಿಲಿತನಕ್ಕೆ ಪಕ್ಕಾಗರೇ ಪರಮೇಶ ಮುನ್ನೆ ನಿನ್ನಂ
ಸಡಗರಂ ಮಿಗೆ ತಪದೊಳೊಲಿಸಿ ಭೃಗುಮುನಿಪನು
ಗ್ಗಡದ ಶುಕ್ರನೆನಿಪ್ಪ ತನುಜನಂ ಪಡೆದನಾ
ಪೊಡೆಯಲರನಂದು ಮೇಘಾಕಾರನಾಗಿ ನಿಮ್ಮಂ ತಳೆದು ಭಕ್ತಿಯಿಂದಂ ೫೬

ಹರವೆ ಮೆಚ್ಚಿಸಿ ಸಾಂಬನೆಂಬ ಮಗನಂ ಪಡೆದ
ನುರುತಪಂಗೆಯ್ದುಬ್ಜಜಂ ನಿಮ್ಮ ಕೃಪೆಯಿಂದೆ
ಪಿರಿದಧೋಕ್ಷಜನೆಂಬ ಸೂನುವಂ ಪಡೆದನಾ ವಿಷ್ಣು ನಿಮ್ಮಂ ಸೇವಿಸಿ
ಹ[2]ರಿಸ[2]ದಿಂದಜನ ಪೆತ್ತಂ ತನುಜನಾಗಿ ಮ
ತ್ತಿರದಿವಂದಿರ್ ತಪಮನೆಂತೆಸಗಿದರೊ ತಮಗೆ
ವರ ಸುತರನೆಂತಪ್ಪರಂ ಪಡೆದರೋ ಧರೆಯೊಳತಿಘೋರತಪಮೊಡರ್ಚೆ ೫೭

---

1 ಮಾ (ಗ) 2 ರುಷ (ಗ)

ಅವರೆಲ್ಲರುಂ ಸುತಾಸಕ್ತರಾಗಿಯೆ ತನೂ
ಭವರ ಪಡೆದರ್ ಮತ್ತಮಾ ಶಿಲಾದಂ ಮುದದೆ
ಭವಚರಣತತ್ಪರತೆಯೊಳೆ ತಪಂಗೆಯ್ಯಲೀ ಪರ್ವತಾಹ್ವಯದೆ ನೀನು
ತವಕದಿಂ ಭೂಭಾರವಿಚ್ಛೇದಕಂಗೆಯಲ್
ಸವಿನಯದೆ ಜನಿಸಿದೆಯೊ ಅಂತಲ್ಲದೊಡೆ ನನಸು
ಭುವನದೊಳ್ ಪಂಚವಕ್ತ್ರಂಗಳಿಂದೊಪ್ಪುವುದೆ ಶ್ರೀಪರ್ವತಂ ಸಂತತಂ ೫೮

ನಲಿದು [1]ನಿ[1]ಟ್ಟಿಸಿದರ್ಗೆ ಮುಕ್ತಿಯಂ ಕುಡುವುದೇ
ಸುಲಭದಿಂದಂ ಜಗತ್ಪಾವನಂ ಮಾಳ್ಪುದೇ
ಲಲಿತತೀರ್ಥಂಗಳೊಳಗಿ[2]ದೆ ವಲಂ[2] ಪುಣ್ಯತೀರ್ಥಂ ಎನಿಸಿ ಪೆಸರ್ವಡೆವುದೆ
ಅಲಘು ಪುಣ್ಯಕ್ಷೇತ್ರವಿತತಿಯೊಳಗಿದು ಕರಂ
ಸಲೆ ಮಹತ್ಪುಣ್ಯ ವೈಭವವುಳ್ಳುದೆನಿಸುವುದೆ
ಲುಲಿತ ಮೂಲಸ್ಥಾನತತಿಗಳೊಳಗಿದೆ ಆದಿಮಸ್ಥಾನವೆನಿಸೆವುದೆ ೫೯

ಪೆಸರ್ವಡೆದ ಮುಖ್ಯಶೈಲಂಗಳೊಳಗಿದು ನಾಡೆ
ಮಸಕದಿಂ ರಾಜಶೈಲಂ ತಾನೆಯೆನಿಸುವುದೆ
ರಸೆಯೊಳೀಶಂಗಾದಿಸಿಂಹಾಸನಂಗಳೊಳಗಿದು ದಿವ್ಯಸಿಂಹಾಸನಂ
ನಿಸದಮೆನಿಸುವುದೆ ಮತ್ತೀ ಪರ್ವತ[3][ನಾ][3] ಪದ
ವಿಸರಮಂ ಪೊಗಳ್ವೊಡಾ ನಿಖಿಲವೇದಂಗಳಿಂ
ದೊಸೆದು ಪಂಕೇಜಸಂಭವನಣಿಯರುಂ ನುತಿಪೊಡಳನಲ್ತು ಪರಿಭಾವಿಸೆ ೬೦

ಕರಮೆ ಮೂಱುಂಲೋಕದೊಳಗೇಗಳುಂ ನೋಡೆ
ನಿರುತಮಿಾ ಗಿರಿಗಿಲ್ಲಿ ತೋರ್ಪ ತೀರ್ಥಂಗಳ್ಗೆ
ಪಿರಿದು ಪಾಸಟಿಯುಂಟೆ ಕೇದಾರದುದಕಮಂ ಕ್ಲೇಶದಿಂ ಪಾನಗೆಯ್ಯೆ
ಸರಳೆ ಮೋಕ್ಷಂ ಸಾರ್ಗುಮಂತೆ ವಾರಾಣಸಿಯೊ
ಳುರುದೇಹಮಂ ಬಿಸುಟು ಮರಣಮೈದಿದೊಡೆಯ್ದೆ
ತಿರಮಾದ ಮುಕ್ತಿ ದೊರೆಕೊಳ್ಗುಮಿವಱಂತಲ್ಲ ಸಿರಿಗಿರಿಯ ಮಹಿಮೆ ಪೊಸತು ೬೧

ಪಿರಿದುದೂರಂ ಪೋಗಿ ನೀರ್ಗುಡಿಯದೇ ಸಾಯ
ದುರು ಪರ್ವತಂಗಂಡ ನರರ್ಗೆ ಸನ್ಮುಕ್ತಿಯುಂ
ಭರದೆ ಸಾರ್ಗುಂ ಮತ್ತಮಾ ಕಾಶಿಯೊಳ್ ವಿಪ್ರಲಕ್ಷಕುಣಲಿತ್ತ ಫಲವು

---

[1] ದಿ (ಕ) [2] ಪರಿಂ (ಕ) [3] ನ (ಕಗಟ)

ವರ ಗಯೆಯೊಳೊಲ್ದಿರಡುಲಕ್ಕ ಪಾರ್ವರ್ಗೆ ಭಾ
ಸುರತರ ಪ್ರೀತಿಯಿಂದುಣಲಿಕ್ಕಿದಾ ಫಲಂ
ಹ[1]ರಿಸ[1]ವಿಂದಂ ತ್ರಿಲಕ್ಷದ್ವಿಜರ್ಗೆ ಕೇದಾರದೊಳಗನ್ನವಿಟ್ಟ ಫಲವು ೬೨

ಉಳಿದ ಸತ್ಪುಣ್ಯತೀರ್ಥಂಗಳೊಳ್ ಮನವೊಸೆದು
ಮಿಳಿರುತ್ತೆ ಕೋಟಿದ್ವಿಜರ್ಗಿಷ್ಟಮಾದ ನಿ
ರ್ಮಳತರಾನ್ನಮನಿಕ್ಕಿದಾ ಫಲಂ ಶ್ರೀಗಿರಿಯೊಳೊಂದು ಬನ್ನಿಯ ದಳದೊಳು
ತೊಳಪ ಸದ್ಭಕ್ತಿಯಿಂದೊರ್ವಭಕ್ತಂಗೆ ಸ
ಲ್ಲಳಿತಾನ್ನಮಿಟ್ಟ ಫಲ ದೊರೆಗೆಯ್ದುದೆಂದೊಡೀ
ಲಳಿತಪರ್ವತದ ಮಾಹಾತ್ಮ್ಯಮಂ ಬಲ್ಲನೆಲ್ಲಿದನವನಿಯೊಳಗೆ ನಿಸದಂ ೬೩

ಪರಮ ಸರ್ವಜ್ಞಮೂರ್ತಿಯೆ ವೇದವಾಕ್ಯಮಿದು
ನಿರುತದಿಂ ಚಕಿತಮಭಿಧತ್ತೇ ಎನುತ್ತಿರಲ್
ವರ ಪುರಾಣಂ ಏನಮೇತಂ ನಿಬೋಧತ ಎನುತ್ತುಮಿರೆ ಮತ್ತೆ ವೇದಂ
ಹ[1]ರಿಸ[1]ದಿಂದತ್ಯತಿಷ್ಠದ್ದಶಾಂಗುಲ[2]ವೆನಲ್
ನಿರುತದಿಂ ಶ್ರೂಯತೇ ನ ಚ ದೃಶ್ಯತೇ ವೆನಲ್
ಸರಸಿಜಾಕ್ಷಂ ಸರಸಿಜೋದ್ಭವಂ ಮೊದಲಾದವರ್ ನಿಮ್ಮ ನಿಜಮೂರ್ತಿಯಂ ೬೪

ಕರಮುಱಿವರೀ ಪರ್ವತನ ನೆವದೆ ನೀನೊಲ್ದು
ಕರತಳಾಮಲಕದಂತೆಯ್ದೆ ನಿನ್ನಯ ರೂಪ
ಸುರುತರಾಭಿವ್ಯಕ್ತಿಯಂ ಮಾಡಿದೈ ಶಿವನೆ ನಿನ್ನ ಕರುಣದ ಬಲ್ಮೆಯಿಂ
ಪಿರಿದು ನುತಿಸಲ್ ಬಲ್ಲನಾವನೀ ಧರೆಯೊಳಗೆ
ಪರಮೇಶ್ವರಾ ಎನುತೆ ರುದ್ರಸೂಕ್ತಗಳಿಂದ
ವರವೇದವಾಕ್ಯಂಗಳಿಂ ಪರ್ವತೇಂದ್ರನಂ ಪೊಗಳ್ದರತಿಸಂತೋಷದಿಂ ೬೫

ಪಿರಿದಂತು ನುತಿಗಳ್ಗೆ ತಾಣಮಾಗೆಸೆವ ಸಿರಿ
ಗಿರಿಯ ವಿಸ್ತಾರಮಂ ದ್ರೋಣಮಾರ್ಯನೆ ಕೇಳ
ವರ ಮಲ್ಲಿಕಾರ್ಜುನನ ದಕ್ಷಿಣಾಶೆಯೊಳಿರ್ಪುದಖಿಲಪಾಪವಿನಾಶನಂ
ಉರು ಕುಂಡತೀರ್ಥಮಂತೆವೊಲೆಯ್ದೆ ತೋಱುಗುಂ
ನಿರುತದಿಂ ಮಂದಾಕಿನೀ ಮುಖ್ಯಮಾದ ಬಂ
ಧುರ ನದೀತ್ರಿತಯಂಗಳಲ್ಲಿರ್ಪುವಾವಗಂ ಮತ್ತೆಯುಂ ಪರಿಭಾವಿಸೆ ೬೬

---

[1] ರುಷ (ಗ) [2] ಎ (ಗ)

ನಿರುತದಿಂದದೆ ವಲಂ ತಲ್ಲಿಂಗಮಂ ಬಳಸಿ
ಭರದಿನುತ್ತರಭಾಗಕೆಯ್ದಿ ಸಂತೋಷದಿಂ
ಧರೆಯೊಳಗೆ ಮಲ್ಲಿಕಾಕುಂಡಮೆಂಬಭಿಧಾನದಿಂದೊಪ್ಪುಗುಂ ಸಂತತಂ
ಇರುತಿರ್ಪುವಲ್ಲಿ ಭಾಗೀರಥೀ ಮುಖ್ಯಮಾ
ದುರುನದೀ ತ್ರಿತಯಂಗಳೊಲ್ದು ಭೀಮೇಶಾನ
ಸರಳಭವ ಶರ್ವ ಪಶುಪತಿ ಮಹಾದೇವೋಗ್ರರುದ್ರರೆಂಬಭಿಧಾನದಿಂ ೬೭

.ನರರ್ಗೆ ಮೋಕ್ಷಂಗಳಂ ಕುಡುತಿರ್ಪನೀಶ್ವರಂ
ಮರಳಿ ಮಾಹೇಶ್ವರಾಹ್ವಯದೆ ಮುಂಗಡೆಯಲ್ಲಿ
ಕರವೆ ತೋ[1]ರ್ಪಂ[1] ಸ್ಥೂಲಸೂಕ್ಷ್ಮಯಾತನೆಗಳೆಂಬಂಗತ್ರಯತ್ರಿಪುರಮಂ
ಉರಿಪ ತ್ರಿಪುರಾಂತಕಾಹ್ವಯದೆ ಪಾಪಂಗಳಂ
ಭರದಿನುತ್ಪಾಟನಮಹತ್ವದಿಂ ಹಾಟಕೇ
ಶ್ವರನಾಮಮೆಸೆಯೆ ದಕ್ಷಿಣದಿಕ್ಕಿನೊಳಗಿರ್ಪನಭವನತಿಮೋದದಿಂದಂ ೬೮

ಸರಳ ವಾರಾಹೇಶ್ವರಂ ಕಿನ್ನರೇಶ್ವರಂ
ಪಿರಿಯ ಸಾರಂಗೇಶ್ವರಂ ಮುಖ್ಯಮಾದ ಸುರು
ಚಿರ ನಾಮನಿಕರದಿಂದಿಷ್ಟಾರ್ಥಶುದ್ಧಸಿದ್ಧಿಗಳನೀಯುತ್ತೆ ಸತತಂ
ಹರಿಸ[2]ದಿಂ ಪಡುವಗಡೆಯೊಳ್ ತೊಳಗುತಿರ್ಪನಾ
ಹರನತಿಪ್ರೀತಿಯಿಂ ಬಡಗದೆಸೆಯೊಳ್ ಮಹೇ
ಶ್ವರನಾಮದಿಂದೆಸೆವನಿಂತು ದಿವ್ಯಸ್ಥಾನನಿಕರದೊಳ್ ಪರಿಶೋಭಿಪಂ ೬೯

ಪಿರಿದುಮಾಸ್ಥಾನಂಗಳೊಳಗೊಪ್ಪುತಿರ್ಪ ಭಾ
ಸುರ ದಿವ್ಯಲಿಂಗೋಪಕಂಠದೊಳ್ ತೊಳಪ ಸುರು
ಚಿರ ಸುರಜ್ಯೇಷ್ಠೇಂದ್ರ ನಿರ್ಜರಾರ್ಜಿತಮತಿಮನೋಹರಂ ತಾನೆನಿಸುವ
ಸರಳ ಸದ್ಯೋಜಾತಮುಖಮೆಯ್ದೆ ಪಶ್ಚಿಮದೊ
ಳುರುತರ ಬ್ರಹ್ಮೇಶ್ವರಾಹ್ವಯದಿನೆಸೆದಿರ್ಪು
ದರರೆ ಬಡಗಲ್ ವಾಮದೇವಾ[3]ಖ್ಯಮೊಪ್ಪುಗುಂ[3] ಮಾಹೇಶ್ವರಾಖ್ಯದಿಂದಂ ೭೦

ಸಲೆ ಅಘೋರಾನನಂ ತೆಂಕಗಡೆಯಲ್ಲಿ ನಿ
ರ್ಮಲತರಜ್ಯೋತಿಃಪದೋಪಪದಮಾಗಿ ಸ
ಲ್ಲಲಿತ ಸಿದ್ಧವಟಾಖ್ಯದಿಂದೊಪ್ಪುತಿರ್ಕುಮಾ ತ್ರಿಪುರಾಂತಕಾಹ್ವಯದೊಳು

---

[1] ಕರ್ಪಂ (ಕ) [2] ರುಷ (ಗ) [3] ಖ್ಯವೆನಿಪ್ಪುಗುಂ (ಗ)

ಒಲವಿನಿಂ ಮೂಡಗಡೆಯಲ್ಲಿ ತತ್ಪುರುಷಾಸ್ಯ
ಮಲರ್ದೊಪ್ಪುಗುಂ ಮತ್ತಮೀಶಾನವದನಮದು
ನಲಿದೂರ್ಧ್ವಮಾಗೊಪ್ಪುಗುಂ ಮಲ್ಲಿಕಾರ್ಜುನಾಹ್ವಯದಿನವನಿಯೊಳಾವಗಂ ೭೧

ಮಿಸುಪ ಶೂಲಿಗೆ ಮಲ್ಲಿಕಾರ್ಜುನಾಹ್ವಯಮೆಂತು
ರಸೆಯೊಳಗೆ ಪಸರಿಸಿತ್ತೆಂಬೊಡದನೊಲ್ದು ನೀಂ
ಮಸಕದಿಂ ಕೇಳ್ ದೋಣಮಾರ್ಯ ಮುನ್ನುಱಿಪೋದನೇಕಯುಗಸಂದೋಹದಿಂ
ನಿಸದಮುತ್ತತ್ತಲಾ ಪರಶಿವಂ ಶಿವೆಗೆ ರಾ
ಜಿಸುವ ಸಿರಿಗಿರಿಯ ಮಹಿಮೆಯ ಪೇಳ್ವ ಕಾಲದೊಳ್
ಸಸಿನೆ ಮುಂಪೋದನೇಕಾರ್ಬುದಯುಗಂಗಳೀದತ್ತತ್ತ ಮುನ್ನೆ ಮುನ್ನೆ ೭೨

ಗಿರಿಜಾತೆ ಕೇಳಿಮಗೆ ಮಲ್ಲಿಕಾರ್ಜುನನೆಂಬ
ಪರಮಾಭಿಧಾನಮೊಪ್ಪುಗುಮನಿಶಮಾ ಯುಗದೊ
ಳುರುತರೋನ್ನತ ಗಿರಿಶಭಕ್ತಿಯುಕ್ತಂ ಚಂದ್ರಗುಪ್ತಾಹ್ವಯಂ ಭೂಮಿಪಂ
ಕರಮೊಗೆದನಾತನಾತ್ಮಜೆ ಚಂದ್ರಮತಿ ಯುವತಿ
ಯರ ಬೈತಲೆಯ ಶೋಣಮಣಿ ತನ್ನ ಕೆಳದಿಯರ್
ಬೆರಸೆಯ್ದಿ ಮಲ್ಲಿಕಾರ್ಜುನಲಿಂಗನಂ ಭಜಿಸುವಳ್ ನಿತ್ಯಮತಿಭಕ್ತಿಯಿಂ ೭೩

ಹರಿಸ[1]ದಿಂದೊಂದುದೆವಸಂ ಮಲ್ಲಿಕಾರ್ಜುನನ
ಪರಮಮೂರ್ತಿಯಂ ನೋಡುತಾ ತರುಣಿ ಗಾನಮಂ
ವಿರಚಿಸಿದಳಾತನಗ್ರದೊಳೆಯ್ದೆ ಮಧುರಮಾರ್ದವ ಕಲಿತಮಾಗೊಪ್ಪುವ
ಸರಳ ಸಪ್ತಸ್ವರ ಮನೋಹರಶ್ರುತಿಗತಿಗ
ಳರರೆ ಸಾಂಗಂಗಳೆನಿಸಲ್ ಪಾಡುತಿರೆ ಕಿನ್ನ
ರರ ಗಾನಮತಿನೀಚತರಮಾಗಿ ಪೋದುದಾ ಸುದತಿ ಪಾಡುವ ಸೊಬಗಿನಿಂ ೭೪

ಪಿರಿದಿಂತು ಪಾಡುತಿರಲಾ ಗಾನರಸಸುಖದೆ
ಸಿರಿಗಿರಿಯ ಶೃಂಗಂಗಳೊಸೆದು ನರ್ತಿಸುವುವತಿ
ಭರದೆ ದಿಙ್ನಿಕರಂ ಪ್ರಕಂಪಿಸಿತ್ತಾಗ ಸಂಚಲಿಸಿತ್ತು ದೇವಗಂಗೆ
ಹರಿಸ[1]ವಡೆದತ್ತು ಪಾತಾಳಗಂಗೋದಕಂ
ಕರಮುರ್ಬಿ ದಿ[2]ವಮನಂಟಿತ್ತು ನಿರ್ಜರವಿತತಿ
ಯರರೆ ಪೊಗಳಿತ್ತು ಕಲ್ಲೊಸರಿತ್ತು ಕೊಱಡು ಚಿಗುರಿತು ಮಿಗಂಗಳ್ ಸೋಲ್ತುವು ೭೫

---

1 ರುಷ (ಗ) 2 ನ (ಕ)

ಗಿರಿಜೆಗಾನಂದಮುಣ್ಮುತ್ತು ತದ್ಗಾನರಸ
ಶರಧಿಯೊಳ್ ಮಗ್ನನಾಗುತ್ತೆ ನುಡಿದಂ ಸೋನು
ನೆರಳೆಗಣ್ಣ ಬಲೆ ಕೇಳ್ ನಿನ್ನಿಷ್ಟಮಂ ಬೇಡು ವರಮನಾಂ ಕುಡುವೆನೆನಲು
ಹರಿಸ[1]ದಿಂ ಚಂದ್ರವತಿ ನುಡಿದಳಿಲೆ ಸರ್ವೇಶ
ಸುರುಚಿರ ಶ್ರೀಪರ್ವತೋತ್ತುಂಗ ಶೃಂಗಸ್ಥ
ವರದಿವ್ಯಲಿಂಗಾಂಗ ನಿನ್ನ ಜೂಟದೊಳಗಾನಿಟ್ಟ ಮಲ್ಲಿಗೆದಂಡೆಯು ೭೫

ಕರಮೆಸೆವ ಭಾಗೀರಥೀ ಚಂದ್ರಮಧ್ಯದೊಳ್
ಸುರನದೀರಂಗತ್ತರಂಗೋರುಫೇನ ವಿ
ಸ್ಫುರಿತಮಾಲೆಯು ಪಾಂಗಿನಿಂ ಧರಿಸು ಮತ್ತಮಾ ಮಲ್ಲಿಕಾದಾಮ:ದಂತೆ
ಫಿರಿದರ್ಜುನಾಂಗದಿಂದಿರು ಬಳಿಕೆ ನೀನೊಸೆದು
ವರ ಮಲ್ಲಿಕಾರ್ಜುನಾಹ್ವಯದಿಂದೆ ಲೋಕದೊಳ್
ಪರಿಶೋಭಿಸುತ್ತಿರ್ಪುದೆಂದವಳ್ ಬಿನ್ನೈಸಲದನೆಯ್ದೆ ಮನದೆಗೊಂಡು ೭೭

ಕನದಮಲಮಲ್ಲಿಕಾರ್ಜುನನಾಮದಿಂ ಶಿವಂ
ಮಿನುಗುತಿಲ್ಲಿರ್ಪನುಜಿತ ಮತ್ತುಳಿದ ಲಿಂಗಂಗ
ಳನುನಯಂ ಕಾರ[2]ಣಾಂ[2]ತರದೆ ಪ್ರತ್ಯೇಕನಾಮಂಗಳಂ ಪಡೆದಿರ್ಪುವು
ಅನುವಿನಿಂದೀ ಗಿರಿಯೊಳಿರ್ಪ ಲಿಂಗಂಗಳಂ
ಮನಮೊಲ್ದು ಪೂಜಿಸಿದೊಡಾವ ಫಲವೆಂಬೊಡದ
ನೆನಸುಮುಸುರ್ವೆಂ ಕೇಳ ನಿಖಿಲಲಿಂಗಸ್ಥಾನಮೆನಿಸಿ ತೋರ್ಪೀ ಗಿರಿಯನು ೭೮

ನೆನೆದೊಡಂ ನೋಡಿದೊಡಮಂಗವಂಟದೊಡೆ ತೊ
ಟ್ಟನೆ ಪುರಂದರಪದವಿಯಂ ಮೋಕ್ಷ[3]ಸೌಖ್ಯಮಂ
ವಿನಯದಿಂದೀವುದೆನೆ ಪೂಜಿಸಿದೊಡಾ ಫಲಮನುಸುರ್ವೊಡಹಿಪಂಗಸಾಧ್ಯಂ
ಎನಸುಮಿಾ ಗಿರಿಯ ನೋಡಿದ ಮನುಜಸಂತತಿಗೆ
ಮಿನುಗುವ ಪುನರ್ಜನ್ಮಮಿಲ್ಲ ಭಾವಿಸಿ ನೋಡ
ಲನಿಶಮಿಾ ಧರೆಯೊಳಗೆ ಸಿರಿಗಿರಿಗೆ ದೊರೆಯಪ್ಪ ತಾಣಮಿಲ್ಲೆಲ್ಲಿಯುಂ ೭೯

ಇಂತೆಂದು ಪಂಡಿತೇಂದ್ರಂ ಶ್ರೀಗಿರಿಯ ಮಹಿಮೆ
ಯಂ ತಗುಳ್ದು ದ್ರೋಣಮಾರ್ಯಂಗೆ ಬಿತ್ತರಿಸಲತಿ
ಸಂತೋಷಮಂ ತಾಳ್ದು ಗುರುಗೆಱಗಿ ಸರ್ವಜ್ಞಮೂರ್ತಿಯೇ ಪಂಡಿತೇಶ

[1] ರುಷ (ಗ) [2] ಣಾಹ್ವಾಂ (ಗ) [3] ಪದವಿಯಂ (ಗ)

ಕಂತುಹರಸದೃಶ ನೀನುಸಿರ್ದ ಪರ್ವತಮಹಿಮೆ
ಯಂ ತಳ್ವದುೞಿ ಕೇಳ್ದ ಮಚ್ಛ್ರೋತ್ರಯುಗಳಂಗ
ಳುಂತೆ ಪಾವನಮಾದುವೆಂದು ಗುರುವಂ ಪೊಗಳ್ದನಾ ದೋನಮಾರ್ಯನೊಸೆದು ೮೦

ಸದಮಲಪ್ರಚುರವಿಶ್ರುತ ಪರಮಭಕ್ತಗಣ
ಪದಸರೋರುಹಸಾಂದ್ರ ಮಕರಂದಪಾನ ಸ
ಮ್ಮುದಿತ ಚಂಚಚ್ಚಂಚರೀಕನನವರತ ಪಂಚಾಕ್ಷರೀಪ್ರಸಿತಹೃದಯಂ
ವಿದಿತ ಮಂಜುಳನೀಲಕಂಠಾಹ್ವಯಂ ಮನೋ
ಮುದದೆ ಪೇಳ್ದುರುತರಾರಾಧ್ಯಚಾರಿತ್ರದೊಳ
ಗಿದು ವಲಂ ಶ್ರೀಗಿರಿಯ ಮಾಹಾತ್ಮ್ಯಮಂ ದೋನಮಾರ್ಯಂಗೆ ಪೇಳ್ದ ಕಥನಂ ೮೧

# ಮೂಱನೆಯ ಸಂಧಿ

## ದೋನಮಾರ್ಯಂ ಪರ್ವತಕ್ಕೆ ಪೋದುದು

ಸೂಚನೆ : ಹ[1]ರಿಸ[1]ದಿಂ ದೋನಮಾರ್ಯಂ ಪರಿಸೆಯೊಡಗೂಡಿ
ಸರಳಮಾಹೇಶ್ವರಾದ್ರಿಯ ಕಂಡ ಕಥನಮಂ
ವಿರಚಿಸಿದಪೆಂ ಕೇ[2]ಳ[2] ಸೂರಸಚಿವೇಂದ್ರ ನೀನೆಂದು ಸೋಮೇಶನುಸುರ್ದಂ

ಒಡನೆ ಜನಿಯಿಸಿದ ಪೀಯೂಷಭಾನುವ ನೋಳ್ಪ
ಕಡುತವಕದಿಂ ಪ್ರವಾಳಾನೀಕಮೆಯ್ದಿ ಸೊಂ
ಪಡರ್ದ ಶಶಿಕಲೆಯೊತ್ತುವಿಡಿದಿರ್ದುದೆಂಬ ಶಂಕೆಯನುಂಟುಮಾಡುತೆಸೆವ
ನಿಡಿದಾದ ಕೆಂಜೆಡೆಯ ಬಂಬಲಿಂ ರಾಜಿಸುವ
ನುಡಿವೆಣ್ಣ ಗಂಡನೊಳ್ದಲೆದಾಳ್ದ ಮೂಜಗ
ಕ್ಕೊಡೆಯನೆನಿಸುವ ನೀಲಕಂಠಲಿಂಗಂ ಪೊರೆಗೆ ಸದ್ಭಕ್ತಸಂತತಿಯನು ೧

ಗುರುಪಂಡಿತೇಶ್ವರನೆ ನೀಂ ಪೇಳ್ದ ಕಜ್ಜಮಂ
ಹ[3]ರಿಸ[3]ದೆ ಮಹಾಪ್ರಸಾದಂ ಎಂದು ಮಾಳ್ಪುದೇ
ಪರಮಕಾರ್ಯಮದೆಮಗೆ ನೀಂ ಮುನ್ನೆ ಸಮೆದ ಪರ್ವತವರ್ಣನಾಖ್ಯಮೆಂಬ
ವರ ಕೃತಿಯೊಳೊಲ್ದುಸಿರ್ದಿರೀ ಗಿರಿಯ ಶಿಲೆಯೆಲ್ಲ
ಮುಡುಲಿಂಗರೂಪಂಗಳೆಂದು ಮತ್ತೀಗಳೀ
ಗಿರಿ ಲಿಂಗಪೀಠದಂತೆಸೆ[4]ಯಿತ್ತು[4] ನಿಮ್ಮ ಭಾಸುರದೃಷ್ಟಿಗದುಮಲ್ಲದೆ ೨

ವರ ಲಿಂಗರೂಪಂಗಳಾಗಿ ತೋಱುದುವಲ್ಲಿ
ಕರಮೆಸೆವ ನಿಖಿಲವಸ್ತುಚಯಂಗಳನಿಶಮುಂ
ನಿರುತಮಾನೇನೆಂದುಮಱಿಯೆ ನಿಮ್ಮಯ ಪಾದಮಲ್ಲದೇ ಬಳಿಕೇನನು
ಶಿರದೊಳಗೆ ನಿಮ್ಮಾಜ್ಞೆಯಂ [5]ತಾಳ್ದು[5] ಪೋಪೆನಾಂ
ಭರದಿಂ ನಿಜಪ್ರಸಾದಂಗೊಟ್ಟು ರಕ್ಷಿಸೆಲೆ
ಗುರುವರೇಣ್ಯನೆ ಎಂದು ದೋನಮಾರ್ಯಂ ತುಳಿಲ್ಗೆಯ್ದು ಗುರುವಾಜ್ಞೆವಡೆದು ೩

1 ರುಷ (ಗ) 2 ಳು (ಕ) 3 ರುಷ (ಗ) 4 ಯುತ್ತೆ (ಕ) 5 ತಳೆದು (ಗ)

ಮಿನುಗುವಾ ಶ್ರೀಪರ್ವತಾಭಿಮುಖನಾಗಿ ಘ
ಮ್ಮನೆ ದೋಣಮಾರ್ಯನೆಳ್ತರ್ಪಾಗ ಮಲ್ಲಿಕಾ
ರ್ಜುನನ ನೋಳ್ಪಳ್ತಿಯಿಂ ಭಕ್ತಿಯಿಂದಣೆಯರಂ ಧರಣಿ ಬೆಸಲಾದ ತೆಱದಿಂ
ವನತತಿಗಳಿಂ ಮಾರ್ಗಸಂದೋಹಮುಂ ತಿಂಬಿ
ಮನವೊಲ್ದು ಬರುತಿ[1]ರ್ದ[1] ಪರಿಸೆಗಳ ನೆಱೆನೋಡು
ತನಃವಿನಿಂದೆಯ್ತರ್ಪ ಸತ್ಪುರುಷರಂ ಕಂಡು ದೋಣಮಾರ್ಯಂ ಹ[2]ರಿಸ[2]ಮಂ ೪

ತಳೆಯುತ್ತೆ ರೋಮಾಂ[3]ಚಿತಾಂ[3]ಗನಾಗುತ್ತೆ ನಿ
ರ್ಮಳಗಿರಿಯ ನೋಡುತ್ತುಮವರೊಡನೆ ಬರುತಿರ್ದ
ನಳಘುತರಮಾದ ಪರಿಸೆಯ ನಡುವೆ ಮಾಹೇಶ್ವರದ್ವಾರಮಾರ್ಗದೊಳಗೆ
ಘಳಿಲನೆಡಬಲದವರ್ ಸಂದಣಿಸದೆಡೆವಿಟ್ಟು
ಕಳಕಳವನುಡುಗಿ ಶೀಘ್ರದೆ ಬನ್ನಿಮೆನುತೆ ಸ
ಲ್ಲಳಿತ ವಾಕ್ಯದೆ ನುಡಿವ ಪರಿಸೆಯಂ ನೋಡುತ್ತೆ ನಡೆತಂದನಳ್ತಿಯಿಂದಂ ೫

ಸಡಗರದೆ ಕೂಡೆಯ್ದಿ ಬನ್ನಿಮೆನುತುಂ ಪಿಂದು
ಗಡೆಯ ನೋಡದೆ ಬೇಗಬರ್ಪುದೆನುತುಂ ಮುಂದ
ಣೆಡೆಯ ನಿಟ್ಟಿಸಿ ಪಜ್ಜೆಯಿಟ್ಟು ನಡೆಯೆನುತುಮೊತ್ತರಿಸಿ ನಡೆನಡೆಯೆನುತ್ತೆ
ಕಡುಪಿನಿಂದಂ ಬಾರೆನುತ್ತೆ ಕುಳ್ಳಿರದೆ ಮ
ತ್ತೊಡನೆಯ್ದಿ ಬಾರೆನುತೆ ಬಿಟ್ಟುಪೋಗದೆ ಕೂಡಿ
ಸಡಗರದೆ ಬನ್ನಿಮೆಂಬೊಳ್ನುಡಿಗಳಂ ಕೇಳುತೆಳ್ತಂದನಳ್ತಿಯಿಂದಂ ೬

ಕಡುಸೇದೆವಟ್ಟು ಕುಳ್ಳಿರ್ಪರಂ ನೋಡುತುಂ
ಸಡಗರದಿನೆಮ್ಮೊರ್ಗೆ ಪೋಪೆವೆಂದಿಂಗೆಂದು
ನುಡಿವವರ ನುಡಿಗೇಳುತುಂ ಜಾಱುಬಿಳ್ದೆಡೆಯೊಳೊಲವಿನಿಂ ಕಲ್ಗುಡ್ಡೆಯಂ
[4]ಇ[4]ಡಬೇಡವನುತಪ್ಪಿ ಬಿಳ್ದುದೇಂ ಕುಂದೆ ನಿ
ಮ್ಮಡಿ ಜಾಱು ಬೀ[5]ಳಿರೇ[5] ಎಂಬವರನೀಕ್ಷಿಸುತೆ
ಪಡಪಿನಿಂ ದೋಣಮಾರ್ಯಂ ಬರುತ್ತಿರ್ದನಾ ಪರಿಸೆಯೊಳ್ ಸಂಭ್ರಮದೊಳು ೭

---

1 ರ್ಪ (ಗ) 2 ರುಷ (ಗ) 3 ಚನಾಂ (ಗ) 4 ಬಿ (ಕ) 5 ಳದೇ (ಕ)

ಮಿನುಗುವೀ ಮುಂದಣೂರ್ಗೆಯ್ದಿ ಭಕ್ತರ ಮನೆಗೆ
ವಿನಯದಿಂ ಪೋಗಿ ಲಿಂಗಾರ್ಚನೆಗಳಂ ಮಾಳ್ಪೆ
ವೆನುತಿರ್ಪವರ್ ಕೆಲರ್ ಶರಿರವಿಗೆ ಸೇದೆವಟ್ಟಿತ್ತು ಮತ್ತೀ ಕೆಱತಯೊಳು
ನನಸು ಬುತ್ತಿಗಳ ಕಯ್ದುದ್ದಿತ್ತಿನಿಂದುಂಬೆವೆಂ
ದೆನುತಿರ್ಪವರ್ ಕೆಲರ್ ಕಾವಡಿಯ ಪೊತ್ತಿರ್ಗೆ
ಸನಯದಿಂ ಮಾರ್ಗಮಂ ಬಿಡಿಯೆಂಬವರ್ ಕೆಲಬರಿವರೆಲ್ಲರಂ ನೋಡುತೆ ೮

ಮಿಸುಪ ಕಾವಡಿಯವರನಗಲದಿರಿವೆಂದು ಸಂ
ತಸದೆ ನುಡಿವರ್ ಕೆಲರ್ ಸಂದಣಿಯನುಱತ ಬಿಸು
ಟ್ಟಿಸೆವ ತಣ್ಣೆಳಲೊಳಗೆ ನುಡಿವೊಯ್ದು ಸೊಕದಿನಿರಿವೆಂದು ನುಡಿವರ್ ಕೆಲಬರು
ಅಸವಸದೆ ಬಗರಗೆಗಳಂ ತೆಗೆವುದರ್ಕೆ ಜಲ
ವೊಸರ್ವ ತಾಣಂಗಳುಂಟೇ ಎಂದು ಕೇಳುತ್ತೆ
ನಿಸದಮಿರ್ಪರ್ ಕೆಲರ್ ಶ್ರೀಗಿರಿಯದೆನಿತುದೂರವೊಯೆಂಬವರ್ ಕೆಲಬರು ೯

ಕುಸುಮಂಗಳಿವೆ ಲಿಂಗಪೂಜೆಯಂ ಮಾಡಿವೆಂ
ದೊಸೆದು [1]ಕೇ[1]ಳ್ವರ್ ಕೆಲರ್ ಧೂಪದೀಪಂಗಳಿವೆ
ನಿಸದವೇಂ ತರವೇಳ್ಕುಮೇ ಎಂದು ಘೋಷಿ[2]ಸುತೆ[2] ನುಡಿದೀವವರ್ ಕೆಲಬರು
ಸಸಿನೆ [3]ನೇಮಂಗಳಂ[3] ತೀರ್ಚೆಂಬವರ್ ಕೆಲಬ
ರಸವಸದೆ ಪರಿಸೆ ಪೋದತ್ತಾಗಳೇಳೆಂದು
ಗಸಣಿಗೊಳುತಂ ತಮ್ಮವರ ನುಡಿದು ಪೋಗಲುಜ್ಜುಗಿಸುತಿರ್ಪರ್ ಕೆಲಬರು ೧೦

ಸಿರಿಶೈಲಮದು ತಾನೆನಿತ್ತಳವಿಯೋ ಎನುತೆ
ಕರವೆ ಬೇಸಱುತೆ ಪೋಗುತ್ತಿರ್ಪವರ್ ಕೆಲಬ
ರುರವಣಿಸಿ ಪೋಗುತ್ತುಮಿದೆ ವಲಂ ಮಾಹೇಶ್ವರಾದ್ರಿಯೆಂಬರ್ ಕೆಲಬರು
ಸ್ಫುರಿತ ಶಿವಮಂದಿರಮಿದೆನಲೊಪ್ಪುತಿರ್ಪ ಬಂ
ಧುರಹೇಮಕಳಶಂಗಳಂ ಕಂಡು ಗುಹ್ಯಕೇ
ಶ್ವರಸಖನ ಕಂಡೆವಾವೆಂದು ಜಯಜಯಜಯ ಎನುತ್ತಿರ್ಪವರ್ ಕೆಲಬರು ೧೧

ಧನಪತಿಸಖಂಗೆ ಹೇಮದ ಕಲಶಸಂಚಯಂ
ನನಸದೇಂ ಸೋಜಿಗವೆ ಎನುತಿರ್ಪವರ್ ಕೆಲರ್
ಘನಮಹಿಮನೆನಿಸುವೀಶಂಗಿದೇನರಿದೆ ಎನುತಿರ್ಪವರ್ ಕೆಲಕೆಲಬರು

---

1 ಪೇ (ಗ)  2 ಪಂತೆ (ಕ)  3 ಮಲಂಗಳಂ (ಗಟ)

ಮನದಲಂಪಿಂದವೋರೋರ್ವರಿಂತೆಂದು ಘ
ಮ್ಮನೆ ನುಡಿವುತೆಯ್ತರ[1]ಲ್ಕಿ[1]ವರೆಲ್ಲರಂ ನೋಡು
ತನಘನೆನಿಸುವ ದೋನಮಾರ್ಯನಾ ಪ್ರರಿಸೆ?ಯೊಳ್ ಕೂಡಿಬರುತಿರ್ದನೊಸೆದು ೧೨

ಬರಬರಲ್ ಶ್ರೀಮಹೇಶ್ವರಪರ್ವತಂ ಮುಂದೆ
ಗಿರಿಗಳುನ್ನತಶೃಂಗನಿಕರಂಗಳೆಂಬ ಬಂ
ಧುರ ದೇವಭವನಂಗಳಿಂದೆ ಪರಿಯಂತಪರ್ವತಹರ್ಮ್ಯನಿಕರಂಗಳಿಂ
ವರ ಮುಕ್ತಿನಿಶ್ರೇಣಿಕಾಕಾರಸೋಪಾನ
ದಿರವಿನಿಂ ವ್ಯೋಮಸ್ಥಮುಕ್ತಿಕಾಂತೆಯರೊಸೆದು
ಸಿರಿಗಿರಿಗೆ ಬೀಸುವೊಳ್ಚವರದಂತಿವೊಲೆಸೆವ ವೃಷಭಧ್ವಜಂಗಳಿಂದಂ ೧೩

ಸಲೆ ಶೋಭಿಸಿತ್ತುಮಂತಾ ವ್ಯಾಸಹಸ್ತಾಂಕ
ಕಲಿತಮಾದಾ ವಾತಪೂರಂಗಳಿಂದೆಯ್ದೆ
ಸುಲಲಿತ ವಿಯತ್ಕಾಂತೆ ತೊಟ್ಟ ಮಣಿದೊಡವುಗಳ ಗಡಣದಂತೆಸೆಯುತಿರ್ಪ
ಲಲಿತ ಮಣಿದೋರಣಸಮೂಹಂಗಳಿಂದೆ ನಿ
ರ್ಮಲಜಟಾರುದ್ರಾಕ್ಷ ಭಸಿತಭೂಷಿತರಾದ
ಸುಲಭಚರಲಿಂಗಂಗಳಿಂ ಪ್ರಮುದವಿಸ್ಫುರಿತದಿವ್ಯಪುಷ್ಪಕನಿಕರದಿಂ ೧೪

ಪರಿಶೋಭಿಸಿತ್ತು ಮತ್ತಂ ಶೋಭೆನಡೆದ ಸುರು
ಚಿರಭಕ್ತರಾಲಯಂಗಳಿನೆಸೆವ ವಾರಿಧಿಯ
ವರ ಘೋಷಸದೃಶತೂರ್ಯಧ್ವಾನದಿಂದೆಸೆವ ಮಾಹೇಶ್ವರಾಖ್ಯಪುರಮಂ
ಹ?ರಿಸೆ?ದಿಂ ದೋನಮಾರ್ಯಂ ಕಂಡನಾ ಮನೋ
ಹರಮಾದ ಪುರದ ಬಹಿರುದ್ಯಾನದೊಳ್ ನಾಡೆ
ಪರಪುಟ್ಟ ಶುಕನಿಕರಮಾವಗಂ ತೊಂಡುಗೆಡೆಯುತ್ತೊಸೆದು ಸುಖಮಿರ್ಪುವು ೧೫

ಹರಪಾದವಾರಿಯಂ ಬಯಸಿ ಬರುತಿರ್ಪ ಭಾ
ಸುರಮಾದ ಪ್ರರಿಸೆ[4]ಗಿದಿರ್ವಂದು ವನಕಾಂತೆಯರ್
ಪಿರಿಯ ಪೊನ್ಪೊನ್ನಲಿಗೆ ತುಂಬಿ ತದ್ವಾರಿಯಂ ತಂದೀವ ಮಾಳ್ಕೆಯಿಂದಂ
ಕರಮೆಸೆವ ತದ್ವನದೊಳಗೆ ಶೋಭಿಸಿದುವು ಮ
ತ್ತರರೆ ಪೀಯೂಷೋಪಮಾನಜಲಮಂ ತಳೆದ
ಸುರುಚಿರಫಲಂದಾಳ್ದು ಚೆಂದೆಂಗುಮರಗಳುಱಿ ಬಿಸಮಂದಮಾಗಿ ನಿಸದಂ ೧೬

---

[1] ಲ್ಕ (ಕ) [2] ರುಷೆ (ಗ) [3] ರುಷ (ಗ) [4] ರುಷೆ (ಕ)

ಮಿನುಗುವೀ ಗಿರಿಯ ಸಂದರ್ಶನಫಲಂಗಳಂ
ಮನದಳ್ಕಱಿಂದವಾವೀವೆವೆಂಬವೊಲೆಯ್ದೆ
ನನಸು ಪಣ್ಗೊನೆಗಳಂ ಧರಿಸಿ ರಂಭಾಸ್ತಂಭನಿಕುರುಂಬವೆಸೆಗುಮಲ್ಲಿ
ವಿನಯದಿಂ ಶ್ರೀಗಿರಿಯ ನೋೞ್ಪುದರ್ಕೆಯ್ತರ್ಪ
ಘನಪುರುಷರಂ ನೋಡಬರ್ಪ ವನಲಕ್ಷ್ಮಿ ತೊ
ಟ್ಟನೆ ಕಾಣ್ಕೆಯಂ ತಳೆದು ನಿಂದಿರ್ದ ಮಾೞ್ಕೆಯಿಂ ಮಾಕಂದಫಲಮೊಪ್ಪುಗುಂ ೧೭

ಭರದಿಂ ವಸಂತನೀ ಶ್ರೀಗಿರಿಯ ಬಳಸಿ ಸುರು
ಚಿರಫಲಾವಳಿಗಳಂ ರಮಣೀಯತರಮಾಗಿ
ವಿರಚಿಸಿದವೊಲ್ ಜಂಬು ಮಾತುಲುಂಗ ದ್ರಾಕ್ಷೆಗಳ ಫಲಸ್ತಬಕವೆಸೆಗುಂ
ಪಿರಿದುಮೀ ಮಲ್ಲಿಕಾರ್ಜುನದೇವನೆನ್ನ ಭಾ
ಸುರನಾಮದಿಂದೊಪ್ಪುವಂ ತಪ್ಪದೆಂದು ಸಲೆ
ಹ[1]ರಿಸ[1]ವಡೆದಂತೆ ಪುಷ್ಪಂದಳೆದು ತೋಱಿ[2]ವಾ[2] ಮಲ್ಲಿಕಾಲತೆಯೊಪ್ಪುಗುಂ ೧೮

ಕುಂದಣಂ ಪೊರ್ದದೆನಗೆಲ್ಲತೆಱದಿಂದೆಂದು
ಮಂದಹಾಸಂದಳೆದವೊಲ್ ಬಿರಿದ ಮುಗುಳ್ಗಳಿಂ
ಕುಂದಗುಚ್ಛಕಜಾಲಮೊಪ್ಪುತಿರ್ಕುಂ ಮತ್ತಮಾ ವನದೊಳತಿಶಯದೊಳು
ಚಂದದಿಂದೊಂದಲರ ಶಂಭುಗೀಯಲ್ ಮನಂ
ದಂ[3]ದ[3] ವನಭವಸಿಂಧು ತರಣಿ[4]ಯೊಪ್ಪಂ ನೋಡೆ[4]
ಸಂದೆಗಂ ಬೇಡೆಂಬ ತರಣೀಲತಾವೃಂದದಿಂದಮಾದಂ ರಂಜಿಕುಂ ೧೯

ನೆಲಸಿಯಾನಿರ್ಪುದರಿನೀ ಶೈಲಮಾವಗಂ
ನಲಿದು ಭವನಾಗಕೇಸರಿಯೆನಿಸಿತೆಂಬ ಸ
ಲ್ಲಲಿತ ನುತಿಗೊಳಗಾದ ನಾಗಕೇಸರವಿತತಿಯಿಂದೊಪ್ಪುತಿರ್ಕುಮನಿಶಂ
ಸುಲಭದಿಂದಾನಿರ್ದ ಕತದಿನೀ ಗಿರಿಯೊಂದೆ
ಲಲಿತ ಪುನ್ನಗವೆನಿಸಿತುಳಿದ ನಗತತಿಯೆಲ್ಲ
ಮಲಸದೆ ಸ್ತ್ರೀಯರೆನಿಸಿದುದೆಂಬ ತುತಿವೆತ್ತ ಪುನ್ನಾಗವೃಕ್ಷವೆಸೆಗುಂ ೨೦

ಮಿನುಪೆನ್ನ ಕುಸುಮದಿಂದಕುಲನಾದೊಡವೊಸೆದು
ಮನಸಿಜಾಂತಕನ ಪೂಜಿಸಲವಂ ಲೋಕದೊಳ್
ಘನಕುಲಜನಪ್ಪನೆಂದೆಸೆವ ಬಕುಳಂಗಳಿಂದೊಪ್ಪಿರ್ಕುಮನವರತವು

---

[1] ರುಷ (ಗ) [2] ತಾ (ಕ) [3] ದು (ಕ) [4] ಯೆಪ್ಪೆನ್ನೊಡೆಯ (ಗ)

ಎನಸುಮಿಂತೆಸೆದಿರ್ಪ ಪುಷ್ಪವಾಟಿಯ ನೋಡು
ತನಘ ದೋನಮದೇವನತಿಹರುಷದಿಂ ನುತಿಸು
ತನುನಯದಿನಾ ಪುರಂಬೊಕ್ಕು ಬರುತಿರ್ದನಾ ಸೊಂಪೆಸೆವ ಪ[1]ರಿಸೆ[1]ಗೂಡಿ ೨೧

ಪುರವೀಧಿಯೊಳಗೋರಣದಿನೊಗ್ಗಿನಿಂ ಬರುತೆ
ಹ[2]ರಿಸೆ[2]ದಿಂದಾಡುತುಂ ತೂಗುತುಂ ತೊನೆಯುತುಂ
ಪಿರಿದು ತಂತಮ್ಮ ದೇಶೀಯ ಗೀತಂಗಳಂ ಪಾಡುತುಂ ಲೀಲೆಯಿಂದಂ
ಕರಮೆ ಜೋಲುತ್ತೆ ರ್ಝೊಂಪಿಸುತೆ ಹಿಗ್ಗುತ್ತೆ ಮ
ತ್ತಿರದೆ ಬೀಗುತ್ತೆ ಕ್ಕೆಪಱಿಗುಟ್ಟಿಯೋರೊರ್ವ
ರುರುನಾದದಿಂದುಘೇ ಎನುತುಂ ಮಹೇಶಾದ್ರಿಯಂ ಪರಿಸೆಯಡರ್ದೇಱಿತು ೨೨

ಮಿಸುಗುವುತ್ತರದಿಕ್ಕಿನೊಳ್ ತೋರ್ಪ ಬಟ್ಟೆಗಳ್
ನಿಸದಮಾ ಶೃಂಗಸಾನುಗಳದ್ರಿಗಳ್ ವೃಕ್ಷ
ವಿಸರಂಗಳುಂ ತೆ[3]ಮ[3]ರ್ಗುಣಿಗಳೆಲ್ಲಂ ತುಂಬಿ ಪರಿಸೆ ಬರುತಿರೆ ಹ[4]ರಿಸೆ[4]ದಿಂ
ಅಸವಸಂ ಚಿತ್ರಪಟದಿಂ ಪರ್ವತೇಂದ್ರನಂ
ಮುಸುಕಿದಂತೆವೊಲೊಪ್ಪೆ ಸುರಗಿರಿಯೆನಿಪ್ಪ ಸೊಂ
ಪೆಸೆವ ಸಿರಿಗಿರಿ ನಾಡೆ ನರಗಿರಿಯದಾಯ್ತು ಪರಿಸೆಯ ಜನರ ನೆರವಿಯಿಂದಂ ೨೩

ಎನುತೆ ನುಡಿಯುತ್ತೊರ್ವರೊರ್ವರತಿಭರದಿಂದೆ
ಮನಮುಣ್ಮೆ ಪತ್ತುವರ್ ಕೆಲಬರುಱಿ ಧೃತಿಗುಂದಿ
ಮಿನುಪ ಕರತಳವೂಱಿಯುಂ ಬಳಿಕ ನಡೆದು ದಡದಡಿಸಿ ಪೋಪರ್ ಕೆಲಬರು
ಅನುಗುಂದಿ ಬಳಲುತ್ತೆ ಪೋಪವರ್ [5]ಪಲಕೆಲ[5]ಬ
ರನಿಸು ಬೇಸಱದೆ ಪುಟನೆಗೆಯುತ್ತೆ ಜಯ ಜಯಾ
ಎನುತೆ ತದ್ಗಿರಿಯನಡರ್ದೇಱುವರ್ ಪಲಕೆಲಬರಿಂತು ನಡೆಯಿತ್ತು ಪರಿಸೆ ೨೪

ಲಳಿತ ನಿಜಧಾರಾಪ್ರವಾಹದಿಂದೊಗೆದೆಸೆವ
ಲುಳಿತ ಝೂತ್ಕಾರರವಮಂ ಕೇಳ್ದವರ ದುರಿತ
ಕುಳಮೆಲ್ಲಮೊಳಸೋರ್ದುಪೋಕುಮೆನುತುಂ ಮತ್ತಮಾ ರುದ್ರಧಾರೆಗಳೊಳು
ಘಳಿಲನೆ ಕೃತಸ್ನಾ[6]ತ[6]ರಾಗುತ್ತೆ ಜನರೆಲ್ಲ
ರಳವಿಯಿಂದೆಯ್ತಂದು ತನ್ಮಹೇಶ್ವರದೇವ
ನಲಘುಪದಪದ್ಮಮಂ ಭಕ್ತಿಯಿಂದಂ ಭಜಿಸುತಿರ್ದರಾ ವೇಳೆಯಲ್ಲಿ ೨೫

---

1 ರುಷೆ (ಗ) 2 ರುಷ (ಗ) 3 ವ (ಗ) 4 ರುಷ (ಗ) 5 ಕೆಲಕೆಲ (ಕ) ಕೆಲ ಪಲ (ಗ) 6 ನ (ಗ)

ಗುರುಪಂಡಿತಾರಾಧ್ಯ ಪದಪದ್ಮವಂ ತನ್ನ
ಸುರುಚಿರಾಮಲಚಿತ್ತಕಾಸಾರದೊಳ್ ಬಯ್ತು
ಹ[1]ರಿಸ[1]ದಿಂ ದೋನಮಾರ್ಯಂ ನಾಡೆ ಸಮಯೋಚಿತಕ್ರಿಯೆಗಳಂ ವಿರಚಿಸಿ
ವರ ಮಹೇಶ್ವರಲಿಂಗ[2]ನಂ[2] ಭಕ್ತಿಯಿಂ ನುತಿಸಿ
ಹರಗಣಂಗಳ್ಗೆ ಸಾದರದೆ ಪರ್ವಂ ಸವೆದು
ಭರದಿನದನೆಲ್ಲವಂ ಸದ್ಗುರುಸಮರ್ಪಣಂಗೆಯ್ದು ಬಳಿ[3]ಯಂ[3] ಮುದದೊಳು ೨೬

ಪಿರಿದುಮಲ್ಲಿರ್ದ ಶಿಖರಂಗಳೆಲ್ಲಂ ತಿಳಿಯೆ
ವರ ಸಪ್ತಪಾತಾಳಪರ್ಯಂತ ಮೂಲಂಗ
ಳಿರುತಿರ್ಕುಮುನ್ನತಂ ನೋಳ್ಪೊಡಭ್ರಂಕಷಣಮಾಗಿರ್ಕುಮನವರತವು
ನಿರುತಮನುವನೀಕ್ಷಿಸುತೆ ಮತ್ತಮಲ್ಲಿರ್ದ ಬಂ
ಧುರ ಪನಸ ಮಾಕಂದ ಮುಖ್ಯಮಾಗೆಸೆವ ಸುರು
ಚಿರ ಭೂಜಗುಲ್ಮಂಗಳಂ ಪಿಕಶುಕಾದಿ ಪಕ್ಷಿಪ್ರಕರಮಂ ನೋಡುತೆ ೨೭

ವರ ರುದ್ರಧಾರಾಸ್ವರೂಪಂಗಳಾದ ಭಾ
ಸುರ ಧಾರೆಗಳ ನೋಡುತುಂ ಕುಬೇರೇಶ್ವರಂ
ಪರಮಸಿದ್ಧೇಶ್ವರಂ ಮೊದಲಾದ ದಿವ್ಯಲಿಂಗಸ್ಥಾನಮಂ ನೋಡುತೆ
ಹ[4]ರಿಸ[4]ದಿಂ ವಿಸ್ಮಯಾಕ್ರಾಂತಚಿತ್ತನುಮಾಗಿ
ಕರಮೆ ತತ್ಪರ್ವತಾಗ್ರದೊಳಿರ್ಪ ಪುರತತಿಯ
ಸರಳ ತೀರ್ಥಂಗಳುನ್ನತಮಾದ ತದ್ದ್ವಾರಮಹಿಮೆಗಳನಾಲಿಸುತ್ತೆ ೨೮

ಹೃದಯದೊಳ್ ಸಂತೋಷಮಂ ತಳೆದು ಸಂತತಂ
ಸದಮಲಾತ್ಮಂ ದೋನಮಾರ್ಯನಡಿಗಡಿಗೊಲ್ದು
ವಿದಿತ ತತ್ಪರ್ವತದ ಮಾಹಾತ್ಮ್ಯಮಂ ನೆನೆದು ಹರ್ಷಾಂಬುನಿಕರದಿಂದಂ
ಪುದಿದು ತೋಯುತ್ತೆ ರೋಮಾಂಚಿತಾಂಗನುಮಾಗು
ತೊದವಿದತಿಮೋದದಿಂದಾ ಮಹೇಶ್ವರದಲ್ಲಿ
ಪಡೆದುಮಿಾಪತ್ಕಾಲಮಿರ್ದನಾ ಸ್ಥಾನಮಂ ನೋಡುತ್ತೆ ಭಕ್ತಿಯಿಂದಂ ೨೯

---

1 ರುಷ (ಗ) 2 ಮಂ (ಗ) 3 ಕಂ (ಕ) 4 ರುಷ (ಗ)

ಸದಮಲಪ್ರಚುರವಿಶ್ರುತ ಪರಮಭಕ್ತಗಣ
ಪದಸರೋರುಹಸಾಂದ್ರ ಮಕರಂದಪಾನ ಸ
ಮ್ಮುದಿತ ಚಂಚಚ್ಚಂಚರೀಕನನವರತ ಪಂಚಾಕ್ಷರೀಪ್ರಸಿತಹೃದಯಂ
ವಿದಿತ ಮಂಜುಲನೀಲಕಂಠಾಹ್ವಯಂ ಮನೋ
ಮುದದೆ ಪೇಳ್ದುರುತರಾರಾಧ್ಯಚಾರಿತ್ರದೊಳ
ಗಿದು ದೋನಮಾರ್ಯನಾ ಮಾಹೇಶ್ವರಾದ್ರಿಯಂ ಕಂಡ ಕಥನಂ ಭಾವಿಸೆ ೩೦

# ನಾಲ್ಕನೆಯ ಸಂಧಿ

## ಚತುರ್ಮುಖ ಬಸವನಂ ದೋನಮಯ್ಯ ಕಂಡುದು

ಸೂಚನೆ: ಸ್ಫುರಿತಾಂಗನಂ ಚತುರ್ಮುಖಬಸವನಂ ಮನೋ
ಹರ ಜಂಗಮಾದಿಗಳ ದೋನಮಾರ್ಯಂ ಕಂಡ
ಸರಳಕಥೆಯಂ ಕೇಳ ಸೂರಸಚಿವೇಂದ್ರ ನೀನೆಂದು ಸೋಮೇಶನುಸಿರ್ದಂ

ಶರಣಹೃದ್ಧಿಷ್ಣ್ಯನಂ ಧಿಷ್ಣ್ಯೇಶಮುಕುಟನಂ
ಸುರವರ್ತ್ಮಕೇಶನಂ ಕೇಶಜಕ್ಷ್ವೇಡಕಂ
ಧರನನಗಜಾವರನ ವರದಕರಕಂಜನಂ ಕಂಜಜಶಿರಃಕೃಂತನಂ
ಹರಿಸುರಜ್ಯೇಷ್ಠನತಪಾದಸರಸಿರುಹನಂ
ಸರಸಿರುಹನೇತ್ರಜಶರೀರಘನಮರುತನಂ
ಮರುತಸಖನಯನನಂ ಗುರುನೀಲಕಂಠನಂ ಭಜಿಸುವೆಂ ಭಕ್ತಿಯಿಂದಂ ೧

ವಿನಯನಿಧಿ ದೋನಮಾರ್ಯಂ ಮಲ್ಲಿಕಾರ್ಜುನನ
ವಿನುಪಡಿಗಳಂ ಕಾಣ್ಬ ತವಕದಿಂ ಪರಿಸೆಗೂ
ಡನುನಯದಿನಲ್ಲಿಂದಮೆಳ್ದು ಸಿರಿಗಿರಿಯತ್ತ ಬರುತಿರ್ದನತಿಮುದದೊಳು
ವಿನಯದಿಂದಾ ಪರಿಸೆ ಜಯಜಯಯೆಂಬ ಘೋಷ ಎನುತೆ
ಮನದಲಂಪಿಂ ಗಿರಿಯ ಮಧ್ಯಕೆಯ್ತರಲಲ್ಲಿ
ಕನದಮಲಕಲ್ಪವೃಕ್ಷಮನಡರ್ದ ಕಲ್ಪವಲ್ಲಿಯ ಪಾಂಗಿನಂತೆ ಮುದದಿಂ ೨

ಭರದಿಂದಮಾ ಗಿರಿಯನಡರ್ದೇಱು ಮತ್ತಲ್ಲಿ
ಸುರುಚಿರ ಸ್ವರ್ಗಾಪವರ್ಗಸರಣಿಗಳಂತೆ
ಕರಮೆಸೆವ ನಿಶ್ರೇಣಿಕೆಗಳೆರಡನುಱಿದಾಂಟಿ ಗಿರಿಯಗ್ರಮಂ ಸೇರುತೆ
ಪಿರಿದು ಪಂಚಕ್ರೋಶಮಾತ್ರದಿಂದಾ ಗಿರಿಯ
ಸರಳ ಪೂರ್ವಾಶೆಯೊಳ್ ಮುನಿ[1]ಪುರಂ[1] ರಾಜಿಕುಂ
ನಿರುತಮಾ ಪುರದ ಪಶ್ಚಿಮದಿಕ್ಕಿನೊಳ್ ಮನೋಹರಮಾಗಿ ತೋಱುತಿರ್ಪ ೩

[1] ಕುಲಂ (ಗ)

ಬಿಲಕಲ್ಪದೊಳ್ ಮೆಱೆವ ನಾಲ್ಮೊಗದ ಬಸವನಂ
ನಲವಿನಿಂ ಕಂಡನೀ ವೃಷಭಮಾಹಾತ್ಮ್ಯವಂ
ಸಲೆ ಪೊಗಳ್ವೊಡಾರ್ಗಮರಿದೆಂತೆನಲ್ಕೀ ಜಗತ್ಸೃಷ್ಟಿಯಂ ಮಾಳ್ಪೆನೆಂದು
ಮಲಹರಂ ಮುನ್ನುಜ್ಜುಗಿಪ ವೇಳೆಯೊಳೆ ಲೋಕ
ದಲಘುಸೃಷ್ಟಿಗಳಿಂದೆ ಮೊದಲ ವೃಷಸರ್ಗದೊಳೆ
ಲಲಿತ ಬಸವೇಶ್ವರನನೀಶ್ವರಂ ನೋಡಿ ನುಡಿದಂ ಮನದಲಂಪು ಪೊಣ್ಮೆ ೪

ಎಲೆ ವೃಷಭ ಸುರಕದಂಬಕ್ಕೆ ಸುರಭಿಯನಿರಿಸಿ
ನಲವಿನಿಂ ನಂದೆಯಂ ಭದ್ರೆಯಂ ಸುಮನೆಯಂ
ಸಲೆ ಸುಶೀಲೆಯನಿಳೆಗೆ ನೀಂ ಕೊಂಡುಪೋಗಿ ಪಶುನಿಕರದುತ್ಪತ್ತಿಗಳನು
ಒಲವಿನಿಂ ಶ್ರೀಶೈಲದುತ್ತರದ ಶೃಂಗದೊಳ್
ನೆಲಸಿ ಗೋಪ್ಯದೊಳಿರ್ದು ರಚಿಸೆನಲ್ ತದ್ವೃಷಭ
ನಲಘುಹರ್ಷದೆ ಭೂಮಿಗೆಯ್ದಿ ಸಾಸಿರಬಿಲ್ಗಳಳತೆಯಿಂದಾ ಭೂಮಿಯ ೫

ಕೆಳಗೊಂದು ಪೊಳಲ ವೃಷಭಾಖ್ಯದಿಂದಂ ರಚಿಸಿ
ಬಳಿಕದಱೊಳಗೆ ಚತುರ್ಮುಖಬಸವನಂ ನಿಲಿಸಿ
[1]ಲಳಿತ[1] ಸದ್ಭಕ್ತಿಯಿಂ ಪೂಜಿಸುತ್ತಾ ವೃಷಭನೊಳ್ ಮಿಱುಪ ನಾಲ್ಕುಮುಖದಿಂ
ಘಳಿಲನೊಪ್ಪುವ ಚತುರ್ಗೋಮಾತೃಗಳನೆಯ್ದೆ
ಮಿಳಿರ್ವ ನಾಲ್ಕುಂದಿಕ್ಕಿನೊಳ್ ಪಡೆದನವಱಿಂದೆ
ತೊಳಪ ಗೋವಿನ ಹಂಗಳಂ ಪಡೆದನಿಳೆಗೆ ಹಿತಕರಮಾಗಿ ತದ್ವೃಷಭನು ೬

ಭರದಿನಾ ಪಶುಗಣಂ ಪೊಱಗಣ್ಗೆ ಪೋಪುದ
ಕಿರದೆ ಬಿಲಪರ್ವತದೊಳೊಂದುಬಿಲನಂ ಸಮೆಯೆ
ಹರನ ಕನ್ಯಾಸಿದ್ಧನಾಥನಾಲಯದ ಬಡಗಣದಿಕ್ಕಿನಿಂದಮೊಸೆದು
ಧರೆಗೆ ಪಶುಸಂಕುಲಂ ಬರುತಿರಲ್ಕವಱೊಳಗೆ
ವರ ಹೋಮಧೇನ್ವರ್ಥಮಾಗಿ ಮುನಿವನಿತೆಯರ್
ಕರಮೆ ಕೊಂಡೊಯ್ದುರವಶಿಷ್ಟಪಶುಸಂದೋಹಮಾಯವನಿಗೆಯ್ತಂದುದು ೭

1 ಬಳಿಕ (ಕ) ಲಲಿತ (ಗ)

ವರ ವೃಷಭನಿಂದೆ ತತ್ಸರ್ಗಮಾಗಲ್ ಮುಗುಳ್ದು
ಧರೆಯೊಳಗೆ ವೃಷಸರ್ಗವೆಂದು ವೇದೋಕ್ತದಿಂ
ಪಿರಿದು ಪೆಸರಾಯ್ತು ಮತ್ತಾ ಚತುರ್ಮುಖವೃಷೇಶನ ನಾಲ್ಕುತುಂಡಂಗಳು
ನಿರುತಮಾ ಧರ್ಮಾರ್ಥಕಾಮಮೋಕ್ಷಂಗಳ್ಗೆ
ಭರದೆ ಕಾರಣಮಾದುವದಱಿಂದೆಲ್ಲಾ ಮುನಿಗ
ಳರರೆ ಅಂದಿಂದಮಿಾ ಪಾತಾಳವೃಷಪುರಾಧೀಶನಂ ಬಸವೇಶನಂ ೮

ಉರು ಚತುರ್ಮುಖವೃಷಾಧೀಶನಂ ಭಕ್ತಿಯಿಂ
[1]ಪಿರಿದರ್ಚಿಪರ್ ಮನೋರಾಗದಿಂದಂ ಮತ್ತೆ
ಪರಮ ಕನ್ಯಾಸಿದ್ಧನಾಥನಂ ನಿತ್ಯಂ ತ್ರಿಸಂಧ್ಯೆಯೊಳ್ ಭಜಿಪರೊಸೆದು
ಮರಳಿ ಕನ್ಯಾಸಿದ್ಧನಾಥನಂ ನಾಲ್ಮೊಗದ
ವರ ವೃಷಭನಂ ನಿಯತಸದ್ವ್ರತಂಗಳಿನೆಯ್ದೆ
ಹ[2]ರಿಸ[3]ವಿಗೆ ನೀರಾಜನಂಗಳಿಂದೊಲ್ದು ಮುನಿಕನ್ಯಾಳಿ ಭಜಿಸುತಿರ್ಕುಂ ೯

ಪಿರಿದದುವೆ ಮೊದಲ್ಗೊಂಡು ಕನ್ಯಾಬಿಲಂ ಎಂದು
ವರ ನಾಮಮಾದುದಾ ಗಿರಿಶನಣಿಮಾದ್ಯಷ್ಟ
ವರಸಿದ್ಧಿಗಳ್ಗೆ ನೆಲೆಯಾದುದಱಿನೆಯ್ದೆ ಕನ್ಯಾಸಿದ್ಧನಾಥನೆಂಬ
ಪರಮಾಭಿಧಾನಮಾದುದು ಮತ್ತಮಾ ಶಿವನ
ಸರಳದಕ್ಷಿಣಭಾಗದೊಳ್ ಪರಿದುತೋರ್ಪ ಬಂ
ಧುರ ಫೇನತತಿ ಪತಾಕಿನಿ ಸುಕೃತಪಾಕಿನಿ ಮಹತ್ತರಾಮೃತಸೇಕಿನಿ ೧೦

ತೊಳಪ ಮಂದಾಕಿನಿ ಕರಂ ರಂಜಿಪುದು ದೇವ
ಕುಳವಂದ್ಯನಪ್ಪ ಬಿಲಕಲ್ಪೋದಿತನುಮಪ್ಪ
ಲಲಿತವೃಷಭೇಶಲಿಂಗಂ ಖ್ಯಾತನಾಗಿರ್ಪನಾ ಚತುರ್ಮುಖಬಸವನು
ಮಿಳಿರ್ದೊಪ್ಪುವಂ ಮತ್ತಮಿಳೆಯೊಳಾ ನಾಲ್ಮೊಗದ
ಲುಳಿತಬಸವಂ ಚತುರ್ಮುಖ[4]ಬಸವ[4]ಲಿಂಗವೆಂ
ಬಳಘುನಾಮದ ಚತುರ್ಮುಖಬಸವನಂ ಚತುರ್ಮುಖ ಬಸವಲಿಂಗಯ್ಯನು ೧೧

ನಲಿದು ಪೂಜಿಸಿದೊಡಾ ನಾಲ್ಮೊಗದ ಬಸವನಂ
ಸಲೆ ಚತುರ್ಮುಖ[4]ವೃಷಭ[4]ಲಿಂಗನಂ ಪೂಜಿಸಿದ
ಫಲಮೊವುದುಂಟು ಮತ್ತಾ ಫಲಂ ನರರ್ಗಪ್ಪುದೆಯ್ದೆ ಮುಕ್ತಿಗಳುಮಕ್ಕುಂ

---

[1] ಪ (ಕ) [2] ರುಷ (ಗ) [3] ದಿನಪ (ಕ) [4] ಬಸವ (ಗ)

ನೆಲೆಯೆನುತೆ ನಾಲ್ಮೊಗದ ಬಸವನಂ ನೋಡುತುಂ
ಸುಲಭದಿಂದದಜಾಲಯದ ಮುಂದೆ ತೋರ್ಪ ನಿ
ರ್ಮಲಚತುರ್ಮುಖಬಸವಲಿಂಗನಂ ನೋಡುತ್ತೆ ಪೊಗಳುತ್ತೆ ಡೋನಮಾರ್ಯಂ ೧೨

ವರ ಚತುರ್ಮುಖಬಸವಲಿಂಗನಂ ಪೂಜಿಸು
ತ್ತುರುಭಕ್ತಿಯಿಂ ಮಗುಳ್ದು ತನ್ನಿಷ್ಟಲಿಂಗಕ್ಕೆ
ಹರಿಸದಿಂ[1] ನಿಯತಾರ್ಚನೆಗಳನೊಲ್ದೆಸಗಿ ತಕ್ಷಣದಲ್ಲಿ ಮನನುಬ್ಬುತೆ
ಗುರುಪಂಡಿತೇಂದ್ರಾರ್ಥಮಾಗಿ ಗಣಪರ್ವಮಂ
ವಿರಚಿಸಿದನಲ್ಲಿ ಮತ್ತಾ ಪರಿಸೆ[2]ಯೊಡಗೂಡಿ
ತೆರಳಿಬರುತಿರ್ದನಾ ಪರಿಸೆ[2]ಯುತ್ಸವವನೇನೆಂಬೆನರೆಬರ್ ಪಾಡುತೆ ೧೩

ಬರುತಿರ್ಪರರೆಬರುಚಿತಚಿಂದುಗಳ ಪಾಡುತ್ತೆ
ಹರಿಸದಿಂದಾಡುವರ್ ಗದ್ಯಪದ್ಯಂಗಳಂ
ಪಿರಿದುಮಾನಂದಾಶ್ರುವನೊಗೆನಂತಿರೋದುವರ್ ತಾಳಂಗಳಂ ಬಾಜಿಸಿ
ಕರಮುಪಡಿ ಗತಿಗೆ ನರ್ತಿಸುತೆ ಬರ್ಪರ್ ಕೆಲರ್
ಸರಳಸದ್ಭಕ್ತಿರತಿಗಳನಾಡುತಾವಗಂ
ಕರಮೆ ಸಂತೋಷಿಸುತೆ ಬರ್ಪವರ್ ಕೆಲಬರಿವರೆಲ್ಲರಂ ನೋಡುತೊಸೆದು ೧೪

ಹರಿಸ[3]ದಿಂ ಡೋನಮಾರ್ಯಂ ಬರುತಿರಲ್ ಮತ್ತೆ
ವರ ಪುರಾತನರ ಕೀರ್ತಿಸುತೆ ಬರ್ಪರ್ ಕೆಲರ್
ನಿರುತಮಾ ಬಸವೇಶ್ವರಾರ್ಪಣಮೆನುತ್ತೆ ಬರುತಿರ್ಪ ಭಕ್ತರ್ ಕೆಲಬರು
ಉರುತರಪ್ರಮಥರ್ಕಳಂ ಮತ್ತಮಾದ್ಯರಂ
ಭರದೆ ನುತಿಸುತ್ತೆ ಬರುತಿರ್ಪವರ್ ಕೆಲಕೆಲಬ
ರಿರದೀಪ್ಸಿತಂಗುಡುವ ಬಸವನಂ ನೋಡುತೆಯ್ತುರ್ಪವರ್ [4]ಪಲ[4]ಕೆಲಬರು ೧೫

ಮಿಸುಗುವಾ ಬಸವನಂ ಪೊಗಳುತ್ತೆ ಸಂತೋಷ
ದೆಸಕದಿಂ ಡೋನಮಾರ್ಯಂ ಮಲ್ಲಿಕಾರ್ಜುನನ
ಕುಸುಮಶರಹರನ ಪುರಕಳ್ತಿಯಿಂ ಬರುತಿರಲ್ ಪಾಡುತಾಡುತ್ತೆ ಪರಿಸೆ[5]
ಮುಸಕದಿಂ ಮುನ್ನಿನಂತೆವೊಲೆಯ್ದೆ ಮುನ್ನೀರೊ
ಳೆಸೆವ ಘನಘೋಷರವದಂತೆ ದನಿಗುಡುತೆ ರಾ
ಜಿಸುವ ನದಿಗಳ ಸಂಗಮದೆ ಪೆರ್ಚಿ ಭಾಗೀರಥಿಯೆ ಬರ್ಪವೊಲ್ ನಡೆದುದು ೧೬

---

[1] ರುಷ (ಗ) [2] ಷೆ (ಗ) [3] ರುಷ (ಗ) [4] ಕೆಲ (ಗ) [5] ರುಷೆ (ಗ)

ನಡೆವ ಪ[1]ರಿಸೆ[1]ಯ ಪಾದಹತಿಗಳ್ಗೆ ಭೂ[2]ಮಿ[2] ಸೊಂ
ಪಡರ್ದು ಹರ್ಷಿಸಿ ಚಲಚ್ಚ[3]ರಣಾ[3]ಳಿಸಂಭ್ರಮು
ಕ್ಕೊಡನೆ ಶುಷ್ಕದ್ರುಮಲತಾಗುಲ್ಮಸಂಚಯಂಗಳ್ ಪಲ್ಲವಿಸೆ ಮುದದೊಳು
ಎಡಬಲದೊಳೊಂದಿರ್ಪ ಪಾಷಾಣವಿತತಿಗಳ್
ಸಡಗರದೆ ಕರಗುತಿರೆ ಪ[4]ರಿಸೆ[4]ಯಬ್ಬರಕೆ ಗಿರಿ
ಬಿಡದೆ ಪೆರ್ಚುತ್ತಿರಲ್ ಮೇಲ್ಗವಿದ ಮೇಘಾಳಿ ಪರಿರಂಜಿಸುತ್ತುಮಿರಲು ೧೭

ಎಡೆಬಿಟ್ಟು ತೋಱುವಾಗಸವೆಯ್ದೆ ಪರಿಸೆಯಿಂ
ಕಡುಪಿನಿಂ [5]ತಿಂ[5]ಬಿರಲ್ ಶ್ರೀಪರ್ವತಂ ತನ್ನ
ಪಡಪುಗಳ ನೋಡಲೆಯ್ತರ್ಪ ಪರಿಸೆಯ ಕಂಡು ಹ[6]ರಿಸ[6]ದಿಂ ಪುಳಕಚಯಮಂ
ಕಡುಮೆಱೆವ ತನ್ನ ತನುವೊಳ್ ತಳೆದನೆಂಬಂತೆ
ಸಡಗರದೆ ಬರುತಿರ್ಪ ಪರಿಸೆಯೊಳಗೆಯ್ತರ್ಪ
ಮೃಡಭಕ್ತರಿರವ[7]ನೆನ್ನ[7]ಱಿವನಿತನುಸಿರ್ದಪೆಂ ಕೇಳ ಸೂರಾಮಾತ್ಯನೆ ೧೮

ಕರಮೆಸೆವ ಲೋಹಪಾದುಕೆಗಳಂ ಮೆಟ್ಟಿ ನಿ
ರ್ಭರದಿಂದೆ ಬರ್ಪವರ್ ಕೆಲಬರತಿಸೌಖ್ಯಮಾ
ದುರುತಾಮ್ರರಜತ ಕಪನೀಯಂಗಳಿಂ ಸಮೆದ ಚಿತ್ರತರಪಾದುಕೆಗಳಂ
ಹ[8]ರಿಸ[8]ದಿಂ ಮೆಟ್ಟಿ ಬರುತಿರ್ಪವರ್ ಪಲಕೆಲಬ
ರಿರದೆ ಪಾದುಕೆಗಳಂ ಮೆಟ್ಟಿಸುವ ಚಟ್ಟಿರ್ಗೆ
ವರ ಪಾದನಖಮಯೂಖಂ ದರ್ಪಣಾಕೃತಿಯೊಳೆಸೆಯೆ ಬರ್ಪರ್ ಕೆಲಬರು ೧೯

ನಸುಗಾವಿಗಳ ಗುಳ್ಳಗಾವಿಗಳ ನಾಡೆ ಕೆಂ
ಪೆಸೆವ ಕಾವಿಗಳ ಪೊನ್ನಂಚಿನಂಚುಗಳಿಂದೆ
ಮಿಸುಪ ಕಾಷಾಂಬರಂಗಳ ಪೊದೆದು ಬರ್ಪವರ್ ಪಲಕೆಲಬರಲ್ಲಿ ಮತ್ತಂ
ಎಸೆವ ಬೆಳ್ಪಟ್ಟೆಗಳ ಧೌತವಸ್ತ್ರಂಗಳಂ
ಪೊಸದೊವಟೆದ ನವೀನಾಂಶುಕಂಗಳ ನಾಡೆ
ಮಿಸುಪ ಪಟ್ಟಾಂಬರಂಗಳ ಪೊದೆದು ಸೊಬಗಿನಿಂ ಬರ್ಪವರ್ ಕೆಲಬರಲ್ಲಿ ೨೦

ಮಿಸುಪ ಕೂರ್ಪಾಸಂಗಳಂ ತೊಟ್ಟು ಪೋಪವರ್
ಮಸಕದಿಂ ನಿಱಿವಿಡಿದೆಳಲ್ವ ಧೋವತಿಯುಟ್ಟು
ಸಸಿನೆ ಪೋಪರ್ ಕೆಲರ್ ಪಟ್ಟೆಗುಚ್ಛಂಗಳಂ ವೇಣ್ಯಗ್ರದೊಳ್ ತಳೆಯುತೆ

---

1 ರುಷೆ (ಗ) 2 ತಿ (ಗ) 3 ಲನಾ (ಕ) 4 ರುಷೆ (ಗ) 5 ತುಂ (ಕಗ)
6 ರುಷ (ಗ) 7 ನಾನ (ಕ) 8 ರುಷ (ಗ)

ಒಸೆದು ಪೋಪರ್ ಕೆಲರ್ ಪಟ್ಟಸೂತ್ರಂಗಳಂ
ಎಸೆವ ಪಟ್ಟಾಂಬರಂಗಳನಳ್ತಿಯಿಂದೆ ರಾ
ಜಿಸುವ ಮಸ್ತಕದೊಳಳವಡಿಸಿಕೊಂಡೆಯ್ದೆ ಮುದನಂ ತಾಳ್ದು ಬರುತಿರ್ಪರು ೨೧

ಬಿಗಿದೊಪ್ಪುವೊಡ್ಯಾಣದಿಂ ಕೆಳಗೆ ಜೋಲ್ದು ಸೊಬ
ಗೊಗೆವ ಕೂರ್ಪಾಸಂಗಳೂರ್ಧ್ವದೊಳ್ ಶೋಭಿಸುವ
ನೆಗಳ್ದ ಪಳುಕಿನ ಮಾಲೆಗಳ ಧರಿಸಿ ಬರ್ಪವರ್ ಕೆಲಬರದಱೊಳೆನಸುಂ
ಸೊಗಯಿಸುವ ಭುಜದೊಳುರದೊಳ್ ಪಾಣಿಯುಗಳದೊಳ್
ಮಿಗೆ ತೋಱುವುಪವೀತದಂದದೊಳೆ ತಳೆದ ಸೊಂ
ಪೊಗೆವ ರುದ್ರಾಕ್ಷೆಗಳಿನಂದವೀಯುತ್ತೆ ಬರ್ಪರ್ ಕೆಲಬರದಱೊಳೊಸೆದು ೨೨

ಕರವೆಸೆವ ಕಾವಿ ಮಂಚಿಟಿಗೆ ಶೋಪುಗಳಿಂದೆ
ಭರದೆ ಬಾಸಣಿಸೆಸೆವ ಬಲ್ಲಾಳದಟ್ಟೆಯೊಳ
ಗುರುವೋದದಿಂ ಬರ್ಪವರ್ ಕೆಲಬರಲ್ಲಿ ಪೊಸರನ್ನಗಂಬಳಿಯನಾಂತು
ಹ[1]ರಿಸ[1]ದಿಂ ಬರ್ಪವರ್ ಕೆಲಬರತಿಶೋಭಿಸುವ
ವರ ಕಾಂಸ್ಯದರ್ಪಣಂಗಳ್ ಪಾರ್ಶ್ವದೊಳ್ ಪೊಳೆಯೆ
ಸರಳಕಲಶಂಗಳಂ ಪೊತ್ತಾಡುತಂ ಬರ್ಪವರ್ ಕೆಲಬರದಱೊಳೆಸೆಗುಂ ೨೩

ಪುಲಿಯ ಸಮ್ಮಂಗಳಿಂ ಸಮೆದ ಮಕುಟಂಗ[2]ಳಂ[2]
ಲಲಿತ ಕಂಬಳತತಿಗಳಿಂದೆ ವಿರಚಿಸಿದ ನಿ
ರ್ಮಲಕಿರೀಟಂಗ[2]ಳಂ[2] ಕಾಂಸ್ಯಮಕುಟಂಗ[1]ಳಂ[1] ರುದ್ರಾಕ್ಷಮಕುಟಂಗ[2]ಳಂ[2]
ಸಲೆ ರನ್ನಮಕುಟಂಗಳಂ ಧರಿಸಿ ಸಂತಸದೆ
ಕೆಲಬರೆಯ್ತಂದರುಱ ಬಿಡುಮುಡಿಗಳೆಸೆಯೆ [3]ಬೋ[3]
ಳ್ದಲೆಗಳೆಸೆಯಲ್ ತುಱುಂಬೆಸೆಯುತಿರೆ ಪಲಕೆಲಬರೆಳ್ತಂದರಳ್ತಿಯಿಂದಂ ೨೪

ವರ ರತ್ನಖಚಿತಕುಂಡಲದಿಂದೆ ಮತ್ತೆ ಬಂ
ಧುರತರಸ್ಫಟಿಕಕುಂಡಲದೆ ರುದ್ರಾಕ್ಷಿಯಿಂ
ದಿರದೆಸೆವ ಕುಂಡಲದೆ ಮಿಸುನಿಗುಂಡಲದಿಂದೆ ತಾಮ್ರಕುಂಡಲದೆ ಬಳಿಯಂ
ಸರಳಫಣಿಕುಂಡಲದೆ ರಜತಕುಂಡಲದಿಂದೆ
ಕರವೆಸೆವ ನಂದಿಕುಂಡಲದಿಂದೆ ಶೋಭಿಸುತೆ
ಹ[1]ರಿಸ[1]ದಿಂದರೆಬರೆಳ್ತಂದರಾ ಪರಿಸೆಯೊಳ್ ಮಸಕದಿಂದಸವಸದೊಳು ೨೫

---

1 ರುಷ (ಗ) 2 ಳಂ (ಗ) 3 ಜೋ (ಕ)

ಸರಳ ಗೌರೀವೇತ್ರಮಂ ಸೂಕ್ಷ್ಮವೇತ್ರಮಂ
ಪಿರಿಯ ಚಿಪ್ಪಿನ ಬೆತ್ತಮಂ ಗ್ರಂಥಿವೇತ್ರಮಂ
ಹರಿಸ[1]ದಿಂದೀ ಬೆತ್ತ ಮೊದಲಾದ ಬೆತ್ತಂಗಳಂ ಪಿಡಿದು ಕೆಲಬರೊಸೆದು
ಬರುತಿರ್ದರುಱಿ ಕೆಚ್ಚುವಡೆದ ದಂತಂಗಳಂ
ಸಿರಿಗಂಧ ಮರದ ದಂಡಂಗಳಂ ಖದಿರದಿಂ
ವಿರಚಿಸಿದ ದಂಡಂಗಳಂ ಪಿಡಿದು ಸಂತೋಷದಿಂದರೆಬರೆಯ್ತಂದರು ೨೬

ಕನಕಕಲಶಂಗಳಿಂ ಪಟ್ಟೆಗುಚ್ಛಂಗಳಿಂ
ಮಿನುಪ ಜಲಪ್ರೋಷಣದ ಕೆಲಸಂಗಳಿಂ ಬಳಿಕೆ
ನನಸು ಪರಿಪರಿಯ ಬಣ್ಣಂಗಳಿಂದೆಸೆವ ಬೆಳ್ಗೊಡೆ ಮುತ್ತುಗೊಡೆ ಗಡಣಮಂ
ವಿನಯದಿಂ ಪಿಡಿದು ನಡೆವರ್ ಕೆಲಬರಕ್ಕಜದಿ
ನೆನಸುವೊಪ್ಪುವ ನವ್ಯಬಂಧಂಗಳಿಂದೆ ತೊ
ಟ್ಟನೆ ತೋರ್ಪ ಗೆಜ್ಜೆಗಳ ಕೊರಳೊಳಳವಡಿಸಿ ಬರುತಿರ್ಪವರ್ ಪಲಕೆಲಬರು ೨೭

ಕರಕಕ್ಷನಕ್ಷಸ್ಥಲಂಗಳೊಳ್ ಸಂತಸದೆ
ವರ ಲಿಂಗಮಂ ಧರಿಸಿ ಲಿಂಗನಿಷ್ಠಿತರಾಗಿ
ಹರಿಸ[1]ದಿಂ ಬರ್ಪವರ್ ಕೆಲಬರೀ ತ್ರಿಭುವನಂಗಳನೆಯ್ದೆ ಪರಿಪಾಲಿಪ
ಪರಮ ಸದ್ಭಕ್ತಿವಂತರ ಮಕುಟವರ್ಧನರ
ಚರಲಿಂಗಮೂರ್ತಿಗಳನೀಕ್ಷಿಸುತೆ ಸಂತಸದೊ
ಳಿರದವರ್ಗೊಲ್ದು ವಂದಿಸುತೆ ಬರ್ಪರ್ ಕೆಲಬರಾ ಪರಿಸೆಯೊಳಗೆ ನಿಸದಂ ೨೮

ಮಿಸುಪ ತಾಮ್ರದ ಕುಂಡಲಂಗಳಿಂ ತಾಮ್ರದಿಂ
ದೆಸೆವ ಯಜ್ಞೋಪವೀತಂಗಳಿಂ ತಾಮ್ರದೊಳೆ
ನಿಸದಮೊಪ್ಪುವ ಕೀರ್ತಿಮುಖತತಿಗಳಿಂ ತಾಮ್ರಕಂಕಣಂಗಳಿನನಿಶಮುಂ
ಪೊಸತಪ್ಪ ತಾಮ್ರಕಟಕಂಗಳಿಂ ಮತ್ತೆ ರಾ
ಜಿಸುವ ತಾಮ್ರದ ವಿಮಲಕಟಿಸೂತ್ರವಿಸರದಿಂ
ಬಿಸನಂದಮಪ್ಪ ಚಲ್ವಂತಳೆದು ಚರಲಿಂಗಮೂರ್ತಿಗಳ್ ಬರುತಿರ್ದರು ೨೯

ಪರಡುವರೆಗಂ ಲೇಪಿಸಿದ ಭಸ್ಮಕಾಂತಿಯಿಂ
ದಿರದೆ ನಡೆವೆಡೆಯೊಳತಿಶೋಭಿಸುವ ಕನದಮಲ
ಚರಣದೊಳ್ ಮೆಱೆವ ನಖಕಾಂತಿಗಳ್ ನಯನದೀಧಿತಿಗಳಾನನದೊಳೆಸೆವ

---

1 ರುಷ (ಗ)

ಕಿರಣತತಿಗಳ್ ದೇಹಲಿಪ್ತ ಭಸಿತಗಭಸ್ತಿ
ಸುರುಚಿರಾಮಲದಂತಘೃಷ್ಟಿಗಳಿವೆಲ್ಲಮುಂ
ಕರಮೆ ಪೊಸತಪ್ಪ ತಣ್ಗದಿರ್ದೋಂಗಲಂ ಸೂಸೆ ಬರುತಿರ್ಪವರ್ ಕೆಲಬರು ೩೦

ನನ ಪಟ್ಟಗುಚ್ಛಸಂಯುಕ್ತಸೂಕ್ಷ್ಮಛತ್ರ
ನಿವಹಂಗಳಿಂದೆ ಪೊನ್ಗಾವುಗಳ್ ಶೋಭಿಸುವ
ಧವಳಚಾಮರಸಮೂಹಂಗಳಿಂ ಕಿಸುವನ್ನಕಳಸಂಗಳಿಂದೆ ಮೆಱೆವ
ತವೆ ಯೋಗದಂಡಸಂದೋಹಂಗಳಿಂ ರಾಜಿ
ಸುವ ಬಗ್ಗದೊವಲುಡಿಗೆಗಳಿನೆಯ್ದೆ ಶೋಭಿಸುತೆ
ವಿವಿಧ ಚರಲಿಂಗಮೂರ್ತಿಗಳೊಲ್ದು ಬರುತಿರ್ದರಾ ಪ[1]ರಿಸೆ[1]ಯೊಳಗೆ ನಿಸದಂ ೩೧

ಸುರುಚಿರ ಕರಸ್ಥಲಂಗಳ ಮೇಲೆ ಸುತ್ತಿರ್ದ
ವರ ಚಿತ್ರವಸ್ತ್ರಂಗಳಿಂದೆ ಮೆಲ್ನಡೆಗಳಿಂ
ಸರಳ ಮೃದುವಾಕ್ಯಂಗಳಿಂದಂ ವಿರಕ್ತಿಪ್ರಭಾವತಿಗಳಿಂದೆ ಕೆಲರು
[2]ಪಿ[2]ರಿದುಮಾರಾಧ್ಯಸಂಪತ್ಸಮೂಹಂಗಳಿಂ
ದುರುತರಪ್ರಭುಶಕ್ತಿನಿಕರಂಗಳಿಂ ಮನೋ
ಹರಲಾಂಛನಂಗಳಿಂದೆಸೆಯುತ್ತೆ ಪಲಕೆಲರ್ ಬರುತಿರ್ದರಲ್ತಿಯಿಂದಂ ೩೨

ಪಿರಿದು ಪಾವನಮಪ್ಪ ಭಕ್ತಿಶೃಂಗಾರಿಗಳ್
ಧರಣಿಯೊಳಗತಿಪೂಜ್ಯವೈಭವರ್ ಪ್ರತ್ಯೇಕ
ಮುರುಹರ್ಷದಿಂದೆ ತಂತಮ್ಮೊಗ್ಗು ವಿಡಿದುಭಯಜಂಗಮರ್ ಬರುತಿರ್ದರು
ಮರಳಿ ಕೆಲಬರ್ ಕಾಲ್ಗಳೊಡೆದು ಮುಂದಣ್ಗಡಿಯ
ನಿರದಿಡಲ್ಕಾರದಂಬಳ್ಗ್ಗಿಗಳಿಂ ತೆಮಳ್ದು
ಭರದೆ ಬರ್ಪರ್ ಕೆಲರ್ ಕೆರ್ಪುಗಳ್ ಪರಿಯಲೆಳದೊಯ್ದು ಬರ್ಪರ್ ಕೆಲಬರು ೩೩

ಪಿರಿದು ಬಾಗಿದ ಬೆನ್ಗಳಿಂ ನಡುಪ ಶಿರಗಳಿಂ
ಕರಮೆ ಬೆನ್ವತ್ತಿದುದರಂಗಳಿಂ ಕೀ[3]ನಿ[3]ಗಳ್
[4]ಪೊರೆದ[4] ಪಲ್ಗಡಣಂಗಳಿಂದೆ ಪೆಡತಲೆವರಂಗುಳಿದ ನೇತ್ರಂಗಳಿಂದಂ
ನರೆತ ಹರಿಗಡ್ಡಂಗಳಿಂ ಸುಕ್ಕುವಡೆದೆಸೆವ
ಕರಕಪೋಲಂಗಳಿಂ ಶೋಭಿಸುತೆ ವೃದ್ಧರ್ಕಳ
ಳಿರದೆ ಕೋಲ್ವಿಡಿದೆಯ್ದಿ ಬರುತಿರ್ದ ಪರಿಸೆಯೊಳ್ ಮು[5]ಳ್ಗ[5]ತ್ತೇಱುತ್ತಮೊಸೆದು ೩೪

---

1 ರುಷೆ (ಗ) 2 ಪ (ಕ) 3 ಲು (ಕ) 4 ಪರಿದ (ಕ) 5 ಗ್ಗು (ಕಗ)

ನಿರುತದಿಂ ವಿಧ್ಯುಕ್ತಮಾದ ತಾಣಂಗಳೊಳ
ಗಿರದೆಸೆವ ಶುಭ್ರತ್ರಿಪುಂಡ್ರಂಗಳಿಂದೊಸೆದು
ಭರದೆ ಕಟ್ಟಿದ ಮಕುಟದೆಡೆಗಳೊಳ್ ಪಿಂದಣ್ಗೆ ಬಿಳ್ದ ಬೆನ್ನೊಳಗೆಳಲ್ವ
ವರ ಜಟಾಜಾಲಂಗಳಿಂ ಭುಜದೊಳಿಟ್ಟು ಬಂ
ಧುರಯೋಗವಟ್ಟಂಗಳಿಂ ಭೂತಿಪಾತ್ರೆಗಳಿ
ನುರುಕಾಮಸಜ್ಜಿಕೆಗಳಿಂ ದೇಹಸತ್ವಕ್ಕೆ ಪಿಡಿದೆಸೆವ ಕೋಲ್ಗಳಿಂದೆ ೩೫

ಭರದಿಂ ಜಗತ್ಸಮೂಹಂಗಳಂ ಪಾವನದೊ
ಳಿರಿಪಳ್ತಿಯಿಂತಿದೀ ರೂಪದಿಂದಂ ಪುಟ್ಟಿ
ನಿರುತದಿಂ ಸರ್ವತೀರ್ಥೈಸ್ಸಮಾಗತ ಎಂದು ಪೇಳ್ದ ವಾಕ್ಯಮನಾಪಗಂ
[1]ತಿರಿ[1]ಕರಿಪ ಪಾಂಗಿನಿಂದೆಲ್ಲ ತೀರ್ಥಾ[2]ಳಿ[2]ಗಳ್
ಚರಿಸುಗುಂ ನೋಡಿಮಾ ಪರ್ವತದೊಳೆಂಬಂತೆ
ಕರಮೆಸೆವ ವೃದ್ಧಮುನಿನಿಕರಮೆಳ್ತರುತಿರ್ದುದಾ ಪರಿಸೆಯೊಳಗೆ ಮುದದಿಂ ೩೬

ಮಿನುಪ ವಸ್ತ್ರದ ಬೊಕ್ಕಸಂಗಳಿಂದಂ ಮತ್ತೆ
ವಿನುತ ದಲಪೂಗಂಗಳಿಂ ಚೂರ್ಣಪಾತ್ರೆಗಳಿ
ನೆನಸುಮೊಪ್ಪುವ ಗಂಧಕಸ್ತೂರಿಗಳ್ ಮುಖ್ಯದಿವ್ಯಪರಿಮಳನಿಕರದಿಂ
ಅನುವಿನಿಂದಂ ಕರಂಡಗೆಯೊಳಗೆ ತಿಂಬಿ ಕ
ನ್ಮನೆ ರಾಜಿಸುವ ಕೈರಗುಳಿಗೆಗಳ ಮೊತ್ತದಿಂ
ಸನಯದಿಂ ಪಿಂದೆಯ್ದಿ ಬರ್ಪ [3]ಚ[3]ಟ್ಟರ ಪೆಗಲೊಳೆಸೆವಡಪಗಡಣಂಗಳಿಂ ೩೭

ಮಿಸುನಿ ಕುಸುರಿಗಳಿಕ್ಕಿ ಕಂಠಪ್ರದೇಶದೊಳ್
ನಿಸದಮೊಪ್ಪುತ್ತಿರ್ಪ ರುದ್ರಾಕ್ಷಮಾಲೆಗಳಿ
ನೆಸೆವ ಕುಸುಮಂ ತಿಂಬಿದೊಳ್ದುಱುಂಬುಗಳಿಂದೆ ಮುತ್ತಿನೊಳ್ಸಾರಂಗಳಿಂ
ಪೊಸಮಾಣಿಕದ ರನ್ನವುರಗಳಿಂದಂ ಪಾದ
ಬಿಸಜದೊಳಗೊಪ್ಪುವಾಭರಣನಿಕರಂಗಳಿಂ
ದಸವಸದಿನೊಪ್ಪುತ್ತೆ ಮತ್ತೆ ಬೆಳೆವೆಣ್ಗಳಂ ಕಂಡು ನಿಟ್ಟಿಸಿ ನೋಡುತೆ ೩೮

ಎಲೆ ಭಕ್ತ ಸೂಳೆಗೆಯ್ಯಲ್ಕೆ ಪೊನ್ನಂ ಕುಡುವು
ದಲಸದೆನುತೆರೆದು ಪೊನ್ದಂದು ವೇಶ್ಯಾಗೃಹಕೆ
ನಲವಿನಿಂ ಪೋಗಿ ರತಿಸುಖದೊಳಾಳುತ್ತೆ ದಂತಕ್ಷತಾದಿಗಳಿನೆಸೆದು

---

[1] ಸ್ಥಿರ (ಗ) [2] ದಿ (ಕ) [3] ಭ (ಗ)

ಒಲವಿನಿಂ ಬರುತಿರ್ಪವರ್ ಕೆಲರ್ ಮತ್ತರೆಬ
ರಲರ್ದು ಬೆಲೆವೆಣ್ಗಳಂ ಕಣ್ಸನ್ನೆಯಿಂ ಕರೆದು
ಲಲಿತತಾಂಬೂಲಕುಸುಮಾದಿಗಳನೀಯುತ್ತುಮವರೊಡನೆ ಬರುತಿರ್ಪರು ೩೯

ಬಸವಕೃಪೆ ನಿನಗಕ್ಕೆ ತುರಿತದಿಂದೆಲೆ ಭಕ್ತ
ನಿಸದಮೀ ಕಲಿಯುಗಕೆ ಬಸವವಿಭು ನೀನೆಂದು
ಮಸಕದಿಂದಂ ನುಡಿದು ಪೊನ್ಗಡಣಮಂ ಪಡೆದು ಬೆಲೆವೆಣ್ಗಳೊಗ್ಗನೆಯ್ದಿ
ಅಸವಸದೆ ಕಡೆಗಣ್ಣ ಕಾಂತಿಗಳನವರ ಮೇ
ಲೊಸೆದು ಸೂಸುತ್ತೆ ಮತ್ತವರ್ಗೆ ಸಂತೋಷದಿಂ
ಕಸವರಂಗಳ ಕುಡುತೆ ಬೊಜಗತನದೆಸಕಮಂ ಬೀಱುತರೆಬರ್ ಬರ್ಪರು ೪೦

[1]ತನುದೃಷ್ಟಿ[1]ದಂತಾಳಿದೀಧಿತಿಗಳಿಂ ಮಿಕ್ಕ
ಜನರ ಚಲ್ವುಗಳ ಭೂಪತಿಯುಂತೆ ಧಿಕ್ಕರಿಸು
ತನುನಯದಿನನ್ಯವಿಟರಂ ಕಂಡು ಮದದಾನೆಯಂತೆ ಮಲೆಯುತ್ತೆ ಕೊಬ್ಬಿಂ
ಮಿನುಪ ವಿಟರಂ ಕಂಡು ಭೂಮಿಯಂ ಕಾಲ್ಗಳಿಂ
ಕಿನಿಸುತೆ ಬೆರಂಟುವರ್ ಪಡಿಗೂಳಿಯಂ ಕಂಡು
ಮುನಿದ ವೃಷಭನ ತೆಱದಿನಿಂತೆಸೆದು ಬರುತಿರ್ದುದಾ ಕಾಮಿ ಜಂಗಮುಚಯಂ ೪೧

ಪಿರಿದಿಂತುಮೊಪ್ಪುತೆಯ್ತರ್ಪ ವಿಟಜಂಗಮರ
ಹರನ ಭೋಗಾವತಾರರ ನಿರಂತರಮೊಸೆದು
ಗಿರಿಶಾವಧಾನತಾತ್ಪರ್ಯಶಾಲಿಗರನೀಶಪ್ರಸಾದಾಸಕ್ತರಂ
ಹ[2]ರಿಸ[2]ದಿಂ ದೋನಮಾರ್ಯಂ ಕಂಡು ಸುಖದ ಸಾ
ಗರದೊಳಗೆ ಮೂಡಿಮುಳುಗಾಡುತ್ತೆ ಮೈನವಿರ್
ಕರಮೆ ಜುಮ್ಮನೆ ಪೊಣ್ಮೆ ಬರುತಿರ್ದನತ್ತಮುತ್ತೊಂದೆಡೆಯೊಳೇವೊಗಳ್ವೆನು ೪೨

ಸದಮಲಪ್ರಚುರವಿಶ್ರುತ ಪರಮಭಕ್ತಗಣ
ಪದಸರೋರುಹಸಾಂದ್ರ ಮಕರಂದಪಾನ ಸ
ಮ್ಮುದಿತ ಚಂಚಚ್ಚಂಚರೀಕನನವರತ ಪಂಚಾಕ್ಷರೀಪ್ರಸಿತಹೃದಯಂ
ವಿದಿತ ಮಂಜುಳನೀಲಕಂಠಾಹ್ವಯಂ ಮನೋ
ಮುದದೆ ಪೇಳ್ದುರುತರಾರಾಧ್ಯಚಾರಿತ್ರದೊಳ
ಗಿದು ಚತುರ್ಮುಖಬಸವನಂ ದೋನಮಾರ್ಯ[3]ಮೀಕ್ಷಿಸಿದ ಕಥನಂ ಭಾವಿಸೆ ೪೩

1 ಕಣುದಿಟ್ಟ (ಕ) 2 ರುಷ (ಗ) 3 ನೀ (ಗ)

## ಐದನೆಯ ಸಂಧಿ

### ದೋನಮಾರ್ಯರ್ಗಂ ವಿರಕ್ತರ್ಕಳಂ ಶಿವಯೋಗಿಗಳಂ ಕಂಡ ಕಥನಂ

ಸೂಚನೆ: ವರ ವಿರಕ್ತರ್ಕಳಂ ಶಿವಯೋಗಿಗಳನೆಯ್ದೆ
ಸುರುಚಿರಾಭ್ಯಾಸಯೋಗಿಪ್ರವೇಕರನೊಸೆದು
ಹ[1]ರಿಸ[1]ದಿಂ ದೋನಮಾರ್ಯರ್ಗಂ ಕಂಡ ಕಥೆಗೇಳ ಸೂರಸಚಿವೇಂದ್ರ [2]ಸೊಕ[2]ದಿಂ

ಸಲಿಲಖೇಲಾಪ್ರಸಿತ ದೇವಕಾಂತಾಜಾಲ
ಲಲಿತಸಂಕುಲಸುವಿಚ್ಛಿನ್ನಹಾರ ಸ್ಥೂಲ
ವಿಲಸಿತಾವಮಲನೌಕ್ತಿಕಪ್ರಕರಕಲಿತೋದಕಶ್ರೀಯ ಪಾಂಗಿನಂತೆ
ನಲಿದು ನರ್ತಿಪ ವೇಳೆಯೊಳ್ ಪೂಜೆಗೆಯ್ದ ನಿ
ರ್ಮಲಮಲ್ಲಿಕಾಕುಸುಮದೊಡಗೂಡಿ ಸೂಸುವಾ
ಜಲಮುಳ್ಳ ಗಂಗೆಯಂ ಜಡೆಯೊಳಾಂತೆಸೆವ ಗುರುನೀಲಕಂಠ[ಜಯ] ಜಯತು ೧

ಹಲಗೆವಾವುಗೆಗಳಂ ಪಾದರಕ್ಷೆಯ ತೆಱದೆ
ನಲಿದು ಪಟ್ಟಿಗಳಿಂದೆ ಸೈತೆಸಗಿ ಮೆಟ್ಟಕೊಂ
ಡೊಲವಿನಿಂ ಮೇಲ್ಮುಸುಕನಿಟ್ಟುಕೊಂಡನ್ಯಜನತತಿ ಮುಟ್ಟದಂತೆ ಸುತ್ತಂ
ಪಲಕೆಲರ್ ಭಕ್ತರೆಯ್ತರೆ ಸಂದಣಿಯನುಳಿದು
ಸಲೆ ಅಭಕ್ತಾಲೋಕನಾಚ್ಛೈವ ಎಂದು ಮು
ತ್ತಲರುತೆ ಪದಾರ್ಥಾಂಶ್ಚ ಎನುತುಂ ವಿವರ್ಜಯೇದೆನುತೆ ವಾಕ್ಯಂ ಸಂತತಂ ೨

ನುಡಿದಂತೆ ರೇಖೆಯಿಲ್ಲದ ಪಿಠರಕಾದಿಗಳ
ಕಡುಮೆಱಿವ [3]ಬೋನಗುಟಿಕೆ[3]ಗಳೊಳಗೆ ಸೈತಿಟ್ಟು
ಸಡಗರದೆ ಧೌತವಸ್ತ್ರದಿನವಂ ಬಾಸಣಿಸಿ ಭವಿದೃಷ್ಟಿ ಸೋಂಕದಂತೆ
ಪಡಪಿನಿಂ ಕಂಬಿಕಾರರ್ ಪೊತ್ತುಬರೆ ನಾಡೆ
ಬಿಡದೆ ಫಲಕಂಗಳೊಳಗಾಯ್ದ ಸುಪದಾರ್ಥಮಂ
ನಿಡಿದಾದ ಸೇವನಚಯಂಗಳೊಳ್ ನೆಱತಿಂಬಿ ಸೂತ್ರಂಗಳೊಳ್ ಬಂಧಿಸಿ ೩

---

[1] ರುಸ (ಗ) [2] ಸುಖ (ಗ) [3] ಬೊನ್ನಗುಟಕೆ (ಕ) ಬೋನ ಗುಡಿಕೆ (ಗ)

ಮುದದೆ ನೀರಾಜನಂ ರಂಗವಲ್ಲೀ ಪಿಷ್ಟ
ವಿದಿತ ಗುಗ್ಗುಲು ಶುಭ್ರಭಸ್ಮಮುಖ್ಯಂಗಳಂ
ಪದೆದು ಸೇವ[1]ನ[1]ನಿಕರದೊಳ್ ತಿಂಬಿಕೊಂಡು ಜಲಶೋಧನಾಂಶುಕವಿತತಿಯಂ
ಪುದಿದ ಸಲಿಲಾರ್ದ್ರಮಂ ತೊಡೆವ ವಸ್ತ್ರಂಗಳಂ
ಸದಮಲವಿತಾನಾಂಬರಂಗಳಂ ತೆರೆಸೀರೆ
ಮೊದಲಾದುವಂ ಮತ್ತೆ ನಖರಂಜನಿಪಮಾಖಸಾಧನ ಸಮೂಹಂಗಳಂ ೪

ಪಿರಿಯ ಕಂಟಣಿಗಳೊಳ್ ತಿಂಬಿ ಧೌರೇಯ ಶಾ
ಕ್ವರನಿಕರದೊಳ್ ಪೇಱಿಕೊಂಡು ಜತನದೆ ಬರ್ಪ
ಪರಮ ವೀರವ್ರತಿಗಳುರುಸತ್ಯಭಾಷಾನ್ವಿತರ್ ವ್ರತಪ್ರಥಿತರನಿಶಂ
ಹರನನಲ್ಲದೆ ಲೋಕಮಂ ನೋಡದಿರ್ಪವರ್
ನಿರುತದಿಂದಿಷ್ಟಲಿಂಗಮನಲ್ಲದುಳಿದುದಂ
ಕರಮೆ ಚಿಂತಿಸದಿರ್ಪವರ್ ನಾಡೆ ಪಂಚಾಕ್ಷರಿಯನೊಸೆದು ಜಪಿಸುವವರು ೫

ಶಿವಭಕ್ತತತಿಗಲ್ಲದುಳಿದ ಲೋಕಂಗಳ್ಗೆ
ತವೆ ಬೆದಱದಿರ್ಪವರ್ ಮನದೊಳೀಗಂ ಪರಮ
ಶಿವಭಕ್ತರಲ್ಲದರನೇನುಮಂ ಬೇಡದಿರ್ಪುರುಧೈರ್ಯಗುಣವಂತರು
ಶಿವನನಲ್ಲದೆ ಕನಸಿನೊಳಗನ್ಯವಱಿಯದೇ
ಸವಿನಯದಿನಿರ್ಪವರ್ ಶೀಲವಂತರ್ ನಾಡೆ
ತವಕದಿಂ ಬರುತಿ[2]ರ್ದ[2]ರಾ ಪರಿಸೆಯೊಳ್ ತಮ್ಮೊಳೊಗ್ಗು ವಿಡಿದತಿಯತ್ನದಿಂ ೬*

ಪರಮ ಶಾಂತಿತ್ವಮೆಂಬುರುಭಸಿತಮಂ ಕಳೇ
ವರದೊಳುದ್ಧೂಳನಂಗೆಯ್ದು ಶಬ್ದಾದಿ ಬಂ
ಧುರವಿಷಯರೋಧಕೌಪೀನಮಂ ಕಟ್ಟಿ ಪರಹಿತವಚನರೂಪಮಾದ
ಸರಳ ಪಂಚಾಕ್ಷರೀಮನುವ ಜಪಿಸುತ್ತೆ ಭಾ
ಸುರತರಾಂತರ್ಮುಖೇಂದ್ರಿಯನಿವಹಮೆಂಬ ಸುರು
ಚಿರ ಯೋಗದಂಡಮಂ ಕರದೊಳತಿದೃಢಮಾಗಿ ಪಿಡಿದನಿಶಮೊಪ್ಪುತೊಸೆದು ೭

---

1 ಕ (ಕ) 2 ರ್ಪ (ಕ)

* (ಕ) ಪ್ರತಿಯಲ್ಲಿ ೬ನೆಯ ಪದ್ಯ ೯ನೆಯ ಪದ್ಯವಾದಮೇಲೆ ಬಂದಿದೆ.

ಮಿನುಗುವ ಮನಸ್ಸಮಾಧಾನನಿಯತಿಯನೆ ತೊ
ಟ್ಟನೆ ಯೋಗಪಟ್ಟಿಕೆಯನುಱಿಪೂಡಿಕೊಂಡು ಘ
ನ್ಮನೆ ಪರಮತುಷ್ಟಿಚಾರಿತ್ರಮಂ ವೇಷ್ಟನಂಗೆಯ್ದು ಮುದದಿಂದೆ ಮತ್ತಂ
ವಿನಯದಿಂ ನಿಜಸಮಯದುತ್ಸಾಹವೆಂಬ ಸೊಂ
ಪಿನ ಕಂಥೆಗುಪ್ಪುಸಂದೊಟ್ಟು ನೀರಸಮಾದ
ಕನದಮೃತಸಮನಾದ ಭಿಕ್ಷಾನ್ನಮಂ ಶಿವಂಗರ್ಪಿಸಿಕೊ[1]ಡು[1]ತ್ತೆ ನಿಚ್ಚಂ ೮

ಮಿಗೆ ಯಮಾದಿವ್ರತಸ್ಥರ್ ಸಂತತಂ ನೋಡೆ
ಸೊಗಯಿಸುವ ಶಮದಮಾನ್ವಿತರಂಗಗುಣಹೀನ
ರೊಗೆದ ಚಿತ್ತವಿಕಾರದೂರರುರುಲಿಂಗಾರ್ಚನಾನುಷಕ್ತಿಗಳಾವಗಂ
ವಿಗತಸಂಸಾರಾನುರಕ್ತಿಗಳ್ ನಿಕ್ಕುವಂ
ಬಗೆಯೆ ಮುಕ್ತ್ಯಂಗನಾಸಕ್ತಿಯುಳ್ಳರ್ ನಿಸದ
ಮಗಲದಾ ಪರಿಸೆಯಂ ನೋಡುತೆ ವಿರಕ್ತಚರಲಿಂಗಂಗಳೆಯ್ತಂದರು ೯

ಹಲತೋರಣಂಗಳುಱಿ ಮತ್ಸ್ಯಾಬ್ಜಕಲಶಂಗ
ಳೊಲವಿನಿಂ ಛತ್ರದೊಳ್ಗುಱುಪುಗಳ್ ಸಂತತಂ
ಲಲಿತಪದಕರನೇತ್ರಯುಗಳಂಗಳೊಳ್ ತೋಱಿ ಮುಯ್ವುಗಳ್ ಸೊಂಪೆಸೆಯಲು
ಸುಲಲಿತವಚಂ ಮೆಱೆಯೆ ನಗೆಮೊಗಂ ರಾಜಿಸಲ್
ಸಲೆ ಶೋಭಿಸಲ್ ಪೇರುರಂ ಕರಂ ಸರಸಾಂಗ
ಕಲೆಗಳೊಡಗೂಡಿ ಶಿವಯೋಗರತರಾದ ಭೂಮೀಶ್ವರರ್ ಬರುತಿರ್ದರು ೧೦

ಪೊರೆದ ರಜದಿಂ ಮಸುಳಿಸಿದ ಮುಕುರದಂತೆ ಭಾ
ಸುರ ಬಲಾಹಕಪರಿಚ್ಛನ್ನ[2]ರ[2]ವಿಯಂತೆ ನಿ
ಟ್ಟುರದ[3]ಗ್ಗಿ[3]ಯಿಂ ಬೆಂದ ರಜ್ಜುವಿನ ರೂಪಿನಂತೆವೊಲೆಯ್ದೆ ನೋಳ್ಪ ನರರ್ಗೆ
ಸರಿರದ ಗುಣಂ ಕೆಟ್ಟು ಸರಿರದಾಕಾರದೊಳ್
ಭರದೆ ತೋಱುತ್ತೆ ಶತಖಂಡಮಯಮಾದ ನಿ
ರ್ಭರ ಮಲಿನದೊಳ್ ಪುದಿದ ಪಳಗಂತೆಯಂ ತೊಟ್ಟು ಬರ್ಪವರ್ ಕೆಲಕೆಲಬರು ೧೧

ಮಿಗೆಯಖಂಡಿತ ದಿಗಂಬರದೆ ಬರ್ಪರ್ ಕೆಲರ್
ನೆಗಳ್ದ ಭೈಕ್ಷಂ ಬೇಳ್ಪುದಂ ಬಿಟ್ಟಯಾಚಿತದೊ
ಳಗೆ ಬಂದ ಭೈಕ್ಷಮಂ ಕೊಂಡುಬರ್ಪರ್ ಕೆಲಬರತಿಮೋದಮುಣ್ಮುತಿರಲು

---

1 ಳು (ಕ) 2 ಕ (ಕಟ) 3 ಗ್ನಿ (ಗ)

ಸೊಗಯಿಸುವ ಬಹುಜನಂಗಳನುಳಿದು ಶರಣರೊಳ
ಗಗಲದೆಳ್ತರ್ಪವರ್ ಪಲಕೆಲಬರದನುಳಿದು
ಬಗೆಯದೇನಂ ರಹಸ್ಯದೊಳೆ ತಮ್ಮಿಚ್ಛೆಯಿಂ ಬರುತಿರ್ಪವರ್ ಕೆಲಬರು ೧೨

ಪಿರಿದಕಾವ್ಯಂ ಕಾವ್ಯವೆಂಬೆರಡನುಳಿದು ಸುರು
ಚಿರಮಾದ ವೈರಾಗ್ಯದಿರವಿನಿಂ ಬರುತಿರ್ಪ
ಪರಮಪುರುಷರ್ ಕೆಲರ್ ವಿಧಿನಿಷೇಧಂಗಳಂ ಸ್ಮೈತೊತ್ತಿ ಮನದಣುಗಿನಿಂ
ಬರುತಿರ್ಪವರ್ ಕೆಲರ್ ಪರಿಚಿತೋಭಯಕರ್ಮ
ದಿರವಳಿದು ಸಂತಸದೆ ಬರುತಿರ್ಪವರ್ ಕೆಲರ್
ಸರಳದೃಷ್ಟಾದೃಷ್ಟಫಲಕಾಂಕ್ಷೆಗೆಯ್ಯದುಜಱ ಬರುತಿರ್ಪವರ್ ಕೆಲಬರು ೧೩

ಕರವೆ ಹಠಯೋಗವಿಲಸದ್ರಾಜಯೋಗಾದಿ
ಸರಳಯೋಗಭ್ರಾಂತಿಪೊರ್ದದಣಿಯರವೊಲ್ದು
ಪರಮ ಶಿವಯೋಗತತ್ಪರರಾಗಿ ತಾವಿದಿರ್ ಸ್ತುತಿನಿಂದೆಯೆಂಬುಭಯಮಂ
ಕರಮಜಱಯದೇಗಳುಂ ಶಿವಯೋಗಸುಖವಶದೆ
ಶರಿರವೆಲ್ಲಂ ಲಿಂಗಸಂಯುಕ್ತಮಾಗೆ ತ
ದ್ವರಲಿಂಗಯೋಗದಿಂ ಪ್ರಾಣಂಗಳುಂ ಲಿಂಗಯುಕ್ತಂಗಳಾಗೆ ಮತ್ತಂ ೧೪

ಮಿನುಗುವಾ ಪ್ರಾಣಲಿಂಗದ ಸಂಗದಿಂದೆ ತೊ
ಟ್ಟನೆ ಮನಂ ಲಿಂಗಸಂಯುಕ್ತಮಾಗಲ್ ಬಳಿಕ
ಮನಸುಮಾ ಮನದ ಲಿಂಗದ ಸಂಗದಿಂದೆ ದೃಷ್ಟಿಗಳೆಲ್ಲವುಳ್ತಿಯಿಂದಂ
ಘನಲಿಂಗದೊಳಗಡಂಗಲ್ ಮತ್ತೆ ತನುಧರ್ಮ
[1]ಮಿ[1]ನಿತಿಲ್ಲದಳಿದು ಪೋಕುಂ ಮತ್ತಮುದಱಂದೆ
ನನಸುಸದ್ಭಕ್ತಿ ಕೈಸಾರ್ಗುಮಾ ಭಕ್ತಿಯಿಂ ಶಿವಕರುಣಮಳವಡುವುದು ೧೫

ನಿರುತಮಾ ಲಿಂಗೈಕ[2]ದೃ[2]ಷ್ಟಿಗಳ್ಗೆಗಳುಂ
ಕರತಲದೊಳೆಸೆದಿರ್ಪ ಲಿಂಗಮೇ ಕಾರಣಂ
ಮರಳಿ ತಲ್ಲಿಂಗದ ನಿರೀಕ್ಷಣದಿನಾ ದೃಷ್ಟಿಗಳ್ ಮಾಂಸದೃಷ್ಟಿಯಂತೆ
ಭರದೆ ದೃಶ್ಯಂ ದಲಾಗಿರ್ಪ [3]ಜಗಮಂ[3] ಕಾಣ್ಗ
ಮಿರದೆ ಮತ್ತಾ ದೃಷ್ಟಿಗಳ್ ತಮ್ಮ ಕಾಣ್ಬಲ್ಲಿ
ಪರಮಸುಜ್ಞಾನದೃಷ್ಟಿಗಳಾಗೆ ತೋರ್ಕುಮಿಾ ಶರಣರಕ್ಷಿಗಳೆನುತ್ತೆ ೧೬

---

[1] ವಿ (ಗ) [2] ತೃ (ಕ) [3] ಜಂಗಮ (ಗ)

ಪರಮ ಶಿವಯೋಗಿಗಳ ನೋಡಿ ಸಂತೋಷದಿಂ
ವರ ವಿಬುಧರಾನಂದಿಸುತೆ ತುತಿಸುತಿರ್ದರೀ
ಧರೆಯೊಳಿಂತಿರವೇಡವೇ ತನುಪ್ರಾಣೇಂದ್ರಿಯಂಗಳಂ ದೃಷ್ಟಿಗಳನು
ಪರಮ ಶಿವನಲ್ಲಿ ಯೋಜಿಸಿ ಮತ್ತೆ ತನ್ನಲ್ಲಿ
ಪರಶಿವನ ಯೋಜಿಸಿಕೊಳುತ್ತೆ ಭೂತಳದಲ್ಲಿ
ಸರಳಯುಚಿಧಾತು ಶಿವನೊಡನೆ ಯೋಗಂಬೇಳ್ಗುವಿದು ನಿಕ್ಕುವಂ ಸಂತತಂ ೧೭

ಶಿವಯೋಗರತರೆ ಶಿವಶಾಸನಾನ್ವಿತರೆಸೆವ
ಶಿವತತ್ತ್ವವಿತ್ತುಗಳ್ ಶಿವಮಂತ್ರಸಿದ್ಧರ್ಕ
ಳವಿರತಂ ಶಿವಪರಿಜ್ಞಾನಿಗಳ್ ಶಿವಧರ್ಮತತ್ಪರರ್ ಪರಿಭಾವಿಸೆ
ಶಿವಯೋಗಿಗಳ್ ನಿಸದವುದ್ವೈತಬದ್ಧರೇ
ತವೆ ನಾಸ್ತಿಕರೆ ನಾಡೆ ಸದ್ವಿಧಿಭ್ರಷ್ಟರೇ
ತವಕದಿಂ ಪಶುಯೋಗತತ್ಪರರೆ ಅಲ್ತಲ್ತು ಭೂಮಿಯೊಳಗೊಲ್ದು [1]ನೋ[1]ಡೆ ೧೮

ಕರಮೆ ಸಂಯೋಗಂ ವಿಯೋಗಂ ದಲೆಂದು ಬಂ
ಧುರಮಾಗ್ ನುಡಿವೆರಡುವಚನಂಗಳೊಳ್ ನಾಡೆ
ಪರಿಕಿಸಲ್ ಯೋಗವೆಂದಾವುದೆರಡಱ ಕೂಟಮೋ ಎರಡುಮಿಲ್ಲೆಂಬುದೊ
ನಿರುತವೊಂದೇ ಎಂಬುದೋ ಮತ್ತಮೊಂದುವುಂ
ಭರದಿನಿಲ್ಲೆಂಬುದೋ ಯೋಗಮಿದನೆಲ್ಲಮಂ
ಪಿರಿದು ಪೆಱನೂಂಕಿ ವಿಭ್ರಾಂತಿಪೊರ್ದದ ಪರಮಸಿದ್ಧಾಂತಪಕ್ಷದೊಳಗೆ ೧೯

ಹ[2]ರಿಷ[2]ದಿಂ ನುಡಿದ ಶಿವಯೋಗವೆಂಬುದು ಕರಂ
ದುರಿತಸಂಯುಕ್ತರಾದನ್ಯರ್ಗೆ ಸಿದ್ಧಿಸದು
ಪರಮಶಿವಯೋಗಿಯೇ [3]ಆ[3]ನೆಂದು ಶಿವನುಸುರ್ದ ದಿವ್ಯವಾಕ್ಯದ ಪಾಂಗಿನಿಂ
ಹರನೆಯಿಾ ರೂಪಂಗಳಂ ತಾಳ್ದು ಬಂದನೋ
ಪಿರಿದನಿಮಿಷಯ್ಯನೀ ರೂಪುಗಳ ಧರಿಸಿ ಸಿರಿ
ಗಿರಿಗೆ ಬಂದನೊ ಲಸತ್ಪ್ರಭುವಿವರ ಪರಿಜುಗಳನಾಂತೆಯ್ದಿ[4]ದ[4]ನೊ ನಿಕ್ಕುವಂ ೨೦

ಮಸಕದಿಂದಜಗಣ್ಣ ಸಿದ್ಧರಾಮಯ್ಯಂಗ
ಳೆಸೆವ ಭೃಂಗೀಶನೀ ಶಿವಯೋಗಿಗಳ ರೂಪ
ನಸವಸಂ ತಾಳ್ದುಬಂದರೊ ಮತ್ತಗಸ್ತ್ಯ ಗೌತಮ ಸನಕಮುನಿಮುಖ್ಯರು

---

[1] ನಾ (ಗ) [2] ರುಷ (ಗ) [3] ಯಾ (ಗ) [4] ಪ (ಕ)

ಎಸಕದಿಂ ಶ್ರೀಗಿರಿಯನೀ ಭಕ್ತನಿಕರವಮಂ
ನಿಸದವಮುಱಿ ನೋಡಲೆಯ್ತಂದರೋ ಎಂದು ಸಂ
ತಸದೆ ಬುಧರೊಸೆದು ಕೀರ್ತಿಸುತಿಸಲ್ ಶಿವಯೋಗಿಗಳ್ ಬಂದರೊಲವಿನಿಂದಂ ೨೧

ಭರದೆ ಮೂಲಾಧಾರಕುಂಡಲಿಯನೆಚ್ಚಱಿಸಿ
ಹುರಿಸಿ[1]ದಿಂದೆಡದ ಕಾಲ್ಮಡದೆ ಗುದವಮಂ ಬಿಲಿ[2]ದು
ಕರವೆಸಗುವಂತರಂಗದ ವಾಯುಗಳ ಪೂರಣಂಗೆಯ್ದಧೋಮುಖದೊಳು
ಇರುತೆಸೆವ ಕಮಲಂಗಳಂ ಮೇಲ್ಮೊಗಂಗೆಯ್ದು
ಸರಳಪವಳದ ಕುಸುಮವಿಸರಂಗಳಂ ನೋಡಿ
ಹುರಿಸಿ[1]ದಿಂ ಮುದ್ರಿಸಿ ಬಳಿಕ್ಕೆ ಶಶಿರವಿಗಳಂ ಕಟ್ಟೆ ಮನದೆಸಕದಿಂದಂ ೨೨

ಸಲೆ ಪಶ್ಚಿಮದ್ವಾರದಿಂದೂರ್ಧ್ವಭುವನವಮಂ
ಗೆಲವಿನಿಂ ಸೋಂಕಿ ಬೆಳ್ದಿಂಗಳಂ ಕೀಳ್ಪಡಿಪ
ಲಲಿತಪ್ರಕಾಶವಮಂ ನೋಡಿಯಡದರ್ಾಗಸಕೆ ಮತ್ತಲ್ಲಿ ಸೊಗಸಿನಿಂದಂ
ಉಲಿವ ರವವಮಂ ವಿಚಾರಿಸಿ ಮೇಲೆತೋರ್ಪ ಸ
ಲ್ಲಲಿತ ಚರಮದ್ವಾರವಮಂ ಪತ್ತಿಯಭ್ಯಾಸ
ಬಲದಿಂದಮಾಕುಂಚನಾನಿಲಾಪೂರ್ಯದಿಂ ಶುಷ್ಕಪರ್ಣಂಗಳಂತೆ ೨೩

ಫಿರಿದು ಲಘುವಾದ ದೇಹಂಗಳಿಂದಂ ಧರೆಯ
ಕರವೆ ಸೋಂಕುತೆ ಸೋಂಕದಂತೆ ನಿಡುವಹಿಲದಿಂ
ಬರುತಿರ್ಪ ತಾಣದೊಳಗಡಿವಜ್ಜೆ ಗಡಣಮಾರ್ಗಂ ಕಾಣಬಾರದಿರಲು
ಉರಿವ ದೀಪಪ್ರಭೆಯ ಸಂಗದೊಳ್ ಸಿಲ್ಕಿದುರು
ತರ ಪತಂಗಂಗಳಂತಕ್ಷಿಗಳ್ ಸಂತತಂ
ಕರವೊಳಗೆ ತೋರ್ಪ ಸುಜ್ಞಾನದೀಪಪ್ರಭೆಯೊಳಳ್ದು ಪೊಱಗಱಿಯವನಿಶಂ ೨೪

ಕರವೆ ಭುಕ್ತ್ಯಾಶೆಯಿಂ ಬಡಿಶಂಗಳೊಳ್ ಕೆಡೆವ
ಪಿರಿಯ ಮೀನ್ಗಳ ತೆಱದೆ ಖೇಚರೀಮುದ್ರೆಯಿಂ
ದಿರದೊಸರ್ವ ಪೀಯೂಷದುಣಿಸಿನಿಂ ಮಗ್ನತೆಯೊಳಿರ್ಪ ನಾಲಗೆಗಳಿಂದೆ
ಸರಸಗಾನಾ[3]ಮೃತಕೆ[3] ಸೋಲ್ತ ಪಾವುಗಳಂತೆ
ವಿರಚಿತಾನಾಹತಾನೇಕನಾದಂಗಳ್ಗೆ
ಪರವಶಂಬೊಂದಿ ಸೊಕಗಡಣದಿಂ ಮಚ್ಚಿರ್ಪ ಕಿವಿಗಳಿಂದಂ ಮತ್ತೆಯುಂ ೨೫

---

1 ರುಷ (ಗ) 2 ಡಿ (ಕಗ) 3 ರಸಕೆ (ಗ)

ಮಿಸುಪ ಸಂಪಗೆಯ ಕುಸುಮದ ಸುರಭಿಗೆಱಗಿ ನಿ
ಪ್ಪಸರದಿಂ ಮೂರ್ಛೆಯೊಂದಿದ ಪಱಮೆವಱೆಯಂತೆ
ನಿಸದಮಂತರ್ಯಾಗವಾಸನೆಯೊಳೊಂದಿ ಮಗ್ನತೆವೆತ್ತ ಘೋಣಂಗಳಿಂ
ಸಸಿನೆ ಪಿಡಿಯಂ ಸೋಂಕಿ ಮೆಯ್ಮಱೆವ ಗಜದಂತಿ
ರೆಸೆವ ಪ್ರಾಣಾಪಾನಸಂಯೋಗಸುಖದೆ ರಾ
ಜಿಸುವಿಂದ್ರಿಯಂಗಳಿಂದಂ ಶಿವಧ್ಯಾನತತ್ಪರರೆಯ್ದೆ ರಂಜಿಸಿದರು ೨೬

ವರ ಪತಂಗಂ ಮತ್ಸ್ಯಮಹಿಚಂಚರೀಕ ಭಾ
ಸುರ ಕರಿಗಳೆಂಬಿವುಂ ಧರೆಯೊಳೇಕೇಂದ್ರಿಯದೆ
ಕರಮೆ ಕೆಟ್ಟರ್ಕುಮಂತೈದಿಂದ್ರಿಯಂಗಳಿಂ ಗೆಲಪಟ್ಟು ವಿಷಯಸುಖದ
ಇರವುಳ್ಳರಾಗುತುಂ ಶಿವಚರಣಪದ್ಮದೊಳ
ಗಿರಿಸಿದೈದಿಂದ್ರಿಯಂಗಳುಮುಳ್ಳರಾಗುತುಂ
ನಿರುತಮಂತರ್ಬಹಿ[1]ರ್ಯಾ[1]ಗಸತ್ಕ್ರಿಯೆಗಳಿಂ ಶಿವನ ಮೆಚ್ಚಿಸಿ ಸಂತತಂ ೨೭

ನನಸು ಸರ್ವಜ್ಞತ್ವಸಿದ್ಧಿಯಂ ಪಡೆದು ತೊ
ಟ್ಟನೆ ತ್ರಿಲೋಕೇಯಾನಿ ಚಿಹ್ನಾನಿ ಎಂದು ಸ
ದ್ವಿನಯದಿಂ ತಾನಿ ಚಿಹ್ನಾನಿ ಸೂಕ್ಷ್ಮ[2]ತ[2] ಎಂದ ನಿಜವಾಕ್ಯಮುಲಿದ ತೆಱದಿಂ
ಎನಿತುಚಿಹ್ನಂಗಳೀ ಬ್ರಹ್ಮಾಂಡದೊಳಗಿರ್ಕು
ಮನಿತು ಚಿಹ್ನಂಗಳತಿಸೂಕ್ಷ್ಮಂಗಳಾಗಿ ಕೆ
ಮ್ಮನೆ ಪಿಂಡದೊಳಗೆ ತೋಱುತ್ತಿರ್ಕುಮೆಂತೆನಲ್ ಪಂಚಭೂತಂಗಳೊಸೆದು ೨೮

ನಗ ನದೀ ದ್ವೀಪಾಂಬುನಿಧಿಗಳೆಲ್ಲಂ ಮತ್ತೆ
ಸೊಗಯಿಸುವ ತಾರಕಾಗ್ರಹಭುವನವಿತತಿಗಳ್
ತಗುಳ್ದು ತೋಱಿಸುಗುಮಾತ್ಮಾಲಯದೊಳೀಗಳುಂ ಸಂಪೂರ್ಣಕಾಯನಾಗಿ
ನೆಗ[3]ಳ್ದೀ[3]ಡನಾಡಿಯೊಳ್ ಸವ್ಯಭಾಗದೊಳೊಲ್ದು
ಮೃಗಧರಂ ನೆಲಸಿರ್ಪನಂತೆವೊಲ್ ಪಿಂಗಳದೊ
ಳಗೆ ತ[4]ನ್ನ[4] ಪನ್ನೆರಡುಕಲೆಗೂಡಿ ಬಲಗಡೆಯೊಳಿರ್ಪನಾ ಸೂರ್ಯನನಿಶಂ ೨೯

ಪಿರಿದೊಸೆದು ಪಂಚಭೂತಂಗಳುಂ ರವಿಶಶಿಯು
ಭರದ ಗಮನಕ್ರಮದೆ ವರ್ತಿಕುಂ ವಹ್ನಿಯದು
ನಿರುತಮಿವಱಿಂದೂರ್ಧ್ವ ಪಶ್ಚಿಮದೊಳೆಸೆದಿರ್ಕುಮಿವಱ ಕೆಳಗೆ

---

1 ರ್ಯೋ (ಗ) 2 ತೆ (ಗ) 3 ಣೀ (ಗ) 4 ಮ್ಮ (ಕಗ)

ಕರವೆಸೆ ತೋರ್ಕುಂ ಜಲಂ ಬಡಗಗಡೆಯೊಳ್ ಭೂಮಿ
ಯಿರುತಿರ್ಕುಮದಱ ದಕ್ಷಿಣದಲ್ಲಿ ಮಾರುತಂ
ಹ[1]ರಿಸ[1]ದಿಂದಿರ್ಕುಮಿವಱೆಲ್ಲವಱ ಮಧ್ಯದೊಳ್ ವ್ಯೋಮಮಿರ್ಕುಂ ನಿಕ್ಕುವಂ ೩೦

ನಿರುತಮಿಾ ನಾಡಿಯೆರಡರೊಳೊಸೆದು ಸಂತತಂ
ವರ ಭೂತಪಂಚಕಂ ವರ್ತಿಕುಂ ನಿಕ್ಕುವಂ
ಕರಮೆತೋರ್ಕುಂ ಶ್ವಾಸತತಿಗಳಱುವತ್ತಾಗಿ ಪ್ರಾಣಂಗಳನವರತವು
ಪಿರಿದುಮಾ ಪ್ರಾಣಂಗಳಾಱಾಗಲೊಂದು ಭಾ
ಸುರಘಟಿಕೆಯಕ್ಕುಮಾ ಘಟಿಕೆಯೊಂದೊಂದು ಸುರು
ಚಿರಭೂತಕಾಲವೊಂದೊಂದಕ್ಕುಮಾ ನಾಡಿಯೋಂದೊಂದಱಲ್ಲಿಯನಿಶಂ ೩೧

ನಿರುತಮೈದುಂಘಳಿಗೆ ವರ್ತಿಕುಂ ಮತ್ತಮಾ
ಸರಳಘಟಿಕಾಪಂಚಕಂ ಲಗ್ನಮಕ್ಕುಮಾ
ಕರಮೆಸೆವ ಲಗ್ನಮುಂ ಪನ್ನೆರಳ್ಕೂಡೆ ವಾಸರಮಕ್ಕುಮು[2]ವ[2]ಱೊಳೊಸೆದು
ಬೆರಸಿಯಿರ್ಪತ್ತೊಂದುಸಾಸಿರದ ಮೇಲೆ ಸು
ಸ್ವರವಿತತಿಯಱುನೂಱು ಬಳಿಕ್ಕನುವು ಲೋಕದೊಳ್
ಪಿರಿದು ಸಂವತ್ಸರದ ಘಟಿಕೆಗಳೆನಿಕ್ಕುಮಾ ಘಟಿಕೆಗಳನಱುವತ್ತುಮಂ ೩೨

ಹ[4]ರಿಸ[4]ದಿಂ ಭಾಗಿಸಲ್ ಬಂದ ಘಳಿಗೆಗಳಿಂದೆ
ಕರಮುೞಿದ ಲಬ್ಧಂಗಳವು ವಾಸರಂಗಳುಱೆ
ನಿರುತಮಾ ವಾಸರಂಗಳನೊಲ್ದು ಪನ್ನೆರಡಱಿಂ ಭಾಗಿಸಲ್ ಬಳಿಕ್ಕಂ
ಪಿರಿದುಮವು ಮಾಸಂಗಳೆನಿಕುಮಾ ಮಾಸ[3]ದಾ[3]
ಸುರುಚಿರಧ್ರುವದ ಸಂಖ್ಯಾನುರೋಧದೆ ಮತ್ತೆ
ಸರಳತಿಥಿ ದಿವಸ ನಕ್ಷತ್ರಯೋಗಂಗಳಿಂ ಕರಣಂಗಳಿಂದಮನಿಶಂ ೩೩

ನಿರುತಂ ಗ್ರಹಾದಿಗಳನೊಸೆದು ವರ್ತಿಸುತೆಸೆವ
ವರ ಕಾಲಚಕ್ರಪದ್ಧತಿಯಂತಿರಾವಗಂ
ಸ್ವರಚಕ್ರಗತಿವರ್ತಿಸುತ್ತಿರ್ಕುಮದಱೊಡನೆ ಕೂಡಿ ಧರೆಯೊಳ್ ತೋಱುವ
ಸುರುಚಿ[5]ರೇ[5]ನೆಂದು ಪಕ್ಷಂಗಳಿಂ ತಿಥಿಗಳಿಂ
ತರಣೇಂದುಘಟಿಕಾಸಮೂಹಂಗಳಿಂ ಮತ್ತೆ.
ಪಿರಿದಿನೆಂದು ಪ್ರಹರನಿಕರಂಗಳಿಂ ರವೀಂದುಗ್ರಹಣಸಂತತಿಗಳಿಂ ೩೪

---

[1] ರುಷ (ಗ) [2] ದ (ಗ) [3] ದೊಳು (ಕ) [4] ರುಷ (ಗ) [5] ದೇ (ಕ)

ಸ್ವರಸಂಗಮಂಗಳಿಂ ಹಾನಿವೃದ್ಧಿಗಳುಮಂ
ತುರು ಜಯ ಪರಾಜಯಂಗಳ್ ನ್ಯೂನಮಧಿಕಮಂ
ಪಿರಿದು ಮಾನಾವಮಾನಂಗಳುಂ ಎಂಬಿವುಂ ಮೊದಲಾಗಿ ತೋರ್ಪುವೆಲ್ಲಂ
ಹೊ[1]ರಿಸ[1]ದಿಂ ಹೃತ್ಕಮಲದೆಂಟೆಸಳೊಳಗೆ ಮಿಱುಪ
ಸುರುಚಿರಾಮಲಜೀವಹಂಸಂಗೆ ನಿಕ್ಕುವಂ
ಪರಮಾನುಸಂಧಾನಕಲಿತ ಫಲತತಿಯುಂತೆ ತೋಱುತಿರ್ಕುಂ ಸಂತತಂ ೩೫

ಮಿನುಗುವಾ ಸ್ವಾನುಭವಸಿದ್ಧಿ ಸಾಮರ್ಥ್ಯದಿಂ
ನನಸಾಗಿ ತನ್ನಲ್ಲಿ ತೋರ್ಪಾತ್ಮಸಿದ್ಧಿಯಿಂ
ದಿನಿತು ತೆರೆನೆರೆಗಳಿಲ್ಲದೆ ಮನೋಹರಮಾದ ಕಾಯಸುಕುಮಾರತ್ವದಿಂ
ಎನಸುಮಣಿಮಾದಿಸಿದ್ಧಿಗಳಿಂ ನಿರಂತರಂ
ಘನ ದಶಪ್ರತ್ಯಯಂಗಳನೆಸೆಯುತುಂ ಮತ್ತೆ
ಸುನಯದಿಂ ಯೋಗಭಾಷೆಗಳಿಂದೆ ಚೌಪದಂಗಳ ಪಾಡುತೊಗ್ಗುವಿಡಿದು ೩೬

ಮಸಕದಿಂದಭ್ಯಾಸಯೋಗಿಗಳ್ ಸ್ವೇಚ್ಛೆಯಿಂ
ದಸವಸಂ ಪರಿಸೆಯಂ ಪಿಂಗಿ ದೂರದೊಳೆ ರಾ
ಜಿಸುತೆ ಬರುತಿರಲವರ ದೋನಮಾರ್ಯರ್ಕಂ ಕಂಡು ಸಂತಸದ ಕಡಲೊಳೆಯ್ದೆ
ಒಸೆದು ತೇಂಕಾಡುತ್ತೆ ಪರಿ[2]ಸೆ[2]ಯೊಡಗೂಡಿ ನಿ
ಪ್ಪಸರದಿಂ ಬರುತಿರಲ್ ಮುಂದುಗಡೆಯಲ್ಲಿ ಶೋ
ಭಿಸುತೆ ನಾನಾದೇಶದಿಂ ಪರಿ[2]ಸೆ[2] ಬರುತಿರ್ದುದೇವೊಗಳ್ವೆನದಱ ತೆಱನಂ ೩೭

ಸದಮಲಪ್ರಚುರವಿಶ್ರುತ ಪರಮಭಕ್ತಗಣ
ಪದಸರೋರುಹಸಾಂದ್ರ ಮಕರಂದಪಾನ ಸ
ಮ್ಮುದಿತ ಚಂಚಚ್ಚಂಚರೀಕನನವರತ ಪಂಚಾಕ್ಷರೀಪ್ರಸಿತಹೃದಯಂ
ವಿದಿತ ಮಂಜುಲನೀಲಕಂಠಾಹ್ವಯಂ ಮನೋ
ಮುದದೆ ಪೇಳ್ದುರುತರಾರಾಧ್ಯಚಾರಿತ್ರದೊಳ
ಗಿದು ದೋನಮಾರ್ಯರ್ಕಂ ವಿರಕ್ತಾದಿಗಳ ಕಂಡ ಕಥನಮಿದು ಪರಿಭಾವಿಸೆ ೩೮

---

[1] ರುಷ (ಗ) [2] ಷೆ (ಗ)

# ಆರನೆಯ ಸಂಧಿ

## ಮಾಳವಗೌಳ ಮೊದಲಾದ ಪರಿಸೆಯಂ ಕಂಡುದು

ಸೂಚನೆ : ಮಿಸುಪ ಮಾಳವ ಗೌಳವಾದಿದೇಶಂಗಳಿಂ
ದೊಸೆದುಬರುತಿರ್ದ ನಾನಾತೆಱದ ಪರಿಸೆ[1]ಯಂ
ಮಸಕದಿಂ ದೋನಮಾರ್ಯರ್ಗಂ ಕಂಡ ಕಥನಮಂ ಕೇಳ ಸೂರಾಮಾತ್ಯನೆ

ಸಿರಿಮುಗು[2]ಡ[3]ಮಂ ಪೂಜಿಪಾಸಕ್ತಿಯಿಂ ಮನೋ
ಹರದೇವಕಾಂತೆಯರ್ ನಿಜಕರದೊಳಾಂತು ಭಾ
ಸುರಶೋಣಶತಪತ್ರಸಂಚಯಂಗಳ ಮಿನುಪ ಕೆಂಜೆಡೆಯ ಮೇಲಿರಿಸಲು
ಸರಸಿಜಾರುಣಿಮಮಾ ಪಿಂಗಲಜಟಾಳಿಯೊಳ್
ಬೆರೆಯೆ ತಚ್ಛೋಣದಿಂ ಕಲ್ಪದ್ರುಮದ ತುದಿಯೊ
ಳಿರದೆಸೆವ ತಳಿರಂತೆ ಕೆಂಜೆಡೆಗಳಿಂದೆಸೆವ ಗುರುನೀಲಕಂಠ ಜಯತು ೧

ಮುದದೆ ಬೆಳ್ಪಟ್ಟೆಗಳ ಸೀರೆಗಳ ಬಿಗಿದುಟ್ಟು
ಪದೆದು ದೂವಟದ ಱವಕೆಗಳನೊಲವಿಂ ತೊಟ್ಟು
ಮೃದುವಾದ ಕೆರ್ಪುಗಳ ಮೆಟ್ಟಿ ಮೇಲ್ಮುಸುಕಿಟ್ಟು ಪತಿಯ ಬೆಂಬೆನ್ನನೈದಿ
ಒದಗಿ ಬರುತಿರೆ ಬೆಮರ್ ತನುವಿನೊಳ್ ಪೊಣ್ಮೆ ಸೊಂ
ಪೊದಗಿ ತೋಱುವ ತಾಲವೃಂತಂಗಳಿಂದೆ ಸ
ಮ್ಮದದೆ ಬೀಸಿಕೊಳುತ್ತೆ ಬರುತಿರ್ದುದಾ ಪರಿಸೆಯೊಳ್ ಸುದತಿಯರ ವಂಗಡಂ ೨

ನಡೆವೆಡೆಯೊಳುಟ್ಟಂಬರಂ ದೃಢಂಗುಂದಿ ಸೋ
ರ್ದುಡಿಬಿಟ್ಟು ಪಿಂಗಡೆಯೊಳಗೆ ಜೋಲ್ದು ತೋಱೆ ಸೊಂ
ಪಡಗೆ ತನುಕಾಂತಿ ಮುಖಮಂಡಲಂ ಬೆಮರೇಱೆ ತೊಂಡೆವಾಯ್ ನಸುಬತ್ತಲು
ಅಡಿಗಳಳವಳಿಯೆ ನಿಜಪತಿಯ ಕರಮಂ ಪಿಡಿದು
ಸಡಗರದಿನೊಯ್ಯನೊಯ್ಯನೆ ರಯ್ಯಮಾಗಿ ಮುಂ
ಗಡೆಗಡಿಯನಿಡುತೆ ನಿಡುಸೇದೆವಟ್ಟೆಯ್ದಿ ಬರುತಿರ್ದರಬಲೆಯರರೆಬರು ೩

1 ರುಷೆ (ಗ) 2 ಟ (ಗ)

ಕಡುಸೇದೆಯಿಂ ತನ್ನ ವನಿತಾಮುಖಂ ಬೆಮರೆ
ನಿಡಿದಾದ ಸೆಳ್ಳುಗುರ ಕೊನೆಗಳಿಂದಂ ಬಳಿದು
ಮಿಡಿಯುತ್ತೆ ಪಣ್ಣಪಣ್ಣನೆ ತೀಡುತಿರ್ಪ ತಣ್ಣೆಲರ್ಗೆ ದೇಹಮನೊಡ್ಡುತೆ
ಸಡಗರದೆ ಬಂಡುಂಬ ತುಂಬಿಗ[1]ಜು[1] ಸೋಂಕಿನಿಂ
ಬಿಡದುಗುವ ಕುಸುಮರಜಕಂಗಳಂ ನೀಡುತ್ತೆ
ಪೊಡಕರಿಪ ನೆಳಲುಂಟೆನಿಪ್ಪ ವಟಚೂತಂಗಳಂ ಸಾರ್ದು ನಿಲುತೆ ಮುದದಿಂ ೪

ಕರಮೆಸೆವ ಪುಷ್ಪವಾಟಗಳಿಂದೆ ಪರಿತರ್ಪ
ವರ ಕುಸುಮಸೌರಭ್ಯತತಿಗೆಳಸುತಂ ಮತ್ತೆ
ಪಿರಿದುಬತ್ತಿದ ತೊಂಡೆದುಟಗೆ ಹಿಮಯುಕ್ತ ತಾಂಬೂಲರಸದಿಂದನೊಸೆದು
ಹರಿಸ[2]ದಿಂದಾರ್ದತ್ವಮಂ ನಿಸದಮೆಸಗುತ್ತೆ
ತರಣಿಕಿರಣದೆ ಮುಖಂ ಮ್ಲಾನತೆಯನೆಯ್ದದಂ
ತಿರೆ ಪಲ್ಲವಂಗಳಂ ತಿಱಿದು ಮಱೆಗೆಯ್ವುತಂ[3] ಬರುತಿರ್ದರರೆಬರೊಲ್ದು ೫

ಮಿಸುಪ ಬಯ್ತಲೆಗಳಿಂ ಹ್ರಸ್ವಕೇಶಂಗಳಿಂ
ನಿಸದಮಾಗುಲ್ಪಲಂಬಿತ ಜೇಲನಿಕರದಿಂ
ದೆಸೆದಿರ್ಪ ಬಟ್ಟವಟ್ಟುಗಳಿಂದೆ ಬೇಸಗೆಯ ಬೇವಸಂ ಪಿಂಗುವಂತೆ
ಮಸಕದಿಂ ಶ್ರೀಪರ್ವತಾ ಎಂದು ನುಡಿಯುತ್ತು
[4]ಮೊಸೆದಾರ[4]ಕೂಟದಿಂ ಸಮೆದ ಗಳಹಾರಂಗ
ಳಸದಳಂ ಕರ್ಬೊನ್ನ ಕಾಲುಂಗುರಂಗಳುಂ ನೇವಳಂಗಳ್ ಮತ್ತೆಯುಂ ೬

ತವಕದಿಂದೆಸೆವ ಮುಡಿದಂಡೆಗಳ್ ಗಾಜಿನಿಂ
ದವಿರತಂ ಶೋಭಿಪ್ಪ ಕಟಕಂಗಳುಂ ನಾಡೆ
ಕಿವಿಗಳೊಳಗಿರ್ಪ ಪೊಸಸಂಕವಣಿಗಳ್ ಪಲವು ಮಣಿಸರಂಗಳ್ ಪಟಿಕದ
ನವನಾಸಿಕಾಭೂಷಣಂಗಳೆಸೆಯುತ್ತಿರಲ್
ತವೆ ಸೊಬಗುವೆತ್ತ ತಮ್ಮಯ ಯುವತಿಯರ್ ಬೆರಸಿ
ತವಕದಿಂ ಭಲ್ಲೂಕ ಕಪಿಮುಖ್ಯ ಮೃಗತತಿಯ ಕೂಡಿಕೊಂಡೆಸೆದು ಮತ್ತಂ ೭

ಪಲವಣ್ಣಮಾದ ಜೀರ್ಣಾಂಬರಾನೀಕದಿಂ
ಸಲೆ ಸಮೆದ ಕಂಥಾಸಮೂಹಂಗಳಂ ತೊಟ್ಟು
ನಲಿಯುತ್ತೆ ವಿಕೃತವೇಷಂಗಳಿಂ ಪಿಂಗಳಾಕ್ಷಂಗಳಿಂದಂ ಸಂತತಂ

[1] ೪ (ಕ) [2] ರುಷ (ಗ) [3] ಯ್ದುತುಂ (ಗ) [4] ಮುಸೆವಾರ (ಕ)

ಲಲಿತೇಷ್ಟಕಾತಿಲಕನಿಕರಂಗಳಿಂದೆ ಸ
ಲ್ಲಲಿತ ಕರ್ಣನ್ಯಸ್ತಶೃಂಗನಿಕರಂಗಳಿಂ
ನಲಘುಕುಕ್ಷಿಗಳಿಂದೆ ಪೀವರೋರುಗಳಿಂದೆ ಪಿಂಗಲಶ್ಮಶ್ರುತತಿಯಿಂ ೮

ಪಿರಿದು ಕರ್ಬೊನ್ನುಂಗುರಂಗಳಿಂ ಕಣ್ಗಳೊಳ್
ಕರಮೆಸೆವ ಕಾಡಿಗೆಗಳಿಂ ಸೂಕ್ಷ್ಮಮಾಗೆಸೆವ
ಸುರುಚಿರಾಯೋವಲಯವಿಸರಂಗಳಿಂ ಬಿಗಿದ ಕಟಿ[1]ಬಂಧನಿಕರಂಗಳಿಂ
ಭರದಿನೊಳಬಾಗಿದೊಳ್ದೊಡೆಗಳಿಂದಂ ನಾಡೆ
ಸರಳ ಕೇಕೀಪತ್ರಗುಚ್ಛಾನ್ವಿತಂಗಳಾ
ದುರುತರಾತಪಪತ್ರನಿಕರಂಗಳಿಂ ಜೋಗಿಗಡಣಮೆಯ್ತರುತಿರ್ದುದು ೯

ಚರಣಾಂಗುಲಿಗಳಿಲ್ಲದವರುಂತೆ ಕಾಲ್ಗಳುಂ
ಪಿರಿದು ಮುರುಟಿರ್ಪವರ್ ಕೆಲಬರಂಗುಲಿಗಳುಂ
ಕರಮಧಿಕಮಾಗಿಯುಂಗಾಲ್ ಬತ್ತಿಕೊಂಡಿರ್ಪವರ್ ಕೆಲಬರಲ್ಲಿ ಮತ್ತಂ
ನಿರುತಮೂ[2]ರ್ಘಪಾದಂಗಳಿಂದಿರ್ಪವರ್
ಮರಳಿ ಕೊಂಕಾದ ಪಾದಂಗಳಿಂದಂ ನಾಡೆ
ಇರುತೆಸೆವವರ್ ಕೆಲರ್ ಕಠಿನಜಾನುಗಳ ಗಂಟುಳ್ಳವರ್ ಪಲಕೆಲಬರು ೧೦

ಕೆಲಬರತಿವಕ್ರಮಾಗೆಸೆವ ತೋಳುಳ್ಳವರ್
ಕೆಲಬರುಚಿತ ಖರ್ವಮಾದೇಕಹಸ್ತರ್ ಕೆಲರ್
ಸಲೆ ಬೆನ್ ಬಸಿಱುಸ್ ಕುಸಿದು ಮುಂದಕೆರ್ದೆವಾಯ್ದು ಕೈಬತ್ತಿದರ್ ಪಲಕೆಲಬರು
ಒಲೆದ ಕಂಧರಮುಳ್ಳವರ್ ಕೆಲರ್ ಮತ್ತರೆಬ
ರೊಲೆದ ಮುಯ್ಯುಳ್ಳವರ್ ಕುಸಿದ ಕೊರಳುಳ್ಳವರ್
ಕೆಲಬರೊಲಿದಿರ್ಪ ನಾಸಿಕಮುಳ್ಳವರ್ ಕೆಲರ್ ಬತ್ತುಗಾಲರ್ ಕೆಲಬರು ೧೧

ಇಂತಿವರ್ ಮೊದಲಾದ ವಿಕಟಾಂಗಿಗಳ್ ನಾಡೆ
ಸಂತಸದೆ ರುದ್ರಾಕ್ಷಿಗಳ ಕೊರಳೊಳಳವಡಿಸಿ
ಯುಂತೆ ಭಸ್ಮೋದ್ಧೂಳಿತಾಂಗರಾಗುತ್ತೆ ಶಿವಲಿಂಗಮುಂ ತಳೆದು ಬಳಿಕಂ
ಮುಂತುಗೊಂಡೊಲ್ದು ಮಹಿಷಾನಡ್ವನಿಕರಂಗ
ಳಂ ತವಕದಿಂದೇಱು ಪರಿ[3]ಸೆಯೊಳ್ ಬರುತಿರ್ದ
ರಂತನಂತರ್ ದೈನ್ಯದಿಂದೆ ಪುರುಷರ ಕಸವರಂಗಳಂ ಬೇಡುತನಿಶಂ ೧೨

---

[1] ಚಂ (ಕಟ) [2] ದ (ಗ) [3] ಷೆ (ಗ)

ರಸೆಯೊಳಗೆ ಬಸವಣ್ಣನಂತೆಸೆವ ಭಕ್ತರುಂ
ನಿಸದಮುಟಿಽ ತೋಱಿಸು ಗಡಾ ಮಲ್ಲಿಕಾರ್ಜುನಾ
ಕಸವರಂಗುಡುವ ಸದ್ಭಕ್ತರಂ ತೋಱಿಸೆಮಗೆಂದು ದೈನ್ಯಾಲಾಪದಿಂ
ಒಸೆದು ಪಾಡುತ್ತೆ ಪೊನ್ನಗಳನೆಱಿಽಯುತುಂ ತಮ್ಮ
ವಸಮಾದ ಸತಿಯರೊಡಗೂಡಿ ಪೆಳವರ ವೊತ್ತ
ಮಸವಸಂ ಬರುತಿರ್ದುದಾ ಪರಿಸೆಯೊಳ್ ಮಲ್ಲಿಕಾರ್ಜುನನ ನೋಳ್ಪೆಸಕದಿಂ ೧೩

ಮರಳಿ ತಂತಮ್ಮೂರ್ಗಳಂ ಕೆಲಬರತ್ಯಂತ
ಭರದೆ ಪೊಱಮಟ್ಟುದದುಮೊದಲಾಗಿ ಕಾಮುಸಂ
ಹರ ಮಲ್ಲಿಕಾರ್ಜುನನ ಕಾಣ್ಬನ್ನೆವರೆಗಮತಿಭಕ್ತಿಯಿಂ ಭೂಮಿಯುಲ್ಲಿ
ನಿರುತಮಷ್ಟಾಂಗಪ್ರಣಮುನೊಸೆದೆಸಗುತ್ತೆ
ಬರುತಿರಲ್ ಪರಿಸೆಯೊಳ್ ಕಂಡ ಜನರೆಲ್ಲರಿಂ
ತಿರವೇಡವೇ ಭಕ್ತಿಯೆಸಕಮಿಾ ಶ್ರೀಗಿರಿಗೆ ಪೋಪೆನೆಂದಾವನೊರ್ವಂ ೧೪

ಮುದದೆ ಪದಮಿಡೆ ಪಜ್ಜೆಪಜ್ಜೆಗಳ್ಗೇಗಳುಂ
ವಿದಿತಾಶ್ವಮೇಧಫಲವೆಂದು ಪೇಳ್ಗುಂ ಮಗುಳ್ದ
ಪದೆದಿಂತು ಪೋಪವರ್ಗಿಂತಪ್ಪ ಫಲವೆಂದು ಪೊಗಳುತಿರೆ ಮೋದದಿಂದಂ
ಒದವಿದತಿಹರ್ಷದಿಂ ಮತ್ತಿನರೆಬರ್ ಮುನ್ನೆ
ಸದಮಲೇಶಂ ಭೋಗದೇವನೊಡನೆಯ್ದಿದಂ
ತುದಿತದೇಹಪ್ರದಕ್ಷಿಣಮನೆಸಗುತ್ತೆ ಸಂತೋಷದಿಂ ಬರುತಿರ್ದರು ೧೫

ಲಲಿತ ನಿತ್ಯೋಪವಾಸದೆ ಬರ್ಪವರ್ ಕೆಲರ್
ಕೆಲಬರುಟಿಽ ಕಂಬಳಂಗಳ [1]ಪೊದೆ[1]ದು ಮುಸುಕಿಟ್ಟು
ಸಲೆ ಕಮಂಡಲುಗಳಂ ಪಿಡಿದು ಕೊಡೆಗಳ ತಾಳ್ದು ಯೋಗದಂಡಾನೀಕಮಂ
ಸುಲಲಿತಾಲಾಬುವೀಣೆಗಳ ಕರದೊಳ್ ಧರಿಸಿ
ನಲಿದಡಪಗಡಣಮಂ ಮುಯ್ವುಗಳೊಳಿರಿಸಿ ನಿ
ರ್ಮಲ ಶಾಣಶಿಲೆಗಳಂ ನೀರಾಜನಾರ್ಘಫಲಕವ್ಯಜನ ನಿಕರಂಗಳಂ ೧೬

ಕುಸುಮಮಿರಿಸುವ ಬಿದಿರ ಪಡಲಿಗೆಗಳಂ ನಾಡೆ
ಮಿಸುಗುವ ಪತದ್ಗೃಹಂಗಳ ದೀಪಿಕಾಸ್ತಂಭ
ವಿಸರಂಗಳಂ ಲಸದ್ರಂಗವಲ್ಲೀಫಲಕ ಭಸ್ಮಸೇವನತತಿಗಳಂ

[1] ಪಡೆ (ಕಗ)

ಎಸೆವ ರುದ್ರಾಕ್ಷತತಿಯಂ ಸ್ಫಟಿಕಮಣಿಗಳಂ
ಪೊಸ[1]ಗೆ[1]ಜ್ಜೆಗಳನೆಯ್ದೆ ಶಿವಸೂತ್ರನಿಕರವಂ
ನಿಸದವೊಪ್ಪುವ ಗಂಧದಾರುಗಳ ಗಂಧಪತ್ರಾನೀಕವಂ ಮತ್ತೆಯುಂ ೧೭

ವಿವಿಧ ಪರಿಮಳವಸ್ತುಗಳ ಕರಂಡಂಗಳಂ
ತವೆ ಪಯಣಕುಚಿತಮಾಗೆಸೆದಿರ್ಪ ಸದ್ದ್ರವ್ಯ
ನಿವಹಂಗಳೆಲ್ಲವಂ ಕಂಟಣಿಗಳೊಳ್ ತಿಂಬಿ ಬಲ್ಲೆತ್ತುಗಳ ಬೆನ್ನೊಳು
ತವಕದಿಂ ಪೊಱಿಸಿಕೊಂಡಾ ಮಾರ್ಗದಲ್ಲಿ ಬೇ
ಡುವರ ಬಗೆಯಱಿದವರ್ಗಾ ವಸ್ತುವಂ ಕುಡುತೆ
ಸವಿನಯದೆ ಜಂಗಮಾರ್ಚನೆಗೆಯ್ವುತುಂ ಬರ್ಪ ಸದ್ಭಕ್ತರರೆಬರಲ್ಲಿ ೧೮

ಬಿಡುಪಯಣದಿಂದೆ ಮುಂದಣ ಪಯಣದೆಡೆಗಳೊಳ್
ಸಡಗರದೆ ಮುಂದೆ ತಮ್ಮಾಳ್ಗಳಿಂ ಕಳುಪಿಯಿಂ
ಪೊಡರಿಸುವ ಸತ್ರಶಾಲೆಗಳನಱವಟಿಗೆಗಳನಂತೆ ಕೂಪಾದಿಗಳನು
ಬಿಡದೊಡರಿಸುವ ಪಯಣಪಯಣದೆಡೆಯೊಳ್ ಮುದದೆ
ಕಡುಮೆಱೆವ ಭಕ್ಷ್ಯವೀಟಿಕೆಗಳಂ ಕರೆಕರೆದು
ಕುಡುವ ಸದ್ಭಕ್ತರರೆಬರ್ ಬಂದರಾ ಪರಿಸೆಯೊಡನೆ ಸಂತೋಷದಿಂದಂ ೧೯

ಇಂತು ಬರುತಿರೆ ಪರಿ[2]ಸೆ[2] ಮಧ್ಯಾಹ್ನಸಮಯದೊಳ್
ಸಂತಸಂಗುಂದಿ ಪಸಿವೆಸಕಮುದು ತಲೆದೋಱೆ
ಮುಂತೆಸೆವ ನದಿಗಳೊಳ್ ತಂತಮ್ಮ ವರ್ಗಂಗಳೊಗ್ಗಾಗಿ ಸಮ್ಮದದೊಳು
ಎಂತುವುಂ ಬಿಸಿಲಿನಿಸು ಭೇದಿಸಲ್ಬಾರದ
ತ್ಯಂತ ಸುಚ್ಛಾಯಾನ್ವಿತಾವನಿಜದೆಡೆಗಳೊಳ
ಗಂ ತಗುಳ್ದ ಗುಲ್ಮತತಿಗಳ ಕೋಣೆಗಳೊಳೆಸೆವ ಗಿರಿಗಹ್ವರಂಗಳಲ್ಲಿ ೨೦

ಗಿರಿಯ ನಿರ್ಝರನಿಕರದೊಳ್ ಕೂಪಸಂಘದೊಳ
ಗುರುತಟಾಕಂಗಳೊಳ್ ಪದ್ಮಾಕರಂಗಳೊಳ್
[3]ಪಿ[3]ರಿದೆಸೆವ ನೀರ್ಗಳಂ ಪತ್ರಸಂಪುಟತತಿಗಳೊಳ್ ಚರ್ಮಭಸ್ತ್ರಿಗಳೊಳು
ವರ ಪೂಗಪಟ್ಟನಿಕರಂಗಳೊಳ್ ತಾಮ್ರದಿಂ
ವಿರಚಿಸಿದ ಕುಂಭಂಗಳೊಳ್ ಕಂಚಿನಿಂದೆ ಭಾ
ಸುರಮಾಗಿ ಸಮೆದ ಕಲಶಂಗಳೊಳ್ ತಿಂಬಿಕೊಂಡೆಯ್ತರುತೆ ಪರಿಸೆ ಮತ್ತೆ ೨೧

---

1 ಸೆ (ಟ) 2 ಷೆ (ಗ) 3 ಪ (ಕ)

ವರ ಬಿಲ್ವಪತ್ರಂಗಳಂ ರುದ್ರಜ[1]ಟೆ[1]ಗಳಂ
ಮರುವಕಂಗಳನಂತೆ ಜಂಬೂದಳಂಗಳಂ
ಸರಳ ವನದ[2]ಮ[2]ನಂಗಳಂ ಮತ್ತಿವುಂ ಮುಖ್ಯವನಪತ್ರವಿತತಿಗಳನು
ಭರದಿಂದೆ ತಿಱಿದುಕೊಂಡಲ್ಲಿ ಶೋಭಿಸುತಿರ್ಪ
ಸುರುಚಿ*ವಡೆದಿರ್ಪ ಸಹಕಾರ ಖರ್ಜೂರ ಭಾ
ಸುರತರೋದುಂಬುರಪ್ರಮುಖ ನಾನಾಫಲಂಗಳನೆಯ್ದೆ ನೀಳ್ದುಕೊಂಡು ೨೨

ಕರಮೆಸೆವ ಮಾಂಮಿಡಿಗಳಂ ಬೆಳಲ ಕಿಱುಗಾಯ
ನಿರದೆಸೆವ ಮೆಳಸಿಗೆಯು ತೋಳ್ಗಡಣಗಳನೆಯ್ದೆ
ಭರದಿಂದೆ ತಿಱಿದುಕೊಂಡೊಸೆದು ತಂತಮ್ಮ ತಾಣಂಗಳಂ ಮು*ದದಿನೆಯ್ದೆ
ಹರಪೂಜೆಯಂ ಸಮೆದು ಫಲನಿಕರಮಂ ಮನೋ
ಹರಲಿಂಗಕಿತ್ತು ಮತ್ತಾ ಪ್ರಸಾದಂ ದಲಾ
ದುರುಸತ್ಫಲಂಗಳಂ ಭಕ್ಷ್ಯಂಗಳಂ ಕಟ್ಟುಬುತ್ತಿಗಳ ಸವಿದು ಮತ್ತೆ ೨೩

ಹ[3]ರಿಸ[3]ದಿಂ ಖೈರದಂಬುಲಗಳಂ ಸ್ವೀಕರಿಸು
ತುರುನಾದದಿಂದೆ ಪಾಡುತ್ತೆ ಮುನ್ನಿನ ತೆಱದೆ
ಭರವಸದೊಳಾ ಪ[4]ರಿಸೆ[4] ನಿಮ್ನಭೂಮಿಯನಿಳಿಯುತೂರ್ಧ್ವಭೂಮಿಯನಡರುತೆ
ಗಿರಿಯಗ್ರವೇಱುಳಿಯುತಂ ವಿಷಮಭೂಮಿಯೊಳ್
ಪಿರಿದುಮಾರ್ಕೈದಡಿಯನಿಡುತೆ ಪಳ್ಳಂಗಳೊಳ್
ಪರಿಪರಿದುಪೋಗುತಂ ಪಂಕ್ತಿತಪ್ಪಡೆ ಪರಿಸೆ ಸಾಲ್ಗೊಂಡು ಪೋಪಾಗಳು ೨೪.

ಮಿಸುಪ [5]ಚಂ[5]ಡಾನೀಕಕೋಟ್ಯೆಬುರ್ದಂಗಳಾ
ಗೆಸೆವ ವಿಲಸಜ್ಜಂಗಮಸ್ಥಾವರಾದಿಗಳ್
ನಿಸದಮಾ ಶ್ರೀಪರ್ವತಾಕಾರಮಂ ತಾಳ್ದುನಿಂದುವೆಂಬಂತೆ ಸತತಂ
ಎಸೆಯುತ್ತೆ ಮುಂದೆ ಪಿಂದೆಡಬಲಂಗಳ ನಡುವೆ
ಮಸಕದಿಂದೆಲ್ಲಾ ಹರಿನ್ನಿಕರಮಂ ತಿಂಬಿ
ಬಿಸವಂದದಿಂ ಪ[4]ರಿಸೆ[4] ವಿವಿಧಚಿತ್ರಂಗಳಂ ನೋಡುತ್ತೆ ಬರುತಮಿರಲು ೨೫

ಗಿರಿಶನ ಜಟಾಜೂಟಮಧ್ಯದೊಳಗಿರ್ದ ಭಾ
ಸುರಮಾದ ಗಂಗಾತರಂಗೋಪಕಂಠದೊಳ್
ಕರಮೆಸೆವ ಚಂದ್ರಕಲೆಯಂತೆ ಹೃದ್ಭಂಗಾದ್ರಿಕನಕಾದ್ರಿ ಮತ್ತೆ ಮೆಱೆವ

---

[1] ಡೆ (ಗ) [2] ವ (ಗ) [3] ರುಷ (ಗ) [4] ರುಷೆ (ಗ) [5] ಚಾಂ (ಗ)
* (ಗ) ಪ್ರತಿಯಲ್ಲಿ ಇಲ್ಲ.

ಸರಳ ನಕ್ಷತ್ರಾದ್ರಿಯೆಂಬಿವುಂ ಮೊದಲಾದ
ನಿರುಪಮಾದ್ರಿಗಳ ನಡುವೆಸೆದಿರ್ಪ ಗಂಗೆ ಸುರು
ಚಿರಮಾಗಿ ಮುಂಗಡೆಯೊ[1]ಳೊ[1]ಸೆದು ಕಾಣಿಸಿತು ಮತ್ತಂತುಮಲ್ಲದೆ ಭಾವಿಸೆ ೨೬

ವರ ಚಂದ್ರವತಿಯಿಂದೆ ಮಲ್ಲಿಕಾರ್ಜುನಶಿರದೊ
ಳಿರದಿಟ್ಟ ಬಿಳಿಯ ಮಲ್ಲಿಗೆದಂಡೆಯಂತೆ ಬಂ
ಧುರಮಾಗಿ ಶೋಭಿಸಿತ್ತಾ ಗಂಗೆ ಮತ್ತದಂ ಕಾಣುತ್ತೆ ಪೊ[2]ರಿಸೆ[2] ಮುದದಿಂ
ಪಿರಿದು ನುತಿಸುತೆ ಭಕ್ತಿಭರದಿಂದೆ ಪೊಡಮಡುತೆ
ಸರಳ ಹೃದ್ಭಂಗಪರ್ವತಮನಡರಿತ್ತು ಮ
ತ್ತುರುಯತ್ನದಿಂದೆ ಕಡುಸೇದೆವಡುತಾಯಸಂಬಡುತೆ ಹೃದಯಂ ಪೆಳಱುತೆ ೨೭

ಭರದಿಂದೆ ಹೃದ್ಭಂಗಪರ್ವತಮನೇಱಿ ಮ
ತ್ತುರುತ[3]ರೋನ್ನ[3]ತಮಾಗಿ ದಿವಮನುಱೆ ಸೋಂಕುವಾ
ಗಿರಿಯಗ್ರಮಡರಿಯಲ್ಲಿಂದೆ ಕೆಳಗಂ ನೋಡೆ ಪಾತಾಳಲೋಕಂಗಳಂ
ಇರದೆ ನೋಡುವ ಭಂಗಿಯಂತೆಸೆಯೆ ಭೀರುಗಳ್
ಪಿರಿದಳಱಿ ಕಂಪಿಸುತೆ ಕಣ್ಗಳಂ ಮುಚ್ಚುತ್ತೆ
ನಿರುತಮಲ್ಲಿಂದೆ ತುರಿತದೆ ಮುಂದನೆಯ್ದುವರ್ ನೋಡಲಮ್ಮದೆ ಕಣ್ಗಳಿಂ ೨೮

ಅಳಿದು ಜೋಲ್ವುಷ್ಣೀಷನಿಕರಂಗಳಂ ಕೂಡೆ
ಗಳಗಳನೆ ಬಂಧಿಸಿಕೊಳುತ್ತೆ ಮುಡಿಗಳ್ ಕೆದಱೆ
ಘಳಿಲನವನೋಸರಿಸಿಕೊಳುತುಟ್ಟ ಧೋತ್ರಂಗಳಳಿಯೆ ನೇ[4]ರ್ಪ[4]ಡಿಸಿಕೊಳುತುಂ
ಬಳಿಕೆ ಮೇಲ್ವೊದಕೆಗಳ ಸೀರೆಗಳ್ ಜಾಱಲವ
ನಳವಿನಿಂ ಸೈತೊತ್ತಿಕೊಳುತೆ ಹೆದೆಯದೊಳೆಯ್ದೆ
ಮಿಳಿರುತಿರೆ ಭೀತಿ ಮುಂದಣಪರಿಸೆಯೊಡಗೂಡಿ ಪೋಗುತಿರ್ದರ್ ಭರದೊಳು ೨೯

ಬಳಿಕಮಾ ಪರಿ[5]ಸೆ[5] ಜಯಜಯಯೆಂಘೋ ಎನುತೆ ಮುಂ
ದಳವಿಯೊಳ್ ತೋರ್ಪ ಕಿಱುವೆಟ್ಟಂಗಳಂ ಪತ್ತಿ
ಕುಳಿಶಸಮಪಾಷಾಣನಿಕರಂಗಳಂ ಮೆಟ್ಟಲಳಕಿ [6]ಕು[6]ಱುವಡಿಯಿಡುತ್ತಂ
ಬಳಲುತ್ತೆ ಬರ್ಪ ವೃದ್ಧರ್ಕಳಂ ಕೈವಿಡಿದು
ಘಳಿಲನೊಡಗೊಂಡುಪೋಗುತ್ತಿರ್ಪವರ್ ಕೆಲರ್
ಗಳಗಳನೆ ನಡೆಯುತೂರುನ್ಯಸ್ತಹಸ್ತರಾಗೊಸೆದು ನಡೆವರ್ ಕೆಲಬರು ೩೦

---

[1] ಳೆ (ಗ) [2] ರುಷೆ (ಗ) [3] ರಾನ್ನಿ (ಕ) [4] ರ್ಪ (ಕ) [5] ಷೆ (ಗ) [6] ಕಿ (ಗ)

ಜನದ ಸಮ್ಮರ್ದಂಗಳಂ ಬಿಟ್ಟು ತಮ್ಮಿಚ್ಛೆ
ಯನುವಿನಿಂದೋರೊರ್ವರೊಗ್ಗಾಗಿ ನೆಳಲುಳ್ಳ
ಘನಶಿಲಾಸಂಘಂಗಳಂ ಸೇರಿ ನಿಲುತೆ ಹೃದ್ಭಂಗಪರ್ವತದೊತ್ತಿನ
ಮಿನುಪ ತರುಗಳ ನೆಳಲ್ಗೊಯ್ಯನೊಯ್ಯನೆ ಪೋಗಿ
ಮನವೊಸೆದು ಕುಳ್ಳಿರ್ಪವರ್ ಕೆಲರ್ ಸಂತಸದೆ
ಕನದುನ್ನತತ್ರಿಯಂಬಕಪರ್ವತಾಗ್ರದಿಂ ಭೂಮಿಗೆಯ್ತಂದು ತೋರ್ಪ ೩೧

ಸಲೆ ಗೌತಮೀನದಿಯು ತೆಱದೆ ಹೃದ್ಭಂಗುರಾ
ಚಲದಾದಿಮಧ್ಯಾಂತವಂ ಬಳಸಿ ಮತ್ತಮಾ
ಲಲಿತ ಭೂಧರದೊತ್ತಿನೊಳ್ ಮೆಱೆವ ಗಂಗಾಪ್ರವಾಹದ ಸಮೀಪಮೆಯ್ದಿ
ಅಲರ್ದು ಮತ್ತಾ ಪರಿ[1]ಸೆ[1] ತತ್ತೀರದೊಳಗೆ ನಿ
ರ್ಮಲವಾದ ಪೂಗಪುನ್ನಾಗಪನಸಾಮ್ರ ಸ
ಲ್ಲಲಿತ ಚಂದನ ಜಂಭ ಜಂಬೂಮಹೀರುಹಾದಿಗಳ ತಣ್ಣೆಳಲೊಳೊಸೆದು ೩೨

ಪಿರಿಯ ಗುಡಿಕಾವಣಗಳಾದಿಯಾದವನಲ್ಲಿ
ವಿರಚಿಸುತೆ ತಂತಮ್ಮ ವರ್ಗಂಗಳೊಡಗೂಡಿ
ಹ[2]ರಿಸ[2]ದಿಂದಿರ್ಪವರ್ ಕೆಲಬರಾ ಕನಕಗಂಗಾಸಂಗಮದೊಳಕ್ಕಱಿಂ
ಕರವೊಲ್ದು ಮಜ್ಜನಂಬೊಕ್ಕು ತಮ್ಮಯ ಘೋರ
ತರಮಾದ ಜನ್ಮಕೋಟಿಗಳಲ್ಲಿ ಸಮೆದ ಬಂ
ಧುರ ದುರಿತನಿಕರಪಂಕೌಘಂಗಳಂ ಕರ್ಚಿ ಸೊಕಮಿರ್ಪವರ್ ಕೆಲಬರು ೩೩

ಮಿಸುಗುಮಿಷ್ಟಾನ್ನಪಾನಾದಿಗಳಿನಾವಗಂ
ಮಸಕದಿಂ ತಮ್ಮಿಷ್ಟಬಾಂಧವಾದಿಗಳ ಸಂ
ತಸದಿಂದೆ ಕೂಡಿಕೊಂಡಿನ್ನುಣಿಸುಗಳ ಸವಿದು ನಲಿಯುತಿರ್ಪರ್ ಕೆಲಬರು
ಎಸೆವ ತಮ್ಮಯ ಕುಲಸ್ತ್ರೀಪುತ್ರರೊಡಗೂಡಿ
ರಸರಸಾಯನಮನಾರೊಗಿಸಿ ತಣ್ಣೆಳಲೊಳಗೆ
ಸಸಿನೆ ಪಟ್ಟಿಪ್ಪವರ್ ಕೆಲಕೆಲಬರಿಂತು ಸುಖಶರಧಿಯೊಳ್ ಪರಿ[3]ಸೆ[3]ಯಿರಲು ೩೪

ಇವರೆಲ್ಲರಂ ದೋನಮಾರ್ಯರ್ಗನತಿಹರ್ಷದಿಂ
ತವಕಮುಣ್ಮಲ್ ನೋಡು[4]ತಾ[4] ಸಂಜೆಗಾಲದೊಳ್
ಸವಿನಯದೆ ಸದ್ಭಕ್ತರೊಡಗೂಡಿ ನಿತ್ಯಲಿಂಗಾರ್ಚನೆಯನೊಸೆದು ರಚಿಸಿ

---

[1] ಷೆ (ಗ) [2] ರುಷ (ಗ) [3] ಷೆ (ಗ) [4] ತಂ (ಕ)

ಶಿವಲಿಂಗಸತ್ಪ್ರಸಾದಮನರ್ಧರಾತ್ರಿಯೊಳ್
ಸವಿದು ಸುಖಮಿರಲಿತ್ತಲೀ ಪರಿಸೆಯೊಳ್ ಗೀತ
ರವನುಣ್ಕೆ ಬಸವೇಶನಂ ಪಾಡುತಾಡುತ್ತೆ ನಲಿಯುತಿರ್ಪರ್ ಕೆಲಬರು ೩೫

ಸರಳ ಬಸವಪುರಾಣಮಂ ಪಠಿಸುವರ್ ಕೆಲರ್
ಭರತೋಕ್ತರೀತಿಯಿಂ ಗೀತಂಗಳಂ ಪಾಡು
ತುರುಮೋದದಿಂದಿರ್ಪವರ್ ಕೆಲರ್ ದೇಶೀಯ ಪದಜಾತಿಗಳ ಪಾಡುತೆ
ಚರಣಂಗಳೊಳ್ ತಾಳಗತಿಗಳಂ ತೋಱುತ್ತೆ
ಕರಮೆ ನರ್ತಿಸುತಿರ್ಪವರ್ ಕೆಲರ್ ಮೃದುವಾಗಿ
ಸರಸಮಾದಾಳಾಪನಿಕರಮಂ ತೋಱಿ ಪಾಡುತ್ತಿರ್ಪವರ್ ಕೆಲಬರು ೩೬

ಗಿರಿನಿಕರಮೆಯ್ದೆ ಮೂರ್ಧನಿಗುಡುವ ಪಾಂಗಿನಿಂ
ಪಿರಿಯ ರವದಿಂದೆ ಜಯಜಯ ಎಂಬವರ್ ಕೆಲರ್
ಕರಮಲಸಿ ನಿದ್ರೆಯೊಳಗಾಳ್ದಿರ್ಪವರ್ ಕೆಲಬರೆಳ್ದು ಪರಿ[1]ಸೆ[1]ಯ [2]ಸೊಬಗನು[2]
ಹ[3]ರಿಸ[3]ದಿಂ ನೋಡಲೆಯ್ದುವರರೆಬರಾ ಗಿರಿಯ
ವರ ಮಹತ್ವಮನೊರೆವರರೆಬರಿನ್ನೀ ದಾರಿ
ಪಿರಿದು ರುಜುವಾಗಿರ್ಪುದೇ ಎಂದು ಮತ್ತಿನಂ ಬೆಸಗೊಂಬವರ್ ಕೆಲಬರು ೩೭

ಪಿರಿದುಮೀ ಗಿರಿಯ ಮಾಹಾತ್ಮ್ಯಮಂ ಪೇಳ್ವೊಡಾ
ಯುರಗರಾಜಂಗರಿದು ಮತ್ತಮೀ ಶ್ರೀಗಿರಿಯೆ
ಹ[3]ರಿಸ[3]ದಿಂದಮನೇಕರೂಪಂಗಳಂ ಧರಿಸಿ ತೋರ್ಕುಮೆಂತೆನೆ ಮತ್ತಿದು
ನಿರುತಂ ಜಲಾಶಯತ್ವದೊಳೊಂದಿ ಸಂತತಂ
ಪರಿಸೆಗೀವುದು ಜಲಂಗಳನಾವಗಂ ಮತ್ತೆ
ವರ ಲಿಂಗತೆಯನೆಯ್ದಿ ನೇಮಂಗಳಂ ಸಲಿಸುವುದು ನರಸಮೂಹಕೊಲ್ದು ೩೮

ಫಲಿತ ದ್ರುಮತ್ವಮಂ ತಾಳಿ ಮಾನವತತಿಗೆ
ಫಲಸಮೂಹಂಗಳಂ ಕುಡುತಿರ್ಕುಮಂತೆ ಸ
ಲ್ಲಲಿತ ಜಲದತ್ವಮಂ [4]ತಾಳಿ[4]ಸಾಂದ್ರಚ್ಛಾಯಮಂ ಮಾಡುತಿರ್ಕುಮನಿಶಂ
ಲಲಿತ ಪುಷ್ಪಿತಚಾರುವಲ್ಲಿತ್ವಮಂ ತಾಳ್ದು
ನಲಿದು ಪುಷ್ಪಾಮೋದಮಂ ಕುಡುಗುಮಣೆಯುರಂ
ಸುಲಭಮುಂದಾನಿಲತ್ವದೊಳೊಂದಿ ಸೇದೆಯಂ ತವಿಕುಮೀ ನಗರಾಜನು ೩೯

---

[1] ಷೆ (ಗ) [2] ಮೊಗವನು (ಕ) [3] ರುಷ (ಗ) [4] ತಾಂಗಿ (ಟ)

ಪರಮ ಪೌರಾಣಿಕಂ ತಾನಾಗಿ ಪರ್ವತದ
ವರ ವೈಭವಂಗಳಂ ಪೇಳ್ಗುಮತಿಶಯಮಾಗಿ
ನಿರುತದಿಂ ಯಾಮಿಕತ್ವದೊಳೊಂದಿ ಪರಿರಕ್ಷಿಸುತ್ತಿರ್ಕುಮನವರತವು
ಪಿರಿದು ಬಹುಮೃಗರೂಪ ಧರಿಸಿ ಮನದಳ್ಕಱಿಂ
ಪರಿಸೆಯೊಳ್ ಬರ್ಪ ನರರಾಸಱಿಂ ಮಱಿಕಯಿಸುಗು
ಮುರುಪಕ್ಷಿರೂಪದಿಂ ಹೃದಯದೊಳ್ ಕೌತುಕಮನೊಡರಿಸುಗುಮವನಿಯೊಳಗೆ ೪೦

ಮಿಗೆ ಅತಿಥಿರೂಪ[1]ತ್ವಮಂ ತಾಳ್ದಿ[1] ಸಂತತಂ
ತಗುಳ್ದು ಪೂಜನೆಗಳಂ ಕೈಕೊಳ್ಗುಮಣಿಯರಂ
ಸೊಗಯಿಸುವ ಶಿಷ್ಟಮುನಿರೂಪದಿಂದಾಶಿಸ್ಸುಗಳನೊಡರಿಸುಗುಮಳ್ಕಱಿಂ
ನೆಗಳ್ದ ಯತಿರೂಪದಿಂ ನಿಯಮಮನೊಡರ್ಚುಗುಂ
ಸುಗುಡ ಜಂಗಮರೂಪದಿಂದೆ ಸದ್ಭಕ್ತಿಯಂ
ಬಗೆದು ತೋಱಿಸುಗುಮಾಪ್ತಸ್ವರೂಪಂದಾಳ್ದು ಹಿತಮನನಿಶಂ [2]ಬೋ[2]ಧಿಕುಂ ೪೧

ಪಿರಿದು ಘೋಷಸ್ವರೂಪದಿನಲ್ಲಿಗಲ್ಲಿಗುರು
ತರಮೆನಿಸುವಾಶಾಭಿಪೂರಣಂಗೆಯ್ಗುಮಂ
ತಿರದಮಳತೀರ್ಥರೂಪಂಗಳಿಂ ಪಾವನತ್ವದೊಳೊಂದಿತೋರ್ಕುಮನಿಶಂ
ವರ ನದೀರೂಪದಿಂ ಮುಕ್ತಿಸಂದೋಹಮಂ
ಪಿರಿದೀಯುತಿರ್ಕುಮದುಮಲ್ಲದೆಯುಮಣಿಯರಂ
ನಿರುತಮಿಾ ಪರಿ[3]ಸೆ[3]ಗತ್ಯಂತಹಿತಮಾಗಿರ್ಕುಮಂತಲ್ಲದೊಡೆ ಸಂತತಂ ೪೨

ಪಿರಿದು ದುರ್ಗಮಮಾರ್ಗವನಸಮೂಹಂಗಳಿಂ
ಕರಮೆ ತಸ್ಕರದುಷ್ಟಮೃಗಕದಂಬಂಗಳಿಂ
ದುರುತರ ಕ್ರೂರಜಂತ್ವಾದಿ ಯೂಥಂಗಳಿಂದತಿಭಯಂಕರಮೆನಿಸುವ
ನಿರುತದಿಂ ನಿರ್ಜನಸ್ಥಾನದೊಳಗೆಸೆದಿರ್ಪ
ಸಿರಿಗಿರಿಯನಿದನೊಸೆದು ನೋಳ್ಪ[4]ವನದಾವ[4]ನೆಂ
ದಿರದಿಂತುನುಡಿವವರ್ ಕೆಲಬರಿಂತಿರುತಿರಲು ಮೂಡಿತ್ತು ರವಿಮಂಡಲಂ ೪೩

ಅನಿತಱೊಳ್ ಭಕ್ತರೊಡಗೂಡಿ ಸಮ್ಮದದಿಂದೆ
ವಿನಯನಿಧಿ ದೋನಮಾರ್ಯಂ ಶರಣಪುಂಗವಂ
ಮಿನುಪ ಗಂಗಾಪ್ರವಾಹಾಶ್ರಿತಪ್ರತ್ಯಂತಗಿರಿಗಳ ಸಮೂಹಂಗಳಿಂ

---

[1] ಮಂ ತಾಳುತ್ತೆ (ಕ) [2] ಶೋ (ಕ) [3] ಷೆ (ಗ) [4] ನದನಾವ (ಗ)

[1]ಮಿನುಗುವ[1]ಭ್ರಂಕಷಾಗ್ರೋರುಶಿಖರಾಳಿಯಿಂ
ನನಸು ರಾಜಿಸುತಿರ್ಪ ನಕ್ಷತ್ರಪರ್ವತಮು
ನನುನಯದಿನಡರ್ದು ಸುರನದಿಯ ಸಂಗಮುಕೊಲ್ದು ಬರ್ಪಬ್ಧಿಯಂತೆ ಮುದದಿಂ ೪೪

ಪುದಿದೆಲ್ಲ ದಿಕ್ಕುಗಳ್ [2]ತಿಂ[2]ಬಿಯತಿಹರ್ಷದಿಂ
ಪಡೆದುಬರುತಿರ್ಪ ಪರಿ[3]ಸೆ[3]ಯು ನೋಡುತುಂ ಬರಲ್
ಪುದಿದು ಮತ್ತೊಂದೆಡೆಯೊಳುಘೆಯುಘೇ ಜಯ ಎನುತೆ ಬರುತಿರ್ದರರೆಬರಲ್ಲಿ
ಒದಗಿ ಬರುತಿರ್ಪವರ್ ಕೆಲಬರಲ್ಲಲ್ಲಿ ಸ
ಮ್ಮುದವಜಿತು ಕುಳ್ಳಿರುತ್ತಿರ್ಪವರ್ ಕೆಲಬರಿಂ
ತೊದವಿ ಬರುತಿರ್ಪರಂ ದೋನವಾರ್ಯರ್ಗಂ ನೋಡುತೆಳ್ತರುತ್ತಿರ್ದನೊಸೆದು ೪೫

ಕರವೆ ತನ್ಮಾರ್ಗದೊಳ್ ಸನೆದೊಪ್ಪುತಿರ್ಪ ಬಂ
ಧುರಮಾದ ಸೋಪಾನನಿಕರಂಗಳಂ ದಾಂಟಿ
ಹ[4]ರಿಸ[4]ದಿಂ ಬರ್ಪವರ್ ಕೆಲಬರಧ್ವಶ್ರಮದೆ ಕೈಗಳಂ ತೊಡೆಯೆಡೆಯೊಳು
ಇರಿಸಿಕೊಂಡೆಯ್ತರ್ಪವರ್ ಕೆಲಬರತ್ಯಂತ
ಭರದೆ ನಡೆವರ್ ಕೆಲಬರೋರೋರ್ವರತಿಮುದದಿ
ನಿರದೆ ಕೈಗಳ ಪಿಡಿದುಕೊಂಡು ನಲಿದಾಡುತ್ತೆ ಬರುತಿರ್ಪವರ್ ಕೆಲಬರು ೪೬

ಭರದಿಂದೆ ನಿನ್ನ ಕಾಣಲ್ಕೆಮ್ಮ ಕೈಗಳಂ
ಹ[4]ರಿಸ[4]ದಿಂದಂ ಪಿಡಿದು ಬರಸೆಳೆದುಕೊಳ್ಳಯ್ಯ
ನಿರುಪಮಶ್ರೀಗಿರೀಶ್ವರಮಲ್ಲಿಕಾರ್ಜುನಾ ಎಂದು ನುಡಿಯುತ್ತರೆಬರು
[5]ಪರಿದು ನೀನೆಳ್ದು[5]ಬಂದೆಮ್ಮ ಹಸ್ತಂಗಳಂ
ಕರವೆ ಬಿದ್ದಂಪಿಡಿದು [6]ಸೇ[6]ದಿಕೋ ಮಲ್ಲಯ್ಯ
ಪರವುದಾನಿಯೆ ಎಂದು ಭಕ್ತಿಯಿಂ [7]ಪಾ[7]ಡುತ್ತೆ ಬರುತಿರ್ಪವರ್ ಕೆಲಬರು ೪೭

ಇಂತು ಬರುತಿರಲುತ್ಸವಾಮೃತಂ [8]ತಿಂ[8]ಬಿ ನೆಜಿತ
ಸಂತಸದಿನಾ ಪರಿ[9]ಸೆ[9]ಯೆಂಬ ಭಾಂಡಂಗಳಂ
ಕಂತುಹರನೆಸೆವ ತನ್ನಯ ಕೃಪಾರಜ್ಜುಗಳಿನಾಕರ್ಷಣಂಗೆಯ್ದನೊ
ಉಂತೆಯೆಂಬಂತೆ ನಕ್ಷತ್ರಾಚಲಾಗ್ರಮಂ
ಮುಂತುಗೊಂಡಡರಿತಾ ಪರಿಸೆ ಭಾವಿಸಿ ನೋಡ
ಲಂತಲ್ಲದೊಡೆ ಯೋಜನೋತ್ಸೇಧಮಪ್ಪ ಗಿರಿಯಂ ಪತ್ತಲಾರ್ಗಮರಿದು ೪೮

---

[1] ಎನಸುಮ (ಟ) [2] ತುಂ (ಗ) [3] ಷೆ (ಗ) [4] ರುಷ (ಗ) [5] ಪರಿದು ನೀನೆಯ್ದಿ (ಟ) [6] ಸೇಂ (ಕ) [7] ವಾ (ಕ) [8] ತುಂ (ಗ) [9] ಷೆ (ಗ)

ಎನುತೆ ದೋಣನುರಾಜನಾನಂದಮುಣ್ಣೆ ತೊ
ಟ್ಟನೆ ತಾರಕಾಚಲಾಗ್ರಮನಡರಿ ಸಂತಸದಿ
ನಿನಿತುಪೊಳ್ತಲ್ಲಿರ್ದು ಸೇದೆಯಂ ಮಿಗೆನೀಗಿ ಮರಳಿಯಾ ಪರಿ[1]ಸೆ[1]ಗೂಡಿ
ವಿನಯದಿಂ ಬರ್ಪಾಗ ತತ್ಪರ್ವತಾಗ್ರದೊಳ
ಗೆನಸುಮೊಪ್ಪಟ್ಟಿಯಾಗೆತ್ತೆತ್ತಲುಂ ತೋಱಿ
ನನಸು ಪಾಲಿಸು ಪರ್ವತೇಶ್ವರೆನುತುಂ ಪರಿ[1]ಸೆ[1] ನೆಳಲನೆಡೆಗೊಂಡುದೊಸೆದು ೪೯

ಕಡುಮೆಱೆವ ಪರ್ವತೇಶ್ವರ ನೀನೆ ಗತಿಯೆನುತೆ
ಸಡಗರದಿನಲ್ಲಿರ್ದ ಮರದ ನೆಳಲಂ ಸಾರ್ದು
ಪಡಪಿನಿಂದಿರ್ಪವರ್ ಕೆಲಬರೊಪ್ಪಣ್ಗಳಂ ಬೆದಕಿ ನೋಡುತ್ತುಮವನು
ಬಿಡದೆ ಸವಿವರ್ ಕೆಲರ್ ಕಿಱುಗಲ್ಗಳಂ ನೋಡಿ
ನಿಡುನೋಪವರ್ ಕೆಲರ್ ಶೈಲಸಂಘಂಗಳಂ
ನಡೆನೋಡುವರ್ ಕೆಲರ್ ಪುಣ್ಯನಿಕರಂಗಳು ಪೋಷಿಪರ್ ಪಲಕೆಲಬರು ೫೦

ಮನದೊಳನುರಾಗಿಸುವರರೆಬರಘನಿಕರಮಂ
ಮುನಿದು ಖಂಡಿಸುವರರೆಬರ್ ಕಾಲನಂ ನೋಡಿ
ನನಸು ದಂಡಿಸುವರರೆಬರ್ ಭವೋತ್ಥಿತದುಃಖಮಂ ಕಿಡಿಪರರೆಬರೊಸೆದು
ಮಿನುಪ ದೇಶಿಕಸಂಘಮಂ ಸೇವಿಪರ್ ಕೆಲರ್
ಘನಲೀಲೆಯಿಂದಾಡುತಿರ್ಪರರೆಬರ್ ಮತ್ತೆ
ಮೆನಸುಮಾ ಗಿರಿಯ ವೈಭವಮನುಱೆ ಕೇಳುತ್ತೆ ಸೊಕಮಿರ್ಪವರ್ ಕೆಲಬರು ೫೧

ಬಸವೇಶನಂ ನೆನೆದು ಪಾಡುವರ್ ಕೆಲಬರು
ಲ್ಲಸದಿಂದೆ ಪುಷ್ಪವಾಟೀನಿಕರಕೆಯ್ದಿ ಸಂ
ತಸದೆ ಕುಸುಮಂಗಳಂ ತಿಱುವರರೆಬರ್ ಪಡುವರರೆಬರುನ್ನತವೃಕ್ಷದ
ಮಿಸುಪ ಬೀಳಲ್ಗಳಂ ಡೋಳಂಗಳಂ ಮಾಡಿ
ಯಸವಸದಿನಾಡುತಿರ್ಪರ್ ಕೆಲರ್ ಚಳಿಗಂಜಿ
ನಸುಬಿಸಿಲ ಕಾಯ್ವುತಿರ್ಪರ್ ಕೆಲರ್ ಕುಂಜತತಿಯೊಳಗಿರ್ಪವರ್ ಕೆಲಬರು ೫೨

ಪರಿಪರಿದು ತಮ್ಮಿಷ್ಟಬಾಂಧವರ ಪೆಸರ್ವಿಡಿದು
ಕರೆಯುತಿರ್ಪರ್ ಕೆಲಬರಿಂತು ಪರಿತೋಷದಿಂ
ಪರಿಸೆಯಲ್ಲಿರ್ದ ಮುಂದಣ್ಗೊಲ್ದು ತೆರಳಿತ್ತು ಕಡುಸೊಗಸು ಪೊಣ್ಮುತಿರಲು

[1] ಷೆ (ಗ)

ಭರದೊಳೊಗ್ಗಾಗಿ ಸಾಲ್ಗೊಂಡು ನಡೆತರುತಿ[1]ರ್ದು
ದ[1]ರರೆ ಅದಟತರೊಳ್ ಕೆಲಬರುನ್ನತಧ್ವನಿಯಿಂದೆ
ಗುರುಮಲ್ಲಿಕಾರ್ಜುನಾ ಎನುತುಘೇ ಎನುತೆ ಜಯಜಯ ಎನುತೆ ಬರುತಿರ್ದರು ೫೩

ಮುಸಕದಿಂ ತಂತಮ್ಮ ದೇಶಭಾಷಾಗೀತ
ವಿಸರಂಗಳಂ ಪಾಡುತೆಳ್ತರ್ಪವರ್ ಕೆಲಬ
ರೊಸೆದು ಪೆಣ್ಗಡಣವೊಗ್ಗಾಗಿಬರುತೆಲೆ ಕಾಂತೆ ನಿನ್ನಧರರಸವಾಜಿತು
ನಿಸದಮಿಾ ನಿನ್ನ ಮೊಗವೆಯ್ದೆ ಬೆಮರಿಡುತುಮಿದೆ
ಬಸವಳಿದು ನಿನ್ನ ಕಾಲ್ ಪಿಂದಣ್ಗೆ ಪೋಗುತಿದೆ
ದೆಸೆಗೆಡಲ್ವೇಡಮಿಾ ತೋರ್ಪ ಮರ[2]ಮೇ[2] ಪುರಮೆನುತ್ತೆ ಬರುತಿರ್ದುದೊಸೆದು ೫೪

ಎಲೆ ಚಕೋರಾಕ್ಷಿ ಸಮ್ಮೋದಮಂ ಕುಡುತಿರ್ಪ
ಲಲಿತ [3]ಪು[3]ರಮಂ ನೋಡು ನೀನೆನುತೆ ಮತ್ತೊರ್ವ
ಳೆಲೆ ಸಖಿಯೆ ಬೆಟ್ಟದಿಟ್ಟೆಡೆವಟ್ಟೆಯೊಳ್ ಸೇದೆವಟ್ಟೆಯಾ ನೀನೆನುತ್ತೆ
ಎಲೆ ಸತಿಯೆ ಮಲ್ಲಿಕಾರ್ಜುನನ ಪುರಮಂ ನೋಡ
ಲಲೆದು ಪೋಪುದು ನಿನ್ನ ಮನದದವಳಲ್ ನಿಸದ
ಮೆಲೆ ಬಾಲೆಯೇ ನಿನಗೆ ನೀರಡಿಕೆ ತೋಱಿದೊಡೆ ತಿಳಿನೀರನೀಂಟೆನುತ್ತೆ ೫೫

ಎಲೆ ಯುವತಿಯುಕ್ತಂ ಸಯಾಂಜಲಿಯೆನಿಪ್ಪ ಸ
ಲ್ಲಲಿತಪುರಮಂ ನೋಡ ನಾಡನಾಥನನೆಯ್ದೆ
ಲಲಿತಾದ್ರಿಜಾನಾಥನಂ ಪ್ರಮಥನಾಥನಂ ಮಲ್ಲಿನಾಥನನಭವನಂ
ನಲಿದು ಹೃದಯದೊಳೆ ಜಾನಿಸು ನಿನ್ನ ಸೇದೆಯದು
ನಿಲಲರಿಯದೆನುತಿಂತು ತಮ್ಮೊಳೋರೋರ್ವರ
ತ್ಯಲಘುಸರಸಾಲಾಪಮಂ ನುಡಿಯುತೆಯ್ತಂದರಲ್ಲಿ ಕೆಲಬರ್ ಪೆಂಡಿರು ೫೬

ಉರುತರ ಶ್ರೀಶೈಲಚೂಳಿಕಾರತ್ನಂಗೆ
ಪಿರಿಯಭವಗಜಮೃಗೇಂದ್ರಂಗೆ ದುಷ್ಕರ್ಮಮಂ
ಬುರುನಗಾಶನಿಗೆ ಶಶಿರವಿವಹ್ನಿನಯನಂಗೆ ನೀಲಕಂಠಂಗೆ ಮತ್ತಂ
ಕರುಣಾಂಬುನಿಧಿಗೆ ಸಾಂಬಂಗೆ ಪರಮಾತ್ಮಂಗೆ
ನಿರುತಮಾದ್ಯಂತ್ಯಶೂನ್ಯಂಗೆ ಭೂತೇಶಂಗೆ
ವರ ಮಲ್ಲಿಕಾರ್ಜುನಂಗೊಲ್ದು ವಂದಿಸುತೆ ಮತ್ತಂ ಚಾರುಭಕ್ತಿಯಿಂದಂ ೫೭

---

[1] ರ್ದಾರ (ಕಗ) [2] ಮಿಾ (ಗ) [3] ಮ (ಕ)

ಪರಮ ವಿಕಸನ್ಮಲ್ಲಿಕಾಮನೋಹರದಾಮ
ಪರಿಭೂಷಿತಾಮಲಜಟಾಜೂಟ ಕರ್ಪೂರ
ಸರಸಚಂದನಕಂದಮಂದಾರ ಮಲ್ಲಿಕಾರ್ಜುನಸದ್ರುಕ್ಷಾಂಗ ಗಿರಿಶ
ವರ ಮಲ್ಲಿಕಾರ್ಜುನಶ್ಲೋಕಸಂತಾನ ಸುರು
ಚಿರಭೂಷಿತನೆ ದಿಗಂಬರನೆ ನೀನೆಮ್ಮುಮಂ
ಪರಿರಕ್ಷಿಸೆನುತಿಂತು ತುತಿಸುತ್ತೆ ಸಂತೋಷದೆಸಕದಿಂ ಮನಮಲರುತೆ ೫೮

ಮಗಧ ಕಾಶ್ಮೀರ ಮಾಳವ ಗೌಳ ಸಿಂಧುಗಳ
ನೆಗಳ್ದ ಘೂರ್ಜರ ಪಾಂಡ್ಯಕಾಂಭೋಜದೇಶಂಗ
ಳೊಗೆದಿವುಂ ಮೊದಲಾದ ಸೌರಾಷ್ಟ್ರ ಲಾಟ ಬರ್ಬರ ದೇಶನಿಕರಂಗಳಿಂ
ಸೊಗಸಿನಿಂದಂ ಬರ್ಪ ಪರಿ[1]ಸೆ[1]ಯ ಜನಂಗಳುಱ
ಬಗೆದು ತಂತಮ್ಮ ಭಾಷೆಗಳಿಂದಮೋರೋರ್ವ
ರಗಲದೊಳ್ನುಡಿಗಳಂ ನುಡಿಯುತ್ತು ಸಿರಿಗಿರಿಗೆ ಪೊಡಮಡುತ್ತುಂ ಮುದದೊಳು ೫೯

ಸರಳಪ್ರಬಂಧತಾಳಾನುಗತಿ ಮೊದಲಾದ
ಸುರುಚಿರ ಶ್ರುತಿಸಮೂಹಂಗಳಿಂ ಮನಮೊಸೆದು
ಭರದೆ ಪರದೇಶಸ್ವದೇಶೀಯ ಮಾರ್ಗಂಗಳಿಂ ವಿಹಿತಮಾಗಿ ತೋರ್ಪ
ವರ ಗೀತತತಿಗ[2]ಳಂ[2] ಪಾಡುತಾಡುತ್ತೆ ನಿ
ರ್ಭರದಿಂದೆ ನುತಿಸುತುಂ ಶ್ರೀಗಿರಿಗೆ ವಂದಿಸುತೆ
ಪರಮಾನುರಾಗದಿಂದಿಂತು ನಾನಾತೆಱದ ಪರಿ[3]ಸೆ[3] ಬರುತಿರ್ದುದೊಸೆದು ೬೦

ಸದಮಲಪ್ರಚುರವಿಶ್ರುತ ಪರಮಭಕ್ತಗಣ
ಪದಸರೋರುಹಸಾಂದ್ರ ಮಕರಂದಪಾನ ಸ
ಮ್ಮುದಿತ ಚಂಚಚ್ಚಂಚರೀಕನನವರತ ಪಂಚಾಕ್ಷರೀಪ್ರಸಿತಹೃದಯಂ
ವಿದಿತ ಮಂಜುಲನೀಲಕಂಠಾಹ್ವಯಂ ಮನೋ
ಮುದದೆ ಪೇಳ್ದತರಾರಾಧ್ಯಚಾರಿತ್ರದೊಳ
ಗಿದು ಮಾಳವಾದಿದೇಶಂಗಳಿಂ ಬರ್ಪ ಪರಿಷಜ್ಜನಾಲಾಪಕಥನಂ ೬೧

---

1 ಷೆ (ಗ)  2 ಳಿಂ (ಗ)  3 ಷೆ (ಗ)

# ಏಳನೆಯ ಸಂಧಿ

## ಪರುಷೆಯ ಜನಂ ಮಲ್ಲಿಕಾರ್ಜುನನ ಕಂಡದು

ಸೂಚನೆ : ಪ[1]ರಿಸಜ್ಜ[1]ನಂ ಮಲ್ಲಿಕಾರ್ಜುನನ ಕಂಡು ವಿ
ಸ್ಫುರದಮಲಗಂಗೆಯೊಳ್ ಮಜ್ಜನಂಗೆಯ್ದು ಸುರು
ಚಿರಲಿಂಗವಿಸರಂಗಳಂ ನೋಡಿದಾ ಕಥನಮಂ ಕೇಳ ಸೂರಸಚಿವ

ಉಡುನಿಕರಮೆಯ್ದೆ ಸಂತಸದೆಸಕದಿಂದೆ ತ
ಮ್ಮೊಡೆಯನಂ ಶಿವಶಿರೋಗತಚಂದ್ರನಂ ಮುದದೊ
ಳೊಡಗೂಡಿ ಸೇವಿಸುತ್ತಿರ್ದುವೆಂಬಂತೆ ಸುರನದಿಯ ನಿಡುತೆರೆಗೊನೆಗಳಿಂ
[2]ಕ[2]ಡುನೆಗೆದ ಜಲಕಣಂಗಳ್ ಸಸಿ ಸಮೀಪದೊಳ್
ಬಿಡದೆಸೆವ ಜಡೆದುಱುಗಳೊಳ್ ತಿಂಬಿ ತೋರ್ಪ ಜಡೆ
ಮುಡಿಯಿಂದೆ ರಾಜಿಸುವ ಗುರುನೀಲಕಂಠನೆಮ್ಮಂ ಪೊರೆಗೆ ಮನದಣಿಗಿನಿಂ ೧

ಬರುತಿರ್ಪ ಪರ[3]ಸೆ[3]ಗಿದಿರೊಳ್ ಕಾಣಿಸಿತ್ತು ಶಂ
ಕರನ ಲೋಕೈಕನಾಥನ ಮಲ್ಲಿಕಾರ್ಜುನೇ
ಶ್ವರನ ನಿಜಪುರವರಂ ಮತ್ತದಱ ಮಹಿಮೆಯಂ ಪೊಗಳ್ವನಾವಂ ಧರೆಯೊಳು
ಹ[4]ರಿಸ[4]ದಿಂದಾ ಗಿರಿಯ ನೋಡಲೊಡನಾಗಳುರು
ತರ ಮುಕ್ತಿಯಪ್ಪುದೆನಲಾ ಪುರದ ವೈಭವಮ
ನರರೆ ವರ್ಣಿಪನೆಲ್ಲಿದಂ ಬಳಿಕಮಾ ಗಿರಿ[5]ಯೊಳಿ[5]ರ್ಪ ಗೋಷ್ಠಂಗಳೆಲ್ಲಂ ೨

ಸುರಧೇನುಗಳ ವಿನುಪ ಪಟ್ಟಿಗಳೆನಲ್ಕೆ ತ
ತ್ಪುರದ ಗೋನಿಚಯಮಂ ಪೇಳ್ವುದೇಂ ಮತ್ತಮಾ
ಗಿರಿಯೊಳೆಸೆದಿರ್ಪ ಭೂಧರನಿಕರಮೆಲ್ಲವುಂ ಲಿಂಗರೂಪಂಗಳೆನಲು
ಪಿರಿದುಮಾ ಪುರದ ಘನಲಿಂಗಮಹಿಮೆಯನುಸುರ್ವೊ
ಡುರಗೇಶ್ವರಂಗಾಗದೀ ಗಿರಿಯ ಲುಬ್ಧಕರ್
ವರ ಮುಕ್ತಿಪುರಿಗಧಿಪರೆನೆ ತತ್ಪುರದ ಭಕ್ತಿಮಹಿಮೆಯಂ ಪೇಳ್ವದರಿದು ೩

---

[1] ರುಸೆಯಜ (ಕ) [2] ನ (ಕ) [3] ಷೆ (ಕ) [4] ರುಷ (ಗ) [5] ಯಲಿ (ಕ)

ಮಿಸುಗುವೀ ಗಿರಿಯೊಳೊಗೆದಿರ್ಪ ಚಂಡಾಲರುಂ
ನಿಸದಮುದಿತಿಸುತರ್ಕಳೆನೆ ತತ್ಪುರೀದ್ವಿಜರ
ನೊಸೆದು ವರ್ಣಿಪನೆಲ್ಲಿದಂ ಮತ್ತಮಿಾ ಗಿರಿಯ ಜೀ ಸಂದೋಹಮೆಲ್ಲಂ
ಎಸೆವ ದೇವತೆಗಳೆನಲಾ ಪುರದೊಳ್[1]ರುತಿರ್ಪ
ಲಸಿ[1]ತ ಜೀವಕದಂಬಸುಂ ನುತಿಪನೆಲ್ಲಿದನೊ
ಅಸವಸದಿನಂತಾದೊಡೆನ್ನ ಮತಿ[2]ಗಜಾಂದ[2]ವೋಲಾಂ ಪೊಗಳ್ವೆನೆಂತೆಂಬೊಡೆ ೪

ಪಿರಿದು ಭಸ್ಮೀಕೃತಕ್ರೂರಭವನಮಾಸ[3]ವರ[3]
ಮುರುದುರಿತತಿಮಿರದಿವಸೇಶ್ವರಂ ಮತ್ತಮುದು
ಸುರುಚಿರ ಪ್ರಮಥರಾಡಂಬೋಲಂ ಶಿವಲಿಂಗದಿಕ್ಕೆವನೆ ಸೌಖ್ಯೋತ್ಕರಂ
ಸರಳನವಕೈಲಾಸವಾ ಪುರಂ ಭಾವಿಸಲ್
ಪರಶಿವನ ಮೇಲೆಸೆದು ತೋರ್ಪ ಶಿರಮಾವಗಂ
ವರ ಮಲ್ಲಿಕಾರ್ಜುನಸ್ವಾಮಿಯ ಶಿರೋರತ್ನಮೆನಿಸಿ ತೋರ್ಕುಂ ಸಂತತಂ ೫

ನಿರುತಮಾ ಪುರದ ಲಿಂಗೌಘಂಗಳುಂ ನಾಡೆ
ಸಿರಿಗಂಧಮಗೆಯ ನೇತ್ರಾದಿಂದ್ರಿಯಾನೀಕ
ವರರೆ ಆ ಪುರದ ಶಿಖರಂ ಶಂಭುವಿನ ಕಪರ್ದಂ ಭಾವಿಸಲ್ಕೆ ನಿಸದಂ
ವರ ಮಲ್ಲಿಕಾಕುಂಡ ಯಾಮ್ಯಕುಂಡಂಗಳೊಳ
ಗಿರದೆಸೆವ ಜಲಸಮೂಹಂ ಶಿವನ ಶಿರದೊಳಗೆ
ಕರಮಿರ್ಪ ಮಲ್ಲಿಕಾ[4]ಸೃಜ್ಞುವಹ[4]ಮೆನಿಸಿ ತೋರ್ಕುಂ ಮತ್ತಮಾ ನಗರದ ೬

ಉರುತರ ಪ್ರಾಕಾರಮಿಾಶಮಧ್ಯಸ್ತ ಸುರು
ಚಿರಮೇಖಲೆಯ ಪಾಂಗಿನಂತೆ ತೋರ್ಕುಂ ಮನೋ
ಹರ ಚತುರ್ದ್ವಾರದೊಳಗಿರ್ಪ ಹರ್ಮ್ಯಂಗಳಾ ಪರಶಿವನ ಕೊರಲೊಳಿರ್ಪ
ವರ ಹಾರಮಧ್ಯನಾಯಕಮಣಿಗಳೆನಿಸುಗುಂ
ಪಿರಿದೊಪ್ಪುವಾ ಪುರದೊಳಿರ್ಪ ನದಿಗಳ್ ಶಂಭು
ಗಿರದೆಸೆವ ದಿವ್ಯಾಂಬರಂಗಳೆನಿಸುಗುಮೆಯ್ದೆ ತತ್ಪುರೋದ್ಯಾನನಿಚಯಂ ೭

ಎನಸುಮಿಾಶಪದಾರ್ಪಿತಪ್ರಸೂನಂಗಳುಜಿತ
ಮಿನುಗುತ್ತಲಿರ್ಪ ಭಕ್ತರ್ ಮಹೇಶ್ವರನ ಸೊಂ
ಪಿನ ಮಸ್ತಕಾದ್ಯವಯವಂಗಳೆನಿಕುಂ ತತ್ಪುರದ ಜಂಗಮಾವಳಿಗಳು

1 ರ್ಪಸಿಲ್ಲಲಿ (ಗಟ) 2 ಗೆಯ್ದುದ (ಗ) 3 ವಂ (ಗ) 4 ಗ್ರಬ್ರವ (ಕ) ಪ್ರಜೀವಹ (ಗ)

ಕನದೀಶನಸರಾವತಾರರೆನಿಸುವರಿಂತು
ಟನುನಯಂ ಶೋಭಿಸುವ ತತ್ಪುರದ ವೈಭವಕೆ
ನನಸು ಬೇಱೊಂದು ಪ[1]ಡಿಯಿಲ್ಲಬ್ಧಿಗಾ ಶರಧಿ ಪಡಿಯೆನಿಸಿ ತೋಱುವಂತೆ ೮

ಗಗನಕ್ಕೆ ಗಗನರೂಪವೆ ಸದೃಶವಾದಂತೆ
ಸೊಗಸುವೀ ಪುರಿಗೆ ಮತ್ತೀ ಪುರವೆ ತೋಡಲ್ಲ
ದೊಗೆದು ತೋ[2]ಱುವವೊತ್ತಿನೊಂ[2]ದು ಪಡಿಯಿಲ್ಲ ಭೂವಿಯೊಳಣಿಯರಂ ಭಾವಿಸೆ
ನೆಗಳ್ದೀ ಪುರಕ್ಕೊಡೆಯನಾದ ಶಿವನೊರ್ವನೇ
ತಗುಳ್ದೀ ಪುರಕ್ಕೆ ಪಾಸಟಿಯೆ[3]ನುತ್ತಾ[3] ಪುರಿಯ
ಬಗೆಯೆ ನೋಡುತ್ತಮಾ ಪರಿ[4]ಸೆ[4] ಜಯಜಯ ಎನುತೆ ಪುಗುತಂದುದಲ್ಲಿಯಿಂದಂ ೯

ಪಿರಿದುಮಾ ಪುರಜನಂ ಪರಿಷಜ್ಜನಂ ಕೂಡಿ
ಬೆರದು ಮತ್ತನ್ಯೋನ್ಯಮಾಗಿ ಜನಸಮ್ಮರ್ದ
ದ್ದಿರವಿನಿಂದನೋನ್ಯಮಾಗಿ ಬೆರಸಿದ ಪತಾಕಾತಪತ್ರಾಳಿಯಿಂದಂ
ಕರವೆಸೆವ ಚೇಲಂಗಳಿಂ ಪುದುಗಿತೋರ್ಪ ಚ
ಪ್ಪರಗಡಣದಿಂ ಪುರದ ಬೀದಿಬೀದಿಯೊಳೆಯ್ದೆ
ಪರಿ[4]ಸೆ[4]ಯೊಡಗಲಸಿ ಕಣ್ಗೆಡ್ಡಮಾಗಿರ್ದುದತಿಜಯಜಯಧ್ವಾನಂಗಳಿಂ ೧೦

ಸಡಗರದಿನೋರೋರ್ವರೊಡನೆ ಸಂತೋಷದಿಂ
ದೆಡೆವಿಡದೆ ನುಡಿವ ನಾದಂಗಳಿಂದಂ ಮಗುಳ್ದು
ಕಡುವೆಱೆವ ಮಾರ್ದಂಗಿಕರ್ ತಾಳಧರರ್[5]ಗಿ[5] ಯಾದವರ್ ತಂತಮ್ಮೊಳು
ಬಿಡದೆ ವಿದ್ಯಾಮತ್ಸರದೆ ಪೋರುತಿರ್ಪ ಸೊಂ
ಪಡರ್ದ ನಾದಂಗಳಿಂ ಕವಿಗಮಕಿ ಮುಖ್ಯರು
ಗ್ಗಡದೆ ತಂತಮ್ಮ ಬಿಜ್ಜೆಯರುತ್ಸವದಿನುಲಿವ ನಾದಂಗಳಿಂದೆ ಸತತಂ ೧೧

ಕಡುಸೊಗಯಿಸುವ ನರಾರ್ಣವದಂತೆ ಪರಿ[6]ಸೆ[6] ಬಂ
ದೊಡನೆ ತತ್ಪುರದ ಬೀದಿಯನೆಯ್ದಿ ಬರ್ಪಾಗ
ಳಡಿಕಿಱಿದ ಪಣ್ಯವೀಥಿಗಳೆರಳ್ಕೆಲದಲ್ಲಿ ರಂಜಿಸಿದುವದಱೊಳನಿಶಂ
ಎಡೆ[7]ವಱೆ[7]ಯದಿರ್ಪ ಗಂಗಾಸಲಿಲಮಂ ನಾಡೆ
ಬಿಡದೆಸೆವ ಮೃದುರತ್ನನಿಕರಂಗಳಂ ಬೇಡಿ
ದೊಡವೆಯುಂ ಕುಡುತಿರ್ಪ ಸುರಭೂರುಹಂಗಳಂ ಕಾಮಧೇನ್ವಾನೀಕಮಂ ೧೨

---

[1] ರ (ಕ) [2] ರಿಸುವೊಡಿನ್ನೊಂ (ಕ) [3] ನಿಸುತಾ (ಕ) [4] ಷೆ (ಗ) [5] ದ (ಟ)
[6] ಷೆ (ಗ) [7] ವಿಡಿ (ಕ)

ಪಿರಿದುಂ ಮೃಗಾಂಕತಿಲಕಂಗಳಂ ಶೋಭಿಸುವ
ವರ ತಾರಹಾರಂಗಳಂ ರಾಜಿಸುತ್ತಿರ್ಪ
ಸರಸಲಾವಣ್ಯಸಂತತಿಗಳಂ ಕರಮೆ ಅಜರಾಮರಣತೆಯನೊಪ್ಪುವ
ಪುರುಹೂತವಾರಣಮನೆಸೆವ ರಸಕೂಪಭಾ
ಸುರ ಕಾಮರೂಪ ಹರ್ಯಕ್ಷಶಿಶುಗಳನೆಯ್ದೆ
ಸುರುಚಿರ ತಟಲ್ಲತೆಗಳಂ ರವಿಸ್ಯಂದನತುರಂಗಮಾನೀಕಂಗಳಂ ೧೩

ಮಿಸುಗುವಭ್ರಾರೋಹಣಂಗೆಯ್ವುದರ್ಕೆ ರಾ
ಜಿಸುವ ನಿಶ್ರೇಣಿಗಳ ದೀರ್ಘಾಯುಗಳನೀವ
ಪೊಸಮದುರ್ಗಗಳ ಕೌಮುದೀಗಂಧನಿಕರಮಂ ನಡೆವ ಧರಣೀಜಂಗಳಂ
ಎಸೆವ ಗಂಧರ್ವಗಾನಂಗಳಂ ಕುಡುವ ಸ
ಲ್ಲಸಿತದಿವ್ಯಾಂಗಂಗಳಂ ಮಾಳ್ಪ ನಾಡೆ ಸೊಂ
ಪೆಸೆವ ದಿವ್ಯೌಷಧಾದಿಗಳನೊಲವಿಂ ಬಿಲ್ವಪುರದರಂ ನಡೆನೋಡುತೆ ೧೪

ಪೊರಿಸೆ[1] ಬಂದುದು ಪತಾಕಚ್ಛತ್ರವಿತತಿಗಳ್
ಸುರವರ್ತ್ಮವಂ ಕಾಣಿಲೀಯದೆಡೆವಿಡದೆ ಭಾ
ಸುರಮಾಗಿ ಗಗನಮಂ ತಿಂಬಿ ನಾಲ್ಕುಂಬಾಗಿಲೊಳಪೊಕ್ಕು ಹೊರಿಸದಿಂದಂ
ಪಿರಿಯ ಬನಗಡಣದೊಳ್ ಪ್ರಾಕಾರದೆಡೆಗಳೊಳ್
ಕರವೆಸೆವ ಗೋಪುರದ್ವಾರಮಾರ್ಗಂಗಳೊಳ್
ವರ ಮಲ್ಲಿಕಾರ್ಜುನನ ಗೃಹದರಿಗಿನೊಳ್ ನಿಕೇತಂಗಳೊಳ್ ದಾರಿಗಳೊಳು ೧೫

ಗುಡಿಗಳಂ ಪೊಯ್ದಲ್ಲಿಗಲ್ಲಿಗೊಪ್ಪುತ್ತಿರ್ದು
ದೆಡೆವಿಡದೆ ಭೂಮಿಜಂಗಳ ಗುಲ್ಮವಿತತಿಗಳ
ನಡುವೆ ಕುಂಡಂಗಳೊತ್ತಿನೊಳೆಯ್ದೆ ಮತ್ತಮವಕಾಶವೆಲ್ಲಿರ್ದುದಲ್ಲಿ
ಸಡಗರದೆ ಪರಿಸೆ ಸಾಂದ್ರೀಭೂತಮಾಗಿರ್ದು
ದೊಡನೆ ಬಳಿಕಿತ್ತಲಾ ಪಂಡಿತಾರಾಧ್ಯವಿಭು
ವಡಿದಾವರೆಗೆ ಪಱಿವೆವಱಿಯೆನಿಪ ದೋನವಾರ್ಯಂ ಮನಃಪ್ರೀತಿಯಿಂದಂ ೧೬

ಗಿರಿಸುತಾನಯನನೀಲೇಂದೀವರಪ್ರಥಿತ
ಸುರುಚಿರಾಮೃತಕಿರಣನೆನಿಪ ಕರುಣಾಪೂರ
ವರ ದೃಗಂಚಲನೆನಿಪ ಮಲ್ಲಿಕಾರ್ಜುನಲಿಂಗನಂ ಕಂಡು ಭಕ್ತಿಯಿಂದಂ

---

1 ರುಷೆ (ಗ) 2 ಯ (ಕಗ) 3 ರುಷ (ಗ)

ಕರಮೆ ಪೊಡವಟ್ಟು ನುತಿಸುತೆ ಬಳಿಕ್ಕೊಲ್ದು ಭಾ
ಸುರ [1]ನಿತ್ಯಲಿಂಗಾ[1]ರ್ಚನಂಗೆಯ್ದು ಮನದಣಿಗು
ವೆರಸಿರಲ್ ಮತ್ತಿತ್ತ ಪರಿಷಜ್ಜನಂ ಲಿಂಗದರ್ಶನಕ್ಕೆಯ್ತಂದುದು ೧೭

ಮಿಸುಪ ಸದ್ಭಕ್ತಿಯಿಂ ಪತ್ರಮಾತ್ರಂಗಳಿಂ
ಡೊಸೆದು ಶಿವನಂ ಪೂಜೆಗೆಯ್ಯಲಿಷ್ಟಾರ್ಥಮಂ
ನಿಸದಮೆಯ್ದುವರೊಲ್ದು ಫಲವೊಂದನೀಶ್ವರಂಗರ್ಪಿಸಿದ ಫಲದೆ ಬಳಿಕಂ
ಅಸವಸಂ ಮನದೆ ಬಯಸಿದ ಬ[2]ನ[2]ಕೆ ಗಡಣ[3]ನಂ[3]
ಮುಸಕದಿಂ ಕೋಟಿಮಡಿಯಾಗಿ ಪಡೆವರ್ ಮಗುಳ್ದು
ಪೊಸರನ್ನ ಮೊದಲಾದ ಮಣಿಗಳಿಂ ಪೂಜಿಸಿದ ಫಲಮನಾ ಶಿವನಱಿವನು ೧೮

ಎನುತೆ ನವದಲಕುಸುಮಫಲಸಮೂಹಂಗಳಂ
ಮಿನುಪ ತಮ್ಮಯ ಕೈಗಳಿಂ ಪಿಡಿದುಕೊಂಡು ತೊ
ಟ್ಟನೆ ಶಿವನ ಭವನಮಂ ಸಾರ್ತಂದು ಪರಿಸೆಯಂಬುಧಿಘೋಷಿಸುವ ಪಾಂಗಿನಿಂ
ಘನರವದೆ ಜಯಜಯ ಎನುತ್ತೆ ಗೀತಂಗಳಂ
ಮನವೊಸೆದು ಪಾಡುತಾಡುತ್ತೆ ಸಂಭ್ರಮಮಮಣ್ಕೆ
ವಿನಯದಿಂ ಮಲ್ಲಿಕಾರ್ಜುನಲಿಂಗ[4]ಮಂ[4] ಕಾಣುತುರ್ಬುತ್ತುಮತಿಹರುಷದಿಂ ೧೯

ನಲಿದು ವಂದಿಸುತೆ ತುತಿಸುತೆ ಕಾಣ್ಕೆಗಳನಿತ್ತು
ನಲವೇಱಿ ತತ್ಪುರಜನಂಗೂಡಿ ಪೊಱಗಣ್ಗೆ
ಯ್ದಲರ್ದೆಯ್ದಿ ಬಂದಿತಿದಿರಂಬರ್ಪ ಜನತತಿಯ ನೂಂಕುತೆಂತೆನೆ ಶರಧಿಯ
ವಿಲಸದೂರ್ಮಿಗಳನಿದಿ[5]ರೀಸಿ[5] ಪೇಪಂತೆ ಮ
ತ್ತಲಸದೀ ಮಾಳ್ಕೆಯಿಂ ಪೋಗುತೆಳ್ತರುತಿರ್ಪ
ಲಲಿತ ಪರಿಷಜ್ಜನಾವಳಿ ಕೆಲವು ಸಮ್ಮರ್ದದೊಳಗಿರ್ದವರ್ ಕೆಲವರು ೨೦

ಕೆಲಬರತಿಸತ್ವದಿಂ ನೂಂಕಿ ಪೋಪರ್ ಮತ್ತೆ
ಕೆಲಬರಾ ಸಮ್ಮರ್ದಮಂ ನೋಡಿ ಭೀತಿಯಿಂ
ಕೆಲಸಾರ್ದು ನಿಂದಿರ್ಪವರ್ ಕೆಲರ್ ಜನಸಮೂಹಂಗಳಂ ಕಂಡಳ್ಕದೆ
ನಲವಿನಿಂ ಕೈಗಳಿಂದೊತ್ತರಿಸಿ ಪೆಱಗಣ್ಗೆ
ಸಲೆ ಸೆಳೆದು ಬಿಸುಟುಪೋಪರ್ ಮತ್ತಮಿಂತು ಪಲ
ಕೆಲಬರೀಶನ ಕಾಣ್ಬ ತವಕದಿಂ ಪೋಗುತಿರ್ಪರ್ ಶಿವನ ಸದನಕೊಲ್ದು ೨೧

---

[1] ಲಿಂಗನಿತ್ಯಾ (ಗ) [2] ಯ (ಗ) [3] ದಿಂ (ಗ) [4] ನಂ (ಟ) [5] ರಿಸುತೆ (ಕ)

ಕೆಲಬರಾ ಸಮ್ಮರ್ದಕಳ್ಕಿ ಪೊಱಗಿರ್ದು ಸ
ಲ್ಲಲಿತ ಪುಷ್ಪಾನೀಕಮಂ ಶಿವನಂಗೆಂದು ಮನ
ದೊಲವಿನಿಂ ಭಾವಿಸುತೆ ಗುಡಿಯ ಮೇಲಿಡುವವರ್ ಮತ್ತೆ ಮನದೆಳ್ಚಱಿಂದಂ
ಕೆಲಬರೀಶನ ಕಾಣ್ಬ ಕಾಂಕ್ಷೆಯೊಳ್ ದ್ವಾರದೊಳ
ಗಲಸದಿರ್ಪರ್ ಪರಿಸೆ ಪಿಂಗುವನ್ನೆವರನುಂ
ತಲರ್ದು ಕೆಲಬರ್ ಸಂದಣಿಗೆ ಸೆಡೆದು ಮಂಟಪದೊಳಿರ್ಪರತಿಸಂತೋಷದಿಂ ೨೨

ಮರಳಿ ಮಲ್ಲಯ್ಯ ಮಲ್ಲಯ್ಯ ಎಂದತಿಭಕ್ತಿ
ಭರದಿಂದೆ ತಮ್ಮ ಮಸ್ತಕಮನಾ ಶಿವಲಿಂಗ
ದುರುಶಿರದೊಳಗೆ ತಾಡನಂಗೆಯ್ದುಕೊಂಬವರ್ ಪಲಕೆಲಬರಲ್ಲಿ ಮತ್ತೆ
ಉರುತರಸ್ಪರ್ಶವೇದಿಸ್ವರೂಪನುಮಪ್ಪ
ವರ ಲಿಂಗಮಂ ಸೋಂಕಿ ಕನಕತ್ವಮಂ ಪಡೆವೆ
ವಿರದೆಂಬ ಬುದ್ಧಿಯಿಂ ತಲ್ಲಿಂಗಮಂ ಸೋಂಕುತಿರ್ಪವರ್ ಪಲಕೆಲಬರು ೨೩

ಎಲೆ ಮಲ್ಲಿಕಾರ್ಜುನಾ ಪಿರಿದೆಮ್ಮ ಸದ್ವ್ರತಂ
ಸುಲಭದಿಂ ಪೂರ್ಣಮಾದತ್ತಿಂ[1]ದಿಗೆನುತೆ[1] ಸ
ಲ್ಲಲಿತಮುದದಿಂ ನುಡಿವವರ್ ಕೆಲಬರೆಲೆ ದೇವ ಕನಕಪುಷ್ಪದ ನೇಮವು
ಸಲೆ ಪೂರ್ತಿಯಾದತ್ತು ನಿನಗಿಂದೆನುತ್ತೆ ಕೂ
ಡೊಲವಿನಿಂ ನುಡಿವವರ್ ಕೆಲಬರೆಲೆ ದೇವ ನಿ
ರ್ಮಲಮಾ[2]ದ[2] ಸಂಕಲ್ಪನಿಚಯಮೆಲ್ಲಂ ಸಂದುದೆಂದು ನುಡಿವರ್ ಕೆಲಬರು ೨೪

ಪಿರಿದು ದುಷ್ಕರ್ಮದೃಷ್ಟಿಗಳಿಂದೆ ಸಂತತಂ
ಗಿರಿಶನಂ ದುಷ್ಕರ್ಮದೂರನಂ ನೋಳ್ಪುದದು
ಕರಮುಚಿತಮಲ್ತೆಂದು ಮುನ್ನಿರ್ದ ಕಣ್ಗಳಂ ಕಿಳ್ತಿಕ್ಕಿ ಪೊಸಕಣ್ಗಳಂ
ಭರದಿಂದೆ ಪಡೆದೀಶನಂ ನೋಳ್ಪವರ್ ಕೆಲರ್
ಮುರಹರಂ ಮುನ್ನೆ ತನ್ನಯ ಕಣ್ಣ ಕಿಳ್ತಿಕ್ಕಿ
ವರ ನೇತ್ರಮಂ ಚಕ್ರಮಂ ಪಡೆದನೆರಡುಮಂ ಶಿವನಿಂದಮವನ ತೆಱದಿಂ ೨೫

ಎರಡುನೇತ್ರಂಗಳಂ ಕಿಳ್ತು ಪಶುಪತಿಗಿತ್ತು
ನಿರುತದಿಂ ಭುಕ್ತಿಮುಕ್ತಿಗಳನೆರಡಂ ಮತ್ತೆ
ಕರಮೆಸೆವ ಕಣ್ಗಳೆರಡಂ ಕೂಡೆ ಪಡೆವೆವೆಂತೀ ನಾಲ್ಕು ವಸ್ತುಗಳನು

[1] ದೆನುತ್ತೆ (ಟ) [2] ನ (ಕ)

ನಿರುತಮೆಂದಾತ್ಮಲೋಚನಯುಗಳಮಂ ಕಳೆದು
ಪರಮೇಶ್ವರಂಗಿತ್ತು ಮರಳಿ ಪಡೆವರ್ ಕೆಲರ್
ಭರದಿನೇನುಮನಾಶೆಗೆಯ್ಯದೇ ಕಣ್ಗಳಂ ಕಿಳ್ತಿಕ್ಕುವರ್ ಕೆಲಬರು ೨೬

ಸುರಪಪರಮೇಷ್ಠಿ ರಾವಣಶೇಷಪತಿಗಳ್ಗೆ
ಪಿರಿದೊಡೆಯನಾದೀಶ್ವರಂಗೆ ಮುಕ್ಕಣ್ಣೆಂದು
ಭರದಿಂದೆ ಜಱಿದು ದೇಹಂಗಳೆಲ್ಲಂ ನೇತ್ರತತಿಯಾಗವೇಳ್ಕೆನುತ್ತೆ
ಹ[1]ರಿಸ[1]ದಿಂ ಬಯಸಿ ನೇತ್ರಂಗಳಂ ಕಿಳ್ತು ಶಂ
ಕರನ ಮೇಲಿಡುವ ನಿರ್ಮಲರಾದ ವೀರಗಣ
ಮರರೆಬರಿಂತು ನಾನಾತೆಱದೆ ರಾಜಿಸುವ ಪರಮಭಕ್ತರ್ ಕೆಲಬರು ೨೭

ವಿನಯದಿಂದನ್ಯನುತಿಗೆಯ್ದ ಜಿಹ್ವೆಗಳಿಂದೆ
ಮನಸಿಜಾಂತಕನ ನುತಿಯಿಪುದಯುಕ್ತಂ ಕರಂ
ಎನುತೆ ರಸನೆಗಳ ಮೂಲಂಬರಂ ಕೊಯ್ದಿಕ್ಕಿ ಪೊಸನಾಲಗೆಗಳ ಪಡೆದು
ಮಿನುಪ ಶಂಕರನನಮೃ[2]ತಾಂಶ[2]ಶೇಖರನ ತೊ
ಟ್ಟನೆ ಪರಮಭಕ್ತಿಯಿಂ ಸ್ತುತಿಯಿಸುತ್ತಿರ್ಪ ನೂ
ತನ ವಿಮಲವೀರಭಕ್ತರ್ ಕೆಲಬರೆಯ್ದೆ ಸೊಗಯಿಸಿದರೀಶಾಗ್ರದಲ್ಲಿ ೨೮

ಉದರಾರ್ಥಮಾದನ್ಯಜನರ್ಗೆತ್ತಿದೀ ಕರದೆ
ಸದಮಲಾತ್ಮಂಗೆ ಶಂಭುಗೆ ತುಳಿಲ್ಗೆಯ್ವುದದು
ವಿದಿತಮಾಗಿಯೆ ತೆಗಳೆನುತ್ತೆರಡುಕ್ಕೈಗಳಂ ತಱಿದಿಕ್ಕಿ ಸಂತೋಷದಿಂ
ಪಡೆದು ಪೊಸಕ್ಕೈಗಳಂ ಪ[3]ಡೆ[3]ದು ಮತ್ತಮಱಿಂದೆ
ಮದನಾರಿಗಂ ಕೂರ್ತು ಪೊಡಮಡುತ್ತಿರ್ಪ ಸೊಂ
ಪೊದವಿದ ಮಹಾಭಕ್ತರರೆಬರೆಸೆದಿರ್ದರಾ ಮಲ್ಲಿಕಾರ್ಜುನನಿದಿರೊಳು ೨೯

ಉರಗರಾಜಂ ದಶಾಸ್ಯಂ ಸ್ಕಂದನೆನಿಪಿವರ್ಗೆ
ಪಿರಿಯೊಡೆಯನಾದೀಶ್ವರಂಗಯ್ದು ಶಿರಮೆಂಬ
ನರರ ವಾರ್ತೆಗಳ ಕೇಳಲ್ಕಾಱದೇಗಳುಂ ತಮ್ಮಯ ಶಿರಸ್ಸುಗಳನು
ಭರದಿಂದೆ ತಱಿದು ಶಿವನಡಿದಾವರೆಯ ಮೇಲೆ
ಸರಳಸದ್ಭಕ್ತಿಯಿಂದಿರಿಸಿ ಮೂಜಗಮಱಿಯೆ
ಮರಳಿ ಪಡೆವರ್ ಕೆಲಬರಿಂತಪ್ಪ ಭಕ್ತರ್ಕಳೆಸೆದರೀಶಾಗ್ರದಲ್ಲಿ ೩೦

---

1 ರುಷ (ಗ) 2 ತೋಶ್ರ (ಗಟ) 3 ಡೆ (ಕಗ)

ಪಿರಿದುದಿನಮಿಾ ಕರ್ಮದೇಹಮಂ ತಾಳ್ದಿರ್ದೆ
ಉರಿಗಣ್ಣನೆನಿಪ ಶಿವಕರುಣಮಿಲ್ಲದೆ ಬಳಿ
ಕ್ಕಿರದೆ ಮದ್ದೇಹಮಂ ತಾಳ್ದಿರ್ಪುದಿನ್ನುಚಿತಮಲ್ತೆಂದು ತಿಳಿದಣಿಯರಂ
ಹ[1]ರಿಸ[1]ದಿಂ ತಮ್ಮ ದೇಹಂಗಳಂ ತಱಿದು ಬಂ
ಧುರವಿರಕ್ತಿಯಿನೀಶಪದಪದ್ಮದೊಳಗಿ[2]ಟ್ಟು[2]
ಕರಮೆ ದಿವ್ಯಾಂಗದಿಂ ರಾಜಿಸುತ್ತಿರ್ಪ ಸದ್ಭಕ್ತರೆಸೆದಪರದಱಿತೊಳು ೩೧

ಮಿನುಪ ಹಸ್ತಂಗಳಂ ಧೂಪದೀಪಂಗಳ್ಗೆ
ಘನಪಾತ್ರೆಗಳ ಮಾಡಿ ಮಲ್ಲಿಕಾರ್ಜುನನಿದಿರೊ
ಳನುನಯದೆ ಪಾಡುತಾಡುತ್ತಿರ್ಪವರ್ ಕೆಲರ್ ಮತ್ತಿನರೆಬರ್ ಸಂತತಂ
ಸನಯದಿಂ ಮಸ್ತಕಂಗಳನೆ ಕಡುಗಾಡಿಮಿಗೆ
ಮನವೊಸೆದು ದೀಪಪಾತ್ರೆಗಳಾಗಿ ರಚಿಸಿ ಘ
ನ್ಮನೆ ದೀಪಸಂತತಿಗಳಂ ತಳೆದು ಶಿವನಿದಿರೊಳಾಡುತೆಸೆವರ್ ಕೆಲಬರು ೩೨

ಮರಳಿ ಕೆಲಬರ್ ವೀರರಸಯುಕ್ತರಾಗಿ ಕಡು
ಹ[1]ರಿಸ[1]ದಿಂ ತಮ್ಮ ಕುಲವನಿತೆಯರ್ ಬೆರಸಿ ವಿ
ಸ್ಫುರದಮಲಪದತಳದೊಳನ್ಯದ್ವೈವದ ರೂವುದೋರ್ಪ ಬಾವುಲಿಗಳಿಂದಂ
ವರ ವೀರಮುದ್ರಿಕೆಗಳಿಂ ಪೆಂಡೆಯಂಗಳಿಂ
ದುರುಕನಕಶೃಂಖಲಾದ್ಯಾಭರಣತತಿಗಳಿಂ
ಪಿರಿದು ಬೆಳ್ಪಡರ್ದೆಸೆವ ಕರ್ಣಪತ್ರಂಗಳಿಂ ಲೇಪಿಸಿದ ಸಿರಿಗಂಧದಿಂ ೩೩

ನಿಡುಜಡೆಗಳಿಂ ಸುಲಿದ ಪಲ್ಗಳಿಂ ಮೊಗದ ನು
ಣ್ಪಡರ್ದ ಪೊಗರಿಂ ಮನೋಹರಮಾಗಿ ಶೋಭಿಸುತೆ
ಕಡುಮೆಱೆವ ಶಿರದೊಳಂ ಕಂಠದೊಳ್ ತೋಳ್ಗಳೊಳ್ ಗಂಡಸ್ಥಲಂಗಳಲ್ಲಿ
ತೊಡೆಗಳೊಳ್ ಕರ್ಣಯುಗ್ಮಂಗಳೊಳ್ ಕೆಯ್ಗಳೊಳ್
ಪಡಪಿನಿಂ ದೀಪನಾರಾಚಂಗಳಂ ಬಲಿದು
ಸೊಡರ್ಗುಡಣಮಂ ಶಿವಂಗವಱಿಂ ನಿವಾಳಿಸುತೆ ತವಕದಿಂ ಬರುತುಮಿರಲು ೩೪

ಪರಿಷಜ್ಜನಂ ಕೌತುಕಂಬಟ್ಟು ನೋಡುತಿವು
ಭರದೆ ನಡೆತರ್ಪ ದೀಪಾಚಲಂಗಳೊ ನೋಡೆ
ಪಿರಿದು ಪೊಸತೆನುತಿರಲ್ ನಲಿದು ನರ್ತಿಸುತೆ ಶಿವನಿದಿರೊಳೆಸೆವರ್ ಸಂತತಂ

---

1 ರುಷ (ಗ) 2 ತ್ತು (ಕ)

ಹ[1]ರಿಸ[1]ದಿಂ ಹಾಟಕೇಶ್ವರಲಿಂಗದಿದಿರಿನೊಳ್
ಕರಮೆ ಏಕಾಂತದಿಂ ದುಷ್ಕರಂ ಕರ್ಮವಂ
ವಿರಚಿಸುತ್ತಿರ್ಪವರ್ ಕೆಲಬರಲ್ಲಿಯ ಗಂಗೆಗೆಯ್ದುವರ್ ಪಲಕೆಲಬರು ೩೫

ಮಿನುಗುವಾ ತ್ರಿಪಥಗಂಗಾಭಿಯುಕ್ತಂ ದಲೆಂ
ದೆನಿಪ ಪಾತಾಳಗಂಗಾಮಹಿಮೆಯೆಂತೆನಲ್
ಮನಸಿಜಾಂತಕನಂಘ್ರಿಯಿಂ ಜನಿಸಿ ಪಾತಾಳದಲ್ಲಿ ಪೆಸರ್ವಡೆದಾವಗಂ
ವಿನುತ ಭೋಗಾವತೀನದಿಯೆನುತ್ತೊಪ್ಪುಗುಂ
ಕನದಭವದೇಹಭಸ್ಮದಿನೊಗೆದು ಭುವನದೊಳ್
ನನಸು ಭಾಗೀರಥೀನದಿಯೆಂದಹರ್ನಿಶಂ ರಾಜಿಸುತ್ತಿರ್ಕುಮೆಯ್ದೆ ೩೬

ಹರಜಟಾಜೂಟದಿಂದೊಗೆತಂದು ಶೋಭಿಸುವ
ಸುರಲೋಕದಲ್ಲಿ ಮಂದಾಕಿನೀ ನದಿಯೆನಿಸಿ
ಕರವೊಪ್ಪುತಿರ್ಕು[2]ಮತ್ತ್ರೀ[3]ತೋರ್ಪ ಪಾತಾಳಗಂಗೆಯೊಳಗಾ ನದಿಗಳು
ಬೆರಸಿರ್ಪ ಕತದಿನಿದಿರೊಳ್ ಮಜ್ಜನಂಬೊಕ್ಕ
ನರರ್ಗೊಲ್ದು ಸರ್ವತೀರ್ಥಸ್ನಾನ ಫಲಮಕ್ಕು
ಮಿರದದಱಿಂನೀ ಗಂಗೆಯಂ ನೋಡಿದರ್ಗೆ ಮುಟ್ಟಿದ ನರರ್ಗಿಂಟೆದರ್ಗೆ ೩೭

ಭರದಿಂದೆ ಮಜ್ಜನಂಬೊಕ್ಕರ್ಗೆ ಸಂತತಂ
ನಿರುಪಮ ಚತುರ್ವಿಧಪದಂಗುಡಲ್ ತೆರೆಯೆಂಬ
ಸರಳದೋರ್ಲತೆಗಳಿಂದಾವರ್ತನಾಭಿಯಿಂ ಪುಳಿನ ಜಘನಂಗಳಿಂದಂ
ಕರವೆಸೆವ ಮೀನ್ಗಳಿಂದಂ ಕಮಲಮುಖದಿಂದೆ
ವರರಥಾಂಗಸ್ತನಂಗಳಿನೆಸೆವ ಫೇನ ಬಂ
ಧುರಹಾರನಿಚಯದಿಂದಂ ಪ್ರವಾಹಾಂಗದಿಂದೆಸೆವ ಗಂಗಾಸುಕಾಂತೆ ೩೮

ಕೊಳರ್ವಕ್ಕಿ ಮೊದಲಾದ ನೀರ್ವಕ್ಕಿಗಡಣಗಳ
ಕಳರುತಿಯೆ ವಾದ್ಯನಿವಹಂಗಳಾಗಲ್ ಪಱಿಮೆ
ಗಳ ರಾವಮೇ ಗಾನವಾಗೆ ವೀಚಿಗಳೆಂಬ ಬಾಹುಗಳಿನಭಿನಯಮುಮಂ
ಮಿಳಿರ್ದೆಸಗುತುಂ ಬರ್ಪ ಪೌರಿಸೆಯಂ ಸಂತಸದೆ
ಗಳಿಲನಿದಿರ್ಗೊಳ್ವ ಮಾಳ್ಕೆಯೊಳಿರ್ಪ ಗಂಗೆಯಂ
ಲಳಿತ ಪರಿಷಜ್ಜನಂಗಳ್ ಕಂಡು ಮುದವೇಱಿ ಪೊಗಳುತಿಳಿದೆಯ್ತಂದುದು ೩೯

---

1 ರುಷ (ಗ) 2 ಮುಂತೀ (ಟ) 3 ರುಷೆ (ಗ)

ಹ[1]ರಿಸ[1]ದಿಂ ಬಳಿಕಲ್ಲಿ ಮಜ್ಜನಂಗೆಯ್ದು ತ
ತ್ಪರಿಷಜ್ಜನಂಗಳುಱತ ತಂತಮ್ಮ ಶಕ್ತಿಗನು
ಸರಿಯಾಗಿ ದಾನಧರ್ಮಂಗಳಂ ಮಾಡಿ ತಚ್ಛ್ರೀರುದ್ರಪಾದಕೆಯ್ದಿ
ವರಭಕ್ತಿಯಿಂ ವಂದನಂಗೆಯ್ದು ಬರ್ಪಾಗ
ಳರರೆ ವಿಧ್ವಸ್ತಕರ್ಮವ್ರಜರನೆಸೆವ ಭಾ
ಸುರ ಕರ್ಮಹರರಲ್ಲಿ ಬೀಳ್ವ ನರರಂ ನೋಡುತವರ ಪೊಗಳುತ್ತೆ ಮತ್ತಂ ೪೦

ವಿನುತ ಕರ್ಮಹರೇಶರಂ ಕಂಡು ಸಂತಸದೊ
ಳನುನಯಂ ಭಕ್ತಿಯಿಂದಂ ತುಳಿಲ್ಗೆಯ್ದು ಮ
ತ್ತನಘಪಾಪ ವಿನಾಶಲಿಂಗನಂ ಕಂಡು ಮುದದಿಂ ವಂದಿಸುತ್ತೆ ಮತ್ತಂ
ವಿನಯದಿಂದಂ ಬರುತ್ತಾ ಪರಿಸೆ ಚಿತ್ತದೊಳ್
ಘನವಿಸ್ಮಯಂಗಳಂ ಕಂಡು ಜೋದ್ಯಂಬಡುತೆ
ಮಿನುಗುವೀ ಗಿರಿಯನೆಯ್ದಿದ ಪರಿಸೆ ತಾನೆನಿತ್ತೊ ಶಿವನೇ ಬಲ್ಲ[2]ನ[2]ದನು ೪೧

ಮಿನುಗುವೀ ಕರ್ಮಹರದಲ್ಲಿ ಲಕ್ಷಕ್ಕೊರ್ವ
ನನುನಯದೆ ಬೀಳ್ವನಿದು ನಿಕ್ಕುವಂ ನೋಡಲಿಂ
ತೆನಸುಮಿದಱತೊಳ್ ಬೀಳ್ವವರ್ಗೆ ಕಡೆಮೊದಲಿಲ್ಲ[3]ದೆಂ[3]ತೆನಲ್ ಧರಣಿಯೊಳಗೆ
ವಿನಯದಿಂ ಧಾನುಷ್ಕನೊರ್ವನಾಕಾಶವುಂ
ಮನವುಲರುತೆಸುವ ಶರಸಂದೋಹಕೆಂತು ತೊ
ಟ್ಟನೆ ತೋರ್ಕುಮಾದಿಮಧ್ಯಾಂತಮಂತಂತೆ ಮತ್ತೀ ಕರ್ಮಹರದೊಳೆನಸುಂ ೪೨

ಭರದೆ ಬೀಳ್ದರ್ ಕೆಲರ್ ಬೀಳ್ವವರ್ ಕೆಲಬರಿ
ನ್ನಿರದೆ ಬೀಳಲ್ಕುಜ್ಜುಗಂಗೆಯ್ವವರ್ ಕೆಲಬ
ರೊರೆದು ನೋಡಲ್ಕೆನಿತು ಲಕ್ಷಮೋ ಈಪರಿಸೆ ಕೂಡಿತಿದು ಬಿಸವಂದವು
ನಿರುತದಿಂ ಪ್ರತಿವಾಸರಂ ನೋಡಲಿಂತು ಮಿಗೆ
ನರರೊಸೆದು ಬೀಳುತಿರ್ದಪರಿದರ್ಕೆಣೆಯಪ್ಪ
ಪರಿಸೆಯಂ ಕಾಣೆವೀವೆಡೆಯಲ್ಲಿ ಮುನ್ನೆಯ್ದಬಲ್ಲೆವಾ ಕಾಶಿಗನಿಶಂ ೪೩

ಮಿನುಪ [4]ದ್ರಾ[4]ಕ್ಷಾರಾಮ ಭೀಮೇಶ್ವರನ ಮದುವೆ
ಗನುನಯಂ ಪೋಪೆವದುಮಿನಿತಿಲ್ಲ ಗುಡಿಪೂಡಿ
ಯೆನಿಪಪುರದೊಳಗಿರ್ಪ ಸೋಮೇಶ್ವರನ ವಿವಾಹದ ಪರಮವೈಭವವನು

---

[1] ರುಷ (ಗ) [2] ನಿ (ಟ) [3] ಮಂ (ಕ) [4] ದಾ (ಕ)

ಎನಸುಮಱಿಂದಿರ್ಪ[1]ವ[1]ದುಮಿನಿತಿಲ್ಲ ಮತ್ತಮಾ
ಘನತರ ವ್ಯಾಘ್ರಪುರದಲ್ಲಿ ಶಿವಪರಿಣಯನ
ವನು ಮಱಿತವೆವದು ತಾನುಮಿನಿತಿಲ್ಲ ಸೊನ್ನಲಿಗೆಯಲ್ಲಿನಿತುಮಿಲ್ಲ ನೋಡೆ ೪೪

ಮಿಸುಪ ಸೌರಾಷ್ಟ್ರಸೋಮೇಶ್ವರನ ಮಂದಿರದೊ
ಳೆಸೆವ ವಸ್ತ್ರದ ಧಾರಣದ ವೈಭವಂಗಳಂ
ನಿಸದಮನನಱುವೆವಿನಿತಿಲ್ಲವುಂ ಗೋದಾವರೀಸ್ನಾನಕಳ್ತಿಯಿಂದಂ
ಅಸವಸಂ ಪೋಪೆವದುಮಿನಿತಿಲ್ಲ ಮತ್ತಮು
ಲ್ಲಸದಿಂದೆ ರಾಮೇಶ್ವರಾದಿಗಳನೀಕ್ಷಿಸಿದೆ
ಮೆಸಗುವೀ ಶ್ರೀಪರ್ವತದ ಪರಿಸೆಗೆಣೆಯಿಲ್ಲ ಮೂಜಗದೊಳಿದು ನಿಕ್ಕುವಂ ೪೫

ಇದಱ ಮಹಿಮೆಯ ಮಲ್ಲಿಕಾರ್ಜುನನೆ ಬಲ್ಲನೆನು
ತುದಿತಹರ್ಷದೆ ಮುನ್ನೆ ಬಿಟ್ಟ ಬಿಡುದಾಣಕ್ಕೆ
ಪಡೆದೆಯ್ದಿ ಬಂದು ಸೊಕದಿಂದಿರುತೆ ತಮ್ಮೊಳೋರೋರ್ವರಿಂತೆಂದರೊಸೆದು
ವಿದಿತದಿಂ ಕಡಲುಡಿಗೆಯಾದ ದೇಶಂಗಳೊಳ
ಗೊದವಿದ ಜನಾನೀಕಮೆಲ್ಲಮೊಸೆದೆಯ್ತಂದು
ದಿದಱ ಪವಣಂ ಪೇಳ್ವೊಡಾರ್ಗಮಳವಲ್ತೆನುತೆ ಮತ್ತಮಿಂತೆಂದರವರು ೪೬

ಪಿರಿದುಮಾ ಮೂಡದಿಕ್ಕಿಂಗವಧಿ ಕೇತಾರ
ಮುರುತರದ್ವಾರಾವತಿಯೆ ಪಡುವಗಡೆಗವಧಿ
ನಿರುತಮಾಗುತ್ತರಾಶೆಗೆ ಲಸದ್ವಾಲುಕಾನದಿಯವಧಿ ತೆಂಕಕಡೆಗೆ
ವರ ಗಂಧಮಾದನಾಚಲಮುಮವಧಿಯಿಂತಿವಱೊ
ಳಿರುತಿರ್ಪ ಜನಸಮೂಹಂಗಳೆಲ್ಲಂ ಬಂದಿ
ತುರುಮೋದದಿಂ ಮತ್ತಮಿ[2]ವ[2]ಱ ಪವಣಂ ಮಹೇಶ್ವರನೊರ್ವನೇ ಬಲ್ಲನು ೪೭

ಎನುತಿರ್ದು[3]ದಿ[3]ದು ಯಾಮ್ಯಕೈಲಾಸಮದಱಿಂದೆ
ಮಿನುಗುವೀ ಪರ್ವತಕೆ ಮೋಕ್ಷಾರ್ಥಿಗಳುಮಾದ
ಜನರೆಲ್ಲರೆಯ್ತಂದರಿದು ನಿಕ್ಕುವಂ ಮತ್ತಮೀ ಗಿರಿಯು ಕಾಣ್ಬೆವೆನುತೆ
ವಿನಯದಿಂದೀಗಳೆಯ್ತರುತಿರ್ದರಾಗಳಾ
ಘನಪೌರಜನರೆಲ್ಲರುಂ ಮೋಕ್ಷನಗರಮಂ
ಸನಯದಿಂದೆಯ್ದಲಧಿಕಾರಿಗಳ್ ತಾಮಕ್ಕುಮೆಂದೊಡಾ ಗಿರಿ ಮಹಿಮೆಯಂ ೪೮

---

[1] ವಿ (ಕ) [2] ದ (ಗ) [3] ದ (ಗ)

ನಿರುತಮಿಂತುಟೆನುತ್ತೆ ಪೇಳ್ವನೆಲ್ಲಿದನೆಯ್ದಿ
ನಿರುಪಮಶ್ರೀಗಿರಿಗೆ ಪೋಪೆವಾವೆನುತಿರ್ದೆ
ವಿರದಿನ್ನೆವರೆಗಮೆಮ್ಮಯ ಪುಣ್ಯದಿಂದೀಗ ಬಂದೆವೀ ಶ್ರೀಶೈಲಕೆ
ಪಿರಿದುಮಿನ್ನೆಮ್ಮ ಕುಲಮೆಲ್ಲಮಪವರ್ಗಮಂ
ಹ[1]ರಿಸ[1]ದಿಂದೆಯ್ದುಗುಂ ಬರ್ದುಕಿದೆವೆನುತ್ತೆ ಸಿರಿ
ಗಿರಿಯೊಡೆಯನಂ ಕಂಡೆವಿನ್ನೆಮ್ಮ ಪಿಂದೆ ಮುಂದೆಸೆವ ಕರ್ಮಕ್ಷಯಂಗೆಯ್ದೆವಿಂದು ೪೯

ಮಿಸುಗುವೀ ಮಲ್ಲಿಕಾರ್ಜುನನ ಕೃಪೆಯಿಂದೆ ಸೊಂ
ಪೆಸೆವಣುಗರಂ ಪಡೆದು ಮಲ್ಲಿಕಾರ್ಜುನಯೆಂದು
ಪೆಸರಿಡುವ ಸೈಪುಗಡಣಂಗಳಂ ತಳೆದೆವಿಂದೆಮ್ಮ ಸಂಕಲ್ಪಂಗಳು
ಸಸಿನೆ ಸಂಪೂರ್ಣಂಗಳಂ ತಾಳ್ದುವಾವಗಂ
ನಿಸದಮಾಯೆಡೆಯುಳಿದುಪೋಪುದಲ್ತಲ್ತು ಮು
ತ್ತುಸವಸಂ ಮಿಂಚು ಸಂಜೆಯ ಕೆಂಪು ಶಕ್ರಧನು ಕರಿಕಳಭಕರ್ಣಾಗ್ರವು ೫೦

ಶರಭದ್ರಪಟಲಮೆಂಬಿವು ಮುಖ್ಯಮಾದವಱ
ಪರಿಯಂತಿರಸ್ಥಿರಂಗಳುಮಾಗಿ ತೋರ್ಪ ಭಾ
ಸುರ ಧನಂ ಯವ್ವನಂ ತನುವೆಂಬಿವಾದಿಯಾದವನೆಲ್ಲಮಂ ಬಿಸುಟ್ಟು
ಪರಮ ವೈರಾಗ್ಯಯುತರಾಗಿ ಸದ್ವಿಜ್ಞಾನ
ಪರರಾಗಿ ಮಲ್ಲಿಕಾರ್ಜುನನನೆ ನೋಡುತ್ತುಮೀ
ಗಿರಿಯೊಳಗೆ ಸುಖಮಿರ್ಪುದೇ ಲೇಸೆನುತ್ತೆ ನುಡಿಯುತ್ತಿ[2]ರ್ದು[2]ದೊಸೆದು ಪರಿಸೆ ೫೧

ಸದಮಲಪ್ರಚುರವಿಶ್ರುತ ಪರಮಭಕ್ತಗಣ
ಪದಸರೋರುಹಸಾಂದ್ರ ಮಕರಂದಪಾನ ಸ
ಮ್ಮದಿತ ಚಂಚಚ್ಚಂಚರೀಕನನವರತ ಪಂಚಾಕ್ಷರೀಪ್ರಸಿತಹೃದಯಂ
ವಿದಿತ ಮಂಜುಲನೀಲಕಂಠಾಹ್ವಯಂ ಮನೋ
ಮುದದೆ ಪೇಳ್ದುರುತರಾರಾಧ್ಯಚಾರಿತ್ರದೊಳ
ಗಿದು ಮಲ್ಲಿಕಾರ್ಜುನನ ಪರಿಷಜ್ಜನಂ ಕಂಡ ಕಥನಮೆನಿಕುಂ ಭಾವಿಸೆ ೫೨

---

1 ರುಷ (ಗ) 2 ರ್ಪು (ಗ)

# ಎಂಟನೆಯ ಸಂಧಿ

## ದೋನಮಾರ್ಯರ್ಗ೦ ಜಾಗರವಿದ್ದ ಕಥೆ

ಸೂಚನೆ : ದೋನಮಾರ್ಯರ್ಗನುಮಂತೆ ಪರಿಷಜ್ಜನಂಗಳುಂ
ನ್ಯೂನವಿಲ್ಲದೆ ಜಾಗರಣಮನಾ ಗಿರಿಯಲ್ಲಿ
ಸಾನುರಾಗದಿನೊಡರ್ಚಿದ ಕಥನಮಂ ಕೇಳ ಸೂರಸಚಿವೇಂದ್ರ ಮುದದಿಂ

ಕರ[1]ಟಿ[1]ದೈತ್ಯತ್ವಙ್ನವಾಂಬರಮದಾಗೆ ಭಾ
ಸುರಚಕ್ರಿ ಭೃನ್ನೂತನೋಷ್ಣೀಷಮಾಗೆ [2]ಸು
ಸ್ಥಿರ[3]ತರೋಲ್ಬಣಗರಳಕಂಠಭೂಷಣಮಾಗೆ ಫಣಿಕುಂಡಲಂಗಳಾಗೆ
ಸರಳ ಶಾರ್ದೂಲಾಜಿನಾರ್ಡೋರುಕಮದಾಗೆ
ಪರಶುಪಾಶಂಗಳಾಯುಧನಿಕರಮಾಗೆ ಮ
ತ್ತಿರದಿವಜಿಃನತಿಸೌವ್ಯುಪುಂ ಪಡೆದು ರಾಜಿಸುವ ಗುರುನೀಲಕಂಠ ಜಯತು ೧

ಮರಳಿ ಗುರುಪಂಡಿತಾರಾಧ್ಯಕರಸಂಭವಂ
ಪರಮಗುರುಭಕ್ತಿನಿರತಂ ದೋನಮಾರ್ಯನತಿ
ಭರದೆ ಸದ್ಭಕ್ತರೊಡಗೂಡಿ ಜಾಗರಣಮನೊಡರ್ಚಲುದ್ಯುಕ್ತನಾಗಿ
ಉರುತರ ಪ್ರಾಸಾದಗೋಪುರಾದಿಗಳಲ್ಲಿ
ಸರಳಾಗಮೋಕ್ತವಿಧಿಯಿಂ ಮಂಟಪಂಗಳಂ
ಹೆ[?]ರಿಸ[?]ದಿಂ ರಚಿಸಿ ರಂಭಾಸ್ತಂಭನಿಕರದಿಂ ಪೊಂಬಾಳೆಗಡಣದಿಂದಂ ೨

ತೊಳಪ ಮುಕುರಂಗಳಿಂ ದ್ವಾರತತಿಗಳನೊಲ್ದು
ಗಳಗಳನೆ ಸಿಂಗರಂಗೆಯ್ದು ಪೊಸ ಮೇಲ್ಕಟ್ಟು
ಗಳ ನೂತ್ನಚಿತ್ರಾಂಬರಂಗಳಿಂದಂ ರಚಿಸಿ ಪದ್ಮಕಲ್ಹಾರಂಗಳಿಂ
ಮಿಳಿರ್ವ ಮಲ್ಲಿಗೆ ಜಾಜಿಯರಳಾದಿಯಾದ ಸ
ಲ್ಲಳಿತ ಕುಸುಮಂಗಳಿಂದಂ ನಾಡೆ ಸಮೆದಿರ್ದ
ಬೆಳಪ ದಂಡೆಗಳನಂತಲ್ಲಲ್ಲಿ ಕಟ್ಟಿ ಮತ್ತಂ ಕಣ್ಗೆ ಸೊಗಸಿ ತೋರ್ಪ ೩

---

[1] ಡಿ (ಗ)  [2] ಸುರು। ಚಿರ (ಗ)  [3] ರುಷ (ಗ)

ಸುರುಚಿರೋಪಾಂಬುಜಪ್ರಕರಂಗಳಿಂ ಮತ್ತೆ
ಕರಮೆಸಗುವುಪಫಲಾನೀಕಂಗಳಿಂದೆ ಬಂ
ಧುರಮಾಗಿ ತೋಱುವುಪರತ್ನಂಗಳಿಂದಮುಪಪುಷ್ಪಸಂದೋಹಂಗಳಿಂ
ಸರಸಿರುಹ ಕುಮುದಾದಿ ತೋರಣಂಗಳಿನೆಯ್ದೆ
ವರ ಮೌಕ್ತಿಕಸ್ತಬಕನಿಕರಂಗಳಿಂ ಹೇಮ
ದರಲ ಝುಲ್ಲರಿಗಳಿಂದಾ ಮಂಟಪಂಗಳಂ ಸಿಂಗರಿಸಿ ಭಕ್ತಿಯಿಂದಂ ೪

ಕನಕಾಂಬುರಂಜಿತ ಲಸದ್ವಸ್ತ್ರಪಕ್ಷ್ಮ ನೂ
ತನ ಚಂಚರೀಕಂಗಳಿಂದೆ ಪಕ್ವಾನ್ನದಿಂ
ದನುನಯಂ ಸಮೆದ ಕೇತುಗಳಿಂದೆ ಡಾಕೆವಣ್ಗೊನೆಗಳಿಂದಂ ಮತ್ತೆಯುಂ
ಘನತರಾಶೋಕ ಕರವೀರಕುಸುಮಂಗಳಿಂ
ನನಸು ಚಂಪಕ ಕರ್ಣಿಕಾರಪುಷ್ಪಂಗಳಿಂ
ದೆನಸುಮೊಪ್ಪಂಬಡೆವವೊಲ್ ಮಂಟಪಂಗಳಂ ಪ್ರೀತಿಯಿಂ ಸಿಂಗರಿಸಿದಂ ೫

ಅನಿತಱಿಳೊಳಗಿತ್ತ ಮತ್ಕಿರಣಂಗಳಿಂದೆ ತೊ
ಟ್ಟನೆ ದಿವಸದೊಳ್ ಬಹಿಸ್ತಮಮನುಱಿ ತವಿಸುವೆಂ
ಮಿನುಗುವೀ ಭಕ್ತಸಂದರ್ಶನದೆ ಪೊಱಗೊಳಗೆ ತೋಱುವೀ ತಮವಾವಗಂ
ಇನಿತಿಲ್ಲದಳಿದುಪೋಕುಂ ಪಗಲುಮಿರುಳುಮಿಂ
ತನಘರಾದೀಭಕ್ತರಿದಿರೊಳಾಂ ಜೀವಿಪುದು
ನನಸು ನಾಣಿಲಿತನಂ ನೀರಬಿಳ್ದಳಿವೆನೆಂಬಂತೆ ರವಿ ಕಡಲೊಳಿಳಿದಂ ೬

ಭರದಿಂದೆ ಸಂಜೆಗಾಲಮನೆಳ್ಕಱಿಂದೆ ಕವಿ
ವರರೆಲ್ಲರುಂ ತಮ್ಮ ಬಗೆಗೆಯ್ದದಂತೆ ಮ
ತ್ತೊರೆದರಾ ಕಾಲಮಂ ಹ[1]ರಿಸ[1]ದಿಂದೀ ಸಮಯಕುಚಿತಮಪ್ಪಂತೆ ಪೊಗಳ್ವಿಂ
ವರ ಶಂಖ ಭೇರೀ ಮೃದಂಗಾದಿಘೋಷಣಂ
ಕರಮೆಸೆವ ಘಂಟಿಕಾಕಾಂಸ್ಯತಾಲಾದಿ ರವ
ಮುರುತರೋನ್ನತ ಜಯಜಯಧ್ವಾನಸಂದೋಹಮೆಸೆದುದಾ ವೇಳೆಯಲ್ಲಿ ೭

ಎನಸುಮಿಾ ವಾ[2]ದ್ಯನಿನದಂ[2] ಭಾವಿಸಲ್ಕೆ ತೊ
ಟ್ಟನೆ ಮೇಘರವದವೋಲೆಂಬುದದು ಯುಕ್ತಮ
ಲ್ತನವರತಮಿಪಱ ದನಿ ಶಿಖರಿನಿಕರಂಗಳೊಳ್ ಮಾರ್ದನಿಯ ಪುಟ್ಟಿಪುದಱಿಂ

---

[1] ರುಷ (ಗ) [2] ದ್ಯದನಿನದ (ಗ)

ನನೆಸಲ್ಲಿ ಸಂಜೆಗಳ್ತಲೆಯ ವರ್ಣಿಸಲಿಲ್ಲ
ಮಿನುಪ ಗೋಪುರದ ಪೊನ್ಗಳಸವೆಳಗಿಂ ಧ್ವಜದ
ಕನಕದಂಡವ್ರಾತಖಚಿತಮಣಿಕಾಂತಿಯಿಂ ತಮಮಿಲ್ಲದುದಱಿಂದನಿಶಂ ೮

ಕರಮೆಸೆವ ಸಂಜೆಗಳ್ತಲೆಯೊಳಾ ಗಿರಿಯಲ್ಲಿ
ಪಿರಿದುಂತೆ ಜಾರ ಚೋರರ ವರ್ಣಿಸಲ್ಕಾಗ
ನಿರುತಮದಱಿಂದೊಳಗಿರ್ಪರೆಲ್ಲರುಂ ಪುಣ್ಯಸ್ವರೂಪರ್ಕಳಾದ ಕತದಿಂ
ವರ ತಾರಕಾನೀಕಮಂ ಪೊಗಳಲಿಲ್ಲ ತ
ತ್ಸ್ಫುರದೊಳೆಸೆದಿರ್ಪ ಧೂಪದ ಧೂಮಮೆಂಬ ಭಾ
ಸುರಕೃಷ್ಣಮೇಘತತಿ ಕವಿದು ಮಿನ್ಗಡಣಮದು ಕಾಣಬಾರದ ದೆಸೆಱಿಂ ೯

ನಿಸದಮಾ ವೇಳೆಯೊಳ್ ಕಮಲಸಂಕೋಚಮುಮ
ನೆಸೆವ ಕುಮುದಂಗಳ ವಿಕಾಸಮುಮನಳ್ಕಱಿಂ
ದೆಸೆದು ಪೇಳಲ್ಕಾಗದಂಬರಂ ಮುಟ್ಟಿ ಗಿರಿ ಬೆಳೆದಿರಲ್ ದಾರಿಗೆಟ್ಟು
ಸಸಿನೆ ರವಿಶಶಿಗಳದಱಿಕ್ಕೆಲದೊಳಾವಗಂ
ಮಸಕದಿಂದೆಡೆಯಾಡುತಿರ್ಪರದಱಿಂದೆ ಮ
ತ್ತಸವಸಂ ನೋಡಲುದಯಾಸ್ತಮಯಮೆಂಬೆರಡನಱಿವರಿಲ್ಲಾ ಗಿರಿಯೊಳು ೧೦

ಪಿರಿದುಮದಱಿಂದೆ ಸಂಧ್ಯಾಕಾಲವರ್ಣನೆಯ
ಮಿರದಲ್ಲಿ ಪೊಗಳ್ವೊಡಸದಳಮಂತದಿರ್ಕೆ ವಿ
ಸ್ಫುರಿತಶಿವರಾತ್ರಿಯಾ ಮಾಹಾತ್ಮ್ಯಮಂ ಪೇಳ್ವೆನೆಂತೆಂಬೊಡೊಸೆದು ಮುನ್ನೆ
ತ್ವರಿತದಿಂದಡವಿಯೊಳಗೊಂದು ಮಿಗಮಂ ಕಂಡು
ಹ[1]ರಿಸ[1]ದಿಂ ಬಿಯದನೊರ್ವಂ ನಿಶಿತ ಬಾಣ[2]ಮಂ[2]
ತಿರಿವಿನೊಳ್ ತೊಟ್ಟೆಸೆಯೆ ತನ್ಮೃಗಮನಾ ಸರಂ ಥಟ್ಟಿಗಿದು ಪೋಗಿ ಭರದಿಂ ೧೧

ಬಳಿಕೊಂದು ಪಳ್ಳದೊಳ್ ಪಟ್ಟಿರ್ಪ ಬಗ್ಗದಾ
ಲಳಿತಶಿರಮಂ ತಾಗೆ ತದ್ವ್ಯಾಘ್ರನತಿಕೋಪ
ದಳವಿನಿಂ ಘುಡುಘುಡಿಸುತೆಯ್ದಿವರಲಾ ಬಿಯದನತ್ಯಂತಭೀತಿಯಿಂದಂ
ಘಳಿಲನಲ್ಲಿರ್ದೊಂದು ಬಿಲ್ವಧರಣೀರುಹಮ
ನಳಘುಗತಿಯಿಂದಡರಲಾ ತರಕ್ಷು ಬಳಿಕ್ಕೆ
ಗಳಗಳನೆ ತದ್ವೃಕ್ಷಮೂಲಂಬರಂ ಬಂದುದತಿಖೇದದಿಂದೆ ನಿಸದಂ ೧೨

---

1 ರುಷ (ಗ) 2 ದಿಂ (ಗ)

ಘನಕೋಪದಿಂದೆ ತಚ್ಛಾರ್ದೂಲನಾ ಮರನ
ನನುವಿನಿಂದೇಱಿರ್ದ ಲುಬ್ಧಕನನೀಕ್ಷಿಸು
[1]ತ್ತೆ[1]ನಸುಮಕ್ಷಿಗಳಿಂದೆ ವಿಸ್ಫುಲಿಂಗಂಗಳಂ ಕೆದಱುತ್ತೆ ನಿಟ್ಟುಸುರ್ಗಳಿಂ
ವಿನುತ ಕೋಪಾಗ್ನಿ ಧೂ[2]ಮಾ[2]ನೀಕಮಂ ಸೂಸು
ತಿನಿಸು ಕಿರ್ಗಣ್ಣಿಕ್ಕಿ ಮೇ[3]ಲೆ[3] ನೋಡುತ್ತೆ ತೊ
ಟ್ಟನೆ ಭೂಮಿಯೊಳಗೆ ಲಾಂಗೂಲಮಂ ಪೊರಳಿಸುತ್ತಾ ತರುವ ಸುತ್ತಿಬರುತೆ ೧೩

ಮರನನಡರ್ದೇಱಲವ್ವಳಿಸುತ್ತೆ ಶಾಖೆಗಳ
ನಿರದಲುಗಿಸುತ್ತೆ ತದ್ವೃಕ್ಷಮೂಲಮನೆಯ್ದೆ
ಭರದಿಂದೆ ಪಲ್ಗಳಿಂದೊತ್ತಿ ಕಡಿಯುತ್ತೆ ಬಾಯ್ವಿಟ್ಟಾಗುಳಿಸುತುಮಿಂತು
ಇರುತಿರಲ್ ಕಂಡು ಮತ್ತಾ ಲುಬ್ಧಕಂ ಮನದೆ
ಪಿರಿದಗಿದಿದೆನ್ನ ಬರ್ದುಗೆಯನೆಯ್ದಿಪುದೆನುತೆ
ಹ[4]ರಿಸ[4]ಗುಂದುತ್ತೆ ತಳ್ಕಂಕಗುಟ್ಟುತ್ತಿರ್ದನತಿಸಾಧ್ವಸಂಬಡುತ್ತೆ ೧೪

ಪಿರಿಯ ಪುಲಿಗಂಜಿ ತದ್ಬಿಲ್ವದ್ರುಮಸ್ಕಂಧ
ಮುರುತರೋನ್ನತಲಿಂಗಮೆಂದು ಭಾವಿಸೆ ಬಳಿ
ಕ್ಕಿರದೆನ್ನನೀ ವ್ಯಾಘ್ರನೀಗಳೇ ತಿನ್ಗುಮೆಂಬತಿಭೀತಿಯಿಂದೆ ಸುರಿವ
ಸರಳ ಬಾಷ್ಪಂಗಳೇ ಮಜ್ಜನೋದಕಮಾಗೆ
ಮರಳಿ ಮಱಪೊಂದದೆಚ್ಚಱಿಕೆಯಾಗಿರ್ಪವೊಲ್
ಕರಮೆ ಪರಿಪರಿದಿಡುವ ಬಿಲ್ವದಳನಿಚಯಮೇ ಪೂಜಾದಲಂಗಳಾಗೆ ೧೫

ಮರದಡಿಯೊಳಾ ವ್ಯಾಘ್ರ ಸುತ್ತಿಬರುತಿರಲದುಂ
ತಿರುತಿರುಗಿ ಬರ್ಪೆಡೆಗೆ ತಾನುಮತ್ತತ್ತ ನಿ
ರ್ಭರದೆ ತಿರುಗುತ್ತಿರ್ಪುದೇ ನಾಡೆ ಸವ್ಯಾಪಸವ್ಯದೊಡಗೂಡಿ ಮೆಱೆವ
ಪರಮ ಪ್ರದಕ್ಷಿಣಂ ತಾನಾಗಲಾಯಿರು
ಳ್ದೊರಕದನ್ನಂ ಪಸಿದುಮಿರ್ದುದೇ ನೋಡಲದು
ನಿರುತೋಪವಾಸಮಾದುದು ಭೀತಿಯಿಂದೆ ಕಣ್ಮುಚ್ಚದದು ಜಾಗರಣವು ೧೬

ಮರದಡಿಯೊಳಿರ್ಪ ಪುಲಿಗಳರೆಮುಗುಳ್ದಾ ವ್ಯಾಧ
ನುರುವೃಕ್ಷದಗ್ರದೊಳಗಿರ್ದನಾತಂಗೆಯ್ದೆ
ಪಿರಿದಕಾಮದಿನೆಯ್ದಿದತ್ತು ಶಿವರಾತ್ರಿವ್ರತಂ ಮತ್ತಮದಱಿನೊಲ್ದು

---

[1] ತೆ।ನ (ಕಗ) [2] ಪಾ (ಕ) [3] ಲ (ಕ) [4] ರುಷ (ಗ)

ಗಿರಿಜಾಧಿನಾಥನಾ ವ್ಯಾಧನಂ ತನುವೆರಸಿ
ಪರಮ ಕೈಲಾಸಾದ್ರಿಗೊಯ್ದುದಱಿಂದಮಾ
ಸರಳ ಶಿವರಾತ್ರಿ ಮತ್ತಿನ ರಾತ್ರಿಯಂತೆ ಸಾಮಾನ್ಯಮೆಂಬುದು ಪಾತಕಂ ೧೭

ಪಿರಿದು ಶಿವರಾತ್ರಿಮಾಹಾತ್ಮ್ಯಮಂ ಪರಶಿವನೆ
ಸಿರುತಮಱಿವಂ ಮತ್ತಿನರ್ಗಱಿಯಲಳವಲ್ತು
ಕರಮೆ ನಿಕ್ಕುವಮೆನುತೆ ದೋಣಮಾರ್ಯಂ ಮುದದೆ ಭಕ್ತರೊಡಗೂಡಿ ಬಳಿಯಂ
ಸರಳ ಸಂಧ್ಯಾಸಮಯದೊಳ್ ಮನೋಹರಮಾಗಿ
ಭರದಿಂದೆ ನಿತ್ಯಲಿಂಗಾರ್ಚನಾದಿಗಳನಂ
ತಿರದೆಸಗಿ ವರಲಿಂಗಚಕ್ರವರ್ತಿಯನೆಸೆವ ಮಲ್ಲಿಕಾರ್ಜುನಲಿಂಗನಂ ೧೮

ಮಿನುಪ ಸಂಧ್ಯಾಭ್ರರುಚಿಸದೃಶಜೂಟನನೊಸೆದು
ಮನಸಿಜಾಂತಕನ ಸಂಧ್ಯೋಚಿತಾರ್ಚನೆಗಳಿಂ
ನನಸು ಸಂತುಷ್ಟನಂ ಮಾಡಿ ಬಳಿಕಾ ಮಂಟಪದೊಳೆಸೆವ ಗೃಹತತಿಯೊಳು
ವಿನುತ ದೇವಾಗಾರವಿತತಿಗಳೊಳೆಯ್ದೆ ಸೊಂ
ಪಿನ ನದೀತೀರಂಗಳೊಳ್ ನಗರದೆಡೆಗಳೊಳ್
ವನಸಮೂಹಂಗಳೊಳ್ ಗೋಪುರಾಗ್ರಂಗಳೊಳ್ ಪಿರಿದಾಗೆ ಮತ್ತೆ ಮೇಱಿವ ೧೯

ಪರಮ ಸಾರಂಗೇಶ್ವರದೊಳೆಸೆವ ಕಿನ್ನರೇ
ಶ್ವರದಲ್ಲಿ ಹಾಟಕೇಶ್ವರದಲ್ಲಿ ಮತ್ತೆ ಬಂ
ಧುರ ಪಾಪನಾಶನದೊಳಿವು ಮುಖ್ಯಮಾದ ಪುಣ್ಯಸ್ಥಾನದೆಡೆಗಳಲ್ಲಿ
ಹರಿಸ[1]ದಿಂ ಸಮ್ಮಾರ್ಜನೆಗಳನನುವಿಂ[2] ರಚಿಸಿ
ಕರಮೆಸೆವ ರಂಗವಲ್ಲೀನಿಕರಮಂ ಮನೋ
ಹರಮಾಗಿ ಚಿತ್ರಬಂಧಂಗಳಿಂದೆಸಗಿ ಮತ್ತಲ್ಲಿ ರಮಣೀಯಮಪ್ಪ ೨೦

ಕರಕಂಗಳಂ ಪತದ್ಗ್ರಹಣಂಗಳಂ ಮತ್ತೆ
ಕರಮೆಸೆವ ಪಾತ್ರಾದಿಗಳನಲ್ಲಿಗಲ್ಲಿರಿಸಿ
ವರ ಹೇಮರಜತಕಾಂಸ್ಯಂಗಳಿಂ ವಿರಚಿಸಿದ ಪೀಟಿಕಾಪತ್ರಂಗಳಂ
ಹರಿಸ[3]ದಿಂ ಮುಂದಿರಿಸಿ ಮತ್ತೆ ನಾನಾತೆಱದ
ಪರಮಭಕ್ಷ್ಯಂಗಳಂ ಗಂಧಾಕ್ಷತಾದಿಗಳ
ನುರುತರಾಖಂಡಬಿಲ್ವಾದಿ ಪತ್ರಂಗಳಂ ಪಾತ್ರವಿತತಿಗಳೊಳಿಟ್ಟು ೨೧

---

[1] ರುಷ (ಗ) [2] ನಲವಿಂ (ಗ) [3] ರುಷ (ಗ)

ಕುಸುಮನಿಕರಂಗಳಂ ತಿಲಸಮೂಹಂಗಳಂ
ಮಿಸುಗುವ ದಶಾಂಗಮಹಿಷಾಕ್ಷಾದಿ ವರಧೂಪ
ವಿಸರಂಗಳಂ ವಿಲಸದಾನಂದವರ್ತ್ಯಾದಿವರ್ತಿಗಳನಿತ್ತು ಬಳಿಕಂ
ಎಸೆವಂಗವಸ್ತ್ರಂಗಳಂ ಭಕ್ತನಿವಹಕ್ಕೆ
ನಿಸದಮತಿದಾಸಭಾವದೆ ಸಮರ್ಪಿಸುತೆ ಮ
ತ್ತುಸನಸದೆ ಶಿವರಾತ್ರಿವೈಭವವನಿಂತೆಸಗಿದಂ ದೋನಮಾರ್ಯನೊಸೆದು ೨೨

ಬಳಿಕ ಮತ್ತಿನ ಭಕ್ತರರೆಬರತಿಭಕ್ತಿಯುತ
ರಲಘು ಕರ್ಪೂರಕಸ್ತೂರೀಸಮೂಹದಿಂ
ತೊಳಪ ಶಿವಲಿಂಗಾರ್ಚನಾಸ್ಥಾನಮಂ ಮುದದೆ ಸಮ್ಮಾರ್ಜ[1]ನೆಯು[1]ನೊಡರ್ಚಿ
[2]ಕಳಿಕೆ[2]ಮುಕುಳಾಬ್ಜಬಂಧಂಗಳಂ ನಾಡೆ ಸ
ಲ್ಲಳಿತ ಮುತ್ತಿನ ರಂಗವಲ್ಲಿಗಳನಾವಗಂ
ಮೀಳಿರ್ದೆಸಗುವಂತೆ ರಚಿಸುತೆ ಲಿಂಗಪೂಜೆಯಂ ಮಾಡುತಿರ್ದರ್ ಭಕ್ತಿಯಿಂ ೨೩

ಮಿಸುಗುವ ಸಹಸ್ರಕಲಶೋದಕಂಗಳಿನೊಲ್ದು
ಕುಸುಮಶರವೈರಿಗಭಿಷೇಕಮಂ ಸಂತತಂ
ಮಸಕದಿಂ ಮಾಳ್ಪರರೆಬರ್ ಪುಷ್ಪಮೆಂಟ[3]ಱಿಂ ಪೂಜಿಸುತೆ ಮಜ್ಜನವನು
ನಿಸದಮೆಸಗುವರರೆಬರತಿಭಕ್ತಿಯಿಂ ಧೂಪ
ವಿಸರಮಂ ಭಕ್ತರ್ಗೆ ಕುಡುತಿರ್ಪವರ್ ಕೆಲಬ
ರೊಸೆದು ಕೈಯಿಂದೆ ನೀರಾಜನಂಗಳ ಭಕ್ತತತಿಗೆತ್ತುವರ್ ಕೆಲಬರು ೨೪

ಪರಮಾನ್ನ ಪಂಚಭಕ್ಷ್ಯಾದಿಗಳ ಭಕ್ತರ್ಗೆ
ಕರೆದೀವವರ್ ಕೆಲರ್ ಕರ್ಪೂರಮುಖ್ಯಮಾ
ದುರುಪರಿಮಳಂ[3]ಬೆ[3]ರೆದ ವೀಟಿಕೆಗಳಂ ಭಕ್ತವರರ್ಗೆ ಕುಡುವರ್ ಕೆಲಬರು
ಹರಿಸದಿಂ ನಾಲ್ಕುಜಾವಂಗಳೊಳ್ ಮನವೊಸೆದು
ಪರಶಿವನನರ್ಚಿಸುವವರ್ ಕೆಲಂಬರ್ ಮನೋ
ಹರಮಾದ ಜಾವಂಗಳೆಂಟಱೊಳ್ ಗಿರಿಶನಂ ನಲಿದರ್ಚಿಪರ್ ಕೆಲಬರು ೨೫

ಮನದೊಳಗೆ ಸಂಕಲ್ಪಮಂ ಸಮೆದುಕೊಂಡು ಸೊಂ
ಪೆನಿಸುವಷ್ಟೋತ್ತರ ಶತಾವಸರ ನಿಕರಮಂ
ವಿನಯದಿಂದೀಶಂಗೆ ಮಾಡುತಿರ್ಪರ್ ಕೆಲಬರೇಕಾಗ್ರಚಿತ್ತದಿಂದಂ

---

[1] ನವು (ಕ) [2] ಬಳಿಕ (ಕ) [3] ಬೆ (ಕ)

ಮನಸಿಜಾರಿಯನರ್ಚಿಪರ್ ಕೆಲಬರೆಡೆವಿಡದೆ
ನನಸಿನಿಂದಂ ಶಂಕರನನರ್ಚಿಪರ್ ಕೆಲರ್
ಘನಷೋಡಶೋಪಚಾರಂಗಳಿಂದರ್ಚಿಸುವರರೆಬರಾ ಪರಶಿವನನು ೨೬

ಕರಮೆ ಋಗ್ವೇ[1]ದಾದಿಪದ[1]ಸೂಕ್ತಿನಿಕರದಿಂ
ದುರುತರ ಬ್ರಾಹ್ಮಣದ ಕಡೆಯ ಸೂಕ್ತಿಗಳಿಂದೆ
ಪರಮ ರುದ್ರಸ್ತವದ ಸೂಕ್ತಿಸಂದೋಹದಿಂದೀಶನಂ ನುತಿಸುವವರು
ಅರೆಬರ್ ಸಮಂತು ಶತರುದ್ರದೊಡೆವೆರೆದ ನುತಿವಿ
ಸರದಿಂ ಗಿರೀಶನಂ ಪೊಗಳುತ್ತೆ ಲಿಂಗಾರ್ಚ
ನಂಗೆ[2]ಯ್ವುತಾನಂದದಿಂ ಶಿವನನೊಡವೆರೆದ[2] ಲಸಿತಭಕ್ತರ್ ಕೆಲಬರು (?) ೨೭

ವರ ಸಾಮದೊಳಗಿರ್ದ ರುದ್ರಸೂಕ್ತಂಗಳಿಂ
ಹರನ ನುತಿಸುತ್ತರ್ಚಿಸುತ್ತಿರ್ಪವರ್ ಕೆಲರ್
ನಿರುತದಿನಥರ್ವ ಶಿರಸಾದಿ ರುದ್ರಸ್ತವಂಗಳನೋದುವರ್ ಕೆಲಬರು
ಉರು ರುದ್ರಕವಚಮಂ ಶಾರಭಮನೆಯ್ದೆ ಬಂ
ಧುರಬಾಣಗದ್ಯಮಂ ವ್ಯಾಸಾಷ್ಟಕಮನೆಸೆವ
ಪಿರಿದುಂ ಗಣಾಡಂಬರಾದಿ ನುತಿವಿಸರಮಂ ಪಠಿಸುತಿರ್ಪರ್ ಕೆಲಬರು ೨೮

ವರ ಪುರಾತನಗೀತನಿಕರಂಗಳಂ ಮತ್ತೆ
ಹರಿಸದಿಂದಱುವತ್ತುಮೂವರ ಚರಿತ್ರಮಂ
ಸಕಳ ಬಸವಪುರಾಣಕಥೆಗಳಂ ಪ್ರೀತಿಯಿಂದೋದುವರ್ ಪಲಕೆಲಬರು
ಪರಮ ಬಸವೇಶ್ವರಂ ಪೇಳ್ದ ಗೀತಂಗಳಂ
ಸರಸಗಾನಂಗಳಿಂ ಪಾಡುತಿರ್ಪರ್ ಕೆಲಬ
ರಿರದೆ ಮಲ್ಲಯ್ಯ ಮಲ್ಲಯ್ಯ ಎಂದತಿಭಕ್ತಿಯಿಂದೆ ನು[3]ಡಿವರ್[3] ಕೆಲಬರು ೨೯

ಸಲೆ ಉಘೇ ಜಯ ಜಯ ಎನುತ್ತೆ ಘೋಷಿಸುತೆ ಮ
ತ್ತೊಲೆದಾಡುವರ್ ಕೆಲರ್ ಪಡಿಹಾಱುಗಳ ತೆಱದಿ
ನಲಿದುಗ್ಘಡಿಸುತೆ [4]ಚಾಗುರೆ ಚಾಂ[4]ಗು ಭಲರೆನುತ್ತಿರ್ಪವರ್ ಪಲಕೆಲಬರು
ಕೆಲಬರತಿಭಕ್ತಿಸಂತೋಷದಿಂ ಗದ್ಗದಂ
ಗಳದೊಳೊಗೆಯಲ್ ಮಾತುಬಾರದತಿಮೌನದಿಂ
ದಲರುತಿರ್ಪರ್ ಕೆಲಬರಾನಂದಜಲದೊಳಗೆ ನಾಂದಿರ್ಪವರ್ ಕೆಲಬರು ೩೦

---

1 ದದಾದಿಪ (ಟ) 2 ಯ್ವು... (ಟ) 3 ತಿರ್ಪರ್ (ಕ) 4 ಜಾಗುರೆ ಜಾ (ಕ) ಬಾಗುರೆ ಬಾಂ (ಗ)

ಕೆಲಬರತಿಹರ್ಷದಿಂ ವಿವಿಧಗತಿಗಳ್ವೆರಸು
ನಲಿದು ನಾನಾರೀತಿಯಿಂದೆ ನರ್ತಿಸುವವರ್
ಕೆಲಬರತ್ಯಂತಭಕ್ತ್ಯಾವೇಶದಿಂದೆ ತಮ್ಮಂಗಮಂ ಮಱೆದಿರ್ಪರು
ಕೆಲಬರತಿಮೋದದಿಂ ಕೈಪಱೆಗಳಿಕ್ಕುತ್ತೆ
ಸುಲಭದಿಂ ಱುಂಗಣಂಗುಣಿದಾಡುವರ್ ಕೆಲಬ
ರಲರುತ್ತೆ ತಂತಮ್ಮ ದೇಶಭಾಷೆಗಳಿಂದೆ ಪಾಡುತಾಡುತ್ತಿರ್ಪರು ೩೧

ಸಿರಿಯಾಳಚರಿ[1]ತೆಯಂ[1] ಕೇಳುತಿರ್ಪರ್ ಕೆಲರ್
ಧರಣಿಪನ ಚೇರಮನ ಚಾರಿತ್ರಮಂ ಕೇಳು
ತಿರುತಿರ್ಪವರ್ ಸ್ತಂಭಸೂತ್ರದಾಟಂಗಳಂ ನೋಡುತಿರ್ಪರ್ ಕೆಲಬರು
ಹರಿಸದಿಂದಿಂತು ಜಾಗರಣಗೆಯ್ಯಲ್ ಸಬ್ಬ
ಪರಿಸೆಯಿದನೀಕ್ಷಿಸಲ್ ಕಿನ್ನರಪ್ರಭೃತಿಗಳ್
ಪಿರಿದು ಮೆಯ್ಗರೆದೆಯ್ದೆ ನೋಡುತಿ[2]ರ್ದರ್[2] ಪರಿಸೆಯೊಳಗೆ ತಾವರೆಬರಾಗಿ ೩೨

ಪಿರಿದು ಮತ್ತಲ್ಲಿ ಬಹುವಿಧ ರಸೋಪೇತಮಾ
ದುರುತರೋನ್ನತ ನರ್ತನಂಗಳಂ ರಚಿಸಲಾ
ಪರಿಷಜ್ಜನಂ ಕೀರ್ತಿಪಂತಾಡುತಿರ್ಪರರೆಬರ್ ಮತ್ತೆ ಸಂತೋಷದಿಂ
ಕರಮೆ ನಾನಾದೇಶದೊಳ್ ಮೆಱೆವ ನಾಟಕ
ಕ್ಕಿರದೆಸೆವ ನೈಪಥ್ಯನಿಕರಂಗಳಂ ತೊಟ್ಟು
ಪರಿಪರಿಯ ನೃತ್ಯಂಗಳಂ ಮಲ್ಲಿಕಾರ್ಜುನನ ಸಭೆಯೊಳಾಡುವರರೆಬರು ೩೩

ಹ[3]ರಿಸ[3]ದಿಂ ಭೃಂಗೀಶ್ವರನೆ ಶಿವನ ಸೇವಿಸಲ್
ಭರದಿಂದೆ ಮೆಯ್ಗರೆದು ಬಂದು ಮತ್ತಲ್ಲಿ ಭಾ
ಸುರ ಶಿರಃಕಂಠಕರ್ಣಂಗಳೊಳ್ ಶಿಖಿಗಳೊಳ್ ಪಾದಯುಗ್ಮಂಗಳಲ್ಲಿ
ಕರಮೆಸೆವ ಘೋಣಾಗ್ರದೊಳಗೆ ಬೆಳ್ಗವಡೆಗಳ
ಧರಿಸಿ ಕಣ್ಣಡಕಂಗಳಂ ತಾಳ್ದು ಮತ್ತೆ ಸುರು
ಚಿರ ವರಾಟಂಗಳಿಂ ಸಮೆದ ದಂಡೆಗಳನಳಿಕಾಗ್ರದೊಳ್ ತಳೆದು ಮತ್ತಂ ೩೪

ಭಸಿತಮಂ ಮೈತುಂಬಿ ಧರಿಸಿ ಮತ್ತದಱ ಮೇ
ಲೆಸೆವಂತೆ ಬಹುವರ್ಣಮಂ ಬರೆದುಕೊಂಡು ರಾ
ಜಿಸುವ ಚೀನಾಂಬರದೊರೇರುಕಮನುಟ್ಟು ಪೂಮಾಲೆಗಳ [4]ತಾಂಗಿ[4]ಕೊಂಡು

---

[1] ತಮಂ (ಕ) [2] ರ್ಪರ್ (ಗ) [3] ರುಷ (ಗ) [4] ತಾಳ್ದು (ಕ)

ಮಿಸುಪ ಪಲ್ಗ ದಿರ್ಗಡಣಮಾ ಸಭೆಯ ಮೇಲ್ಪರಿಯೆ
ಪುಸಕದಿಂದಟ್ಟಹಾಸಂಗೆಯ್ಯುತೊರ್ವ ಶೋ
ಭಿಸುವ ಭೃಂಗಿಯು ತೆಱಿದೆ ಮಲೆಯುತ್ತೆ ಪೊಕ್ಕನಾ ಸಭೆಯನತಿಸಂಭ್ರಮದೊಳು ೩೫

ಅನುಕೂಲ ವಾದ್ಯಪರಿಮೇಳನಂ ದನಿಗುಡಲ್
ಮಿನುಪ ಜವನಿಕೆ ಮೆಲ್ಲನೋಸರಿಸೆ ನರ್ತನವ
ನನುಗೊಳಿಪುದರ್ಕೆ ಮುನ್ನಭಿನಯಂ ನೋಳ್ಪರ್ಗೆ ಬಿಸವಂದಮಂ ಪುಟ್ಟಿಸೆ
ನನಸು ಬಿಂಕದೆ ಗಾಡಿ ಮಿಗೆ ನಿಲುತೆ ಸಭೆಯನಂ
ತನುನಯದೆ ನಿಟ್ಟಿಸುತೆ ದರಹಾಸಮುಖನಾಗು
ತೆನಸುಮಂಗಸ್ಪಂದನಂಗಳಂ ಗತಿಗಳಂ ತೋಱುತ್ತೆ ಮತ್ತಮೊಸೆದು ೩೬

ಮಿಸುಪ ಪುರ್ಬುಗಳಿಂದೆ ನರ್ತನಮನೆಸಗುತ್ತೆ
ನಿಸದಂ ಕಟಾಕ್ಷದೃಷ್ಟಿಗಳಿಂ ಕಳಾಸಮಂ
ಸಸಿನೆ ತೋಱುತ್ತೆ ಚಿತ್ತೋಲ್ಲಾಸದಿಂ ರಂಜನೆಯನುಂಟುಮಾಡುತನಿಶಂ
ಒಸೆದಂಗುಲಿಸ್ಫೋಟನಂಗೆಯ್ವುತೊಲ್ದು ನಿ
ಪ್ಪಸರದಿಂ ತಲೆಯ ತೊನೆಯುತ್ತೆ ಪದಗತಿಗಳಂ
ಪೊಸತಪ್ಪ ಲಾಗು ಪಂಜಳ ತಿರುಪು ಮೊದಲಾದ ಬಹುಗತಿಗಳಂ ಬೀಱುತೆ ೩೭

ಮಿಸುಪ ದೇಹಸ್ವರಂಗಳ ವಂಚನೆಗಳನಂ
ತೊಸೆದು ಕಾಣಿಸುತೆ ತಾಳಾದಿ ವಾದ್ಯಂಗಳೊಳ
ಗೆಸೆವ ಶಬ್ದಾನೀಕಮಂ ಪಾದತಳದಿನಭಿನಯಿಸಿ ತೋಱಿಸುತೆ ಮತ್ತಂ
ಮುಸಕದಿಂ ಲಾಸ್ಯಮಂ ಶ್ರುತಿಗಳನುಕೂಲದಿಂ
ದಸವಸಂದೋಱುತ್ತೆ ಮತ್ತೆ ನಾನಾದೇಶ
ವಿಸರದಾಟಂಗಳಂ ತೋಱಿಸುತ್ತಾ ಭೃಂಗಿ ಶಿವಲೀಲೆಗಳ[1]ನೆಸಗಿದಂ[1] ೩೮

ಮನಸಿಜನ ಶಂಭು ಸುಟ್ಟಂದಮಂ ತೋಱಿದಂ
ಮುನಿಸಿನಿಂ ಬಾನ್ಪೊಳಲ್ಗಳ ದಹಿಸಿದಂದಮಂ
ಕನತಿಭಾಸುರನ ಸೀಳ್ದಂದಮಂ ಗಿರಿಸುತೆಗೆ ಮೆಯ್ಯರೆಯನಿತ್ತಂದಮಂ
ವನಜಭವನಗ್ರಶಿರಮಂ ಕಿಳ್ತ ಪರಿಯನಂ
ತನುವಿನಿಂ ದಕ್ಷಮುಖಮಂ ಕಿಡಿಸಿದಂದಮಂ
ವಿನಯದಿಂದಿವುಮೊದಲ್ಗೊಂಡು ಶಿವಲೀಲೆಗಳನಾಡಿದಂ ಭೃಂಗೀಶ್ವರಂ ೩೯

---

[1] ನಟಿಸಿದಂ (ಗ)

ಉರುತರ ಬ್ರಹ್ಮವೀಣಾಕಾಶವೀಣೆಗಳ್
ಕರವೆಸೆವ ಸಾರಂಗವೀಣೆ ಗೌರೀವೀಣೆ
ಸರಳಕೈಲಾಸವೀಣಾ ಬಾಣವೀಣೆಗಳ್ ಸರವೀಣೆ ಕಮಲವೀಣೆ
ವರ ಕೂರ್ಮವೀಣೆ ಕಿನ್ನರವೀಣೆ ಮತ್ತೆ ವಿ
ಸ್ಫುರಿತ ರಾವಣವೀಣೆ ಮೊದಲಾದ [1]ವೀ[1]ಣೆಕಾ
ಱರ ನಡುವೆ ಮೈಗರೆದು ಬಂದಿರ್ದ ಕಿನ್ನರರ್ ಸೇವಿಸಿದರಾ ಶಂಭುವಂ ೪೦

ವಿನುತ ಠವಣಾಂಗಂಗಳಂ ತೋಱುತ್ತೆ ತೊ
ಟ್ಟನೆ ಶಿವನ ಸಮ್ಮುಖದೊಳತಿಭಕ್ತಿಯಿಂದಿರ್ಪ
ಮಿನುಪ ಮದ್ದಳೆ[2]ಕಾ[2]ಱರೊಳಗೆ ತಾನೊರ್ವನೆಂಬಂತೆ ಮೈಗರೆದು ಮುದದಿಂ
ಘನನಂದಿಕೇಶ್ವರಂ ಬಂದು ಸಮಹಸ್ತಮೆಂ
ಬನುಪಮಸುಹಸ್ತಾದಿ ವಾದ್ಯಹಸ್ತಂಗಳಿಂ
ದೆನಸುಂ ಚಮತ್ಕೃತಿಯ ಬೀಱುತ್ತುಮಾಶನಂ ಸೇವಿಸಿದನಳ್ತಿಯಿಂದಂ ೪೧

ಕರವೆಸೆವ ಚಂಚತ್ಪುಟಾದಿಯಾಗಿರ್ಪ ಸುಂ
ದರಮಾದ ನೂಱಿಱಂಟುತಾಳಂಗಳಿಂದೆ ಭಾ
ಸುರತರಜ್ಯೋತಿವಾಸಾದಿಯಾಗಿರ್ಪ ಪದಿನೆಂಟುವಾಸಂಗಳಿಂದಂ
ನಿರುತ ಮಾಲಾಪಾನುಜಾಯಿ ಮೊದಲಾದುಚ್ಚ
ತರವೆನಿಪ ಗತಿಗಳಿರ್ಪತ್ತೆರಡಱಿಂ ಮತ್ತೆ
ಸರಿಗಮಪದನಿಯೆಂಬ ವರ್ಣಂಗಳಾರೋಹಣಾವರೋಹಣದೆ ಮತ್ತಂ ೪೨

ಉರುತರ ವ್ಯಸ್ತಮುವ್ಯಸ್ತಮೆಂದೆಸೆವ ಬಂ
ಧುರಚಕ್ರವಾಲಸಂಪತ್ತಿಯಾಗಿರ್ಪ ಸುರು
ಚಿರತರಾಲಾಪಂಗಳೇಳಱಿಂದೊಂದೂನಮಾಗೆಸಗುವೈವತ್ತಱ
ನಿರುತಸಂಖ್ಯೆಯೊಳೆಸೆವ ಹಂಸನಾದಂಗಳಿಂ
ಪಿರಿದು ಷಡ್ಜಾದಿಸ್ವರಂಗ[3]ಳೊಳಗಿರ್ಪ[3] ಸುಂ
ದರತರ ದ್ವಾವಿಂಶತಿಶ್ರುತಿಗಳಿಂ ಶ್ರುತಿಗಳೊಡನೆಸೆವ ಗಮಕಂಗಳಿಂ ೪೩

ಪಿರಿದುಂ ಕ್ರಿಯಾಂಗದಿಂದಂ ಮತ್ತುಪಾಂಗದಿಂ
ಪರಮಭಾಷಾಂಗ ರಾಗಾಂಗಂಗಳಿಂ ಮಗುಳ್ದು
ಕರವೆಸೆವ ಷಡ್ಜಮುಖ್ಯಗ್ರಾಮಸಂದೋಹದಿಂ ಜನಿಸಿ ತೊಳಗುತಿರ್ಪ

---

[1] ಬೀ (ಟ)   [2] ಗಾ (ಗ)   [3] ಳಿಂದಿರ್ಪ (ಕ)

ಸರಸರಾಗಾನೀಕಮಧ್ಯದೊಳ್ ಶ್ರುತಿ ಗಮಕ
ಸುರುಚಿರ ಸ್ವರಸಂಭವಂಗಳೆನಿಸುವ ಮನೋ
ಹರತರ[1]ಶ್ರೀರಾ[1]ಗಮಾದಿಯಾಗೆಸೆವ ನೂತನ ಲಲಿತರಾಗಂಗ[2]ಳಂ[2] ೪೪

ಮಿನುಪ ಬೊಂಬಾಲನಾರಾಟಂಗಳಾದಿಯಾ
ಗನವರತ ಶೋಭಿಸುವ ನಾಲ್ಕುಶಾರೀರಂಗ
ಳನುವಿನಿಂ ಮೆಱೆಯೆ ತನುವಕ್ಷಮಾ ನಾಸಿಕಂ ಕಂ[3]ಠೋದ[3]ರಂಗಳೆಂಬ
ಕೊನರ್ವೈದುತಾಣಂಗಳೊಳ್ ಜಾನಿಸುತ್ತೆ ತೊ
ಟ್ಟನೆ ಮಂದ್ರಮಧ್ಯತಾರಂಗಳಿಂದೆಸೆವ ಸೊಂ
ಪಿನ ಮೂಱುಗಾಮಂಗಳಂ ಸೇರಿ ಮಾಧುರ್ಯ ಮಾರ್ದವಾದಿಗಳಿನೊಸೆದು ೪೫

ಕಡುಸೊಗಸಿನಿಂ ಪಾಡುತಿರ್ಪ ನರಗಾಯಕರ
ನಡುವೆ ಗುಪ್ತಾಕಾರದಿಂದಾರುಮಱಿಯದಂ
ತೊಡನಿರ್ದು ತುಂಬುರಾದಿಗಳೊಸೆದು ಶಿವನ ಸೇವಿಸುತಿರ್ದರತಿಭಕ್ತಿಯಿಂ
ಪಡಪಿನಿಂ ರಂಭಾದಿ ಸುರನರ್ತಕಿಯರೆಯ್ದಿ
ಸಡಗರದಿನಿಲ್ಲಿಯಾಡುತ್ತಿರ್ಪ ನಚ್ಚಣಿಯ
ರೊಡವೆರೆದು ನರ್ತಿಸುತ್ತಿರ್ದರೀಶನ ಸಭಾಗ್ರದೊಳೆಂತೆನಲ್ ಪೇಳ್ವೆನು ೪೬

ಸರಸ ಗೀತಾಂಗರೇಖೆಗಳುಮಂತೆಯ್ದೆ ಸುರು
ಚಿರಮುಖಾಂಬುರುಹ ರಾಗಾಂಗ ರಾಗಂಗಳುಂ
ಪಿರಿದುಮಾವರ್ತನಂ ಗ್ರಹಗತಿಯುಮೆಯ್ದೆ ಲವಣಿಯುಮಣಿಯರಂ ಶೋಭಿಪ
ವರ ದೇಶಿಕಾತರಂಗತಿಯಂಸಗತಿ ಮತ್ತೆ
ಗುರುಕಳಾಸಂಭ್ರಮದಿಯುಲ್ಲಾಸಮಂತೆಸೆವ
ಪರಮ ಸೌಷ್ಠವ ಸಾವಧಾನಾದಿ ವಿಲಸಚ್ಚಮತ್ಕಾರಮಂ ತೋಱುತೆ ೪೭

ಪಿರಿದು ಮುಖಚಾರಿ ಲಳಿ ಡಿಳ್ಳಾಯ್ತು ಚಾಳಿ ವಿ
ಸ್ತರವಿಭ್ರಮೊಯ್ಯಾರ ಮುಖ್ಯಂಗಳುಂ ಮನೋ
ಹರಮಾಗಿ ಶೋಭಿಸಲ್ ನಾಲ್ಕುತೆಱದಿಂದೆಸೆವ ಮುಖವಿಭ್ರಮಂಗಳೊಪ್ಪೆ
ಕರದು ಸಪ್ತಪ್ರಕಾರಂಗಳಿಂದಂ ಮಿಱುಪ
ಸುರುಚಿರಭ್ರೂಲತೆಯ ಚಲನಂಗಳೊಪ್ಪೆ ಭಾ
ಸುರನೇತ್ರದಿಂ ತೋಱುತಿರ್ಪ ಷಡ್ವಿಂಶತಿವಿಧಾಮಲ ವಿಲಾಸಂಗಳಿಂ ೪೮

---

1 ಗ್ರೀವಾ (ಕಗ)  2 ಳಿಂ (ಕ)  3 ಠದೋ (ಕ)

ಮಿನುಗುತ್ತೆ ಷಟ್ಪ್ರಕಾರದೆ ತೋರ್ಪ ನಾಸಿಕದ
ವಿನುತ ಕುಂಚಿತದಿಂದೆ ದಶವಿಧದಿನೆಸೆವ ನೂ
ತನವಾದ ಕರ್ಣಾವಧಾನದಿಂ ನವವಿಧದ ಕಂಧರೋಲ್ಲಾಸಂಗಳಿಂ
ನನಸು ಮೂದೆಱನಾದ ವಕ್ಷೋವಿಲಾಸದಿಂ
ದೆನಸುಮಾ ಪಾದದ್ವಯನ್ಯಾಸಪಂಚಕದೆ
ವಿನಯದಿಂದೆಸಗುವಿಪ್ಪತ್ತೆರಡುತಾನಕಂಗಳಿನಾವಗಂ ಶೋಭಿಸ ೪೯

ನಿರುತ ಸಮಭಂಗಿ ತ್ರಿಭಂಗಿಗಳಿನೆಸೆವ ವಿ
ಸ್ಫುರದಂಗಹಾರಂಗಳಿರ್ಪತ್ತಱಿಂ ಮತ್ತೆ
ಭರದಿನಿರ್ಪತ್ತೆರಡು ಚಾರಿಗಳಿನಾ ದೃಷ್ಟಿಭೇದಂಗಳವು ಬಳಿಕ್ಕಂ
ಪಿರಿದು ಮೂವತ್ತಾಱಱಿಂ ಹಸ್ತಭೇದಂಗ
ಳಿರದೆಸಗುವಱುವತ್ತನಾಲ್ಕಱಿಂದಂ ಮತ್ತ
ಮುರುತರಭ್ರಮರಿಯೇ[1]ಳಱಿನವನಿಯೊಳ್ ನರ್ತಿಸುತ್ತಿರ್ದರಂತುಮಲ್ಲದೆ
ಮತ್ತೆಯುಂ (?) ೫೦

ಎಸೆವ ನೂಱೆಂಟುಕರಣಂಗಳಿಂದಂ ಮತ್ತೆ
ಮಿಸುಪಲಂಕಾರಂಗಳವು ನೂಱಱಿಂದೆ ಶೋ
ಭಿಸುವ ಪದಿಮೂಱು ಮಸ್ತಕಭೇದದಿಂದೆ ಮೂವತ್ತೆರಡು ದಂಡಣೆಗಳಿಂ
ನಿಸದಮಹಿ ಮಾತಂಗ ವೃಷಭ ಮರ್ಕಟ ಮೇಷ
ವಿಸರಂಗಳಾದಿಯಾ[2]ದಿ°ವಱ ಗತಿಗಳಿನೊಸೆದು
ಬಿಸವಂದದಿಂ ರಂಭೆ ಮೊದಲಾಗಿ ಎಸೆವಚ್ಚರಸಿಯರೆಲ್ಲರ್ ಮುದದೊಳು ೫೧

ನಿರುತದಿಂ ಪ್ರಚ್ಛನ್ನವೇಷದೊಳ್ ಬಂದಿಲ್ಲಿ
ಪಿರಿದು ನರ್ತಿಪ ನಚ್ಚಣಿಯರೊಗ್ಗಿನೊಳಗೆಯ್ದಿ
ಬೆರೆದು ಸಭೆಯೆಲ್ಲಮತಿಹರುಷ ಪಾರಾವಾರದೊಳ್ ಮಗ್ನಮಪ್ಪ ತೆಱದೆ
ವಿರಚಿಸುತೆ ನರ್ತನಂಗಳ ಮನೋಹರಮಾಗಿ
ವರ ಮಲ್ಲಿಕಾರ್ಜುನನ ಸೇವಿಸುತ್ತಿರ್ದರುರು
ತರಭಕ್ತಿಪೂರ್ವಕದಿನಿಂತು ಮತ್ತಲ್ಲಿ ಮೆಯ್ಗರೆದು ಸಂತೋಷದಿಂದಂ ೫೨

- ಮಿಸುಪ ಗೌತಮ ದಧೀಚ್ಯಾದಿ ಮುನಿವರರೆಲ್ಲ
ರಸವಸದಿನಾಚಾರ್ಯರೂಪದಿಂದಂ ಬಂದು
ನಿಸದಮಾ ಮಲ್ಲಿಕಾರ್ಜುನನ ಸೇವಿಸುತಿರ್ದರತ್ಯಂತಭಕ್ತಿಯಿಂದಂ

---

1 ಕ್ರಮಗಳೇ (ಕ) 2 ದ (ಕ)

ಮಸಕದಿಂದನ್ಯತಾಪಸರೊಗ್ಗಿನೊಳ್ ಬಂದು
ಪೊಸತಪ್ಪ ವೇಷದಿಂ ಭೃಗ್ವಾದಿ ಮುನಿವರರ್
ಶಶಿಧರನ ಮಲ್ಲಿಕಾರ್ಜುನಕೀರ್ತಿಯುತನ ಸೇವಿಸುತಿರ್ದರಳ್ಕಱಿಂದಂ ೫೩

ಉರುತರ ಪ್ರಮಥರಾ ಪುರದೊಳೊಪ್ಪಿರ್ಪ ಸುರು
ಚಿರಭಕ್ತಸಂದೋಹದೊಳಗಿರ್ದು ಸಂತತಂ
ವರ ಮಲ್ಲಿಕಾರ್ಜುನನ ಸೇವಿಸುತ್ತಿರ್ದರತಿಭಕ್ತಿಭರದಿಂದವೊಸೆದು
ಹರಿ ಸುರಜ್ಯೇಷ್ಠರಲ್ಲಿರ್ಪ ಪೂಜಕರಾದ
ವರ ತಪ[1]ಸ್ವಿ[1]ಗಳ ಮಧ್ಯದೊ[2]ಳಿ[2]ರ್ದು ಭಕ್ತಿಯಿಂ
ಕರಮೆಸೆವ ಮಲ್ಲಿಕಾರ್ಜುನನ ಸೇವಿಸುತಿರ್ದರತ್ಯಂತ[3]ಸಂತೋಷದಿಂ[3] ೫೪

ಪಡಪಿನಿಂದಿಭವದನ ಷಣ್ಮುಖರ್ ಧನಪತಿಗ
ಳೊಡವೆರೆದು ಶಿವನ ಪಾರ್ಶ್ವದೊಳಿರ್ದು ಸಂತಸದಿ
ನೆಡೆವಿಡದೆ ಮಲ್ಲಿಕಾರ್ಜುನನ ಸೇವಿಸುತಿರ್ಪರಾದಿತ್ಯಕುಮುದಸಖರು
ಉಡುಗಣಂ ಮೊದಲಾದವೆಲ್ಲಮತಿಶೋಭಿಸುವ
ಸೊಡರ್ಗಡಣದೆಡೆಯೊಳಿ[4]ರ್ದಭ[4]ವನಂ ಸಂತತಂ
ಕಡುಪಿನಿಂ ಸೇವಿಸುತ್ತಿರ್ಕುಮತ್ಯಂತಮಾನಂದಸಂದೋಹಂಗಳಿಂ ೫೫

ಎಸೆವ ಬಾಗಿಲ್ಗಾಪಿನವರ ಮಧ್ಯದೊಳಿರ್ದು
ಬಿಸವಂದದಿಂ ನಂದಿಯುಂ ಮಹಾಕಾಳನುಂ
ಮಸಕದಿಂ ಮಲ್ಲಿಕಾರ್ಜುನನ ಸೇವಿಸುತಿರ್ಪರಾನಂದದಿಂದಾವಗಂ
ಅಸವಸಂ ಛ[5]ತ್ರಧಾರಿ[5]ಗಳ ಮಧ್ಯದೊಳಿರ್ದು
ನಿಸದಮಿಂದ್ರಂ ಬೆಳ್ಗೊಡೆಯ ಪಿಡಿದು ಸೇವಿಸಂ
ಮಿಸುಗುವಡಬಳರ ನಡುವಿರ್ದಗ್ನಿಪಾಕಂಗಳಂ ಸಮೆಯುತೋಲೈಪನು ೫೬

ಮಿನುಗುವ ತಳಾಱರೊಡಗೂಡಿ ತೂಣಂ ಜಾಣ
ತನದಿಂದೆ ಬಂದು ಶಿವಸೇವೆಯಂ ವಿರಚಿಪಂ
ಮನವೊಲ್ದು [6]ಕೌ[6]ಣಪಂ ಪಡಿಹಾಱರೊಳ್ ಬೆರೆದು ಶಿವನ ಸೇವಿಸುತಿರ್ಪನು
ಅನುಲೇಪನಂಗೆಯ್ವವರ ಮಧ್ಯದೊಳ್ ವಾಸಿ
ಯನುಲೇಪನವನೊಡರ್ಚುವನನಿಲನಾವಗಂ
ಸನಯದಿಂ ಸಮ್ಮಾರ್ಜನಂಗೆಯ್ವುತೀಶನಂ ಸೇವಿಪಂ ಭಕ್ತಿಯಿಂ[7]ದಂ[7] ೫೭

---

1 ಸಿ (ಗ) 2 ಳಗಿ (ಗ) 3 ಭಕ್ತಿಯಿಂದಂ (ಕ) 4 ರ್ದುಅ (ಗ) 5 ತ್ರಾದಿ (ಕ)
6 ಕೋ (ಕ) 7 ದೆ (ಗ)

ಧನದನೊಸೆದಾವಗಂ ರಂಗವಲ್ಲಿಯ ರಚಿಪ
ಮನುಜರೊಳಗಿರ್ದು ರನ್ನದ ರಂಗವಲ್ಲಿಯುಂ
ಘನಹರ್ಷದಿಂ ಸಮೆಯುತಂ ಮಲ್ಲಿಕಾರ್ಜುನನ ಸೇವಿಸುತ್ತಿರ್ಪನಲ್ಲಿ
ಮಿನುಗುವೀಶಾನನೆಯ್ತಂದು ಸಂತೋಷದಿಂ
ದನುನಯಂ ಮಿಗೆ ನೃತ್ಯವಾಡುತೆಸೆದಿರ್ಪ ಸ
ನ್ಮುನಿವರರ ಮಧ್ಯದೊಳ್ ತಾಂಡವಮನೆಸಗುತ್ತೆ ಸಂತತಂ ರಾಜಿಸುವನು ೫೮

ಕವಿವರರ ಮಧ್ಯದೊಳ್ ಚಂಡಕೀರ್ತ್ಯಾದಿಗಳ್
ತವಕದಿಂ ಬಂದು ಪದ್ಯಾದಿಗಳಿನಾವಗಂ
ಶಿವನ ಪೊಗಳುತ್ತೆ ಸೇವಿಸುತಿರ್ಪರತ್ಯಂತಭಕ್ತಿಭರದಿಂ ಸಂತತಂ
ತವೆ ಬಾಣಮುಖ್ಯದೈತ್ಯಾಳಿ ಪೃಥ್ವೀಶ್ವರರ
ನಿವಹದೊಳ್ ಬೆರೆದು ನಿರ್ಭರಮುದದೊಳನಿಶಮುಂ
ಭವಹರನ ಮಲ್ಲಿಕಾರ್ಜುನನ ಸೇವಿಸುತಿರ್ಕುಮಾರ್ಗಂಜುಯಬಾರದಂತೆ ೫೯

ಉಳಿದ ಗಂಧರ್ವ ಯಕ್ಷಾದಿಗಳ್ ತಂತಮ್ಮ
ಲಳಿತಮಾಗೆಸೆವ ಮುನ್ನಿನ ಸೇವೆಗಳನೆಯ್ದೆ
ಗಳಗಳನೆ ಮಾಳ್ಪವರೊಳೊಡೆವೆರೆದು ತಾಮೊರ್ವರಾಗಿ ಸೇವಿಸುತಿರ್ಪರು
ತೊಳಪ ತದ್ಗಿರಿಯ ಸಾನುಗಳೊಳೊಪ್ಪುತ್ತಿರ್ಪ
ಲಳಿತಶೃಂಗಾಂತರ ನಿವಾಸಿಗಳ್ ತಾಮಾಗು
ತಳಘು ಗಿರಿಜಾಧಿಪನ ಮೇರುಮುಖ್ಯಾದ್ರಿಗಳ್ ಸೇವಿಸುತ್ತಿರ್ಪುವನಿಶಂ ೬೦

ನಿರುತಮಾ ಶೈಲದೊಳಗಿರ್ಪ ತರುಗಳೊಳವಿದು
ಸುರಭೂರುಹಂಗಳಲ್ಲಿರ್ಪ ಧೇನುಗಳೊಳಗೆ
ವರ ಕಾಮಧೇನುಗಳಡಂಗಿ ಶಿವನಂ ಸೇವಿಸುತ್ತಿರ್ಕುಮ[1]ನವರತವು[1]
ಸರಳ ಚಿಂತಾಮಣಿಪ್ರಭೃತಿಗಳ್ ತದ್ಗಿರಿಯೊ
ಳಿರದೆಸೆವ ಮಣಿದೋರಣಂಗಳೊಳ್ ಮೈಗರೆದು
ಗಿರಿಜಾಮನೋರಮಣ ಮಲ್ಲಿಕಾರ್ಜುನನ ಸೇವಿಸುತಿರ್ಕುಮತಿಶಯದೊಳು ೬೧

ಕಡುಮೆಱೆವ ಪಾತಾಳಗಂಗೆಯೊಳ್ ಮೈ[2]ಗರೆದು[2]
ಸಡಗರದೆ ಭಾಗೀರಥೀಮುಖ್ಯತೀರ್ಥಂಗ
ಳೆಡೆವಿಡದೆ ಮಲ್ಲಿಕಾರ್ಜುನನ ಸೇವಿಸುತಿರ್ಕುಮತ್ಯಂತಹರ್ಷದಿಂದಂ

---

1 ತಿಶಯದೊಳು (ಕ) 2 ಮಱೆದು (ಕಗ)

ಪಡಪಿನಿಂ ಸಪ್ತಾಂಬುನಿಧಿಗಳುಂ ಮತ್ತೆ ಸೊಂ
ಪಡರ್ದ ಸಪ್ತದ್ವೀಪನಿಕರಂಗಳುಂ ಬಂದು
ಬಿಡದೆಸೆಪ ತತ್ಪುರೀವೀಥಿಯೊಳಡಂಗಿ ಸೇವಿಸುತಿರ್ಕುಮಿಾಶ್ವರನನು ೬೨

ಭರದಿಂದೆ ತತ್ಪುರಪ್ರಾಕಾರರೂಪದಿಂ
ಕರವೆ ಮೂವತ್ತಾಱುತತ್ತ್ವನಿಕರಂಗಳುಂ
ಹರನನೋಲೈಸುತಿರ್ಕುಂ ಮನೋಮುದದಿಂದೆ ಮತ್ತಮಾ ಗಿರಿಯೊಳಿರ್ಪ
ವರ ಚರಾಚರನಿಕರಮುಂ ಸೇರಿ ಮೂಲೋಕ
ದುರುಚರಾಚರ ಪರಮವಸ್ತುಗಳ್ ಸಂತತಂ
ಗಿರಿಶನಂ ಮಲ್ಲಿಕಾರ್ಜುನಲಿಂಗನಂ ಸೇವಿಸುತ್ತಿರ್ಕುವತಿಭಕ್ತಿಯಿಂ ೬೩

ಇಂತು ಶಿವರಾತ್ರಿಜಾಗರಣೋತ್ಸವಮನೊಸೆದು
ಕಂತುಹರಮಲ್ಲಿಕಾರ್ಜುನನ ಸಮ್ಮುಖದಲ್ಲಿ
ಸಂತಸದಿನಾ ದೋನಮಾರ್ಯನುಂ ಪರಿಷಜ್ಜನಾನೀಕಮುಂ ಮತ್ತೆಯುಂ
ಸಂತತಂ ಪ್ರಮಥರುದ್ರರ್ ಮುನಿವರರ್ ಮುಖ್ಯ
ರುಂ ತವೆ ಸಮಸ್ತ ಸಚರಾಚ[1]ರಾನೀಕಮುಂ[1]
ಮುಂತುಗೊಂಡಾ ಪರ್ವತದೊಳಲ್ಕಱಿಂ ಸವೆದರತ್ಯಂತಭಕ್ತಿಯಿಂದಂ ೬೪

ಸದಮಲಪ್ರಚುರವಿಶ್ರುತ ಪರಮಭಕ್ತಗಣ
ಪದಸರೋರುಹಸಾಂದ್ರ ಮಕರಂದಪಾನ ಸ
ಮ್ಮದಿತ ಚಂಚಚ್ಚಂಚರೀಕನನವರತ ಪಂಚಾಕ್ಷರೀಪ್ರಸಿತಹೃದಯಂ
ವಿದಿತ ಮಂಜುಲನೀಲಕಂಠಾಹ್ವಯಂ ಮನೋ
ಮುದದೆ ಪೇಳ್ದುರುತರಾರಾಧ್ಯಚಾರಿತ್ರದೊಳ
ಗಿದು ಜಾಗರಣಮನಾ ದೋನಮಾರ್ಯಂ ಪರ್ವತದೊಳೊಡರ್ಚಿದ ಕಥನ[2]ವು[2] ೬೫

[1] ರನಿಕರಮುಂ (ಗ) [2] ಮಂ (ಕ)

# ಒಂಬತ್ತನೆಯ ಸಂಧಿ

## ದೋನಮಾರ್ಯನು ಕನಸಿನಲ್ಲಿ ಮಲ್ಲಿಕಾರ್ಜುನನಂ ಕಂಡುದು

ಸೂಚನೆ: ದೋನಮಾರ್ಯನ ಕನಸಿನೊಳ್ ಮಲ್ಲಿಕಾರ್ಜುನಂ
ಸಾನುರಾಗದೆ ಪರ್ವತದ ವೈಭವಮನುಸುರ್ದ
ನೂನಕಥನಂಗೇಳ ಸೂರಸಚಿವೇಂದ್ರ ನೀನೆಂದು ಸೋಮೇಶನೊರೆದಂ

ಕಮಲಾತ್ಮಜಘ್ನ ಕಮಲಾಕ್ಷ ಗೋಯುಕ್ತಪ
ತ್ಮಮಲಕಮಲಾ ಸುಹೃನ್ಮೌಲಿ ಸಂಸಾರಗದ
ಕಮಲ ಕಮಲಜಜಾತಮಸ್ತಕಚ್ಛೇದಕರ ದುರಿತಕರಿಹರಿಸದೃಕ್ಷಾ
ಕಮಲಾದ್ಯಗೋಪಗೋಪತಿವಂದ್ಯ ಪದಕಮಲ
ಕಮಲಸಖ ಕುಮುದಸಖ ವಾಯುಸಖನೇತ್ರ ಕಡು
ಮಮತೆಯಿಂ ರಕ್ಷಿಪುದು ಭಕ್ತಸಂದೋಹಮಂ ವಿಮಲಗುರುನೀಲಕಂಠ ೧

ಮಗುಳ್ದಿತ್ತ ಮುನ್ನೆ ಮಂದರನಗದ ಗುಹೆಯೊಳಗೆ
ಸೊಗಸಿನಿಂದಿರ್ದಾ ಸುಕೇಶಂಗೆ ಮುನಿಯೆ ತೊ
ಟ್ಟಗೆ ಶಂಭು ಕಿಸುಗಣ್ಣನೋಡೆ ಧರಣಿಯ ಮೇಲೆ ತಾಳಪರ್ಣ ಬೀಳ್ವಂದದಿಂ
ಮಿಗೆ ಬಿಳ್ದು ಪೊರಳುತ್ತೆ ಕಾಶಿಯಂ ಸೇರಿ ಸೊಂ
ಪೊಗೆವ ಬಾಲಾರ್ಕೇಶನಿಂ ಮುನ್ನಿನಂತೆ ಸೋ
ಜಿಗಮಾಗಿ ಭಾನುತ್ವಮಂ ಪಡೆದುದಂ ಜನರ್ಗೆ ತೋರ್ಪಂತೆ ರವಿ ಮೂಡಿದಂ ೨

ಅನಿತಱೊಳ್ ಪರಿಸಜ್ಜನಂಗಳತಿಮುದದಿಂದೆ
ಮಿನುಪ ಶಿವರಾತ್ರಿ ವೈಭವಮನೀ ಗಿರಿಯಲ್ಲಿ
ಮನಸಿಜಾಂತಕ ಮಲ್ಲಿಕಾರ್ಜುನನ ಸಮ್ಮುಖದೊಳಿರದೊಡರ್ಚಿದೆವಿಂದಿನ
ಘನ ರಾತ್ರಿಯೊಳಗೆಮ್ಮ ಭವರಾತ್ರಿ ಪಿಂಗಿತ್ತು
ಮೆನಸುಮಿನ್ನೇಳಿ ನಮ್ಮೂರ್ಗಳ್ಗೆ ಪೋಗವೇ
ಳ್ಕೆನುತಮೋರೋರ್ವರತಿಸಂಭ್ರಮದೆ ನುಡಿಯುತ್ತೆ ಪೊಱಮಟ್ಟರೊಸೆ[1]ದಾವಗಂ[1] ೩

---

[1] ದು ಬೇಗಂ (ಕ)

ಕೆಲಬರದಱಿಕೊಳಗೊಲ್ದು ಶಿಖರೇಶಲಿಂಗನಂ
ನಲಿದು ನೋಡಲ್ ಪೋದರರೆಬರಸವಸದಿಂದೆ
ಲಲಿತಪಾತಾಳಗಂಗಾಸ್ನಾನಮಂ ಮಾಡಲೆಯ್ದಿದರ್ ಮತ್ತರೆಬರು
ಒಲವಿನಿಂ ತಂತಮ್ಮ ನಗ[1]ರಂಗಳ್ಗೆ[1]ದಿದರ್
ಸುಲಭದಿಂದಂ ಪ್ರದಕ್ಷಿಣಮನೆಸಗ[2]ಲ್ಕೆ[2]ಲ್ಲಿ
ಕೆಲಬರಾ ಕಾಸಿಕಾಪುರಮನೊಸೆದೆಯ್ದಿದರ್ ಮತ್ತಲ್ಲಿ ಪಲಕೆಲಬರು ೪

ವರ ಮಲ್ಲಿಕಾರ್ಜುನ ವಸಂತೋತ್ಸವಂಗಂಡು
ಮರಳಿ ಪೋದಪೆವೆನುತ್ತುಳಿದರರೆಬರ್ ಮತ್ತೆ
ಹ[3]ರಿಸ[3]ದಿಂ ಪಂಚರಾತ್ರಂಬರೆಗಮಿಲ್ಲಿರ್ಪೆವೆನುತುಳಿದರತಿಭಕ್ತಿಯಿಂ
ಕರಮೆಸಗುವೀ ಪುರದೊ[4]ಳೇ ಇ[4]ರ್ಪೆವೆನುತೆ ಮ
ತ್ತರೆಬರ್ ವಿರಕ್ತಜನಮಲ್ಲಿ ನೆಲೆಗೊಂಡಿರ್ದ
ರುರುತರಪ್ರೀತಿಯಿಂದನಿತಱಿಕೊಳ್ ದೋನಮಾರ್ಯಂ ಪಂಚರಾತ್ರಂಬರಂ ೫

ಮಿನುಗುವಾ ಶ್ರೀಪರ್ವತದೊಳೊಲ್ದು ಭಕ್ತಿಮಿಗೆ
ಸನಯದಿಂದಿರುತೆ ಸೂರ್ಯೋದಯದ ವೇಳೆಯೊಳ
ಗೆನಸುಂ ಸಹಸ್ರಕಲಶೋದಕಂಗಳಿನೆಯ್ದೆ ಮಜ್ಜನಂಬುಗಿಸಿ ಶಿವನಂ
ವಿನಯದಿಂ ಮತ್ತೆ ಪಂಚಾಮೃತಸ್ನಾನಮಂ
ಘನಭಕ್ತಿಯಿಂದಂ ನಿಮಿರ್ಚಿ ಸಮನಂತರಂ
ವಿನುತೋಷ್ಣ ಸಲಿಲಂಗಳಿಂ ಗಂಧವಾರಿಗಳಿನೆಸಗಿದಂ ಮಜ್ಜನವನು ೬

ಎಸೆವ ಸೂಕ್ಷ್ಮಾಂಬರದಿನಾರ್ದ್ರಮಂದೊಡೆದು ಮ
ತ್ತೊಸೆದು ಸಿರಿಗಂಧದನುಲೇಪನಂಗೆಯ್ದು ಶೋ
ಭಿಸುವಂಬರಾದಿಭೂಷಣನಿಕರಮಂ ತುಡಿಸಿ ಗಂಧಪುಷ್ಪಾಕ್ಷತೆಗಳಂ
ನಿಸದಂ ಸಮರ್ಪಣಂಗೆಯ್ದು ಧೂಪಾದಿಗಳ
ನಸವಸದಿನಿತ್ತು ಭಕ್ಷ್ಯಾದಿಗಳನೊಡವೆರೆದು
ಮಿಸುಗುವುಪಹಾರಂಗಳಂ ಶಿವಂಗಿತ್ತು ಸದ್ಭಕ್ತಿಯಿಂ ಸಮನಂತರಂ ೭

1 ರಿಗಳ್ಗೈ (ಕ) 2 ಲ್ಕಿ (ಕ) 3 ರುಷ (ಗ) 4 ಳೆಯ್ದಿ (ಗ)

ಕರಮೆಸೆವ ಸದ್ಭಕ್ತವಿತತಿಗಿಷ್ಟಾನ್ನಸಂ
ಹರಿಸ[1]ದಿಂದಂ ಸಮರ್ಪಿಸಿ ಬಳಿಕ್ಕೊಲ್ದು ಸುರು
ಚಿರಹಿಮಾನ್ವಿತ ವೀಟಿಕೆಗಳನವರ್ಗಿತ್ತು ಪುಷ್ಪಾಂಜಲಿಯನೆಸಗಿ ಬಳಿಯಂ
ಸರಳ ಪ್ರದಕ್ಷಿಣಂಗಳ ಪಲವುಸೂಳ್ಮಾಡಿ
ಹರಶರಣರಂ ಬಹುವಿಧದೆ ನುತಿಸುತನಿತಱಿಂಶೊಳ್
ಭರದೆ ನಯನಂಗಳಂ ಮುಚ್ಚಿ ದೋನಮರಾಜನೆಸೆವ ಕನಸಿನ ತೆಱದೊಳು ೮

ನಿರುತದಿಂ ವೃದ್ಧಮುನಿರೂಪದಿಂ ಶಂಕರಂ
ವರ ಮಲ್ಲಿಕಾರ್ಜುನಂ ದೋನಮಾರ್ಯನ ಭಕ್ತಿ
ಭರಕೆ ಸಂತುಷ್ಟನಾಗೆಯ್ದಿದಂದದೆ ಬಂದು ನಿಂದುದಂ ಕಂಡು ಮುದದೆ
ಪಿರಿದು ಸದ್ಭಕ್ತಿಯಿಂ ವಂದನಂಗೆಯ್ದು ಮು
ತ್ತಿರದೆ ಬೆಸಗೊಂಡನಾ ದೋನಮಾರ್ಯಂ ಮನೋ
ಹರಮಾಗಿ ತನ್ನೊತ್ತಿನೊಳಗಿರ್ದ ತನ್ಮುನಿಯನೆಲೆ ಮುನೀಶ್ವರ ನಿಮ್ಮಯ ೯

ಪುರಮಾವುದೆಲ್ಲಿರ್ದು ಬಂದಿರೀಗಳ್ ಮತ್ತೆ
ಕರಮೆಸೆವ ನಿಮ್ಮ ಪೆಸರಾವುದೆನೆ ಶಂಕರಂ
ಕರುಣದಿಂ ನುಡಿದನೆಲೆ ದೋನಮಾರ್ಯಾ ಮಿನುಗುವೀ ಪರ್ವತಾಶ್ರಮದೊಳು
ಗಿರಿಗುಹೆಗಳೊಳ್ ಮತ್ತೆ ನಾನಾ ಬಿಲಂಗಳೊಳ್
ಚರಿಯಿಸುತ್ತಿರ್ಪೆವೀ ಶಿವರಾತ್ರೆಯುತ್ಸವನು
ನಿರದೆ ನೋಡಲ್ ಬಂದೆವೆಂದು ಪೆಸರೊಪ್ಪುಗುಂ ಭೂಮಿಯೊಳ್ ಪರಿಭಾವಿಸೆ ೧೦

ನಿರುತದಿಂ ಸರ್ವಜ್ಞ ಮಲ್ಲಿಕಾರ್ಜುನನೆಂದು
ಕರಮೆಸೆವ ಲೋಕೈಕ ಭಕ್ತದೇಶಿಕನಪ್ಪ
ಗುರುಪಂಡಿತೇಶ್ವರಂ ಕ್ಷೇಮದಲ್ಲಿರ್ದಪನೆ ಮುನ್ನೆಮಗೆ ಪರಮಸಖನು
ವರ ಪಂಡಿತಾರಾಧ್ಯನೆನೆ ದೋನಮಾರ್ಯನುರು
ತರಭಕ್ತಿಯಿಂ ವಂದನಂಗೆಯ್ದು ತನ್ಮುನಿಗೆ
ಕರಕಮಲಮಂ ಪಣೆಯೊಳಿಟ್ಟು ಬಿನ್ನೈಸಿದಂ ಸರ್ವಜ್ಞಮೂರ್ತಿ ನೀನು ೧೧

ಮಿಸುಗುವೀ ಗಿರಿಯೊಳಚ್ಚರಿಗಳೇನುಂಟು ಮು
ತ್ತೊಸೆದು ನೀನಱಿದುವೆಲ್ಲವನೆನಗೆ ಪೇಳಿಮೆನೆ
ಮುಸಕದಿಂದಾ ತಾಪಸಂ ದೋನಮಾರ್ಯನಂ ಕರೆದೊಯ್ದು ತಪ್ಪಲದ

---

1 ರುಷ (ಗ)

ಪೊಸತಪ್ಪ ಬಿಲ್ವವನದೊಳಗಿರ್ಪುದೊಂದು ರಾ
ಜಿಸುವ ಶೈಲಾಗ್ರದೊಳ್ ದೀಪಭೂರುಹವದಱಿಂ ಹೊ
ಳೆಸೆವ ಕೊನೆಗೊಂಬನೇಱಿಸಿ ದೋಣವಾರ್ಯನಂ ಪ್ರೀತಿಯಿಂ ಪುತ್ರಾತನ ೧೨

ಶಿರದೊಳ್ ಮುನೀಶ್ವರಂ ತನ್ನ ಕೈಯಿಡೆ ಮತ್ತೆ
ಸಿರಿಗಿರಿಯೊಳೆಸೆದು ಕಾಣಿಸದಿರ್ದುವೆಲ್ಲವುಂ
ಕರತಲದೊಳಿರ್ಪಾಮಳಕದಂತೆವೊಲ್ ಜಲಕ್ಕನೆ ತೋಱಿ ದೋಣವಾರ್ಯಂ
ಪಿರಿದು ಬಿಸವಂದವಂ ತಾಳ್ದು ತನ್ಮುನಿಯ ಪದ
ಸರಸೀರುಹಕ್ಕೆ ವಂದಿಸಿ ಎ[1]ಲೇ[1] ಜತಿಯೆಱಿಯ
ಕರವೆಸೆವ ನಿಮ್ಮ ಕೃಪೆಯಿಂದವಿಾ ಗಿರಿಯೊಳಿರ್ಪೆಲ್ಲವಂ ಕಂಡೆನೊಸೆದು ೧೩

ಎನೆ ನುಡಿದನಾ ಮುನಿಪನಿತ್ತ ನೋಡಾ ತೋರ್ಪ
ಘನತರ ಪ್ರಾಕಾರದಿಂದೆಸೆವ ಗೋಪುರದ
ಕನಕ ಕಲಶಂಗಳಿಂ ತುಱುಗಿರ್ಪ ಮಲ್ಲಿಕಾರ್ಜುನಸಭಾಮಂಟಪವನು
ಎನಸುಮಾ ಕ್ಷೇತ್ರದೊಳ್ ಪಜ್ಜಳಿಸುತಿರ್ಪ ನೂ
ತನ ಪರಮಭಕ್ತರಂ ನೋಡು ಮತ್ತಿತ್ತ ಸೊಂ
ಪಿನ ವೀರಭಕ್ತಕೋಟಿಗಳಿರ್ಪ ಹಾಟಕೇಶ್ವರಮನತಿಭಕ್ತಿಯಿಂದಂ ೧೪

ಪಿರಿದಲ್ಲಿ ತೋರ್ಪ ಶಿವರಾತ್ರಿಯಪ್ಪಯ್ಯನಂ
ನಿರುತಮಾ ವೀರಶಂಕರದೇವನಂ ಮುಗುಳ್ದು
ವರ ವೀರಭದ್ರಯ್ಯನಂ ವೀರದೇವನಂ ನಿಜವೀರಭೋಗಯ್ಯನಂ
ಪರಮ [2]ಚಾಕಲ[2]ದೇವಿಯಂ ಪ್ರಭಾತಯ್ಯನಂ
ಮರಳಿವರ್ ಮೊದಲಾದ ವೀರಭಕ್ತಿಸ್ಥಾಪ
ಕರುಮೆನಿಸಿ ತೋರ್ಪ ಶಿವಶರಣರಂ ನೋಡು ಮತ್ತೀಕಡೆಯೊಳಕ್ಕಱಿಂದಂ ೧೫

ವರ ಮುಕ್ತಿಶಿಖರಮೆನಿಸೆಸೆವ ಶಿಖರೇಶ್ವರವು
ನಿರದಿಷ್ಟಸಿದ್ಧಿಯಂ ಕುಡುತೆ ರಾಜಿಸುವ ಸಲೆ
ಸರಳೇಷ್ಟಕಾಮೇಶ್ವರಮನಳ್ತಿಯಿಂ ಸಪ್ತದಿವಸಂಬರಂ ತನ್ನುವಂ
ಪಿರಿದರ್ಚಿಸಲ್ ಕಾಮಿತಾರ್ಥಂಗಳೆಲ್ಲವಂ
ಹ[3]ರಿಸೌ[3]ದಿಂದೀವ ಕರ್ಪುಹರೇಶನಂ ನೋಡು
ಕರಮದಱ ಮಹಿಮೆಯಂ ಪೊಗಳ್ವೊಡೀಶ್ವರನಱಿಯನೆಂತೆನಲ್ ಪೇಳ್ವೆನೊಸೆದು ೧೬

[1] ಲೆಲೆ (ಕ) [2] ಬಾಲಕ (ಗ) [3] ರುಷ (ಗ)

ಸರಳ ಕರ್ಮಹರೇಶ್ವರಸ್ಥಾನದೊಳಗೊಂದು
ಪಿರಿಯುರಗನಳಿದು ಪುಲ್ಗಡಣಮೆಡೆಗೊಂಡಿರಲ್
ಭರದಿನಾಗಸದೊಳಾಡುತ್ತಿರ್ಪ ಪೇರ್ಬದ್ದು ಕೊಂಡದಂ ಪೋಗುತಿರಲು
ಕರಮೆ ವಾತೋಪಹತಿಯಿಂದೆರಳ್ಪುಲ್ಗಳುಱಿ
ಪರಮ ಕರ್ಮಹರೇಶ್ವರದ ವಾರಿಯೊಳ್ ಬಿಳ್ದು
ನಿರುತಮಾಗಳ್ ಪ್ರಾಣಮಂ ಬಿಟ್ಟು[1]ವಾ[1] ಸಲಿಲದೊಳೆ ಬಿಳ್ದ ಫಲದೆ ಮತ್ತಂ ೧೭

ಧರಣಿಯೊಳ್ ಬಲ್ಲಹಾನ್ವಯದೊಳವು ಪುಟ್ಟಿ ಮ
ತ್ತಿರದೆ ಸತಿಪತಿಗಳಾಗೊಲ್ದಿರುತೆ ಮುನ್ನೆ ಬಂ
ಧುರಕರ್ಮಹರನಾಥಜಲದಲ್ಲಿ ವಾತೋಪಹತಿಯಿಂದೆ ಬಿಳ್ದಳಿದುದಂ
ವರ ಪುಣ್ಯವಶದಿಂದೆ ಬಲ್ಲಹನ ಕುಲದಲ್ಲಿ
ನಿರುತಮೊಗೆತಂದುದಂ ಜಾತಿಸ್ಮರತ್ವದಾ
ಪರಮಸಂಧಾನದಿಂದಱಿದು ತಾವಿರ್ವರುಂ ಸಕಲವಿನಿಯೋಗದೊಡನೆ ೧೮

ಹ[2]ರಿಸ[2]ದಿಂ ಬಲ್ಲಹಂ ಸಿರಿಗಿರಿಗೆ ಬಂದು ಭಾ
ಸುರ ಮಲ್ಲಿಕಾರ್ಜುನನ ಕಂಡು ಶೋಭಿಸುತಿರ್ಪ
ವರ ಮಂಟಪಮನೆಸೆವ ಕರುಮಾಡಮಂ ಮಹಾಸನಮನುಱಿ ಕೋಶಗೃಹಮಂ
ವಿರಚಿಸುತ್ತಲ್ಲಿ ಮರಕತ ಪದ್ಮರಾಗಾದಿ
ಸುರುಚಿರಾನರ್ಘ್ಯ ರತ್ನಾವಳಿಗಳಂ ತಿಂಬಿ
ನಿರುತ ಷೋಡಶವರ್ಣದಿಂ ಪೂರ್ಣಮಾದ ನಿಜಕೋಶಸ್ಥ ಧನನಿಚಯಮಂ ೧೯

ಪಿರಿದಪರಿಮಿತಮನರ್ಚಿಸಿ ದಿವ್ಯನೂತ್ನ ಭಾ
ಸುರತರಾಂಬರನಿಚಯಮಂ ದಿವ್ಯಮಾದ ಬಂ
ಧುರತರಾಭರಣಂಗಳಂ ಮತ್ತೆ ಕನಕೋಪಕರಣಂಗಳಂ ಸ್ವರ್ಣದ
ಸರಳ ಭಾಂಡಂಗಳಂ ಸ್ವರ್ಣಪುಷ್ಪಂಗಳಂ
ವರ ಮೌಕ್ತಿಕಚ್ಛತ್ರಮಂ ಕನಕಚಾಮರಮ
ನಿರುತರಾಂದೋಳಿಕಾ ವಾಜಿ ರಥ ಗಜ ಮುಖ್ಯಮೆಲ್ಲಮಂ ನೆಱಿ ಅರ್ಪಿಸಿ ೨೦

ಮಿಸುಪ ಗೋಮಹಿಷಾದಿಗಳನಿತ್ತು ಮತ್ತೆ ಸೊಂ
ಪೆಸೆವ ವಿದ್ವಾಂಸರಂ ಮಂತ್ರಿ ಭೃತ್ಯರ್ಕಳಂ
ನಿಸದಮಾ ಭಂಡಾರದವರನಾ ಗಣಕರಂ ಕಣಜದವರಂ ಮತ್ತೆಯುಂ

---
1 ದಾ (ಕ) 2 ರುಷ (ಗ)

ಪೊಸ ಅಡಬಳರ ಪುರೋಹಿತರನಾಪ್ತರ್ಕಳಂ
ನಿಸದಮಾ ಪಡೆವಳ್ಳರಂ ಕಿಂಕರರ್ಕಳಂ
ಸಸಿಧರಂ ಶ್ರೀಮಲ್ಲಿಕಾರ್ಜುನಂಗಿತ್ತು ಸಂತೋಷದಿಂದಂ ಮತ್ತೆಯುಂ ೨೧

ಪರಮ ತಾರ್ಕಿಕರ ಪೌರಾಣಿಕರ ಗಾಯಕರ
ವರ ಪಂಡಿತರ್ಕಳಂ ಪಾಠಕರನೇಗಳುಂ
ಕರಮೆಸೆವ ನಚ್ಚಣಿಯರಂ ದ್ವಾರಪಾಲಕರನಿಂತಿವರ್ ಮೊದಲೆನಿಸುವ
ಉರು ನಿಯೋಗಂಗಳೆಪ್ಪತ್ತೆರಡನೀಶಂಗೆ
ಹರಿಸದಿಂದಂ ಸಮರ್ಪಿಸಿ ತನ್ನ ರಾಜ್ಯಮಂ
ಗುರುಮಲ್ಲಿಕಾರ್ಜುನಂಗಿತ್ತು ತನ್ನಯ ಸತಿಯ ಮುಖಕಮಲಮಂ ನೋಡಿದಂ ೨೨

ಪುರುಷನವೊಲಾ ಯುವತಿ ತನ್ನಯ ಸುವಸ್ತುಗಳ
ವರ ಮಲ್ಲಿಕಾರ್ಜುನಂಗತಿಭಕ್ತಿಯಿಂ ಕುಡಲ್
ಪಿರಿದು ಸಂತಸವಟ್ಟು ಬಲ್ಲಹಂ ಸತಿಗೂಡಿ ಮಲ್ಲಿಕಾರ್ಜುನನಡಿಯೊಳು
ಮರಳಿ ಪೊಡೆಗೆಡೆದೊಂದು ಸೀರೆಯಂ ತಾವೀರ್ವ
ರಿರದುಡಿಯೊಳಳವಡಿಸಿಕೊಂಡು ಸರ್ವೇಶ್ವರಾ
ದುರಿತಹರ ಘೋರಸಂಸಾರವಾರಿಧಿಯ ಕಡೆಗೆಯ್ದಿಸು ಗಡಾ ಎಮ್ಮನುಂ ೨೩

ಪಿರಿದಖಿಲ ದುಷ್ಕರ್ಮಪಾಶಬಂಧಂಗಳಂ
ಕರಮೆ ಬಿಡಿಸು ಗಡಾ ಮಹೇಶ ಮತ್ತೆಮ್ಮನೀ
ರ್ವರ ಸೇವೆಯಂ ಸ್ವೀಕರಿಪುದು ಮಗುಳ್ದೆಮ್ಮರ್ಬರಂ ಕರುಣನಿಧಿಯೆ ನೀನು
ನಿರುತಮೆಂದುಂ ಮಱಿಯವೇಡ ಪಲನುಡಿಯೇಕೆ
ಗಿರಿಜಾಧಿಪತಿಯೆ ಎಮ್ಮಖಿಳೇಷ್ಟಸಿದ್ಧಿಗಳ
ಹರಿಸದಿಂದೀಯುವುದೆಲೆ ಮಲ್ಲಿಕಾರ್ಜುನ ಎನುತ್ತೆಱಗಿ ನೆಱೆ ಸಮ್ಮದದೊಳು ೨೪

ಕರಿಯ ಮೇಲೊಲ್ದೀರ್ವರುಂ ಬಂದು ತತ್ಕರ್ಮ
ಹರನಾದನಲ್ಲಿ ಮತ್ತೇಱಬಂದಾನೆಗೂ
ಡಿರದೀರ್ವರುಂ ಬಿಳ್ದು ಶಿವನ ಗರ್ಭಂಬೊಕ್ಕರಾ ಬಲ್ಲಹಂ ಮೊದಲೊಳು
ಗಿರಿಜಾಧಿಪತಿಯ ಪೂಜಿಪ ಪದದೊಳತಿಭಕ್ತಿ
ಭರದಿನಭಿಷೇಕಂಗೆಯಲ್ಪಟ್ಟ ಪಾಲ್ಪುರಂ
ಕರಮೆಸೆವ ಪಾಲ್ಕೊಳಂ ತಿಂಬಿ ಮೇಲುರ್ಬೆಳ್ದು ಪರಿಯಲದು ಪರಿಭಾವಿಸೆ ೨೫

---

1 ರುಷ (ಗ)

ಧರಣಿಯೊಳ್ ಪಾಲುಟ್ಲು ತೀರ್ಥವೆಂಬಭಿಧಾನ
ದಿರವಿನಿಂ ಶೋಭಿಸುತ್ತಿರ್ಕುಮಾ ತೀರ್ಥದೊಳ್
ನರರರೆಬರುಂ ಬಿಳ್ದು ತಂತಮ್ಮಭೀಪ್ಸಿತಂಗಳ ಫಡೆದರಳ್ಕಱಿಂದಂ
ಕರಮೆಸೆವ ಮೂಱುಶೃಂಗಂಗಳೊಳಗಿರ್ದು ಸುರು
ಚಿರಮಾಗಿ ತೋಱುವಾ ಮೂಱುತರುಗಳನಿತ್ತ
ಹ[1]ರಿಸ[1]ದಿಂ ನೋಡು ಮಗುಳ್ದೊಂದು ತರುಮೂಲಮಂ ಮತ್ತೊಂದು ತರುಮಧ್ಯಮಂ ೨೬

ಮಿಸುಪ ಮತ್ತೊಂದಱಗ್ರಮನೊಲ್ದು ಮುಟ್ಟಿದೊಡೆ
ನಿಸದಮಾ ಮಾನಿಸಂ ಸುರನರೋರಗಲೋಕ
ವಿಸರದೊಳ್ ತೋರ್ಪ ಚರಿತಂಗಳೆಲ್ಲಮನತಿಸ್ಪಷ್ಟದಿಂ ಕಾಣ್ಬನನಿಶಂ
ಎಸೆವೊಂದು ಮರದ ಮೂಲಮನೊಂದರಲಂ ರಾ
ಜಿಸುವೊಂದಱೆಲೆಯನಾವಂ ಸೂಡಿಕೊಳ್ವನಂ
ತಸವಸದಿನಜ ವಿಷ್ಣು ರುದ್ರರ ಸಮೀಪದೊಳ್ ಪರಿವರ್ತಿಸುವನಳ್ತಿಯಿಂ ೨೭

ಹ[1]ರಿಸ[1]ದಿಂದೊಂದಱೊಳ್ ಮಿಡಿಯನೊಂದಱ ಪಣ್ಣ
ನಿರುತಮುಂತೊಂದಱೊಳ್ಬಿತ್ತನಾವಂ ಮೆಲ್ವ
ನಿರದವಂ ಪುಟ್ಟುವುದನೊಸೆದು ವರ್ತಿಸುವುದಂ ಸಾವುದಂ ಕಿಡಿಸಿ ಬಳಿಕಂ
ಹರಪುರಮನೆಯ್ದಿ ಸೊಕಮಿರ್ಪನಾವಂ ಮತ್ತೆ
ಭರದಿನಾಹಾರಮಂ ಬಿಟ್ಟಾ ಮರಂಗಳಂ
ಕರಮೆ ಮೂಱುಂದಿನಂಬರಮೊಲ್ದು ಪೂಜಿಪಂ ಮತ್ತಮಂ ಪರಿಭಾವಿಸೆ ೨೮

ಪದಪಿನಿಂ ಸಾಲೋಕ್ಯ ಸಾಮೀಪ್ಯ ಸಾರೂಪ್ಯ
ಪದವಿಗಳನೆಯ್ದುವಂ ಮತ್ತಾ ಮರಂಗಳಂ
ಪದದೆಂತುಕಾಣ್ಬೆಱೆಸೆಂಬೊಡಂ ಕೇಳ್ ಪೇಳ್ವೆವೆಲೆ ದೋಣಮಾರ್ಯ ನಿನಗೆ
ವಿದಿತಮಾ ಪಾಲುಟ್ಲು ಸ್ಥಾನದೊಳಗಾವಗಂ
ಮುದದೆ ನೆಲಸಿರ್ಪ ಶ್ರೀಗಿರಿಮಲ್ಲಿಕಾರ್ಜುನನ
ಸದಮಳನ ಮೂವತ್ತುಕೊಳಗ ಪಾಲ್ತುಪ್ಪಮೊಸಗೋಡಗಳಿಂ ಪ್ರತ್ಯೇಕವು ೨೯

ಹ[1]ರಿಸ[1]ದಿಂ ಮಜ್ಜನಂಬುಗಿಸಿ ಮತ್ತೊಸೆದು ಸಾ
ಸಿರ ಕಳಸಸಲಿಲಂಗಳಿಂ ಸ್ನಾನಮಂ ರಚಿಸಿ
ಪಿರಿದುಂ ಸಹಸ್ರಾಂಬುಜಂಗಳಿಂ ಕರ್ಣಿಕಾರೋತ್ಪಲ ಸಹಸ್ರಂಗಳಿಂ

---

[1] ರುಷ (ಗ)

ನಿರುತಮರ್ಚಿಸಿ ಗುಗ್ಗುಲಮನೊಲ್ದು ಮತ್ತೆ ಸಾ
ಸಿರ ಪಲಮನಿತ್ತು ಸದ್ಭಕ್ತಿಯಿಂದಂ ಮಗುಳ್ದು
ಸರಳ ನೀರಾಜನಸಹಸ್ರಂಗಳಂ ಕೊಟ್ಟು ಪರಮಾನ್ನಭಕ್ಷ್ಯಂಗಳಿಂ ೩೦

ಎನಸುಮೊಡವೆರೆದ ನೈವೇದ್ಯಮಂ ಕೊಟ್ಟು ತೊ
ಟ್ಟನೆ ಮೂಱುಸಾಸಿರಂ ಪಂಚಾಕ್ಷರಿಯನೊಸೆದು
ಘನಭಕ್ತಿಯಿಂ ಜಪಿಸಿ ಮೂಱುದೆವಸಂಬರಂ ಮಲ್ಲಿಕಾರ್ಜುನನನೆಯ್ದೆ
ಮನವೊಲ್ದು ಭಜಿಸಿ ದಿವ್ಯಜ್ಞಾನಮಂ ಮತ್ತೆ
ಮಿನುಗುವ ಸುದಿವ್ಯದೃಷ್ಟಿಯನೀವನೀಶ್ವರಂ
ನನಸವಱ ಬಲದಿಂದವಾ ಮೂಱುವೃಕ್ಷಂಗಳಿರದೆ ಕಾಣಿಸುಗುಮನಿಶಂ ೩೧

ಬಳಿಕಮಾ ವೃಕ್ಷತ್ರಯಂಗ[1]ಳೊಳ್ ತೋರ್ಕು[1]ಮಂ
ತಳಘು ಸಾಶ್ಚರ್ಯ ನಿಕರಂಗಳಿಂ ಬಿಲ್ವವನ
ಮುಳಿದ ವನದಂತಲ್ಲ ಪಂಚಯೋಜನದ ವಿಸ್ತರದೊಳತಿಶೋಭಿಸಿರ್ಕುಂ
ತಿಳಿಯಲೊರ್ಬೆರಲಳತೆಗೊಂದೊಂದು ದಿವ್ಯನಿ
ರ್ಮಳವೃಕ್ಷ ದಿವ್ಯೌಷಧಿಗಳೊಳವು ನಾಲ್ಕುಬೆರ
ಲಳತೆಯೊಳ್ ಸಾಧಕರ್ಗುಱತಿ ಸೇವ್ಯಮಪ್ಪ ಪೊಸಲತೆಗಳುಂಟಲ್ಲಿ ಮತ್ತಂ ೩೨

ಪಿರಿದಭಿನುತಂಗಳನೊಱಲ್ದೀವ ದಿವ್ಯ ಭಾ
ಸುರ ಲಿಂಗಮೂರ್ತಿಗಳ್ ಮತ್ತಲ್ಲಿ ಭಾವಿಸಲ್
ನಿರುತಮೊಂದೊಂದು ಗೇಣೆಡೆಗಳೊಳ್ ತಪ್ಪದಿರ್ಕುಂ ಮತ್ತಮತಿಶಯದೊಳು
ಪರಮ ವೇದಸ್ಮೃತಿ ವಿತಾನದಿಂದೊಪ್ಪುತ್ತೆ
ಪಿರಿದುಮೊಳಕೊಂದು ಮುನಿವರರ ಪಳ್ಳಿಗಳಿರ್ಕು
ಮಿರದೆ ಹಸ್ತಪ್ರಮಾಣ ಪ್ರದೇಶಂಗಳೊಳ್ ಸುರಸತಿಯರಿರ್ಪರನಿಶಂ ೩೩

ಅತಿಶಯಂ ಕ್ರೋಶಪ್ರದೇಶದೊಳ್ ಶೋಭಿಕುಂ
ನುತ ಸಿದ್ಧಯೋಗೀಂದ್ರರನವರತಮೆಸೆದಿರ್ಪ
ವಿತತ ಕೂಟಂಗಳಲ್ಲಲ್ಲಿ ಗ[2]ವ್ಯೂ[2]ತಿಪ್ರದೇಶದೊಳ್ ಪ್ರಮಥರ್ಕಳು
ಸತತಮಿರುತಿರ್ಪ ಕರುಮಾಡಂಗಳೊಳವೆಯ್ದೆ
[3]ಮ[3]ತಿವಂತರೆನಿಸುವ ವಿರಕ್ತಜನಸಂದೋಹ
ಮತಿಹರ್ಷದಿಂದಮೊಂದೊಂದು ಯೋಜನಮಾತ್ರದಲ್ಲಿ ನಿಕ್ಕುವಮಿರ್ಪರು. ೩೪

---

[1] ಳೊಳಿರ್ಕು (ಗ) [2] ವ್ಯಾ (ಕಗ) [3] ನು (ಸ)

ಪಿರಿದು ಸಾಧಕತತಿಗೆ ಕಾಮಿತಾರ್ಥಂಗಳಂ
ಕರೆದೀವನೇಕಾದ್ಭುತಂಗಳೊಳವಿಲ್ಲಿ ಮ
ತ್ತುರುತರಚ್ಛಾಯಾತಪತ್ರಂಗಳೊಳವಿಲ್ಲಿ ತೋರ್ಪ ತರುನಿಚಯಂಗಳ
ಕರಮೆಸೆವ ನೆಳಲ ಸಂದೋಹವಾವನ ಮೇಲೆ
ಭರದಿನಾವರಿಸುಗುಂ ಮತ್ತವಂ ಭಾವಿಸಲ್
ಪರಮಾಭಿನುತ ಸರ್ವಯೋಗಯುತನಾಗಿ ರಾಜಿಸುತಿರ್ಪನನವರತವು ೩೫

ಮಿಸುಗುವೀ ಮರದೆಡೆಯೊಳಿನಿಸು ನೆಳಲಿಲ್ಲ ಮ
ತ್ತೊಸೆದು ನೋಡೀ ಮರನದೃಶ್ಯಕ್ಕೆ ಕಾರಣಂ
ನಿಸದಮಿಾ ಕಲ್ಲಾನೆ [1]ಮೋಹಿನೀ[1]ಗಜವೆಂಬ ಪೆಸರಿಂದಮೆಸೆದಿರ್ಪುದು
ಸಸಿನೆ ಬಂದಿದನೇಱಿ ಸಾಧಕಂ ಮತ್ತಮದು
ಘಸಣಿಗೊಳುತುನ್ನತಕ್ಕೆಳ್ದು [2]ಕುರ್ಗು[2]ತ್ತಿರ್ಕು
ಮಸಮಸಂ ದೇಹಮಂ ಝೋಡಿಸುತಮಾ ಸಾಧಕರ್ ಬೀಳ್ವ ಪಾಂಗಿನಿಂದಂ ೩೬

ಧರಣಿಯೊಳ್ ಬಿಳ್ದು ಪೊರಳ್ದುದು ಲಂಘಿಸುವುದು ಮ
ತ್ತಿರದೆ ತಿಱ್ರನೆ ತಿರುಗುವುದು ಚಕ್ರದಂತೆ [3]ಮುಗು
ಳ್ದರು[3]ನಾದದಿಂದೆ ಛೀಳಿಡುವುದಿವು ಮೊದಲಾದ ಭಯತತಿಗಳಂ ತೋರ್ಪುದು
ಪಿರಿದಿವಕ್ಕಳ್[4]ಱಿ[4] ಕಂಪಿಸಿ ಭೀರುವಾಗದುಱಿ
ತಿರಮಾಗಿ ಮನಮನತಿ ದೃಢಮಾಡೆ ಸಾಧಕಂ
ಹ[5]ರಿಸ[5]ದಿಂದಾ ಮೋಹಿನೀಗಜಂ ಮೆಚ್ಚಿ ಮತ್ತವನಿಷ್ಟಸಿದ್ಧಿಯಿಾಗುಂ ೩೭

ಮುಗುಳ್ದಿತ್ತ ನೋಡು ತದ್ಬಿಲ್ವವನ ಮಧ್ಯದೊಳ್
ಸೊಗಸುವಾ ಬಿಲ್ವವೃಕ್ಷದ ಕೆಳಗೆ ಶೋಭಿಸುವ
ನೆಗಳ್ದ ಬಿಲ್ವೇಶ್ವರಾಲಯಮುಂಟದಂ ಸಾರ್ದು ಸಾಧಕಂ ತಲ್ಲಿಂಗಮಂ
ಬಗೆಯೊಳತಿನಿಷ್ಠಾಸಮನ್ವಿತಂ ತಾನಾಗಿ
ಮಿಗೆ ಸಪ್ತರಾತ್ರಂಬರಂ ಸೇವೆಗೆಯ್ದು ತೊ
ಟ್ಟಗೆ ಮತ್ತೆ ಬಿಲ್ವೇಶ್ವರನ ದೀಪತೈಲಾಂಜನಮನೊಸೆದು ಕಣ್ಣೊಳಿಡಲು ೩೮

ತುರಿತದಿಂ ದಿವ್ಯದೃಷ್ಟಿಗಳಕ್ಕುಮಾತಂಗೆ
ಪರಮ ಬಿಲ್ವೇಶ್ವರಾಲಯದೊತ್ತಿನೊಳಗೊಂದು
ಹರಭವನ ಮುಂಟದಱ ಮುಂಬಿನೊಳ್ ಕ್ಷೇತ್ರಪಾಲಕನಿರ್ಪನವನ ಕಾಣ್ಬಂ

[1] ಮೊದಲಾಗಿ (ಕ) [2] ಕಗ್ಗು (ಗ) [3] ಉರುತರ (ಗ) [4] ಲೆ (ಕ) [5] ರುಷ (ಗ)

ಹರಿಸ[1]ದಿಂ ಸಾಧಕಂ ಬರಲಲ್ಲಿ ಭೈರವಂ-
ಪಿರಿದುಗ್ರಕೋಪದಿಂದಂ ಜೃಂಭಿಸುತ್ತೆ ಬಂ
ಧುರನಾಸಿಕಾರಂಧ್ರದಿಂ ಧೂಮಮಮುಣ್ಮುತ್ತೆ ಕಣ್ಣಿಂದೆ ಕಿಡಿಗೆದಱುತೆ ೩೯

ಉಡಿಗಂಟೆಗಳ ಗೆಜ್ಜೆಗಳ ರವಂ ದಿಕ್ತಟಮ
ನೆಡೆವಿಡದೆ ಮಾರ್ದನಿಗಳಂ ಕೊಡಿಸುತಿರೆ ಮಗುಳ್ದು
ಕಡುಗೋಪದಿಂದೆ ಹೂಂಕರಿಸುತ್ತುಮೊಡನೊಡನೆ ಪೋ ಪೋಗದಿರುಮೆನುತ್ತೆ
ಮಡಿಯೆನುತೆ ನುಡಿಯುತ್ತುಮಟ್ಟಹಾಸಾರವಂ
ಪಡಪು ಮಿಗೆ ಭೀತಿಯಂ ಪುಟ್ಟಿಸುತ್ತಿರೆ ಬಂದು
ಸಡಗರದೆ ತದ್ಭೈರವಂ ಸಾಧಕನ ಮುಂದೆ ತೋರ್ಪನತ್ಯಂತ ಭಯಮಂ ೪೦

ಬಳಿಕಮಾ ಸಾಧಕನದಱ ಗರ್ಜನೆಗೆ ಮನದೊ
ಳಳುಕದಿದಿರೆಯ್ದಿ ಕಡುಗಲಿಯಾಗಿ ನಿನಗಿನಿತು
ಬಳಮೇಕೆನುತ್ತೆ ಸಂಭ್ರಮದೊಳುನ್ನತ ರವದೆ ನುಡಿಯುತ್ತುಮದಱ ಶಿರಮಂ
ಮುಳಿಸಿನಿಂದೊದೆದು ಕೆಡಪಲ್ ನಗುತ್ತಾ ಶಿರಂ
ಗಳಗಳನೆ ನುಡಿಗುಮೆಲೆ ಸಾಧಕನೆ ನಿನ್ನ ಸ
ಲ್ಲಳಿತ ಶೌರ್ಯಕ್ಕೆ ಮೆಚ್ಚಿದೆನೆನ್ನ ಕಂಧರದ ಕೀಲ್ಗಳೆದ ಸಾಸಿ ನೀನು ೪೧

ಎನುತೆ ಪೊಗಳುತ್ತೆ ಮತ್ತಿಂತೆಂಬುದಾ ಶಿರಂ
ವಿನಯದಿಂದೆನ್ನ ಕಂಧರಬಿಲಮನಿಳಿಯೆ ನಿನ
ಗನುನಯಂ ಮಾರ್ಗಮಂ ಕುಡುವೆನೆನ್ನಂ ಲೆಕ್ಕಿಸದೆ ಜಯಿಸಿದಂಗೆ ನಿನಗೆ
ಘನನಿರೋಧಮದಾವುದಿಲ್ಲ ನಿರ್ಭರದಿಂದೆ
ಮಿನುಗುವೆನ್ನಯ ಗಳದ್ವಾರಮಂ ಪೊಕ್ಕು ನೀಂ
ಮನಮೊಸೆದು ಪೋಗೆಂಬುದಾ ಸಾಧಕಂ ದಾರಿಯಱಿಯೆನೆನ್ನದೆ ಮತ್ತೆಯುಂ. ೪೨

ಎನಿತು ದೂರಮದೆನ್ನದೇ ತನ್ನ ಕೈಗಳಂ
ಮಿನುಪ ತಟದೊಳಗಿಟ್ಟು ಮೆಲ್ಲನಿಳಿಯದೆ ಮತ್ತ
ಮಿನಿತೇನುಮಂ ವಿಚಾರಿಸದೆ ನಿರ್ಭರದಿಂದೆ ಧುಮ್ಮಿಕ್ಕಿ ತದ್ಬಿಲದೊಳು
ಎನಸುಮದು ಶತಪುರುಷಮಾನಮದಱಗಲಮಂ
ನನಸು ಶತಪುರುಷಪ್ರಮಾಣಮಾ ಬಿಲದಿಂದ
ಮನುನಯಂ ತೆಂಕಗಡೆಮೊಗನಾಗಿ ನಡೆಯೆ ತದ್ಬಿಲದೊಳ್ ಕವಾಟದಂತೆ ೪೩

1 ರುಷ (ಗ)

ನಲವಿನಿಂದಾ ಭೈರವಂ ಕಪಟಮುನಿವೇಷ
ದೊಲವಿನಿಂ ದಾರಿಯೊಳ್ ನಿಂದಿರಲ್ ಸಾಧಕಂ
ಸಲೆ ಕಾಣುತೆಲವೊ ತೊಲತೊಲಗು ದಾರಿಯ ಬಿಟ್ಟಿನುತ್ತೆ ಗರ್ಜಿಸಿ ನುಡಿಯಲು
ಅಲರುತಂ ಕಪಟಮುನಿ ನುಡಿ[1]ದ[1]ನೆಲೆ ಸಾಧಕನೆ
ಸುಲಭನಾಗೆಸೆವ ನಿನ್ನಯ ಸಾಧಕತ್ವಮಂ
ನಲಿದೆಮಗೆ ತೋಱುವೇಳ್ಕುಮೆ ವೃದ್ಧರಾವಿಲ್ಲಿ ಪಲವುಕಾಲದಿನಿರ್ಪೆವು ೪೪

ಪಿರಿಯರಂ ಮನ್ನಿಪುದು ನಿನಗೆ ಕೊಱತೆಯೆ ಮಗನೆ
ಶರಣಾರ್ಥಿಯೆಂದೊಡೇಂ ಕುಂದೆ ಬಹುಕಾಲದಿಂ
ನಿರುತಮುಪವಾಸದಿಂದಿರ್ದಪ್ಪೆವೆಮ್ಮ ನೀಂ ಬಾಧೆಪಡಿಸಲ್ ಪೊಲ್ಲದು
ಪಿರಿದೆಮ್ಮನೇಳಿದಂಗೆಯ್ದು ನೀಂ ಪೋಗಿ ನಿ
ರ್ಭರದಿಂದೆ ಪಡೆವ ದೇವತ್ವಮೇನೊಳ್ಪಿತೇ
ಕರಮಿಷ್ಟಸಿದ್ಧಿಯಂ ಗ್ರಹಿಪುದೇನೊಳ್ಪಿತೇ ಧರಣಿಯೊಳಗೆಲೆ ಸಾಧಕ ೪೫

ನುಡಿಪಲವರಿಂದೇಂ ಪ್ರಯೋಜನಂ ಕೇಳೆಮ್ಮ
ನುಡಿಯನೊಂದಂ ಮುಂದೆ ಪುಲಿಗಳ್ಕಂಟವನುಳಿದು
ಸಡಗರದೆ ಪೋಗೆ ಶಾರ್ದೂಲಂಗಳೊಳವು ಪಿಂಗಡೆಯಲ್ಲಿ ಮತ್ತೆ ತೋರ್ಪ
ಪೊಡವಿಯೊಳ್ ನೂರ್ಮಂಡದಳತೆಯೊಳ್ ಭಾವಿಯುಂದೆ
ಕಡುಪಿಂದೆ ನೀಂ ಮುಂದಕೆಯ್ದುವದು ದುಷ್ಕರಂ
ಬಿಡದೆ ಕೆಳಗಣ್ಗಿಳಿವ ದಾರಿಯೆಡೆಯಱಿಯಲಿನಿತಳವಲ್ತು ಪರಿಭಾವಿಸೆ ೪೬

ಬಿಲವೊಂದು ಮತ್ತೆ ಶತಪುರುಷಪ್ರಮಾಣದಿಂ
ಸಲೆ ತೋಱುತಿರ್ಪುದದನಿಳಿವೆಡೆಯೊಳೆಲ್ಲಿಯುಂ
ಲಲಿತ ಸೋಪಾನಂಗಳಿಲ್ಲ ವೃಕ್ಷಂಗಳಿಲ್ಲೇನುಮಿಲ್ಲೊಸೆದು ನೋಡೆ
ಒಲವಿನಿಂದದಱ ವಿಸ್ತಾರಮದಱನಿತು ಮ
ತ್ತಲಸದದಱಡೊಳ್ ಪೋಪುದತ್ಯಂತ ಬಾಧೆ ಮ
ತ್ತಲಘು ಧೈರ್ಯದೆ ಮುಂದುಪಿಂದಣ್ಗೆ ಪೋಪುದುಂ ಬರ್ಪುದುಂ ಕರಮಶಕ್ಯಂ ೪೭

ದುರಿತಹರ[2]ನೆ[2]ನಿಪ ಶಿವಲಿಂಗಪೂಜನೆಯಿಂದೆ
ಪಿರಿದಾದ ಫಲಸಮೂಹಂ ಕರಂ ನಿನಗೆ ಮ
ತ್ತಿರದೀ ಬಿಲದ್ವಾರದೊಳ್ ಸಾರ್ಗುವೇ ಸಾಧಕನೆ ಮುನ್ನೆ ಶಿವಭಕ್ತರು

---

1 ವ (ಕಟ) 2 ಮ (ಕ)

ಹರಿಸ[1]ದಿಂದೀ ಬಿಲಂಬೊಕ್ಕು ದೃಷ್ಟಾದೃಷ್ಟ
ಪರಮ ಫಲಸಿದ್ಧಿಗಳನೆಯ್ದಿದರೆ ಮತ್ತಮಿಾ
ವರ ಪರ್ವತದ ಕಲ್ಪಮಂ ಕೇಳಿದೊಂದು ಗರ್ವಾತಿಶಯದಿಂದೆ ನೀನು ೪೮

ಭರದೆ ತಲೆಕೆಳಗಾಗಿ ನಡೆದಪ್ಪರೆಲೆ ಮಗನೆ
ಪಿರಿದುಮುಪಭೋಗಾರ್ಹಮಪ್ಪ ಹರೆಯದೊಳೆಯ್ದಿ
ನಿರುತದಿಂ ಮತ್ತೇನನನುಭವಿಪುದರ್ಕಿಲ್ಲಿಗೆ[2]ಯ್ದುವೈ[2] ನೀನಳ್ಕಜಂ
ಕರಮೆ ಸಾಯಲ್ವೇಡಿ ಬಂದೆಯಲ್ಲದೆ ನೋಡೆ
ಸಿರಿಗಿರಿಯೊಳಿರ್ಪ ಬಿಲನಿಕರಮೆಲ್ಲಂ ಮನೋ
ಹರಮಿಷ್ಟಸಿದ್ಧಿಗಳನನವರತಮೊಸೆದು ಕುಡುತಿರ್ಕುಮವನಿಯೊಳಾವಗಂ ೪೯

ವರ ಚತುರ್ದ್ವಾರಬಿಲ ಪಾಪಬಿಲ ವೃಷಭ ಬಂ
ಧುರ ಬಿಲಂಗಳ್ ಮುಖ್ಯಮಾದ ಬಿಲನಿಕರಂಗ
ಳರರೆಯೇಳ್ನೂರುಕೋಟಿಯ ಮೇಲೆ ಮತ್ತಮಿರ್ಪತ್ತುಸಾಸಿರಮೆನಿಸುತೆ
ಕರಮೆಸೆವು[3]ವಿಲ್ಲಿ ಭುಕ್ತಿಪ್ರದಂಗಳ್ ಮತ್ತೆ
ಪಿರಿದು ಸಾಯಿರಕೋಟಿಗಳ್ ಮತ್ತಿನವು ನೋಡೆ
ಪರಮ ಮುಕ್ತಿಪ್ರದಂಗಳ್ ಭಾವಿಸಲ್ಕೆ ಶತಕೋಟಿಯಿರ್ಪುವು ಸಂತತಂ ೫೦

ಬಳಿಕಮೊಂದೊಂದು ಕಾರ್ಯಂಗಳಂ ಕುಡುವ ಸ
ಲ್ಲಳಿತ ಸುಸ್ಥಾನಂಗಳಪರಿಮಿತಮೊಳವವರೊಳು
ಳಳಘು ಬಿಲನಿಚಯಮಂ ಪೇಳ್ವೆ ನಾನಱವನಿತನೊಸೆದು ಕೇಳ್ ಮತ್ತೆ ನೀನು
ಫಳಿಲನೆಯ್ದುವುದೆನುತೆ ಪೇಳ್ದನಾ ತಾಪಸಂ
ಲಳಿತ ವನದೊಳಗೊಂದುವೇಳೆಯಾಂ ಚರಿಸುತಿರ
ಲಳವಿನಿಂದಾ ವನದ ತೀರದೊಳಗಿರ್ದ ಕಾಸಾರಮಧ್ಯದಿನೊರ್ವನು ೫೧

ಜನಿಸಿ ಶ್ರೀಗಿರಿಮಲ್ಲಿಕಾರ್ಜುನನ ಪುರದತ್ತ
ಸನಯದಿಂ ದಿವ್ಯಭೂಷಾಂಬರಂಗಳ ಧರಿಸಿ
ಮಿನುಪ ಸಿತಮಲ್ಲಿಕಾಮಾಲೆಯಂ ತಳೆದು ವಕ್ಷೋಭಾಗದೊಳ್ ಕೈಗಳಿಂ
ಕನಕಾಂಬುಜಂಗಳಂ ತಾಳ್ದು ಸೌಮ್ಯಾಕೃತಿಯೊ
ಳನುವಿನಿಂ ಪೋಗುತಿರಲಾಂ ಕಂಡು ಶರಣೆಂದು
ವನಮಧ್ಯಕಾಸರದೊಳೊಗೆಯುದರ್ಕೇಂ ಕಾರಣಂ ನಿನಗೆ ನೀಂ ಬಳಿಕ್ಕಂ ೫೨

---

[1] ರುಷ (ಗ) [2] ಯ್ದಿದೈ (ಗ) [3] ದ (ಕ) ತ (ಗ)

ನರನೊ ಕಿನ್ನರನೊ ಮೇಣ್ ಪ್ರಚ್ಛನ್ನ ಶಂಕರನೊ
ಸುರುಚಿರಪ್ರಮಥನೋ ಚಕ್ರಿಯೋ ಧನದನೋ
ಸುರಪನೋ ಶಶಿಯೊ ಭಾಸ್ಕರನೊ ನೀನಾ[1]ಗಾ[1]ವಲೋಕದಿಂದಂ
ಭರದಿನೆಳ್ತಂದೆ ಇನ್ನಾವಲೋಕಕೆ ಪೋಪೆ
ಇರದಿದೆಲ್ಲವನೆನಗೆ ಪೇಳಿಮೆನಲಾತನುಱ
ಹರಿಸದಿಂದೆನ್ನೊಡನೆ ನುಡಿದನಾಂ ಪೋಪೆಡೆಯನೊಲ್ದು ನೀಂ ಕೇಳೆನುತ್ತೆ ೫೩

ಕರವೀರನೆಂಬೊರ್ವ ದಾನವಂ ಶ್ರೀಗಿರಿಯೊ
ಳುರುಭಕ್ತಿಯಿಂದೆ ಕರವೀರೇಶ್ವರಂ ಎಂಬ
ವರ ಲಿಂಗಮಂ ಸ್ಥಾಪನಂಗೆಯ್ದು ಬಳಿಕುಗ್ರತಪಮಂ ನಿರ್ವಿುರ್ಚಲೊಡನೆ
ಕರವೀರನಾಥನಾತನ ತಪಕೆ ಮೆಚ್ಚಿ ಸುರು
ಚಿರ ನಿಜಾಕಾರಮಂ ತೋಱ ನಿನ್ನಿಷ್ಟಮಂ
ಭರದಿಂದೆ ಬೇಡೆನುತ್ತುಸುರಲಾ ದಾನವಂ ಬಿನ್ನೈಸಿದಂ ಭಕ್ತಿಯಿಂ ೫೪

ಎಲೆ ದೇವ ಮತ್ತಿನ ವರಂಗಳಂ ಬೇಡೆನಾಂ
ಲಲಿತಮಾದೆನ್ನಂಗಮೆಲ್ಲಮಂ ಧಾತುಗಳ
ನೊಲವಿನಿಂ ಸ್ಥೂಲಸೂಕ್ಷ್ಮದ್ರುಮಂಗಳ ಮಾಡಿ ಮತ್ತವಱೊಳೊಗೆದಲರ್ಗಳಂ
ಸುಲಭದಿಂ ನೀಂ ಧರಿಸು ಬಳಿಕವಱ ದಲದಿಂದೆ
ನಲಿದು ನಿನ್ನಂ ಪೂಜಿಸಿದ ಮಾನವರ್ಗೆ ಸ
ಲ್ಲಲಿತೇಂದ್ರ ಪದವಿಯಂ ಕುಡು ಬಳಿಕ್ಕೊಂದು ಪೂವೇಱಸಿದ ಮಾನುಷಂಗೆ ೫೫

ಮಱುವುಟ್ಟನಳಿದು ಸನ್ಮುಕ್ತಿಯಂ ಬೇಗದಿಂ
ತಱಸಂದು ಕುಡು ಮತ್ತಮೊರ್ವನೊಂದಲರಿಂದೆ
ಕುಱುತು ನಿನ್ನಂ ಪೂಜಿಸಿದೊಡವಂಗೇಗಳುಂ ಕೋಟಿ ಕನ್ಯಾದಾನದ
ಉಱುವ ಕರಟೇಂದ್ರದಾನದ ಸಹಸ್ರದ ಫಲಮು
ನುಱ ವಾಜಪೇಯದ ಶತದ ಫಲಮನಾವಗಂ
ನೆಱಯೆ ಕರುಣಿಸು ಬಳಿಕ್ಕುಳಿದಲ್ಪವರಮನಾಂ ಬೇಡೆನೆಲೆ ಶಶಿಜೂಟನೆ ೫೬

ಇಂತೆಂದು ನುಡಿಯಲಾ ಕರವೀರದಾನವಂ
ಕಂತುಹರನತಿತುಷ್ಟನಾಗಿ ಮತ್ತಾ ವರವ
ನಂತಿತ್ತನಂದಿಂದೆ[2]ಮಿಾ[2] ವನಂ ಕರವೀರವನಮೆಂದು ರೂಢಿಸಿತ್ತು

[1] ರಾ (ಕ) [2] ಲೀ (ಗ)

ಮುಂತೆ ಕಾಣಿಸದೀಪನಂ ಪಾಪಯುಕ್ತರ್ಗೆ
ಸಂತರೆನಿಸುವ ಪುಣ್ಯಜೀವರ್ಗೆ ಕಾಣಿಪುದಿ
ದೆಂತಪ್ಪ ಪೂರ್ವಜನ್ಮದ ಸುಕೃತಿಯೋ ನೀನಿದಂ ಕಂಡೆಯೆಲೆ ಮುನಿವರ ೫೭

ಎಂದೆನ್ನ ಪೊಗಳುತ್ತೆ ಮತ್ತಮಿಂತೆಂದನಾ
ನಂದದಿಂ ದಿವ್ಯಾಂಜನಾಲತೆಯ ಸೋಂಕಿ ತಟಿ
ಸಂದಾವಭೂಮಿಯೊಳ್ ಮತ್ತೆನ್ನ ನೀಂ ಕಂಡೆಯೆಲೆ ಪುಣ್ಯಲಕ್ಷಣಯುತ
ಒಂದಿ ನೀನೀಗಿರ್ದ ತಾಣದೊಳೆ ಮುದದಿಂದೆ
ನಿಂದಿರೊಂದಡಿಯ ಪೊಜಗಿಟ್ಟೆಯಾದೊಡೆ ಮನಂ
ಸಂದು ನೀನೆನ್ನ ಕಾಣಲ್ಕಟಿಯೆ ಎನುತ[1]ಲಾ[1] ಕೊಳನ ವೈಭವಮನುಸಿರ್ದಂ ೫೮

ಕರಮುಸಿವ ಕಾಸಾರ[2]ಮಿ[2]ದು ಭಾವಿಸಲ್ಕೆ ಭಾ
ಸುರದೇವಗಂಗೆಯಂಶಂ ಕುಂಡತೀರ್ಥಕ್ಕೆ
ಪಿರಿದಾಲವಾಲಮುರುಮಲ್ಲಿಕಾಕುಂಡ ಸಲಿಲೋದ್ಭವಸ್ನಾನಮನಿಶಂ
ಹರಮೌಲಿಯೊಳಗಿರ್ದ ಗಂಗೆ ತಾನಿದು ನೋಡೆ
ನಿರುತಮಿಾ ತಿಳಿಗೊಳದೊಳೊಗೆದ ಪದ್ಮಂಗಳಿಂ
ಗಿರಿಶನಂ ವಿಷ್ಣು ಪೂಜಿಸಿ ದೇವಕೀತನಯನಾಗಿ ಜನಿಯಿಸಿದನಂದು ೫೯

ಅಸುರರಿಪುವೀ ಕೊಳದೊಳೊಗೆದ ಕಮಲಂಗ[3]ಳಿಂ[3]
ನಿಸದಮಿಾಶ್ವರಪೂಜೆಗೆಯ್ದು ಚಕ್ರಮನಂತೆ
ಮಿಸುಪ[4]ಚ್ಚಿ[4]ಯಂ ಪಡೆದನಿಲ್ಲಿ ಜನಿಸಿದ ಪದ್ಮವೊಂದಱಿಂದಜನುದಿಸಿದಂ
ಒಸೆದು ಗಿರಿಜಾತೆಯಿಲ್ಲಿಯ ಕಮಲಮಂ ಮುದದೊ
ಳಸವಸಂ ಪಿಡಿದಾಡುವಳ್ ಮತ್ತಮಿಲ್ಲಿ ರಾ
ಜಿಸುವ ಕಮಲದ ಮಿತ್ರತೆಯಿನಹಸ್ಪತಿ ತೇಜವಂತನಾದಂ ನಿಕ್ಕಮಂ ೬೦

ಮಿನುಗುವಿದಱತೊಳ್ ಜನಿಸಿದಬ್ಜಂಗಳೆಲ್ಲಮುಂ
ಘನ ಕೃತಾತ್ಮರ ಕಣ್ಗೆ ಕನಕಾಬ್ಜತತಿಯಾಗಿ
ನ್ಪಸುತೋರ್ಕುಂ ಮತ್ತಮಕೃತಾತ್ಮನೇತ್ರಕ್ಕೆ ಬಱಿದಾವರೆಗಳಾಗಿಯೆ
ಎನಸುಮಿರ್ಕುಂ ಮತ್ತಮಿಾ ಕೊಳಂ ಸುಕೃತರ್ಗೆ
ಕನದಮಲ ದಿವ್ಯತೀರ್ಥದ ಪಾಂಗಿನಿಂದಿರ್ಕು
ಮನುನಯಂ ದುಷ್ಕೃತರ್ಗೀಗಳುಂ ಬಱಿಗೊಳದವೊಲ್ ತೋರ್ಕುಮನವರತವು ೬೧

---

1 ಮಾ (ಕ) 2 ಮ (ಗ) 3 ಳಂ (ಗ) 4 ಕ್ಷಿ (ಗ)

ಪಿರಿದುಮಿಾ ಕಾಸಾರದೊಳ್ ಚರಿಸುತಿರ್ಪ ಸುರು
ಚಿರ ಜಲಚರಪ್ರಾಣಿಗಳ್ಗೆ ವಿಷ್ಣುವಿನ ಬಂ
ಧುರ ಮತ್ಸ್ಯಕೂರ್ಮಾದಿಯೆಲ್ಲವುಂ ಸಂತಾನತತಿಗಳಕ್ಕುಂ ಭಾವಿಸೆ
ನಿರುತವೆನ್ನ ಚರಿತ್ರಮಮಂ ಮತ್ತಮಿಾ ಕೊಳನ
ಪರಮ ವೈಭವಮನುಱಿ ಪೇಳ್ವೆನೆನ್ನುದಯಮಂ
ಹ[1]ರಿಸದಿಂ ಕೇಳ್ ಶಾಂಕರೀಪುರದೊಳೊಗೆದೆನಾಂ ಮತ್ತಾ ಪುರಕ್ಕೆ ನಿಸದಂ ೬೨

ಸಲೆ ಶಾಂಕರೀಪುರವೆನಿಪ್ಪ ಪೆಸರೇಕಾಯ್ತು
ಸುಲಭದಿಂ [2]ಪೇಳಿವೆಂಬೊಡೆ ಕೇಳದಂ ಮುನ್ನೆ
ನಲಿದು ಪಾರ್ವತಿ ಬಾಲಲೀಲೆಗಳನಾಡಲುದ್ಯುಕ್ತೆಯಾಗಳ್ಕಱಿಂದಂ
ಲಲನೆಯರ ತನ್ನ ಕೂಟಾಳಿಗಳ ನುಡಿ[3]ಗಳತಿ
ಲಲಿತ ವಚನದೆ ರಾಜಕೀರವಾಣಿಯೆ ಭರದಿ
ನೊಲವುಮಿಗೆ ರಾಜಕೀರನ ಕೊಂಡು ಬಾ ಬಾರ ಬಾರೆನುತ್ತೆ ಮತ್ತಮೊಲ್ದು ೬೩

ವರ ಕೋಕಿಲಾಲಾಪೆ ಕೋಗಿಲೆಯನೊಸೆದು ಮ
ತ್ತುರುಹಂಸಯಾನೆ ಹಂಸೆಯನಳ್ಕಱಿಂದೆ ಭಾ
ಸುರಬರ್ಹಿ ಬರ್ಹಕಚೆ ಬರ್ಹಿಗಳ ಕೊಂಡುಬಾ ಸಾಲಭಂಜಿಕೆಯೆ ನೀನು
ತರುರಚಿತ ಪುತ್ರಿಕೆಗಳಂ ರನ್ನಬೊಂಬೆಗಳ
ಕರಮೆಸೆವ ಪೊನ್ಬೊಂಬೆಗಳ ಬೇಗದಿಂದೆ ಕೊಂ
ಡಿರದೆಯ್ದಿ ಬಾರೆನುತ್ತಾ ಪ್ರಮಥರುದ್ರಸುರಕಾಂತಾದಿಗಳ ಕರೆಯುತೆ ೬೪

ಪರಮ ಭಾಗೀರಥೀತೀರದೊಳ್ ಶಿಶುಭಾವ
ದಿರವಿನಿಂ ಸೈಕತದಿನೊಂದು ಪುರಮಂ ರಚಿಸಿ
ಹ[4]ರಿಸದಿಂ ಮತ್ತದಱೊಳಗೆ ಮಳಲ ಮನೆಗಳಂ ಸಮೆದು ತತ್ಪುರದ ನಡುವೆ
ವರ ಲಿಂಗಮಂ ಪ್ರತಿಷ್ಠಿಸಿ ದೇವವನಿತೆಯರ್
ಬೆರಸಿ ಪೂಜಿಸುತುಮತಿಭಕ್ತಿಯಿಂ ಕಿಱಿದು ಪೊ
ಳ್ತಿರುತೆ ಮತ್ತಾ ದೇವಿ ತಿರುಗಿದಳ್ ಸೈಕತಂ ಪುರಮೆನಿಸಿತಾ ಪಟ್ಟಣಂ ೬೫

ಅನಿತಱೊಳಗಾ ಗೌರಿ ತಪದ ಬಲದಿಂದೆ ತೊ
ಟ್ಟನೆ ಮಹಾದೇವಂಗೆ ವಧುವಾಗಿ ಪರಶಿವನ
ಮನಮನಿಳ್ಕುಳಿಗೊಂಡನನ್ಯಭಾವದಿನರಮೆ ಮೆಯ್ಯನೆಡೆಗೊಂಡಿರುತ್ತೆ

---

1 ರುಷ (ಗ) 2 ಕೇ (ಗ) 3 ದ (ಗ) 4 ರುಷ (ಗ)

ವಿನಯದಿಂ ಬಾಲಲೀಲೆಯೊಳೊಸೆದು ತಾಂ ಸವೆದ
ವಿನುತ ಸೈಕತಪುರಮನೊಲ್ದು ನೆನೆಯಲ್ಕದಂ
ಮನಸಿಜಾಂತಕನಱಿದು ನುಡಿದನೆಲೆ ದೇವಿ ನೀಂ ನೆನೆವ ಸೈಕತಪುರಮದು ೬೬

ನನಸು ಪುರಮಪ್ಪಂತೆ ಕರುಣಿಸಿದೆವೆಂದು ಘ
ಮ್ಮನೆ ಶಂಕರಂ ನೆನೆಯುತಿರ್ದ ಶಾಂಕರಿಗುಸಿರ್ದ
ನನುನಯದಿನದಱಿಂದೆ ಶಾಂಕರೀಪುರವೆಂದು ಪೆಸರಾಯ್ತು ಮತ್ತದಱೊಳು
ವಿನಯದಿಂದಾನೊಗೆದೆನಲ್ಲಿಂದೆ ಬಂದು ಬಂ
ದನುನಯದೊಳೀ ಪರ್ವತದೊಳಿರ್ಪ ದುರಿತಮ
ರ್ದನ ಮಲ್ಲಿಕಾರ್ಜುನನನನುದಿನಂ ಪೂಜಿಪೆಂ ಕುಸುಮಸಂದೋಹಂಗಳಿಂ ೬೭

ಪೊಸತಪ್ಪ ಕುಸುಮಂಗಳಂ ತಿಱಿದುಕೊಂಡು ಮನ
ಮೊಸೆದು ಶಿವನಂ ಪೂಜಿಸುತ್ತುಮಿರೆ ಮತ್ಪುರದೊ
ಳೆಸೆವ ಜನರೆಲ್ಲರುಂ ಪುಷ್ಪದತ್ತನೆನುತ್ತೆ ಕರೆಯಲೆನಲದ ನಿಕ್ಕುವಂ
ಪೆಸರಾಯ್ತು ಮತ್ತೊಂದು ದೆವಸಮಲರಂ ತಿಱಿವ
ಪಸುಗೂಸುಗಳ್ ಮುದದಿನೀ ತೋಂಟದಾರಿಯಂ
ಮುಸಕದಿಂದೆನಗೆ ತೋಱಲ್ ಮತ್ತಿದಂ ಸಾರ್ದು ಪೂಗೊಯ್ಯಲೊಂದುಮರನಂ ೬೮

ಭರದಿನಡರ್ದಲ್ಲಿರ್ದ ಪೂಗೊಯ್ವುತಿರಲತ್ತ
ಉರಗಲೋಕದೊಳಂತೆ ವಾದ್ಯಸಂದೋಹಂಗ
ಳಿರದೆ ಮೊಳಗಿದುವು ದಿಗ್ವಿವರಂಗಳೆಲ್ಲವುಂ ಬೆಸುಗೆಬಿಡುತಿರ್ಪ ಪಾಂಗಿಂ
ಕರಮೆ ಆ ದನಿಗೇಳ್ದು ಪೆಳಱಿಯಾನೀ ವನದ
ಕರವೀರ ವೃಕ್ಷಶಾಖೆಯು ಮೆಟ್ಟಿದೆನ್ನ ಕಾಲ್
ತುರಿತದಿಂ ಜಾಱಿಯದಱಡಿಯೊಳಿರ್ಪೀ ಕೊಳದೊಳಗೆ ಬಿಳ್ದೆನಸವಸದೊಳು ೬೯

ಅನಿತಱೊಳ್ ನಾಗಕನ್ನೆಯರೆಯ್ದಿ ಬಂದೆನ್ನ
ಮಿನುಪತೋಳ್ಗಳ ಪಿಡಿದುಕೊಂಡು ನೀಂ ತೊಳಪ ಮು
ನ್ನಿನ ಜನ್ಮದಲ್ಲಿ ನಿಜಭೋಗನಾಥನ ಪೂಜೆಯಂ ಸಮೆಯುತಿರಲಳ್ತಿಯಿಂ
ಕನದಬ್ಜದೊಳಗೊಂದು ಪುಳುವಿರಲ್ ನೀನಱಿಯ
ದನುನಯದೆ ಪೂಜಿಸಿದ ಫಲದೆ ಮರ್ತ್ಯದೊಳೊಗೆವ
ಘನಪದಂ ಪ್ರಾಪಿಸಿತ್ತದು ಪಿಂಗಿಪೋಯ್ತು ಮತ್ತೀಗ ಶಿವಕೃಪೆಯೊದಗಿತು ೭೦

ಮರಳಿಯೆಂದಿನ ಪಾಂಗಿನಿಂ ಭೋಗನಾಥನಂ
ಹರಿಸಾದಿಂ ಪೂಜಿಸಲ್ವೇಳ್ಕು ನೀಂ ಬಾರೆಂದು
ಕರೆದು ಕೊಂಡೊಯ್ದರಾ ಭೋಗಾವತೀನದಿಯ ಪುಳಿನಸ್ಥಳಂಗಾಣುತೆ
ಪಿರಿದೆನಗೆ ಜಾತಿಸ್ಮರತ್ವಮುಂ ತೋಱತ್ತು
ವರ ದಿವ್ಯತನುವಾಯ್ತು ಬಳಿಕಮಾ ಮಿನುಪ ಭಾ
ಸುರನಾಗಯುವತಿಯರ ನುಡಿಗಳೆಲ್ಲಮನೆಯ್ದೆ ತಥ್ಯಮಾಗಱದೆನಲ್ಲಿ ೬೧

ಉರಗರಾಡರ್ಚಿತ ಪದಾಬ್ಜನಂ ಶಂಕರನ
ನುರುಭೋಗನಾಥನಂ ಪೂಜಿಸುತ್ತಿರೆ ರತ್ನ
ಕಿರಣಂಗಳಿಂ ತರುಣತರಣಿಯಂ ಕೀಳ್ಪಡಿಪ ಮಾಣಿಕ್ಯಕಳಸಂಗಳಿಂ
ಕರಮೆಸೆವ ಹರ್ಮ್ಯದೊಳಗಷ್ಟಮೂರ್ತಿಗಳಿಂದೆ
ಸರಳಾಷ್ಟನಾಗಂಗಳಿಂ ಬ್ರಹ್ಮವಿಷ್ಣ್ವಾದಿ
ಸುರಸಮೂಹಂಗಳಿಂ ಗರುಡಗಂಧರ್ವರಿಂ ಸೇವಿತನುಮಾಗಿ ಮತ್ತಂ ೬೨

ಮಿನುಗುವುಪಮನ್ಯು ಕಶ್ಯಪ ವಶಿಷ್ಠ ಪ್ರಭೃತಿ
ಮುನಿಗಳಿಂ ಸ್ತೂಯಮಾನನುಮಾಗುತೆಸೆದಿರ್ಪ
ಮನಸಿಜಾಂತಕ ಭೋಗನಾಥನೆನ್ನಂ ನೋಡಿ ಕರುಣಮಂ ಬೀಱಲಾನು
ಕನದಮಲ ಭಕ್ತಿಯಿಂ ಭೋಗನಾಥನನೆಯ್ದೆ
ಅನವರತಮಲ್ಲಿ ಭಜಿಸುತ್ತಿರ್ಪೆನಿಲ್ಲಿಗೆ
ಯ್ದನುನಯಂ ಶ್ರೀಮಲ್ಲಿಕಾರ್ಜುನನ ಸೇವಿಪೆಂ ಭಕ್ತಿಭರದಿಂದೇಗಳುಂ ೬೩

ಇಂತೆಂದು ನುಡಿಯುತಾಯಯ್ಯನತಿಭರದಿಂದೆ
ಕಂತುಹರನಾಲಯಕ್ಕೆಯ್ದಿದಂ ಮರಳಿಯಾಂ
ಸಂತಸದೆ ಪುಷ್ಪಂಗಳಂ ತರಲ್ ಪೋಪೆಡೆಯೊಳೊಂದುದೆವಸಂ ವನದೊಳು
ಕಾಂತಿಯುತ ದಿವ್ಯದೇಹಂ [2]ಶೋಭಿ[2]ಸುತ್ತಿರಲ್
ಮುಂತೊಂದು ವೃಷಭನೆಸೆದತ್ತು ಕಡುಗಾಡಿಯಿಂ
ದಂತದಂ ಕಂಡೆನಾಂ ಮತ್ತಮಾ ವೃಷಭ[3]ನಂ[3] ಭಕ್ತಿಯಿಂದೊರ್ವ ಭಕ್ತಂ ೬೪

ಹರಿಸದಿಂದಂ ಪ್ರದಕ್ಷಿಣಮಂ ನಿಮಿರ್ಚಿ ಮ
ತ್ತಿರದಾತನೊಯ್ಯನೋಸರಿಸುತಿರಲಿತ್ತಲೀ
ವರ ವೃಷಭನೊಂದುಬಿಲನಂ ಪೊಕ್ಕುದಾಂ ಬಳಿಕ್ಕಾಯಯ್ಯನೆಡೆಗೆ ಪೋಗಿ

---

1 ರುಷ (ಗ) 2 ಭಾವಿ (ಕ) 3 ಮಂ (ಕಗ)

ಶರಣೆಂದು ನೀವಾರಿದೆಲ್ಲಿಯಃದು ವೃಷಭನೀ
ವಿರುತಿರ್ಪ ನಗರಮಾವುದು ಕೊಳಗುವಾ ವೃಷಭ
ಚರಣಕ್ಕಿದೇಂ ತುಳಿಲ್ಗೆಯ್ದಿ ಠದಜಿಂ ಸಿದ್ಧಿಯೇನೆಂದು ಕೇಳಲಾನು ೭೫

ವಿನಯದಿಂ ಕೇಳೆನುತ್ತಾ ಮುನಿಪನಿಂತೆಂದ
ನೆನಸುಮಿದು ತಾನಾದಿವೃಷಭನಘಯು[1]ಕ್ತ[1]ರ್ಗೆ
ನನಸು ಬೇಱಿಕೊಂದು ರೂವಿಂದೆ ಕಾಣಿಸುಗುಮಾಯೆರಡನೆಯ ಶಂಭುವೆನಿಪ
ಮಿನುಪ ಧರ್ಮಾವತಾರಂ ಭಾವಿಸಲ್ಕೆ ತೊ
ಟ್ಟನೆ ಯುಗಂಗಳ ತಾರತಮ್ಯವಂ ನೆಱಿ ಬಿಟ್ಟು
ಸನಯದೆ ಚತುರ್ಯುಗಂಗಳೊಳೆಯ್ದೆ ಧರ್ಮಮಂ ನಾಲ್ಕುಪಾದದೆ ನಡೆಯಿಕುಂ ೭೬

ಪಿರಿದುಂ ಜಗದ್ಧಿತಾರ್ಥಂ ಧರ್ಮರೂಪದಿಂ
ದಿರುತಿರ್ಕುಮಾ ಬಿಲದೊಳಾವನೋರ್ವಂ ನರಂ
ಹ[1]ರಿಸ[1]ದಿಂ ಸಪ್ತರಾತ್ರಂಬರೆಗಮನಶನವ್ರತದೊಳೇಕಾಗ್ರಮನದಿಂ
ನಿರುತದಿಂದಾ ಬಿಲದ್ವಾರದೊಳಿರಲ್ಕೆ ಬಂ
ಧುರ ಕರುಣದಿಂ ವೃಷಭನೆಯ್ತರ್ಪನದನೆಯ್ದೆ
ಕರಮಿಾಕ್ಷಿಸುತ್ತಳುಕದದಱ ಬಾಲಂಬಿಡಿಯೆ ತದ್ವೃಷಭನಶ್ತಿಯಿಂದಂ ೭೭

ಮರಳಿಯಾ ಬಿಲಮಾರ್ಗದೊಳೆ ಮನೋವೇಗದಿಂ
ಕರವೊಯ್ದು ವೃಷಭಪುರದೊತ್ತಿನೊಳ್ ಬೈತು ತಾ
ನಿರದದೃಶ್ಯಂದಳೆಗುಮಾ ಸಾಧಕಂ ಮತ್ತೆ ತತ್ಪುರದೊಳೊಪ್ಪುತಿರ್ಪ
ವರ ವೃಷಭತೀರ್ಥದೊಳ್ ಮಿಂದು ವೃಷಭೇಶ್ವರಂ
ಗುರುಭಕ್ತಿಯಿಂದೆಱಗಿ ಪೂಜೆಯಂ ರಚಿಸಲಾ
ಪರಮ ವೃಷಭೇಶ್ವರಂ ಪ್ರತ್ಯಕ್ಷನಾಗಿ ದೃಷ್ಟಾದೃಷ್ಟ ಫಲವೀಪಸು ೭೮

ಸಿರುತಮತಿಮೋಕ್ಷಾರ್ಥಿಯಾದ ನರನಾಪಗಂ
ಹ[2]ರಿಸ[2]ದಿಂದಾ ವೃಷಭಪುರಮನೆಯ್ದಲ್ ಮತ್ತೆ
ಪರ ದಿವ್ಯಮಣಿಗಳಂ ದಿವ್ಯಮಂತ್ರಂಗಳಂ ದಿವ್ಯಾಂಗನಾನಿಕರಮಂ
ಸುರಭೂರುಹಂಗಳಂ ಸಂಜೀವಕರಣಿಯಂ
ಸಿರಿದೆಸೆವ ಶಲ್ಯಕರಣಿಯನಿಂತಿವಾದಿಯಾ
ದುರುತರೌಷಧವಿತತಿಯಂ ಪಡೆವನನಿವುಮಲ್ತು ಕೇಳಿನ್ನೆ ಚೋದ್ಯತರಮಂ ೭೯

1 ತ (ಕ) 2 ರುಷ (ಗ)

ಗಗನದೊಳ್ ಚರಿಯಿಸುವುದಂ ದಿವ್ಯದೇಹಮಂ
ಮಿಗೆ ಪಡೆವುದುಮಂ ಮತ್ತಿವುಂ ಮೊದಲೆನಿಪ್ಪ ಸೊಂ
ಪೊಗೆವನೇಕಾಶ್ಚರ್ಯ ಸಿದ್ಧಿಗಳನೀಶ್ವರಂ ಕರುಣಿಪಂ ಮತ್ತಮಪ್ಪನು
ನೆಗಳ್ದ ಮುನ್ನಿನ ತನ್ನ ಪಟ್ಟಣಂಗಳ ನೆನೆಯು
ಲಗಲವಾಗಳ್ ತಂದು ಬಿಲದ ಪೊಱಗಿರಿಸುವಂ
ಸುಗುಡವೃಷಭಂ ಬಳಿಕ್ಕಂತೆವೋಲೆನ್ನಿಷ್ಟಸಿದ್ಧಿಗಳ ಪಡೆದೀಗಳು ೬೦

ಭರದಿನಾ ಬಿಲದಿಂದೆ ಪೊಱಮಟ್ಟು ಬರ್ಪನ್ನೆ
ಕರಮೆ ಹಾರಿಸಾದೆ ವೃಷಭನಿಲ್ಲಿರಿಸಿ ಪೋದಪಂ
ನಿರುತಮೆಂದೆನುತಮಂ ಪೋದನತ್ತಲ್ ಬಳಿಕ್ಕಿತ್ತ ಮತ್ತೊಂದೆಡೆಯೊಳು
ನರರೊರ್ವರಂ ಕಾಣದಾನೊರ್ವನೇ ಬರು
ತ್ತಿರೆ ವನದೊಳಲ್ಲಿ ಪಣ್ಗಳ ತಿಱಿಯಲೆಂದೊಂದು
ಪಿರಿಯ ತಾಳಮಹೀರುಹಮನೆಯ್ದಲಾಗಳದು ಬೆಳೆದಾಗಸಕ್ಕೆ ಪೋಯ್ತುಂ ೬೧

ಮರಳಿ ಮೆಲ್ಲನೆ ತಗ್ಗಿ ಭೂಮಿಗೆಯ್ದಿತು ಮತ್ತೆ
ನಿರುತವಿದೆನದೇಕ್ಷಿಸುತ್ತೆ ಬಿನ್ನಣದಿಂ
ಕರಮುಱ ತುದಿಯೊಳೀ ಮಲ್ಲಿಕಾರ್ಜುನನ ಸೇವಿಸುತಿರ್ಪ ಶತರುದ್ರನೊ
ನಿರುತಮೆಂಬಂತೊರ್ವ ಮುನಿಪನು ಕಂಡೆಂ ಸೂರ್ಯ
ನಿರದೆ ಪಡುಗಡಲೊಳಿಳಿಯಲಾಗಳಾ ತಾಳ
ಮರನಪ್ಪಿಯೊಳಗಲ್ದಿತಾ ತಾಪಸಂ ಭೂಮಿಯೊಳ್ ನಿಂದು ಸೊಕಮಿರ್ದನು ೬೨

ಭರದಿನಾಂ ನುಡಿಸಿದೆಂ ಮುನಿಯಾತನಂ ನಲಿದು
ಪರಮ ಹರ್ಷಾತ್ತನೀವೃಕ್ಷಮಿದು ಗಗನಕ್ಕೆ
ಪಿರಿದುಮೆಯ್ದಂ ಬೆಳೆಯುತ್ತು ಮತ್ತಡಂಗಿತು ಧರೆಯೊಳೀತರ್ಕೆ ನೀವಱಿಬೊಳು
ಇರುತಿರ್ದಿರಲ್ಲಿ ಮತ್ತೇನ ಕಂಡಿರಿಮುದಱೊ
ಳಿರೆ ಸಿದ್ಧಿಯಾವುದೆಂಬುದನೆಲ್ಲಮಂ ಎನಗೆ
ಹಾರಿಸಾದಿಂ ಪೇಳಿಮೆನಲೆಲ್ಲಮಂ ಪೇಳ್ದನದನುಸಿರ್ದಪ್ಪೆನೊಸೆದು ಕೇಳು ೬೩

ವಿಸ್ಮಯಮಿ ಶ್ರೀಗಿರಿಯೊಳನವರತಮಿರುತಿರ್ಪೆ
ಪೇಸದಮದೊಳೆಂದುಮಿಾ ತಾಣಮೇಕಾಂತನಾ
ಗೆಪಮಮೊಪ್ಪತ್ತಿರಲ್ ಪೊಳ್ತರಿನ ಶಿವಪೂಜೆಯಂ ಮನೋನಮದದಿ ನಿಚ್ಚಂ

---

[1] ಡುಜ (ಗ) [2] ಸ (ಗ) [3] ಡುಜ (ಗ)

ವಿನಯದಿಂದಿಲ್ಲಿ ವಿರಚಿಸೆವೊಸೆದು ರವಿ ಮೂಡೆ
ಕೊನರ್ದು ಮುನ್ನಿನ ಪಾಂಗಿನಂತೆಸೆವುದೀ ಮರಂ
ಸುನಯದಿಂ ರವಿಯಸ್ತಗಿರಿಯ ಸೇರಲ್ ತಾನುಮವನಿಯೊಳ್ ಮೆಯ್ಗರೆವುದು ೮೪

ಮೊದಲ ರವಿಕಿರಣವೊಗೆಯಲ್ಕೆ ಮುಗುಳ್ದೀ ಮರದ
ಮೊದಲ ಪರ್ಣಂಗಳುದಯಿಸುಗುಮಂತಾ ರವಿಯ
ಮೊದಲ ಕಿರಣಾಳಿಗಳ್ ನಿಡಿದಾಗಲೀ ಮರದ ಶಾಖೆಗಳ್ ನಿಡಿದಪ್ಪುವು
ಪಡೆದು ಸೂರಂ ಗಗನಮಡರೆ ಬಳಿಕೀ ವೃಕ್ಷ
ಮೊದವಿ ಬೆಳೆಗುಂ ದಿವಂಬರೆಗಮುಡಜುಂದೆ ಸೊಂ
ಪೊದಗಿ ತರುಭಾಸ್ಕರದ್ರುಮಂ ತಾನೆಂದು ಪೆಸರ್ಪಡೆದುದವನಿಯೊಳಗೆ (?) ೮೫

ಹರನ ಪೂಜಾಕಾಲದೊಳಗೆತ್ತಲುಂ ನೋಡ
ದಿರುತಿರ್ಪವಳ್ತಿಯಿಂ ಬಳಿಕಮಾ ತಾಳಮರ
ದುರುದಳಾಗ್ರದೊಳಂಬುಜದೊಳಿರ್ಪ ಕರ್ಣಿಕೆಯ ಪಾಂಗಿನಂತಿರ್ಪವನಿಶಂ
ಮರಳಿ ಸೂರ್ಯನ ರಥಂ ಗಗನಮಧ್ಯಕೆ ಬರಲ್
ಕರಮೆಸೆಯುತೀ ಮರಂ ವ್ಯೋಮಂಬರಂ ಬೆಳೆದು
ಹರಿಸದಿಂ ಮಧ್ಯಾಹ್ನ ರವಿಯನೆಯ್ದು[1]ಲ್ಕಾಗ[1] ಸೂರ್ಯನೆನ್ನಂ ನೋಡುತೆ ೮೬

ಅತಿಹರ್ಷದಿಂದೆನಗೆ ಸತ್ಕಾರಮಂ ಮಾಡಿ
ಹಿತವಚನಮಂ ನುಡಿದು ಬೇಡು ನಿನ್ನಿಷ್ಟಮಂ
ವಿತತಮಪ್ಪಂತೀವೆನೆನೆ ನುಡಿದೆನಾಂ ಸೂರ್ಯನೊಡನೆ ಮಜುವಾತುಗಳನು
ಅತಿಶಯದೆ ಕೇಳ್ ಸೂರ್ಯ ಸಿರಿಗಿರಿಯೊಳಿರ್ಪನಾಂ
ಜಿತಮದನನೆನಿಪ ನೀನಾದಿಯಾಗೆಸೆವ ವಿ
ಶ್ರುತ ಹರೀಂದ್ರರ್ಕಳಿಂ ಪೂಜಿತನೆನಿಪ್ಪ ಶ್ರೀಮಲ್ಲಿಕಾರ್ಜುನದೇವನು ೮೭

ನಿರುತದಿಂ ಪ್ರಾಣೇಶನಾಗಿರ್ಪನೆನಗೆ ಮ
ತ್ತಿರದೆ ನೀನಾ ಶಿವನ ದಕ್ಷಿಣಾಂಬಕಮಪ್ಪ
ಯುರುವೊದದಿಂ ನಿನ್ನ ಕಂಡೆವಾಂ ಬಳಿಕಮಿನ್ನಿಷ್ಟಮೇನೆಮಗೆ ನೀನು
ಹರಿಸದಿಂ ಪೇಳೀ ಮರಂ ಭೂಮಿಯೊಳ್ ಜನಿಸಿ
ಮರಳಿ ಧರಣಿಯೊಳಡಂಗುವುದಿದೇಂ ಕಾರಣಂ
ಸಿರಿದುಂ ಪ್ರತಿಕ್ಷಣಕ್ಕೊಲ್ದು ಬೆಳೆದುಂತೆ ಶೀಘ್ರದಿ ಕುಬ್ಜನಾಗಿ ತೋರ್ಪ ೮೮

---

1 ಲ್ಕಂದು (ಗ) 2 ರುಷ (ಗ)

ಇರವಿದೇನೆಂಬುದಂ ಪೇಳೆನಲ್ ಸೂರ್ಯನುಜಿತ
ಹರಿಸದಿಂ ಪೇಳ್ದನೀ ಶ್ರೀಗಿರೀಂದ್ರಂ ತನ್ನ
ಶಿರದೊಳಗೆ ಸೂರ್ಯವನಮುಂ ಸೂರ್ಯಕುಂಡಮುಂ ಸೂರ್ಯತಾಳಾದಿಗಳನು
ಕರಮೆಸೆವ ಸೂರ್ಯೇಶ್ವರನನೊಲ್ದು ಪಡೆದನೀ
ನರರಂ ಕೃತಾರ್ಥರಂ ಮಾಳ್ಪುಜ್ಜುಗದೆ ತಾಳ
ತರುವಿದುಂ ತನ್ನ[1]ಡಿರ್ದ ನರರ್ಗೈಹಿಕಾಮು[2]ಷ್ಮಿಕಾ[3]ರ್ಥಫಲಮಂ ಕುಡುವುದು ೪೯

ಮಿನುಗುವಾ ಸೂರ್ಯಕುಂಡದೆ ಮಜ್ಜನಂಗೆಯ್ದು
ವಿನುತ ಸೂರ್ಯೇಶ್ವರನ ಭಕ್ತಿಯಿಂದರ್ಚಿಸಿದ
ಮನುಜಂಗೆ ಸೂರ್ಯಾಕ್ಷನಪ್ಪೀಶ್ವರಂ ಸೂರ್ಯಪದವಿಯಂ ಕುಡುವನೊಸೆದು
ಘನತರ ದ್ವಾದಶಾದಿತ್ಯರುಂ ತಂತಮ್ಮ
ಕನದಮಲಪದವಿಗಳನೀ ತಾಣದೊಳ್ ನಾಡೆ
ವಿನಯದಿಂದಂ ಪಡೆದರೀ ತಾಳವೃಕ್ಷಂನಾನೂದಯಿಸಲ್ ತಾಂ ಪುಟ್ಟುಗುಂ ೫೦

ಭರದಿನಾನಸ್ತಂಗತಂ ದಲಾಗಲ್ ಬಳಿ
ಕ್ಕಿರದೆ ಭೂಮಿಯೊಳಡಂಗುವುದು ತಾಂ ಪುರಹರನ
ಕರುಣದಿಂದಾವನೊರ್ವಂ ಬೇಗಮಿಾ ತಾಳಭೂರುಹಮನಡರ್ದೇಱುವಂ
ಹರುಸದಿಂದಾ ನರಂಗಿಷ್ಟಾರ್ಥಸಿದ್ಧಿಯಂ
ಪಿರಿದೀವೆನಿದು ನಿಶ್ಚಯಂ ಮತ್ತಮಿದಱಂತೆ
ನಿರುತಮಿಾ ಶ್ರೀಗಿರಿಯೊಳೊಸೆದು ತೋರ್ಕುಂ ಚಂದ್ರತಾಳಮದನಾವನೊಸೆದು ೫೧

ಅಡರ್ದೇಱುವಂ ಬಳಿಕ್ಕಾತಂಗೆ ಶಶಿಧರಂ
ಕಡುಪಿನಿಂದಿಷ್ಟಾರ್ಥಸಿದ್ಧಿಗಳನೀವನಿಂ
ತೆಡೆವಿಡದೆ ನಕ್ಷತ್ರತಾಲಾದಿ ಚಿತ್ರತರ ತರುಗಳೊಳವೀ ಗಿರಿಯೊಳು
ಸಡಗರಂ ಬೇಡದಿರ್ಪಿರವೊಳ್ಪಿತೆದಱಂದೆ
ಕಡುದೋಷಮೇಂ ದಿವ್ಯಪದ್ಮರತ್ನಂ ದಲಿದ
ನೊಡನೆ ಕೈಕೊಂಬುದೆನುತೆನಗೊಲ್ದು ಕೊಟ್ಟು ನೀಂ ಮಲ್ಲಿಕಾರ್ಜುನ ಸೇವೆಗೆ ೫೨

ಭರದೆ ಪೋಗೆಂದೆನ್ನ ಕಳುಪಿ ಮತ್ತಾ ಸೂರ್ಯ
ನಿರದೆಯ್ದಿದಂ ಪಡುವಗಡಲನೀ ತಾಳತರು
ಧರಣಿಯೊಳಡಂಗಿತ್ತು ಬಳಿಕೆ ಕೇಳಿನ್ನೊಂದು ಸೋಜಿಗಮನೆನುತೆ ಪೇಳ್ದಂ

[1] ನಂಬಿ (ಕ) [2] ಪಿತಾ (ಟ) [3] ಮಾಮು (ಕ)

ಕರವೆಸೆಸಗುವೊಂದು ವನದೊಳಗೇಕವಾಸರಂ
ಚರಿಸುತಿರಲಾನೆನ್ನ ಮುಂಬಿನೊಳ್ ಮತ್ತೊರ್ವ
ನುರದಲ್ಲಿ ಪತ್ತಿರ್ದ ಸತ್ತಶಿಶುವಂ ಭೀತಿಗೊಳುತೆ ಧರಣಿಯೊಳಿಕ್ಕಿದಂ ೯೩

ಅದನೆಯ್ದೆ ಕಂಡಾಂ ಬಳಿಕ್ಕಾತನಂ ಪೊರ್ದಿ
ಯುದಿತ ಹರ್ಷದೊಳಿಲೆಲೆ ಭೀತಾತ್ಮ ನಿನ್ನುರದೊ
ಳಿ[1]ದು ಕೂಸು ಸತ್ತು ಪತ್ತಿರ್ದು ಭೂಮಿಯೊಳೆಯ್ದೆ ಬಿಳ್ದ ಕಾರಣಮನೆನಗೆ
ಸದೆದು ಪೇಳೆಂದು ಕೇಳಲ್ ನುಡಿದನವನೆಯ್ದೆ
ವಿದಿತ ಲಿಂಗಾರ್ಚನೆಗೆ ಪೂಗೊಯ್ಯಲೆಂದು[2]ಸುರೆ
ಮು[2]ದದಿನಾಂ ಪೊಱಮಟ್ಟು ಪೋಪೆಡೆಯೊಳೆನ್ನಯೆ ಜಠರಮುರ್ಬಲಲ್ಲಿ (?) ೯೪

ವರ ಪುಷ್ಪಪುಟಿಕೆಯಂ ಬೈತು ಗೆಂಟಳವಿಯೊಳ್
ಧರಣಿಯೊಳ್ ಕುಳ್ಳಿರಲ್ಕಿವನಾವನೆಂದು ಸುರು
ಚಿರಗೃಹಾಂಗಣದ ಮುಂಬಿನೊಳೆಯ್ದೆ ಮಲವಿಸರ್ಜನಕೆ ಸಲೆ ಕು[3]ಳ್ಳಿ[3]ರ್ಪನು
ಭರದೆ ತೊಲಗೆಂದು ನುಡಿಯಲ್ಕಾ ರವಂಗೇಳು
ತಿರದೆಂಟು ದೆಸೆಯ ನೋಡಲ್ಕೊರ್ವರಂ ಕಾಣ
ದುರು ಭೀತಿಯಿಂದಲ್ಲಿಗೊಂದು ಕುಱುಪಂ ಮಾಡಿ ಮುಂದಣ್ಗೆ ಪೋಗಲಲ್ಲಿ ೯೫

ಪಿರಿದಲ್ಲಿಯುಂ ಮತ್ತಮಿಂತೆಂದು ನುಡಿಯೆ ನಿ
ರ್ಭರದಿನಾಯೆಡೆಯು ಕುಱುಪಂ ಮಾಡಿ ಮುಂದಣ್ಗೆ
ಕರವೆ ಪೋಗಲ್ ಬಳಿಕ್ಕಲ್ಲಿಯುಂ ನುಡಿಯಲಿಂತೆಂದು ಮತ್ತಾ ಎಡೆ[4]ಯುನ[4]
ಇರದೆ ಕುಱುಪಂ ಮಾಡಿಪೋಗೆ ಪೋದಲ್ಲಲ್ಲಿ
ನಿರುತಮಿಂತೆಂದು ನುಡಿಯಲ್ಕಲ್ಲಿ ಕುಱುಪಿಟ್ಟು
ತುರಿತದಿಂದತಿದೂರಕೆಯ್ದಿ ಶೌಚಂಗೆಯ್ದು ಲಿಂಗಪೂಜೆಯನೊಡರ್ಚಿ ೯೬

ಕರದೊಳಗೆ ಪೂಪು[5]ಡಿ[5]ಕೆಯಂ ತಳೆದು ಮತ್ತಲ್ಲಿ
ಪಿರಿಯೂರ್ಗಳಿಲ್ಲ ಒಱುದನಿಗೇಳಲಾಯ್ತು ನಿ
ರ್ಭರದಿ ನಾನಲ್ಲಿಗೊಲ್ದೆಯ್ದಿ ಭಿಕ್ಷಂ ಮಾಡಿ ನೋಳ್ಪೆನೆನುತಸವಸದೊಳು
ಹ[6]ರಿಸ[6]ದಿಂ ಮುಸ್ಸಿಟ್ಟ ಕುಱುಪಿನೆಡೆಗೆಯ್ದಿ ಬ
ಲ್ಸರದಿಂದೆ ಭಿಕ್ಷೆಯಂ ಬೇಡಲಲ್ಲಿರ್ದ ಭಾ
ಸುರಯುವತಿಯರ್ ತಮ್ಮ ಕಾಣಿಸದೆ ದಿವ್ಯಾನ್ನ ಭಿಕ್ಷೆಯಂ ತಂದಿಟ್ಟರು ೯೭

---

1 ಡೆ (ಗ) 2 ಸಾಮು (ಗ) 3 ಳಿತಿ (ಗ) 4 ಯೊಳು (ಗ) 5 ಟ (ಗ)
6 ರುಷ (ಗ)

ಮಿನುಗುವಾ ಭಿಕ್ಷಾನ್ನಮಂ ಶಿವಂಗಿತ್ತು ತೊ
ಟ್ಟನೆ ತತ್ಪ್ರಸಾದಮಂ ಸ್ವೀಕರಿಸಲದಱ ನೂ
ತನ ಮಹತ್ವದಿನೆನ್ನ ಕರ್ಮಮುಱಿ ಪಿಂಗೆ ತತ್ಪಟ್ಟಣಂ ಕಾಣಲಾಯ್ತು
ಅನಿತಱೊಳಗೊರ್ವಳಿಂಗಡಲ ಮಗಳಂತೆ ಕಾ
ಮನ ರತಿಯ ಪಾಂಗಿನಂತೆಸೆವ ಸೌಂದರ್ಯವತಿ
ವಿನಯನಿಧಿ ಸುರಯುವತಿ ಬಂದೆನ್ನ ತನ್ನಯ ಗೃಹಕ್ಕೆ ಕೊಂಡೊಯ್ದಳೊಸೆದು ೯೮

ಭರದಿಂದೆ ಹರ್ಮ್ಯಸ್ಥಳದೊಳಿರಿಸಿ ಮಜ್ಜನಮ
ನುರುತರ ಪ್ರೇಮದಿಂ ಮಾಡಿಸಿ ಸುಗಂಧ ಬಂ
ಧುರ ಪುಷ್ಪಮಾಲೆಗಳನಿತ್ತು ವರಷೋಡಶಾಭರಣತತಿಗಳನೆನ್ನಯ
ಶರಿರದೊಳ್ ತುಡಿಸಿ ದಿವ್ಯಾನ್ನಪಾನಂಗಳಿಂ
ಕರಮೆ ಸಂತುಷ್ಟನಂ ಮಾಡಿ ತಾಂಬೂಲಮಂ
ಹರಿಸಿ[1]ದಿಂದಿತ್ತು ಬಳಿಕಂಗಜಕ್ರೀಡೆಯಿಂ ಮನಮನಿಳ್ಕುಳಿಗೊಂಡಳು ೯೯

ಪಿರಿದಿಂತು ಪರಮಾನುರಾಗದಿಂ ಸುಖಮಿರ್ದೆ
ನುರುದಿವ್ಯ ವರ್ಷಕೋಟಿಗಳೆಯ್ದುವನ್ನೆಗಂ
ಭರದಿನಾ ಸ್ತ್ರೀಗೆ ಗರ್ಭಂ ತೋಱಿತನಿತಱೊಳ್ ಕಂಡನಂ ಮನದೊಳಾನು
ಹರಿಸ[1]ವಟ್ಟೀ ಯುವತಿಯೆನ್ನ ವಶಮಾದಳೆಂ
ದಿರದೆ ನೆನೆಯಲ್ಕದಂ ತರುಣಿ ತಾನಱಿದು ನಿ
ಷ್ಠುರದೆ ತನ್ನುದರದ ಮರನ [2]ಸೀಳಿ ಗರ್ಭಸ್ಥಿತಾರ್ಭಕನ ಬೇಗದೊಳಗಿಯ್ವುತೆ (?) ೧೦೦

ಭರದಿನೆನ್ನೆರ್ದೆಯ ಮೇಲಿಟ್ಟು ಪೋಗೆಂದೆನು
ತ್ತಿರದೆ ನೂಂಕಲ್ಕಿಲ್ಲಿ ಬಿಳ್ದೆನಾನೆಂದವಂ
ಪಿರಿದು ಪೇಳಲ್ ಕೇಳ್ದೆನದನೆಲ್ಲಮಂ ಮಿಸುಗುವೀ ನಗದ ಮಾಹಾತ್ಮ್ಯಮಂ
ಮರಳಿ ನೀಂ ಕೇಳೆನುತ್ತಿಂತೆಂದನೊಂದು ವಾ
ಸರವೀ ಮಹಾರಣ್ಯದೊಳ್ ಬರುತೆ ಕಂಡೆನಾಂ
ಗಿರಿಯ ತಪ್ಪಲ ಬಿಲದೆ ಪೊಱಮಟ್ಟು ಬರುತಿರ್ಪ ಸನ್ಮುನೀಶ್ವರನೊರ್ವನಂ ೧೦೧

ನಲಿದಾತನಿರ್ದೆಡೆಗೆ ಪೋಗಿಯಾಂ ಕೇಳ್ವೆನೆಲೆ
ಲಲಿತಮುನಿನಾಥ ನೀನಾವೆಡೆಯೊಳಿರ್ದು ಮ
ತ್ತೊಲವಿನಿಂ ಬಂದಿರೆಂದದನೆಯ್ದೆ ಕೇಳ್ದವಂ ಪೇಳ್ದನೆನ್ನೊಡನೆ ಮುದದಿಂ

---

[1] ರುಷ (ಗ) [2] ಬ (ಕ)

ಅಲರ್ದಿದಂ ಪಾಪಬಿಲಪೆಂದು ಪೇಳ್ವರ್ ಮಗುಳ್ದು
ತೊಲಗದೀ ಬಿಲದ ಬಾಗಿಲೊಳೊಸೆದು ಮಾನವಂ
ಸಲೆ ಸಪ್ತದಿವಸಂಬರಂ ಶುಚಿರ್ಭೂತನಾಗಿರಲೊರ್ವ ದಿವ್ಯವನಿತೆ ೧೦೨

ಬಿಲದಿಂದೆ ಪೊಱಮಟ್ಟುಬಂದು ಸಂತೋಷದಿಂ
ಸಲೆ ತನ್ನ ಕೌಂಕುಳೊಳಗಿರ್ಪ ಶಿಶುವಂ ನೋಡಿ
ನಲಿದಿದಂ ಪಿಡಿಯೆನುತ್ತಾ ಶಿಶುವನವನ ಕೈಯೊಳ್ ಕೊಟ್ಟು ತಾಂ ಪೋಪಳು
ಅಲರ್ದು ಮತ್ತಾ ಶಿಶುವಳುತ್ತೆ ಕರ್ಚುತ್ತೆ ನಿ
ರ್ಮಲನನಖಂಗಳೊಳೆಯ್ದೆ ಪಱಿಂದುಕೊಳುತಂ ಬಳಿ
ಕ್ಕಲಘು ಖಂಡಂಗಳಂ ಕೆರ್ದುಕುತ್ತೆ ಸಾಧಕನ ಮೆಯ್ಯ ತೊಪಲಂ [1]ಸೀಳುತೆ ೧೦೩

ಭರದಿಂ ಶರೀರ ಮಾಂಸಂಗಳೆಲ್ಲವನೊಲ್ದು
[2]ಪೀರಿದು ತಿನುತಿರ್ಕುಂ ಪೆಳಱದೆ ಧೈರ್ಯಂಗಿಡದೆ
ತೆರಳದುಱಿ ಇರುತಿರ್ಪ್ಪನಿತಱಿಕೊಳಗದಱ ತಾಯ್ ಬಂದು ತನ್ನಯ ಶಿಶುವನು
ಹರುಷದಿಂ ತಾಂ ತೆಗೆದುಕೊಂಡು ಬಳಿಕಳ್ಕಱಿಂ
ವರ ಸಾಧಕಂಗೆ ನೆಱಿ ದಿವ್ಯದೇಹಂಗೊಟ್ಟು
ನಿರುತಮುಪನಿಷ್ಟಾರ್ಥಸಿದ್ಧಿಗಳನೀವಳತಿಚೋದ್ಯತರಮಾಗಿ ನಿಸದಂ ೧೦೪

ಪಿರಿದಿಂತು ಬಿಲಕಲ್ಪದಿರವನುಱಿ ಪೇಳುತಾ
ವರ ಯುವತಿಯೆನ್ನಯ ಮನೋರಥಂಗಳನೊಲ್ದು
ಹರುಷದಿಂ ಕುಡಲವಂ ಪಡೆದು ಪೋಪೆನೆನುತ್ತೆ ಯೋಗಪಾದುಕೆಯ ಮೆಟ್ಟಿ
ಭರದೆ ಪೋಪವನನಾಂ ನುಡಿದನೆಲೆ ಮುನಿಪ ನೀಂ
ಕರಮೆಸೆವ ಪಾದುಕೆಗಳಂ ಮೆಟ್ಟಿ ಮತ್ತಮಾ
ಗಿರಿಯೊಳಿಂತಡಿಯಿಡುವೆಯೆನಲವಱ ಮಹಿಮೆಯಂ ಪೇಳ್ದನೆನಗತಿಶಯದೊಳು ೧೦೫

ಮಿನುಗುವೀ ಯೋಗಪಾದುಕೆಗಳಂ ಪಡೆದುದಂ
ಮನಸಂದು ಕೇಳ್ ಮುನ್ನೆ ಸಿರಿಗಿರಿಯೊಳೊಪ್ಪುತಿ
ರ್ಪನಘನ ಶ್ರೀಪಾದುಕಾಸಿದ್ಧನಾಥನತಿಭಕ್ತಿಭರದಿಂದಾವಗಂ
ಎನಸುಮಾ ಶೂಲಕಿತ್ತಿತ ಪಾದುಕೆಗಳ ತೊ
ಟ್ಟನೆ ಮೆಟ್ಟಿ ನಾಡೆ ಸಾಸಿರದೆಂಟು ಸೂಳ್ವಲಂ
ವಿನಯದಿಂದಂ ಪ್ರದಕ್ಷಿಣಮನತಿಕಲ್ಪೋಕ್ತರೀತಿಯಿಂ ರಚಿಸಿ ಮತ್ತಂ ೧೦೬

---

1 ಕೀ (ಕ) 2 ಪ (ಕ) 3 ರುಷ (ಗ)

ನಡೆಯುತಿರಲಾಂ ಮುಂದೆ ಪೋಪಮಾರ್ಗದೊಳೊಂದು
ಸಿಡುವಾವು ಬಾಯ್ದೆರೆದುಕೊಂಡು ಪರ್ವತದಂತೆ
ಸಡಗರದೆ ಬಿಳ್ದಿರ್ದುದದನರಿಯದಾಂ ಬಿಲಂಗೆತ್ತಡಲಿ ಮುಖರಂಧ್ರಮಂ
ಪಡಪಿಸಿಂ ಪೊಕ್ಕು ಪೋಗುತ್ತೆ ಪುತ್ತದಲಿ ಕರು
ಳಿಡರ್ದ ಪೊಡೆಯ ಂ ಕಂಡಿದಹಿಕುಕ್ಷಿಯೆಂದರಿದು
ಕಡುಮೋಡಿತವ ಸರ್ವಜ್ಞ ಭೋಜನಂ ಕೊಲಬೆಯ್ದಿ ಬರ್ಪುಗ್ರಕುಂಡಲಿಯನು ೧೦೭

ಭರದಿಂದೆ ತವಿಸೆಸಗುವನ್ಯಥಾ ಶರಣಮೆನು
ತಿರದೆ ನಾಸ್ತಿತ್ವಪೇವೆನುತೆ ಶರಣಂ ಎನುತೆ
ಕರಮೆ ಮುಮುತಸ್ಮಾದೆನುತ್ತೆ ಕಾರುಣ್ಯಭಾವೇನ ಎನುತೆ (?)
ಮರಳಿ ಸಲೆ ರಕ್ಷ ರಕ್ಷ ಮಹೇಶ್ವರೆನುತೆ ಬಂ
ಧುರನುಪ್ಪ ಮಂತ್ರಮನೊಲಿದ್ದು ಪಠಿಯಿಸೆ ಮನೋ
ಹರಮಂತ್ರಬಲದಿಂದಮಾ ಪಾವಿನುದರವಿ[1]ರ್ಬ[1]ಗಿಯಾಗಿ ಸೀಳ್ದು ಪೋಯ್ತು ೧೦೮

ಮಿನುಗುತಾಂ ಪೋಗುತ್ತಿನನಿತರೊಳ್ ಮತ್ತೊಂದು
ಘನಸರ್ಪನೆಸ್ತಂದು ಬೀಳ್ದಿರಲ್ಪೊನ್ನಳಂ
ವಿನಯದಿಂದಂ ಬೆಸುಗೆಗೆಯ್ದು ಸಂಧಾನಕರಣಿಯನೊಸೆದುತಂದು ರಯದಿಂ
ಮನವೊಲ್ದು ಮುಟ್ಟಿಸಲ್ ಮೃತಸರ್ಪನೆಳ್ದು ಘ
ಮ್ಮನೆ ಪೋದುದತ್ತಲಾ ಸಂಧಾನಕರಣಿಯಂ
ನನಸು ಕುಳಿಸಿಟ್ಟಲ್ಲಿಗೆಯ್ದಿಯಾಂ ಕಂಡದಂ ಕೈಕೊಂಡು ಪೋಗುತಿರಲು ೧೦೯

ಪಿರಿದು ತೃಷ್ಣಾವಿಷಾದನುಮಾಗಿ ಮುಂದೆಸೆವ
ಸರಸಿಜಾಕರದಲ್ಲಿ ನೀರ್ಗುಡಿಪೆನೆಂದು ನಿ
ರ್ಭರದೆ ಕೈದುಡುಕೆ ಬೆರಲಿರ್ಕಡಿಗಳಾದುವಾ ತುಂಡುಗಳನುರಿಕಿ ಸಂಧಿಸಿ
ಹರಿಸಿದಿಂ ಸಂಧಾನಕರಣಿಯಂ ಮುಟ್ಟಿಸಲ್
ಬೆರಲೆಂದಿನಂತಾದುವಾ ಕರ್ತರೀಜಲನು
ನೆರುವಂಶಪಾತ್ರದಿಂದಂ ಮೊಗೆದುಕೊಂಡು ಮುಂದಣ್ಗೆಯ್ದಿ ಪೋಪಾಗ[2][3] ೧೧೦

ಕರಿಗಳೆನ್ನಂ ಕಂಡು ಮುಸಿದೆಳ್ತರುತ್ತಿರಲ್
ಭರದಿನಾಂ ಕಂಡವರಿ ಮೇಲೆ ತತ್ಕರ್ತರೀ
ಸರಳೋದಕಂದಳೆಯಲವರಿ ಸುಂಡಿಲ್ಗಳಂ ಪರಿಯಲಾ ಕಂಸಿಕರವು

---

[1] ಬ್ಬ (ಗ) [2] ರುಷ (ಗ) [3] ಳಾ (ಕ)

ಸರಿಪೋಡುತಿರಲಂಟುಗಲ್ಗಡಣಮಾ ಕರಿಗ
ಳುರು ಶರೀರಂಗಳಂ ಸೋಂಕಲಲ್ಲಿಯೆ ನಿಲಲ್
ನಿರುತಮಾ ಕಲ್ಗಳಂ ಸೋಂಕದಿರ್ದೊಂದು ಕರಿ ತನ್ನ ಶುಂಡಾಗ್ರದಿಂದಂ ೧೧೧

ಭರದಿಂ ಶಿಲೋದಕಂದಂದವಱ ಮೇಲ್ದಳಿಯೆ
ಕರಿಗಳಂಗಂಗಳಂ ಬಿಟ್ಟುವಾ ಶಿಲೆಗಳಱ
ಕರಿಗಳತ್ತಲ್ ಪೋದುವಾ ಶಿಲೋದಕಮನಾಂ ಪಾತ್ರದೊಳ್ ಮೊಗೆದುಕೊಂಡು
ಮರಳಿ ಪೋಗಲ್ಕೆನ್ನನೊಂದೆಡೆಯೊಳುಟುಗಲ್
ಕರಮೆ ಸೋಂಕಲ್ ಶಿಲೋದಕಮನದಱಗ್ರದೊಳ್
ನಿರುತದಿಂ ಸಿಂಪಿಸಲ್ ಬಿಟ್ಟುದಲ್ಲಿಂ ಮುಂದಣೆಡೆಗೆ ಬರುತಿರ್ಪಾಗಳು ೧೧೨

ಪೊಡವಿಯಂ ಬಾನೆಡೆಯುನೆಲ್ಲಮಂ ಮುಸುಕಿಕೊಂ
ಡೆಡೆವಿಡದೆ ಯೋಜನೋತ್ಸೇಧದಿಂದಂ ಮತ್ತೆ
ಬಿಡವಿಲ್ಲದೊಂದು ಯೋಜನದಗಲದಿಂ ವೃಕ್ಷವೊಂದು ಮುಂದೆಸೆಯೊಳಿಸೆಯೆ
ಸಡಗರದೆ ವೃಕ್ಷಮೆಂದಱಯದೊಳ್ಪಟ್ಟಿಯೊ
ದಡರ್ದೇಱ ಪೋಗುತಿರಲನಿತಱತೊಳ್ ಕಪಿರೂಪ
ನೆಡೆಗೊಂಡುದೆನ್ನಂಗಮನಿತಱತೊಳ್ ಪಸಿದದಱ ಫಲಮನೊಂದಂ ಸವಿಯಲು ೧೧೩

ಗಿಳಿರೂಪನಂಗೀಕರಿಸಿತೆನ್ನ ಮೆಯ್ ಮತ್ತೆ
ಬಳಲುತಾಂ ಪೋಗಿ ನವಕುಸುಮದೊಳ್ ಪಟ್ಟಿರಲ್
ಫಳಿಲನೆಯ್ದಿತ್ತೆನ್ನ ತನುಭೃಂಗಮಂದಮಂ ಪೊಸ ಅಲರ ಸವಿಗೆ ಸಿಲ್ಕಿ
ತೊಳಲದಾ ಮರದೊಳಗೆ ಷಡ್ಭೋಜನಮಂ ಬಿಟ್ಟು
ಬಳಿಕಮಾಕಾಶಕ್ಕೆ ಪಾಱಪೋಗುತ್ತೊಂದು
ತೊಳಪ ಗಿರಿಯಂ ಕಂಡೆನಲ್ಲಿಗೆಯ್ದಲ್ಕಲ್ಲಿ ಮುನಿಯೊರ್ವನಿರ್ದನೊಸೆದು ೧೧೪

ಸಡಗರದಿನಾ ಮುನೀಶ್ವರನ ನಾಂ ಕಾಣು[1]ತಂ[1]
ಪಡಪು ಮಿಗೆ ತಚ್ಚರಣಕೆಱಗಲೆನ್ನೊಳ್ ತೋರ್ಪ
ನಿಡಿದಾದ ಭೃಂಗತ್ವಮಳಿದುಪೋದುದು ದಿವ್ಯದೇಹಮಂ ಕೊಟ್ಟನೆನಗೆ
ಕಡುಮೆಱತನ ಖೇಚರೀಬಿಲಮೆಯ್ದೆ ನೋಡಿದಱತೂ
ಳಿಡೆವಿಡದೆ ಕೀಲಾಕದಂಬದಂತೆವೊಲೆಸೆದು
ಕಡುಪಿನಿಂ ತೋರ್ಕುಮದಕಳಱದೀ ಯೋಗಪಾದುಕೆಗಳಂ ಮೆಟ್ಟಿ ನೀನು ೧೧೫

---

[1] ತ್ತೆ (ಗ)

ಭರದಿಂದೆ ನಡೆಯೆ ತಜ್ಜ್ವಾಲೆ ನಿನಗಂಜುವುದು
ನಿರುತವೆನುತಾ ಮುನೀಶಂ ತನ್ನ ಕರುಣದಿಂ
ದಿರದಿತ್ತು ಯೋಗಪಾದುಕೆಗಳಂ ಬಳಿಕೆನ್ನ ಕಳುಪಿದಂ ಸಂತಸದೊಳು
ವರ [1]ಯೋಗ[1]ಪಾದುಕಾಯುಗ್ಮಮಂ ಪಡೆದು ಸಾ
ಸಿರಬರಿಸಮಾದುದಂದಿಂದಮಿಾ ಗಿರಿಯೊಳಗೆ
ಹ[2]ರಿಸ[2]ದಿಂ ಮಲ್ಲಿಕಾರ್ಜುನನ ಕರುಣದೆ ಸರ್ವಸಿದ್ಧಿಯಂ ಪಡೆದಿರ್ಪೆವು ೧೧೬

ಸಡಗರದಿನೀ ಯೋಗಪಾದುಕೆಗಳಂ ಮೆಟ್ಟಿ
ಬಿಡದಾವಲೋಕಕ್ಕೆ ಪೋಗಲುಜ್ಜುಗಿಸೆ ಮ
ತ್ತೊಡನೆ ಖೇಚರದಿನಾಯೆಡೆಗೆ ಪೋಪೆಂ ಮಗುಳ್ದು ಪಾತಾಳಲೋಕಕೆಯ್ದಿ
ಕಡುಪಿನಿಂ ಭೋಗಾವ[3]ತೀ[3] ಸಲಿಲಮಂ ಕನಕ
ಜಡಜಂಗಳಂ [4]ತಂದು[4] ಮಲ್ಲಿಕಾರ್ಜುನನ ಜಡೆ
ಮುಡಿಯನರ್ಛಿಪೆನಿಂತು ಭಾಗೀರಥೀ ಮುಖ್ಯನದಿಗಳಂಬುವ ತರ್ಪೆನು ೧೧೭

ಪಿರಿದುಮಾ ಜಲದಿಂದೆ ಮಲ್ಲಿಕಾರ್ಜುನನ ಬಂ
ಧುರಮಾಗಿ ಮಜ್ಜನಂಬುಗಿಸುವೆನೆನುತ್ತೆ ಮ
ತ್ತಿರದಾತನಲ್ಲಿಂದ ಪೋದನೆಲೆ ಸಾಧಕನೆಯೆಂದಿವುಂ ಮೊದಲಾದುಮಂ
ವರ ವೃದ್ಧಮುನಿರೂಪದಿಂದಿರ್ದ ಭೈರವಂ
ಹ[5]ರಿಸ[5]ದಿಂ ಸಾಧಕಂಗೊರೆಯಲಿದನೆಲ್ಲಮಂ
ಪಿರಿದು ಕೇಳುತ್ತುಮಾ ಸಾಧಕಂ ನಸುನಗುತೆ ಮುನಿಪನೊಡನಿಂತೆಂಬನು ೧೧೮

ಮಿಸುಗುವೀ ಶ್ರೀಗಿರಿಯೊಳಿರ್ದ ಚೋದ್ಯಂಗಳಂ
ಹಸನಾಗಿ ಪೇಳ್ವೊಡಾ ವಾಕ್ಪತಿಗಶಕ್ಯಮಿಾ
ಎಸೆವ ಗಿರಿಯೊಳಗೆನಿತು ವೃಕ್ಷಂಗಳೊಳವೆನಿತು ಚಿತ್ರಂಗಳುಂಟವೆಲ್ಲಂ
ನುಸಕದಿಂದಂ ಸಾಧಕಂಗೆ ಕಾಣಿಸುಗು ಮ
ತ್ತುಸವಸದೆ ಸಾಧಿಸಲ್ ಕಾಣದಿರ್ಪೊಂದು ರಾ
ಜಿಸುವ ಚೋದ್ಯಮದುಂಟೆ ಭೂಮಿಯೊಳ್ ನಿನ್ನ ಮಾತಂತಿರ್ಕೆ ವೃದ್ಧಮುನಿಪ ೧೧೯

ಹ[5]ರಿಸ[5]ದಿಂದೆನ್ನೊಡನೆ ಬರ್ಪಾಗಳಲ್ಲದೊಡೆ
ಪಿರಿದೆನಗೆ ಮಾರ್ಗಮಂ ಬಿಡು ಪಲವುಮಾತಿಂದೆ
ಪುರುಳೇವುದಯ್ಯ ನೀನಿದನೊಡಂಬಡದೊಡಮುಪಾಧ್ಯಾಯು ಶಿಷ್ಯರ್ಕಳ

---

[1] ವೇದ (ಕ) [2] ರುಷ (ಗ) [3] ತಿಯು (ಗ) [4] ಕಂಡು (ಕ) [5] ರುಷ (ಗ)

ಉರುತರ ನ್ಯಾಯಮುಕ್ಕುಂ ಪೋಗುವೆನಗೆ ಭಾ
ಸುರ ಮಾರ್ಗಮಂ ಬಿಡುವುದೊಳ್ಳಿತಾಂ ಪೋಪೆಡೆಯೊ
ಳಿರಲಿ ಬಗ್ಗಂ ಮನದೊಳೆಳ್ಳನಿತು ಭಯಮೆನಗೆ ತೋಱದನಿಶಂ ನಿಕ್ಕುವಂ ೧೨೦

ಪಿಡಿದ ಚಲಮಂ ಬಿಡುವನಲ್ಲ ನಾಂ ನೀನೆನಿತು
ನುಡಿದೊಡಂ ಕೇಳ್ವುದಿಲ್ಲೀ ಬಿಲಮುನಳ್ಕಱಿಂ
ದೊಡನೆ ಪುಗುವೆಂ ವಿಘ್ನಮೊಂದಿಲ್ಲ ಹರಣಮುಂ ಪೋದೊಡಂ ಪೋಗಲೀಗ
ಪಡೆವೆನಾಂ ಜಯಮನಿಲ್ಲಿನಿತು ತಳ್ವೆಂ ಮತ್ತೆ
ಕಡುವೃದ್ಧನಾದ ನಿನ್ನಂ ನೋಡಿ ತಳ್ವಿದೆಂ
ಕಡುಪಿನಿಂದೀಯೆಡೆಯೊಳಿನ್ನಂ ನಿವಾರಿಪುದು ಸಿರಿಗಿರೀಶಂಗಾಗದು ೧೨೧

ಎಲೆ ವೃದ್ಧ ತಾಪಸನೆ ಎನ್ನ ಪೌರುಷಮುಮಂ
ತೊಲಗದೀ ಬಿಲಮಂ ಪ್ರವೇಶಿಸುವುದುಂ ಮಗುಳ್ದು
ನಿಲವಿಲ್ಲದೇ ತಿರುಗುವುದನೆಲ್ಲಮಂ ನೋಡುತತ್ತ್ರದಱಿನಾಂ ನಿನ್ನವಂ
ಸಲೆಯೆಂಬ ಬಗೆಯಿನೆನ್ನಂ ಪರಸಿ ಬೀಳ್ಕೊಡುವು
ದಲಘು ಪೌರುಷಮುಕ್ಕುಮುದು ನಿನಗೆ ಕೇಳ್ ಮತ್ತೆ
ಫಲಮನುಸುರೆಂ ಮಲ್ಲಿಕಾರ್ಜುನನ ಕೃಪೆಯಿಂದೆ ಪೋಪೆನೆಂಬಂ ಸಾಧಕಂ ೧೨೨

ಇನಿತೆಲ್ಲಮಂ ಕಪಟವೃದ್ಧವೇಷದ ಮುನಿಪ
ನನುವಿನಿಂದಱಿದಿನ್ನಿವಂ ಸೆಡೆಯನೆನ್ನ ನೂ
ತನಕಪಟವಾಕ್ಯಸಂತತಿಗೆ ತರ್ಜನೆಗಳ್ಗೆ ವಂಚನಾವಳಿಗೆ ನಿಸದಂ
ಎನುತದೃಶ್ಯಂದಲಪ್ಪಂ ಕಟಪಮುನಿ ಮತ್ತೆ
ನನಸಱಿವನಾ ಸಾಧಕಂ ಕುಟಿಲಮುನಿಯೆಂದು
ಮಿನುಗುತಾ ಸಾಧಕಂ ಮುಂದಣ್ಗೆ ಪೋಗುತಿರಲನಿತಱಿಕೂಳಗಾ ಭೈರವಂ ೧೨೩

ಅತಿವೇಗದಿಂ ಮುಂದಕೆಯ್ದಿ ಪೆರ್ಬುಲಿಯಾಗಿ
ನುತಸಾಧಕಂ ಬರ್ಪ ಬಿಲಮಾರ್ಗದೊಳ್ ವಿಜ್ರಂ
ಭಿತರೂಪದಿಂ ಕವಾಟದ ತೆಱದೆ ನಿಂದಿರುತ್ತೆಲೆ ಸಾಧಕನೆ ಎನ್ನನು
ಅತಿಗಳೆ[1]ಯ:ತಾವೆ[1]ಡೆಗೆ ಪೋಪಯೆನುತುಂ ನುಡಿಯು
ತತಿಶಯದೆ ಬಳೆದು ಬಲ್ದನಿಗುಡುತೆ ಕಣ್ಗಳಿಂ
ಸತತಮುರಿಗಿಡಿಗಳಂ ಕೆದಱುತ್ತೆ ಬಾಯ್ಪಿಡುತೆ ಮಾಸೆಗಳನಲುಗಿಸುತ್ತೆ ೧೨೪

---

[1] ವುತಾಯೆ (ಗ)

ಕಡುಗೋಪದಿಂ ನಾಸಿಕವನರಳಿಸುತ್ತೆ ಪು
ಚ್ಛೊಡನೊಡನೆ ಪೊಡವಿಯೊಳ್ ಬಾಲವಂ ಬಡಿಯುತ್ತೆ
ವಿಡುಕಿಸುತೆ ಪುರ್ಬುಗಳನತಿರೌದ್ರದಿಂದೆ ನೋಡುತ್ತೆ ನಾಲಿಗೆಯ ತುದಿಯಂ
ಕಡೆವಾಯನಂಟಿಕೊಳುತುಂ ಮುಂದಣಡಿಗಳಿಂ
ಪೊಡವಿಯು ಬೆರಂಟುತುಂ ಮುನ್ನೆ ಲೋಕಂಗಳಂ
ಕಡುಪಿನಿಂದಳಿಪುವ ಬಗ್ಗರಕ್ಕಸನೊಯೆಂಬಂತೆ ಭೈರವನಿರ್ಪನು ೧೨೫

ಮರಳಿಯಾ ಭೈರವಂ ಮದಕರಿಗಳಂತೆ ಕೇ
ಸರಿಗಳಾಕೃತಿಯುತೆ ವೃಶ್ಚಿಕದ ರಾಶಿಯುಂ
ತುರಗಸಂಕುಳದಂತೆ ರಕ್ತ ಕೃಷ್ಣ ಶ್ವೇತವರ್ಣದಿಂ ತೋರುತಿರ್ಪ
ಅಬ್ಬಣಂಬೆಯು ತೆಱಡೆ ಪುತ್ತಿವುಂ ಮೊದಲಾದ
ಪಿರಿದು ಭಯಮಂ ತೋರ್ಪ ಜೀವಸಮುದಯದಂತೆ
ಭರದೆ ತೋರುತ್ತುಮಾ ವ್ಯಾಘ್ರನತಿಕೋಪದಿಂ ಸಾಧಕನ ನೋಡುತಿರ್ಕುಂ ೧೨೬

ಅನಿತಱೊಳಗಾ ಸಾಧಕಂ ಪುಲಿಯ ನೋಡುತ್ತೆ
ಕನಲಿ ನುಡಿದಂ ಮಾರ್ಗಮಂ ಬಿಡದೊಡೆನಗೆ ಘು
ಮ್ಮನೆ ನಿನ್ನ ತನುವನಿರ್ಕಡಿಗೆಯ್ವೆನುಗಿವೆನಾಂ ದೊಂಡೆಗರುಳಂ ಬೆನ್ನೊಳು
ಎನೆ ಬಗ್ಗವತಿಕೋಪದಿಂದೆ ನೋಡುತ್ತಿರದೆ
ವಿನುತಕಲ್ಪಾಂತ ಮೇಘಧ್ವಾನದಂತೆ ತೊ
ಟ್ಟನೆ ರವಂಗೆಯ್ದುಮದಕಱು ಕಣ್ಗೆಟ್ಟು ಬೆಂಬೀಳದತಿಧೈರ್ಯದಿಂದೆ ೧೨೭

ಕರಮೊಂದಱಿಂದದಱ ಮಿಸೆಯುಂ ಪಿಡಿದು ಮ
ತ್ತಿರದೊಂದು ಕೈಯಿಂದಮದಱ ಬಲ್ದಾಡೆಯುಂ
ಭರದೆ ಪಿಡಿದೌಂಕಿ ಮಗುಳ್ದದಱ ಕಾಲ್ಗಳ ತನ್ನ ಕಾಲ್ಗಳಿಂ ಬಂಧಿಸುತ್ತೆ
ಧರಣಿಯೊಳ್ ಕೆಡಪಲಾ ಪುಲಿಯುನಾ ಸಾಧಕಂ
ಮರಳಿಯಾ ಪುಲಿಯದೃಶ್ಯಂ ದಲಕ್ಕುಂ ಮನೋ
ಹರದಿನಾ ಸಾಧಕಂ ಮುಂದಣ್ಗೆ ಪೋಗುತಿರಲಾ ಭೈರವಂ ಮತ್ತೆಯುಂ ೧೨೮

ಕಡುಪಿಸಿಂ ಮುಂಬಟ್ಟೆಗೆಯ್ದಿ ಮತ್ತಾ ಬಿಲದೊ
ಳಡಿಯಿಡಲ್ ಬಾರದಂತಾ ಬಿಲದ್ವಾರಮಂ
ಕಡುಕೆಱೆದುಮಾಡಿ ಮತ್ತದಱೊಳುರಿ ಪಂಜಾಗಿ ತಾನಿರ್ಪನತಿಶಯದೊಳು

ಸಡಗರದಿನಾ ಸಾಧಕಂ ಪೋಗುತಾ ಬಿಲದೊ
ಳಡಿಯಿಡಲ್ ಬಾರದಿರೆ ಕುಳ್ಳಿರ್ದು ತೆವಳುತ್ತೆ
ದಡದಡನೆ ಪೋಗುವಂ ಪುತ್ತಮಾ ಬಿಲನದಱನಿನಿತು ಕಿಱಿದಾಗಿ ತೋರ್ಕುಂ ೧೯

ಪಡಪಿನಿಂದಾ ಸಾಧಕಂ ದಂಡದಂತೆಯ್ದಿ
ಪೊಡೆಗೆಡೆದು ಪೊಟ್ಟೆಯಿಂದಂಬಳಿಕ್ಕುತೆ ನಾಡೆ
ಸಡಗರದೆ ಪೋಗುತಿರೆ ಮುಂದೆ ಸಂವರ್ತಾಗ್ನಿಯಂತೆ ಛಿಳಿಛಿಟಿಲೆನುತ್ತೆ
ಕಡುಮೆಱೆವ ಕಿರ್ಚಿನುರಿ ಮುಂದೆಯ್ದಿ ಬರುತಿರಲ್
ಮಿಡುಕದಳ್ಕದೆ ಬಳಿಕ್ಕಧಟಿನಿಂದದಱೊಳಗೆ
ಕೆಡೆಯಲಾ ಕಿರ್ಚಿನುರಿಯಾಗಿರ್ಪ ಭೈರವಂ ಮೆಚ್ಚಿ ನಿಜಮಂ ತೋಱುತೆ ೨೦

ಎಲೆ ಸಾಧಕನೆ ನಿನ್ನ ಬೀರಮಂ ಕಂಡೆನಾಂ
ನಲಿದು ನಿನ್ನಿಷ್ಟಾರ್ಥಮಂ ಬೇಡು ಕುಡುವೆನೆನೆ
ಸಲೆ ಸಾಧಕಂ ನುಡಿವನೊಸೆದು ನೀಂ ಕುಡುವುದೇನೆನಗೆನ್ನ ಪೊರೆವ ಶಿವನು
ಒಲವಿನಿಂದೆನ್ನಿಷ್ಟಸಿದ್ಧಿಗಳನೀವನತಿ
ಬಲಭೈರವನೆ ನಿನ್ನ ಸಾರೂಪ್ಯಮದು ವಲಂ
ಲಲಿತಮಾಕಾರಮಲ್ಲತಿವಿಕೃತಮಾಗಿ ಭೀಕರಮಾಗಿ ತೋಱುತಿರ್ಕುಂ ೨೧

ಮಿಗೆ ನಿನ್ನ ಸಾ[1]ಮೀ[1]ಪ್ಯಮೆಂಬುದದು ಭಾವಿಸಲ್
ನೆಗಳ್ದ ಮಧುಮಾಂಸದಿಂದೊಪ್ಪುತಿರ್ಕುಂ ಕರಂ
ಬಗೆಯೆ ಸಾಲೋಕ್ಯಮೆಂಬುದು ಭೂತವೇತಾಳಸಂಕುಲದಿನೆಸೆಯುತಿರ್ಕುಂ
ವಿಗಡ ನೀಂ ಕುಡುವ ವರವಿನ್ನಾವುದೆನಗೆ ತೊ
ಟ್ಟಗೆ ನಿನ್ನ ಸೇವಿಸಿದೊಡೇಂ ಕಜ್ಜಮುಂಟು ಕೆ
ಮ್ಮಗೆ ಬಟ್ಟೆಯಂ ಕೊಟ್ಟು ಪೋಗೆಂದು ಭೈರವನ ಕಪಟವೃತ್ತಿಗೆ ಸಿಲ್ಕದೆ ೨೨

ಭರದಿನಾ ಸಾಧಕಂ ಮುಂದಣ್ಗೆ ಪೋಗುತಿರೆ
ಕರಮೆ ಸಪ್ತಾಂಬುಧಿಗಳೇಳುಮೊಗ್ಗಾಗಿ ನಿ
ಷ್ಠುರತರ ಧ್ವಾನದಿಂ ಘೂರ್ಣಿಸುತೆ ಬರ್ಪಂತೆ ಮುಂದೆಸೆಯೊಳತಿರಾವದಿಂ
ನಿರುತಮಾ ಪಾತಾಳಗಂಗೆ ಮುನ್ನೊಸೆದು ನಿ
ರ್ಭರದಿಂದೆ ಬಂದ ತದ್ವಾರವೋ ಎಂಬಂತೆ
ಪಿರಿದಿದಿರೊಳೊಂದು ಬಿಲದಿಂದೆ ಗಂಗಾಪ್ರವಾಹಂ ತೋರ್ಪುದತಿಶಯದೊಳು ೨೩

---

[1] ರೂ (ಗ)

ಮರಳಿ ತನಗಿದಿರಾಗಿಯಾ ಪ್ರವಾಹಂ ಬರುತು
ಮಿರೆ ಕಾಣುತಾ ಸಾಧಕಂ ಭೀತಿಯಿಲ್ಲದತಿ
ಭರದಿನಾ ಜಲದೊಳಗೆ ಧುಮ್ಮಿಕ್ಕಿಯೇಳ್ವನಿತಱೊಳ್ ಮಿನುಪ ದಿವ್ಯದೇಹಂ
ತ್ವರಿತದಿಂ ತನಗಾಗಿ ತದ್ದೇಹಕಾಂತಿ ವಿ
ಸ್ಫುರಿಸೆ ದಶದಿಕ್ಕಿನೊಳ್ ನಡೆದುಬರುತಿರೆ ಮುಂದೆ
ವರ ರತ್ನಖಚಿತಹೇಮದ ದೇವಗೃಹದೊತ್ತಿನೊಳ್ ತೋರ್ಪ ಹರ್ಮ್ಯದೊಳಗೆ ೧೩೪

ಕನಕಭೇರಿಯ ನೋಡಿಯದಱೊತ್ತಿನೊಳ್ ನಾಡೆ
ಮಿನುಪ ತದ್ದಿವ್ಯಲಿಂಗಮನುಪಾಸ್ಯಂಗೆಯ್ದು
ಘನಹರ್ಷದಿಂದೆ ತದ್ಭೇರಿಯಂ ಬಾಜಿಸಲ್ ದೇವಕಾಂತಾಕದಂಬಂ
ಅನುನಯದಿನಲ್ಲಿಗೆಯ್ತಂದು ತತ್ಸಾಧಕನ
[1]ಕನದಭ್ರ[1] ಮಾತಂಗಮಸ್ತಕದೊಳೊಸೆದಿರಿಸಿ
ಮನವೊಲ್ದು ಸಗ್ಗಕ್ಕೆ ಕೊಂಡೊಯ್ದು ಮತ್ತಮಾ ಸುರಸತಿಯರಳ್ತಿಯಿಂದಂ ೧೩೫

ಇದು ಕಲ್ಪವೃಕ್ಷಮಿದು ಸುರಧೇನು ಭಾವಿಸ
ಲ್ಕಿದು ಸುಧಾಕೂಪಮಿದು ಸುರಪನೈಶ್ವರ್ಯಮೆನಿ
ಸಿದ ಭಾಸ್ವದಣಿಮಾದಿಸಿದ್ಧಿ ಮತ್ತಿವರೆಸೆವ ರಂಭಾದಿ ಸುರಸತಿಯರು
ಪುದಿದಿವರೊಳೊಸೆದು ನಿನಗನುವಾದ ವಸ್ತುವಂ
ಪಡೆದು ಮರಿಸೆನುತವರ್ ಪ್ರಾರ್ಥಿಸುತ್ತಿರೆ ಮನೋ
ಮುದದಿಂದೆ ತತ್ಸಾಧಕಂ ಸುರಪಪದವಿಯೊಳ್ ಸಂತುಷ್ಟನಾಗಿರ್ಪನು ೧೩೬

ಸಲೆ ದಿವ್ಯ[2]ವರ್ಷಕೋಟಿಗಳನೇಕಂಬರಂ
ಒಲವಿನಿಂ ತತ್ಸಾಧಕಂ ಸುರಪಪದವಿಯಂ
ನಲಿದು ಭೋಗಿಸುತಿರ್ಪನನಿತಱಿಂ ಮೇಲವಂಗಭವಲೋಕಂ ಸಾರ್ವುದು
ಪಲವಿಂತುಟಪ್ಪ ಬಿಲನಿಕರಂಗಳೊಳವು ಸ
ಲ್ಲಲಿತಮಾಗೊಪ್ಪುವೀ ಶ್ರೀಗಿರಿಯೊಳೇನೆಂಬೆ
ನೆಲೆ ದೋನಮಾರ್ಯ ಮತ್ತಿದಱ ಮಹಿಮೆಯನೀಶನೊರ್ವನೇ ಬಲ್ಲನಸಿಶಂ ೧೩೭

ಪಡುಬನಿಂ ನೋಡಿತ್ತಲೀ ಪರ್ವತದೊಳೆಸೆವ
ಬಡಗವಾಗಿಲ ಮಹಿಮೆಯಂ ಮತ್ತಮಲ್ಲಿ ನೆಱೆ
ಸಡಗರದೊಳಿರುತೆ ರಾಜಿಪ ಮಹೇಶ್ವರಲಿಂಗನಂ ಗಣೇಶ್ವರಲಿಂಗನಂ

1 ನನುವಿನಿಂ (ಕ) 2 ಕೋಟಿವರ್ಷ (ಗ)

ಕಡುವೆಂಜಿತವ ಸಂಧ್ಯಾಸಮಾಧಿ ಚರುಕೇಶ್ವರರ
ನೊಡನೆ ಕಾಲಹ್ರದೇಶ್ವರನನುಜಿತ ತೋರ್ಪ ಸೊಂ
ಪಡರ್ದ ಪಾಪವಿನಾಶಲಿಂಗನಂ ದೇವ ಹ್ರದೇಶ್ವರನನಲ್ತಿಯಿಂದಂ ೧೩೮

ಗರುಡೇಶ್ವರನನೊಸೆದು ನೀಲಹ್ರದೇಶ್ವರನ
ನುರು ಗುಪ್ತಮಾಹೇಶ್ವರನನಳ್ಕಱಿಂದೆ ನೀಂ
ಪರಮ ಸಿದ್ಧೇಶ್ವರನನೀಕ್ಷಿಸಿವು ಪನ್ನೊಂದುತಾಣಮಿಾ ಲಿಂಗಂಗಳಂ
ವರ ಚತುರ್ಮುಖಬಸವನಂ ಮೊದಲೊಳರ್ಚಿಸದೆ
ನಿರುತಮಿವನರ್ಚಿಸಿದೊಡಾ ಪೂಜೆ ನಿಷ್ಫಲಂ
ಕರಮೆ ವೃಷಪೂಜೆಗೆಯ್ಯದೆ ಶಿವನ ಪೂಜಿಸಿದೊಡೆಂತು ನಿಷ್ಫಲಮಂತುಟು ೧೩೯

ಮಿಸುಪ ಕನ್ಯಾಸಿದ್ಧನಾಥನಾಲಯದ ಸೊಂ
ಪಿನ ಹರ್ಮ್ಯದಿಂ ಮೂಡಗಡೆಯೊಳದೆ ನೋಡು ತೊ
ಟ್ಟನೆ ವಿಲಸಿತ ಸ್ವಯಂಭೂಲಿಂಗದೇವನನಮರಾವತೀಪುರಿಯೊಪ್ಪುತೆ
ವಿನುತ ಮಂದಾಕಿನೀ ನದಿಯ ತೀರದೊಳಿರ್ಪ
ಘನತರೇಂದ್ರೇಶನಂ ನೋಡು ಮತ್ತಮದಱಿಂದೆ
ನನಸುಮೂಡಲ್ ತೋಱುತರೆಗುಪ್ತಮಾಹೇಶ್ವರಂ ಎಂಬ ಘನಲಿಂಗವು ೧೪೦

ನಿರುತಮದಱಿಂ ಮೂಡಗಡೆಯಲ್ಲಿ ತೋಱುವಾ
ಸುರುಚಿರೇಲೇಶ್ವರನನಿಷ್ಟಸಿದ್ಧಿಗಳೀವ
ಪರಮಲಿಂಗಂಗಳಂ ಕುಂಡಂಗಳಂ ಪರ್ವತಂಗಳಂ ನೋಡಿತ್ತಲು
ಪಿರಿದುಮಾಮಾಹೇಶ್ವರನ ಸಂಗಮೇಶ್ವರನ
ನುರು ತಿಲೇಶ್ವರನನತಿಸಿದ್ಧಮುಕ್ತೇಶ್ವರನ
ಸರಳ ಮೂಲಸ್ಥಾನ[1]ಮೆನಲೀ[1]ಶ್ವರಾದಿ ಲಿಂಗಂಗಳಂ ನೋಡು ಮುದದಿಂ ೧೪೧

ಮಗುಳ್ದಿತ್ತ ನೋಡು ಕನ್ಯಾಗಿರಿಯನಳ್ಕಱಿಂ
ಮಿಗೆ ಶಿಲಾಚಲಮನೊಪ್ಪುವ ವೇದಶೈಲಮಂ
ಸೊಗಸುವಾ ಶ್ವೇತಾದ್ರಿಯಂ ಲಿಂಗಪರ್ವತಮನೆಸೆವ ಪಾತಕನಾಶನಂ
ನೆಗಳ್ದ ಗೌರೀಕುಂಡಮಂ ನೀಲಕುಂಡಮಂ
ಬಗೆದು ನೋಡೀ ಪುಣ್ಯತೀರ್ಥಂಗಳಿಂದೆ ತೊ
ಟ್ಟಗೆ ಮಿನುಗುತಿರ್ಪ ಮಾತಂಗೇಶ್ವರಂ ಮೂಡಗಡೆಯಲ್ಲಿ ರಂಜಿಸುತದೆ ೧೪೨

---

[1] ಮೇಲೇ (ಕಗ)

ಪಿರಿದುಮುದಜಿಂ ಮೂಡಗಡೆಯಲ್ಲಿ ನೋಡು ಸುರು
ಚಿರಪುಣ್ಯತೀರ್ಥಂಗಳೊಳವಪರಿಮಿತವೇಯ್ದೆ
ಭರದಿನಜಿಂ ತೆಂಕಗಡೆಯಲ್ಲಿ ನೋಡು ಮತ್ತುರುತರ ತ್ರಿಪುರಾಂತಕಂ
ಕರಮೆಸೆಯುತದೆ ಆದಟಿ ಮಹಿಮೆಯಂ ಸಂಕ್ಷೇಪ
ದಿರವಿನಿಂ ಪೇಳ್ದಪೆಂ ಮುನ್ನೆ ಅಂತ್ಯಜರೀರ್ವ
ರಿವನೊಂದು ಗೋಹತ್ಯಮಂ ಮಾಡಲವರಂ ಕುಮಾರಾದ್ರಿಯೊತ್ತಿನಲ್ಲಿ ೧೪೩

ಕಡುಮುನಿದು ತದ್ಧರಾಧಿಪನಂತ್ಯಜರ ಬರಿಸಿ
ಘುಡುಘುಡಿಸಿ ಕೋಪದಿಂದವರಿರ್ವರಂ ನೋಡಿ
ಕಡುಪಿನಿಂದೆಳಹೂಟಮಂ ಕಟ್ಟಯೆಳಸಲವರೀರ್ವರುಂ ಮೃತಮನೆಯ್ದಿ
ಸಡಗರದಿನಾ ಭೂಮಿಪಾಲಸುತರಾಗೊಗೆದು
ಮೊಡನೆ ಜಗದೇವ ಜಜ್ಜುಗಳೆಂಬ ಪೆಸರಿಂದೆ
ಪೊಡವಿಯೊಳ್ ಒಳೆಯುತಿರೆ ಜಾತಿಸ್ಮರತ್ವಮದು ತಲೆದೋಜಿತೀರ್ವರ್ಗೆಯುಂ ೧೪೪

ಪಿರಿದು ಪಿಂದಣಜನ್ಮದೊಳ್ ತ[2]ಮ್ಮ[1] ತಪ್ಪಿಂಗೆ
ನರಪನಾಳ್ ಪಿಡಿಯಲೆಯ್ತರೆ ಪೆಳಜಿಯಾ ಗಿರಿಯ
ಭರದಿಂದೆ ಸುತ್ತಿ ಮೆಯ್ಗರೆದಡಂಗಿದ ತಾಣಕೆಯ್ದಿ ತಮ್ಮಯ ಕೈದುವಂ
ಹ[2]ರಿಸ[2]ದಿಂ ತೆಗೆದವಂ ಸರ್ವರ್ಗೆ ತೋಱಿ ಮ
ತ್ತಿರದವಂ ನೋಡಿ ಜನರೆಯ್ದೆ ವಿಸ್ಮಿತರಾಗೆ
ಮರಳಿಯುವರೀರ್ವರುಂ ರಾಜ್ಯಮಂ ಬಿಸುಟು ಸದ್ಭಕ್ತಿಭರದಿಂದಾವಗಂ ೧೪೫

ಗಿರಿಶನಂ ಪೂಜಿಸುತ್ತಿರೆ ಪೂರ್ವಜನ್ಮದೊಳ್
ಪಿರಿದಪ್ರಯತ್ನದಿಂದಂ ಕುಮಾರಾದ್ರಿಯಂ
ನಿರುತಂ ಪ್ರದಕ್ಷಿಣಂಗೆಯ್ದ ಫಲದಿಂದೆ ಸಾರೂಪ್ಯಪದವಿಯ ಸಾರ್ದರು
ಕರಮುದಜಿನಾ ಕುಮಾರಾದ್ರಿಯಾ ಮಹಿಮೆಯಂ
ಹ[2]ರಿಸ[2]ದಿಂ ಪೊಗಳ್ವನೆಲ್ಲಿದನವನಿಯೊಳ್ ಮತ್ತೆ
ಭರದಿಂ ಪುರಾರಿಯಾ ಧ್ವಜಮನೀಕ್ಷಿಸಿದಂಗೆ ಮುಕ್ತಿ ಸಾರ್ಗಂ ಸಿಕ್ಕುವಂ ೧೪೬

ಹ[2]ರಿಸ[2]ದಿಂ ತ್ರಿಪುರಾಂತಕೇಶ್ವರನ ಮತ್ತಮಾ
ವರ ಕುಮಾರಾಚಲದ ದರ್ಶನಂಗಳ ಮಗುಳ್ದು
ಪರಿಸಲಂಗಳ ಪೂಜೆಗಳ ಫಲಮನಭಿವರ್ಣಿಪೊಡೆ ಶೇಷನಳಜಿತಿರ್ಪಂ

---

[1] ನ್ನ (ಕಗ) [2] ರುಷ (ಗ)

ಪಿರಿದಲ್ಲಿ ತೋರ್ಪ ಸೇವಾಮಹತ್ವಕ್ಕೆ ಬಂ
ಧುರ ಶಶಕಮೂಷಕಂಗಳೆ ಸಾಕ್ಷಿ ಲೋಕದೊಳ್
ವರ ಗಂಧವತಿಯ ತೀರದೊಳಿರ್ಪ ವಿಲಸಿತ ಶ್ರೀಸ್ವಯಂಭೂಲಿಂಗಮಂ ೧೪೭

ಉರುತರ ತ್ರಿಪುರಾಂತಕಮನೊಲ್ದು ನೋಡು ಮ
ತ್ತಿರದೆ ಗೌರೀಶ್ವರನ ಸೋಮೇಶ್ವರನನೆಯ್ದೆ
ಪರಮಕಪಿಲೇಶ್ವರನ ಮಲ್ಲಿಕಾರ್ಜುನನ ಖಡ್ಗೇಶ್ವರನನಳ್ಕರಿಂದಂ
ಪಿರಿಯ ಪಾಪವಿನಾಶನಂ ವಿಮುಕ್ತೇಶ್ವರನ
ಸರಳ ಕನ್ಯಾಸಿದ್ಧನಾಥೇಶ್ವರನನೊಸೆದು
ಭರದಿಂದಮುತ್ತರೇಶ್ವರನನೀಕ್ಷಿಸು ಮಹಾಲಿಂಗಸಂಘಾತಂಗಳಂ ೧೪೮

ಮಿನುಗುವಾ ತ್ರಿಪುರಾಂತಕದ ತೆಂಕದಿಕ್ಕಿನೊಳ್
ಘನಸಿದ್ಧವಟನಾಥನಿರ್ಕೆಲದ ಮಾರ್ಗದೊಳ್
ವಿನುತ ವೃದ್ಧ ಗಿರೀಂದ್ರ ಸಿದ್ಧೇಶ್ವರರ್ ಮತ್ತೆ ಗೋಶೃಂಗವಾದಿಯಾದ
ಕನದಖಿಳ ಪುಣ್ಯಾಸುಸ್ಥಾನಂಗಳಂ ನೋಡು
ನನಸು ಪಡುಗಡೆಯೊಳಿರ್ಪಮೃತೇಶ್ವರನನೀಕ್ಷಿ
ಸನುವಿನಿಂ ಭ್ರಮರೇಶ್ವರನ ಮಲ್ಲಿಕಾರ್ಜುನನ ಸುರಭೇಶ್ವರನನೀಕ್ಷಿಸು ೧೪೯

ನನಸು ಪಾಪವಿನಾಶನಂ ಮಗುಳ್ದು ಮುಕ್ತೇಶ್ವ
ರನನೀಕ್ಷಿಸೊಲ್ದು ಕಾಲೇಶ್ವರನ ಭೀಮೇಶ್ವ
ರನ ಪಟಹಕರ್ಣೇಶ್ವರನ ಕುಂಭಕರ್ಣೇಶ್ವರನನೀಕ್ಷಿಸಳ್ತಿಯಿಂದಂ
ಮಿನುಗುವಾ ಶ್ರೀಸ್ಕಂಧಸೋಮೇಶ್ವರನ ನೋಡು
ಘನಜಾನು ಪರ್ವಲಿಂಗನ ನೋಡು ಮತ್ತಿತ್ತ
ಕನಕಗಿರಿಯೇಕಶಿಲೆಯಂ ನೋಡು ರುದ್ರಾಕ್ಷಪರ್ವತಮನೊಸೆದೀಕ್ಷಿಸು ೧೫೦

ವರ ಲಿಂಗಪರ್ವತಮನೀಕ್ಷಿಸಿತ್ತಲ್ ಮತ್ತ
ಮುರು ಭಸಿತಗಿರಿಯನೀಕ್ಷಿಸು ನಿಜವಿಭೀಷಣೇ
ಶ್ವರನ ಘುಟಿಕಾಸಿದ್ಧನಾಥೇಶ್ವರನ ಮಗುಳ್ದು ಕಮಲೇಶ್ವರನನೀಕ್ಷಿಸು
ಪರಮಸಾಲಂಕೇಶ್ವರನ ನೋಡು ಮಗುಳ್ದಿತ್ತ
ಸರಳ ಭೀಮೇಶ್ವರನ ನೋಡಳ್ಕರಿಂದೆ ಭಾ
ಸುರ ವಿಭೀಷಣಕುಂಡಮಂ ರಾವಣಾಖ್ಯಕುಂಡಮನೀಕ್ಷಿಸಿತ್ತ ಮತ್ತಂ ೧೫೧

47

ಪರವು ಯಾಮ್ಯೋದಯಾಚಲದಲ್ಲಿ ಶೋಭಿಸುವ
ಸಿರಿಗಿರಿಯ ದಕ್ಷಿಣದ್ವಾರಪತಿಯೆನಿಸುವಾ
ವರ ಪಿನಾಕಿನಿಯೆಂಬ ನದಿಯ ತೀರದೊಳಿರ್ಪ ದೇವಾಧಿದೇವನೆನಿಪ
ಸರಳವಟಮೂಲ ನಿಜವಾಸಮಾಗಿರ್ಪ ಬಂ
ಧುರ ದೇವವೇಶ್ಯಾಭುಜಂಗನೆನಿಸುವ ಮನೋ
ಹರ ಸಿದ್ಧವಟಲಿಂಗಮಂ ನೋಡು ಬ್ರಹ್ಮೇಶ್ವರನ ನೋಡು ಸಂತಸದೊಳು ೧೫೨

ವರುಣೇಶ್ವರನ ನೋಡು ಪುಷ್ಪಗಿರಿನಾಥನಂ
ಭರದಿಂದೆ ನೋಡು ರಾಮೇಶ್ವರನ ನೋಡು ಸಲೆ
ಪರಶುರಾಮೇಶ್ವರನ ನೋಡು ಮಿಗೆ ಬಾಲಕರ್ಣೇಶ್ವರನನಳ್ತಿಯಿಂದಂ
ನರಸಿಂಹ ಪೂಜಿಸಿದ ನರಸಿಂಹನಾಥನಂ
ಕರಮೆಸೆವ ಕುಕ್ಕುಟೇಶ್ವರನನೀಕ್ಷಿಸು ಮುಗುಳ್ದು
ಗರುಡನಂದಿ ಬ್ರಹ್ಮನಂದಿ ಪ್ರವೇಕನಂದಿಗಳನೀಕ್ಷಿಸು ಮುದದೊಳು ೧೫೩

ನಿರುತಮಾ ಪಶ್ಚಿಮದ್ವಾರ ವಿಭುವಂ ನೋಡು
ಪಿರಿದೆಸೆವ ತುಂಗಭದ್ರಾ ತರಂಗಿಣಿಯ ಮು
ತ್ತಿರದೆ ದೇವದ್ರೋಣಿಯಂ ನೋಡು ವೇದನಾದಾವತೀ ಮಧ್ಯದಲ್ಲಿ
ಕರಮೊಪ್ಪುತಿರ್ಪ ಸತ್ಪುಣ್ಯತೀರ್ಥಂಗಳಂ
ಹ[1]ರಿಷ[1]ದಿಂ ನೋಡು ಭೋಗೀಶ್ವರನನೀಕ್ಷಿಸುಜಿತ
ಸರಳ ಬಲಭದ್ರೇಶ್ವರನ ನೋಡಗಸ್ತ್ಯೇಶ್ವರನನೀಕ್ಷಿಸಳ್ತಿಯಿಂದಂ ೧೫೪

ಮಿನುಪ ಧವಳೇಶ್ವರನನೇಲೇಶ್ವರನನೀಕ್ಷಿ
ಸನುನಯದೆ ಸಕಲೇಶ್ವರನ ನೋಡು ದೋನಮಾ
ರ್ಯನೆ ಕೇಳ ಮತ್ತಲ್ಲಿ ತೋರ್ಪ ಶೇಷಸ್ಥಾನನಿಕರಂಗಳಂ ಪೇಳ್ವೊಡೆ
ಎನಗಶಕ್ಯಂ ಮತ್ತಮಿಾ ನಗದೊಳೆಸೆದಿರ್ಪ
ಘನಲಿಂಗಮಿನಿತೆಂದು ಕುಱುಪಿಟ್ಟು ಪೇಳ್ವಂಗೆ
ನನಸು ದೋಷಮುದಕ್ಕುವಿನ್ನೆ ಕೇಳ್ ಮುನ್ನೆ ಯುಗತತಿಗಳೆನಿತೊಳವವಱೊಳು ೧೫೫

ಸುರಪರ್ಕಳೆನಿತು ವಿಷ್ಣುಗಳೆನಿತ್ತಜರೆನಿತು
ವರ ಮುನಿಗಳೆನಿತು ದಾನವರೆನಿತು ಮತ್ತೆಯುಂ
ಸುರರೆನಿತ್ತುಂಟು ಮತ್ತವರೆಲ್ಲರುಂ ಬೇಱಬೇಱ ಮನದಣಿಗಿನಿಂದಂ

1 ರುಷ (ಗ)

ಕರವೆಸೆವ ಲಿಂಗಂಗಳಂ ಪ್ರತಿಷ್ಠೆಯ ಮಾಡಿ
ಹ[1]ರಿಸ[1]ದಿಂ ಪೂಜಿಸುತೆ ತಂತಮ್ಮಭೀಪ್ಸಿತವು
ನರಿದೆಂಬವೊಲ್ ಪಡೆದರದಱಿಂದಮಿಾ ನಗಂ ಲಿಂಗದಾಲಯಮೆನಿಪ್ಪುಂ ೧೫೬

ವರ ಲಿಂಗಪರ್ವತಮೆನಿಕ್ಕುಮಿಾ ಗಿರಿವರಂ
ನಿರುತದಿಂ ಲಿಂಗಭಾಂಡಾಗಾರಮೆನಿಸುಗುಂ
ವರ ಲಿಂಗನಗರಮೆನಿಸುಗುಮಂತೆ ಲಿಂಗವಾರಿಧಿಯೆನಿಕುಮಿಾ ಪರ್ವತಂ
ವರಲಿಂಗ ಸುರಧೇನು ಲಿಂಗ ಸುರಭೂಜಮಿಾ
ಗಿರಿ ವಲಂ ಎನಿಸುಗುಂ ಮತ್ತಮಿಾ ಗಿರಿಯ ಭಾ
ಸುರ ಪಶ್ಚಿಮದ್ವಾರದಲ್ಲಿರ್ಪ ತೀರ್ಥನಿಕರಂಗಳಿಂದಂ ಮೂಡಲು ೧೫೭

ಸರಳ ಕೂಡಲಸಂಗಮೇಶ್ವರಂ ತೋಱುತದೆ
ವರ ತುಂಗಭದ್ರೆಯಾ ಕೃಷ್ಣವೇಣಿಯ ಸಂಗ
ದುರುಮಹಿಮೆಯುಂ ನೋಡದುಂ ಮತ್ತೆ ತತ್ಪೂರ್ವಭಾಗದೊಳ್ ಕರಮೆಸೆಯುತೆ
ಪಿರಿದುಂ ನಿವೃತ್ತಿತೀರ್ಥಾವಾಸನಾಗಿರ್ಪ
ಗುರು ಸಂಗಮೇಶ್ವರನನೀಕ್ಷಿಸನುರಾಗದಿಂ
ಪರಮಯಜ್ಞೇಶ್ವರನ ನೋಡಿತ್ತ ದಕ್ಷಮುಖಸಂಹರಣಮಾಡೆಡೆಯೊಳು ೧೫೮

ಪಿರಿದುಂ ತ್ರಿಸಂಧ್ಯೋಜನದ ತೆಱಪಿನಿಂದಮಿಾ
ಧರಣಿಯೊಳ್ ತೋರ್ಪ ಸಿರಿಗಿರಿಯಲ್ಲಿ ಸಂತತಂ
ಹ[1]ರಿಸ[1]ದಿಂದಂ ತ್ರಿಲೋಕಸ್ಥಲಿಂಗಂಗಳುಂ ಸರ್ವತೀರ್ಥಂಗಳೊಸೆದು
ಇರುತಿರ್ಪುಮಿದನೊಲ್ದು ನೀಂ ಪ್ರದಕ್ಷಿಣಮೆಸಗಿ
ದಿರವೆಲ್ಲಮಂ ಪಂಡಿತೇಂದ್ರಂಗೆ ಸಂತಸದಿ
ನೊರೆವುದಿದನೆಲ್ಲಮುಂ ನೀಂ ಕಂಡಮಾಳ್ಕೆಯೊಳ್ ಪೇಳ್ವುದುಱಿ ಬರ್ದಿನಿಂದಂ ೧೫೯

ಸಿರಿಗಿರಿಯ ನೀಂ ಪ್ರದಕ್ಷಿಣಮೆಸಗಿದಾ ಫಲದೆ
ಪಿರಿದು ನೂರ್ಮಡಿಫಲಮನಾ ಪಂಡಿತೇಂದ್ರಂಗೆ
ಹ[1]ರಿಸ[1]ದಿಂ ಸರ್ವಜ್ಞ ಮಲ್ಲಿಕಾರ್ಜುನದೇವರಿತ್ತರೆಂದೊಸೆದು ಪೇಳು
ಗುರುಭಕ್ತ ದೋನಮಾರ್ಯನೆ ಎನುತೆ ತಕ್ಷಣದೊ
ಳಿರದದೃಶ್ಯಂ ದಲಾದಂ ಮಲ್ಲಿಕಾರ್ಜುನಂ
ಪರವಶಂ ಪಿಂಗಿ ಮತ್ತನಿತಱಿೞೊಳಗಾ ದೋನಮಾರ್ಯನತಿಮುದಮನೆಯ್ದಿ ೧೬೦

---

1 ರುಷ (ಗ)

ಕಡೆಗಣ್ಣ ಕೊಳ್ ಸುಖಾಶ್ರುಗಳೆಯ್ದೆ ಪೊಜಪೊಣ್ಮೆ
ಪಡಪಿನಿಂ ಸರ್ವಜ್ಞ ಮಲ್ಲಿಕಾರ್ಜುನನೆಂಬ
ಬೆಡಗಿನೊಳ್ಪೆಸರನಂಗೀಕರಿಸಿ ಮಲ್ಲಿಕಾರ್ಜುನಲಿಂಗನೊಸೆದು ಬಂದು
ಸಡಗರದಿನೀ ಪರ್ವತದ ವೈಭವಮನೆನಗೆ
ಕಡುಪಿನಿಂದುಪದೇಶಿಸಿದನೆಂದು [1]ಸಂತಸಪ[ಡ]
ನುಡಿಯುತುಂ ಮಲ್ಲಿಕಾರ್ಜುನಲಿಂಗನಂ ಪೊಗಳ್ದನಾ ದೋಣಮಾರ್ಯನೊಲ್ದು ೧೬೧

ಎಲೆ ಭಕ್ತವತ್ಸಲನೆ ಮಲ್ಲಿಕಾರ್ಜುನಲಿಂಗ
ಸುಲಭದಿಂದೆನ್ನ ಗುರುಕೃಪೆಯಿಂದೆ ನಿನ್ನ ಸ
ಲ್ಲಲಿತ ಪದಪದ್ಮಂಗಳಂ ಕಂಡೆನಾಂ ಧನ್ಯನಾದೆ ನೀನವನಿಯೊಳಗೆ
ನಲಿದು ದಿಗ್ದ್ವಾರನಿಕರಂಗಳಿಂದಂ ಮತ್ತೆ
ಸಲೆ ವಿದಿಗ್ದ್ವಾರ ಮಾರ್ಗಂಗಳಿಂದಂ ಮಹೋ
ಜ್ಜ್ವಲ ದಿಗ್ವಿದಿಗ್[2]ಮಧ್ಯದಾ ದ್ವಾರ[3]ಮಾರ್ಗಂಗಳಿಂದೆ ಮತ್ತಂ ರಾಜಿಪ ೧೬೨

ಗಿರಿ ಜಲಾರಣ್ಯ ದುರ್ಗಂಗಳಿಂದೊಡವೆರೆದು
ಪಿರಿದಾಗಿ ತೋರ್ಪ ಸಿರಿಗಿರಿಯೊಳೆಸೆದಿರ್ಪ ಭಾ
ಸುರ ದಿವ್ಯಲಿಂಗಕೋಟಿಗಳನೀಕ್ಷಿಸಿದೆನೆನ್ನಯ ಕನಸು ನನಸಾದುದು
ನಿರುತಮಿಾ ಶ್ರೀಶೈಲದಾ ಪ್ರದಕ್ಷಿಣಫಲಂ
ಕರಮೆನಗೆ ಕೈಸಾರ್ದುದದಱಿಂದೆ ನೋಡೆ ಬಂ
ಧುರತರೋನ್ನತ ಕೃತಾರ್ಥನುಮಾದೆ ನಾನೆಂದು ನುಡಿಯುತ್ತೆ ಸಂತಸದೊಳು ೧೬೩

ವರ ಮಲ್ಲಿಕಾರ್ಜುನಂಗಭಿನಮಿಸಿ ಬೀಳ್ಕೊಂಡು
ಹರಿಸದಿಂ ತಾಂ ಕಂಡ ಕನಸನಡಿಗಡಿಗೊಲ್ದು
ಪಿರಿದಾಗಿ ನೆನೆಯುತ್ತೆ ಶ್ರೀಗಿರಿಯನಿಳಿದು ಮತ್ತಾ ವೆಲ್ಲಟೂರ್ಗೆ ಬಂದು
ಗುರು ಪಂಡಿತೇಶ್ವರನ ಕಂಡು ಭಯಭಕ್ತಿಯಿಂ
ಪಿರಿದು ಸಂತೋಷದಿಂದಂ ತುಳಿಳ್ಗೆಯ್ದು ಬಂ
ಧುರತರ ಶ್ರೀಗಿರಿಗೆ ಪೋದ ವೃತ್ತಾಂತಮಂ ದೋಣಮಾರ್ಯಂ ಪೇಳ್ದನು ೧೬೪

---

[1] ಸಡಗರದೆ (ಕ) [2] ಮಧ್ಯಂ (ಕ) [3] ರುಷ (ಗ)

ಸದಮಲಪ್ರಚುರವಿಶ್ರುತ ಪರಮಭಕ್ತಗಣ
ಸದಸರೋರುಹಸಾಂದ್ರ ಮಕರಂದಪಾನ ಸ
ಮ್ಮುದಿತ ಚಂಚಚ್ಚಂಚರೀಕನನವರತ ಪಂಚಾಕ್ಷರೀಪ್ರಸಿತಹೃದಯಂ
ವಿದಿತ ಮಂಜುಲನೀಲಕಂಠಾಹ್ವಯಂ ಮನೋ
ಮುದದೆ ಪೇಳ್ದುರುತರಾರಾಧ್ಯಚಾರಿತ್ರದೊಳ
ಗಿದು ಕನಸಿನೊಳ್ ಪರ್ವತದ ಮಹಿಮೆಯಂ ದೋಣಮಾರ್ಯಂಗೆ ಪೇಳ್ದ ಕಥನಂ ೧೬

# ಹತ್ತನೆಯ ಸಂಧಿ

## ಪಂಡಿತಾರಾಧ್ಯರ ಐಕ್ಯ

ಸೂಚನೆ : ಪಂಡಿತಾರಾಧ್ಯ ದೇಶಿಕಚಕ್ರವರ್ತಿ ನವ
ಖಂಡೇಂದುಧರನೊಳೈಕ್ಯಂಬಡೆದ ಕಥನಮಂ
ಚಂಡಬಲ ಸಚಿನಕುಲಮಸ್ತಕನ್ಯಸ್ತಪದ ಸೂರಮಂತ್ರೀಶ ಕೇಳು

ವರ ವಿನಾಯಕವೈಜಯಂತೀಪ್ರಥಿತ ವಿಮಲ
ತರ ಗೋಕಮಲಜಾಂಚಿತ ಕ್ರಮಾಂಭೋಜಾತ
ಸರಳ ಪೀಯೂಷ ಗೋಗೋಜಸಖನಹ್ನಿ ಗೋಗೋಪವಂದಿತಪಾದನೆ
ಪರಮ ಗೋಭೃತ್ತನೂಜಾತುಂಡ ಪಾದೋಜ
ಪರಿಮಳ ಪ್ರಸಿತ ನವಚಂಚರೀಕ ಸದೃಷ್ಟ
ಸರಸಪ್ರಸೂನ ಗೋನಗ ಗೋನಿಭೋರ್ಧ್ವಾಕ್ಷ ರಕ್ಷಿಪುದು ನೀಲಕಂಠ ೧

ಗುರು ಪಂಡಿತೇಶ್ವರನ ದೋನಮಾರ್ಯಂ ಭಕ್ತಿ
ಭರದಿಂದೆ ನುತಿಸುತುಂ ಶ್ರೀಗಿರಿಯ ಕಥನಮಂ
ಸ್ಫುರಿತಮಪ್ಪಂತೆವೊಲ್ ಪೇಳೆ ಕೇಳ್ದತಿಮನೋರಾಗದಿಂದಿಂತೆಂದನು
ಪಿರಿದುಮಾನಿಂದು ಕೃತಕೃತ್ಯನಾದೆಂ ಕನ
ತ್ಕರುಣದಿಂ ಶ್ರೀಮಲ್ಲಿಕಾರ್ಜುನಂ ತಾನೆನ್ನ
ನಿರದೆ ನೆನೆದುದಱಿಂದಮಿನ್ನಾಂ ಬರ್ದುಂಕಿದೆಂ ನೆರೆದುದೆನ್ನ ಮನೋರಥಂ ೨

ಎನಗೆ ನಿನ್ನಂತಪ್ಪ [1]ಚ[1]ಟ್ಟನಿರೆ ಲೋಕದೊಳ್
ಘನಮದೊಂದುಂಟೆ ಎನುತುಂ ಪಂಡಿತೇಶ್ವರಂ
ಮಿನುಪ ತನ್ನಯ ಕೃಪಾಪಾಂಗವೀಕ್ಷಣ ಸುಧಾವಾರಿನಿಧಿಯಲ್ಲಿ ಸತತಂ
ಎನಸುಮಾ ದೋನಮಾರ್ಯನ ಮುಳುಗಿಸುತ್ತೆ ಮ
ತ್ತನುನಯದಿನಿಂತೆಂದನಾ ಪಂಡಿತೇಶ್ವರಂ
ನನಸು ಸರ್ವಾಂಗಮೆಲ್ಲಂ ಲಿಂಗಮಯಮೆನಿಪ ಶ್ರೀಗಿರೀಂದ್ರಮನಡ[2]ರ್ದಪ್ಪು ೩

---

[1] ಭ (ಗ)   [2] ರ್ವುದು (ಟ)

ಭರದಿನಾ ಗಿರಿಯ ಮೇಲಿರ್ಪುದುಂ ಕಾಲ್ಗಳಿಂ
ಪರಿಸಿಗುವುದುಂ ನೋಡಯುಕ್ತಮಂತದಱಿಂದೆ
ಸರಿಬಿಡಿದಾ ಗಿರಿಯನೇಱುವುದು ಪಾತಕಂ ತನುವಿಲ್ಲದೆಯ್ದಲರಿದು
ಪುರಹರಾ ಶಶಿಧರಾ ಎನ್ನಿಷ್ಟಮೆಂತು ನಿ
ರ್ಭರದಿಂದೆ ಕೈಸಾರ್ಗುಮೋ ಎನುತೆ ಪಂಡಿತೇ
ಶ್ವರನೊಸೆದು ಮತ್ತಮಿಂತೆಂದುಮೊಂದಂ ಮನದೊಳತಿಶಯದ ಭಕ್ತಿಯಿಂದಂ ೪

ಮಿಸುಗುವೆನ್ನಯ ಮನಂ ಪ್ರಾಣಂ ಶರೀರಂಗ
ಳನಿತೆಲ್ಲವುಂ ಪರಮಮಲ್ಲಿಕಾರ್ಜುನನಲ್ಲಿ
ಯೆಸಸುಮತಿ ಸಾಮರಸ್ಯಂಬಡೆದು ಮಗುಳ್ದಿಂದು ಸುಖಮಿರ್ಪುವೋ ಶಂಕರ
ಎನುತೀಶ್ವರಂಗೆ ಬಿನ್ನೈಸಿದಂ ಎಲೆ ಶಿವನೆ
ತನು ನಿನ್ನ ಸೇವೆಯೊಳ್ ನಿನ್ನ ಭಾವನೆಯಲ್ಲಿ
ಮನಮಾನಗಂ ಪ್ರಾಣಮುದು ನಿನ್ನ ಚರಣದೊಳ್ ಕ್ಷಯಮುಕ್ತೆ ಸಂತೋಷದಿಂ ೫

ಕರಮೆಸೆವ ಮಲ್ಲಿಕಾರ್ಜುನಪಂಡಿತಾರ್ಯನೆಂ
ಬುರುನಾಮದಿಂದಮಾ ಶ್ರೀಗಿರಿಯೊಳಾವಗಂ
ಹರುಷ[1]ದಿಂ ಪ್ರಮಥಸಂದೋಹದೊಳಗಿರ್ಪುದಾಂ ಬಯಸುತಿರ್ಪೆಂ ಶಂಕರ
ಕರಮೆನಗದಂ ಕರುಣದಿಂದೀಯುವುದೆನ್ನ ನಿ
ರ್ಭರದಿನಲೆಯುತ್ತಿರ್ಪ ಸಂಸಾರಸಾಗರಮ
ನಿರದೆ ಬಱಿದೊಱಿಮಾಡಿ ಕಾವುದೆನ್ನಂ ಕೃಪಾವಾರಿನಿಧಿಯೇ ಸಂತತಂ ೬

ಉರುತರ ಪ್ರಮಥಸಂದೋಹಮಱಿವಂತೆನ್ನ
ಭರದೆ ನಿನ್ನವನೆಂದು ಕೈವಿಡಿದು ಸೆಳಕೊಂಡು
ಹರುಷ[1]ದಿಂ ಗಣವರರ ಮಧ್ಯದೊಳಗಿರಿಸೆಲೇ ಮಲ್ಲಿಕಾರ್ಜುನ ಶಶಿಧರ
ನಿರುತದಿಂ ಬಾಲ್ಯಪ್ರಭೃತಿಯಿಂದಮನ್ಯದೇ
ವರ ಗಡಣಮಂ ಸ್ವಪ್ನದೊಳಗಱಿಯೆ ನಾನೊಸೆದು
ಹರನೆ ನಿಮ್ಮಯ ಲೆಂಕನಾಗಿರ್ಪೆನೆನ್ನ ಸುತಸತಿಯರೊಡಗೂಡಿ ಸತತಂ ೭

1 ರುಷ (ಗ)

ಜನನಮರಣಂಗಳಂಡಲೆಯು ತಾಳಲ್ಕಾರದಿ
ನನುಪಮನೆ ನಿಮ್ಮಾಜ್ಞೆಯಿಂ ಬಂದ ಕಜ್ಜಂಗೆ
ಳನಿತುಂ ಳಿಯದೆಲ್ಲಮಂ ತೀರ್ಚಿ ಸದ್ಭಕ್ತಿಯಂ ಪರಪಿದಂ ಲೋಕದೊಳಗೆ
ಎನುತ ಬಸವಂ ಮಗುಳ್ದು ನಿಮ್ಮ ಗರ್ಭಂಬೊಕ್ಕ
ನನುಗೆಟ್ಟು ಭೂಮಿಯೊಳಗಾನಿರ್ಪ ಪರಿಯೆಂತು
ಮನಸಿಜಾಂತಕ ಬಸವನೊರ್ವನಲ್ಲದೆ ನಿನ್ನ ಭಕ್ತಿಗಾಶ್ರಯಮಾವನು ೮

ತಿಳಿದು ನೀಂ ನೋಡು ನಿಸ್ಸಯ ಜಂಗಮಾವಳಿಗೆ
ಲಳಿತೇಷ್ಟ ವಸ್ತುಸಂದೋಹಂಗಳಂ ಕೊಟ್ಟು
ಬಳಿಕೆ ಪರವಾದಿನಿಕರಕ್ಕೆ ದೃಷ್ಟಪ್ರತ್ಯಯಂಗಳಂ ಮಿಗೆ ತೋಱಿಸಿ
ಅಳಘು ಬಿಜ್ಜಳನ ಗರ್ವಂಗಳಂ ಪರಿಹರಿಸಿ
ಮುಳಿದ ತಾರ್ಕಿಕರ ಬಲ್ಗಂಡಿಕೆಗಳಂ ಭರದಿ
ನಿಳಿಕೆಯ್ದು ಶಿವಭಕ್ತಿಮಾರ್ಗಮದು ವೇದೋಕ್ತಮೆಂದು ನಿಲಿಸೀ ಧರೆಯೊಳು ೯

ಧರಣಿಯೊಳ್ ಜಂಗಮವೆ ಲಿಂಗಂ ದಲೆಂದು ನಿ
ರ್ಭರದಿಂ ಪ್ರಸಾದಮೇ ಭೋಗಮೋಕ್ಷದಮೆಂದು
ಹರನೊರ್ವನೇ ಸರ್ವಲೋಕಕ್ಕೆ ಪತಿಯೆಂದು ವಿಶ್ವಾಸದಿಂದೆ ಮತ್ತಂ
ಗರಳಮಂ ಸುಧೆಮಾಡಿ ಪೀರ್ದರ್ ಶಿವಭಕ್ತರ್ಗೆ
ಪಿರಿದು ಸರಿಯಿಲ್ಲೆಂದು ಪರಸಮಯಮಂ ಕಿಡಿಸಿ
ಮರಳಿ ಜಗದೊಳ್ ಕೀರ್ತಿಯಂ ಪರಪಿ ನಿನ್ನ ಮತಮಂ ಲೋಕದೊಳ್ ಸ್ಥಾಪಿಸಿ ೧೦

ತೊಲಗಿ ಸಂಸಾರನಿಕರಂಗಳಂ ನಿನ್ನ ಮನ
ಮಲರ್ವಂತೆ ಸಂತಸಂಬಡಿಸಿ ಸತ್ಪ್ರಮಥಗಣ
ರೊಲವಿನಿಂ ಕೈಕೊಳ್ವವೋಲವರ ಕವಳಿಗೆಗೆ ಬರೆಯಿಸಿ ನಿಜಾಜ್ಞೆಗಳನು
ನಲಿದು ರಕ್ಷಿಸಿ ಬಸವದಂಡೇಶನಳ್ಕಱಿಂ
ಮಲಹರನೆ ನಿನ್ನೊಳವಿದಂ ಬಳಿಕ್ಕಾ ಬಸವ
ನಲಘು ಚರಣಂಗಳಂ ಹರಿಸದಿಂದೆನ್ನ ಮಸ್ತಕದಲ್ಲಿ ತಾಳ್ದು ಕೊಂಡು ೧೧

ಪರಶಿವನೆ ನಿಮ್ಮ ನಾಂ ಪ್ರಾರ್ಥಿಸೆಂ ಮದ್ಬಸವ
ಗುರುವಿನಂತೆಮ್ಮ ನಿನ್ನೊಳಗಿರಿಸಿಕೊಳ್ಳಯ್ಯ
ಕರುಣದಿಂ ಭವವೆಂಬ ಪುಲಿಯ ಬಾಯಿಂ ತೆಗೆದುಕೊಂಡು ಪಾಲಿಪುದಭವನೆ

---

[1] ರುಷ (ಗ)

ಪಿರಿದು ಸಂಸಾರದ್ರುಮದ ಬೇರನೆತ್ತಿ ಮ
ತ್ತಿರದೆನ್ನ ನಿಮ್ಮತ್ತ ಕರೆಯುಯ್ಯ ಮಗುಳ್ದೆನ್ನ
ಕೊರಲ ಸುತ್ತಿರ್ದ ಜನ್ಮೋಗ್ರಾಹಿಯಂ ಬಿಡಿಸಿ ಎನ್ನ ನಿನ್ನೊಳಗಿರಿಪುದು ೧೨

ಕಡುಪಿನಿಂದಂ ಕಂಡುಕೇಳ್ದ ಸವಿಗಳನೆಯ್ದೆ
ಬಿಡದಿರ್ಪ ಮಚ್ಚಿತ್ತಮಂ ಪಡಲ್ವಡಿಸಿ ಮ
ತ್ತೊಡನಮಂ ಬಿಡುನಂತೆಮಾಡಿ ನಿನ್ನೊಳಗಿರ್ಪ ಸೌಖ್ಯಮಂ ಕುಡುವುದಯ್ಯ
ಒಡಲ ಸಲೆ ತೊಳೆಯುತ್ತೆ ಪೊದಕೆಗಳ ಪೊದೆಯುತ್ತೆ
ಬಿಡದುಣಾತ್ತಿಂತೇಗಳುಂ ದೇಹಮಂ ಪೊರೆವ
ಕಡುಗೋಟಲೆಯ ತವಿಸಿ ನಿನ್ನೊಡಲ ಭರವಸದಿನೆಯ್ದುವುದನೀವುದೆನಗೆ ೧೩

ಉರಿಗಾಣುತದಱೊಳಗೆ ಬೀಳ್ವ ಶಲಭನ ತೆಱದೆ
ಭರದೆ ವಿಷಯಾಗ್ನಿಯೊಳ್ ಬೀಳ್ವೆನ್ನ ನೀಂ ತೆಗೆದು
ಕರುಣದಿಂ ಪೊರೆದು ನಿನ್ನೊಳಗಡಂಗಿಸುತೆನ್ನ ವಾಂಛೆಯಂ ಸಲಿಪುದಯ್ಯ
ಪಿರಿದು ಕುತ್ಸಿತಮಾರ್ಗದೊಳ್ ಪೋಪುದಂ ಬಿಡಿಸಿ
ವರಸುತನೆ ಬಾರಿತ್ತೆನುತ್ತೆ ಸುಪ[1]ಥಂ[1] ತೋಱಿ
ಹ[2]ರಿಸ[2]ದಿಂ ನಿನ್ನ ಗರ್ಭಂಬುಗಿಪ ವರವೀವುದೆನಗೆ ಕರುಣಾಂಬುನಿಧಿಯೆ ೧೪

ಮಿನುಗುವೀ ಶ್ರೀಗಿರಿಯೊಳನುದಿನಂ ಶಿವಶಿವೆನು
ತನುನಯದಿನಿರ್ಪುದಂ ಕೃಪೆಮಾಡು ಶಂಕರಾ
ಎನಗೆಂದು ಕರ್ಣಾಟಗೌಳದಿಂ ಗೀತನಿಕರಂಗಳಂ ಮನಮುಣ್ಮುತೆ
ವಿನಯದಿಂ ಪಂಡಿತೇಶಂ ಪಾಡಲದನೆಯ್ದೆ
ಮನಸಿಜಹರಂ ಕೇಳಿ ತತ್ಪಂಡಿತೇಶ್ವರನ
ಮನದೊಳಂ ನಯನದೊಳುಮೆಯ್ದೆ ತೋರ್ಪಾ ಪರ್ವತಾಕೃತಿಯ ಲಿಂಗವೊಲ್ದು ೧೫

ಹ[2]ರಿಸ[2]ದಿಂ ತನ್ನ ಕರುಣಾಕಟಾಕ್ಷದೊಳೊಸೆದು
ನಿರುತಮೀಕ್ಷಿಸುತೆ ತತ್ಪಂಡಿತೇಂದ್ರನನಭವ
ನರರೆ ತನ್ನೊಡಲೊಳಗೆ ಸೈತಿರಿಸಿಕೊಂಡನಾ ಸುತಸತಿಯರೊಡಗೂಡುತೆ
ಪಿರಿದು ಮತ್ತಾ ಶಿವಾಜ್ಞಾಪತ್ರ ಪದ್ಧತಿಯಿ
ನುರುಭಕ್ತಿಪೂರ್ವಕದಿನಾ ಶಿವಗಣ ಪ್ರಚಿತಿ
ಸುರುಚಿರ ಪ್ರಾರ್ಥನೆಯುಮಾಡಿ ತತ್ಪಂಡಿತೇಶ್ವರನಗ್ರಸುತನೆನಿಸುವ ೧೬

---

1 ಥವ (ಗ) 2 ರುಷ (ಗ)

ಅನಘ ಕೇದಾ[1]ರಯ್ಯ[1] ವಿಭುಗೆ ಜಗದಾರಾಧ್ಯ
ಘನಪಟ್ಟವಮಂ ಕಟ್ಟಿ ಮಗುಳ್ದು ತತ್ಪಂಡಿತೇ
ಶನ ಹಸ್ತಸಂಭವನೆನಿಪ್ಪ ವಿಶ್ರುತನಾದ ಡೋನಮಾರ್ಯಂಗೆ ಮುದದಿಂ
ವಿನುತ ಸದ್ಭಕ್ತಿ ರಾಜ್ಯಂಗೆಯ್ದುದರ್ಕೊಲ್ದು
ಮಿನುಪ ಪಟ್ಟಂಗಟ್ಟಿದರ್ ಸಕಲಸದ್ಭಕ್ತ
ರನುನಯದೆ ಮತ್ತಮಾ ಕೇದಾರದೇಶಿಕನ ವಿಖ್ಯಾತ ಶುಭಚರಿತನ ೧೭

ಪಿರಿದೆಸಗುವಾತ್ಮೀಯ ಸಂತತಿಯುಮಂತೆ ಭಾ
ಸುರ ಶೈವಸಂತತಿಯುಮಾವಗಂ ರಾಜಿಸುವ
ಪರಮ ಲೋಕಾರಾಧ್ಯ ತೇಜಸ್ಸಿನೊಡಗೂಡಿಯೊಪ್ಪಿತೆಂತೆನೆ ಶೋಭಿಪ
ಪರಮಭಾಗೀರಥೀವಾಪುಂಬೊಲನವರತ
ಮರರೆ ಲೋಕಂಗಳಂ ಪಾವನಮನೆಯ್ದಿಸುತೆ
ಮರಳಿಯುಮರಾತ್ಮಜರ ನಾಲ್ವರೊಳ್ಪೆಸರ್ಗಳಂ ಪೇಳ್ವೆನತಿಮೋದದಿಂದಂ ೧೮

ಮನುಪಂಡಿತಂ ಚನ್ನವಿಭು ಮಹಾದೇವ ಭೀ
ಮನ ಪಂಡಿತರ್ಕಳೆಂಬೀ ನಾಲ್ವರಾವಗಂ
ಮಿನುಪ ವೃಷಭನ ನಾಲ್ಕುಪಾದಂಗಳಂತೆ ಪುರುಷಾರ್ಥಂಗಳಂತೆ ಮತ್ತಂ
ವಿನುತ ಸಾಲೋಕ್ಯಾದಿ ಮೋಕ್ಷಂಗಳಂತೆ ಸೊಂ
ಪಿನ ನಾಲ್ಕು ಮುನ್ನೀರ್ಗಳಂತೆ ಸಿರಿಗಿರಿಯ ನೂ
ತನ ಚತುರ್ದ್ವಾರಂಗಳಂತೆ ರಾಜಿಸುತಿರ್ಪರುನ್ನತಿಯೊ[2]ಳಾವಾ[2]ಗಳುಂ ೧೯

ಕರಮೊಪ್ಪುವಾ ಶೈವಸಂತಾನಶರನಿಧಿಯೊ
ಳಿರದೊಗೆದನರ್ಘ್ಯಮಾಣಿಕ್ಯವೆಂಬಂತೆ ಭಾ
ಸುರ ಯವ್ವಟೂರ ಗುರುಸೋಮನಾಥಂ ವೃಷವರೂಥಸಮನೆಸೆದಿರ್ಪನು
ಮರಳಿಯಾತನ ತನೂಭವರೆನಿಸುತಿರ್ಪರುರು
ತರ ವಿಶ್ವನಾಥನುಂ ಸೂರೇಶ್ವರಂ ಮಗುಳ್ದು
ಪರಮ ಸಿಂಗಣ್ಣ ಮಂಚಾರ್ಯರೆಂಬೀ ಮೂವರಾಚಾರ್ಯರವನಿಯೊಳಗೆ ೨೦

ಗುರುಕುಲಾನ್ವಯದಲ್ಲಿ ಕರವೊಪ್ಪುತಿರ್ಪ ಬಂ
ಧುರ ದೇಶಿಕೇಂದ್ರತ್ವ ಪದವಿಯೊಳ್ ನಿಂದು ವಿ
ಸ್ಫುರಿಸುತಿರ್ಪಾ ಮೂವರೊಪ್ಪಿದರ್ ತ್ರಿಪಥಗಾವಾಹಂಬೊಲೆಯ್ದೆ ಮತ್ತಂ

---

[1] ಚಾರ್ಯ (ಗ) [2] ಳವರೇ (ಗ)

ನಿರುತನಾ ವೇದತ್ರಯಂಗಳಂತೆವೊಲೆಸೆವ
ಸುರುಚಿರ ತ್ರೇತಾಗ್ನಿಗಳ್ ಪಾಂಗಿನಂತೆ ಬಂ
ಧುರ ಪಾವನತೆವಡೆದು ಭೂಮಿಯೊಳ್ ಚರಿಸುತಿರ್ದರ್ ಮನೋಹರಮಾಗಲು ೨೧

ಮಿನುಗುವೀಕೃತಿಯ ತುರ್ಯಪ್ರಕರಣದೊಳಿರ್ಪ
ಘನಗಣ ಸಹಸ್ರನಾಮಾಂಕಸ್ತವಮನಾವ
ನನುದಿನಂ ಪಠಿಪನವನಾ ಸ್ತವಫಲಾಂಶದಿಂದಿಷ್ಟಸಿದ್ಧಿಗಳ ಪಡೆವಂ
ಕನದೈಹಿಕಾಮುಷ್ಮಿಕಾದಿ ಸುಖಮೆಯ್ದುವಂ
ವಿನುತ ರುದ್ರಪ್ರಮಥಗಣ ನೂತ್ನಗಣ ಪುರಾ
ತನ ಗಣರ ವರ್ಣನೆಗಳೊಡಗೂಡಿ ಕೇಳ್ವ ಶರಣರ ಕಿವಿಯ ತೊಡವಿನಂತೆ ೨೨

ಗುರುಪಂಡಿತೇಶ್ವರನ ಚಾರಿತ್ರಮಂ ಮನೋ
ಹರಮಾಗಿ ಪಾಲ್ಕುರಿಕೆ ಸೋಮೇಶ್ವರಂ ಮುದದೆ
ಪರಮ ಸೂರಾಮಾತ್ಯವಿಭುಗೆ ಪೇಳ್ದಂ ಮತ್ತಮಾ ಕೃತಿಯನೊಸೆದು ಪಠಿಸಿ
ಬರೆಯೆ ಕೇಳಲ್ ನೆನಸು ಸಂಗ್ರಹಂಗೆಯ್ಯೆ ಭಾ
ಸುರತರ ಶ್ರೀಮಲ್ಲಿಕಾರ್ಜುನಂ ಸೌಖ್ಯಮಂ
ಪಿರಿದು ಶುಭನಿಕರಂಗಳಂ ಕುಡುವನಾವಗಂ ನಿಕ್ಕಮಂ ಧರಣಿಯೊಳಗೆ ೨೩

ಮಾನಿತ ಶ್ರೀಶಿವಗಣಾನೀಕ ಕರ್ಣಕ್ಕೆ
ನೂನ ಭೂಷಣಮಾಗಿ ಭಕ್ತಿಮಾರ್ಗಕ್ಕೆ ಸೋ
ಪಾನಮಾಗುತೆ ಕೇಳ್ದ ಕೋವಿದರ ಚಿತ್ತಮಂ ತಣಿವುತಿಳ್ಕುಳಿಗೊಳುತ್ತೆ
ಈ ನವ್ಯ ಪಂಡಿತಾರಾಧ್ಯಚಾರಿತ್ರಮಂ
ಸಾನುರಾಗದೆ ಚಂದ್ರಸೂರ್ಯರುಳ್ಳನ್ನೆವರ
ಮಾ ನೀರನಿಧಿ ಮುಟ್ಟೆವರ್ತಿಸುತ್ತಿರ್ಪನಾಕುಳದಿಂದೆ ಭೂಮಿಯೊಳಗೆ ೨೪

ಸತತಮಿಾ ಪಂಡಿತಾರಾಧ್ಯಚಾರಿತ್ರಮಂ
ರತಿಯಿನಾವಂ ಬರೆವನೋದುವಂ ಸಲೆ ಕಲ್ತು
ವಿತತಮುಪ್ಪಂತೆವೊಲ್ ಪ್ರೌಢಿಯಿಂ ಬಿತ್ತರಿಪನವನೆ ನರನಿಕರದೊಳಗೆ
ಮತಿವಂತನಾಗಿ ದೀರ್ಘಾಯುಷ್ಯನಾಗಿ ಸಂ
ತತ ವಿಭವಯುತನಾಗಿ ಬಾಳುತ್ತುಮಿರ್ಕುಮಂ
ಗತಿಶಯಂ ಶ್ರೀನೀಲಕಂಠನಿಷ್ಪಾರ್ಥ ಬಹುಫಲಮನೊಸೆದೀಯುತ್ತಿರ್ಕೆ ೨೫

ಧಿಷ್ಣ್ಯಭೃದ್ವಿಷ್ಣುಪದಮಣಿ ಕೃಷ್ಣವರ್ತ್ಮ ಗೋ
ಧಿಷ್ಣ್ಯತ್ರಿಶೂಲ ಪಾಶಾಂಕುಶಾನ್ವಿತಕರಂ
ಧಿಷ್ಣ್ಯಶಿಷ್ಯಾರಿಪತಿ ಶಂಬರಜಗೋಕ್ಷೀರರುಹಜಮುಖಸುರವಂದ್ಯನು
ಧಿಷ್ಣ್ಯ ಪರಿವೃಢ ಲಸತ್ಕೇಶಬಂಧಂ ವಿವರ
ಧಿಷ್ಣ್ಯಕುಲಪತಿ ಕಂಕಣಂ ದುರಿತಗಹನಾಳಿ
ಧಿಷ್ಣ್ಯಸದೃಶಂ ಪಾಲಿಸುತ್ತಿರ್ಕೆ ಲೋಕಮಂ ಶ್ರೀನೀಲಕಂಠನೊಸೆದು ೨೬

ಸದಮಲಪ್ರಚುರವಿಶ್ರುತ ಪರಮಭಕ್ತಗಣ
ಪದಸರೋರುಹಸಾಂದ್ರ ಮಕರಂದಪಾನ ಸ
ಮ್ಮುದಿತ ಚಂಚಚ್ಚಂಚರೀಕನನವರತ ಪಂಚಾಕ್ಷರೀಪ್ರಸಿತಹೃದಯಂ
ವಿದಿತ ಮಂಜುಳನೀಲಕಂಠಾಹ್ವಯಂ ಮನೋ
ಮುದದೆ ಪೇಳ್ದುರುತರಾರಾಧ್ಯಚಾರಿತ್ರದೊಳ
ಗಿದು ವೆಱಂ ತತ್ಪಂಡಿತಾರಾಧ್ಯವಿಭುವಿನ ಶಿವೈಕ್ಯಕಥನಂ ಭಾವಿಸೆ ೨೭

# ೧. ಪದ್ಯಗಳ ಅಕಾರಾದಿ

[ಇಲ್ಲಿ ಕೊಟ್ಟಿರುವ ಸಂಖ್ಯೆಗಳಲ್ಲಿ ಮೊದಲನೆಯದು ಪುಟವನ್ನೂ ಎರಡನೆಯದು ಪದ್ಯವನ್ನೂ ಸೂಚಿಸುತ್ತದೆ.]

ಅ

ಏ



ಒ

ಘ



ಚ

## ತ

ಪ

ಭ

## ಮ

ಯ



ರ



ಲ

ಶ

ಹ

# ೨. ವಿಶಿಷ್ಟ ಪದಸೂಚಿ

[ಮೊದಲನೆಯ ಸಂಖ್ಯೆ ಪುಟವನ್ನೂ ಎರಡನೆಯ ಸಂಖ್ಯೆ ಪದ್ಯವನ್ನೂ ಸೂಚಿಸುತ್ತದೆ.]

## ಆ

ಖ



ಗ

ಘ



ಚ

## ಜ



## ಡ



## ತ

ದ

ಧ



ನ

ಭ

## ಮ

ಶ

### ಷ



### ಸ

ಹ

## ೩. ಪಾರಿಭಾಷಿಕ ಪದಕೋಶ

[ಮೊದಲನೆಯ ಸಂಖ್ಯೆ ಪುಟವನ್ನೂ ಎರಡನೆಯ ಸಂಖ್ಯೆ ಪದ್ಯವನ್ನೂ ಸೂಚಿಸುತ್ತದೆ.]

ಅಂಗುಲಿಸ್ಫೋಟನ ೬೯೭-೩೭ ನೃತ್ಯದಲ್ಲಿ ಒಂದು ಬಗೆ, ಕೈಬೆರಳ ನೆಟಿಕೆ ಮುರಿಯುವುದು

ಅಂತಃಕರಣ ೩೧೭-೨೭ ಚಿತ್ತ, ಬುದ್ಧಿ, ಅಹಂಕಾರ, ಮನ

ಅಚರಲಿಂಗ ೨೦೦-೩೪ ಸ್ಥಾವರ ಲಿಂಗ

ಅನುಜಾಯಿ ೬೯೮-೪೨ ತಾಳಲಯ ವಿನ್ಯಾಸಗಳಲ್ಲಿ ಒಂದು ಕ್ರಮ

ಅನ್ನಮಯಲಿಂಗ ೪೮-೧೬ ಅನ್ನದಿಂದ ಮಾಡಿದ ಲಿಂಗ

ಅಪಾನವಾಯು ೪೨೧-೨೩ ಗುದದ್ವಾರದಿಂದ ಹೊರಬೀಳುವ ಗಾಳಿ, ಹೂಸು

ಅಭೇದಜ್ಞಾನ ೩೬೫-೧೧ ಜೀವಾತ್ಮ ಪರಮಾತ್ಮರಿಗೆ ಭೇದವಿಲ್ಲೆಂಬ ಅರಿವು

ಅಭೇದವಾದಿ ೩೨೮-೨೨ ಜೀವಾತ್ಮ ಪರಮಾತ್ಮರಿಗೆ ಭೇದವಿಲ್ಲವೆಂದು ವಾದಿಸುವವನು

ಅಯಸ್ಕಾಂತ ಲಿಂಗ ೬೧೯-೮ ಸೂಜಿಗಲ್ಲಿನ ಲಿಂಗ

ಅಲರಲಿಂಗ ೫೧-೨೯ ಹೂವುಗಳಿಂದ ಮಾಡಿದ ಲಿಂಗ

ಅವರೋಹಣ ೬೯೮-೪೨ ಸಂಗೀತದಲ್ಲಿ ಸಪ್ತಸ್ವರಗಳನ್ನು ಇಳಿಕೆಯ ಕ್ರಮದಲ್ಲಿ ಹಾಡುವುದು

ಅಷ್ಟತನು ೪೫-೧ ಪೃಥ್ವಿ, ಅಪ್ಪು, ತೇಜ, ವಾಯು, ಆಕಾಶ, ಸೂರ್ಯ, ಚಂದ್ರ, ಯಜಮಾನ ಈ ಎಂಟು ತನುಗಳುಳ್ಳವನು, ಶಿವ

ಅಷ್ಟಮದ ೨೪೨-೬, ೩೧೩-೨೭ ಕುಲ, ಬಲ, ಧನ, ರೂಪ, ಯೌವನ, ವಿದ್ಯೆ, ರಾಜ್ಯ, ತಪ

ಅಷ್ಟಸಿದ್ಧಿ ೬೨೬-೪೨ ಅಣಿಮ, ಮಹಿಮೆ, ಗರಿಮೆ, ಲಘಿಮೆ, ಪ್ರಾಪ್ತಿ, ಪ್ರಾಕಾಮ್ಯ, ಈಶತ್ವ, ವಶಿತ್ವ

ಅಷ್ಟಾಂಗಯೋಗ ೪೨೧-೨೩ ಎಂಟುಅಂಗಗಳಿಂದ ಕೂಡಿದ ಕ್ರಮಬದ್ಧವಾದ ಯೋಗ: ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ, ಸಮಾಧಿ

ಅಷ್ಟಾದಶಪುರಾಣ ೨೫೨-೫೨ ಬ್ರಾಹ್ಮ, ಪಾದ್ಮ, ವಿಷ್ಣು, ಶೈವ, ಭಾಗವತ, ನಾರದೀಯ, ಮಾರ್ಕಂಡೇಯ, ಆಗ್ನೇಯ, ಭವಿಷ್ಯತ್, ಬ್ರಹ್ಮವೈವರ್ತ, ಲೈಂಗ್ಯ, ವರಾಹ, ಸ್ಕಾಂದ, ವಾಮನ, ಕೂರ್ಮ, ಮತ್ಸ್ಯ, ಗರುಡ, ಬ್ರಹ್ಮಾಂಡ

ಆಜ್ಯಮಯಲಿಂಗ ೫೧-೨೭ ತುಪ್ಪದ ಲಿಂಗ

ಆರಕೂಟಮಯಲಿಂಗ ೪೭-೧೧ ಹಿತ್ತಾಳೆಯಿಂದ ಮಾಡಿದ ಲಿಂಗ

ಆರೋಹಣ ೬೯೮-೪೨ ಸಂಗೀತದಲ್ಲಿ ಸ್ವರದ ಏರಿಕೆ

ಆಲಾಪ ೬೯೮-೪೨ ಗಾನದಲ್ಲಿನ ಗತಿವಿಶೇಷ

ಆಸನಕರಣ ೨೧೮-೧೪ ರತಿಕ್ರೀಡೆಗಳಲ್ಲಿ ಒಂದು

ಆಹವನೀಯವಹ್ನಿ ೪೭೦-೧೮ ಕ್ರಿಯಾಸಮಾಪ್ತಿ ಪರ್ಯಂತವೂ ಹೋಮಮಾಡತಕ್ಕ ಅಗ್ನಿ

ಇಂದ್ರನೀಲಮಯಲಿಂಗ ೪೧-೧೬, ೩೮೭-೬ ನೀಲವರ್ಣದ ರತ್ನದಿಂದ ಮಾಡಿದ ಲಿಂಗ

ಇಷ್ಟಲಿಂಗ ೧೯-೮೧, ೫೬-೪ ದೇಹದ ಮೇಲೆ ಧರಿಸುವುದಕ್ಕಾಗಿ ದೀಕ್ಷಾಕಾಲದಲ್ಲಿ ಗುರು ಕೊಡುವ ಲಿಂಗ

ಈಡಾನಾಡಿ ೬೩೦-೨೯ ದೇಹದಲ್ಲಿ ಎಡಗಡೆಯಲ್ಲಿರುವ ಒಂದು ನಾಡಿ

ಉಚ್ಚರತ ೨೧೮-೧೪ ರತಿಕ್ರೀಡೆಗಳಲ್ಲಿ ಒಂದು

ಉತ್ತರಜ್ಞಾನ ೩೩೬-೧೫, ೩೬೫-೧೧ ಜ್ಞಾನತ್ರಯಗಳಲ್ಲಿ ಒಂದು, ಭವಿಷ್ಯತ್ ಜ್ಞಾನ

ಉಮಾಮಹೇಶ್ವರ ಲೀಲೆ ೩೪೨-೪೦ ಶಿವನ ಪಂಚವಿಂಶತಿ ಲೀಲೆಗಳಲ್ಲಿ ಒಂದು

ಋಣ ೩೧೩-೨೭ (?) ಒಂಬತ್ತು ಋಣಗಳು

ಏಕಾತ್ಮವಾದಿ ೩೨೫-೧೦, ಆತ್ಮ ಒಂದೇ ಎಂಬ ಸಿದ್ಧಾಂತವನ್ನು ಎತ್ತಿಹಿಡಿಯುವವನು

ಕನಕಲಿಂಗ ೬೧೮-೮ ಚಿನ್ನದ ಲಿಂಗ

ಕರಣ ೭೦೦-೫೦ ಒಂದು ಅಭಿನಯ ವಿಶೇಷ

ಕರಿಕರಕ್ರೀಡೆ ೨೧೮-೧೬ ಸಂಭೋಗದಲ್ಲಿ ಒಂದು ಬಗೆ

ಕರ್ಣಾಟ ೭೪೫-೧೫ ಒಂದು ರಾಗ

ಕರ್ತೃಸಾದಾಖ್ಯ ೪೫೬-೩೬ ಐದು ಸಾದಾಖ್ಯಗಳಲ್ಲಿ ಒಂದು

ಕರ್ಮ ೩೧೩-೨೭ ಮೂಲವಾದ ಹತ್ತು ಪದಾರ್ಥಗಳಲ್ಲಿ ಒಂದು: ಸುಕೃತ, ದುಷ್ಕೃತ

ಕರ್ಮವಾದ ೩೪೪ಸೂ ಎಲ್ಲವೂ ಪೂರ್ವಕರ್ಮಾನುಸಾರ ಸಂಭವಿಸುತ್ತದೆ ಎಂಬ ವಾದ

ಕರ್ಮವಾದಿ ೩೨೫-೧೧, ೩೨೭-೨೧, ೩೪೪-೨ ಕರ್ಮಮಾರ್ಗವನ್ನು ಎತ್ತಿಹಿಡಿಯುವವನು; ಪೂರ್ವಮೀಮಾಂಸಕ

ಕರ್ಮಸಾದಾಖ್ಯ ೪೫೬-೩೬, ೪೫೮-೪೫ ಐದು ಸಾದಾಖ್ಯಗಳಲ್ಲಿ ಒಂದು

ಕಾಂಡವಶಾಖೆ ೪೩೨-೩ ವೇದಶಾಖೆ

ಕಾಂಸ್ಯಲಿಂಗ ೬೧೮-೮ ಹಿತ್ತಾಳೆ ಲಿಂಗ

ಕಾರ್ಬೊನ್ನಲಿಂಗ ೪೯-೨೧ ಕಬ್ಬಿಣದಿಂದ ಮಾಡಿದ ಲಿಂಗ

ಕಾಲವಾದ ೩೫೭ಸೂ ಕಾಲವೇ ನಿತ್ಯ ಮತ್ತು ಕಾಲವೇ ದೈವ ಎಂದು ಪ್ರತಿಪಾದಿಸುವ ವಾದ

ಕುಂಭಕ ೫೦೨-೩೪ ಪ್ರಾಣಾಯಾಮದಲ್ಲಿ ಉಸಿರನ್ನು ಒಳಗೆಳೆದುಕೊಂಡು ಬಿಗಿಹಿಡಿಯುವಿಕೆ

ಕ್ಲೇಶಪಂಚಕ ೨೮೨-೭ ಅವಿದ್ಯೆ, ಅಸ್ಮಿತೆ, ರಾಗ, ದ್ವೇಷ, ಅಭಿನಿವೇಶ

ಕ್ಷೀರೋದಕನ್ಯಾಯ ೧೮೨-೫ ಒಂದನ್ನೊಂದು ಬೇರ್ಪಡಿಸಲು ಸಾಧ್ಯವಿಲ್ಲವೆಂಬ ನ್ಯಾಯ

ಖೇಚರಿಮುದ್ರೆ ೬೫೯-೨೫ ಯೋಗಮುದ್ರೆಯಲ್ಲಿ ಒಂದು ಬಗೆ

ಗಾವ ೬೯೯-೪೫ ಒಂದು ಗಾನವಿಶೇಷ (?)

ಗುಣ ೩೧೩-೨೭ ಸತ್ತ್ವ, ರಜಸ್, ತಮಸ್

ಗುರುಲಿಂಗ ೧೯-೮೧ ಗುರುರೂಪವಾದ ಲಿಂಗ

ಗೌಳ ೭೪೫-೧೫ ಒಂದು ರಾಗ

ಚತುರ್ವರ್ಗ ೨೪೨-೭ ಧರ್ಮ, ಅರ್ಥ, ಕಾಮ, ಮೋಕ್ಷವೆಂಬ ಪುರುಷಾರ್ಥಗಳು

ಚಕ್ರವಾಲ ೬೯೮-೪೩ ಸಂಗೀತದ ಏಳುಆಲಾಪಗಳಲ್ಲಿ ಒಂದು

ಚಮಕ ೩೨೯-೨೭ ಒಂದು ವೇದಸೂಕ್ತದ ಹೆಸರು

ಚರಲಿಂಗ ೧೯-೮೧, ೨೩-೧೦೫ ಜಂಗಮರೂಪವಾದ ಲಿಂಗ, ಜಂಗಮ

ಚರ್ಚಕಶ್ರವಣ ೩೨೯-೨೮ ವೇದಶಾಖೆಗಳಲ್ಲಿ ಒಂದು

ಚರ್ಯಾತಪ ೪೦೭-೨೦ ಮೋಕ್ಷಸಾಧನೆಗಾಗಿ ಮಾಡುವ ತಪಸ್ಸು

ಚಾರ್ವಾಕ ೧೯೦-೪೦, ೩೨೫-೯, ೩೩೩-೩, ೩೮೫-೨೩ ನಾಸ್ತಿಕ

ಚಾಳಿ ೬೯೯-೪೮ ಒಂದು ಬಗೆಯ ಅಭಿನಯ

ಜೀವ ೩೧೩-೨೭ ಪ್ರತಿಯೊಂದು ಜೀವಿಯಲ್ಲಿರುವ ಚೈತನ್ಯವಸ್ತು, ಪ್ರಾಣ

ಠವಣಾಂಗ ೬೯೮-೪೧ ಮದ್ದಳೆ ಬಾರಿಸುವ ಒಂದು ಕ್ರಮ

ಡಿಳ್ಳಾಯುತ್ತು ೬೯೯-೪೮ ಒಂದು ಬಗೆಯ ಮುಖವಿಭ್ರಮ

ತಾಮ್ರಲಿಂಗ ೬೧೮-೮ ತಾಮ್ರದಿಂದ ಮಾಡಿದ ಲಿಂಗ

ತಾರ ೬೯೯-೪೫ ಸಂಗೀತದ ಮೂರು ಸ್ವರಸ್ಥಾಯಿಗಳಲ್ಲಿ ಒಂದು

ತಿರುಪು ೬೯೭-೩೭ ನೃತ್ಯದಲ್ಲಿ ಒಂದು ಬಗೆ

ತ್ರಿಕ್ಷಣಾವಸ್ಥೆ ೩೯೮-೮ ಕೌಮಾರ, ಯೌವನ, ಜರ ಎಂಬ ಮೂರು ಅವಸ್ಥೆಗಳು

ತ್ರಿಗುಣ ೩೪೦-೩೫ ಸತ್ವ, ರಜಸ್ಸು, ತಮಸ್ಸು

ತ್ರಿಪುಂಡ್ರ ೨೫೪ ವೀರಶೈವರು ಹಣೆಯಲ್ಲಿ ಧರಿಸುವ ವಿಭೂತಿಯ ಮೂರು ಪಟ್ಟೆಗಳು

ತ್ರಿಮಲ ೨೪೨-೭ ಆಣವಮಲ, ಮಾಯಾಮಲ, ಕಾರ್ಮಿಕಮಲ

ತ್ರಿವಿಧಜಲ ೧೦೪-೧೦ ಪಾದೋದಕ, ಲಿಂಗೋದಕ, ಪ್ರಸಾದೋದಕ

ತ್ರಿವಿಧ ನಿರ್ಮಾಲ್ಯ ೫೭-೯ ಕಾಂಚನ, ಭೂಮಿ, ಆಹಾರ

ತ್ರಿವಿಧೋದಕ ೧೦೩-೭ ತ್ರಿವಿಧಜಲ

ತ್ರಿಸ್ಥಲ ೫೯೭-೨೯ ಗುರು, ಲಿಂಗ, ಜಂಗಮ

ದಂಡಣೆ ೭೦೦-೫೧ ಒಂದು ಅಭಿನಯ ವಿಶೇಷ

ದಧಿರೂಪ ಲಿಂಗ ೫೦-೨೬ ಮೊಸರಿನಿಂದ ಮಾಡಿದ ಲಿಂಗ

ದಮನಪೂರ್ಣಿಮೆ ೨೩೬-೯ ದವನಹಬ್ಬದ ಹುಣ್ಣಿಮೆ

ದಶಾವತಾರ ೩೯೨-೩೦ ಮತ್ಸ್ಯ, ಕೂರ್ಮ, ವರಾಹ, ನರಸಿಂಹ, ವಾಮನ, ಪರಶುರಾಮ,
ಶ್ರೀರಾಮ, ಬಲಭದ್ರ, ಬೌದ್ಧ, ಕಲ್ಕಿ

ದೂರ್ವಾಮಯಲಿಂಗ ೫೦-೨೬ ಗರಿಕೆಯಿಂದ ಮಾಡಿದ ಲಿಂಗ

ದೇವತಾದ್ರವ್ಯ ೫೬-೭, ೫೭-೯ ಚಿನ್ನ, ಬೆಳ್ಳಿ, ರತ್ನ ಮೊದಲಾದುವು

ದೇವಸ್ವ ೫೬-೭ ಭೂಮಿ, ಗ್ರಾಮ, ದಾಸ, ದಾಸಿ

ದ್ವಿಪುರುಷೈಕವಾದಿ ೩೨೫-೧೩ ದ್ವೈತವಾದಿ (?)

ಧಾತು ೩೧೩-೨೭ ರಸ, ರುಧಿರ, ಮಾಂಸ, ಮೇದಸ್ಸು, ಅಸ್ಥಿ, ಮಜ್ಜಾ, ಶುಕ್ಲ

ನಮಕ ೩೨೯-೨೭ ಒಂದು ವೇದಸೂಕ್ತದ ಹೆಸರು

ನವನೀತಲಿಂಗ ೫೧-೨೮ ಬೆಣ್ಣೆಯಿಂದ ಮಾಡಿದ ಲಿಂಗ

ನಾರಾಟ ೬೯೯-೪೫ ಸಂಗೀತದ ಒಂದು ಪ್ರಭೇದ

ನಿರಾಕಾರ ೩೪೦-೩೩ ಶಿವ

ನಿರೀಶ್ವರ ಸಾಂಖ್ಯವಾದಿ ೩೭೧-೧೨ ಈಶ್ವರನೇ ಇಲ್ಲವೆಂದು ವಾದಮಾಡುವ ಸಾಂಖ್ಯ

ನೀಚರತ ೨೧೮-೧೪ ರತಿಕ್ರೀಡೆಗಳಲ್ಲಿ ಒಂದು

ನೂಲಹುಣ್ಣಿಮೆ ೨೩೬-೧೦ ಶ್ರಾವಣಮಾಸದಲ್ಲಿ ಬರುವ ಒಂದು ಹಬ್ಬ

ನ್ಯಾಯ ೩೩೦-೩೧ ಗೌತಮನಿರ್ಮಿತ ಶಾಸ್ತ್ರ

ಪಂಚಬ್ರಹ್ಮ ೩೨೯-೨೭, ೪೫೮-೪೫ ತತ್ಪುರುಷ, ಅಘೋರ, ವಾಮದೇವ, ಸದ್ಯೋಜಾತ, ಈಶಾನ

ಪಂಚಭೂತ ೮೫-೧೮ ಪೃಥ್ವಿ, ಅಪ್ಪು, ತೇಜ, ವಾಯು, ಆಕಾಶ

ಪಂಚಮಲಧಾರಿ ೪೮೯-೨೭ ಜೈನ

ಪಂಚಶುದ್ಧಿ ೧೨೪-೧೭ ಆತ್ಮಶುದ್ಧಿ, ಭೂತಶುದ್ಧಿ, ಜೀವಶುದ್ಧಿ, ಮನಶ್ಶುದ್ಧಿ, ದ್ರವ್ಯಶುದ್ಧಿ

ಪಂಚವರ್ಣ ೨೪೨-೭ ನಮಃ ಶಿವಾಯ ಎಂಬ ಐದಕ್ಷರ

ಪಂಚಶಿಖಿ ೫೨೫-೩೩ ದಕ್ಷಿಣ, ಗಾರ್ಹಪತ್ಯ, ಆಹವನೀಯ, ಸಭ್ಯ, ಆವಸಥ್ಯ

ಪಂಚಾಣುವ್ರತ ೪೦೪-೪ ಜೈನಗೃಹಸ್ಥರು ಪಾಲಿಸಬೇಕಾದ ಅಹಿಂಸೆ, ಸತ್ಯ, ಆಸ್ತೇಯ, ಬ್ರಹ್ಮಚರ್ಯ, ಅಪರಿಗ್ರಹ ಎಂಬ ಐದು ವ್ರತಗಳು

ಪಂಚಾಕ್ಷರಿ ೩-೯, ೪-೧೪, ೨೦-೮೫, ೧೨೪-೧೬, ೫೩೩-೭೦ ನಮಶ್ಶಿವಾಯ ಎಂಬ ಐದು ಅಕ್ಷರಗಳ ಮಂತ್ರ

ಪಂಜಳ ೬೯೭-೩೭ ನೃತ್ಯದಲ್ಲಿ ಒಂದು ಬಗೆ; ಪಾದಗತಿ ವಿಶೇಷ ।

ಪಂಡಿತತ್ರಯ ೧೪-೬೧ ಶ್ರೀಪತಿಪಂಡಿತ, ಮಲ್ಲಿಕಾರ್ಜುನ ಪಂಡಿತ, ಶಿವಲೆಂಕಮಂಚಣ್ಣ ಪಂಡಿತ

ಪವನಯೋಗ ೩೭೭-೩೬ ಯೋಗವಿಶೇಷಗಳಲ್ಲಿ ಒಂದು

ಪಾಂಚರಾತ್ರ ೩೨೫-೧೦, ೩೮೫-೨೪, ೩೯೪-೩೭, ೩೯೬-೪೪ ವೈಷ್ಣವ

ಪಾದೋದಕ ೩೯-೫ ಗುರು, ಲಿಂಗ, ಜಂಗಮರ ಪಾದವನ್ನು ಶುದ್ಧಮಾಡಿದ ತೀರ್ಥ

ಪಾಷಂಡಮತ ೩೯೨-೨೮, ೩೯೪-೩೯ ನಾಸ್ತಿಕಮತ

ಪಿಂಗಳ ೬೬೦-೨೯ ದೇಹದ ಬಲಗಡೆಯಲ್ಲಿರುವ ಒಂದು ನಾಡಿ

ಪಿಷ್ಟಮಯಲಿಂಗ ೫೦-೨೫ ಹಿಟ್ಟಿನಿಂದ ಮಾಡಿದ ಲಿಂಗ

ಪೀಯೂಷಲಿಂಗ ೬೧೯-೮ ಅಮೃತದಿಂದ ಮಾಡಿದ ಲಿಂಗ

ಪ್ರಕೃತಿವಾದಿ ೩೨೫-೧೧ ನಿರೀಶ್ವರವಾದಿ

ಪ್ರಸಾದ ೨೩-೧೦೧ ಗುರು, ಲಿಂಗ, ಜಂಗಮರಿಗೆ ಸಮರ್ಪಿತವಾದುದು

ಪ್ರಸಾದೋದಕ ೧೦೪-೮ ಶಂಭುವಿನ ದೃಷ್ಟಿಗೊಳಗಾದ ಲಿಂಗೋದಕ

ಪ್ರಸಿದ್ಧಪ್ರಸಾದ ೫೬-೬ ಜಂಗಮಕ್ಕೆ ಅರ್ಪಿತವಾದದ್ದು
ಪ್ರಸಿದ್ಧಪ್ರಸಾದಿ ೮೬-೨೫ ಜಂಗಮ
ಪ್ರಾಜ್ಞಾನ ೩೩೬-೧೫ ಜ್ಞಾನತ್ರಯಗಳಲ್ಲಿ ಒಂದು
ಪ್ರಾಣ ೬೬೦-೨೬ ಹೃದಯಸ್ಥ ವಾಯು
ಪ್ರಾಣಲಿಂಗ ೧೮-೭೮, ೨೩-೯೯,೧೦೧, ೫೨-೩೫ ಷಡ್ಲಿಂಗಗಳಲ್ಲಿ ಒಂದು; ಪ್ರಾಣಲಿಂಗವು
ಮನಸ್ಸಿಗೆ ಸಂಬಂಧಪಡುತ್ತದೆ
ಬೀಜವೃಕ್ಷನ್ಯಾಯ ೩೪೬-೯ ಬೀಜ ಮೊದಲೋ ವೃಕ್ಷ ಮೊದಲೋ ಎಂಬ ಕೊನೆಯಿಲ್ಲದ ವಾದ
ಬೊಂಬಾಲ ೬೯೯-೪೫ ಸಂಗೀತದ ಒಂದು ಪ್ರಭೇದ
ಬೌದ್ಧವಾದ ೪೯೭ಸೂ ಬುದ್ಧನ ಸಿದ್ಧಾಂತಗಳನ್ನು ಪ್ರತಿಪಾದಿಸುವ ವಾದ
ಬ್ರಹ್ಮಕೈವರ್ತ ೪೧೮-೯ ಒಂದು ಸಂಹಿತೆ
ಭೂತತತಿ ೩೧೩-೨೭ ಪೃಥ್ವಿ, ಅಪ್ಪು, ತೇಜ, ವಾಯು, ಆಕಾಶ
ಭ್ರಮರಿ ೭೦೦-೫೦ ಒಂದು ಅಭಿನಯ ವಿಶೇಷ
ಮಂತ್ರಯೋಗ ೩೭೭-೩೬ ಒಂದು ಯೋಗವಿಶೇಷ
ಮಂದ್ರ ೬೯೯-೪೫ ಸಂಗೀತದ ಮೂರು ಸ್ವರಸ್ಥಾಯಿಗಳಲ್ಲಿ ಒಂದು
ಮಧ್ಯ ೬೯೯-೪೫ ಸಂಗೀತದ ಮೂರು ಸ್ವರಸ್ಥಾಯಿಗಳಲ್ಲಿ ಒಂದು
ಮನೋಮಯಕೋಶ ೪೯೭-೩ ಪಂಚಕೋಶಗಳಲ್ಲಿ ಒಂದು
ಮಸ್ತಕಭೇದ ೭೦೦-೫೧ ನೃತ್ಯದ ಒಂದು ಪ್ರಭೇದ
ಮಾಯಾವಾದ ೩೨೫-೧೧ ಅದ್ವೈತ ವಾದ
ಮಿಶ್ರಪ್ರಸಾದ ೮೬-೨೬ (?)
ಮುಖಚಾರಿ ೬೯೯-೪೮, ೭೦೦-೫೦ ಒಂದು ಬಗೆಯ ಅಭಿನಯ
ಮೂಲಾಧಾರ ಕುಂಡಲಿ ೬೫೯-೨೨ ಮೂಲಾಧಾರದಲ್ಲಿರುವ ಕುಂಡಲಿನೀ ನಾಡಿ
ಮೂವತ್ತಾರು ತತ್ತ್ವ ೩೫೯-೧೦ ಶಿವ, ಶಕ್ತಿ, ಸದಾಶಿವ, ಈಶ್ವರ, ವಿದ್ಯೆ, ಕಾಲ, ನಿಯತಿ,
ಕಲೆ, ಅವಿದ್ಯೆ, ರಾಗ, ಪುರುಷ, ಪ್ರಕೃತಿ, ಗುಣ, ಬುದ್ಧಿ, ಅಹಂಕಾರ, ಚಿತ್ತ ಶ್ರೋತ್ರ,
ತ್ವಕ್ಕು, ನೇತ್ರ, ಜಿಹ್ವೆ, ಘ್ರಾಣ, ವಾಕ್ಕು, ಪಾದ, ಪಾಣಿ, ಪಾಯು, ಉಪಸ್ಥ, ಶಬ
ತನ್ಮಾತ್ರೆ, ಸ್ಪರ್ಶತನ್ಮಾತ್ರೆ, ರೂಪತನ್ಮಾತ್ರೆ, ರಸತನ್ಮಾತ್ರೆ, ಗಂಧತನ್ಮಾತ್ರೆ, ನಭ,
ವಾಯು, ವಹ್ನಿ, ಜಲ, ಭೂಮಿ
ಮೂರುತತ್ತ್ವ ೪೫೪-೨೬ ಶಿವ, ಸದಾಶಿವ, ಮಹೇಶ್ವರ
ಯೋಗಾಂಗ ೧೨೫-೧೮ ಮನುಷ್ಯನು ತನ್ನ ನಿಜದಲ್ಲಿ ಬೆರೆಯುವುದು
ರಜತಲಿಂಗ ೬೧೮-೮ ಬೆಳ್ಳಿಯಿಂದ ಮಾಡಿದ ಲಿಂಗ
ರವಿಕಾಂತಲಿಂಗ ೬೧೯-೮ ಸೂರ್ಯಕಾಂತಲಿಂಗ
ರಾಜಯೋಗ ೬೫೭-೧೪ ಯೋಗಗಳಲ್ಲಿ ಒಂದು

ರುದ್ರಾಕ್ಷಿ ೨೪-೩ ೩೮೮-೧೧ ಪರಶಿವನ ಜ್ಞಾನಚಕ್ಷುವಿನಿಂದ ಉದಯವಾದುದು; ಶಿವಾನುಭವವನ್ನು ಅರಿಕೆಮಾಡಿಕೊಡುವ ತತ್ತ್ವಚಿಂತಾಮಣಿ
ರೌಪ್ಯಲಿಂಗ ೪೭-೧೨ ಬೆಳ್ಳಿಯಿಂದ ಮಾಡಿದ ಲಿಂಗ
ಲಂಬಿಕಾಯೋಗ ೩೭೭-೩೬ ಯೋಗವಿಶೇಷಗಳಲ್ಲಿ ಒಂದು
ಲಯಃಯೋಗ ೩೭೭-೩೬ ಯೋಗವಿಶೇಷಗಳಲ್ಲಿ ಒಂದು
ಲಯಾಂಗ ೧೨೫-೧೮ ಒಂದು ಪೂಜಾವಿಧಾನ (?)
ಲಲಿತಪ್ರಸಾದಿ ೬೮-೫೮ (?)
ಲಳಿ ೬೯೯-೪೮ ಒಂದು ಬಗೆಯ ಅಭಿನಯ
ಲಾಗು ೬೯೭-೩೭ ನೃತ್ಯದಲ್ಲಿ ಒಂದು ಬಗೆ, ಪದಗತಿವಿಶೇಷ
ಲಿಂಗಪ್ರಸಾದ ೬೧-೨೮ ಷಡ್ರಸಪೂರಿತವಾದ ಆಹಾರ ಪಾನೀಯಗಳು
ಲಿಂಗಭೋಗ ೧೪೧-೨೪ ಜಂಗಮರಿಗೆ ಅರ್ಪಿಸಿದ ಪ್ರಸಾದ
ಲಿಂಗೋದಕ ೧೦೪-೮ ಲಿಂಗವನ್ನು ಅರ್ಚಿಸಿದ ತೀರ್ಥ
ಲೋಹತ್ರಯ ೫೦-೨೩ ಚಿನ್ನ, ಬೆಳ್ಳಿ, ತಾಮ್ರ
ಲೋಹಲಿಂಗ ೬೧೮-೮ ಕಬ್ಬಿಣದಿಂದ ಮಾಡಿದ ಲಿಂಗ
ವಜ್ರಲೋಹಮಯಲಿಂಗ ೫೦-೨೪ ವಜ್ರದಿಂದ ಮಾಡಿದ ಲಿಂಗ
ವಲ್ಮೀಕನಾಥ ೧೮೭-೩೦ ಒಂದು ಶಿವಲಿಂಗ
ವಷಡ್ದೇವತೆ ೩೬-೫೬, ೩೭-೬೦ ಹವಿಸ್ಸನ್ನು ಕೊಡುವ ದೇವತೆ
ವಿಜ್ಞಾನಮಯಕೋಶ ೩೯೭-೩ ಪಂಚಕೋಶಗಳಲ್ಲಿ ಒಂದು
ವಿಭೂತಿ ೨೪-೩, ೩೮೮-೧೧ ವೀರಶೈವರು ಧರಿಸಿಕೊಳ್ಳುವ ಮಂತ್ರಪೂರಿತವಾದ ಭಸ್ಮ
ವಿರಜ ೫೫೮-೧೩ ವಿರಜಾ ಎಂಬ ಹೋಮದ ಸಮಯ
ವಿಷಯಜ್ಞಾನ ೩೩೬-೧೫ ಜ್ಞಾನತ್ರಯಗಳಲ್ಲಿ ಒಂದು
ವೇದವಾದಿ ೩೪೪-೩ ವೇದವೇ ಸರ್ವಶ್ರೇಷ್ಠವೆಂದು ಪ್ರತಿಪಾದಿಸುವವನು
ವೇದಾಂತಿ ೩೬೩-೨ ವೇದಾಂತವನ್ನು ಪ್ರತಿಪಾದಿಸುವನು
ವೈದಿಕಮತ ೩೩೩ಸೂ: ವೇದವನ್ನು ಪ್ರಮಾಣವೆಂದು ನಂಬಿರುವ ಮತ
ವೈಷ್ಣವಮತ ೩೮೭-೫ ಹಿಂದೂಧರ್ಮದ ಮೂರು ಮುಖ್ಯ ಪಂಥಗಳಲ್ಲಿ ಒಂದು. ಅವು ಶೈವ, ಶಾಕ್ತ, ವೈಷ್ಣವ
ಶಬ್ದಬ್ರಹ್ಮವಾದಿ ೩೨೫-೧೨ ಭರ್ತೃಹರಿಯ ಮತ (ವೈಯಾಕರಣ ಮತ)
ಶಲ್ಯಕರಣಿ ೭೨೧-೭೯ ಒಂದು ಔಷಧವಿಶೇಷ
ಶಶಿಕಾಂತಲಿಂಗ ೬೧೮-೮ ಚಂದ್ರಕಾಂತಲಿಂಗ
ಶಿವಾಜ್ಞಾಪತ್ರ ಪದ್ಧತಿ ೭೪೫-೧೬ ಶಿವನಿರೂಪಿತವಾದ ಆಗಮಪದ್ಧತಿ
ಶುಕನಾಸ ೨೪೭-೨೭ ದೇವಾಲಯದ ಒಂದು ಭಾಗ
ಶುಕ್ತಿಜ್ಞಾನ ೩೬೫-೧೧ ಕಪ್ಪೆಯ ಚಿಪ್ಪನ್ನು ಬೆಳ್ಳಿ ಎಂದು ಭ್ರಮಿಸುವ ಜ್ಞಾನ

ಶುದ್ಧಪ್ರಸಾದ ೫೬-೬ ಕಾಯದ ಕಯ್ಯಲ್ಲಿ ಇಷ್ಟಲಿಂಗಕ್ಕೆ ಅರ್ಪಿತವಾದದ್ದು

ಶೂನ್ಯವಾದ ೪೦೧-೧೯ ಬೌದ್ಧಧರ್ಮದ ಸಿದ್ಧಾಂತ

ಶೂನ್ಯವಾದಿ ೩೨೫-೧೦, ೩೨೮-೨೨ ಬೌದ್ಧ ಸಂನ್ಯಾಸಿ

ಶೈಲಮಯಲಿಂಗ ೪೬-೮ ಶಿಲೆಯಿಂದ ಮಾಡಿದ ಲಿಂಗ

ಶ್ರೀರಾಗ ೬೯೮-೪೪ ಒಂದುರಾಗ

ಷಟ್ಕರ್ಮ ೧೦೭-೨೪ ಅಧ್ಯಾಪನ, ಅಧ್ಯಯನ, ಯಜನ, ಯಾಜನ, ದಾನ, ಪ್ರತಿಗ್ರಹ

ಷಟ್ಚಕ್ರಯೋಗ ೩೭೭-೩೬ ಒಂದು ಯೋಗವಿಶೇಷ

ಷಟ್ತರ್ಕ ೭೨-೮೦ ಸಾಂಖ್ಯ, ಯೋಗ, ನ್ಯಾಯ, ವೈಶೇಷಿಕ, ಮೀಮಾಂಸ, ವೇದಾಂತ

ಷಟ್ಸ್ಥಲ ೫-೧೮ ಭಕ್ತ, ಮಾಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ

ಷಡ್ದರ್ಶನ ೪೦೪-೫ ನ್ಯಾಯ, ವೈಶೇಷಿಕ, ಮೀಮಾಂಸ, ವೇದಾಂತ, ಸಾಂಖ್ಯ, ಯೋಗ

ಷಡ್ವರ್ಗ ೧೮-೮೦, ೨೪೨-೫, ೩೧೩-೨೭ ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ

ಷಡ್ವಿಧ ನಿರ್ಮಾಲ್ಯ ೫೬-೭ ದೇವಸ್ವ, ದೇವತಾದ್ರವ್ಯ, ನೈವೇದ್ಯ, ನಿವೇದಿತ, ಚಂಡಸ್ವ, ಬಹಿಃಕ್ಷಿಪ್ತ

ಷೋಡಶಗಣ ೩೧೮-೫೧ ಹೊನ್ನಯ್ಯ, ಕಿನ್ನರಿ ಬ್ರಹ್ಮಯ್ಯ, ಕೇತಲಾದೇವಿ, ಪಾಂಡ್ಯನಾಯಕ, ಸೇನನಾಥ, ಗುಡ್ಡವ್ವೆ, ದೇವರ ಬಾಚಯ್ಯ, ಬಿಜ್ಜಯ್ಯ, ನಾಗಯ್ಯ, ಕುಂದುಲಿಗಿ ನಾಗಯ್ಯ, ಹೂವಿನ ಬಾಚದೇವಿ, ಪಡಿಹಾರಿ ಸೋಮಣ್ಣ, ಉಘೇ ನಾಗಯ್ಯ, ಹಂದಯ್ಯ, ಕಾಲಾಂಬಾ, ಓಹಿಲದೇವ

ಷೋಡಶೋಪಚಾರ ೩೮-೩ ಪಾದ್ಯ, ಅರ್ಘ್ಯ, ಆಚಮನ, ಪತ್ರಪುಷ್ಪ, ಗಂಧ, ಅಕ್ಷತೆ, ರುದ್ರಾಕ್ಷಮಾಲಿಕೆ, ಛತ್ರ, ಚಾಮರ, ವ್ಯಜನ, ಗೀತ, ವಾದ್ಯ, ನರ್ತನ, ಪ್ರದಕ್ಷಿಣ, ನಮಸ್ಕಾರ, ಸ್ತೋತ್ರ

ಸಂಜೀವಕರಣಿ ೭೨೧-೭೯ ಒಂದು ಔಷಧವಿಶೇಷ

ಸದಾಶಿವತತ್ತ್ವ ೪೫೫-೩೧ ಈಶ್ವರ ಪ್ರತಿಪಾದಕ ತತ್ತ್ವ

ಸಪ್ತಧಾತು ೧೫೧-೨೮ ರಸ, ರಕ್ತ, ಮಾಂಸ, ಮೇದಸ್ಸು, ಅಸ್ಥಿ, ಮಜ್ಜೆ, ಶುಕ್ಲ

ಸಪ್ತವಿಂಶತಿ ತತ್ತ್ವ ೩೫೯-೧೦ ಇಪ್ಪತ್ತೇಳು ತತ್ತ್ವಗಳು

ಸಮರತ ೨೧೮-೧೪ ರತಿಕ್ರೀಡೆಗಳಲ್ಲಿ ಒಂದು

ಸಮಹಸ್ತ ೬೯೮-೪೧ ಒಂದು ವಾದ್ಯ ವಿಶೇಷ

ಸರ್ವಪ್ರಸಾದ ಪ್ರಸಾದಿ ೮೬-೨೫ ಸರ್ವವನ್ನೂ ಪ್ರಸಾದ ರೂಪದಲ್ಲಿ ಸ್ವೀಕರಿಸುವವನು (?)

ಸಾಂಖ್ಯ ೩೩೩-೩, ೩೬೯ಸೂಃ ಕಪಿಲಮುನಿಯಿಂದ ಪ್ರವರ್ತಿತವಾದ ಶಾಸ್ತ್ರ

ಸಾಂಖ್ಯವಾದಿ ೩೬೬-೨೧, ೩೬೯-೨ ಸಾಂಖ್ಯವಾದವನ್ನು ಬಲ್ಲವನು

ಸಾಂಖ್ಯಾಯನೀಯ ೩೨೯-೨೯ ವೇದದ ಒಂದು ಶಾಖೆ

ಸಿದ್ಧಪ್ರಸಾದ ೫೬-೬ ಲಿಂಗಕ್ಕೆ ಅರ್ಪಿತವಾದದ್ದು

ಸಿದ್ಧವಟಲಿಂಗ ೭೩೮-೧೫೨ ವಟವೃಕ್ಷದ ಮೂಲದಲ್ಲಿ ಇರುವ ಲಿಂಗ

ಸೀಸಮಯಲಿಂಗ ೫೦-೭೭ ಸೀಸದಿಂದ ಮಾಡಿದ ಲಿಂಗ

ಸೇಶ್ವರಸಾಂಖ್ಯ ೩೨೧-೧೦ ಈಶ್ವರನನ್ನು ಒಪ್ಪಿಕೊಂಡ ಸಾಂಖ್ಯಮತ

ಸ್ಮಾರ್ತ ೩೭೬-೧೩, ೪೦೧-೧೮ ಸ್ಮೃತಿಯಲ್ಲಿ ಉಕ್ತವಾದ ಆಚಾರ ಧರ್ಮ

ಸ್ವಚ್ಛಂದ ಲಲಿತ ಭೈರವಿ ೪೩೫-೧೩ ಶೈವಾಗಮಗಳಲ್ಲಿ ಒಂದು

ಸ್ವಯಂಭುಲಿಂಗ ೫೨-೧೭, ೬೧೯-೮ ಲಿಂಗಗಳಲ್ಲಿ ಸರ್ವಶ್ರೇಷ್ಠವಾದುದು

ಹಠಯೋಗ ೩೨೨-೩೬, ೬೫೨-೧೪ ಒಂದು ಯೋಗವಿಶೇಷ

ಹಸ್ತಭೇದ ೨೦೦-೫೦ ನೃತ್ಯದಲ್ಲಿ ಒಂದು ಬಗೆ

ಹೇಮ ೭೫೦-೧೮ ನಾಗಗಳಲ್ಲಿ ಒಂದು

ಹೇಮಮಯಲಿಂಗ ೪೨-೧೦ ಚಿನ್ನದಿಂದ ಮಾಡಿದ ಲಿಂಗ

# ೪. ಶಬ್ದಾರ್ಥಕೋಶ

[ಮೊದಲನೆಯ ಸಂಖ್ಯೆ ಪುಟವನ್ನೂ ಎರಡನೆಯ ಸಂಖ್ಯೆ ಪದ್ಯವನ್ನೂ ಸೂಚಿಸುತ್ತದೆ.]

## ಅ

ಅಂಕನಂಗೆಯ್ ೩೨-೩೭ ಗುರುತುಮಾಡು

ಅಂಕಮಾಲೆ ೧೩೩-೫೪ ಬಿರುದಾವಳಿ

ಅಂಕಿಸು ೧೬-೭೦ ಸ್ತೋತ್ರಮಾಡು

ಅಂಗಭೋಗ ೧೪೧-೨೪ ದೇವರ ವಿಗ್ರಹಕ್ಕೆ ಅಭಿಷೇಕವಾದ ಬಳಿಕ ಅಗರು, ಕರ್ಪೂರ ಮುಂತಾದುವುಗಳನ್ನು ಲೇಪಿಸುವ ಉಪಚಾರ

ಅಂಗವಸ್ತ್ರ ೬೯೪-೨೨ ಮೈಮೇಲಿನ ಬಟ್ಟೆ

ಅಂಗುಲೀಯಕ ೧೮೪-೧೩ ಉಂಗುರ

ಅಂಗೈಸು ೧೨೯-೩೬ ಒಪ್ಪು, ಅಂಗೀಕರಿಸು

ಅಂಘವಿಸು ೨೭೩-೨೨ ಒಪ್ಪು

ಅಂಟು ೬೩-೩೯, ೨೫೫-೬೬ ಮುಟ್ಟು, ಸೋಕು

ಅಂಟುಗಲ್ಲು ೬೦೮-೫ ಸೆಳೆಗಲ್ಲು

ಅಂಡಲೆ ೧೪-೬೧ ಕಾಡು, ಹಿಂಸಿಸು

ಅಂತಕಾಂತಕ ೧೬-೬೭ ಯಮ

ಅಂತರಾಯ ೯-೩೯ ಅಡ್ಡಿ

ಅಂತರ್ನಿಹಿತ ೧೨೨-೪ ಒಳಗೆ ಇಟ್ಟ

ಅಂತವುರ ೨೪-೧ ಅಂತಃಪುರ, ರಾಣಿವಾಸ

ಅಂಬಷ್ಟಕನ್ನೆ ೩೮೮-೧೨ ಕ್ಷೌರಿಕರ ಹುಡುಗಿ

ಅಂಬಳಿಕ್ಕು ೭೩೩-೧೩೦ ಅಂಬೆಗಾಲು ಇಡು

ಅಂಬಿಗಿತಿ ೩೯೩-೩೧ ಬೆಸ್ತರ ಹೆಂಗಸು

ಅಂಬಿಲ ೨೩೪-೨ ಗಂಜಿ

ಅಂಹೋಹರ ೫-೨೧ ಪಾಪವನ್ನು ನಿವಾರಿಸುವವನು

ಅಕೂಪಾರ ೩೨೭-೨೦ ಸಮುದ್ರ

ಅಕ್ಕಜಂಬಡು ೯೬-೧೯, ೧೪೯-೨೧, ೪೯೭-೮ ಆಶ್ಚರ್ಯಪಡು

ಅಕ್ಕಜವಡು ೫೦೭-೫೩ ಆಶ್ಚರ್ಯಪಡು

ಅಕ್ಕುಳಿಸು ೧೭೪-೪ ಒಳಕ್ಕೆ ಇಳಿ

ಅಕ್ಷ ೨೪೨-೪ ಪಗಡೆಯ ದಾಳ

ಅಕ್ಷಮಾಲೆ ೩೬-೫೩ ಜಪಸರ

ಅಖಂಡಿತಚ್ಛಾಯೆ ೮೭-೩೦ ಎಡೆಬಿಡದ ನೆರಳು

ಅಖರ್ವ ೪-೧೫ ಮಹತ್ತಾದ

ಅಗಪಡು ೯೫-೧೪, ೯೭-೨೧ ಹಿಂಸೆಪಡು

ಅಗುಂದಲೆ ೫೦-೨೪ ಆಧಿಕ್ಯ

ಅಗ್ಗಲಿಸು ೨-೭ ಹೆಚ್ಚಾಗು

ಅಜಸ್ರಂ ೨೮-೧೮ ಯಾವಾಗಲೂ

ಅಟ್ಟುಳಿ ೪೦-೧೨ ಹಿಂಸೆ

ಅಡಗು ೭೬-೯೭ ಮಾಂಸ

ಅಡಪ ೩೨೬-೧೬ ಎಲೆಅಡಕೆ ಚೀಲ

ಅಡಪವಳ್ಳ ೫೮೬-೩೮ ಎಲೆಅಡಕೆ ಸಂಚಿಯನ್ನು ಹಿಡಿಯುವವನು

ಅಡಬಳ ೭೦೧-೫೬, ೭೮೯-೨೧ ಅಡಿಗೆಯವನು

ಅಡರ್ಪು ೮-೩೪ ಆಶ್ರಯ

ಅಡವಳ ೨೯೪-೨೬ ಪರಿಚಾರಕ, ಸೇವಕ (?)

ಅಡಿಗರ್ಚು ೮೫-೨೧ ಪಾದವನ್ನು ತೊಳೆ

ಅಡಿಗೆರ್ಪು ೧೪೦-೧೮ ಪಾದರಕ್ಷೆ

ಅಡಿವಜ್ಜೆ ೬೯೫-೨೪ ಹೆಜ್ಜೆಯ ಗುರುತು

ಅಡುಪುದಲೆ ೯೪-೯ ದಟ್ಟವಾದ ಕೂದಲುಳ್ಳ ತಲೆ (?)

